ಶ್ರೀ:

ಶ್ರೀಭಾವಿಸಮೀರವಾದಿರಾಜಭಗವತ್ಪಾದಾಚಾರ್ಯವಿರಚಿತಾ



# ಯುಕ್ತಿಮಲ್ಲಿಕಾ

ವಿಶ್ವಸೌರಭ-೪

ಸಂಪುಟ-೭

॥ ಶ್ರೀಃ ॥

'ಶ್ರೀಶಸ್ತೇ ಸುಶ್ರಿಯಂ ದದ್ಯಾತ್'

ಶ್ರೀಭಾವಿಸಮೀರವಾದಿರಾಜಭಗವತ್ಪಾದಾಚಾರ್ಯವಿರಚಿತಾ

# ಯುಕ್ತಿಮಲ್ಲಿಕಾ

ಮೂಲಸಹಿತ ಸಮಗ್ರ ಕನ್ನಡಾನುವಾದ

ಶ್ರೀ ಶ್ರೀ ಸುರೋತ್ತಮತೀರ್ಥಶ್ರೀಪಾದವಿರಚಿತಾ

## ಭಾವವಿಲಾಸಿನೀ

ಸಂಸ್ಕೃತ ವ್ಯಾಖ್ಯಾನ ಹಾಗೂ ಸಮಗ್ರ ಕನ್ನಡಾನುವಾದ

## ವಿಶ್ವಸೌರಭಮ್ - ೪

## ಸಂಪುಟ - ೭

ಅನುಗ್ರಹ :

ಪರಮಪೂಜ್ಯ ಶ್ರೀ ಶ್ರೀ ವಿಶ್ವವಲ್ಲಭತೀರ್ಥಶ್ರೀಪಾದರು

ಪ್ರಥಮಪರ್ಯಾಯ, ಸೋದೆ ಶ್ರೀವಾದಿರಾಜಮಠ, ಉಡುಪಿ

ಸಂಪಾದಕರು :

ಪಿ.ಎಸ್. ಶೇಷಗಿರಿ ಆಚಾರ್ಯ

ಪ್ರಕಾಶಕರು :

ಶ್ರೀಮದ್‌ವೃಂದಾವನಾಚಾರ್ಯ ಸಂಶೋಧನ ಹಾಗೂ ಪ್ರಕಾಶನಕೇಂದ್ರ

ಸೋದೆ ಶ್ರೀವಾದಿರಾಜ ಮಠ, ರಥಬೀದಿ, ಉಡುಪಿ.

ಶ್ರೀಭಾವಿಸಮೀರವಾದಿರಾಜಭಗವತ್ಪಾದಾಚಾರ್ಯವಿರಚಿತ ಯುಕ್ತಿಮಲ್ಲಿಕಾ-
ಶ್ರೀ ಸುರೋತ್ತಮತೀರ್ಥವಿರಚಿತ ಭಾವವಿಲಾಸಿನೀ ವ್ಯಾಖ್ಯಾನ ಮತ್ತು ಕನ್ನಡ ಅನುವಾದ ಸಹಿತ
**ವಿಶ್ವಸೌರಭ – ಭಾಗ ೧**


| | | |
|---|---|---|
| ಪುಟಗಳು | - | xxxx + 456 = 496 |
| ಸಂಪುಟ | - | ೭(೧೦) |
| ಮುದ್ರಿತ ಪ್ರತಿಗಳು | - | ೧೦೦೦ |
| ಪ್ರಕಾಶಕರು | - | ಶ್ರೀಮದ್ ವೃಂದಾವನಾಚಾರ್ಯ ಸಂಶೋಧನ ಹಾಗೂ ಪ್ರಕಾಶನ ಕೇಂದ್ರ, ಸೋದೆ ಶ್ರೀವಾದಿರಾಜಮಠ, ರಥಬೀದಿ, ಉಡುಪಿ. |





| | | |
|---|---|---|
| ಪುಟ ಸಂಯೋಜನೆ | : | ಬದರಿನಾರಾಯಣಾಚಾರ್ಯ ಕಡ್ಡಿ |
| ಅಕ್ಷರ ಜೋಡಣೆ | : | ಕೆ. ಗಣಪತಿ ಭಟ್, ಶ್ರೀಮತಿ ನಾಗಲತಾ (ಸುಧಾ), ಎಂ. ಶರತ್ ಚಂದ್ರ |
| ಮುಖಪುಟವಿನ್ಯಾಸ | : | ಗುರುದತ್ ಕಾಮತ್ |
| ಮುದ್ರಕರು | : | ಪವನ್ ಗ್ರಾಫಿಕ್ಸ್ ಮತ್ತು ಪ್ರಿಂಟರ್ಸ್ ಮೈಸೂರು. ✆ : **7899779255** |
| ಗ್ರಂಥಪ್ರಾಪ್ತಿ | : | ಸೋದೆ ಶ್ರೀವಾದಿರಾಜಮಠ, ಉಡುಪಿ. |



# ರಾಜರ ಸಂದೇಶ

## ಮಧ್ವರ ನುಡಿಯನ್ನೇ ಹಿಡಿ

ಇಮಾಂ ಹಿ ಶಾಸ್ತ್ರಮರ್ಯಾದಾಮಾಚಾರ್ಯಸ್ತತ್ವವಾದಿನಾಮ್ ।
ವೇದ ತಸ್ಮಾತ್ ತದುದಿತಂ ತತ್ವಂ ನಾನ್ಯದಿತಿ ಸ್ಥಿತಮ್ ॥

ತತ್ವವಾದಿಗಳ ಆಚಾರ್ಯರಾದ ಶ್ರೀಮದಾಚಾರ್ಯರೊಬ್ಬರೇ ಶಾಸ್ತ್ರಮರ್ಯಾದೆ ಬಲ್ಲವರು. ಆದ್ದರಿಂದ ಅವರು ಉಸುರಿಸಿದ ತತ್ವವೇ ತತ್ತ್ವ. ಬೇರೆಯವರು ಹೇಳಿದ್ದೆಲ್ಲವೂ ಅತತ್ವ.

ವಿಸ್ತರಸ್ತ ಸ್ವಸ್ಯ ಸರ್ವಸ್ಯ ಭಾಷ್ಯಾದಿಷ್ವೇವ ದೃಶ್ಯತಾಮ್ ।
ಮೂಲಶಾಸ್ತ್ರಾರ್ಣವೋತ್ಕ್ಷಿಪ್ತಬಿಂದೂನ್ ವಂದಾಮಹೇ ವಯಮ್ ॥

ಪ್ರಮೇಯವಿಸ್ತಾರಗಳನ್ನು ಶ್ರೀಮದಾಚಾರ್ಯರ ಭಾಷ್ಯಗಳಲ್ಲಿ ನೋಡಿರಿ!! ನಾವಾದರೂ ಕೇವಲ ಮೂಲಶಾಸ್ತ್ರಸಮುದ್ರದಿಂದ ಸಿಡಿದ ಯುಕ್ತಿಬಿಂದುಗಳನ್ನು ವಂದಿಸುವವರು ಮಾತ್ರ.





# ಉತ್ತರಕಲ್ಪಸಮೀರರ ಪರಾಕು



★ ''ಉದ್ದಂಡೋದ್ದಂಡ, ಪರವಾದಿ ಪ್ರಚಂಡ, ಗಂಡಭೇರುಂಡ, ಮಾಯಿಮತ ವಿಧ್ವಂಸಕ. ಮಧ್ವಮತೋದ್ಧಾರಕ, ಸುಧಾರಸ ಆಸ್ವಾದ, ದಿಗ್ವಿಜಯೀಕೃತ ಆಸೇತುಮರ್ಯಾದ, ಭಾವಿಹಸುಮಚ್ಚಕ್ರವರ್ತಿನ್, ಗುರುಸಾರ್ವಭೌಮ ಹಂಸಾರೂಢವಾದಿರಾಜ ಭೋ ಪರಾಕ್!''

★ ''ಮಧ್ವಾಗಮ ಸಿದ್ಧಾಗಮ ಈ ಮಧ್ವಮತವೆ ಸಕಲಮತಕೆ ಮೇಲೆನಿಸಿದ ಮತ. ಈ ಮಧ್ವಮತವನು ಪಿಡಿದು ಅಪದ್ಧಮತವನು ತ್ಯಜಿಸಿ ನಡೆದರೆ (ಜಯಿಸಿದರೆ) ಮುಕ್ತಿಗೈವುದಾ ಸುಕೃತವು (ಸುಕೃತಂ) ಒಂದು ಕ್ಷಣದಲ್ಲಿ ವಾದಿರಾಜರ ದ್ವಂದ್ವ ಪದವನು ಭಜಿಸಿದವರಿಗೆ ಬೆಂದು ಹೋಗ್ವುದು ಪೂರ್ವಜನ್ಮದ ದುರಿತಕಾನನವು; ಈ ಮಂದಮತಿಗಳು ಬಲ್ಲರೇ ಗೋವಿಂದ ಭಕ್ತಮಹಿಮೆಯನು ಪುರಂದರಾದಿಗಳು ಅರಿವರಲ್ಲದೇ ಮಿಕ್ಕವರರಿಯಬಹುದೇ! ಪಾರಮೇಷ್ಠಿ ಪದಾಧಿಕಾರಿ ಋಜುಗಣಸ್ಥ (ಪದಸ್ಥ) ಗುರುರಾಜ ಪಟ್ಟಭದ್ರವ್ಯಾಖ್ಯಾನಸಿಂಹಾಸನಾಧೀಶ್ವರ ಅಜ್ಞಾನತಿಮಿರಮಾರ್ತಾಂಡ ಸುಜ್ಞಾನ ತೇಜೋಮಯ!''

# ಪ್ರಕಾಶಕರ ನುಡಿ

ಶ್ರೀಭಾವಿಸಮೀರವಾದಿರಾಜಭಗವತ್ಪಾದಾಚಾರ್ಯರಿಂದವಿರಚಿತವಾದ ಯುಕ್ತಿಮಲ್ಲಿಕೆಯಲ್ಲಿ ವಿಶ್ವಸೌರಭವು ನಾಲ್ಕನೆಯ ಸೌರಭವಾಗಿದೆ. ಕಠಿಣವಾದ ವಿಚಾರಗಳ ಸರಮಾಲೆಯೇ ಯುಕ್ತಿಬದ್ಧವಾಗಿ ಹೆಣೆಯಲ್ಪಟ್ಟಿದೆ. ಐದುಸೌರಭಗಳಿಂದ ಕೂಡಿದ ಯುಕ್ತಿಮಲ್ಲಿಕಾಗ್ರಂಥದಲ್ಲಿ ಅತ್ಯಂತ ಕಠಿಣವಾದ ವಿಚಾರಸರಣಿ ವಿಶ್ವಸೌರಭದಲ್ಲಿ ನೋಡಬಹುದಾಗಿದೆ. ಸೋದೆಶ್ರೀವಾದಿರಾಜಮಠದ ಗ್ರಂಥಾಲಯದಲ್ಲಿ ಉಪಲಬ್ಧವಾದ ಮೂಲಪ್ರತಿಯ ಆಧಾರದಲ್ಲಿ ಮೂಲವನ್ನು ಶೋಧಿಸಿ ಮುದ್ರಿಸಲಾಗಿದೆ. ಬಹುಶಃ ಶ್ರೀಸುರೋತ್ತಮತೀರ್ಥರ ಭಾವವಿಲಾಸಿನೀ ವ್ಯಾಖ್ಯಾನವು ಈ ಸೌರಭದಲ್ಲಿ ನಿರ್ದುಷ್ಟವಾಗಿ ಶೋಧಿತವಾಗಿದೆ ಎನ್ನಬಹುದು. ಅಲ್ಲಿ ಅಲ್ಲಿ ಪ್ರಕ್ಷೇಪ-ವಿಕ್ಷೇಪ ಅಂಶಗಳು ಇದ್ದಾವೆ. ವ್ಯಾಖ್ಯಾನದಲ್ಲಿ ಕಂಸದಲ್ಲಿ ಆ ಭಾಗಗಳನ್ನು ಸೂಚಿಸಲಾಗಿದೆ. ಈ ಗ್ರಂಥದ ಸಮಗ್ರ ಸಂಪಾದನೆಯನ್ನು ನಡೆಸಿದ ವಿದ್ವಾಂಸರಾದ ಶ್ರೀ ಶೇಷಗಿರಿ ಆಚಾರ್ಯರನ್ನು ವಿಶೇಷವಾಗಿ ಶ್ರೀಪಾದಂಗಳವರು ಅಭಿನಂದಿಸಿದ್ದಾರೆ. ಇದರಂತೆ ವಿದ್ವಾನ್ ಕೆ. ಹಯವದನ ಪುರಾಣಿಕರು ಕೂಡ ಲೇಖನಶೋಧನ ಕಾರ್ಯದಲ್ಲಿ ವಿಶೇಷವಾದ ಸೇವೆಯನ್ನು ಸಲ್ಲಿಸಿರುತ್ತಾರೆ. ಮೂಲಪ್ರತಿಶೋಧನೆಯ ಕೆಲಸವನ್ನು ವಿದ್ವಾನ್ ಬಿ.ಎನ್. ಮಾಧವಾಚಾರ್ಯ (ತಾಮ್ರಪರ್ಣಿ ಶ್ರೀನಿವಾಸಾಚಾರ್ಯರ ಶಿಷ್ಯರು) ಇವರು ಅತ್ಯಂತ ಶ್ರದ್ಧೆಯಿಂದ ನಡೆಸಿಕೊಟ್ಟಿರುತ್ತಾರೆ. ಅನೇಕ ವಿದ್ವಾಂಸರು ಸಕಾಲದಲ್ಲಿ ಯೋಗ್ಯವಾದ ಲೇಖನವನ್ನು ಕೊಟ್ಟು ಉಪಕರಿಸಿದ್ದಾರೆ. ಇವರೆಲ್ಲರಿಗೂ ವಿಶೇಷವಾದ ಕೃತಜ್ಞತೆಗಳನ್ನು ಸಲ್ಲಿಸುತ್ತೇವೆ. ಸಕಾಲದಲ್ಲಿ ಅಕ್ಷರವನ್ನು ಜೋಡಿಸಿಕೊಟ್ಟ ಮತ್ತು ಮುಖಪುಟವನ್ನು ವಿನ್ಯಾಸಗೊಳಿಸಿದ ಮತ್ತು ಮುದ್ರಿಸಿಕೊಟ್ಟ ಎಲ್ಲರಿಗೂ ಕೂಡ ಆಭಾರಿಗಳಾಗಿದ್ದೇವೆ.

ಪ್ರಕಾಶರು
**ಶ್ರೀಮದ್‌ವೃಂದಾವನಾಚಾರ್ಯ ಸಂಶೋಧನ**
**ಹಾಗೂ ಪ್ರಕಾಶನ ಕೇಂದ್ರ,**
ಸೋದೆ ಶ್ರೀವಾದಿರಾಜಮಠ,
ರಥಬೀದಿ, ಉಡುಪಿ.

॥ ಶ್ರೀ ವಾದಿರಾಜಗುರುಭ್ಯೋ ನಮಃ ॥

# ಉಪೋದ್ಘಾತ

ವಿಶ್ವಸೌರಭವು ಯುಕ್ತಿಮಲ್ಲಿಕಾಗ್ರಂಥದ ನಾಲ್ಕನೆಯ ಸೌರಭ. ವಿಶ್ವಸತ್ಯತ್ವಸಮರ್ಥನೆಯು ಈ ಸೌರಭದ ಮುಖ್ಯವಿಷಯ. ವಾದಿರಾಜರು ಈ ಸೌರಭವನ್ನು ಮಾಂಡೂಕೋಪನಿಷತ್ತಿನ ಮಂತ್ರಗಳ ವಿಮರ್ಶೆಯಿಂದ ಪ್ರಾರಂಭಿಸುತ್ತಾರೆ.

**ಪ್ರಪಂಚೋ ಯದಿ ವಿದ್ಯೇತ ನಿವರ್ತೇತ ನ ಸಂಶಯಃ ।**
**ಮಾಯಾಮಾತ್ರಮಿದಂ ದ್ವೈತಮದ್ವೈತಂ ಪರಮಾರ್ಥತಃ ॥**
**ವಿಕಲ್ಪೋ ವಿನಿವರ್ತೇತ ಕಲ್ಪಿತೋ ಯದಿ ಕೇನಚಿತ್ ।**
**ಉಪದೇಶಾದಯಂ ವಾದೋ ಜ್ಞಾತೇ ದ್ವೈತಂ ನ ವಿದ್ಯತೇ ॥**

ಮೊದಲು ವಿಷ್ಣುತತ್ತ್ವವಿನಿರ್ಣಯದ ಮಾರ್ಗದಲ್ಲಿ ವಿಮರ್ಶೆಯನ್ನು ಮಾಡುತ್ತಾರೆ. ಪ್ರಪಂಚ ಎಂದರೆ ವಿಶ್ವ ಎಂದು ಅರ್ಥವಲ್ಲ. ಜೀವೇಶ್ವರಭೇದಾದಿ ಪಂಚಭೇದಗಳ ಸಮೂಹ. 'ಪಂಚದ್ದಶತೌವರ್ಗೇವಾ' ಎಂಬ ಪಾಣಿನಿಯ ಸೂತ್ರವು ವಾ ಶಬ್ದದಿಂದ ಪಂಚವಸ್ತುಗಳ ಸಮೂಹ ಎಂಬ ಅರ್ಥದಲ್ಲಿ ಪಂಚಶಬ್ದವನ್ನು ಅನುಶಾಸನ ಮಾಡುತ್ತದೆ. ಈ ಪಂಚಭೇದಗಳ ಜ್ಞಾನವು ಮೋಕ್ಷಕ್ಕೆ ಸಾಧನವಾಗಿರುವುದರಿಂದ ಅದು ಪ್ರಪಂಚ ಎಂದು ಕರೆಯಲ್ಪಡುತ್ತದೆ. ವಿದ್ಯೇತ ಎಂಬಲ್ಲಿರುವ ವಿದ್‌ಧಾತುವಿಗೆ ಸತ್ತಾರೂಪವಾದ ಅರ್ಥವಿಲ್ಲ. ಏಕೆಂದರೆ ಆ ಅರ್ಥವನ್ನು ತೆಗೆದುಕೊಂಡರೆ ಯಾವುದು ವಿದ್ಯಮಾನವಾಗಿದೆಯೋ ಅದು ನಿವೃತ್ತಿಯನ್ನು ಹೊಂದುತ್ತದೆ ಎಂದು ವ್ಯಾಪ್ತಿಯನ್ನು ಸ್ವೀಕರಿಸಬೇಕಾಗುತ್ತದೆ. ಆಗ ಬ್ರಹ್ಮನೂ ವಿದ್ಯಮಾನನಾಗಿರುವುದರಿಂದ ಅವನಿಗೂ ನಿವೃತ್ತಿಯನ್ನು ಒಪ್ಪಬೇಕಾಗುತ್ತದೆ. ಆದ್ದರಿಂದ ವಿದ್ಯೇತ ಎಂದರೆ ಉತ್ಪನ್ನವಾದರೆ ಎಂದು ಅರ್ಥ. ವಿದ ಉತ್ಪತ್ತೌ ಎಂಬ ಧಾತುವಿದೆ. ಆದ್ದರಿಂದ ಈ ಅರ್ಥದಲ್ಲಿ ಯಾವ ಕ್ಲೇಶವೂ ಇಲ್ಲ. ಯಾವ ವಸ್ತುವು ಉತ್ಪನ್ನವಾಗುತ್ತದೋ ಅದು ನಿವೃತ್ತವಾಗುತ್ತದೆ ಎಂಬ ವ್ಯಾಪ್ತಿಯು ಇರುವುದರಿಂದ ಯಾವ ಅನುಪಪತ್ತಿಯೂ ಇಲ್ಲ. ಭೇದಪಂಚಕವು ಉತ್ಪನ್ನವಾಗುವುದಾದರೆ ಅದು ನಿವೃತ್ತಿಯನ್ನು ಹೊಂದಬೇಕಾದೀತು. ಆದರೆ ನಿವೃತ್ತಿಯನ್ನು ಹೊಂದುವುದಿಲ್ಲ. ಆದ್ದರಿಂದ ಉತ್ಪನ್ನವಾದುದಲ್ಲ. ಅನಾದಿಯಾದುದು ಆದ್ದರಿಂದಲೇ ನಿತ್ಯವೂ ಆಗಿದೆ ಎಂದು ಭೇದಗಳ ನಿತ್ಯತ್ವವನ್ನೇ ಈ ಮಂತ್ರವು ಉಪಪಾದನೆ ಮಾಡುತ್ತದೆ. ದ್ವೈತ ಎಂದರೆ ಭೇದ. ಅದು ಪರಮಾತ್ಮನ ಪ್ರಜ್ಞೆಯಿಂದಜ್ಞಾತವಾಗಿದೆ ಮತ್ತು ರಕ್ಷಿತವಾಗಿದೆ. ಆದ್ದರಿಂದ ಅದು ಸತ್ಯವೂ ಹೌದು. ಸರ್ವೋತ್ತಮನಾದ ವಸ್ತುವು ಮಾತ್ರ ಒಂದೇ.

ವಾದಿರಾಜರು ಮಂತ್ರಗಳಿಗೆ ಅರ್ಥವನ್ನು ಮಾಡುತ್ತಾ ಅನೇಕ ಹೊಸವಿಷಯಗಳನ್ನು ಹೇಳುತ್ತಾರೆ. ಮಾಯಾಮಾತ್ರ ಎಂಬ ಪದವನ್ನು ಮಾಯಾ-ಅಮಾತ್ರ ಎಂದೂ ಭೇದಿಸಬಹುದು. ಈ ಅರ್ಥದಲ್ಲಿ ಮಾಯಾಶಬ್ದಕ್ಕೆ ಮಾಯಾವಿಯ ಮಾಯೆ ಎಂಬ ಅರ್ಥವನ್ನು ಇಟ್ಟುಕೊಳ್ಳಬಹುದು. ಮಾತ್ರ ಎಂದರೆ ಲೇಶ ಎಂದು ಅರ್ಥ. ಅಮಾತ್ರ ಎಂದರೆ ಮಾಯಾಲೇಶವೂ ಇಲ್ಲ ಎಂದು ಅರ್ಥ. ಆದ್ದರಿಂದ ದ್ವೈತವೆಂದು ಕರೆಸಿಕೊಳ್ಳಲ್ಪಡುವ ಭೇದಕ್ಕೆ ಮಾಯಾಸಂಬಂಧಲೇಶವೂ ಇಲ್ಲದಿರುವುದರಿಂದ ಅದು ಸತ್ಯವೇ ಆಗುತ್ತದೆ.

ಇದರ ಮೇಲೂ ಕುತರ್ಕಗಳನ್ನು ಹೇಳುವ ಕುವಾದಿಗಳನ್ನು ನಿರಾಕರಿಸಲು ವಿಕಲ್ಪೋವಿನಿವರ್ತೇತ ಎಂಬ ಮಂತ್ರವು ಪ್ರವೃತ್ತವಾಗಿದೆ. ಭೇದವು ಒಂದು ಪಕ್ಷ ಕಲ್ಪಿತವಾಗಿದ್ದರೆ ಅದಕ್ಕೆ ಬಾಧವು ಬರಬೇಕಾಗಿದ್ದಿತು. ಆದರೆ ಬಾಧವಿಲ್ಲ. ಆದ್ದರಿಂದ ಕಲ್ಪಿತವಲ್ಲ. ಸದ್ಗುರುಗಳ ಉಪದೇಶದಿಂದ ಮಾತ್ರ ಈ ಜ್ಞಾನವು ಉಂಟಾಗುತ್ತದೆ. ಅಜ್ಞಾನಿಗಳು ಮಾತ್ರ ಭೇದವಿಲ್ಲವೆಂದು ಹೇಳುತ್ತಾರೆ.

ಇಷ್ಟು ನಿರೂಪಿಸಿ ವಾದಿರಾಜರು ಈ ಮಂತ್ರಕ್ಕೆ ಒಂದು ಹೊಸ ಅರ್ಥವನ್ನು ಹೇಳುತ್ತಾರೆ. ಭೇದವನ್ನು ಅಂಗೀಕರಿಸುವ ನಮ್ಮ ಮೇಲೆ ಅದ್ವೈತಿಗಳು ಹೀಗೆ ಆಕ್ಷೇಪಮಾಡುತ್ತಾರೆ. ಭೇದವು ಧರ್ಮಿಗಿಂತ ಭಿನ್ನವೋ ಅಭಿನ್ನವೋ ಅಥವಾ ಭಿನ್ನಾಭಿನ್ನವೋ? ಭಿನ್ನವೆಂದು ಹೇಳಿದರೆ ಅನವಸ್ಥಾ, ಅಭಿನ್ನವೆಂದು ಹೇಳಿದರೆ ಎರಡರಲ್ಲಿ ಒಂದು ಮಾತ್ರ ಉಳಿಯಬೇಕೇ ಹೊರತು ಭೇದ ಮತ್ತು ಧರ್ಮಿ ಎರಡೂ ಉಳಿಯಲಾರವು. ಭಿನ್ನಾಭಿನ್ನ ಎಂದು ಹೇಳುವುದು ವಿರುದ್ಧವಾದುದು. ಈಗ ಇಂತಹ ಆಕ್ಷೇಪಕ್ಕೆ ಈ ಮಂತ್ರವು ಉತ್ತರವನ್ನು ಹೇಳುತ್ತದೆ ಎಂದು ವಾದಿರಾಜರ ಚಿಂತನೆ. ವಿನಿವೃತ್ತಿ ಎಂದರೆ ಹಿಂದಿರುಗಿ ಬರುವುದು ಎಂದು ಅರ್ಥವಿದೆ. ಆದರೆ ಹೀಗೆ ವಿಕಲ್ಪವನ್ನು ಮಾಡಿ ನೀನು ಭೇದವನ್ನು ನಿರಾಕರಿಸುವುದಾದರೆ ಆ ವಿಕಲ್ಪಗಳು ಹಿಂದಿರುಗಿ ನಿನ್ನ ದುಸ್ತತ್ತ್ವವಾದ ಐಕ್ಯಕ್ಕೂ ಬರುತ್ತದೆ. ಐಕ್ಯವು ಬ್ರಹ್ಮನಿಂದ ಭಿನ್ನವೋ ಅಭಿನ್ನವೋ ಭಿನ್ನಾಭಿನ್ನವೋ? ಭಿನ್ನವಾದರೆ ಅನವಸ್ಥಾ, ಅಭಿನ್ನವಾದರೆ ಏಕತರಪರಿಶೇಷ, ಭಿನ್ನಾಭಿನ್ನವೆಂದು ಹೇಳುವುದು ವಿರುದ್ಧವಾದುದು. ಆದರೂ ನೀನು ಐಕ್ಯವನ್ನು ಅಂಗೀಕಾರ ಮಾಡುವಂತೆ ನಾವು ಭೇದವನ್ನು ಅಂಗೀಕರಿಸುತ್ತೇವೆ. ಪ್ರಾಮಾಣಿಕವಾದ ವಸ್ತುವಿನ ವಿಷಯದಲ್ಲಿ ಹೀಗೆ ವಿಕಲ್ಪವನ್ನು ಮಾಡಿ ನಿರಾಕರಿಸಬಾರದು. ನಿನ್ನ ಐಕ್ಯವು ಮಾತ್ರ ಅಪ್ರಾಮಾಣಿಕವಾದುದು ಎಂದು ಸಮರ್ಥಿಸುತ್ತಾರೆ.

ಈ ಎರಡು ಮಂತ್ರಗಳು ಭೇದರೂಪಪ್ರಪಂಚವನ್ನೂ ಅದರ ಸತ್ಯತ್ವವನ್ನೂ ಸಮರ್ಥಿಸುವುದರಿಂದ ಈ ವಿಷಯವು ಭೇದಸೌರಭ ಮತ್ತು ವಿಶ್ವಸೌರಭ ಎರಡಕ್ಕೂ ಸಂಬಂಧಿಸಿದೆ. ಆದ್ದರಿಂದ ಭೇದಸೌರಭವು ಮುಗಿದ ತಕ್ಷಣ ಹೊಸ್ತಿಲ ಮೇಲಿನ ದೀಪದಂತೆ ವಿಶ್ವಸೌರಭದ ಆದಿಯಲ್ಲಿ ಇದನ್ನು ಚರ್ಚಿಸಿದ್ದಾರೆ.

ಅನಂತರ ಗೀತಾವಚನಗಳಿಂದ ವಿಶ್ವಸತ್ಯತ್ವವನ್ನು ಸಮರ್ಥಿಸುತ್ತಾರೆ. **'ಅಸತ್ಯಮಪ್ರತಿಷ್ಠಂತೇ ಜಗದಾಹುರನೀಶ್ವರಂ'** ಎಂದು ಪ್ರಾರಂಭವಾಗುವ ಪ್ರಕರಣದಲ್ಲಿ ಜಗತ್ತಿಗೆ ಅಸತ್ಯತ್ವ- ಮಿಥ್ಯಾತ್ವವನ್ನು ಹೇಳುವವರನ್ನು ನಿಂದಿಸಿರುವುದರಿಂದಲೂ ತಾವು ಆ ಪಕ್ಷವನ್ನು ತ್ಯಜಿಸಿ ಆಚಾರ್ಯರ ಪಕ್ಷಕ್ಕೆ ಬಂದುದಾಗಿ ಹೇಳುತ್ತಾರೆ.

**ಅತೋಽತಿಭೀತೋ ಯಾತೋಽಹಂ ಮತಂ ಸತ್ಯತ್ವವೇದಿನಾಮ್ ।**
**ವೇದಾನುಮೋದಿನಾಂ ವೈರಿಭೇದಿನಾಂ ತತ್ವವಾದಿನಾಮ್ ॥**

ಶ್ರುತಿಸ್ಮೃತಿಗಳಲ್ಲಿ ಜಗತ್ತಿನ ಸೃಷ್ಟಿಯನ್ನು ಹೇಳುವುದರಿಂದಲೂ ಜಗತ್ತು ಮಿಥ್ಯಾ ಅಲ್ಲವೆಂದು ಸಾಧಿಸುತ್ತಾರೆ. ಶ್ರುತಿಸ್ಮೃತಿಗಳಲ್ಲಿ ಜಗತ್ತು ಮಾಯಾಮಯವೆಂದು ಹೇಳಲ್ಪಡುತ್ತದೆ. ಮಾಯಾ ಎಂದರೆ ಸದಸದ್ವಿಲಕ್ಷಣವಾದ ಅದ್ವೈತಿಗಳಿಗೆ ಅಭಿಮತವಾದ ಅಜ್ಞಾನವಲ್ಲ. ಪ್ರಕೃತ್ಯಭಿಮಾನಿಯು ನನ್ನಿಂದ ಜಗತ್ತನ್ನು ಪ್ರಸವಿಸುತ್ತಾಳೆ ಎಂದು **'ಮಯಾ ಅಧ್ಯಕ್ಷೇಣಪ್ರಕೃತಿಃ ಸೂಯತೇಸಚರಾಚರಮ್'** ಎಂಬ ಗೀತಾವಾಕ್ಯವು ಹೇಳುತ್ತದೆ. ಹೊರತು ಜಗತ್ತಿಗೆ ಅಜ್ಞಾನವು ಉಪಾದಾನವೆಂದು ಹೇಳುವ ಯಾವ ಶ್ರುತಿಸ್ಮೃತಿಯೂ ಇಲ್ಲ. ಸೃಷ್ಟಿ ಇರುವ ಪದಾರ್ಥವು ಸತ್ಯವಾದುದೇ. ಶುಕ್ತಿರಜತಕ್ಕೆ ಎಂದೂ ಸೃಷ್ಟಿಯಿಲ್ಲ. ಮತ್ತು ಈ ಜಗತ್ತಿಗೆ ಬ್ರಹ್ಮಜ್ಞಾನದಿಂದ ನಿವೃತ್ತಿಯನ್ನೂ ಎಲ್ಲಿಯೂ ಹೇಳಿಲ್ಲ. ಆದ್ದರಿಂದ ಮಿಥ್ಯಾತ್ವಕಲ್ಪನೆಯು ಅಪ್ರಾಮಾಣಿಕವಾದುದು. ಬ್ರಹ್ಮನು ಸತ್ಯ ಮತ್ತು ಸ್ವರೂಪತಃ ನಿತ್ಯ. ಜಗತ್ತು ಸತ್ಯ ಮತ್ತು ಪ್ರವಾಹರೂಪದಿಂದ ನಿತ್ಯವಾದುದು.

ಅನಂತರ ಮಾಂಡೂಕೋಪನಿಷತ್ತಿನ ಮಂತ್ರಗಳನ್ನು ವಿಮರ್ಶೆಮಾಡುತ್ತಾರೆ.

**ವಿಭೂತಿಂ ಪ್ರಸವಂ ತ್ವನ್ಯೇ ಮನ್ಯಂತೇ ಸೃಷ್ಟಿಚಿಂತಕಾಃ ।**
**ಸ್ವಪ್ನಮಾಯಾಸರೂಪೇತಿ ಸೃಷ್ಟಿರನ್ಯೈರ್ವಿಕಲ್ಪಿತಾ ॥**
**ಇಚ್ಛಾಮಾತ್ರಂ ಪ್ರಭೋಃ ಸೃಷ್ಟಿರಿತಿ ಸೃಷ್ಟೌ ವಿನಿಶ್ಚಿತಾಃ ।**
**ಕಾಲಾತ್ ಪ್ರಸೂತಿಂ ಭೂತಾನಾಂ ಮನ್ಯಂತೇ ಕಾಲಚಿಂತಕಾಃ ।**
**ಭೋಗಾರ್ಥಂ ಸೃಷ್ಟಿರಿತ್ಯನ್ಯೇ ಕ್ರೀಡಾರ್ಥಮಿತಿ ಚಾಪರೇ ।**
**ದೇವಸ್ಯೈಷಃ ಸ್ವಭಾವೋಽಯಮಾಪ್ತಕಾಮಸ್ಯ ಕಾ ಸ್ಪೃಹಾ ॥**

ಇಲ್ಲಿ ಶ್ರುತಿಯು ತನಗೆ ಸಮ್ಮತವಲ್ಲದ ಪಕ್ಷಗಳನ್ನು ಹೇಳುವಾಗ ಅನ್ಯೇ, ಅನ್ಯೈಃ, ಅಪರೇ ಎಂಬುದಾಗಿ ನಿರ್ದೇಶಿಸುತ್ತದೆ. ತನ್ನ ಮತವನ್ನು ಹೇಳುವಾಗ ಹಾಗೆ ನಿರ್ದೇಶವಿಲ್ಲವೆಂದು ಗಮನಿಸಬೇಕು. ಸೃಷ್ಟಿಯು ವಿಭೂತಿ-ವಿವಿಧರೂಪವಾದ ಭವನ ಎಂದರೆ ಬ್ರಹ್ಮನ ಪರಿಣಾಮರೂಪವಾದುದು ಎಂಬುದು 'ಅನ್ಯೇ ಮನ್ಯಂತೇ' ಭಿನ್ನರು- ತತ್ತ್ವಜ್ಞಾನರಹಿತರು ಭಾವಿಸುತ್ತಾರೆ. ಇನ್ನು ಕೆಲವರು ಸೃಷ್ಟಿಯು ಮಾಯಾರೂಪವಾದುದೆಂದೂ ಸ್ವಪ್ನಸದೃಶವಾದುದೆಂದೂ ವಿಧವಿಧವಾಗಿ ಕಲ್ಪನೆ ಮಾಡುತ್ತಾರೆ. ಹೀಗೆ ಪೂರ್ವಪಕ್ಷಗಳನ್ನು

ಮೊದಲು ನಿರೂಪಿಸಿ ಅನಂತರ ಶ್ರುತಿಯು ತನ್ನ ಮತವನ್ನು ಹೇಳುತ್ತದೆ. ಸೃಷ್ಟೌ ವಿನಿಶ್ಚಿತಾಃ-ಸೃಷ್ಟಿಯ ವಿಷಯದಲ್ಲಿ ಅತ್ಯಂತ ಸಮೀಚೀನವಾದ ಜ್ಞಾನವುಳ್ಳವರು ಪ್ರಭುವಿನ ಇಚ್ಛಾಮಾತ್ರದಿಂದ ಜಗತ್ಸೃಷ್ಟಿಯನ್ನು ಹೇಳುತ್ತಾರೆ. ಕಾಲಕ್ಕೂ ಜಗತ್ಕಾರಣತ್ವವು ಶ್ರುತಿಗೆ ಸಮ್ಮತವಾದುದರಿಂದ ಕಾಲಕ್ಕೆ ಕಾರಣತ್ವವನ್ನು ಹೇಳುವವರನ್ನು ಅನುವಾದ ಮಾಡುವಾಗ ಶ್ರುತಿಯು ಅನ್ಯೇ, ಅಪರೇ ಇತ್ಯಾದಿ ಹೇಳುವುದಿಲ್ಲವೆಂದು ಗಮನಿಸಬೇಕು.

ಇಚ್ಛಾಮಾತ್ರಂ ಎಂಬ ಪದವು ಸೃಷ್ಟಿಯು ಹರಿಯ ಇಚ್ಛಾಪೂರ್ವಕವಾದುದು ಎಂದು ಹೇಳುತ್ತದೆ. ಕುಲಾಲನಿಂದ ಇಚ್ಛಾಪೂರ್ವಕವಾಗಿ ಸೃಷ್ಟವಾದ ಘಟವೋ ಹೇಗೆ ಸತ್ಯವೋ ಅದರಂತೆ ಜಗತ್ತೂ ಸತ್ಯ ಎಂದು ಅಭಿಪ್ರಾಯ. ಮಿಥ್ಯಾಭೂತವಾದ ಶುಕ್ತಿರಜತಕ್ಕೆ ಸೃಷ್ಟಿಯೂ ಇಲ್ಲ. ಇಚ್ಛಾಪೂರ್ವಕ ಸೃಷ್ಟಿಯು ಮೊದಲೇ ಇಲ್ಲ. ಪ್ರಭೋಃ ಎಂಬ ಪದವು ಪರಮಾತ್ಮನು ಸಮರ್ಥನಾದವನು ಎಂದು ಹೇಳುತ್ತದೆ. ಆ ಕಾರಣದಿಂದಲೇ ಸೃಷ್ಟಿಯು ಸತ್ಯವೆಂದು ತಿಳಿಯುತ್ತದೆ. ಸತ್ಯಸೃಷ್ಟಿಯನ್ನು ಮಾಡಲು ಸಾಮರ್ಥ್ಯವಿಲ್ಲದಿರುವ ಐಂದ್ರಜಾಲಿಕನು ಮಾತ್ರ ಮಿಥ್ಯಾಸೃಷ್ಟಿಯನ್ನು ಮಾಡುತ್ತಾನೆ. ಸರ್ವಸಮರ್ಥನಾದ ಎಂದರೆ ಕರ್ತುಂ ಅಕರ್ತುಂ ಅನ್ಯಥಾಕರ್ತುಂ ಸಮರ್ಥನಾದ ಹರಿಗೆ ಮಾಯಾಸೃಷ್ಟಿಯನ್ನು ಮಾಡುವ ಅವಶ್ಯಕತೆ ಇಲ್ಲ.

ಅನಂತರ ಶ್ರುತಿಯೇ ಸೃಷ್ಟಿಯ ಪ್ರಯೋಜನವನ್ನು ವಿಮರ್ಶೆಮಾಡುತ್ತದೆ. ಸೃಷ್ಟಿಯು ಈಶ್ವರನಿಗೆ ಸುಖಪ್ರಾಪಿಯ ಸಲುವಾಗಿ ಎಂದು 'ಅನ್ಯ'ರ ಪಕ್ಷ. ಕ್ರೀಡೆಗೋಸ್ಕರವಾಗಿ ಸೃಷ್ಟಿ ಎಂಬುದು 'ಅಪರ'ರ ಪಕ್ಷ. ಇವೆರಡೂ ಶ್ರುತಿಗೆ ಸಮ್ಮತವಲ್ಲ. ಏಕೆಂದರೆ ಮೊದಲನೆಯ ಪಕ್ಷದಲ್ಲಿ ಸೃಷ್ಟಿಯಿಂದ ಉಂಟಾಗುವ ಸುಖವು ಮೊದಲು ಇರಲಿಲ್ಲವೆಂದು ತಿಳಿಯುವುದರಿಂದ ಈಶ್ವರನಿಗೆ ಅಪೂರ್ಣತೆಯು ಪ್ರಾಪ್ತವಾಗುತ್ತದೆ. ಎರಡನೆಯ ಪಕ್ಷದಲ್ಲಿಯೂ ಕ್ರೀಡೆಯಿಂದ ದೊರೆಯುವ ಸುಖವು ಮೊದಲು ಇಲ್ಲದೆ ಇರುವುದರಿಂದ ಅಪೂರ್ಣತೆಯು ಪ್ರಾಪ್ತವಾಗುತ್ತದೆ. ಅಲ್ಲದೆ ಮನೋವಿಷಾದಾದಿ ದೋಷವುಳ್ಳವನು ಅದನ್ನು ಕಳೆದುಕೊಳ್ಳಲು ಕ್ರೀಡೆಯಲ್ಲಿ ಉದ್ಯುಕ್ತನಾಗುವುದರಿಂದ ದೇವರಲ್ಲಿ ದೋಷಗಳೂ ಪ್ರಾಪ್ತವಾಗುತ್ತದೆ. ಆದ್ದರಿಂದ ಅವೆರಡು ಮತಗಳನ್ನೂ ನಿರಾಕರಿಸಿ ಶ್ರುತಿಯು **'ಏಷಃ ಸ್ವಭಾವೋಯಮ್'**. ದೇವರ ಈ ಸೃಷ್ಟ್ಯಾದಿಇಚ್ಛಾ ಮತ್ತು ವ್ಯಾಪಾರಗಳು ಅವನ ಸ್ವಭಾವ. ಸ್ವಭಾವ ಎಂದು ಹೇಳುವುದರಿಂದ ಜಗತ್ತಿಗೆ ಸತ್ಯತ್ವ ಮತ್ತು ನಿತ್ಯತ್ವಗಳು ಸಿದ್ಧವಾಗುತ್ತವೆ. ಸ್ವಭಾವಕ್ಕೆ ಫಲಾಪೇಕ್ಷೆ ಇಲ್ಲದಿರುವುದರಿಂದ ದೇವರಿಗೆ ಪ್ರಾಪ್ತವ್ಯವಾದ ಫಲವು ಇಲ್ಲದಿರುವುದರಿಂದ ಅಪೂರ್ಣತೆಯು ಇಲ್ಲವೆಂದೂ ಸಿದ್ಧವಾಗುತ್ತದೆ. ಇದನ್ನು ಉಪಪಾದನೆ ಮಾಡಲು ಹೇತುವನ್ನು ಹೇಳುತ್ತಾ ಶ್ರುತಿಯು **'ಆಪ್ತಕಾಮಸ್ಯ ಕಾ ಸ್ಪೃಹಾ'**- ಪಡೆಯಬೇಕಾದ ಸುಖವನ್ನೆಲ್ಲಾ ಪಡೆದವನಿಗೆ ಎಲ್ಲಿಯ ಪ್ರಯೋಜನದ ಆಸೆ ಎಂದು ಫಲಾಪೇಕ್ಷೆಯನ್ನು ಆಕ್ಷೇಪಮಾಡುತ್ತದೆ. ಅದಕ್ಕಾಗಿಯೇ ಮೊದಲು **'ಇಚ್ಛಾಮಾತ್ರಂ ಪ್ರಭೋಃ ಸೃಷ್ಟಿಃ'** ಎಂದು ಹೇಳಿದೆ. ಎಂದರೆ ಜಗತ್ಸೃಷ್ಟಿಯು ದೇವರ ಇಚ್ಛೆಯಿಂದ ಮಾತ್ರ ಪ್ರೇರಿತವಾದುದು ಹೊರತು

ಫಲಾಪೇಕ್ಷೆಯಿಂದಲ್ಲ ಎಂದು ಅರ್ಥ. ಇಚ್ಛಾಮಾತ್ರಂ ಎಂಬ ವಾಕ್ಯವು ಸೃಷ್ಟಿಪರೀಕ್ಷೆಯಲ್ಲಿಯೂ ಮತ್ತು ಫಲಪರೀಕ್ಷೆಯಲ್ಲಿಯೂ ಸಂಗತವಾಗಿರುವುದರಿಂದ ಶ್ರುತಿಯ ಅದನ್ನು ಇವೆರದರ ಮಧ್ಯದಲ್ಲಿ ಹೇಳುತ್ತದೆ.

ಇನ್ನು ಶ್ರುತಿಸ್ಮೃತಿಗಳಲ್ಲಿ ಅಲ್ಲಲ್ಲಿ ಬರುವ ಸ್ವಪ್ನ ಮತ್ತು ಮಾಯೆಗಳ ನಿದರ್ಶನದಿಂದಲೂ ಜಗತ್ತಿಗೆ ಮಿಥ್ಯಾತ್ವವನ್ನು ಹೇಳಲು ಬರುವುದಿಲ್ಲ. 'ವೈಧರ್ಮ್ಯಾಚ್ಚ ನ ಸ್ವಪ್ನಾದಿವತ್' ಎಂದು ಬ್ರಹ್ಮಸೂತ್ರಕಾರರೇ ಸ್ವಪ್ನವಿಲಕ್ಷಣತ್ವವನ್ನು ಹೇಳಿರುವುದರಿಂದ ಸ್ವಪ್ನಸಾಮ್ಯವು ಅಯುಕ್ತವಾಗುತ್ತದೆ. ಮತ್ತು ಸ್ವಪ್ನದಲ್ಲಿಯೂ ಸ್ವಾಪ್ನಪದಾರ್ಥಗಳಲ್ಲಿ ತೋರುವ ಜಾಗ್ರದಭೇದವು ಮಾತ್ರ ಮಿಥ್ಯಾ. ಸ್ವಪ್ನವನ್ನು ನೋಡುವ ಪುರುಷನಾಗಲೀ, ಸ್ವಪ್ನಾವಸ್ಥೆಯೇ ಆಗಲೀ, ಎಂದೂ ಮಿಥ್ಯೆಯಲ್ಲ. ಏಕೆಂದರೆ ಇದು ಸ್ವಪ್ನವೇ ಅಲ್ಲ ಎಂಬ ಬಾಧವಾಗಲೀ ನಾನು ಸ್ವಪ್ನವನ್ನೇ ನೋಡಲಿಲ್ಲ ಎಂಬ ಬಾಧವಾಗಲೀ ಎಂದೂ ಬರುವುದಿಲ್ಲ. ಮತ್ತು ಸ್ವಪ್ನವನ್ನು ನೋಡುವ ಪುರುಷನ ದೇಹವೂ, ಅವನ ಹಾಸಿಗೆಯೂ, ಅವನು ಮಲಗಿರುವ ಮನೆಯೂ ಭ್ರಾಂತಿಕಲ್ಪಿತವಲ್ಲ. ಅದರಂತೆ ಸ್ವಪ್ನಸಾಮ್ಯವನ್ನು ಹೇಳಿದರೆ ಅನಿತ್ಯತ್ವದ ದೃಷ್ಟಿಯಿಂದಲೇ ಹೊರತು ಮಿಥ್ಯಾತ್ವದ ದೃಷ್ಟಿಯಿಂದಲ್ಲ ಎಂದು ಸ್ಮೃತಿಗಳಿಗೆ ಅರ್ಥವನ್ನು ಮಾಡಬೇಕು. ಇನ್ನು ಐಂದ್ರಜಾಲಿಕನ ಮಾಯಾಸೃಷ್ಟಿಯಲ್ಲಿಯೂ ಎಲ್ಲವೂ ಅವನ ಮಾಯಾಕಲ್ಪಿತವಲ್ಲ. ಐಂದ್ರಜಾಲಿಕನ ದೇಹ, ಇಂದ್ರಿಯಗಳು, ಅವನ ವಿದ್ಯೆ ಮತ್ತು ಹಾಗೆಯೇ ಅವನ ವಿದ್ಯೆಯನ್ನು ನೋಡುವ ಜನರ ದೇಹೇಂದ್ರಿಯಾದಿಗಳು ಯಾವುದೂ ಅವನ ಮಾಯೆಯಿಂದ ಕಲ್ಪಿತವಾದುದಲ್ಲ, ಆದ್ದರಿಂದ ಶ್ರುತಿಸ್ಮೃತಿಗಳಲ್ಲಿರುವ ಮಾಯಾಸೃಷ್ಟಿಶಬ್ದದಿಂದಲೂ ಸರ್ವಮಿಥ್ಯಾತ್ವವು ಸಿದ್ಧವಾಗುವುದಿಲ್ಲ. ಜೊತೆಗೆ ಐಂದ್ರಜಾಲಿಕನಿಗೆ ತಾನು ಸೃಷ್ಟಿ ಮಾಡಿದ ಪದಾರ್ಥಗಳು ಕಾಣುವುದಿಲ್ಲ. ಪಕ್ಕದಲ್ಲಿರುವವರಿಗೆ ಮಾತ್ರ ಕಾಣುತ್ತದೆ ಆದರೆ ಈ ಜಗತ್ತನ್ನು ಪಾಲಿಸುವ ಈಶ್ವರನು ಜಗತ್ತನ್ನು ನೋಡುತ್ತಾನೆ. ಆದ್ದರಿಂದಲೂ ಜಗತ್ತು ಮಿಥ್ಯೆಯಲ್ಲ.

### ವಿಶ್ವಸತ್ಯತ್ವಸಾಧಕ ಶ್ರುತಿಗಳು:

ಹೀಗೆ ಮಾಂಡೂಕೋಪನಿಷತ್ತಿನ ವಾಕ್ಯಗಳನ್ನು ವಿಚಾರ ಮಾಡಿ '**ಕವಿರ್ಮನೀಷೀ ಪರಿಭೂಃ ಸ್ವಯಂಭೂಃ ಯಾಥಾತಥ್ಯತೋಽರ್ಥಾನ್ ವ್ಯದಧಾತ್ ಶಾಶ್ವತೀಭ್ಯಃ ಸಮಾಭ್ಯಃ**' ಎಂಬ ಈಶಾವಾಸ್ಯಮಂತ್ರವನ್ನೂ '**ವಿಶ್ವಂ ಸತ್ಯಂ ಮಘವಾನಾ ಯುವೋರಿತ್ । ಆಪಶ್ಚನ ಪ್ರಮಿನಂತಿ ವ್ರತಂ ವಾಂ**' ಎಂಬ ಋಗ್ವೇದ ಮಂತ್ರವನ್ನೂ ವಿಮರ್ಶೆಮಾಡುತ್ತಾರೆ. ಕವಿರ್ಮನೀಷೀ ಎಂಬಲ್ಲಿ '**ಯಾಥಾತಥ್ಯಶೋ ಅರ್ಥಾನ್ ವ್ಯದಧಾತ್**' ಎಂಬ ವಚನದಿಂದ ಜಗತ್ತಿನ ಪದಾರ್ಥಗಳು ಸತ್ಯವಾದುದು ಎಂದೇ ಸಿದ್ಧವಾಗುತ್ತದೆ. 'ಶಾಶ್ವತೀಭ್ಯಃ ಸಮಾಭ್ಯಃ'- ಅನಾದ್ಯನಂತಕಾಲದಲ್ಲಿ ಎಂದು ಹೇಳಿರುವುದರಿಂದ ಜಗತ್ತಿಗೆ ಬಾಧ ಬರುವುದೆಂಬ ಶಂಕೆಯು ದೂರತಃ ಅಪಾಸ್ತವಾಗುತ್ತದೆ. 'ಕವಿಃ ವ್ಯದಧಾತ್' ಎಂದು ಜ್ಞಾನಪೂರ್ವಕವಾದ ಸೃಷ್ಟಿಯನ್ನು

ಹೇಳಿರುವುದರಿಂದಲೂ **'ಪರಿಭೂಃ ಸ್ವಯಂಭೂಃ'** ಎಂದು ನಿರಂಕುಶಪ್ರಭುತ್ವವನ್ನು ಹೇಳಿರುವುದರಿಂದಲೂ ಜಗತ್ತಿನ ಸೃಷ್ಟಿಯು ಸತ್ಯವೆಂದೂ, ಬ್ರಹ್ಮನು ಉಪಾದಾನಕಾರಣವಲ್ಲವೆಂದೂ, ಮಾಯಾಸೃಷ್ಟಿಯಲ್ಲವೆಂದೂ ಸಿದ್ಧವಾಗುತ್ತದೆ.

**'ವಿಶ್ವಂ ಸತ್ಯಂ'** ಎಂಬ ಮಂತ್ರವು ಕಂಠತಃ ಜಗತ್ತಿಗೆ ಸತ್ಯತ್ವವನ್ನು ಹೇಳುತ್ತದೆ. ಅಲ್ಲದೆ ವ್ಯಾವಹಾರಿಕತ್ವವನ್ನು ನಿಷೇಧಮಾಡುತ್ತದೆ. ವ್ಯಾವಹಾರಿಕಂ ಎಂದು ಪದವನ್ನು ಅಧ್ಯಾಹಾರ ಮಾಡುವುದಾದರೆ **'ತತ್‌ಸತ್ಯಂ'** ಎಂದು ಬ್ರಹ್ಮಸತ್ಯತ್ವವನ್ನು ಹೇಳುವ ವಾಕ್ಯದಲ್ಲಿಯೂ **'ವ್ಯಾವಹಾರಿಕಂ'** ಎಂದು ಅಧ್ಯಾಹಾರ ಮಾಡಿ ಎಂಬ ನಮ್ಮ ಆಪತ್ತಿ ಇದೆ. ಈ ಮಂತ್ರವು ಮಘವಾನೌ ಎಂದು ಅಶ್ವಿನೀದೇವತೆಗಳನ್ನು ಸಂಬೋಧಿಸಿ ಮಾಡಿದ ಸ್ತೋತ್ರ. ಇಲ್ಲಿ **'ಯುವೋಃ'** ಎಂಬ ಪದವು ನಿಮ್ಮಿಬ್ಬರಿಗೆ ಸಂಬಂಧಿಸಿದ, ಎಂದರೆ ನಿಮ್ಮಿಬ್ಬರಿಂದ ಸೃಷ್ಟವಾದುದು ಈ ಜಗತ್ತು ಎಂದು ಹೇಳುತ್ತದೆ. ಇಬ್ಬರಿಂದ ಸೃಷ್ಟಿಸಲ್ಪಟ್ಟಿದೆ ಎಂದು ಹೇಳಿರುವುದರಿಂದ ಜಗತ್ತು ಏಕಾಜ್ಞಾನಕಲ್ಪಿತವಾದುದು ಎಂಬ ಮತವು ನಿರಸ್ತವಾಯಿತು. ನೀವಿಬ್ಬರೂ ಈ ಜಗತ್ತನ್ನು ನೋಡುತ್ತೀರಿ ಎಂಬ ಅರ್ಥವು ಲಭ್ಯವಾಗುವುದರಿಂದ ಒಬ್ಬನ ದೃಷ್ಟಿಯಿಂದಲೇ ಈ ಜಗತ್ತಿನ ಸೃಷ್ಟಿ ಎಂಬ ದೃಷ್ಟಿಸೃಷ್ಟಿಪಕ್ಷವು ನಿರಸ್ತವಾಗುತ್ತದೆ. ಭ್ರಾಂತವಾದ ಶುಕ್ತಿರಜತವು ಒಬ್ಬನಿಗೇ ತೋರುವುದಷ್ಟೆ? ಮತ್ತು ಈ ಜಗತ್ತು, ಜಗತ್ತಿನ ಸೃಷ್ಟಿಯು ನಿಮ್ಮ ವ್ರತ ಎಂದು ಹೇಳಲಾಗಿದೆ. ಒಬ್ಬ ವ್ಯಕ್ತಿಯು ಯಾವಾಗಲೂ ಮಾಡುವ ಕಾರ್ಯವನ್ನು ಅವನ ವ್ರತವೆಂದು ಹೇಳುತ್ತಾರೆ. ಆದ್ದರಿಂದ ಈ ಜಗತ್ಸೃಷ್ಟಿಯು ಪ್ರವಾಹಕಃ ಸತತವಾಗಿ ನಡೆಯುತ್ತದೆ ಎಂದು ಹೇಳಿದುದರಿಂದ ಬಾಧವು ಬರುವುದಿಲ್ಲವೆಂದೂ, ಆ ಕಾರಣದಿಂದ ಮಿಥ್ಯಾತ್ವವಿಲ್ಲವೆಂದೂ ಸಿದ್ಧವಾಗುತ್ತದೆ. **'ಆಪಶ್ಚನ ಪ್ರಮಿನಂತಿ'** ಎಂದು ಲೋಕಪಾವನರಾದ ಜಲಾಭಿಮಾನಿದೇವತೆಗಳ ಪ್ರಮಾವಿಷಯತ್ವವನ್ನು ಜಗತ್ತಿನಲ್ಲಿ ಹೇಳಲಾಗಿದೆ. ಅದರಿಂದ ಪ್ರಮಾವಿಷಯವಾದುದರಿಂದ, ಅದರಲ್ಲಿಯೂ ಲೋಕಪಾವನರಾದ ದೇವತೆಗಳ ಪ್ರಮಾವಿಷಯವಾದ್ದರಿಂದ ಈ ಜಗತ್ತು ಸತ್ಯವೆಂದು ತಿಳಿಯುತ್ತದೆ. ಏಕೆಂದರೆ ದೇವತೆಗಳಿಗೆ ಕರಣದೋಷಾದಿಗಳಿಲ್ಲ. ಆದ್ದರಿಂದ ಅವರಿಗೆ ಉಂಟಾಗುವ ಜ್ಞಾನವು ಅದುಷ್ಟಕರಣಜನ್ಯವಾದುದು. ಆದುದರಿಂದ ಪ್ರಮೆಯೇ ಆಗಬೇಕು. ಅರ್ಥಕ್ಕೆ ಸತ್ಯತ್ವವಿಲ್ಲದಿದ್ದರೆ ಜ್ಞಾನವು ಪ್ರಮೆಯಾಗುವುದಿಲ್ಲ. ಆದ್ದರಿಂದ ಜಗತ್ತು ಸತ್ಯ.

ಆಪಶ್ಚನ ಎಂಬಲ್ಲಿ 'ಚನ' ಎಂಬ ವೈದಿಕಪದವು ಅವಧಾರಣೆಯನ್ನು ಹೇಳುತ್ತದೆ. ಆದ್ದರಿಂದ ಶ್ರುತಿಯು ಜಗತ್ತಿನ ಸತ್ಯತ್ವಕ್ಕೆ ಉಪಪಾದಕವಾದ ಧರ್ಮಗಳನ್ನೆಲ್ಲಾ ಅವಧಾರಣೆ ಮಾಡುವುದರಿಂದ ಶ್ರುತಿಗೆ ಸತ್ಯತ್ವದಲ್ಲಿ ತಾತ್ಪರ್ಯವು ಇದೆಯೆಂದು ತಿಳಿಯುತ್ತದೆ. 'ಕವಿರ್ಮನೀಷೀ' ಎಂಬ ಮಂತ್ರವೂ ಸಹ ಕವಿಃ ಎಂಬ ಶಬ್ದದಿಂದ ಪರಮಾತ್ಮನಿಗೆ ಸರ್ವಜ್ಞತ್ವವನ್ನು ಹೇಳುವುದರಿಂದ ಈ ಸೃಷ್ಟಿಯು ಸರ್ವಜ್ಞನು ಮಾಡಿದ ಸೃಷ್ಟಿ ಎಂದು ತಿಳಿಸಿ ಅಜ್ಞಾನಕಲ್ಪಿತವಾದುದು ಈ ಸೃಷ್ಟಿ ಎಂಬ ವಾದವನ್ನು ನಿರಾಕರಿಸುತ್ತದೆ.

**'ಯಚ್ಚಿಕೇತ ಸತ್ಯಮಿತ್ ತನ್ನಮೋಘಂ':**

**'ಯಚ್ಚಿಕೇತ ಸತ್ಯಮಿತ್ತನ್ನ ಮೋಘಂ ವಸುಸ್ಪಾರ್ಹಮುತಜೇತೋತ ದಾತಾ'** ಎಂಬ ಋಗ್ವೇದ ಮಂತ್ರವನ್ನು ವಿಮರ್ಶೆಮಾಡುತ್ತಾರೆ. ಬ್ರಹ್ಮನು ಯಾವ ಜಗತ್ತನ್ನು ಸೃಷ್ಟಿಸಿದನೋ ಅದು ಸತ್ಯವಾದುದೇ, ವ್ಯರ್ಥವಾದುದಲ್ಲ ಎಂಬ ಅರ್ಥದ ಮಂತ್ರದಲ್ಲಿ ಜಗತ್ತು ಸತ್ಯವೇ ಎಂದು ಅವಧಾರಣಪೂರ್ವಕವಾಗಿ ಶ್ರುತಿಯು ಹೇಳುತ್ತಿದೆ. ಮೋಘ ಎಂದರೆ ವ್ಯರ್ಥ. ನ ಮೋಘಂ ಎಂದರೆ ವ್ಯರ್ಥವಲ್ಲ, ಅರ್ಥಕ್ರಿಯಾಕಾರಿ ಎಂದು ಅರ್ಥ. ಆದ್ದರಿಂದ ಅರ್ಥಕ್ರಿಯಾಕಾರಿತ್ವವನ್ನು ಸತ್ಯತ್ವಕ್ಕೆ ಹೇತುವನ್ನಾಗಿ ಹೇಳುತ್ತಿದೆ. ನ ಮೋಘಂ ಎಂಬಲ್ಲಿರುವ ನಞ್‌ಪದವನ್ನು ಸತ್ಯಂ ನ ಎಂದು ಅನ್ವಯಮಾಡಲು ಸಾಧ್ಯವಿಲ್ಲ. ಏಕೆಂದರೆ ಸತ್ಯಪದವು ಅವಧಾರಣಾರ್ಥವಾದ ಇತ್ ಎಂಬ ನಿಪಾತದೊಂದಿಗೆ ಅನ್ವಯವನ್ನು ಹೊಂದಿದೆ. ಸತ್ಯಂ ನ ಮೋಘಮಿತ್ ಎಂದು ಅನ್ವಯಮಾಡುವವನು ಒಬ್ಬ ಉನ್ಮತ್ತನಾಗಿರಬೇಕಷ್ಟೆ. ಮತ್ತು ಜಗತ್ತನ್ನು ಸ್ಪಾರ್ಹಂ ಎಂದರೆ ಸ್ಪೃಹಣೀಯವಾದುದು ಎಂದು ಹೇಳಿದೆ. ಸ್ಪೃಹಾವಿಷಯವಾದುದು ಸತ್ಯವೇ ಆಗಬೇಕು. ನೀನೂ ಸಹ ಸ್ಪೃಹಣೀಯವಾದ ಮೋಕ್ಷಸುಖವನ್ನು ಬಯಸುವುದರಿಂದ ಅದಂತೂ ಸತ್ಯವೇ ಆಗಬೇಕು. ಅದರಂತೆ ಜಗತ್ತೂ ಸ್ಪೃಹಣೀಯವಾದ್ದರಿಂದ ಸತ್ಯವೇ ಆಗುತ್ತದೆ ಮತ್ತು ಬ್ರಹ್ಮನಿಗೆ ಚಿಕೇತ, ಜೇತಾ, ದಾತಾ ಎಂಬ ಪದಗಳು ಕರ್ತೃತ್ವವನ್ನು, ಜೇತೃತ್ವವನ್ನು ಮತ್ತು ದಾತೃತ್ವವನ್ನು ಹೇಳುತ್ತವೆ. ಎಂದರೆ ಬ್ರಹ್ಮನಲ್ಲಿ ಅರ್ಥಕ್ರಿಯಾಕಾರಿತ್ವವು ಇದೆ ಎಂದು ಸಿದ್ಧವಾಯಿತು. ಅರ್ಥಕ್ರಿಯಾಕಾರಿಯಾದ ಬ್ರಹ್ಮನಲ್ಲಿ ಸತ್ಯತ್ವವಿರುವಂತೆ, ನ ಮೋಘಂ ಎಂದು ಹೇಳಲ್ಪಟ್ಟ ಅರ್ಥಕ್ರಿಯಾಕಾರಿತ್ವವುಳ್ಳ ಜಗತ್ತೂ ಸಹ ಪಾರಮಾರ್ಥಿಕಸತ್ಯವೇ ಆಗುತ್ತದೆ. ಹೀಗೆ ಶ್ರುತಿಯುಕ್ತಿಗಳನ್ನು ಹೇಳಿ ರಾಜರು ಸೌಹಾರ್ದದಿಂದ ಒಂದು ಮಾತನ್ನು ಹೇಳುತ್ತಾರೆ.

**ಯುಕ್ತೀಃ ಪಶ್ಯ ಶ್ರುತೀಃ ಪಶ್ಯ ಮಿಥ್ಯಾದೃಷ್ಟಿಂ ಪರಿತ್ಯಜ ।**
**ಸತ್ಯಂ ವದ ಜಗತ್ ಸರ್ವಂ ಭುಕ್ತಿಂ ಮುಕ್ತಿಂ ಯದೀಚ್ಛಸಿ ॥**

'ಯುಕ್ತಿಗಳನ್ನು ನೋಡು. ಶ್ರುತಿಗಳನ್ನು ನೋಡು. ಜಗತ್ತು ಮಿಥ್ಯಾ ಎಂಬ ಹಠವನ್ನು ಬಿಡು. ಭುಕ್ತಿಮುಕ್ತಿಗಳನ್ನು ಬಯಸುವುದಾದರೆ ಜಗತ್ತೆಲ್ಲವೂ ಸತ್ಯವೆಂದು ಹೇಳು'.

**'ಯಚ್ಚಿಕೇತ ಸತ್ಯಮಿತ್'** ಎಂಬುದು ಯಾವುದು ಈಶ್ವರನಿಂದ ಸೃಷ್ಟವೋ ಅದು ಸತ್ಯ ಎಂದು ವ್ಯಾಪ್ತಿಯನ್ನು ಹೇಳುವುದರಿಂದ ಅನಾದ್ಯನಂತಕಾಲದಲ್ಲಿ ಈಶ್ವರನಿಂದ ಸೃಷ್ಟವಾದ ಜಗತ್ತು ಸತ್ಯವೇ ಆಗುತ್ತದೆ.

**ಬ್ರಹ್ಮಸೂತ್ರಗಳು; ಮಿಥ್ಯಾತ್ವನಿರಾಕರಣೆ- ಮಿಥ್ಯಾತ್ವಕ್ಕೆ ಬ್ರಹ್ಮಸೂತ್ರ ವಿರೋಧ:**

**'ಅಥಾತೋ ಬ್ರಹ್ಮ ಜಿಜ್ಞಾಸಾ'** ಎಂಬ ಮೊದಲನೆಯ ಬ್ರಹ್ಮಸೂತ್ರವು ಅಥಶಬ್ದದಿಂದ ಅಧಿಕಾರ್ಯಾದಿಗಳನ್ನು ಹೇಳುತ್ತದೆ. ಗುರು, ಶಿಷ್ಯ, ವೇದ, ಪುಸ್ತಕ, ದೇಶ, ಕಾಲ

ಯಾವುದೂ ಇಲ್ಲದಿರುವುದರಿಂದ ಬ್ರಹ್ಮಜಿಜ್ಞಾಸೆಯನ್ನು ಮಾಡಬಾರದು ಎಂಬ ಪೂರ್ವಪಕ್ಷವು ಬಂದರೆ ಎಲ್ಲವೂ ಇರುವುದರಿಂದ ಬ್ರಹ್ಮವಿಚಾರವು ಉಪಪನ್ನವಾಗುತ್ತದೆ ಎಂದೇ ನೀನೂ ಸಿದ್ಧಾಂತಮಾಡಬೇಕಷ್ಟೆ? ಜಗತ್ತೆಲ್ಲವೂ ಮಿಥ್ಯೆಯಾದರೆ ಅಧಿಕಾರ್ಯಾದಿಗಳು ಯವುದೂ ಇಲ್ಲದಿರುವುದರಿಂದ ನೀನು ಸೂತ್ರಕ್ಕೆ ಏನು ಅರ್ಥವನ್ನು ಹೇಳುತ್ತೀಯೆ?

ಸೂತ್ರದಲ್ಲಿ ಅತಃಶಬ್ದದಿಂದ ಜ್ಞಾನದಿಂದ ಬಂಧನಿವೃತ್ತಿರೂಪವಾದ ಪ್ರಯೋಜನವನ್ನು ಹೇಳಿದ್ದಾರೆ. **'ದೃಷ್ಟ್ವೈವ ತಂ ಮುಚ್ಯತೇ', 'ತರತಿಶೋಕಮಾತ್ಮವಿತ್'** ಮೊದಲಾದ ಶ್ರುತಿಗಳೂ ಬ್ರಹ್ಮಜ್ಞಾನದಿಂದ ಬಂಧನಾಶವನ್ನು ಹೇಳುತ್ತದೆ. ನೀನು ಮಾತ್ರ ಜ್ಞಾನವು ಅಜ್ಞಾನಕ್ಕೆ ಮಾತ್ರ ನಿವರ್ತಕವಾಗಿದೆ ಎಂಬ ವ್ಯಾಪ್ತಿಯನ್ನು ಅಂಗೀಕರಿಸುವುದರಿಂದ ಸೂತ್ರವು ಹೇಳಿದ ಜ್ಞಾನದಿಂದ ಬಂಧನಿವೃತ್ತಿಯೇ ನಿನಗೆ ಕೂಡುವುದಿಲ್ಲ. ಅದನ್ನು ಕೂಡಿಸುವುದಕ್ಕಾಗಿ ಬಂಧವು ಅಜ್ಞಾನಕಾರ್ಯವೆಂದು ಒಪ್ಪಿ ಜ್ಞಾನದಿಂದ ಅಜ್ಞಾನವು ನಾಶವನ್ನು ಹೊಂದಿ ತದ್ದ್ವಾರಾ ಅಜ್ಞಾನಕಾರ್ಯವಾದ ಬಂಧವೂ ನಾಶಹೊಂದುತ್ತದೆ ಎಂದು, ನೀನು ಹೇಳುತ್ತೀಯೆ. ಆದ್ದರಿಂದ ಮಿಥ್ಯಾತ್ವವೆಂದರೆ ಅಜ್ಞಾನಕಾರ್ಯತ್ವ. ಈ ಆರ್ಥಿಕಾರ್ಥವನ್ನು ಉಪಪಾದನೆ ಮಾಡಲು ಅಧ್ಯಾಸಭಾಷ್ಯವು ಹೊರಟಿದೆ ಎಂದು ನೀನು ಹೇಳುತ್ತೀಯೆ. ಆದರೆ ಇದರಿಂದ ನಿನಗೆ ಉಪಕಾರವಾಗುವುದಿಲ್ಲ. ಏಕೆಂದರೆ ನಿನ್ನ ಮತದಲ್ಲಿಯೂ ಸಂಸಾರವು ಅನಾದಿ. ಅನಾದಿಯಾದ್ದರಿಂದ ಅದು ಕಾರ್ಯವಲ್ಲ. ಅನಾದಿಯಾದುದು ಕಾರ್ಯವಲ್ಲ ಎಂಬ ವ್ಯಾಪ್ತಿಯು ಪ್ರಬಲವಾದುದು. ಆದ್ದರಿಂದ ಬಂಧವು ಅಜ್ಞಾನಕಾರ್ಯವೇ ಅಲ್ಲವಾದ್ದರಿಂದ ಅಜ್ಞಾನನಿವೃತ್ತಿಯಾದರೂ ಬಂಧವು ನಿವೃತ್ತವಾಗುವುದಿಲ್ಲವಾದ್ದರಿಂದ ನಿನ್ನ ಆರ್ಥಿಕಾರ್ಥವೂ ನಿನಗೆ ಅನರ್ಥಕಾರಿಯೇ ಆಗುತ್ತದೆ. ಶ್ರುತಿಯನ್ನು ತಿರಸ್ಕರಿಸಿ ನೀನೇ ಒಪ್ಪಿದ ವ್ಯಾಪ್ತಿಯನ್ನು ಪುರಸ್ಕರಿಸಿ ಹೊರಟರೆ ನಿನ್ನ ಮಿಥ್ಯಾತ್ವಲಾಭವೆಂಬ ಪುತ್ರನಿಗೆ ಗರ್ಭಸ್ರಾವವೇ ಉಂಟಾಗುತ್ತದೆ. ಶ್ರುತಿಗೆ ಗೌರವವನ್ನು ಕೊಡುವುದಾದರೆ ಅನಾದಿಯಾದ ಭಾವರೂಪವಾದ ಬಂಧಕ್ಕೂ ನಾಶವನ್ನು ಒಪ್ಪು. ಶ್ರುತಿಯನ್ನು ತಿರಸ್ಕರಿಸಿದರೆ ಅನಾದಿವಸ್ತುವಿಗೆ ನಾಶವಿಲ್ಲವೆಂಬ ನಮ್ಮ ಯುಕ್ತಿಯೇ ಪ್ರಬಲವಾದುದರಿಂದ ನೀನು ಅಜ್ಞಾನನಾಶವನ್ನೇ ಕೂಡಿಸಲಾರೆ.

ಇನ್ನು ಬಂಧವನ್ನು ಅಜ್ಞಾನಕಾರ್ಯವೆಂದು ಅಂಗೀಕರಿಸಿದರೂ, ಅಜ್ಞಾನವು ಉಪಾದಾನ ಕಾರಣವೇ ಆಗುವುದರಿಂದ, ಅಜ್ಞಾನಕ್ಕೂ ಅದರ ಕಾರ್ಯವಾದ ಬಂಧಕ್ಕೂ ಸಾಮಾನಾಧಿಕರಣ್ಯವೇ ಇರಬೇಕು. ಬಂಧವು ಜೀವನಲ್ಲಿಯೇ ಇರುವುದರಿಂದ ಬಂಧಕ್ಕೆ ಉಪಾದಾನಕಾರಣವಾದ ಅಜ್ಞಾನವೂ ಜೀವನಲ್ಲಿಯೇ ಇರಬೇಕು. ಆಗ ಜೀವಾಶ್ರಿತಾಜ್ಞಾನವೇ ಸಿದ್ಧವಾಗುತ್ತದೆ. ಶುದ್ಧಬ್ರಹ್ಮಾಶ್ರಿತವಾದುದು ಅಜ್ಞಾನ ಎಂಬ ನಿಮ್ಮ ಪಕ್ಷವು ಬಿದ್ದುಹೋಗುತ್ತದೆ.

ಜ್ಞಾನವು ಅಜ್ಞಾನಕ್ಕೆ ಮಾತ್ರ ನಿವರ್ತಕ ಎಂಬ ವ್ಯಾಪ್ತಿಯೂ ಅನಾದಿಭಾವವು ನಿವೃತ್ತವಾಗುವುದಿಲ್ಲ ಎಂಬ ವ್ಯಾಪ್ತಿಯೂ ಪ್ರಬಲವಾಗಿರುವುದರಿಂದ ಅಜ್ಞಾನವನ್ನು ಅಭಾವರೂಪವೆಂದು ಒಪ್ಪು. ಆಗ ಅಜ್ಞಾನವು ಉಪಾದಾನವೇ ಆಗುವುದಿಲ್ಲ. ಆದ್ದರಿಂದ ಅಜ್ಞಾನನಾಶವಾದರೂ ಜಗನ್ನಾಶವಾಗದಿರುವುದರಿಂದ ನೀನು ಅರ್ಥಿಕಾರ್ಥವಾಗಿ ಮಿಥ್ಯಾತ್ವವನ್ನು ಅಂಗೀಕರಿಸುವುದು ವ್ಯರ್ಥವಾಗುತ್ತದೆ.

ಅಜ್ಞಾನವು ಭಾವರೂಪವಾದುದೇ ಆಗಬೇಕೆಂಬ ಆಗ್ರಹವಿದ್ದರೆ ಅಜ್ಞಾನದ ಮಿಥ್ಯಾತ್ವಕಲ್ಪನೆಯನ್ನು ಬಿಡು. ಅಜ್ಞಾನವು ಸತ್ಯವಾದರೂ ಹಗ್ಗದಿಂದ ಪಶುವು ಬಿಡುಗಡೆ ಹೊಂದುವಂತೆ ಜೀವನು ಅಜ್ಞಾನದಿಂದ ಮುಕ್ತನಾಗಬಹುದು. ಆಗ ಅಜ್ಞಾನವೂ ಸತ್ಯ ಮತ್ತು ಜಗತ್ತೂ ಅಬಾಧ್ಯ ಎಂದು ಸಿದ್ಧವಾಗುತ್ತದೆ. ನಿನಗೆ ಜ್ಞಾನವು ಅಜ್ಞಾನಕ್ಕೆ ಮಾತ್ರ ನಿವರ್ತಕವಾಗುತ್ತದೆ ಎಂಬ ವ್ಯಾಪ್ತಿಯದೊಂದೇ ಬಲ. ನಮಗಾದರೆ ಅನಾದಿಭಾವವು ನಿವೃತ್ತವಾಗುವುದಿಲ್ಲ ಎಂಬ ವ್ಯಾಪ್ತಿಯ ಬಲವೂ ತರತಿ ಶೋಕಮಾತ್ಮವಿತ್ ಎಂಬ ಶ್ರುತಿಯ ಬಲವೂ ಇರುವುದರಿಂದ ನಮ್ಮ ಪಕ್ಷವೇ ಪ್ರಬಲವಾದುದು. ಆದ್ದರಿಂದ ಶ್ರುತಿಯ ಬಲದಿಂದ ಭಾವರೂಪವಾದ ಅನಾದಿಯಾದ ಬಂಧವೂ ನಿವೃತ್ತವಾಗುತ್ತದೆ ಎಂದೇ ನಮ್ಮ ಅಭಿಪ್ರಾಯ.

ಇನ್ನು ಭಾವರೂಪವಾದ ಅಜ್ಞಾನವನ್ನು ಒಪ್ಪಿದರೂ ಅದು ಯಾವುದಕ್ಕೆ ಆವರಣ? ನಿನ್ನ ಮತದಲ್ಲಿ ಚೈತನ್ಯ ಮತ್ತು ವೃತ್ತಿ ಎಂದು ಎರಡು ಜ್ಞಾನವನ್ನು ಒಪ್ಪುತ್ತೀರಷ್ಟೆ? ಅದರಲ್ಲಿ ಸ್ವರೂಪಚೈತನ್ಯಾತ್ಮಕಜ್ಞಾನವು ಯಾವಾಗಲೂ ಪ್ರಕಾಶಿಸುತ್ತದೆ ಎಂದು ಒಪ್ಪುವುದರಿಂದ ಅಜ್ಞಾನವು ಅದಕ್ಕೆ ಆವರಣವಾಗುವುದಿಲ್ಲ. ಇನ್ನು ಮನೋವೃತ್ತಿರೂಪವಾದ ಜ್ಞಾನಕ್ಕೆ ಆವರಣವಾಗುತ್ತದೆ ಎಂದು ಹೇಳಬೇಕು. ಹಾಗೆ ಹೇಳಿದರೆ ಅನ್ಯೋನ್ಯಾಶ್ರಯವು ಬರುತ್ತದೆ. ಮೊದಲು ಆವರಣನಾಶವಾದ ಮೇಲೆ ಅನಂತರ ವಸ್ತುವಿನ ಅಪರೋಕ್ಷಪ್ರಮೆಯು ಉಂಟಾಗಬೇಕಷ್ಟೆ? ಅಪರೋಕ್ಷಪ್ರಮೆಯು ಅಜ್ಞಾನನಾಶಕವೆಂದು ನೀವು ಒಪ್ಪುವುದರಿಂದ ಅಜ್ಞಾನನಾಶವಾದ ಮೇಲೆ ಅಪರೋಕ್ಷಪ್ರಮೆ, ಅಪರೋಕ್ಷಪ್ರಮೆಯು ಬಂದಮೇಲೆ ಅಜ್ಞಾನನಾಶ ಎಂಬ ಕಾರಣದಿಂದ ಅನ್ಯೋನ್ಯಾಶ್ರಯವು ಬರುತ್ತದೆ. ಆದ್ದರಿಂದ ಆವರಿಸಲ್ಪಡುವ ವಸ್ತುವೇ ಇಲ್ಲದಿರುವುದರಿಂದ ಆವರಣರೂಪವಾದ ಅಜ್ಞಾನವು ಹೇಗೆ ಸಿದ್ಧವಾಗುತ್ತದೆ? ಅದೂ ಅಲ್ಲದೆ 'ತತ್ತ್ವಮಸಿ' ಮುಂತಾದ ವಾಕ್ಯಗಳಿಂದ ಈಗಲೂ ಅಖಂಡಚೈತನ್ಯದ ವೃತ್ತಿಜ್ಞಾನವು ಬರುತ್ತದಷ್ಟೆ? ಅಜ್ಞಾನವು ಏಕೆ ನಾಶವಾಗುವುದಿಲ್ಲ? ಶ್ರವಣಮನನಾದಿ ಸಹಿತವಾದ ವೃತ್ತಿಯು ಅಜ್ಞಾನನಾಶಕವೆಂದು ಹೇಳಿದರೆ ಘಟದ ಅಪರೋಕ್ಷವು ಬರುವಾಗ ಶ್ರವಣಾದಿಸಹಕಾರವಿಲ್ಲದಿರುವ ವೃತ್ತಿಯಿಂದ ಹೇಗೆ ಅಜ್ಞಾನವು ನಾಶಹೊಂದುತ್ತದೆ? ಶ್ರುತಿಗೆ ಅನುಸಾರವಾಗಿ ನಾವು ತತ್ತ್ವಮಸಿ ಮೊದಲಾದ ವಾಕ್ಯಜನ್ಯವೃತ್ತಿಯಲ್ಲಿ ಶ್ರವಣಾದಿಸಹಕಾರವನ್ನು ಅಪೇಕ್ಷಿಸುತ್ತೇವೆ. ಘಟದ ವೃತ್ತಿಯಲ್ಲಿ ಹಾಗೆ ಅಂಗೀಕರಿಸಲು ಶ್ರುತಿ ಇಲ್ಲ ಎಂದು ಹೇಳುವುದಾದರೆ ಶ್ರುತಿಯನ್ನು ಅನುಸರಿಸಿ ಜ್ಞಾನದಿಂದ

ನೇರವಾಗಿ ಬಂಧದ ನಾಶವನ್ನೇ ಅಂಗೀಕರಿಸು. ಮಧ್ಯೆ ಅಜ್ಞಾನ ಮತ್ತು ಮಿಥ್ಯಾತ್ವಗಳ ಕಲ್ಪನೆ ಏಕೆ? ಆದ್ದರಿಂದ ಹೀಗೆ ಆರ್ಥಿಕವಾದ ಮಿಥ್ಯಾತ್ವವನ್ನು ಹೇಳಿದರೂ ನಿನಗೇನೂ ಉಪಯೋಗವಿಲ್ಲವಾದ್ದರಿಂದ ಸೂತ್ರಾರ್ಥವನ್ನು ಹೇಳುವುದನ್ನು ನಿಲ್ಲಿಸು ಎಂದು ರಾಜರು ಹೇಳುತ್ತಾರೆ.

**ಅತಃ ಸೂತ್ರಾರ್ಥಕಥನಾನ್ನಿವರ್ತಸ್ವ ಸುಖೀ ಭವ ।**
**ಯದ್ವಾ ಸೂತ್ರಾರ್ಥಕುಶಲಾನ್ ಉಪಾಸ್ವ ನೃಹರೇರ್ಭಟಾನ್ ॥**

ಮತ್ತು **'ತದಾವಿದ್ವಾನ್ ಪುಣ್ಯಪಾಪೇ ವಿಧೂಯ ನಿರಂಜನಃ ಪರಮಂ ಸಾಮ್ಯಮುಪೈತಿ'** ಎಂಬ ಶ್ರುತಿಯು ಮೊದಲು ಜ್ಞಾನದಿಂದ ಪುಣ್ಯಪಾಪರೂಪವಾದ ಜಗತ್ತಿನ ನಾಶವನ್ನು ಹೇಳಿ ಅನಂತರ ನಿರಂಜನಃ ಎಂಬ ಶಬ್ದದಿಂದ ಅಜ್ಞಾನನಾಶವನ್ನು ಹೇಳುತ್ತದೆ. ಸೂತ್ರಕಾರರೂ ತದಧಿಗಮಸೂತ್ರದಲ್ಲಿ ಜ್ಞಾನದಿಂದ ನೇರವಾಗಿ ಅಘನಾಶವನ್ನೇ ಹೇಳಿದ್ದಾರೆ. ಆದ್ದರಿಂದ ನಿನ್ನ ಕಲ್ಪನೆಯು ಶ್ರುತಿಸೂತ್ರಗಳಿಗೆ ವಿರುದ್ಧವಾದುದು.

ದೈನಂದಿನ ಪ್ರಳಯಗಳಲ್ಲಿ ಜಗತ್ತು ನಾಶವನ್ನು ಹೊಂದುತ್ತದೆ. ಅಜ್ಞಾನವು ನಾಶವನ್ನು ಹೊಂದುವುದಿಲ್ಲ. ಕಾರ್ಯಸಾಮಾನ್ಯವನ್ನು ಕುರಿತು ಈಶ್ವರಜ್ಞಾನವು ಕಾರಣವಾದ್ದರಿಂದ ಈ ಪ್ರಳಯಕಾಲದಲ್ಲಿ ಜಗತ್ತು ಈಶ್ವರಜ್ಞಾನದಿಂದ ಸಾಕ್ಷಾತ್ತಾಗಿ ನಿವೃತ್ತವಾಗುತ್ತದೆ ಎಂದು ಒಪ್ಪಬೇಕು. ಆದ್ದರಿಂದ ಮಧ್ಯೇ ಅಜ್ಞಾನಕಲ್ಪನೆಗೆ ಅವಕಾಶವಿಲ್ಲ. ಇನ್ನು ಪರಂಪರಯಾ ನಾಶಕವಾಗುವುದಾದರೂ ಎರಡು ರೀತಿ ನಾಶಕವಾಗುತ್ತದೆ. ತಂತುವಿಭಾಗವು ತಂತುಸಂಯೋಗವನ್ನು ನಾಶಮಾಡಿ ಪಟನಾಶವನ್ನು ಮಾಡುತ್ತದೆ. ಇದು ಒಂದು ರೀತಿ. ಒಂದು ವಸ್ತುವನ್ನು ನಾಶಮಾಡಿ ನಾಶಮಾಡುವ ರೀತಿ. ತೃಣಾರಣಿಗಳು ಅಗ್ನಿಯನ್ನು ಉತ್ಪತ್ತಿಮಾಡಿ ತಮಸ್ಸನ್ನು ನಾಶಮಾಡುತ್ತದೆ. ಇದು ಇನ್ನೊಂದು ವಸ್ತುವನ್ನು ಉತ್ಪತ್ತಿಮಾಡಿ ನಾಶಮಾಡುವ ಎರಡನೆಯ ರೀತಿ. ಬ್ರಹ್ಮಜ್ಞಾನವು ಇನ್ನೊಂದು ವಸ್ತುವನ್ನು ವಿನಾಶಮಾಡಿಯೇ ಒಂದು ವಸ್ತುವನ್ನು ವಿನಾಶಮಾಡುತ್ತದೆಂದಾದರೆ ಒಂದುಪಕ್ಷ ಜಗತ್ಸತ್ಯತ್ವವನ್ನು ಪ್ರತಿರೋಧ ಮಾಡಲಿ. ಆ ಪಕ್ಷದಲ್ಲಿಯೂ ವಾಸ್ತವವಾಗಿ ಪ್ರತಿರೋಧವು ಸಾಧ್ಯವಿಲ್ಲ. ಅದು ಬೇರೆಯ ವಿಚಾರ. ಆದರೆ ಇನ್ನೊಂದು ವಸ್ತುವನ್ನು ಉತ್ಪಾದಿಸಿ ನಾಶಮಾಡುವುದೆಂದು ಸ್ವೀಕರಿಸಿದರೆ ಜ್ಞಾನವು ಅಜ್ಞಾನಕ್ಕೇ ನಾಶಕ ಎಂಬ ವ್ಯಾಪ್ತಿಗೆ ಅವಕಾಶವೇ ಇಲ್ಲ. ಜ್ಞಾನವು ಪ್ರವೃತ್ತಿ , ನಿವೃತ್ತಿ , ಶಬ್ದವ್ಯವಹಾರ, ಸುಖ, ದುಃಖ ಮೊದಲಾದ ಅನೇಕ ವಸ್ತುಗಳನ್ನು ಉತ್ಪತ್ತಿಮಾಡಿ ಅದಕ್ಕೆ ವಿರೋಧಿಯಾದುದನ್ನು ನಿವೃತ್ತಿಮಾಡುವ ಸ್ಥಳದಲ್ಲಿ ಮಿಥ್ಯಾತ್ವಕಲ್ಪನೆಗೆ ಅವಕಾಶವೇ ಇಲ್ಲ. ಜ್ಞಾನವು ರಾಗಜನಕವಾಗಿ ಸ್ನೇಹವನ್ನುಂಟುಮಾಡುವುದು ಅನುಭವಸಿದ್ಧವಾದುದು. ಹಾಗೆಯೇ ಬ್ರಹ್ಮಜ್ಞಾನವು ಭಕ್ತಿಯನ್ನುಂಟುಮಾಡುತ್ತದೆ, ಆ ಭಕ್ತಿಯೇ ಈಶ್ವರನ ಪ್ರೀತಿಗೆ ಪಾತ್ರವನ್ನಾಗಿ ಮಾಡಿ

ಬಂಧನಾಶವಾಗುತ್ತದೆ ಎಂದು ಒಪ್ಪುವುದು ಶುಕ್ತಿಯುಕ್ತಿಸಮ್ಮತವಾಗಿದೆ. ಆದ್ದರಿಂದ ನಿಮ್ಮ ಭಾಷ್ಯದ ಆರಂಭದಲ್ಲಿ ಮಿಥ್ಯಾತ್ವವನ್ನು ಪ್ರಸ್ತಾವ ಮಾಡುವುದು ಅಸಂಗತ.

ಇನ್ನು ಬಾಧ ಎಂದರೆ ನಿವೃತ್ತಿ ಎಂಬ ಅರ್ಥವನ್ನು ಸ್ವೀಕರಿಸಿ ಬ್ರಹ್ಮಜ್ಞಾನದಿಂದ ಜಗತ್ತಿಗೆ ನಾಶವುಂಟಾಗುತ್ತದೆಂದು ಹೇಳಲು ಸಾಧ್ಯವಿಲ್ಲ. ಏಕೆಂದರೆ ಬಾಧಪ್ರಮೆಯು ಎಲ್ಲಿಯೂ ನಾಶಕವೇ ಆಗುವುದಿಲ್ಲ. ಶುಕ್ತಿರಜತಸ್ಥಳದಲ್ಲಿ ನೇದಂ ರಜತಂ ಎಂಬ ಬಾಧವು ಬರುವಾಗ ಇದಂ ರಜತಂ ಎಂಬ ಭ್ರಾಂತಿಯು ಮೊದಲೇ ನಷ್ಟವಾಗುತ್ತದೆ. ಈ ಬಾಧವು ಮೊದಲೇ ನಷ್ಟವಾದ ಇದಂ ರಜತಂ ಎಂಬ ಜ್ಞಾನಕ್ಕೆ ಭ್ರಮತ್ವವನ್ನು ಮಾತ್ರ ಜ್ಞಾಪಿಸುತ್ತದೆ. ಅಥವಾ ಇನ್ನೊಮ್ಮೆ ಅಲ್ಲಿ ಇದಂ ರಜತಂ ಎಂಬ ಭ್ರಮವು ಉಂಟಾಗದಂತೆ ಮಾಡುತ್ತದೆ. ರಜತಕ್ಕೆ ನಾಶವಾಗುವುದಿಲ್ಲ. ಏಕೆಂದರೆ ಮೊದಲು ಇರುವ ವಸ್ತುವಿಗೇ ನಾಶವಾಗಬೇಕು. ರಜತವಾದರೂ ಅವಿದ್ಯಮಾನವಾದುದು. ಇನ್ನು ರಜತಕ್ಕೆ ನಾಶವನ್ನು ಒಪ್ಪಿದರೂ ಬಾಧಜ್ಞಾನವು ಬರುವುದಕ್ಕಿಂತ ಮೊದಲೇ ಆವರಣರೂಪವಾದ ಅಜ್ಞಾನನಾಶವಾದಾಗ ತದುಪಾದಾನಕವಾದ ರಜತವೂ ನಷ್ಟವಾಗಿದೆ. ಆದ್ದರಿಂದ ಬಾಧದಿಂದ ನಾಶಹೊಂದುವ ವಸ್ತುವು ಜಗತ್ತಿನಲ್ಲಿ ಎಲ್ಲಿಯೂ ದೊರೆಯುವುದಿಲ್ಲ. ಜಗತ್ತಾದರೂ ಜ್ಞಾನನಾಶ್ಯನಲ್ಲದ ಬ್ರಹ್ಮನಂತೆ ಪಾರಮಾರ್ಥಿಕಸತ್ಯವೇ ಆಗುತ್ತದೆ. ಇನ್ನು ನಿನ್ನ ರೀತಿಯಲ್ಲಿ ಬ್ರಹ್ಮಾತಿರಿಕ್ತವಾದ ಆ ಬಾಧಪ್ರಮೆಯೂ ಬಾಧ್ಯವಾದದ್ದೇ. ನನ್ನ ರೀತಿಯಲ್ಲಿಯೂ ಅದು ಅಪ್ರಾಮಾಣಿಕವಾದ್ದರಿಂದ ಬಾಧ್ಯವಾದದ್ದೇ. ಆದ್ದರಿಂದಲೂ ಬಾಧ್ಯವಾದಬಾಧಪ್ರಮೆಗೆ ವಿಷಯನಾದ ಬ್ರಹ್ಮನಂತೆ ಜಗತ್ತೂ ಪಾರಮಾರ್ಥಿಕಸತ್ಯವೇ ಆಗುತ್ತದೆ.

ಇನ್ನು ಜ್ಞಾನಕ್ಕೆ ಅಜ್ಞಾನವಿರೋಧಿತ್ವವಿರುವುದರಿಂದಲೇ ಜ್ಞಾನವು ಅಜ್ಞಾನವನ್ನು ನಾಶಮಾಡುತ್ತದೆ. ಅದಕ್ಕೆ ಅಜ್ಞಾನದ ಮಿಥ್ಯಾತ್ವವು ಏಕೆಬೇಕು? ಅಂತಹ ಅಜ್ಞಾನಜನ್ಯವಾದ ಜಗತ್ತು ಸತ್ಯವೇ ಆಗಲಿ. ಆದ್ದರಿಂದ ಈ ಯಾವ ರೀತಿಯಿಂದಲೂ ಮತ್ತು ಇನ್ನೂ ಅನೇಕ ಯುಕ್ತಿಗಳಿಂದಲೂ ನೀನು ಅಂಗೀಕರಿಸುವ ಅಜ್ಞಾನೋಪಾದಾನಕತ್ವವು ಅಸಂಗತವಾದುದು ಎಂದು ಸಮರ್ಥಿಸುತ್ತಾರೆ.

### ಅಜ್ಞಾನ ಮತ್ತು ಅದರ ಆವರಣ ವಿಕ್ಷೇಪ ಶಕ್ತಿಗಳು :

ಪರಮತದಲ್ಲಿ ಅಜ್ಞಾನಕ್ಕೆ ಆವರಣಶಕ್ತಿ ಮತ್ತು ವಿಕ್ಷೇಪಶಕ್ತಿ ಎಂಬ ಎರಡು ಶಕ್ತಿಗಳನ್ನು ಒಪ್ಪುತ್ತಾರೆ. ಅಧಿಷ್ಠಾನಚೈತನ್ಯವು ಪ್ರಕಾಶಿಸದಂತೆ ಮಾಡುವುದು ಆವರಣಶಕ್ತಿ. ಇಲ್ಲದಿರುವ ಆಕಾರವನ್ನು ತೋರಿಸುವ ಶಕ್ತಿಯು ವಿಕ್ಷೇಪಶಕ್ತಿ. ಅಜ್ಞಾನದಿಂದ ಜಗತ್ತಿನ ಸೃಷ್ಟಿಯಾಗುವಾಗ ಅಧಿಷ್ಠಾನಚೈತನ್ಯವು ಆವೃತವಾಗಿರುತ್ತದೆ. ವಿಕ್ಷೇಪಶಕ್ತಿಯಿಂದ ಘಟಪಟಾದಿ ಜಗತ್ತಿನ ಸೃಷ್ಟಿಯಾಗುತ್ತದೆ. ಸೃಷ್ಟಿಯಾಗುವಾಗ ಜಗತ್ತಿನಭ್ರಮವು ಬರುವುದಿಲ್ಲ. ಏಕೆಂದರೆ ಅಧಿಷ್ಠಾನಚೈತನ್ಯದ ಪ್ರಕಾಶವಿರುವುದಿಲ್ಲ. ಜಗತ್ತಿನಭ್ರಮವೆಂದರೆ ಅದು

ಅಧಿಷ್ಠಾನಚೈತನ್ಯರೂಪವಾದುದು. ಆದ್ದರಿಂದ ಆಗ ಜಗತ್ತಿನ ಭ್ರಮವಿಲ್ಲ, ಜಗತ್ತು ಇದೆ ಎಂದು ಅಂಗೀಕರಿಸಿದರೆ ಪರಪ್ರಕ್ರಿಯೆಯಿಂದಲೇ ಜಗತ್ತಿಗೆ ಸತ್ಯತ್ವವು ಸಿದ್ಧವಾಗುತ್ತದೆ. ವೃತ್ತಿಯಿಂದ ಘಟಾವಚ್ಛಿನ್ನಚೈತನ್ಯಾವರಣವಾದ ಅಜ್ಞಾನವು ನಾಶವಾದರೆ ಘಟದ ಜ್ಞಾನವು ಬರುತ್ತದೆ. ಅದು ಅಧಿಷ್ಠಾನಚೈತನ್ಯರೂಪವಾದುದು. ನೀನು ಅದನ್ನೇ ಘಟಭ್ರಮವೆಂದು ಕರೆಯುತ್ತೀಯೆ. ಅಂತಹ ಘಟಭ್ರಮವು ಅಪರೋಕ್ಷವೃತ್ತಿಯಿಂದಲೇ ಉಂಟಾಗುತ್ತದೆಂದು ನಿನ್ನ ಅಂಗೀಕಾರ. ಅಪರೋಕ್ಷ ವೃತ್ತಿಯಿಂದಲೂ ಅರ್ಥೇಂದ್ರಿಯಸನ್ನಿಕರ್ಷದಿಂದಲೇ ಉಂಟಾಗಬೇಕು. ಅಂತಹ ಸನ್ನಿಕರ್ಷವುಂಟಾಗಬೇಕಾದರೆ ಸನ್ನಿಕರ್ಷಕ್ಕಿಂತ ಮೊದಲು ಪ್ರತಿಸಂಬಂಧಿಗಳಾದ ಆ ಎರಡು ವಸ್ತುಗಳು ಇರಬೇಕು. ತಥಾಚ ಘಟಭ್ರಮಕ್ಕಿಂತ ಮೊದಲೇ ಘಟದ ಸತ್ವವು ಸಿದ್ಧವಾಗುವುದರಿಂದ ಘಟಾದಿಜಗತ್ತು ಆರೋಪಿತವಾಗಲು ಸಾಧ್ಯವಿಲ್ಲ.

ಇನ್ನು ಮಾಯಾಮಯವಾದ ವಸ್ತುವಿನ ಆರೋಪವು ನೋಡುವವರ ದುಷ್ಟಚಕ್ಷುಸ್ಸಿನಿಂದ ಉಂಟಾಗುತ್ತದೆ. ಅಲ್ಲಿ ಸನ್ನಿಕರ್ಷದ ಅವಶ್ಯಕತೆ ಇಲ್ಲ. ದೋಷವೇ ಸನ್ನಿಕರ್ಷದ ಕಾರ್ಯವನ್ನು ಮಾಡುತ್ತದೆ. ಅಲ್ಲಿ ಮಾಯಿಕವಾದ ಪದಾರ್ಥವು ಅಸತ್ತಾದರೂ ನೋಡುವವರ ಚಕ್ಷುಸ್ಸಾಗಲೀ, ದೇಹವಾಗಲೀ ಮಾಯಿಕವಲ್ಲ (ಅಸತ್ಯವಲ್ಲ). ಅವು ಸತ್ಯವೇ ಆಗುತ್ತವೆ. ಅದರಂತೆ ಆಕಾಶಾದಿ ಸರ್ವಜಗತ್ತು ಈಶ್ವರನ ಮಾಯಾಸೃಷ್ಟಿಯೆಂದು ಅಂಗೀಕರಿಸಿದರೂ, ಈಶ್ವರನ ದೇಹವಾಗಲೀ, ಅಥವಾ ಇಂದ್ರಿಯಗಳಾಗಲೀ ಮಾಯಿಕವಲ್ಲ. ಅವು ಸತ್ಯವೆಂದೇ ಅಂಗೀಕರಿಸಬೇಕು. ಈಶ್ವರಚೈತನ್ಯವಾಗಲೀ ಶುದ್ಧಚೈತನ್ಯವಾಗಲೀ ಜಗದ್‌ಭ್ರಮವಾಗುವುದಿಲ್ಲ. ಏಕೆಂದರೆ ಅದು ಅಜ್ಞಾನದಿಂದ ಆವೃತವಾಗಿದೆ. ವೃತ್ತಿಯು ಜಗದ್‌ಭ್ರಮವಾಗುವುದಿಲ್ಲ. ಹೀಗೆ ವೃತ್ತಿಯಿಂದಾಗಲೀ, ಚೈತನ್ಯದಿಂದಲಾಗಲೀ ಜಗದ್‌ಭ್ರಮವು ಸಿದ್ಧವಾಗದಿರುವುದರಿಂದ ಜಗತ್ತು ಸತ್ಯವೆಂದೇ ಸಿದ್ಧವಾಗುತ್ತದೆ.

**ಪ್ರತಿಕರ್ಮವ್ಯವಸ್ಥಾವಿಚಾರ :**

ಘಟವೃತ್ತಿಯಿಂದ ಘಟಾವಚ್ಛಿನ್ನಚೈತನ್ಯಾಜ್ಞಾನವು ನಷ್ಟವಾದರೆ ಘಟಾಧಿಷ್ಠಾನಚೈತನ್ಯವು ಪ್ರಕಾಶಿಸುತ್ತದೆ. ಇದೇ ಘಟಭ್ರಮ. ಹೀಗೆಯೇ ಪಟಭ್ರಮವೂ ಕೂಡ. ಆದ್ದರಿಂದ ಎಲ್ಲವೂ ಚೈತನ್ಯದಲ್ಲಿಯೇ ಆರೋಪಿತವಾಗಿದ್ದರೂ ಯಾವ ಅಜ್ಞಾನವು ನಿವೃತ್ತವಾದಾಗ ಚೈತನ್ಯವು ಯಾವುದನ್ನು ಪ್ರಕಾಶಿಸುತ್ತದೆಯೋ ಆ ವಸ್ತುವೇ ಆ ಚೈತನ್ಯಕ್ಕೆ ವಿಷಯವಾಗುತ್ತದೆ. ಇನ್ನೊಂದು ವಸ್ತುವು ವಿಷಯವಾಗುವುದಿಲ್ಲ ಎಂಬುದು ಪರರಪ್ರಕ್ರಿಯೆ. ಈ ಪ್ರಕ್ರಿಯೆಯನ್ನು ರಾಜರು ವಿಸ್ತಾರವಾಗಿ ನಿರಾಕರಿಸುತ್ತಾರೆ. ಮೊದಲನೆಯದಾಗಿ ಘಟಜ್ಞಾನದಿಂದ (ಘಟವೃತ್ತಿಯಿಂದ) ಚೈತನ್ಯಾವರಕವಾದ ಅಜ್ಞಾನವು ನಿವೃತ್ತವಾಗುವುದಿಲ್ಲ. ಚಕ್ಷುಸ್ಸು ರೂಪವುಳ್ಳ ಪದಾರ್ಥವನ್ನು ಮಾತ್ರ ಗ್ರಹಿಸುತ್ತದೆ. ಬ್ರಹ್ಮನು ರೂಪರಹಿತನಾದವನು. ಆದ್ದರಿಂದ ಚಾಕ್ಷುಷವೃತ್ತಿಯಲ್ಲಿ ಬ್ರಹ್ಮನು ವಿಷಯನಾಗುವುದಿಲ್ಲ. ಬ್ರಹ್ಮನು

ವಿಷಯನಾಗದಿರುವುದರಿಂದ ಬ್ರಹ್ಮನಿಗೆ ಆವರಣವಾಗಿರುವ ಅಜ್ಞಾನವು ನಾಶಹೊಂದುವುದಿಲ್ಲ. ವೃತ್ತಿಯು ತನ್ನ ವಿಷಯದ ಅಜ್ಞಾನವನ್ನು ಮಾತ್ರ ನಾಶಮಾಡುತ್ತದೆ. 'ತಪ್ತಜಲದ ಚಾಕ್ಷುಷಜ್ಞಾನವು ಬಂದಾಗ ಅದರಲ್ಲಿರುವ ಅಗ್ನಿಯ ಅಜ್ಞಾನವು ನಾಶವಾಗುವುದಿಲ್ಲವಷ್ಟೆ? ಅದರಂತೆ ಘಟದ ಚಾಕ್ಷುಷಜ್ಞಾನವು ಬಂದಾಗ ಘಟದಲ್ಲಿರುವ ರೂಪರಸಗಳ ಅಜ್ಞಾನವು ನಾಶವಾಗುವುದಿಲ್ಲವಷ್ಟೆ? ಇನ್ನು ಚೈತ್ರನಿಗೆ ಘಟಜ್ಞಾನವು ಬರುವಾಗ ಒಂದು ಅಜ್ಞಾನದ ನಾಶವನ್ನು ಒಪ್ಪಿದರೂ ಅದೇ ವಿಷಯದಲ್ಲಿ ಮೈತ್ರನಿಗೆ ಜ್ಞಾನವು ಬರುವಾಗ ಇನ್ನೊಂದು ಅಜ್ಞಾನದ ನಾಶವನ್ನು ಒಪ್ಪಬೇಕಷ್ಟೆ? ಇಲ್ಲದಿದ್ದರೆ ಚೈತ್ರನಿಗೆ ಜ್ಞಾನ ಬಂದಾಗಲೇ ಮೈತ್ರನಿಗೂ ಘಟದ ಜ್ಞಾನ ಉಂಟಾಗಲಿ ಎಂಬ ಆಪತ್ತಿಯು ಬರುತ್ತದೆ. ಹೀಗೆ ಪ್ರತಿಪುರುಷನನ್ನು ಕುರಿತು ಒಂದೊಂದು ಅಜ್ಞಾನವನ್ನು ಕಲ್ಪಿಸಿದರೆ ಬಹಳಕಾಲದವರೆಗೆ ಇರುವ ವಸ್ತುವು ಮತ್ತೆಮತ್ತೆ ಅನೇಕರಿಗೆ ಅನೇಕಬಾರಿ ತೋರುತ್ತಿರುವುದರಿಂದ ಒಂದೇ ವಸ್ತುವಿನಲ್ಲಿ ಅನಂತಾಜ್ಞಾನಗಳನ್ನು ಕಲ್ಪಿಸಬೇಕಾಗುತ್ತದೆ. ಮತ್ತು ನೀನು ಅಜ್ಞಾನವನ್ನು ಭಾವರೂಪವೆಂದು ಅಂಗೀಕರಿಸುವುದರಿಂದ ಬಹಳಕಾಲದವರೆಗೆ ಇರುವ ಸಣ್ಣಪದಾರ್ಥವು ಪರ್ವತದಂತೆ ದೊಡ್ಡದಾಗಬೇಕಾಗುತ್ತದೆ. ಮತ್ತು ಘಟಾದಿ ಸ್ಥಳದಲ್ಲಿ ವೃತ್ತಿಯಿಂದ ಅವಿದ್ಯಾನಾಶವಾದರೆ ಘಟವುಪ್ರಕಾಶಿಸುತ್ತದೆ. ಇದನ್ನು ನೀನು ಘಟಭ್ರಮವೆಂದು ಹೇಳುತ್ತೀಯೆ. ಶುಕ್ತಿರಜತಾದಿಸ್ಥಳದಲ್ಲಿ ಅವಿದ್ಯಾನಾಶವಾದರೆ ಭ್ರಮವು ನಿವೃತ್ತವಾಗುವುದೆಂದು ಹೇಳುತ್ತೀಯೆ. ಇದು ಪರಸ್ಪರ ವಿರುದ್ಧವಾದುದು. ಆದ್ದರಿಂದ ಘಟಸ್ಥಳದಲ್ಲಿಯೂ ಘಟಪ್ರಕಾಶವನ್ನು ನೀನು ಘಟಭ್ರಮವೆಂದು ಹೇಳುವುದರಿಂದ ಅವಿದ್ಯೆಯ ಅನುವೃತ್ತಿಯನ್ನು ಒಪ್ಪಬೇಕು. ಆದ್ದರಿಂದ ಚೈತ್ರನ ದೃಷ್ಟಿಯಿಂದಲೂ ಅನೇಕ ಅಜ್ಞಾನಗಳನ್ನೂ ಮತ್ತು ಮೈತ್ರನ ದೃಷ್ಟಿಯಲ್ಲಿಯೂ ಅನೇಕ ಅಜ್ಞಾನಗಳನ್ನು ಒಪ್ಪಬೇಕಾಗುವುದರಿಂದ ಘಟಾದಿಪದಾರ್ಥವೂ ಪರ್ವತದಷ್ಟು ಪರಿಮಾಣವನ್ನು ಹೊಂದಬೇಕಾಗುತ್ತದೆ. ಅನೇಕಾಜ್ಞಾನಗಳನ್ನು ಒಪ್ಪದೆ ಒಂದೇ ಅಜ್ಞಾನವನ್ನು ಒಪ್ಪಿದರೆ ಚೈತ್ರನ ಜ್ಞಾನವು ಬಂದಾಗ ಘಟವು ಪ್ರಕಾಶಿಸುವುದರಿಂದ, ಘಟಪ್ರಕಾಶವು ಚೈತನ್ಯರೂಪವಾದುದರಿಂದ, ಆ ಚೈತನ್ಯವಾದರೂ ಎಲ್ಲಾ ಜೀವರಿಗೆ ಸಾಧಾರಣವಾಗಿರುವುದರಿಂದ, ಮೈತ್ರಾದಿ ಎಲ್ಲ ಜೀವರಿಗೂ ಆಗಲೇ ಘಟಜ್ಞಾನವುಂಟಾಗಲಿ ಮತ್ತು ಇನ್ನು ಯಾರಿಗೂ ಯಾವಾಗಲೂ ಘಟದ ವಿಷಯದಲ್ಲಿ ಸಂಶಯೋತ್ಪತ್ತಿಯಾಗುವುದು ಬೇಡ ಎಂಬ ಆಪತ್ತಿಯು ಬರುತ್ತದೆ.

ಅಯಂ ಘಟಃ ಎಂಬ ಜ್ಞಾನವು ಬಂದಾಗ ಜ್ಞಾನವು ಅಧಿಷ್ಠಾನಚೈತನ್ಯರೂಪವಾಗಿ ಹೊರಗಡೆ ಇದೆ. ಅಯಂ ಘಟಃ ಎಂದು ಶಬ್ದಪ್ರಯೋಗವನ್ನು ಮಾಡುವ ಜ್ಞಾತೃಚೈತನ್ಯವು ಶರೀರದ ಒಳಗಿದೆ. ಜ್ಞಾನ ಒಂದಕ್ಕೆ, ತಜ್ಜನ್ಯವ್ಯವಹಾರವು ಇನ್ನೊಂದಕ್ಕೆ ಎನ್ನುವುದು ಅಸಂಗತ. ಇಲ್ಲದಿದ್ದರೆ ಚೈತ್ರನಿಂದ ದೃಷ್ಟವಾದ ಅರ್ಥದಲ್ಲಿ ಮೈತ್ರನಿಗೆ ವ್ಯವಹಾರ ಉಂಟಾಗಲಿ ಎಂಬ ಆಪತ್ತಿಯು ಬರುತ್ತದೆ. ಚೈತ್ರಮೈತ್ರರಿಗೆ ವ್ಯಾವಹಾರಿಕ ಭೇದವಿರುವುದರಿಂದ ಈ ಆಪತ್ತಿಯು

ಇಲ್ಲವೆಂದು ಹೇಳಿದರೆ, ಅಧಿಷ್ಠಾನಚೈತನ್ಯ ಮತ್ತು ಜ್ಞಾತೃಚೈತನ್ಯಕ್ಕೂ ವ್ಯಾವಹಾರಿಕಭೇದವಿರುವುದರಿಂದ ಅಲ್ಲಿಯೂ ವ್ಯವಹಾರವು ಉಂಟಾಗದಿರಲಿ ಎಂಬ ಆಪತ್ತಿಯು ಬರುತ್ತದೆ. ಜ್ಞಾತೃಚೈತನ್ಯವೇ ವೃತ್ತಿದ್ವಾರಾ ಹೊರಗೆ ಹೋಗಿ ಅಧಿಷ್ಠಾನ ಚೈತನ್ಯದ ಜೊತೆಯಲ್ಲಿ ಏಕೀಭಾವವನ್ನು ಹೊಂದುವುದರಿಂದ ಈ ವೈಯಧಿಕರಣ್ಯವಿಲ್ಲ ಎಂದು ಹೇಳುವುದಾದರೆ ಜ್ಞಾತೃಚೈತನ್ಯವು ಹೊರಗೆ ಹೋದಾಗ ಚೈತ್ರನ ದೇಹವು ನಿರ್ಜೀವವಾಗಬೇಕು. ಅಣುವೂ ನಿರಂಶನೂ ಆದ ಜೀವನು ಏಕಕಾಲದಲ್ಲಿ ಶರೀರದ ಒಳಗೂ ಮತ್ತು ಹೊರಗೂ ಇರಲಾರನಷ್ಟೆ? ಮತ್ತು ಪುನಃ ದೇಹದೊಳಗೆ ಪ್ರವೇಶಿಸಿ ಅಯಂ ಘಟಃ ಎಂದು ವ್ಯವಹಾರ ಮಾಡಬೇಕಷ್ಟೆ? ಆದ್ದರಿಂದ ಅಯಂ ಘಟಃ ಎಂಬ ವ್ಯವಹಾರಕ್ಕೆ ಕಾರಣವಾದ ಅಧಿಷ್ಠಾನಚೈತನ್ಯ ರೂಪವಾದ ಜ್ಞಾನವು ಜ್ಞಾತೃಚೈತನ್ಯಾಭಿನ್ನವಾಗಿರುವುದರಿಂದ ಘಟಪ್ರಕಾಶವೆಂದರೆ ಜ್ಞಾತೃಚೈತನ್ಯಪ್ರಕಾಶವೆಂದೇ ಒಪ್ಪಬೇಕು. ಜ್ಞಾತೃಚೈತನ್ಯವಾದರೂ ಪ್ರತ್ಯಕ್ (ಒಳಗಿರುವ) ವಸ್ತು. ಅದು ಯಾವಾಗಲೂ 'ಅಹಂ' ಎಂದು ವ್ಯವಹರಿಸಲ್ಪಡುತ್ತದೆಯೇ ಹೊರತು 'ಅಯಂ' ಎಂದು ವ್ಯವಹರಿಸಲ್ಪಡುವುದಿಲ್ಲ. ಆದ್ದರಿಂದ ಘಟದ ವ್ಯವಹಾರವು 'ಅಹಂ ಘಟಃ' ಎಂದು ಇರಬೇಕೇ ಹೊರತು 'ಅಯಂ ಘಟಃ' ಎಂದು ಇರಲು ಸಾಧ್ಯವಿಲ್ಲ. 'ಅಹಂ ಘಟಃ' ಎಂಬ ವ್ಯವಹಾರವು ಎಲ್ಲರ ಅನುಭವಕ್ಕೆ ವಿರುದ್ಧವಾದುದು.

ಇನ್ನು 'ಅಯಂ ಘಟಃ' ಎಂಬ ಜ್ಞಾನವು ವೃತ್ತಿರೂಪವಾದುದು ಎಂದೂ ಹೇಳಲು ಬರುವುದಿಲ್ಲ. ಏಕೆಂದರೆ ವೃತ್ತಿಯುಂಟಾಗಬೇಕಾದರೆ ಸನ್ನಿಕರ್ಷವು ಬೇಕು. ಸನ್ನಿಕರ್ಷವುಂಟಾಗಬೇಕಾದರೆ ಘಟವು ಮೊದಲು ಇರಬೇಕು. ಆದ್ದರಿಂದ ಜ್ಞಾನಕ್ಕಿಂತ ಮೊದಲೇ ಘಟವು ಇರುವುದರಿಂದ ಘಟವು ತನ್ನ ಜ್ಞಾನದಲ್ಲಿ ಆರೋಪಿತವಾಗಿದೆ ಎಂಬ ಕಥೆಯು ವ್ಯರ್ಥವಾಗುತ್ತದೆ. ಅಲ್ಲದೆ ವೃತ್ತಿಯೂ ಅನಿರ್ವಚನೀಯಾರ್ಥಾವ ಭಾಸರೂಪವಾದುದರಿಂದ ಭ್ರಮವಾಗಿರುವುದರಿಂದ ಅದರಲ್ಲಿ ಘಟವನ್ನು ಆರೋಪ ಮಾಡಲು ಸಾಧ್ಯವಿಲ್ಲ. ಅಧಿಷ್ಠಾನವು ಸತ್ಯವಾಗಿರಬೇಕಷ್ಟೆ? ಭ್ರಮವು ಮಿಥ್ಯೆಯಾದುದು. ಆದ್ದರಿಂದ ಜಗತ್ತು ಅನಾರೋಪಿತವೆಂದೇ ಸಿದ್ಧವಾಗುತ್ತದೆ. ಹಾಗೆಯೇ ದೃಕ್ ಮತ್ತು ದೃಶ್ಯಗಳಿಗೆ ಸಂಬಂಧವನ್ನು ಹೇಳಲು ಬರದಿರುವುದರಿಂದ ದೃಶ್ಯವು ದೃಕ್‌ನಲ್ಲಿ ಆರೋಪಿತ ಎಂದು ಹೇಳುತ್ತೀಯೆ. ಆದರೆ ವೃತ್ತಿಯೇ ಘಟಜ್ಞಾನವಾದರೆ ವೃತ್ತಿ ಮತ್ತು ಘಟಗಳಿಗೆ ಸನ್ನಿಕರ್ಷವೇ ಚೆನ್ನಾಗಿ ಉಪಪನ್ನವಾಗುವುದರಿಂದ ದೃಗಾರೋಪಿತತ್ವವನ್ನು ಹೇಳಬೇಕಾದ ಅವಶ್ಯಕತೆಯೇ ಇಲ್ಲದೆ ಜಗತ್ತಿಗೆ ಅನಾರೋಪಿತತ್ವವು ಸಿದ್ಧವಾಗುತ್ತದೆ. ಈ ರೀತಿಯಾಗಿ ಇನ್ನೂ ಅನೇಕ ದೋಷಗಳನ್ನು ಹೇಳಿ ರಾಜರು ಪರರ ಪ್ರತಿಕರ್ಮವ್ಯವಸ್ಥೆಯನ್ನು ನಿರಾಕರಿಸಿದ್ದಾರೆ.

**ಜಗದ್‌ಭ್ರಮವನ್ನು ಅಂಗೀಕರಿಸಿದರೆ ಕಲ್ಪನಾಗೌರವ :**

ಅಯಂ ಘಟಃ ಎಂಬ ಜ್ಞಾನವು ಭ್ರಮರೂಪವಾದುದೆಂದು ಪರರ ಅಭಿಪ್ರಾಯ. ಅದರಲ್ಲಿ

'ಇದಂ' ಎಂಬ ಅಂಶದಿಂದ ಬ್ರಹ್ಮನು ತೋರುತ್ತಾನೆ. ಅವನಲ್ಲಿ ಘಟವು ಆರೋಪಿತವಾಗಿದೆ. ಆರೋಪಿತವಾದುದು ಅಧಿಷ್ಠಾನಾನುವಿದ್ಧವಾಗಿ ತೋರುವುದರಿಂದ ಘಟದಲ್ಲಿ ಚೈತನ್ಯತಾದಾತ್ಮ್ಯವು ತೋರುತ್ತದೆ ಎಂದು ಅವರ ವಿವರಣೆ. ಚೈತನ್ಯವು ಯಾವಾಗಲೂ 'ಅಹಂ' ಎಂದೇ ತೋರುತ್ತದೆ. 'ಅಯಂ' ಎಂದು ತೋರುವುದಿಲ್ಲ. ನಿನ್ನಂತೆಯೂ ಪ್ರತ್ಯಕ್‌ಪರಾಗ್ಭಾವರೂಪವಾದ ವಿರೋಧವಿದೆ ಎಂದು ಒಂದು ದೋಷ. ಮತ್ತು ಘಟದಲ್ಲಿ ಬರುವ 'ನಾಯಂ ಘಟಃ' ಎಂಬ ಜ್ಞಾನವನ್ನು ಪ್ರಮೆಯೆಂದು ಅಂಗೀಕರಿಸಬೇಕಾಗುತ್ತದೆ. ಏಕೆಂದರೆ ಈ ಜ್ಞಾನವು ಘಟದಲ್ಲಿ ಚೈತನ್ಯತಾದಾತ್ಮ್ಯಾಭಾವವನ್ನು ವಿಷಯೀಕರಿಸುತ್ತದೆ. ಅದು ಯಥಾರ್ಥವಾದುದು ಇದು ಇನ್ನೊಂದು ದೋಷ. ಇಂತಹ ಸರ್ವಾನುಭವವಿರುದ್ಧವಾದುದನ್ನು ಕಲ್ಪನೆ ಮಾಡಬೇಕಾಗುತ್ತದೆ.

ಪ್ರಪಂಚಭ್ರಮವು ಅಪರೋಕ್ಷಭ್ರಮ. ಅಪರೋಕ್ಷಭ್ರಮದಲ್ಲಿ ಅಧಿಷ್ಠಾನ, ಆರೋಪಿತ ಮತ್ತು ಆರೋಪವನ್ನು ಕುರಿತು ಪ್ರಧಾನವಾದ ಇನ್ನೊಂದು ವಸ್ತು ಹೀಗೆ ಮೂರನ್ನು ಅಂಗೀಕರಿಸಬೇಕು. ಮತ್ತು ಅಧಿಷ್ಠಾನಕ್ಕೂ ಮತ್ತು ಪ್ರಧಾನಕ್ಕೂ, ಹಾಗೆಯೇ ಪ್ರಧಾನಕ್ಕೂ ಮತ್ತು ಆರೋಪಿತವಾದುದಕ್ಕೂ ಸಾದೃಶ್ಯವಿರಬೇಕು. ಶುಕ್ತಿರಜತಸ್ಥಳದಲ್ಲಿ ಶುಕ್ತಿಯು ಅಧಿಷ್ಠಾನ, ಆಪಣಸ್ಥರಜತವು ಪ್ರಧಾನ ಮತ್ತು ಶುಕ್ತಿರಜತವು ಆರೋಪಿತ. ಇಲ್ಲಿ ಅಧಿಷ್ಠಾನವಾದ ಶುಕ್ತಿಯೂ, ಪ್ರಧಾನವಾದ ರಜತವೂ ಪರಸ್ಪರ ಸದೃಶವೇ ಆಗಿವೆ. ಆದ್ದರಿಂದಲೇ ಸ್ಥಾಣುವಿನಲ್ಲಿ ಊರ್ಧ್ವತಾಧರ್ಮಸಾದೃಶ್ಯದಿಂದ ಪುರುಷಭ್ರಮವು ಬರುತ್ತದೆ. ಘಟಭ್ರಮವು ಬರುವುದಿಲ್ಲ. ಪೃಥುಬುಧ್ನೋದರಾಕಾರವಿರುವ ಇನ್ನೊಂದು ವಸ್ತುವಿನಲ್ಲಿ ಘಟಭ್ರಮವು ಬರುತ್ತದೆ. ಪುರುಷಭ್ರಮವು ಬರುವುದಿಲ್ಲ. ಅದರಂತೆ ಚಿತ್ರವಿಚಿತ್ರವಾದ ಜಗತ್ತು ಬ್ರಹ್ಮನಲ್ಲಿ ಆರೋಪಿತವಾದರೆ ಚಿತ್ರವಿಚಿತ್ರವಾದ ಸತ್ಯವಾದ ಪ್ರಧಾನವಾದ ಒಂದು ಜಗತ್ತನ್ನು ಅಂಗೀಕರಿಸಬೇಕು. ಪ್ರಧಾನಕ್ಕೂ ಅಧಿಷ್ಠಾನಕ್ಕೂ ಸಾದೃಶ್ಯವಿರಬೇಕಾದ್ದರಿಂದ ಚಿತ್ರವಿಚಿತ್ರಜಗತ್ತಿಗೆ ನಿರ್ಧರ್ಮಕನಾದ ಬ್ರಹ್ಮನು ಸದೃಶನಾಗುವುದಿಲ್ಲ. ಆದ್ದರಿಂದ ಬ್ರಹ್ಮನಲ್ಲಿ ಜಗದಾರೋಪವನ್ನು ಮಾಡಲು ಸಾಧ್ಯವಿಲ್ಲ. ಇನ್ನೊಂದು ಚಿತ್ರವಿಚಿತ್ರವಾದ ಜಗತ್ತೇ ಸದೃಶವಾಗುವುದರಿಂದ ಅಲ್ಲಿಯೇ ಜಗತ್ತನ್ನು ಆರೋಪಮಾಡಬೇಕಾಗುತ್ತದ. ಹೀಗೆ ಅನುಭವಕ್ಕೆ ಬರುವ ಬಂದು ಜಗತ್ತನ್ನು ಆರೋಪಿತವೆಂದು ಹೇಳಲು ಹೊರಟರೆ ಅನುಭವಕ್ಕೆ ಬರದಿರುವ ಎರಡು ಜಗತ್ತನ್ನು ಸತ್ಯವೆಂದು ಕಲ್ಪನೆ ಮಾಡಬೇಕಾಗುತ್ತದೆ ಏಕೆಂದರೆ ಅಧಿಷ್ಠಾನವು ಸತ್ಯವೇ ಆಗಿರಬೇಕೆಂದು ನಿಯಮವನ್ನು ನೀನು ಅಂಗೀಕರಿಸುತ್ತೀಯೆ. ಇಲ್ಲದಿದ್ದರೆ ಬೌದ್ಧಮತ ಪ್ರವೇಶವಾಗಿ ನಿರಧಿಷ್ಠಾನಕಭ್ರಮವನ್ನು ಒಪ್ಪಬೇಕಾಗುತ್ತದೆ.

ನಿರುಪಾಧಿಕಭ್ರಮದಲ್ಲಿ ಮಾತ್ರ ಇಂತಹ ನಿಯಮ. ಸೋಪಾಧಿಕಭ್ರಮದಲ್ಲಿ ನಿಯಮವಿಲ್ಲ. ಜಗದ್ಭ್ರಮವು ಸೋಪಾಧಿಕ ಎಂಬ ಶಂಕೆಯೂ ಸರಿಯಲ್ಲ. **'ಪೀತಃ ಶಂಖಃ'**, **'ತಿಕ್ತೋಗುಡಃ'** ಇವು ಸೋಪಾಧಿಕಭ್ರಮಕ್ಕೆ ಉದಾಹರಣೆಗಳು. ಇಲ್ಲಿಯೂ ಶಂಖದಲ್ಲಿ

ಯಾವ ಪೀತತ್ವವು ಆರೋಪಿಸಲ್ಪಡುತ್ತದೆಯೋ ಅದಕ್ಕೆ ಸದೃಶವಾದ ಪೀತತ್ವವು ಉಪಾಧಿಯಾದ ಪಿತ್ತರಸದಲ್ಲಿದೆ. ಅದರಂತೆ 'ತಿಕ್ತೋ ಗುಡಃ' ಎಂಬಲ್ಲಿ ಗುಡದಲ್ಲಿ ತೋರುವ ತಿಕ್ತರಸವು ಪಿತ್ತರಸದಲ್ಲಿದೆ. ಅವೆರಡೂ ಅನಾರೋಪಿತವಾದವುಗಳು. ಆದ್ದರಿಂದ ಅಲ್ಲಿಯೂ ಸದೃಶವಾದ ಪ್ರಧಾನಾದಿಗಳ ನಿಯಮವು ಇದ್ದೇ ಇದೆ. ಅಲ್ಲದೆ ನಿನಗೆ ಜಗದ್‌ಭ್ರಮದಲ್ಲಿಯೇ ಅವಿದ್ಯೆಯೇ ಉಪಾಧಿ. ಅವಿದ್ಯೆಯಲ್ಲಿ ಕಲ್ಪಿತವಾದ ಆಕಾರಾದಿಗಳು ಜಗತ್ತಿನಲ್ಲಿ ತೋರಬೇಕು. ಆದರೆ ಅವಿದ್ಯೆಗೆ ಇನ್ನೊಂದು ಉಪಾಧಿ ಇಲ್ಲ. ಆದ್ದರಿಂದ ಅವಿದ್ಯೆಯಲ್ಲಿರುವ ಆಕಾರಾದಿಗಳು ನಿರುಪಾಧಿಕ ಎಂದು ಅಂಗೀಕರಿಸಬೇಕು. ನಿರುಪಾಧಿಕವಾಗಿ ಕಲ್ಪಿತವಾದರೆ ಪುನಃ ಆ ಆಕಾರಾದಿಗಳಿಗೆ ಸದೃಶವಾದ ಆಕಾರಾದಿಗಳನ್ನುಳ್ಳ ಸತ್ಯವಾದ ಅಧಿಷ್ಠಾನ ಮತ್ತು ಪ್ರಧಾನಗಳನ್ನು ಅಂಗೀಕಾರ ಮಾಡಬೇಕು. ಅವಿದ್ಯೆಯ ವಿಚಿತ್ರಾಕಾರಗಳಿಂದಲೇ ಜಗದಾಕಾರವು ಸಿದ್ಧವಾಗಬೇಕಾದುದರಿಂದ ಅವಿದ್ಯೆಯ ಆಕಾರಗಳಿಗೆ ಸದೃಶವಾದ ಆಕಾರ ಇನ್ನೊಂದು ಜಗದಾಕಾರವೇ ಆಗಬೇಕು. ಅಂತಹ ಅಧಿಷ್ಠಾನ ಮತ್ತು ಪ್ರಧಾನಗಳನ್ನು ಒಪ್ಪಿದರೆ ಅವು ಇನ್ನೊಂದು ಜಗತ್ತೇ ಆಗುತ್ತದೆ. ಹೀಗೆ ಅವಿದ್ಯೆಯ ಆರೋಪವನ್ನು ಕೂಡಿಸುವುದಕ್ಕೆ ಎರಡು ಸತ್ಯವಾದ ಜಗತ್ತು ಮತ್ತು ಬ್ರಹ್ಮನಲ್ಲಿ ಜಗದಾರೋಪವನ್ನು ಕೂಡಿಸುವುದಕ್ಕೆ ಎರಡು ಸತ್ಯವಾದ ಜಗತ್ತು, ಹೀಗೆ ಒಟ್ಟು ನಾಲ್ಕು ಜಗತ್ತುಗಳನ್ನು ಅಂಗೀಕರಿಸಬೇಕಾಗುತ್ತದೆ. ಅದರ ಬದಲು ಅನುಭವಸಿದ್ಧವಾದ ಈ ಒಂದು ಜಗತ್ತನ್ನೇ ಸತ್ಯವೆಂದು ಒಪ್ಪುವುದು ಒಳ್ಳೆಯದು.

ಹೀಗೆ ವಿಶ್ವಮಿಥ್ಯಾತ್ವಪಕ್ಷದಲ್ಲಿ ಕಲ್ಪನಾಗೌರವವನ್ನೂ ಇನ್ನೂ ಅನೇಕವಿಧವಾದ ಅನುಭವವಿರೋಧವನ್ನು ಉಪಪಾದಿಸುತ್ತಾರೆ.

**'ತಮೇವಭಾಂತಂ' ಶ್ರುತ್ಯರ್ಥ :**

**'ನ ತತ್ರ ಸೂರ್ಯೋ ಭಾತಿ ನ ಚಂದ್ರತಾರಕಂ ನೇಮಾ-**
**ವಿದ್ಯುತೋ ಭಾಂತಿ ಕುತೋಽಯಮಗ್ನಿಃ ।**
**ತಮೇವ ಭಾಂತಮನುಭಾತಿ ಸರ್ವಂ ತಸ್ಯಭಾಸಾ ಸರ್ವಮಿದಂ ವಿಭಾತಿ ॥**

ಇದು ಕಾಠಕೋಪನಿಷತ್ತಿನ ಒಂದು ಮಂತ್ರ. ಇದರಲ್ಲಿ ತಂ ಭಾಂತಮನುಭಾತಿ ಎಂಬ ಅಂಶವು ಸೌರಾಲೋಕಕ್ಕೆ ಚಾಕ್ಷುಷಜ್ಞಾನ ಹೇತುತ್ವವನ್ನು ಹೇಳುತ್ತದೆ. ಅದ್ವೈತಿಗಳಾದರೂ ಇದಕ್ಕೆ ನಮಗೆ ಉಂಟಾಗುವ ಘಟಾದಿಪ್ರಕಾಶರೂಪವಾದ ಜ್ಞಾನವೆಲ್ಲವೂ ಅಧಿಷ್ಠಾನವಾದ ಬ್ರಹ್ಮನ ಪ್ರಕಾಶವೇ ಎಂದು ಹೇಳುತ್ತಾರೆ. ನಮಗಾದರೆ ಸೂರ್ಯನ ಪ್ರಕಾಶವು ಬೇರೆ. ಅದನ್ನು ಅನುಸರಿಸಿ ಉಂಟಾಗುವ ಘಟದ ಪ್ರಕಾಶವು ಬೇರೆ. ಹೀಗೆ ಅನುಶಬ್ದವು ಸೂಚಿಸುವ ಎರಡು ಪ್ರಕಾಶಗಳು ಕೂಡುತ್ತವೆ. ನಿನಗಾದರೆ ಬ್ರಹ್ಮಪ್ರಕಾಶವೇ ಘಟಪ್ರಕಾಶವಾದ್ದರಿಂದ ಪ್ರಕಾಶವು ಒಂದೇ ಇದೆ. ಆದ್ದರಿಂದ ಅನುಶಬ್ದವು ಸೂಚಿಸುವ ಎರಡು ಪ್ರಕಾಶಗಳನ್ನು ನೀನು ಕೂಡಿಸಲು ಬರುವುದಿಲ್ಲ. **'ಯದಾದಿತ್ಯಗತಂ ತೇಜಃ ಜಗದ್ ಭಾಸಯತೇಽಖಿಲಮ್ । ಯಚ್ಚಂದ್ರಮಸಿ ಯಚ್ಚಾಗ್ನೌ ತತ್ತೇಜೋವಿದ್ಧಿಮಾಮಕಂ'** ಎಂಬ ಗೀತಾವಾಕ್ಯವು ಈಕಾಠಕ

ವಾಕ್ಯಕ್ಕೆ ಸಮಾಖ್ಯಾರೂಪವಾಗಿದೆ. **'ನ ಚಕ್ಷುಷಾಪಶ್ಯತಿ ಕಶ್ಚಿದೇನಂ'** ಈ ಪರಮಾತ್ಮನನ್ನು ಯಾರೂ ಕಣ್ಣಿನಿಂದ ನೋಡುವುದಿಲ್ಲ ಎಂಬ ಶ್ರುತಿಯೂ ಇದೆ.

ಇವೆರಡನ್ನೂ ಸಂಯೋಜಿಸಿದರೆ ಘಟಾದಿ ಜ್ಞಾನಕ್ಕೆ ಕಾರಣವಾದ ಸೂರ್ಯಪ್ರಕಾಶವು ಬ್ರಹ್ಮನ ಜ್ಞಾನಕ್ಕೆ ಕಾರಣವಾಗುವುದಿಲ್ಲ ಎಂಬ ಸರಳ ಮತ್ತು ಸ್ಪಷ್ಟವಾದ ಅರ್ಥವು ದೊರೆಯುತ್ತದೆ. **'ಸರ್ವಮಿದಂ ವಿಭಾತಿ'** ಎಂಬಲ್ಲಿರುವ ಸರ್ವಪದವು ಸರ್ವನಾಮ. ಆದ್ದರಿಂದ ಅದು ಪ್ರಕೃತಪರಾಮರ್ಶೆಯನ್ನು ಮಾಡುತ್ತದೆ. ಆದ್ದರಿಂದ ಆ ವಾಕ್ಯಕ್ಕೆ ಸೂರ್ಯ, ಚಂದ್ರ, ನಕ್ಷತ್ರ, ವಿದ್ಯುತ್, ಅಗ್ನಿ ಇವೆಲ್ಲವೂ ಅವನ ಪ್ರಕಾಶದಿಂದಲೇ ಪ್ರಕಾಶಿಸುತ್ತವೆ ಎಂಬ ಅರ್ಥವೇ ಸ್ವರಸವಾಗುತ್ತದೆ. ಹೊರತು ನಮ್ಮಲ್ಲಿರುವ ಘಟಾದಿಜ್ಞಾನವು ಬ್ರಹ್ಮಚೈತನ್ಯರೂಪವೆಂದು ಅರ್ಥವಾಗುವುದಿಲ್ಲ. **'ಯದ್ಯದ್ ವಿಭೂತಿಮತ್ ಸತ್ವಂ ಶ್ರೀಮದೂರ್ಜಿತಮೇವವಾ । ತತ್ತದೇವಾವಗಚ್ಛ ತ್ವಂ ಮಮ ತೇಜೋಂಶಸಂಭವಂ'** ಎಂಬ ಗೀತಾವಾಕ್ಯವು ಸೂರ್ಯಾದಿಪ್ರಕಾಶಗಳು ಭಗವತ್ಪ್ರಕಾಶದಿಂದ ಜನ್ಯವಾದುವು ಎಂದು ಹೇಳುತ್ತದೆ. ಆದ್ದರಿಂದ ಅವು ಭಗವಂತನನ್ನು ಪ್ರಕಾಶಿಸುವುದಿಲ್ಲ ಎಂಬ ಅರ್ಥವು ನಿರ್ದುಷ್ಟವಾಗುತ್ತದೆ. **'ನತು ಮಾಂ ಶಕ್ಯಸೇ ದ್ರಷ್ಟುಂ ಅನೇನೈವ ಸ್ವಚಕ್ಷುಷಾ'** ಎಂಬ ಗೀತಾವಾಕ್ಯವು ಚಾಕ್ಷುಷವೃತ್ತಿಗೆ ಬ್ರಹ್ಮನು ವಿಷಯನಲ್ಲ ಎಂದು ಹೇಳುತ್ತದೆ. ಆದ್ದರಿಂದ ಘಟದ ಚಾಕ್ಷುಷಜ್ಞಾನದಲ್ಲಿ ಬ್ರಹ್ಮನ ಉಲ್ಲೇಖವನ್ನು ಹೇಳಿ ಘಟಜ್ಞಾನವೇ ಬ್ರಹ್ಮಪ್ರಕಾಶರೂಪವಾದುದೆಂದು ಹೇಳುವುದು ಅಯುಕ್ತವಾಗುತ್ತದೆ. ಅಥವಾ ಸ್ವಶಕ್ತಿಯಿಂದಲೇ ಸ್ವಸ್ವರೂಪಜ್ಞಾನದಿಂದ ಪ್ರಕಾಶಿಸುವ ಬ್ರಹ್ಮನನ್ನು ಅನುಸರಿಸಿ ಉಳಿದ ಜೀವರಿಗೆ ಪ್ರತ್ಯಕ್ಷ, ಅನುಮಾನ, ಆಗಮಗಳಿಂದ ಬರುವ ಜ್ಞಾನವೆಲ್ಲವೂ ಕಾರಣವಾದ ಈಶ್ವರಜ್ಞಾನವನ್ನು ಅನುಸರಿಸಿ ಬರುತ್ತದೆ ಎಂದು ಹೇಳುವುದರಲ್ಲಿ ಈಶ್ವರಜ್ಞಾನವು ಎಲ್ಲ ಕಾರ್ಯಗಳಿಗೂ ಕಾರಣವಾದ್ದರಿಂದ, ಯಾವ ದೋಷವೂ ಇಲ್ಲ. ಹೀಗೆ ಹೇಳಿದರೆ ಏವಶಬ್ದ, ಅನುಶಬ್ದ ಮತ್ತು ಭಾಸಾ ಎಂಬ ತೃತೀಯಾಂತ ಪದ ಎಲ್ಲವೂ ಉಪಪನ್ನವಾಗುತ್ತವೆ. ಏವ ಎಂಬ ಅವಧಾರಣೆಯು ಬ್ರಹ್ಮನ ಜ್ಞಾನವು ಅನನ್ಯಾಪೇಕ್ಷವೆಂದು ಹೇಳುತ್ತದೆ. ಅನುಶಬ್ದವು ಬ್ರಹ್ಮನ ಪ್ರಕಾಶವು ಬೇರೆ, ಜೀವರಿಗೆ ಉಂಟಾಗುವ ಘಟಾದಿಪ್ರಕಾಶವು ಬೇರೆ ಎಂದು ಎರಡು ಪ್ರಕಾಶಗಳನ್ನು ಹೇಳುತ್ತದೆ. ಭಾಸಾ ಎಂಬಲ್ಲಿ ತೃತೀಯಾ ವಿಭಕ್ತಿಯು ಕಾರಣತ್ವವನ್ನು ಹೇಳುತ್ತದೆ. ಈಶ್ವರಜ್ಞಾನವು ಜೀವರಜ್ಞಾನವನ್ನು ಕುರಿತು ಕಾರಣವಾದ್ದರಿಂದ ಕಾರಣತ್ವವು ಉಪಪನ್ನವಾಗುತ್ತದೆ. ಚಕ್ಷುರಾದಿವೃತ್ತಿಯಲ್ಲಿ ರೂಪಾದಿರಹಿತನಾದ ಬ್ರಹ್ಮನು ವಿಷಯನಾಗದಿರುವುದರಿಂದ ನೀನು ಹೇಳುವ ಅರ್ಥವು ಅನುಪಪನ್ನವಾಗುತ್ತದೆ. ಮತ್ತು ಸರ್ವಂ ಎಂಬ ಪದವು ಐಂದ್ರಿಯಕ ಮತ್ತು ಅತೀಂದ್ರಿಯವಾದ ಎಲ್ಲಾ ವಸ್ತುಗಳನ್ನು ಸಂಗ್ರಹಿಸುತ್ತದೆ. ನೀನು ಧರ್ಮಾದಿ ಅತೀಂದ್ರಿಯಸ್ಥಳದಲ್ಲಿ ಕೇವಲ ಪರೋಕ್ಷವೃತ್ತಿಯನ್ನು ಮಾತ್ರ ಒಪ್ಪುತ್ತೀಯೆ. ಪರೋಕ್ಷವೃತ್ತಿಯ ಸ್ಥಳದಲ್ಲಿ ಅಜ್ಞಾನ ನಿವೃತ್ತಿಯಾಗುವುದಿಲ್ಲವೆಂದು ನಿನ್ನ ಮಾತು. ಆದ್ದರಿಂದ ಅಲ್ಲಿ ಬ್ರಹ್ಮನಿಗೆ

ಅಭಿವ್ಯಕ್ತಿ ಇಲ್ಲವಾದ್ದರಿಂದ 'ತಸ್ಯಭಾಸಾ' ಎಂಬುದನ್ನು ಅಲ್ಲಿ ನೀನು ಉಪಪಾದನೆ ಮಾಡಲು ಬರುವುದಿಲ್ಲ. ಆದ್ದರಿಂದ ಸರ್ವಪದವೂ ನಿನಗೆ ಬಾಧಕವಾಗುತ್ತದೆ. (ಈಚಿನ ಅದ್ವೈತಿಗಳು ಸರ್ವಪದಕ್ಕೆ ಸಂಕೋಚವಿಲ್ಲ. ಅತೀಂದ್ರಿಯ ಸ್ಥಳದಲ್ಲಿಯೂ ಬ್ರಹ್ಮಚೈತನ್ಯದ ಅಭಿವ್ಯಕ್ತಿ ಇದೆ ಎಂದು ಹೇಳುತ್ತಾರೆ. ಆ ಪಕ್ಷದಲ್ಲಿ ಅಪರೋಕ್ಷೀಕರಸವಾದ ಚೈತನ್ಯದ ಸಂಬಂಧವಿರುವುದರಿಂದ ಧರ್ಮಾದಿಗಳಿಗೂ ಅಪರೋಕ್ಷತ್ವವು ಬರಬೇಕಾದೀತೆಂದು ನ್ಯಾಯಾಮೃತಕಾರರು ಹೇಳಿದ್ದಾರೆ).

ಅಥವಾ ಪ್ರಕಾಶಿಸುವ ಅವನನ್ನು ಅನುಸರಿಸಿ ಇವೆಲ್ಲವೂ ಪ್ರಕಾಶಿಸುತ್ತವೆ ಎಂದು ಭಗವದ್‌ಜ್ಞಾನಕ್ಕೆ ಸ್ವವಿಷಯತ್ವವನ್ನು ಮತ್ತು ಸರ್ವವಿಷಯತ್ವವನ್ನೂ ಈ ಶ್ರುತಿಯು ಹೇಳುತ್ತದೆ. ಅನುಶಬ್ದವು ಆ ಜ್ಞಾನಕ್ಕೆ ವಿಷಯವಾದುದರಲ್ಲಿ ಪರಮಾತ್ಮನು ಮುಖ್ಯನಾದವನು, ಜಗತ್ತು ಅಮುಖ್ಯವಾದುದು ಎಂದು ಹೇಳುತ್ತದೆ. ನಮಗೆ ಉಂಟಾಗುವ ಘಟಜ್ಞಾನವೇ ಬ್ರಹ್ಮರೂಪವೆಂಬ ನಿನ್ನ ಅರ್ಥವನ್ನು ಒಬ್ಬ ಅಪಸ್ಮಾರಿಯು ಹೇಳಬಹುದು.

ಅಥವಾ ವಿಶ್ವರೂಪಿಯಾದ ಪರಮಾತ್ಮನ ದರ್ಶನವು ಜ್ಞಾನಿಗಳಿಗೆ ಉಂಟಾದಾಗ ಪ್ರಧಾನವಾಗಿ ಪರಮಾತ್ಮನೂ, ಅಪ್ರಧಾನವಾಗಿ ಪರಮಾತ್ಮನ ಅಂಗಗಳನ್ನು ಆಶ್ರಯಿಸಿರುವ ದೇವತಾದಿಜಗತ್ತು ಸಹ ಪ್ರಕಾಶಿಸುತ್ತದೆ ಎಂಬ ನಿರರ್ಗಳವಾದ ಅರ್ಥವನ್ನೂ ಹೇಳಬಹುದು.

ಇಂತಹ ಶ್ರುತಿಸ್ಮೃತಿಸಮ್ಮತವಾದ ಅನೇಕ ಅರ್ಥಗಳನ್ನು ಹೇಳಲು ಸಾಧ್ಯವಿದ್ದಾಗ ಮಲಮೂತ್ರಾದಿದರ್ಶನವನ್ನೂ ಬ್ರಹ್ಮಚೈತನ್ಯಪ್ರಕಾಶವೆಂದು ಹೇಳಿ ಉಪನಿಷದೇಕ ಗಮ್ಯನಾದ ಪರಮಾತ್ಮನನ್ನು ಬೀದಿಯ ಬಸವನಿಗಿಂತ ಅಗ್ಗವಾಗಿ ಮಾಡುವುದು ಬಹಳ ಹೇಯವಾದುದು ಎಂದು ರಾಜರು ಪ್ರತಿಪಾದಿಸುತ್ತಾರೆ.

**ಚರಮಸಾಕ್ಷಾತ್ಕಾರವಿಮರ್ಶೆ :**

ತತ್ವಮಸ್ಯಾದಿವಾಕ್ಯಜನ್ಯವಾದ ಚರಮಸಾಕ್ಷಾತ್ಕಾರದಿಂದ ಜಗತ್ತಿಗೆ ಬಾಧವುಂಟಾಗುತ್ತದೆ ಎಂದು ಪರರ ಪ್ರಕ್ರಿಯೆ. ಅದನ್ನು ಇಲ್ಲಿ ವಿಮರ್ಶೆ ಮಾಡುತ್ತಾರೆ. ಆ ಚರಮಸಾಕ್ಷಾತ್ಕಾರವು ಬಾಧರೂಪವಾದ ಇತರ ನಿಷೇಧವನ್ನು ವಿಷಯೀಕರಿಸುತ್ತದೆಯೋ ಇಲ್ಲವೋ? ವಿಷಯೀಕರಿಸಿದರೆ ಅದು ಸಪ್ರಕಾರಕವೇ ಆಯಿತು. ಸಪ್ರಕಾರಕಬ್ರಹ್ಮಜ್ಞಾನವು ಬಾಧಕವಾಗುವುದಿಲ್ಲವೆಂದು ನಿನ್ನ ಮತ, ಮತ್ತು ಇದೇ ಚರಮಸಾಕ್ಷಾತ್ಕಾರವಾದ್ದರಿಂದ ಅದರಲ್ಲಿ ವಿಷಯವಾದ ಇತರನಿಷೇಧವನ್ನು ಬಾಧಿಸುವ ಇನ್ನೊಂದು ಪ್ರಮೆಯು ಹುಟ್ಟುವುದಿಲ್ಲವಾದ್ದರಿಂದ, ಅನಂತರ ಅನುವೃತ್ತನಾಗುವ ಬ್ರಹ್ಮನಂತೆ ಇತರನಿಷೇಧವೂ ಅನುವೃತ್ತವಾಗುವುದರಿಂದ ಸರ್ವಜಗನ್ನಿಷೇಧವು ಸಿದ್ಧವಾಗುವುದಿಲ್ಲ. ಚರಮಸಾಕ್ಷಾತ್ಕಾರವು ಇತರ ನಿಷೇಧವನ್ನು ಪ್ರಕಾರತಯಾ ವಿಷಯೀಕರಿಸದಿದ್ದರೆ ಅದು ಜಗದ್‌ಭ್ರಮಕ್ಕೇ ಆಗಲೀ ಬೇರೆ ಯಾವುದಕ್ಕೇ ಆಗಲೀ ಬಾಧಕವಾಗುವುದಿಲ್ಲ. ಭ್ರಮದಲ್ಲಿ ತೋರಿದ ಆಕಾರಕ್ಕೆ

ವಿರೋಧಿಯಾದ ಆಕಾರವು ಪ್ರಕಾರವಾಗಿ ತೋರಿದರಷ್ಟೆ ಜ್ಞಾನಗಳಿಗೆ ಬಾಧ್ಯಬಾಧಕಭಾವವು ಉಪಪನ್ನವಾಗುವುದು?

ಮತ್ತು ನೀನು ಹೇಳುವ ಬಾಧವು ಜ್ಞಾನದಿಂದ ಅಜ್ಞಾನನಿವೃತ್ತಿ ಮತ್ತು ಆಕಾರಣದಿಂದ ಅಜ್ಞಾನಕಾರ್ಯವಾದ ಜಗತ್ತಿನ ನಿವೃತ್ತಿ. ನಿವೃತ್ತಿ ಎಂದರೆ ನಾಶ. ಆದ್ದರಿಂದ ಜ್ಞಾನದಿಂದ ಪರಂಪರಯಾಜಗತ್ತು ನಾಶವನ್ನು ಹೊಂದಿದರೆ ಜಗತ್ತು ಅನಿತ್ಯ ಎಂದಾಗಲಿ. ಮಿಥ್ಯಾತ್ವವು ಹೇಗೆ ಸಿದ್ಧಿಸುತ್ತದೆ? ನಾಶಾನಂತರದಲ್ಲಿ ಬರುವ ನಾಸ್ತಿ ಎಂಬ ಜ್ಞಾನವು ಘಟನಾಶವಾದ ನಂತರ ಬರುವ ಘಟಧ್ವಂಸವನ್ನು ವಿಷಯೀಕರಿಸುತ್ತದೆ. ತ್ರಿಕಾಲಾಸತ್ತ್ವರೂಪವಾದ ಬಾಧವು ಸಿದ್ಧಿಸುವುದಿಲ್ಲ. ಮತ್ತು ನಾಶವಾಗುವುದಾದರೆ ವಿದ್ಯಮಾನವಾದ ವಸ್ತುವಿಗೇ ನಾಶವುಂಟಾಗುತ್ತದೆ. ಶುಕ್ತಿರಜತಕ್ಕಾಗಲೀ, ಶಶವಿಷಾಣಕ್ಕಾಗಲೀ ನಾಶವುಂಟಾಗುವುದಿಲ್ಲ. ವಿದ್ಯಮಾನತ್ವ ಎಂದರೆ ಸತ್ತ್ವ ಎಂದೇ ಅರ್ಥ. ಆದ್ದರಿಂದ ನಾಶರೂಪವಾದ ಬಾಧವು ಜಗತ್ತಿಗೆ ಸತ್ಯತ್ವವನ್ನೇ ಸಾಧಿಸುತ್ತದೆಯೇ ಹೊರತು ಮಿಥ್ಯಾತ್ವವನ್ನು ಸಾಧಿಸುವುದಿಲ್ಲ.

ಮತ್ತು ನೀನು ಹೇಳುವ ಚರಮಸಾಕ್ಷಾತ್ಕಾರವು ನಿರ್ವಿಕಲ್ಪಕವಾದುದು. ಪ್ರವೃತ್ತಿಗಾಗಲೀ ನಿವೃತ್ತಿಗಾಗಲೀ ಕಾರಣವಲ್ಲದ ನಿರ್ವಿಕಲ್ಪಕಜ್ಞಾನದ ಸ್ವರೂಪವೇ ಸಿದ್ಧಿಸುವುದು ಕಷ್ಟ. ಆದ್ದರಿಂದಲೇ ವಾದಿಗಳು ಅದರ ಬಗ್ಗೆ ವಿವಾದಮಾಡುತ್ತಾರೆ. ಆ ನಿರ್ವಿಕಲ್ಪಕಜ್ಞಾನವಾದರೂ ಅದರ ಅನಂತರ ಉಂಟಾಗುವ ವಿಶಿಷ್ಟಜ್ಞಾನಲಿಂಗಕವಾದ ಅನುಮಿತಿಯಿಂದ ವೇದ್ಯವೇ ಹೊರತು ಬೇರೆ ರೀತಿಯಲ್ಲಿ ವೇದ್ಯವಲ್ಲ. ಆದರೆ ನಿನ್ನ ಅಂಗೀಕಾರದಂತೆಯೇ ಅದು ಚರಮಜ್ಞಾನ, ಅದರ ನಂತರ ಯಾವ ಜ್ಞಾನವೂ ಉತ್ಪನ್ನವಾಗುವುದಿಲ್ಲ. ಹೀಗಿರುವಾಗ ಅನುಮಾಪಕವಾದ ವಿಶಿಷ್ಟಜ್ಞಾನವು ಇಲ್ಲದಿರುವಾಗ ನಿರ್ವಿಕಲ್ಪಕಜ್ಞಾನವಾದರೂ ಹೇಗೆ ಸಿದ್ಧವಾಗುತ್ತದೆ?

'ದಶಮಸ್ತ್ವಮಸಿ' ಎಂಬ ವಾಕ್ಯದಿಂದ ನಿರ್ವಿಕಲ್ಪಕವಾದ ದಶಮತ್ವಪ್ರತ್ಯಕ್ಷವು ಬರುವಂತೆ 'ತತ್ತ್ವಮಸಿ' ವಾಕ್ಯದಿಂದಲೂ ನಿರ್ವಿಕಲ್ಪಕವಾದ ಅಖಂಡಚೈತನ್ಯಸಾಕ್ಷಾತ್ಕಾರವೇ ಉಂಟಾಗುವುದೆಂದು ನಿನ್ನ ವಾದ. ಇದು ನಿನ್ನ ವ್ಯರ್ಥವಾದ ಆಸೆ. ಏಕೆಂದರೆ ನಿರ್ವಿಕಲ್ಪಕಜ್ಞಾನವು ಅಪರೋಕ್ಷಜ್ಞಾನವಾಗುತ್ತದೆಯೇ ಹೊರತು ಪರೋಕ್ಷರೂಪವಾಗುವುದಿಲ್ಲ. ಆದ್ದರಿಂದ ಶಬ್ದದಿಂದ ಅಪರೋಕ್ಷನಿರ್ವಿಕಲ್ಪಕವನ್ನು ಒಪ್ಪಿ ಅದರಿಂದ ಜಗತ್ಸತ್ಯತ್ವಗ್ರಾಹಿಪ್ರತ್ಯಕ್ಷವನ್ನು ಬಾಧಿಸುವುದು ಅಷ್ಟಮರಸವಿದ್ದಂತೆ. ಮತ್ತು ನೀನು ಅಖಂಡಾರ್ಥವಾದವನ್ನೂ ನಿರ್ವಿಕಲ್ಪಕವಾದವನ್ನೂ ಅಂಗೀಕರಿಸುವವನು. ಆದ್ದರಿಂದ 'ತತ್ತ್ವಮಸಿ' ವಾಕ್ಯದಿಂದ ಅಪರೋಕ್ಷವನ್ನು ಒಪ್ಪಿದರೂ ಅದು ಕೇವಲ ಚೈತನ್ಯವಿಷಯಕವಾಗುವುದರಿಂದ, ಜಗದಭಾವವನ್ನಾಗಲೀ, ಬೇರೆ ರೀತಿಯ ಮಿಥ್ಯಾತ್ವವನ್ನಾಗಲೀ ಪ್ರಕಾರತಯಾ ವಿಷಯೀಕರಿಸದೆ ಇರುವುದರಿಂದ ಸತ್ವಗ್ರಾಹಿಪ್ರತ್ಯಕ್ಷಕ್ಕೆ ಬಾಧಕವಾಗುವ ಅವಕಾಶವೇ ಇಲ್ಲ.

ಮತ್ತು ಪ್ರತ್ಯಕ್ಷವು ದೃಢತರವಾದ ಪ್ರತ್ಯಕ್ಷದಿಂದಲೇ ಬಾಧಿತವಾಗಬಹುದೇ ಹೊರತು ಅನುಮಾನದಿಂದಲಾಗಲೀ, ಆಗಮದಿಂದಲಾಗಲೀ ಬಾಧಿತವಾಗುವುದಿಲ್ಲ. ದೃಢವಾದ ಪ್ರತ್ಯಕ್ಷಕ್ಕಂತೂ ವಿರುದ್ಧವಾದ ಸಹಸ್ರಪ್ರಮಾಣಗಳಿದ್ದರೂ ಅದು ಎಂದೂ ಬಾಧಿತವಾಗುವುದಿಲ್ಲ. ಸರ್ವಾಪಲಾಪಿಯಾದ ಚಾರ್ವಾಕನೂ ದೂರಸ್ಥವೃಕ್ಷಪರಿಮಾಣದ ವಿಷಯದಲ್ಲಿ ಚಂದ್ರಪ್ರಾದೇಶತ್ವಪ್ರತ್ಯಕ್ಷದ ವಿಷಯದಲ್ಲಿ ವಿಶೇಷವಾಗಿ ದೂರದಲ್ಲಿರುವ ವಸ್ತುಗಳ ವಿಷಯದಲ್ಲಿ ಬರುವ ಅವುಗಳ ಪರಿಮಾಣಜ್ಞಾನವು ಭ್ರಾಂತಿಯಾಗಿರುತ್ತದೆ ಎಂಬ ಸಾಕ್ಷಿಜ್ಞಾನವು ಜಾಗ್ರತವಾಗಿರುವಾಗಲೇ ವೃಕ್ಷಹ್ರಸ್ವತ್ವ ಮತ್ತು ಚಂದ್ರಪ್ರಾದೇಶತ್ವ ಪ್ರತ್ಯಕ್ಷಗಳು ಬರುತ್ತವೆ. ದೂರ ಎಂದರೆ ದೇಶ ವಿಪ್ರಕರ್ಷ. ದೇಶವನ್ನು ಗ್ರಹಿಸುವ ಸಾಕ್ಷಿಯೇ ದೇಶದ ವಿಪ್ರಕರ್ಷವನ್ನೂ ಗ್ರಹಿಸುತ್ತದೆ. ಆದ್ದರಿಂದ ಈ ಪ್ರತ್ಯಕ್ಷದಲ್ಲಿ ದೋಷವಿದೆ ಎಂಬ ಜ್ಞಾನವಿರುವಾಗಲೇ ಬರುವ ಈ ಹ್ರಸ್ವತ್ವಪ್ರಾದೇಶತ್ವಾದಿಪ್ರತ್ಯಕ್ಷಗಳು ಬಾಧಿತಪ್ರಾಯವಾಗಿಯೇ ಹುಟ್ಟುತ್ತವೆ. ಅದರ ಅನಂತರ ಪ್ರವೃತ್ತವಾಗುವ ಅನುಮಾನಾಗಮಗಳು ಬಾಧವೆಂದು ಉಪಚರಿಸಲ್ಪಡುತ್ತವೆಯೇ ಹೊರತು ನಿಜವಾಗಿ ಬಾಧಗಳಲ್ಲ. ಜಗತ್ತು ಸತ್ಯವಲ್ಲ ಎಂಬ ಪ್ರತ್ಯಕ್ಷವಿದ್ದಿದ್ದರೆ, ಅದೂ ದೃಢತರವಾಗಿದ್ದರೆ ಸತ್ಯತ್ವಪ್ರತ್ಯಕ್ಷಕ್ಕೆ ಬಾಧಕವಾಗುತ್ತಿತ್ತು. ಆದರೆ ಅಂತಹ ಪ್ರತ್ಯಕ್ಷವು ಯಾವುದೂ ಇಲ್ಲ.

ಇನ್ನು ಚರಮಸಾಕ್ಷಾತ್ಕಾರದ ನಿವೃತ್ತಿಯು ಹೇಗೆ? ಅದರ ನಂತರ ಯಾವ ಜ್ಞಾನವೂ ಉತ್ಪನ್ನವಾಗುವುದಿಲ್ಲವಾದ್ದರಿಂದ ಅದಕ್ಕೆ ಜ್ಞಾನನಿವರ್ತ್ಯತ್ವವನ್ನು ಹೇಗೆ ಕೂಡಿಸುತ್ತೀಯೆ? ತಾನೇ ತನ್ನಿಂದಲೇ ನಿವೃತ್ತವಾಗುತ್ತದೆ ಎಂದು ಹೇಳಿದರೆ ಆತ್ಮಾಶ್ರಯದೋಷವು ಬರುತ್ತದೆ. ಚರಮಸಾಕ್ಷಾತ್ಕಾರವನ್ನು ಒಪ್ಪಿದರೆ ಇನ್ನೂ ದೋಷಗಳು ಬರುವುದರಿಂದ ಅಂತಹ ಸಾಕ್ಷಾತ್ಕಾರವು ಅಪ್ರಾಮಾಣಿಕವಾದುದೆಂದು ರಾಜರು ಉಪಪಾದನೆ ಮಾಡುತ್ತಾರೆ.

**'ಅದ್ವಿತೀಯಂ' ಇತ್ಯಾದಿ ಶ್ರುತ್ಯರ್ಥವಿಚಾರ :**

ಮತ್ತು ಜಗತ್ತಿಗೆ ಕಾಲತ್ರಯದಲ್ಲಿ ನಿಷೇಧವು ಎಲ್ಲಿ ಶ್ರುತವಾಗಿದೆ? **'ಏಕಮೇವಾದ್ವಿತೀಯಂ ಬ್ರಹ್ಮ'** ಎಂಬ ಶ್ರುತಿಯಲ್ಲಿ ಅದ್ವಿತೀಯಶಬ್ದವೇನೋ ಇದೆ. ಅದಕ್ಕೆ 'ನ ದ್ವಿತೀಯಂ ಅದ್ವಿತೀಯಂ' ಎಂದು ತತ್ಪುರುಷಸಮಾಸವನ್ನು ಮಾಡಿ ಬ್ರಹ್ಮನು ದ್ವಿತೀಯನಲ್ಲ ಪ್ರಥಮನಾದವನು ಪ್ರಧಾನನಾದವನು ಎಂಬ ಅರ್ಥವನ್ನು ಮಾಡಬಹುದು. ಇನ್ನು 'ನ ವಿದ್ಯತೇ ದ್ವಿತೀಯಂ ಯಸ್ಮಾತ್ (ಯಸ್ಯ) ತತ್' ಎಂದ ಬಹುವ್ರೀಹಿಯನ್ನು ಮಾಡಿದರೂ ಅಲ್ಲಿ ವಿದ್ಯತೇ ಎಂಬಲ್ಲಿರುವ ಲಟ್‌ಪ್ರತ್ಯಯದ ಬಲದಿಂದ ವರ್ತಮಾನಕಾಲದ ನಿಷೇಧವು ಮಾತ್ರ ಲಭಿಸಬಹುದೇ ಹೊರತು ಕಾಲತ್ರಯನಿಷೇಧವು ಸಿದ್ಧಿಸುವುದಿಲ್ಲ. **'ಅಘಟಂ ಭೂತಲಂ'** ಎಂದು ಪ್ರಯೋಗಿಸಿದರೆ ಆ ಭೂತಲದಲ್ಲಿ ಭವಿಷ್ಯತ್ ಕಾಲದಲ್ಲಿಯೂ ಘಟವು ಇರುವುದಿಲ್ಲವೆಂದು ಅರ್ಥವಾಗುತ್ತದೆಯೇ? ಇನ್ನು ಆ ವರ್ತಮಾನಕಾಲದ ನಿಷೇಧವಾದರೂ ಯಸ್ಯ (ಯಸ್ಮಾತ್) ಎಂದು ಹೇಳಿದ ಯತ್‌ಪದಾರ್ಥದಲ್ಲಿಯೇ

ಹೊರತು ಬೇರೆ ಕಡೆ ಎಂದರೆ ಘಟಪಟಾದಿಗಳಿಗೆ ಸ್ವಸ್ವೋಪಾದಾನಗಳಲ್ಲಿ ನಿಷೇಧವು ಲಭಿಸುವುದಿಲ್ಲ. ಒಂದು ದೇಶದಲ್ಲಿ ನಿಷೇಧವು ಮಿಥ್ಯಾತ್ವದಲ್ಲಿ ಪರ್ಯವಸಾನವನ್ನು ಹೊಂದುವುದಿಲ್ಲ. ಎಲ್ಲಾ ದೇಶದಲ್ಲಿ ಮತ್ತು ಎಲ್ಲಾ ಕಾಲದಲ್ಲಿ ನಿಷೇಧವು ಮಾತ್ರ ಮಿಥ್ಯಾತ್ವದಲ್ಲಿ ಪರ್ಯವಸಾನವಾಗುತ್ತದೆ.

**'ನೇಹ ನಾನಾಸ್ತಿ ಕಿಂಚನ'** ಎಂಬ ವಾಕ್ಯವಾದರೂ ಬ್ರಹ್ಮನಲ್ಲಿ ನಾನಾತ್ವವನ್ನು ನಿಷೇಧಮಾಡುತ್ತದೆ. ಜಗತ್ತಿಗೆ ತನ್ನ ಆಶ್ರಯ ಅಥವಾ ಉಪಾದಾನದಲ್ಲಿ ತ್ರಿಕಾಲಾಸತ್ವವನ್ನು ಹೇಳುವುದಿಲ್ಲ. ಈ ವಾಕ್ಯದಲ್ಲಿ ಜಗತ್ತಿನ ವಾರ್ತೆಯೇ ಇಲ್ಲದಿರುವುದರಿಂದ ಜಗನ್ನಿಷೇಧದ ಪ್ರಸಕ್ತಿಯೇ ಇಲ್ಲ. ಇಲ್ಲಿ ಇಹ ಎಂದರೆ ಬ್ರಹ್ಮನಲ್ಲಿ ಎಂಬ ಅರ್ಥವು ಇಬ್ಬರಿಗೂ ಸಮ್ಮತವಾದುದು. ನಾನಾಶಬ್ದಕ್ಕೆ ಭಿನ್ನ ಎಂದು ಅರ್ಥಮಾಡಿದರೂ, ಭಾವಪ್ರಧಾನನಿರ್ದೇಶದಿಂದ ಭೇದ ಎಂದು ಅರ್ಥಮಾಡಿದರೂ ನಮಗೆ ಯಾವ ಹಾನಿಯೂ ಇಲ್ಲ. ಬ್ರಹ್ಮನಲ್ಲಿ ಭಿನ್ನವಾದುದು ಇಲ್ಲ ಎಂದರೆ ಬ್ರಹ್ಮನಲ್ಲಿರುವ ಗುಣಕ್ರಿಯಾದಿಗಳು ಬ್ರಹ್ಮನಿಂದ ಅಭಿನ್ನವಾಗಿವೆ ಎಂದು ಸಿದ್ಧವಾಗುತ್ತದೆ. ಬ್ರಹ್ಮನಲ್ಲಿ ಭೇದವಿಲ್ಲ ಎಂದರೆ ಬ್ರಹ್ಮನ ಅವತಾರರೂಪಗಳಲ್ಲಿ ಅಂತರ್ಯಾಮಿರೂಪಗಳಲ್ಲಿ ಭೇದವಿಲ್ಲ ಎಂದು ಸಿದ್ಧವಾಗುತ್ತದೆ. ಬ್ರಹ್ಮನಲ್ಲಿ ಜೀವಭೇದವಿಲ್ಲ ಎಂದು ಸಿದ್ಧಿಸುವುದಿಲ್ಲ. ಕಿಂಚನ ನಾನಾ ಎಂಬ ಶಬ್ದಕ್ಕೆ ಜಗತ್ತು ಎಂಬ ಅರ್ಥವನ್ನು ಇಟ್ಟುಕೊಂಡರೂ ಬ್ರಹ್ಮನು ಅಸಂಗತನಾದುದರಿಂದ ಅವನಲ್ಲಿ ಜಗತ್ತು (ಇದ್ದರೂ) ಇಲ್ಲ ಎಂದು ಅರ್ಥವಾಗುತ್ತದೆ. **'ನಚ ಮತ್ಸ್ಥಾನಿ ಭೂತಾನಿ ಪಶ್ಯಮೇ ಯೋಗಮೈಶ್ವರಂ'** ಎಂಬ ಗೀತಾವಚನವು. ನನ್ನಲ್ಲಿ ಭೂತಾದಿಜಗತ್ತು ಇಲ್ಲದಿರುವುದು ನನ್ನ ಯೋಗಸಾಮರ್ಥ್ಯ ಎಂದು ಹೇಳುತ್ತದೆ ಹಿಂದಿನ ವಾಕ್ಯವು **'ಮತ್ಸ್ಥಾನಿ ಸರ್ವಭೂತಾನಿ ನಚಾಹಂ ತೇಷ್ವವಸ್ಥಿತಃ'** ಎಂದಿದೆ. ಇದೆರಡು ವಾಕ್ಯಗಳಿಗೆ ವಿರೋಧವನ್ನು ಪರಿಹಾರಮಾಡಬೇಕಾದರೆ ಅಸಂಗನಾದ್ದರಿಂದ ಈಶ್ವರನಲ್ಲಿ ಜಗತ್ತು ಇದ್ದರೂ ಅವನಿಗೆ ಅದರಿಂದ ಯಾವ ಲೇಪವೂ ಇಲ್ಲ ಎಂದು ಅರ್ಥಮಾಡಬೇಕು. ಆದ್ದರಿಂದ ನೀನು ಹೇಳುವ ವಾಕ್ಯಗಳು ಒಂದು ಕಾಲದಲ್ಲಿ ಜಗತ್ತನ್ನು ನಿಷೇಧಮಾಡಬಹುದೇ ಹೊರತು ಮೂರುಕಾಲದಲ್ಲಿ ನಿಷೇಧವನ್ನು ಮಾಡುವುದಿಲ್ಲ. ಒಂದುಕಾಲದಲ್ಲಿ ಒಂದುದೇಶದಲ್ಲಿ ನಿಷೇಧಮಾಡಿದರೆ ಇನ್ನೊಂದು ಕಾಲದಲ್ಲಿ ಇನ್ನೊಂದು ದೇಶದಲ್ಲಿ ಇರಬಹುದಾದ್ದರಿಂದ ಮಿಥ್ಯಾತ್ವವು ಸಿದ್ಧವಾಗುವುದಿಲ್ಲ.

ಆದ್ದರಿಂದ **'ಜಗತ್ ಸತ್ಯಂ ನ'** ಎಂಬ ನಿಷೇಧವಾಗಲೀ, **'ಜಗನ್ನಾಸ್ತಿ'** ಎಂಬ ನಿಷೇಧವಾಗಲೀ ಶ್ರುತಿಯಲ್ಲಿ ಎಲ್ಲಿಯೂ ಕಂಡುಬರುವುದಿಲ್ಲ. ಆದ್ದರಿಂದ ತ್ರೈಕಾಲಿಕ ನಿಷೇಧವು ಶ್ರೌತವಲ್ಲ. ಅದ್ವಿತೀಯಾದಿಶಬ್ದಗಳು ವರ್ತಮಾನಕಾಲದಲ್ಲಿ ಮಾತ್ರ ನಿಷೇಧಮಾಡಬಹುದು. ಈಗ ಬಾಧವಿಲ್ಲದಿದ್ದರೂ ಮುಂದೆ ಬಾಧವು ಬರುತ್ತದೆ ಎಂಬ ಶಂಕೆಯು ಯುಕ್ತವಲ್ಲ. ಅಂತಹ ಶಂಕೆಯು ಬರುವುದಕ್ಕೆ ಏನು ಕಾರಣವೆಂದು ಹೇಳಬೇಕು.

ಒಂದುಪಕ್ಷ ಬಾಧಶಂಕೆಯು ಬಂದರೂ ಅದರಿಂದ ಮಿಥ್ಯಾತ್ವಸಂಶಯವು ಬರಬಹುದು. ಮಿಥ್ಯಾತ್ವನಿಶ್ಚಯವು ಬರುವುದಿಲ್ಲ. ಬಾಧಶಂಕೆಯಿಂದ ಮಿಥ್ಯಾತ್ವ ನಿಶ್ಚಯವು ಬರುವುದಾದರೆ ಶಂಕೆಯ (ಸಂಶಯದ) ಇನ್ನೊಂದು ಕೋಟಿಯಾದ ಸತ್ಯತ್ವದ ನಿಶ್ಚಯವು ಏಕೆ ಬರುವುದಿಲ್ಲ? ಇನ್ನು ತ್ರೈಕಾಲಿಕ ನಿಷೇಧವನ್ನು ಒಪ್ಪುವುದಿಲ್ಲ. ಹಾಗೆ ಮಾಡಿದರೆ ಶಶವಿಷಾಣದಂತೆ ಅಸತ್ತ್ವವೇ ಪ್ರಾಪ್ತವಾಗುತ್ತದೆ. ಆದ್ದರಿಂದ ಸತ್ಯತ್ವದ ನಿಷೇಧವನ್ನೇ ಬಾಧವೆಂದು ಹೇಳಬೇಕು. ಅಂತಹ ನಿಷೇಧವು ವೇದದಲ್ಲಿ ಎಲ್ಲಿಯೂ ಕಾಣುವುದಿಲ್ಲ. ಸ್ವರೂಪೇಣ ನಿಷೇಧವಿಲ್ಲದಿದ್ದರೂ ಪಾರಮಾರ್ಥಿಕತ್ವಾಕಾರೇಣ ನಿಷೇಧವಿದೆ ಎಂದು ಹೇಳಿದರೂ ಅಂತಹ ನಿಷೇಧವೂ ಎಲ್ಲಿಯೂ ಕಾಣುವುದಿಲ್ಲ. ಇನ್ನು ಪಾರಮಾರ್ಥಿಕತ್ವವನ್ನು ನಿಷೇಧಮಾಡುವ ಅಭಿಪ್ರಾಯವಿದ್ದರೆ ಅದು ವ್ಯಾವಹಾರಿಕ ಸತ್ವವನ್ನು ಸ್ವೀಕರಿಸುವ ಕಾರಣದಿಂದಾಗಿ. ಆಗ ವ್ಯಾವಹಾರಿಕಸತ್ವವು ಬಾಧ್ಯವೋ ಅಬಾಧ್ಯವೋ? ವ್ಯಾವಹಾರಿಕ ಸತ್ಯವು ಬಾಧ್ಯವೆಂದು ಹೇಳಿದರೆ ಸತ್ಯ ಎಂದರೆ ಅಬಾಧ್ಯ ವ್ಯಾವಹಾರಿಕವೆಂದರೆ ಬಾಧ್ಯ ಎಂದಾಗುವುದರಿಂದ ವ್ಯಾಹತಿಯು ಬರುತ್ತದೆ. ಅದು ಬಾಧ್ಯವಲ್ಲವೆಂದರೆ ನಾವು ಅಂಗೀಕರಿಸುವ ಸರ್ವವ್ಯವಹಾರ ನಿರ್ವಾಹಕವಾದ ಸತ್ವಕ್ಕೆ ಅದು ಇನ್ನೊಂದು ಹೆಸರಾಯಿತು. ಆದ್ದರಿಂದ ಮಿಥ್ಯಾತ್ವವನ್ನು ಹೇಳಲು ಬರುವುದಿಲ್ಲ.

**ಅಸತ್‌ಪ್ರತೀತಿಯ ಸಮರ್ಥನೆ :**

**'ವಿಶ್ವಂ ಮಿಥ್ಯಾ ದೃಶ್ಯತ್ವಾತ್ ಶುಕ್ತಿರಜತವತ್'** ಎಂಬುದು ಪರರು ಮಿಥ್ಯಾತ್ವವನ್ನು ಸಾಧಿಸುವ ಅನುಮಾನ. ಇಲ್ಲಿ ಮಿಥ್ಯಾತ್ವವೆಂದರೆ ಸದಸದ್ವಿಲಕ್ಷಣತ್ವವೆಂದು ಅವರ ಅರ್ಥ. ಈ ಅನುಮಾನಕ್ಕೆ ದೋಷವನ್ನು ಹೇಳುತ್ತಾ ನಾವು ಶುಕ್ತಿರಜತವು ಅಸತ್ತೇ ಆಗಿದೆ. ಅದರಲ್ಲಿ ಸದಸದ್ವಿಲಕ್ಷಣತ್ವವಿಲ್ಲ. ಆದ್ದರಿಂದ ದೃಷ್ಟಾಂತದಲ್ಲಿ ಸಾಧ್ಯವೈಕಲ್ಯವೆಂದು ಹೇಳುತ್ತೇವೆ. ಅದಕ್ಕೆ ಅವರು ಶುಕ್ತಿರಜತವು ಅಸತ್ತಲ್ಲ. ಅಸತ್ತಾದರೆ ಅದರ ಪ್ರತೀತಿಯೇ ಬರಬಾರದಾಗಿದ್ದಿತು. ಪ್ರತೀತಿಯು ಬರುತ್ತದೆ. ಆದ್ದರಿಂದ ಅದು ಅಸದ್ವಿಲಕ್ಷಣ ಎಂದು ಹೇಳುತ್ತಾರೆ. ಆದ್ದರಿಂದ ನಮ್ಮ ಪಕ್ಷವನ್ನು ದೃಢಪಡಿಸಲು ಅಸತ್ತಿಗೂ ಪ್ರತೀತಿಯನ್ನು ಉಪಪಾದನೆ ಮಾಡಬೇಕಾದ ಅವಶ್ಯಕತೆ ಇದೆ. ಅದನ್ನು ಗ್ರಂಥಕಾರರು ಮಾಡುತ್ತಾರೆ. ಅಸತ್ತಿಗೆ ಪ್ರತೀತಿ ಇಲ್ಲ ಎಂದರೆ ಪರೋಕ್ಷಪ್ರತೀತಿ ಇಲ್ಲ ಎಂದು ಅರ್ಥವೋ ಅಥವಾ ಅಪರೋಕ್ಷಪ್ರತೀತಿಯು ಇಲ್ಲವೆಂದು ಅರ್ಥವೋ? ಪರೋಕ್ಷಪ್ರತೀತಿಯನ್ನು ನಿರಾಕರಣೆ ಮಾಡಲು ಸಾಧ್ಯವಿಲ್ಲ. ಏಕೆಂದರೆ **'ಅತ್ಯಂತಾಸತ್ಯಪಿ ಹ್ಯರ್ಥೇ ಶಬ್ದೋ ಜ್ಞಾನಂ ಕರೋತಿ ಹಿ'** ಎಂಬ ನಿನ್ನ ವಚನವಿರುವುದರಿಂದ ಶಬ್ದದಿಂದ ಅಸತ್ತಿನ ಪರೋಕ್ಷಜ್ಞಾನವನ್ನು ನೀನು ಅಂಗೀಕರಿಸುತ್ತೀಯೆ. **'ಶಶವಿಷಾಣಂ ನಾಸ್ತಿ'** ಎಂಬ ಒಂದು ವಾಕ್ಯವನ್ನು ತೆಗೆದುಕೊಂಡರೆ ಶಶವಿಷಾಣಂ ಎಂಬ ಪದದಿಂದ (ಅಥವಾ ಶಶಸ್ಯ ವಿಷಾಣಂ) ಎಂಬ ಪದದಿಂದ ಶಶವಿಷಾಣದ ಉಪಸ್ಥಿತಿಯು ಉಂಟಾಗಿ ಅದಕ್ಕೆ ವಾಕ್ಯದಲ್ಲಿರುವ ಇತರಪದದ ಅರ್ಥದಿಂದ ಅನ್ವಯವುಂಟಾಗಬೇಕಷ್ಟೆ. ಶಶವಿಷಾಣಶಬ್ದದಿಂದ

ಪ್ರತಿಪಾದ್ಯವಸ್ತುವಿನ ಉಪಸ್ಥಿತಿಯುಂಟಾಗಬೇಕಾದರೆ ಪದಕ್ಕೆ ಆ ಅರ್ಥದಲ್ಲಿ ಶಕ್ತಿರೂಪಸಂಬಂಧವಾಗಲೀ ಲಕ್ಷಣಾರೂಪಸಂಬಂಧವಾಗಲೀ ಇರಬೇಕು. ಪದವು ತನ್ನಿಂದ ಅಸಂಬದ್ಧವಾದ ಅರ್ಥದ ಬೋಧವನ್ನಂತೂ ಉಂಟುಮಾಡುವುದಿಲ್ಲ. ವಾಕ್ಯವೂ ಅಸಂಬದ್ಧಾರ್ಥಬೋಧವನ್ನು ಉಂಟುಮಾಡುವುದಿಲ್ಲ ಪದಾರ್ಥಗಳ ಸಂಬಂಧವೇ ಯೋಗ್ಯತೆಯಷ್ಟೆ? ಯೋಗ್ಯತೆಯು ಶಾಬ್ದಬೋಧವನ್ನು ಕುರಿತು ಕಾರಣ. ಮುಖ್ಯಪ್ರಯೋಗದಲ್ಲಿ ಪದಾರ್ಥಗಳಿಗೆ ಸಾಕ್ಷಾತ್ ಸಂಬಂಧವಿರುತ್ತದೆ. ಅಮುಖ್ಯಪ್ರಯೋಗದಲ್ಲಿ ಪರಂಪರಾಸಂಬಂಧದಿಂದ ಅರ್ಥಬೋಧವುಂಟಾಗುತ್ತದೆ. ಆದ್ದರಿಂದ 'ಶಶವಿಷಾಣಂ' ಎಂಬ ಪದದಿಂದಲಾಗಲೀ 'ಶಶಸ್ಯ ವಿಷಾಣಂ' ಎಂಬ ವಾಕ್ಯದಿಂದಲಾಗಲೀ ಶಶವಿಷಾಣದ ಬೋಧವು ಬರುವುದಾದರೆ ಅದಕ್ಕೆ ಶಬ್ದದ ಸಂಬಂಧವಿರಬೇಕು. ಆದರೆ ಶಶವಿಷಾಣವು ಅಸತ್ತಾದುದರಿಂದ ಅದರಲ್ಲಿ ಯಾವ ಸಂಬಂಧವೂ ಇಲ್ಲ ಶಶ ಮತ್ತು ವಿಷಾಣಗಳಿಗೂ ಪರಸ್ಪರ ಸಂಬಂಧವಿಲ್ಲ. ಹೀಗಿರುವಾಗ ಶಶವಿಷಾಣದ ಬೋಧವು ಹೇಗೆ ಬರುತ್ತದೆ? ಆದರೂ ನೀವು ಒಪ್ಪುತ್ತೀರಿ. ದೋಷವಶದಿಂದ ಸಂಬಂಧವಿಲ್ಲದಿದ್ದರೂ ಬೋಧವು ಬರುವುದೆಂದು ಹೇಳಬೇಕು. ಹಾಗಾದರೆ ಅಪರೋಕ್ಷಸ್ಥಳದಲ್ಲಿಯೂ ದೋಷದ ಬಲದಿಂದಲೇ ಸನ್ನಿಕರ್ಷವಿಲ್ಲದಿದ್ದರೂ ಅಸತ್ತಾದ ಶುಕ್ತಿರಜತದ ಜ್ಞಾನವು ಬರುತ್ತದೆಂದು ಒಪ್ಪಿ. ಪ್ರತೀತಿಯನ್ನು ಒಪ್ಪಿದರೆ ಅದು ಅಸತ್ತೇ ಆಗುವುದಿಲ್ಲ ಎಂದು ಹೇಳುವುದು ಸರಿಯಲ್ಲ. ಪ್ರತೀತಿ ಬರದಿದ್ದಾಗ ಅಸತ್ತಾಗಿದ್ದ ಶಶವಿಷಾಣವು ಪ್ರತೀತಿಯು ಬಂದ ತಕ್ಷಣ ವ್ಯತ್ಯಾಸಗೊಂಡು ಅಸದ್ವಿಲಕ್ಷಣವಾಗುವುದಿಲ್ಲ. ಭೂತಲದಲ್ಲಿ ಘಟಾಭಾವಚಾಕ್ಷುಷ ಜ್ಞಾನವು ಬರುವಾಗ ಅಭಾವಾಂಶದಲ್ಲಿ ಘಟವು ಹೇಗೆ ವಿಶೇಷಣವಾಗಿ ತೋರುತ್ತದೆ? ಪ್ರತಿಯೋಗಿಗೆ ಅಲ್ಲಿ ಸನ್ನಿಕರ್ಷವಿಲ್ಲವಷ್ಟೆ? ಅಲ್ಲಿ ಪ್ರತಿಯೋಗಿಗೂ ಸನ್ನಿಕರ್ಷವಿದ್ದರೆ ಅಭಾವಜ್ಞಾನವೇ ಬರುವುದಿಲ್ಲ. ಅಲ್ಲಿ ಆದ್ದರಿಂದ ಅನಿವಾರ್ಯವಾಗಿ ಸನ್ನಿಕರ್ಷವಿಲ್ಲದಿದ್ದರೂ ಘಟದಜ್ಞಾನ ಬರುವಂತೆ ಶುಕ್ತಿರೂಪ್ಯಸ್ಥಳದಲ್ಲಿಯೂ ಸನ್ನಿಕರ್ಷವಿಲ್ಲದೆಯೇ ಜ್ಞಾನವುಂಟಾಗಲಿ. ಸನ್ನಿಕರ್ಷವಿಲ್ಲದೆ ರಜತಭ್ರಮವು ಉಂಟಾಗುವುದಾದರೆ ಅಲ್ಲಿ ರಜ್ಜುಸರ್ಪಭ್ರಮವು ಉಂಟಾಗಲಿ ಎಂಬ ಅತಿಪ್ರಸಂಗವನ್ನು ದೋಷವೇ ವಾರಣಮಾಡುತ್ತದೆ; ರಜತಭ್ರಮಕ್ಕೆ ಕಾರಣವಾದ ದೋಷವು ಬೇರೆ. ಸರ್ಪಭ್ರಮಕ್ಕೆ ಕಾರಣವಾದ ದೋಷವು ಬೇರೆ. ಸದ್ಯದಲ್ಲಿ ರಜತಭ್ರಮಕ್ಕೆ ಕಾರಣವಾದ ದೋಷವಿರುವುದರಿಂದ ರಜತಭ್ರಮವೇ ಬರುತ್ತದೆ. ಸರ್ಪಭ್ರಮವು ಬರುವುದಿಲ್ಲ ಎಂದು ಅಭಿಪ್ರಾಯ. **'ಅಸದೇವ ರಜತಂ ಪ್ರತ್ಯಭಾತ್'** ಎಂಬುದು ಎಲ್ಲರ ಅನುಭವ. ಆದ್ದರಿಂದ ಅಸತ್ತಿನ ಜೊತೆಯಲ್ಲಿ ಸನ್ನಿಕರ್ಷವಿಲ್ಲ. ಇಲ್ಲದಿದ್ದರೆ ನಿನ್ನ ಮತದಲ್ಲಾದರೂ ಸಾಕ್ಷಿಯು ಶುಕ್ತಿರೂಪ್ಯವನ್ನು ಹೇಗೆ ಗ್ರಹಿಸುತ್ತದೆ? ಸಾಕ್ಷಿಗೆ ಪರಸಂಬಂಧಿಯಾದ ಸುಖಗ್ರಹಣವು ಸನ್ನಿಕರ್ಷವಿಲ್ಲದಿರುವ ಕಾರಣದಿಂದಲೇ ಇಲ್ಲವಷ್ಟೆ? ಸಾಕ್ಷಿಗೂ ಶುಕ್ತಿರೂಪ್ಯಕ್ಕೂ ಸನ್ನಿಕರ್ಷವಿಲ್ಲ, ಆದರೂ ಸಾಕ್ಷಿಯು ಗ್ರಹಿಸುತ್ತದೆ ಎಂದರೆ ದೋಷವೇ

ಸನ್ನಿಕರ್ಷಕಾರ್ಯವನ್ನು ಮಾಡುತ್ತದೆ ಮತ್ತು ಅತಿಪ್ರಸಂಗವನ್ನು ವಾರಣೆಮಾಡುತ್ತದೆ ಎಂದು ಒಪ್ಪಬೇಕು. ಇನ್ನು ಶುಕ್ತಿರೂಪ್ಯವು ಕೇವಲ ಅವಿದ್ಯಾಕಾರ್ಯವಾದುದರಿಂದ ಅದರ ಚಾಕ್ಷುಷ ಪ್ರತ್ಯಕ್ಷವೇ ಬರುವುದಿಲ್ಲ ಎಂದು ಅಪಲಾಪ ಮಾಡಲು ಸಾಧ್ಯವಿಲ್ಲ. ನಿನ್ನ ಮತದಲ್ಲಿ ಅಂಧಕಾರವು ಕೇವಲ ಅವಿದ್ಯೋಪಾದಾನಕವಾದರೂ ಅದರ ಚಾಕ್ಷುಷಪ್ರತ್ಯಕ್ಷವು ಬರುತ್ತದೆ. ಅದರಂತೆ ಶುಕ್ತಿರಜತದ ಚಾಕ್ಷುಷಪ್ರತ್ಯಕ್ಷವೂ ಬರುತ್ತದೆ. ಯಾರು ಶಶಕ್ಕೆ ಶೃಂಗವಿಲ್ಲವೆಂದು ತಿಳಿದಿಲ್ಲವೋ ಅವನು ದೂರದಿಂದ ಶಶದ ಕಿವಿಗಳನ್ನು ನೋಡಿ ಅದನ್ನು ಶೃಂಗಗಳೆಂದು ತಿಳಿಯುತ್ತಾನೆ. ಆಗ ಅಸತ್ತಿನ ಅಪರೋಕ್ಷಜ್ಞಾನವು ಬರುವುದಿಲ್ಲವೆ!

ಶಶಶೃಂಗವು ಪ್ರತೀತವಾದರೆ ಅದು ಪ್ರಾತಿಭಾಸಿಕವೇ ಆಗುತ್ತದೆ ಎಂದು ಹೇಳುವುದಾದರೆ ಯಾವುದರ ಪ್ರತೀತಿಯುಂಟಾದರೆ ಎಂದು ನಮ್ಮ ಪ್ರಶ್ನೆ. ಅಸತ್ತಿನ ಪ್ರತೀತಿಯು ಉಂಟಾದರೆ ಅದು ಪ್ರಾತಿಭಾಸಿಕವಾಗುತ್ತದೆ ಎಂದು ಉತ್ತರವನ್ನು ಹೇಳಬೇಕು. ಹಾಗಾದರೆ ಪ್ರತೀತವಾದದ್ದು ಅಸತ್ ಎಂದೇ ಆಗುತ್ತದೆ. ಪ್ರಾತಿಭಾಸಿಕವಾದದ್ದು ಪ್ರತೀತಿ ಸಮಯದಲ್ಲಿ ಮಾತ್ರ ಇರುವುದಷ್ಟೆ? ಆದ್ದರಿಂದ ಪ್ರಾತಿಭಾಸಿಕ ಎಂಬುದು ಅಸತ್ತಿಗೆ ಇನ್ನೊಂದು ಹೆಸರಾಯಿತು. ಪರೋಕ್ಷಭ್ರಮದಲ್ಲಿ ಅಸತ್ ಎಂದೇ ಅಂಗೀಕರಿಸಿದ ಶಶವಿಷಾಣವು ಅಪರೋಕ್ಷಭ್ರಮವು ಬಂದ ತಕ್ಷಣ ಅರ್ಥಾಭಾವಪ್ರಯುಕ್ತವಾದ ತನ್ನ ಅಸತ್ತ್ವವನ್ನು ಕಳೆದುಕೊಳ್ಳುವುದಿಲ್ಲವಷ್ಟೆ?

ಶುಕ್ತಿರಜತದಲ್ಲಿ ಸತ್ವಪ್ರತ್ಯಕ್ಷವನ್ನು ಭ್ರಾಂತಿ ಎಂದು ನೀನೂ ಒಪ್ಪುತ್ತೀಯೆ. ಭ್ರಾಂತಿ ಎಂದರೆ ತದಭಾವವತಿ ತತ್ಪ್ರಕಾರಕಜ್ಞಾನ. ಆದ್ದರಿಂದ ಪ್ರಕೃತದಲ್ಲಿ ಸತ್ತ್ವಾಭಾವವತಿ ಸತ್ತ್ವಪ್ರಕಾರಕ ಪ್ರತ್ಯಕ್ಷ ಎಂದಾಯಿತು. ಸತ್ತ್ವಾಭಾವವೇ ಅಸತ್ತ್ವವಷ್ಟೆ? ಆದ್ದರಿಂದ ಅಸತ್ತಿನ ಪ್ರತ್ಯಕ್ಷವನ್ನು ಹೇಗೆ ನಿರಾಕರಿಸುತ್ತೀಯೆ? ಶುಕ್ತಿರಜತವು ಅವಿದ್ಯೆಯ ಪರಿಣಾಮವಾದ್ದರಿಂದ ಅಸತ್ತೇ ಅಲ್ಲ ಎಂದು ಹೇಳುವುದಾದರೆ ಅದಕ್ಕೆ ನಾಸ್ತಿ ನಾಸೀತ್ ನ ಭವಿಷ್ಯತಿ ಎಂಬ ಬಾಧವನ್ನಾದರೂ ಹೇಗೆ ಒಪ್ಪುತ್ತೀಯೆ? ಮೊದಲು ಇಲ್ಲದೆ ವಿದ್ಯುದಾದಿಗಳಂತೆ ಆಗಲೇ ಉತ್ಪನ್ನವಾಗಿ ನಷ್ಟವಾಗುವುದಾದರೆ ಶುಕ್ತಿರಜತಜ್ಞಾನವನ್ನು ಪ್ರಮೆಯೆಂದೇ ಅಂಗೀಕರಿಸು. ಆದ್ದರಿಂದ ಶುಕ್ತಿರಜತವು ಅಸತ್ತಾದುದೇ. ಅದರ ಪ್ರತ್ಯಕ್ಷವು ಬರುತ್ತದೆ. ಆದ್ದರಿಂದ ಅಸತ್ತಿಗೂ ಅಪರೋಕ್ಷಪ್ರತೀತಿಯನ್ನು ಒಪ್ಪಬೇಕು.

ಇಷ್ಟೇ ಅಲ್ಲದೆ ವಿಶಿಷ್ಟಜ್ಞಾನಕ್ಕೆ ವಿಶೇಷಣ ಜ್ಞಾನಜನ್ಯತ್ವವನ್ನು ವಿಸ್ತಾರವಾಗಿ ನಿರಾಕರಣೆ ಮಾಡಿಯೂ ವಾದಿರಾಜರು ಅಸತ್ತಿನ ಅಪರೋಕ್ಷಪ್ರತೀತಿಯನ್ನು ಸಮರ್ಥಿಸುತ್ತಾರೆ.

## ಮಿಥ್ಯಾತ್ವಾನುಮಾನಕ್ಕೆ ಸತ್ತ್ವಪ್ರತ್ಯಕ್ಷಾದಿಬಾಧ :

ಘಟಃ ಸನ್, ಪಟಃ ಸನ್ ಇತ್ಯಾದಿ ಪ್ರತ್ಯಕ್ಷಗಳು ಸತ್ತ್ವವನ್ನೇ ಗ್ರಹಿಸುತ್ತವೆ. ಸತ್ತ್ವವೆಂದರೆ ಕಾಲತ್ರಯಾಬಾಧ್ಯತ್ವರೂಪವಾದುದು. ಆದ್ದರಿಂದ ಅಂತಹ ಪ್ರತ್ಯಕ್ಷದಿಂದ ನಿನ್ನ

ಪ್ರತಿಪಾದ್ಯವಸ್ತುವಿನ ಉಪಸ್ಥಿತಿಯುಂಟಾಗಬೇಕಾದರೆ ಪದಕ್ಕೆ ಆ ಅರ್ಥದಲ್ಲಿ ಶಕ್ತಿರೂಪಸಂಬಂಧವಾಗಲೀ ಲಕ್ಷಣಾರೂಪಸಂಬಂಧವಾಗಲೀ ಇರಬೇಕು. ಪದವು ತನ್ನಿಂದ ಅಸಂಬದ್ಧವಾದ ಅರ್ಥದ ಬೋಧವನ್ನಂತೂ ಉಂಟುಮಾಡುವುದಿಲ್ಲ. ವಾಕ್ಯವೂ ಅಸಂಬದ್ಧಾರ್ಥಬೋಧವನ್ನು ಉಂಟುಮಾಡುವುದಿಲ್ಲ ಪದಾರ್ಥಗಳ ಸಂಬಂಧವೇ ಯೋಗ್ಯತೆಯಷ್ಟೆ? ಯೋಗ್ಯತೆಯು ಶಾಬ್ದಬೋಧವನ್ನು ಕುರಿತು ಕಾರಣ. ಮುಖ್ಯಪ್ರಯೋಗದಲ್ಲಿ ಪದಾರ್ಥಗಳಿಗೆ ಸಾಕ್ಷಾತ್ ಸಂಬಂಧವಿರುತ್ತದೆ. ಅಮುಖ್ಯಪ್ರಯೋಗದಲ್ಲಿ ಪರಂಪರಾಸಂಬಂಧದಿಂದ ಅರ್ಥಬೋಧವುಂಟಾಗುತ್ತದೆ. ಆದ್ದರಿಂದ 'ಶಶವಿಷಾಣಂ' ಎಂಬ ಪದದಿಂದಲಾಗಲೀ 'ಶಶಸ್ಯ ವಿಷಾಣಂ' ಎಂಬ ವಾಕ್ಯದಿಂದಲಾಗಲೀ ಶಶವಿಷಾಣದ ಬೋಧವು ಬರುವುದಾದರೆ ಅದಕ್ಕೆ ಶಬ್ದದ ಸಂಬಂಧವಿರಬೇಕು. ಆದರೆ ಶಶವಿಷಾಣವು ಅಸತ್ತಾದುದರಿಂದ ಅದರಲ್ಲಿ ಯಾವ ಸಂಬಂಧವೂ ಇಲ್ಲ ಶಶ ಮತ್ತು ವಿಷಾಣಗಳಿಗೂ ಪರಸ್ಪರ ಸಂಬಂಧವಿಲ್ಲ. ಹೀಗಿರುವಾಗ ಶಶವಿಷಾಣದ ಬೋಧವು ಹೇಗೆ ಬರುತ್ತದೆ? ಆದರೂ ನೀವು ಒಪ್ಪುತ್ತೀರಿ. ದೋಷವಶದಿಂದ ಸಂಬಂಧವಿಲ್ಲದಿದ್ದರೂ ಬೋಧವು ಬರುವುದೆಂದು ಹೇಳಬೇಕು. ಹಾಗಾದರೆ ಅಪರೋಕ್ಷಸ್ಥಳದಲ್ಲಿಯೂ ದೋಷದ ಬಲದಿಂದಲೇ ಸನ್ನಿಕರ್ಷವಿಲ್ಲದಿದ್ದರೂ ಅಸತ್ತಾದ ಶುಕ್ತಿರಜತದ ಜ್ಞಾನವು ಬರುತ್ತದೆಂದು ಒಪ್ಪಿ. ಪ್ರತೀತಿಯನ್ನು ಒಪ್ಪಿದರೆ ಅದು ಅಸತ್ತೇ ಆಗುವುದಿಲ್ಲ ಎಂದು ಹೇಳುವುದು ಸರಿಯಲ್ಲ. ಪ್ರತೀತಿ ಬರದಿದ್ದಾಗ ಅಸತ್ತಾಗಿದ್ದ ಶಶವಿಷಾಣವು ಪ್ರತೀತಿಯು ಬಂದ ತಕ್ಷಣ ವ್ಯತ್ಯಾಸಗೊಂಡು ಅಸದ್ವಿಲಕ್ಷಣವಾಗುವುದಿಲ್ಲ. ಭೂತಲದಲ್ಲಿ ಘಟಾಭಾವಚಾಕ್ಷುಷ ಜ್ಞಾನವು ಬರುವಾಗ ಅಭಾವಾಂಶದಲ್ಲಿ ಘಟವು ಹೇಗೆ ವಿಶೇಷಣವಾಗಿ ತೋರುತ್ತದೆ? ಪ್ರತಿಯೋಗಿಗೆ ಅಲ್ಲಿ ಸನ್ನಿಕರ್ಷವಿಲ್ಲವಷ್ಟೆ? ಅಲ್ಲಿ ಪ್ರತಿಯೋಗಿಗೂ ಸನ್ನಿಕರ್ಷವಿದ್ದರೆ ಅಭಾವಜ್ಞಾನವೇ ಬರುವುದಿಲ್ಲ. ಅಲ್ಲಿ ಆದ್ದರಿಂದ ಅನಿವಾರ್ಯವಾಗಿ ಸನ್ನಿಕರ್ಷವಿಲ್ಲದಿದ್ದರೂ ಘಟದಜ್ಞಾನ ಬರುವಂತೆ ಶುಕ್ತಿರೂಪ್ಯಸ್ಥಳದಲ್ಲಿಯೂ ಸನ್ನಿಕರ್ಷವಿಲ್ಲದೆಯೇ ಜ್ಞಾನವುಂಟಾಗಲಿ. ಸನ್ನಿಕರ್ಷವಿಲ್ಲದೆ ರಜತಭ್ರಮವು ಉಂಟಾಗುವುದಾದರೆ ಅಲ್ಲಿ ರಜ್ಜುಸರ್ಪಭ್ರಮವು ಉಂಟಾಗಲಿ ಎಂಬ ಅತಿಪ್ರಸಂಗವನ್ನು ದೋಷವೇ ವಾರಣಮಾಡುತ್ತದೆ; ರಜತಭ್ರಮಕ್ಕೆ ಕಾರಣವಾದ ದೋಷವು ಬೇರೆ. ಸರ್ಪಭ್ರಮಕ್ಕೆ ಕಾರಣವಾದ ದೋಷವು ಬೇರೆ. ಸದ್ಯದಲ್ಲಿ ರಜತಭ್ರಮಕ್ಕೆ ಕಾರಣವಾದ ದೋಷವಿರುವುದರಿಂದ ರಜತಭ್ರಮವೇ ಬರುತ್ತದೆ. ಸರ್ಪಭ್ರಮವು ಬರುವುದಿಲ್ಲ ಎಂದು ಅಭಿಪ್ರಾಯ. **'ಅಸದೇವ ರಜತಂ ಪ್ರತ್ಯಭಾತ್'** ಎಂಬುದು ಎಲ್ಲರ ಅನುಭವ. ಆದ್ದರಿಂದ ಅಸತ್ತಿನ ಜೊತೆಯಲ್ಲಿ ಸನ್ನಿಕರ್ಷವಿಲ್ಲ. ಇಲ್ಲದಿದ್ದರೆ ನಿನ್ನ ಮತದಲ್ಲಾದರೂ ಸಾಕ್ಷಿಯು ಶುಕ್ತಿರೂಪ್ಯವನ್ನು ಹೇಗೆ ಗ್ರಹಿಸುತ್ತದೆ? ಸಾಕ್ಷಿಗೆ ಪರಸಂಬಂಧಿಯಾದ ಸುಖಗ್ರಹಣವು ಸನ್ನಿಕರ್ಷವಿಲ್ಲದಿರುವ ಕಾರಣದಿಂದಲೇ ಇಲ್ಲವಷ್ಟೆ? ಸಾಕ್ಷಿಗೂ ಶುಕ್ತಿರೂಪ್ಯಕ್ಕೂ ಸನ್ನಿಕರ್ಷವಿಲ್ಲ, ಆದರೂ ಸಾಕ್ಷಿಯು ಗ್ರಹಿಸುತ್ತದೆ ಎಂದರೆ ದೋಷವೇ

ಸನ್ನಿಕರ್ಷಕಾರ್ಯವನ್ನು ಮಾಡುತ್ತದೆ ಮತ್ತು ಅತಿಪ್ರಸಂಗವನ್ನು ವಾರಣೆಮಾಡುತ್ತದೆ ಎಂದು ಒಪ್ಪಬೇಕು. ಇನ್ನು ಶುಕ್ತಿರೂಪ್ಯವು ಕೇವಲ ಅವಿದ್ಯಾಕಾರ್ಯವಾದುದರಿಂದ ಅದರ ಚಾಕ್ಷುಷ ಪ್ರತ್ಯಕ್ಷವೇ ಬರುವುದಿಲ್ಲ ಎಂದು ಅಪಲಾಪ ಮಾಡಲು ಸಾಧ್ಯವಿಲ್ಲ. ನಿನ್ನ ಮತದಲ್ಲಿ ಅಂಧಕಾರವು ಕೇವಲ ಅವಿದ್ಯೋಪಾದಾನಕವಾದರೂ ಅದರ ಚಾಕ್ಷುಷಪ್ರತ್ಯಕ್ಷವು ಬರುತ್ತದೆ. ಅದರಂತೆ ಶುಕ್ತಿರಜತದ ಚಾಕ್ಷುಷಪ್ರತ್ಯಕ್ಷವೂ ಬರುತ್ತದೆ. ಯಾರು ಶಶಕ್ಕೆ ಶೃಂಗವಿಲ್ಲವೆಂದು ತಿಳಿದಿಲ್ಲವೋ ಅವನು ದೂರದಿಂದ ಶಶದ ಕಿವಿಗಳನ್ನು ನೋಡಿ ಅದನ್ನು ಶೃಂಗಗಳೆಂದು ತಿಳಿಯುತ್ತಾನೆ. ಆಗ ಅಸತ್ತಿನ ಅಪರೋಕ್ಷಜ್ಞಾನವು ಬರುವುದಿಲ್ಲವೆ!

ಶಶಶೃಂಗವು ಪ್ರತೀತವಾದರೆ ಅದು ಪ್ರಾತಿಭಾಸಿಕವೇ ಆಗುತ್ತದೆ ಎಂದು ಹೇಳುವುದಾದರೆ ಯಾವುದರ ಪ್ರತೀತಿಯುಂಟಾದರೆ ಎಂದು ನಮ್ಮ ಪ್ರಶ್ನೆ. ಅಸತ್ತಿನ ಪ್ರತೀತಿಯು ಉಂಟಾದರೆ ಅದು ಪ್ರಾತಿಭಾಸಿಕವಾಗುತ್ತದೆ ಎಂದು ಉತ್ತರವನ್ನು ಹೇಳಬೇಕು. ಹಾಗಾದರೆ ಪ್ರತೀತವಾದದ್ದು ಅಸತ್ ಎಂದೇ ಆಗುತ್ತದೆ. ಪ್ರಾತಿಭಾಸಿಕವಾದದ್ದು ಪ್ರತೀತಿ ಸಮಯದಲ್ಲಿ ಮಾತ್ರ ಇರುವುದಷ್ಟೆ? ಆದ್ದರಿಂದ ಪ್ರಾತಿಭಾಸಿಕ ಎಂಬುದು ಅಸತ್ತಿಗೆ ಇನ್ನೊಂದು ಹೆಸರಾಯಿತು. ಪರೋಕ್ಷಭ್ರಮದಲ್ಲಿ ಅಸತ್ ಎಂದೇ ಅಂಗೀಕರಿಸಿದ ಶಶವಿಷಾಣವು ಅಪರೋಕ್ಷಭ್ರಮವು ಬಂದ ತಕ್ಷಣ ಅರ್ಥಾಭಾವಪ್ರಯುಕ್ತವಾದ ತನ್ನ ಅಸತ್ತ್ವವನ್ನು ಕಳೆದುಕೊಳ್ಳುವುದಿಲ್ಲವಷ್ಟೆ?

ಶುಕ್ತಿರಜತದಲ್ಲಿ ಸತ್ವಪ್ರತ್ಯಕ್ಷವನ್ನು ಭ್ರಾಂತಿ ಎಂದು ನೀನೂ ಒಪ್ಪುತ್ತೀಯೆ. ಭ್ರಾಂತಿ ಎಂದರೆ ತದಭಾವವತಿ ತತ್ಪ್ರಕಾರಕಜ್ಞಾನ. ಆದ್ದರಿಂದ ಪ್ರಕೃತದಲ್ಲಿ ಸತ್ತ್ವಾಭಾವವತಿ ಸತ್ವಪ್ರಕಾರಕ ಪ್ರತ್ಯಕ್ಷ ಎಂದಾಯಿತು. ಸತ್ತ್ವಾಭಾವವೇ ಅಸತ್ವವಷ್ಟೆ? ಆದ್ದರಿಂದ ಅಸತ್ತಿನ ಪ್ರತ್ಯಕ್ಷವನ್ನು ಹೇಗೆ ನಿರಾಕರಿಸುತ್ತೀಯೆ? ಶುಕ್ತಿರಜತವು ಅವಿದ್ಯೆಯ ಪರಿಣಾಮವಾದ್ದರಿಂದ ಅಸತ್ತೇ ಅಲ್ಲ ಎಂದು ಹೇಳುವುದಾದರೆ ಅದಕ್ಕೆ ನಾಸ್ತಿ ನಾಸೀತ್ ನ ಭವಿಷ್ಯತಿ ಎಂಬ ಬಾಧವನ್ನಾದರೂ ಹೇಗೆ ಒಪ್ಪುತ್ತೀಯೆ? ಮೊದಲು ಇಲ್ಲದೆ ವಿದ್ಯುದಾದಿಗಳಂತೆ ಆಗಲೇ ಉತ್ಪನ್ನವಾಗಿ ನಷ್ಟವಾಗುವುದಾದರೆ ಶುಕ್ತಿರಜತಜ್ಞಾನವನ್ನು ಪ್ರಮೆಯೆಂದೇ ಅಂಗೀಕರಿಸು. ಆದ್ದರಿಂದ ಶುಕ್ತಿರಜತವು ಅಸತ್ತಾದುದೇ. ಅದರ ಪ್ರತ್ಯಕ್ಷವು ಬರುತ್ತದೆ. ಆದ್ದರಿಂದ ಅಸತ್ತಿಗೂ ಅಪರೋಕ್ಷಪ್ರತೀತಿಯನ್ನು ಒಪ್ಪಬೇಕು.

ಇಷ್ಟೇ ಅಲ್ಲದೆ ವಿಶಿಷ್ಟಜ್ಞಾನಕ್ಕೆ ವಿಶೇಷಣ ಜ್ಞಾನಜನ್ಯತ್ವವನ್ನು ವಿಸ್ತಾರವಾಗಿ ನಿರಾಕರಣೆ ಮಾಡಿಯೂ ವಾದಿರಾಜರು ಅಸತ್ತಿನ ಅಪರೋಕ್ಷಪ್ರತೀತಿಯನ್ನು ಸಮರ್ಥಿಸುತ್ತಾರೆ.

### ಮಿಥ್ಯಾತ್ವಾನುಮಾನಕ್ಕೆ ಸತ್ವಪ್ರತ್ಯಕ್ಷಾದಿಬಾಧ :

ಘಟಃ ಸನ್, ಪಟಃ ಸನ್ ಇತ್ಯಾದಿ ಪ್ರತ್ಯಕ್ಷಗಳು ಸತ್ವವನ್ನೇ ಗ್ರಹಿಸುತ್ತವೆ. ಸತ್ವವೆಂದರೆ ಕಾಲತ್ರಯಾಬಾಧ್ಯತ್ವರೂಪವಾದುದು. ಆದ್ದರಿಂದ ಅಂತಹ ಪ್ರತ್ಯಕ್ಷದಿಂದ ನಿನ್ನ

ದೃಶ್ಯತ್ವಾನುಮಾನಕ್ಕೆ ಬಾಧವು ಬರುತ್ತದೆ. ಸತ್ವವು ಕಾಲತ್ರಯಘಟಿತವಾದ ಸ್ವರೂಪವುಳ್ಳದ್ದಾಗಿದೆ. ಕಾಲವು ಚಕ್ಷುಸ್ಸಿಗೆ ಅಯೋಗ್ಯವಾದುದು. ಆದ್ದರಿಂದ ಚಾಕ್ಷುಷ ಪ್ರತ್ಯಕ್ಷದಲ್ಲಿ ಸತ್ವವು ವಿಷಯವಾಗಲಾರದು ಎಂಬ ಶಂಕೆಯು ಸರಿಯಲ್ಲ. ಚಕ್ಷುಸ್ಸಿಗೆ ಕಾಲವು ಅಯೋಗ್ಯವಾದರೂ ಸಾಕ್ಷಿಗೆ ಕಾಲವು ಯೋಗ್ಯವಾದುದರಿಂದ ಸಾಕ್ಷಿಯಿಂದ ಉಪನೀತವಾದಕಾಲವು, ಘ್ರಾಣದಿಂದ ಉಪನೀತವಾದ ಸೌರಭವು ಚಕ್ಷುಸ್ಸಿಗೆ ವಿಷಯವಾಗುವಂತೆ, ಚಕ್ಷುಸ್ಸಿಗೆ ವಿಷಯವಾಗುತ್ತದೆ ಎಂದು ಒಪ್ಪಬೇಕು. ಇಲ್ಲದಿದ್ದರೆ ಅಯಂ ಘಟಃ ಎಂಬ ಪ್ರತ್ಯಕ್ಷದಲ್ಲಿಯೂ 'ಅಯಂ' ಎಂದು ತೋರುವುದು ದೇಶಕಾಲಗಳ ಸಂಬಂಧ. ಇದರಲ್ಲಿ ಯಾವ ವಾದಿಗಳಿಗೂ ವಿಪ್ರತಿಪತ್ತಿ ಇಲ್ಲ. ಕಾಲವು ಚಕ್ಷುಸ್ಸಿಗೆ ಅಯೋಗ್ಯವಾದರೆ ವರ್ತಮಾನಕಾಲವಾದರೂ ಚಕ್ಷುಸ್ಸಿಗೆ ಹೇಗೆ ತೋರುತ್ತದೆ? ಆದ್ದರಿಂದ ವರ್ತಮಾನಕಾಲವು ತೋರಿದಂತೆ ಕಾಲತ್ರಯವೂ ಸಾಕ್ಷಿಯಿಂದ ಉಪನೀತವಾಗಿ ಚಕ್ಷುಸ್ಸಿಗೆ ತೋರುತ್ತದೆ. ಆದ್ದರಿಂದ ಕಾಲತ್ರಯಘಟಿತವಾದ ಸತ್ಯವು ಚಕ್ಷುಸ್ಸಿಗೆ ತೋರುತ್ತದೆ ಎಂದು ಒಪ್ಪಬೇಕು.

ಮತ್ತು ಮಿಥ್ಯಾತ್ವವೆಂದರೆ ನಾಸ್ತಿ ನಾಸೀತ್ ನ ಭವಿಷ್ಯತಿ ಎಂದು ತ್ರಿಕಾಲಬಾಧ್ಯತ್ವ ರೂಪವಾದುದು. ಸತ್ವ ಎಂದರೆ ಇದು ಬಾಧಸಾಮಾನ್ಯಾಭಾವರೂಪವಾದುದು. ಪ್ರತ್ಯಕ್ಷವು ವರ್ತಮಾನಕಾಲೀನಸತ್ವವನ್ನು ಗ್ರಹಿಸುತ್ತದೆ ಎಂದು ಒಪ್ಪಿದರೂ ಅದು ವರ್ತಮಾನಕಾಲೀನವಾದ ಅಬಾಧವಿಷಯಕವಾಯಿತು. ಬಾಧಸಾಮಾನ್ಯಾಭಾವವನ್ನು ಕುರಿತು ಭೂತಕಾಲಿನ ಅಬಾಧ, ವರ್ತಮಾನಕಾಲೀನ ಅಬಾಧ ಮತ್ತು ಭವಿಷ್ಯತ್ ಕಾಲಿನ ಅಬಾಧ ಮೂರೂ ಪ್ರತಿಯೋಗಿಗಳು. ಪ್ರತಿಯೋಗಿ ಮತ್ತು ಅಭಾವಗಳಿಗೆ ವಿರೋಧವಿದ್ದೇ ಇದೆ. ಆದ್ದರಿಂದ ಪ್ರತಿಯೋಗಿ ವಿಶೇಷದ ಜ್ಞಾನವು ಇರುವಾಗ ಸಾಮಾನ್ಯಾಭಾವಜ್ಞಾನವು ಬರುವುದಿಲ್ಲವೆಂದು ಸರ್ವಸಮ್ಮತ. ರಕ್ತಘಟವಿರುವ ಸ್ಥಳದಲ್ಲಿ ಘಟಸಾಮಾನ್ಯಾಭಾವಜ್ಞಾನವು ಬರುವುದಿಲ್ಲವಷ್ಟೆ? ಆದ್ದರಿಂದ ವರ್ತಮಾನಕಾಲೀನ ಅಬಾಧವನ್ನು ಗ್ರಹಿಸುವ ಚಕ್ಷುಸ್ಸು ಕಾಲತ್ರಯವೃತ್ತಿಬಾಧಕ್ಕೆ ನೇರವಾಗಿ ವಿರೋಧಿಯಾಗುವುದರಿಂದ ಅಂತಹ ಪ್ರತ್ಯಕ್ಷಬಾಧವು ನಿಮ್ಮ ಅನುಮಾನಕ್ಕೆ ಬಂದೇ ಬರುತ್ತದೆ.

ಅಲ್ಲದೆ ನೀನು 'ಘಟಃ ಸನ್', 'ಪಟಃ ಸನ್' ಮೊದಲಾದ ಚಾಕ್ಷುಷಪ್ರತ್ಯಕ್ಷದಲ್ಲಿ ಅಧಿಷ್ಠಾನನಾದ ಬ್ರಹ್ಮನಲ್ಲಿರುವ ಸತ್ವವೇ ಘಟದಲ್ಲಿ ತೋರುತ್ತದೆ ಎಂದು ಹೇಳುತ್ತೀಯೆ. ಏಕೆಂದರೆ ನಿನ್ನ ಮತದಲ್ಲಿ ಇವೆಲ್ಲಾ ಭ್ರಮಗಳಾಗಿರುವುದರಿಂದ ಭ್ರಮದಲ್ಲಿ ಅಧಿಷ್ಠಾನಾನುವೇಧವು ಅವಶ್ಯವಾಗಿ ಅಪೇಕ್ಷಿತವಾದ್ದರಿಂದ ಸತ್ವಪ್ರತೀತಿಯೇ ಅಧಿಷ್ಠಾನಾನುವೇಧ ಎಂದು ಹೇಳುತ್ತೀಯೆ. ಬ್ರಹ್ಮಗತಸತ್ವವಾದರೂ ತ್ರಿಕಾಲಾಬಾಧ್ಯತ್ವ ರೂಪವಾದುದೇ. ಆದ್ದರಿಂದ ಚಾಕ್ಷುಷಪ್ರತ್ಯಕ್ಷದಲ್ಲಿ ಸತ್ವವು ತೋರುವುದಿಲ್ಲ ಎಂದು ಹೇಗೆ ಹೇಳುತ್ತೀಯೆ! ಆದ್ದರಿಂದ ಚಾಕ್ಷುಷಪ್ರತ್ಯಕ್ಷದಲ್ಲಿ ಸತ್ವವು ತೋರುವುದೆಂದು ನನಗೂ ನಿನಗೂ ಸಮ್ಮತವಾದುದು. ವ್ಯತ್ಯಾಸವು ಇಷ್ಟೇ. ನೀನು ಆ ಸತ್ವವು ಬ್ರಹ್ಮನಲ್ಲಿರುವ ಸತ್ವ ಎಂದು ಹೇಳುತ್ತೀಯೆ, ನಾನು

ಘಟದಲ್ಲಿಯೇ ಇದೆ ಹೇಳುತ್ತೇನೆ. ಹೊರತಾಗಿ ಸತ್ವಗ್ರಹಣ ವಿಷಯದಲ್ಲಂತೂ ವಿವಾದವನ್ನು ಮಾಡಬಾರದು.

ಕೇವಲ ಚಕ್ಷುಸ್ಸಿಗೆ ಕಾರಣತ್ವಗ್ರಹಣದಲ್ಲಿ ಸಾಮರ್ಥ್ಯವಿಲ್ಲದಿದ್ದರೂ ಅನ್ವಯವ್ಯತಿರೇಕ ಸಹಕೃತವಾದ ಚಕ್ಷುಸ್ಸು ಕಾರಣತ್ವವನ್ನು ಗ್ರಹಿಸುವಂತೆ ದೋಷಾಭಾವರೂಪಯುಕ್ತಿ ಸಹಕೃತವಾದ ಚಕ್ಷುಸ್ಸು ತ್ರಿಕಾಲಾಬಾಧ್ಯತ್ವರೂಪವಾದ ಸತ್ಯತ್ವವನ್ನೇ ವಿಷಯೀಕರಿಸುತ್ತದೆ. ಅದನ್ನು ಅಂಗೀಕರಿಸಿದರೆ 'ಘಟಃ ಸನ್' ಎಂಬಲ್ಲಿ ಬ್ರಹ್ಮಗತವಾದ ಸತ್ವವೇ ಘಟದಲ್ಲಿ ತೋರುತ್ತದೆ ಎಂದು ಅಂಗೀಕರಿಸಬೇಕಾದೀತು. ನೀನು ನೋಡಿದುದು ಅಸತ್ಯವಾದುದು ಎಂದು ಲೌಕಿಕರನ್ನು ಆಕ್ಷೇಪಿಸಿದರೆ, ನಾನು ಸತ್ಯವಾದುದನ್ನೇ ನೋಡಿದ್ದೇನೆ ಎಂದು ಆಗ್ರಹಪೂರ್ವಕವಾಗಿ ಉತ್ತರವನ್ನು ಕೊಡುತ್ತಾರೆ. ಹೀಗಿರುವಾಗ ಸತ್ವವು ಹೇಗೆ ಅನ್ಯಗತವಾಗುತ್ತದೆ? ಬ್ರಹ್ಮನು ಚಕ್ಷುಸ್ಸಿಗೆ ಯೋಗ್ಯವಲ್ಲವಾದ್ದರಿಂದ ಬ್ರಹ್ಮನಸತ್ವವು ಹೇಗೆ ಚಕ್ಷುಸ್ಸಿಗೆ ಯೋಗ್ಯವಾಗುತ್ತದೆ? ಪಿಶಾಚಿಯ ಸತ್ವವು ಎಂದಾದರೂ ಚಕ್ಷುಸ್ಸಿಗೆ ವಿಷಯವಾಗುತ್ತದೆಯೆ?

**'ಘಟೋ ಭೂತಲೇ ಸನ್ ನ ವ್ಯೋಮ್ನಿ'** (ಘಟವು ಭೂತಲದಲ್ಲಿ ಇದೆ, ಆಕಾಶದಲ್ಲಿಲ್ಲ) **'ಘಟರೂಪಂ ಘಟೇಸತ್ ನ ವ್ಯೋಮ್ನಿ'** (ಘಟರೂಪವು ಘಟದಲ್ಲಿದೆ, ಆಕಾಶದಲ್ಲಿಲ್ಲ) ಎಂಬ ಈ ಎರಡು ಪ್ರತೀತಿಗಳಲ್ಲಿ ಭೂತಲಾಧಿಕರಣದಲ್ಲಿ ಮತ್ತು ಘಟಾಧಿಕರಣದಲ್ಲಿ ತೋರುವ ಸತ್ ಪದಾರ್ಥವು ನಿನ್ನ ರೀತ್ಯಾಬ್ರಹ್ಮನಲ್ಲ. ಏಕೆಂದರೆ ಬ್ರಹ್ಮನು ಅವೃತ್ತಿ (ಎಲ್ಲಿಯೂ ಇಲ್ಲದಿರುವ) ಪದಾರ್ಥ. ನಿನ್ನ ಮತದಂತೆಯೇ ಅಧಿಷ್ಠಾನ ಮತ್ತು ಅಧ್ಯಸ್ತ ಎರಡಕ್ಕೂ ಸತ್ವವು ಕೂಡುವುದಿಲ್ಲವಾದ್ದರಿಂದ ಅಲ್ಲಿ ಆಧೇಯವಾದ ಸತ್ ಪದಾರ್ಥಕ್ಕೇ (ಬ್ರಹ್ಮನಿಗೇ) ಅಸತ್ವವನ್ನು ಹೇಳಬೇಕಾದ ಪ್ರಸಂಗವು ಬರುತ್ತದೆ. ಆದ್ದರಿಂದ ಒಂದು ಪ್ರತೀತಿಯಲ್ಲಿ ಘಟಕ್ಕೆ ಮತ್ತು ಇನ್ನೊಂದು ಪ್ರತೀತಿಯಲ್ಲಿ ರೂಪಕ್ಕೆ ಅಸತ್ವವು ತೋರುತ್ತದೆ ಎಂದು ಹೇಳಬೇಕು. ಬ್ರಹ್ಮನಲ್ಲಂತೂ ಅಸತ್ವವಿಲ್ಲವಷ್ಟೆ? ಆದ್ದರಿಂದ ಏಕಕರ್ತೃಕವಾಕ್ಯವಾದ್ದರಿಂದ ಘಟ, ರೂಪಗಳಿಗೇ ಆ ಸತ್ವವನ್ನು ಒಪ್ಪಬೇಕು. ಘಟಭೂತಲಗಳು ಅಧಿಕರಣತಯಾ ಸ್ಪಷ್ಟವಾಗಿ ತೋರುವುದರಿಂದ ಇಲ್ಲಿ ಅಧಿಷ್ಠಾನ-ಆರೋಪಗಳ ಪ್ರಸಕ್ತಿ ಇಲ್ಲ. ಆದ್ದರಿಂದ ಸತ್ವವು ಘಟಾದಿಗತವೆಂದೇ ಸಿದ್ಧವಾಗುತ್ತದೆ. ಹೀಗೆ ಮತ್ತು ಇನ್ನೂ ಅನೇಕ ರೀತಿಯಲ್ಲಿ ಪ್ರತ್ಯಕ್ಷದ ಪ್ರಾಬಲ್ಯವನ್ನು ಉಪಪಾದನೆ ಮಾಡಿ ಜಗತ್ಸತ್ಯತ್ವಪ್ರತ್ಯಕ್ಷವು ಎಂದೂ ಬಾಧಿತವಾಗುವುದಿಲ್ಲ. ಅದೇ ದೃಶ್ಯತ್ವಾದಿ ಅನುಮಾನಗಳಿಗೆ ಮತ್ತು ಐಕ್ಯವಾಕ್ಯಗಳಿಗೆ ಬಾಧಕವಾಗುತ್ತದೆ ಎಂದೂ ಉಪಪಾದನೆ ಮಾಡುತ್ತಾರೆ.

### ಸತ್ಯವಾದ ವಸ್ತುವಿಗೇ ಅರ್ಥಕ್ರಿಯಾಕಾರಿತ್ವ :

ಮಿಥ್ಯಾಭೂತವಾದುದು ಅರ್ಥಕ್ರಿಯಾಕಾರಿ ಎಂಬುದು ವ್ಯಾಹತವಾದ ಮಾತು. ಸೂತ್ರಕಾರರು **'ನಾಸತಃ ಅದೃಷ್ಟತ್ವಾತ್'** ಎಂಬ ಸೂತ್ರದಲ್ಲಿ ಅಸತ್ತಿಗೆ ಅರ್ಥಕ್ರಿಯಾಕಾರಿತ್ವವಿಲ್ಲ

ಎಂದು ಸ್ಪಷ್ಟವಾಗಿ ಹೇಳಿದ್ದಾರೆ. ಮಿಥ್ಯಾತ್ವವೆಂದರೆ ನಾಸೀದಸ್ತಿಭವಿಷ್ಯತಿ ಎಂಬ ಬಾಧಕ್ಕೆ ವಿಷಯತ್ವ ಎಂದಾಗುವುದರಿಂದ ಅದು ಅಸತ್ವದಲ್ಲಿಯೇ ಪರ್ಯವಸಾನವನ್ನು ಹೊಂದುತ್ತದೆ. ಶ್ರುತಿಯೂ ಸಹ 'ಕಥಮಸತಃ ಸಜ್ಜಾಯೇತ' ಎಂದು ಅಸತ್ತಿಗೆ ಅರ್ಥಕ್ರಿಯಾಕಾರಿತ್ವವನ್ನು ಆಕ್ಷೇಪಮಾಡಿದೆ. ನಿನ್ನ ರೀತಿಯಲ್ಲಿಯೇ ಚೈತನ್ಯವು ಅಜ್ಞಾನಸಾಕ್ಷಿಯಾಗಿರುವುದರಿಂದ ಸತ್ಯವಾದ ಚೈತನ್ಯಕ್ಕೇ ಅರ್ಥಕ್ರಿಯಾಕಾರಿತ್ವವು ಸಿದ್ಧವಾಗುತ್ತದೆ. ಮತ್ತು ಅಜ್ಞಾನಾರೋಪಕ್ಕೆ ಅಧಿಷ್ಠಾನಪ್ರಕಾಶವು ಕಾರಣವಷ್ಟೆ? ಆ ಅಧಿಷ್ಠಾನಪ್ರಕಾಶವಾದರೂ ಅಧಿಷ್ಠಾನಚೈತನ್ಯರೂಪವೇ ಆಗಿದೆ. ಅಜ್ಞಾನಾಧಾರತ್ವವು ಸಹ ಶುದ್ಧಚೈತನ್ಯದಲ್ಲಿಯೇ ಇದೆ. ನೀನು ಸ್ವಪ್ರಕಾಶತ್ವವೆಂದರೆ ಅವೇದ್ಯತ್ವೇ ಸತಿ ಅಪರೋಕ್ಷವ್ಯವಹಾರಯೋಗ್ಯತ್ವಂ ಎಂದು ಹೇಳುತ್ತೀಯೆ. ಅಪರೋಕ್ಷ ವ್ಯವಹಾರಕಾರಣತ್ವಂ ಎಂದು ಏಕೆ ಹೇಳುವುದಿಲ್ಲ ಎಂದು ಕೇಳಿದರೆ ಸಂಸಾರಾವಸ್ಥೆಯಲ್ಲಿ ವ್ಯವಹಾರವಿದ್ದರೂ ಮುಕ್ತಿಯಲ್ಲಿ ವ್ಯವಹಾರವಿಲ್ಲದಿರುವುದರಿಂದ ವ್ಯವಹಾರಕಾರಣತ್ವವು ಬರುವುದಿಲ್ಲ ಅದಕ್ಕಾಗಿ ವ್ಯವಹಾರಯೋಗ್ಯತ್ವಂ ಎಂದು ಹೇಳುತ್ತೇವೆ ಎಂದು ನಿಮ್ಮ ಉತ್ತರ. ಹಾಗಾದರೆ ಶುದ್ಧಚೈತನ್ಯಕ್ಕೂ ವ್ಯವಹಾರರೂಪವಾದ ಅರ್ಥಕ್ರಿಯೆಯ ಸಾಧನತ್ವವನ್ನು ಒಪ್ಪಿದಂತಾಯಿತು. ಆದ್ದರಿಂದ ಸತ್ಯವಾದುದಕ್ಕೇ ಅರ್ಥಕ್ರಿಯಾಕಾರಿತ್ವ ಇರುವುದು. ರಜ್ಜುವು ತನಗೆ ಯೋಗ್ಯವಾದ ಅರ್ಥಕ್ರಿಯೆಗೆ ಕಾರಣವಾಗಿದೆ. ಅದರಲ್ಲಿ ಆರೋಪಿತವಾದ ಸರ್ಪದಿಂದ ಸರ್ಪಕ್ಕೆ ಯೋಗ್ಯವಾದ ಚಲನೆ, ದಂಶನ ಮೊದಲಾದ ಯಾವ ಅರ್ಥಕ್ರಿಯೆಯೂ ಉಂಟಾಗುವುದಿಲ್ಲ. ಹಾಗೆಯೇ ಶುಕ್ತಿಯಿಂದ ಅದಕ್ಕೆ ಯೋಗ್ಯವಾದ ಕ್ರಿಯೆಯು ನಡೆಯುತ್ತದೆ. ಅದರಲ್ಲಿ ಆರೋಪಿತವಾದ ರಜತದಿಂದ ಕಟಕಮುಕುಟಾದಿ ಯಾವ ಅರ್ಥಕ್ರಿಯೆಯೂ ಉಂಟಾಗುವುದಿಲ್ಲ. ಇದರಿಂದ ಎಲ್ಲಿ ಸತ್ವವು ಅಧಿಕವಾಗಿದೆಯೋ ಅಲ್ಲಿ ಅರ್ಥಕ್ರಿಯಾಕಾರಿತ್ವವು ಅಧಿಕವಾಗಿದೆ ಎಂದು ತಿಳಿಯುತ್ತದೆ. ಶುದ್ಧಚೈತನ್ಯದಲ್ಲಿರುವ ಪಾರಮಾರ್ಥಿಕಸತ್ವವು ಸರ್ವೋತ್ಕೃಷ್ಟ ಸತ್ವವಾಗಿರುವುದರಿಂದ ಅದರಿಂದ ಅರ್ಥಕ್ರಿಯೆಯು ಉಂಟಾಗಲೇಬೇಕು. ರಜ್ಜುಸರ್ಪಾದಿಗಳಿಂದ ಭಯಕಂಪಾದಿರೂಪವಾದ ಅರ್ಥಕ್ರಿಯೆಯು ಉಂಟಾಗುವುದಿಲ್ಲ. ಭಯಕಂಪಾದಿಗಳು ಸರ್ಪಜ್ಞಾನಕಾರ್ಯ. ಆ ಜ್ಞಾನವಾದರೂ ರಜ್ಜುಸರ್ಪಸ್ಥಳದಲ್ಲಿಯೂ ಸತ್ಯವೇ ಆಗಿದೆ.

ವಿಶ್ವವು ಪ್ರಮಾಣದೃಷ್ಟವಾದುದರಿಂದಲೂ ಸತ್ಯವೆಂದು ಸಿದ್ಧವಾಗುತ್ತದೆ. ಪ್ರಮಾಣದೃಷ್ಟವಾಗಿದೆ ಮತ್ತು ಮಿಥ್ಯಾಭೂತವಾಗಿದೆ ಎಂಬುದು ವ್ಯಾಹತವಾದದ್ದು. ಸ್ವತಃ-ಪ್ರಾಮಾಣ್ಯವಾದಿಯಾದ ನೀನೂ ಸಹ ಪ್ರತ್ಯಕ್ಷಕ್ಕೆ ಪ್ರಾಮಾಣ್ಯವನ್ನು ಒಪ್ಪುತ್ತೀಯಷ್ಟೆ. ವ್ಯಾವಹಾರಿಕಪ್ರಾಮಾಣ್ಯ ಎಂಬ ವಾದವನ್ನು ಹಿಂದೆಯೇ ನಿರಾಕರಿಸಲಾಗಿದೆ. ಇನ್ನು ಅನುಮಾನ, ಆಗಮಗಳು ಪ್ರತ್ಯಕ್ಷಕ್ಕಿಂತ ದುರ್ಬಲವಾದವುಗಳು. ಏಕೆಂದರೆ ಪ್ರತ್ಯಕ್ಷವು ಅವುಗಳಿಗೆ ಉಪಜೀವ್ಯವಾದುದು. ಅನುಮಾನಾಗಮಗಳು ಉಪಜೀವಕವಾದವುಗಳು. ಉಪಜೀವ್ಯೋಪಜೀವಕಗಳಲ್ಲಿ ಉಪಜೀವ್ಯವೇ ಪ್ರಬಲವಾದುದು. ಆದ್ದರಿಂದ

ಮಿಥ್ಯಾತ್ವಾನುಮಾನದಿಂದ ಅಥವಾ ಮಿಥ್ಯಾತ್ವಶ್ರುತಿಯಿಂದ ವಿಶ್ವಪ್ರತ್ಯಕ್ಷಕ್ಕೆ ಎಂದೂ ಬಾಧವು ಬರಲು ಸಾಧ್ಯವಿಲ್ಲ. ಹಾಗೆ ಅನುಮಾನಾಗಮಗಳೇ ಪ್ರತ್ಯಕ್ಷವನ್ನು ಬಾಧಿಸುವುದಾದರೆ ಅಗ್ನಿಶೈತ್ಯಾನುಮಾನವು ಅಗ್ನಿಯು ಉಷ್ಣ ಎಂಬ ಪ್ರತ್ಯಕ್ಷಕ್ಕೆ ಬಾಧಕವಾಗಬೇಕಾದೀತು. ಹಾಗೆಯೇ 'ಯಜಮಾನಃ ಪ್ರಸ್ತರಃ' ಎಂಬ ವಾಕ್ಯದಲ್ಲಿಯೂ ಲಕ್ಷಣಾವೃತ್ತಿಯನ್ನು ಆಶ್ರಯಿಸಬೇಕಾದ ಪ್ರಸಂಗವಿರುತ್ತಿರಲಿಲ್ಲ. ನೀನಾದರೂ 'ತತ್ತ್ವಮಸಿ' ವಾಕ್ಯದಲ್ಲಿ ಪ್ರತ್ಯಕ್ಷವಿರೋಧದ ಭಯದಿಂದಲೇ ಜಹದಜಹಲ್ಲಕ್ಷಣಾವೃತ್ತಿಯನ್ನು ಅನುಸರಿಸಿ ಸರ್ವಜ್ಞತ್ವ, ಅಲ್ಪಜ್ಞತ್ವ ಮೊದಲಾದ ವಿರುದ್ಧ ಧರ್ಮಗಳನ್ನು ಬಿಟ್ಟು ಕೇವಲ ಚೈತನ್ಯಕ್ಕೆ ಐಕ್ಯವನ್ನು ಹೇಳುತ್ತೀಯೆ. ಪ್ರತ್ಯಕ್ಷವೇ ಬಾಧಿತವಾಗುವುದಾದರೆ 'ತತ್ತ್ವಮಸಿ' ವಾಕ್ಯವು ಸರ್ವಜ್ಞತ್ವವಿಶಿಷ್ಟಚೈತನ್ಯಕ್ಕೂ ಅಲ್ಪಜ್ಞತ್ವವಿಶಿಷ್ಟಚೈತನ್ಯಕ್ಕೂ ಅಭೇದವನ್ನು ಹೇಳುತ್ತದೆ ಎಂದೇ ಅಂಗೀಕರಿಸು. ಪ್ರತ್ಯಕ್ಷವಿರೋಧದ ಭಯವಿಲ್ಲವಷ್ಟೆ? ಆದ್ದರಿಂದ ಪ್ರತ್ಯಕ್ಷಾದಿಪ್ರಮಾಣದೃಷ್ಟವಾದ ಜಗತ್ತು ಸತ್ಯವೆಂದೇ ಸಿದ್ಧವಾಗುತ್ತದೆ.

## ದೃಶ್ಯತ್ವಾದಿಹೇತುಗಳು ಅಪ್ರಯೋಜಕ :

ಮಿಥ್ಯಾತ್ವವನ್ನು ಸಾಧಿಸಲು ದೃಶ್ಯತ್ವ, ಜಡತ್ವ, ಪರಿಚ್ಛಿನ್ನತ್ವ ಮೊದಲಾದವುಗಳನ್ನು ಹೇತುವನ್ನಾಗಿ ಮಾಡಿದ್ದೀಯೆ. ಇಲ್ಲಿ ಹೇತುವು ಇರಲಿ ಸಾಧ್ಯವು ಬೇಡ ಎಂಬ ಅಪ್ರಯೋಜಕತ್ವಶಂಕೆಯನ್ನು ಮಾಡಿದರೆ ಏನು ಬಾಧಕತರ್ಕವನ್ನು ಹೇಳುತ್ತೀಯೆ? ದೃಶ್ಯತ್ವವೆಂದರೆ ದರ್ಶನಯೋಗ್ಯತ್ವ. ಅದು ನಿರುಪಾಖ್ಯತ್ವ (ಜ್ಞಾನಾವಿಷಯತ್ವ)ವನ್ನು ನಿರಾಕರಿಸಬಹುದು. ಹಾಗೆಯೇ ಜಡತ್ವ ಎಂದರೆ ಜ್ಞಾನಶೂನ್ಯತ್ವ. ಅದು ತನಗೆ ವಿರುದ್ಧವಾದ ಜ್ಞಾತೃತ್ವವನ್ನು ನಿರಾಕರಿಸಬಹುದು. ಪರಿಚ್ಛಿನ್ನತ್ವವೆಂದರೆ ದೇಶದಿಂದ, ಕಾಲದಿಂದ ಮತ್ತು ಗುಣಗಳಿಂದ ಅವಧಿಯಿಂದ ಕೂಡಿರುವುದು. ಅದು ಕ್ರಮವಾಗಿ ಸರ್ವದೇಶವ್ಯಾಪ್ತಿಯನ್ನೂ, ನಿತ್ಯತ್ವವನ್ನೂ, ಅನಂತಗುಣಪೂರ್ಣತ್ವವನ್ನೂ ನಿರಾಕರಿಸಬಹುದು. ಸತ್ಯತ್ವವನ್ನು ಏಕೆ ನಿರಾಕರಿಸುತ್ತವೆ? ಘಟವು ಇದೆಯೋ ಇಲ್ಲವೋ ಎಂದು ಕೇಳಿದರೆ ಆ ವಾಕ್ಯವನ್ನು ಕೇಳಿದ ವ್ಯಕ್ತಿಯು ನೋಡಿ ಹೇಳುತ್ತೇನೆ ಎಂದು ಹೇಳಿ ಒಳಗೆ ಹೋಗಿ ಘಟವನ್ನು ನೋಡಿದರೆ ಅದು ಇದೆಯೆಂದೂ ನೋಡದಿದ್ದರೆ ಇಲ್ಲವೆಂದೂ ಹೇಳುತ್ತಾನೆ. ಇದೆ ಎಂದರೂ ವಿದ್ಯಮಾನವೆಂದರೂ ಸತ್ಯವೆಂದರೂ ಒಂದೇ ಅರ್ಥ. ಆದ್ದರಿಂದ ಘಟಕ್ಕೆ ದೃಶ್ಯತ್ವವಿದ್ದರೆ ಅದು ಸತ್ಯವೆಂದೂ, ಇಲ್ಲದಿದ್ದರೆ ಅಸತ್ಯವೆಂದೂ ಹೇಳುತ್ತಾನೆ. ಆದ್ದರಿಂದ ಲೋಕಮರ್ಯಾದೆಯನ್ನು ಅನುಸರಿಸುವ ಕಾಂತ್ರಿಕನು ದೃಶ್ಯತ್ವವನ್ನು ಸತ್ಯತ್ವಕ್ಕೆ ಹೇತುವನ್ನಾಗಿ ಮಾಡಬೇಕೇ ಹೊರತು ಮಿಥ್ಯಾತ್ವಕ್ಕೆ ಹೇತುವನ್ನಾಗಿ ಮಾಡಬಾರದು.

ಹಾಗಾದರೆ 'ಇದಂ ರಜತಂ' ಎಂದು ಶುಕ್ತಿರಜತಕ್ಕೂ ದೃಶ್ಯತ್ವವಿರುವುದರಿಂದ ಅದರಿಂದ ಸತ್ಯತ್ವವನ್ನು ಸಾಧನೆ ಮಾಡಿದರೆ ಹೇತುವು ವಿರುದ್ಧವಾಗುವುದಷ್ಟೆ ಎಂಬ ಶಂಕೆಯು ಸರಿಯಲ್ಲ. ಏಕೆಂದರೆ ಶುಕ್ತಿರಜತದಲ್ಲಿ ದರ್ಶನಯೋಗ್ಯತ್ವವೇ ಇಲ್ಲ. ಹೇಗೆಂದರೆ 'ಸುರಭಿ

ಎಂದು ಸ್ಪಷ್ಟವಾಗಿ ಹೇಳಿದ್ದಾರೆ. ಮಿಥ್ಯಾತ್ವವೆಂದರೆ ನಾಸೀದಸ್ತಿಭವಿಷ್ಯತಿ ಎಂಬ ಬಾಧಕ್ಕೆ ವಿಷಯತ್ವ ಎಂದಾಗುವುದರಿಂದ ಅದು ಅಸತ್ವದಲ್ಲಿಯೇ ಪರ್ಯವಸಾನವನ್ನು ಹೊಂದುತ್ತದೆ. ಶ್ರುತಿಯೂ ಸಹ 'ಕಥಮಸತಃ ಸಜ್ಜಾಯೇತ' ಎಂದು ಅಸತ್ತಿಗೆ ಅರ್ಥಕ್ರಿಯಾಕಾರಿತ್ವವನ್ನು ಆಕ್ಷೇಪಮಾಡಿದೆ. ನಿನ್ನ ರೀತಿಯಲ್ಲಿಯೇ ಚೈತನ್ಯವು ಅಜ್ಞಾನಸಾಕ್ಷಿಯಾಗಿರುವುದರಿಂದ ಸತ್ಯವಾದ ಚೈತನ್ಯಕ್ಕೇ ಅರ್ಥಕ್ರಿಯಾಕಾರಿತ್ವವು ಸಿದ್ಧವಾಗುತ್ತದೆ. ಮತ್ತು ಅಜ್ಞಾನಾರೋಪಕ್ಕೆ ಅಧಿಷ್ಠಾನಪ್ರಕಾಶವು ಕಾರಣವಷ್ಟೆ? ಆ ಅಧಿಷ್ಠಾನಪ್ರಕಾಶವಾದರೂ ಅಧಿಷ್ಠಾನಚೈತನ್ಯರೂಪವೇ ಆಗಿದೆ. ಅಜ್ಞಾನಾಧಾರತ್ವವು ಸಹ ಶುದ್ಧಚೈತನ್ಯದಲ್ಲಿಯೇ ಇದೆ. ನೀನು ಸ್ವಪ್ರಕಾಶತ್ವವೆಂದರೆ ಅವೇದ್ಯತ್ವೇ ಸತಿ ಅಪರೋಕ್ಷವ್ಯವಹಾರಯೋಗ್ಯತ್ವಂ ಎಂದು ಹೇಳುತ್ತೀಯೆ. ಅಪರೋಕ್ಷ ವ್ಯವಹಾರಕಾರಣತ್ವಂ ಎಂದು ಏಕೆ ಹೇಳುವುದಿಲ್ಲ ಎಂದು ಕೇಳಿದರೆ ಸಂಸಾರಾವಸ್ಥೆಯಲ್ಲಿ ವ್ಯವಹಾರವಿದ್ದರೂ ಮುಕ್ತಿಯಲ್ಲಿ ವ್ಯವಹಾರವಿಲ್ಲದಿರುವುದರಿಂದ ವ್ಯವಹಾರಕಾರಣತ್ವವು ಬರುವುದಿಲ್ಲ ಅದಕ್ಕಾಗಿ ವ್ಯವಹಾರಯೋಗ್ಯತ್ವಂ ಎಂದು ಹೇಳುತ್ತೇವೆ ಎಂದು ನಿಮ್ಮ ಉತ್ತರ. ಹಾಗಾದರೆ ಶುದ್ಧಚೈತನ್ಯಕ್ಕೂ ವ್ಯವಹಾರರೂಪವಾದ ಅರ್ಥಕ್ರಿಯಿಯ ಸಾಧನತ್ವವನ್ನು ಒಪ್ಪಿದಂತಾಯಿತು. ಆದ್ದರಿಂದ ಸತ್ಯವಾದುದಕ್ಕೇ ಅರ್ಥಕ್ರಿಯಾಕಾರಿತ್ವ ಇರುವುದು. ರಜ್ಜುವು ತನಗೆ ಯೋಗ್ಯವಾದ ಅರ್ಥಕ್ರಿಯೆಗೆ ಕಾರಣವಾಗಿದೆ. ಅದರಲ್ಲಿ ಆರೋಪಿತವಾದ ಸರ್ಪದಿಂದ ಸರ್ಪಕ್ಕೆ ಯೋಗ್ಯವಾದ ಚಲನೆ, ದಂಶನ ಮೊದಲಾದ ಯಾವ ಅರ್ಥಕ್ರಿಯೆಯೂ ಉಂಟಾಗುವುದಿಲ್ಲ. ಹಾಗೆಯೇ ಶುಕ್ತಿಯಿಂದ ಅದಕ್ಕೆ ಯೋಗ್ಯವಾದ ಕ್ರಿಯೆಯು ನಡೆಯುತ್ತದೆ. ಅದರಲ್ಲಿ ಆರೋಪಿತವಾದ ರಜತದಿಂದ ಕಟಕಮುಕುಟಾದಿ ಯಾವ ಅರ್ಥಕ್ರಿಯೆಯೂ ಉಂಟಾಗುವುದಿಲ್ಲ. ಇದರಿಂದ ಎಲ್ಲಿ ಸತ್ವವು ಅಧಿಕವಾಗಿದೆಯೋ ಅಲ್ಲಿ ಅರ್ಥಕ್ರಿಯಾಕಾರಿತ್ವವು ಅಧಿಕವಾಗಿದೆ ಎಂದು ತಿಳಿಯುತ್ತದೆ. ಶುದ್ಧಚೈತನ್ಯದಲ್ಲಿರುವ ಪಾರಮಾರ್ಥಿಕಸತ್ವವು ಸರ್ವೋತ್ಕೃಷ್ಟ ಸತ್ವವಾಗಿರುವುದರಿಂದ ಅದರಿಂದ ಅರ್ಥಕ್ರಿಯೆಯು ಉಂಟಾಗಲೇಬೇಕು. ರಜ್ಜುಸರ್ಪಾದಿಗಳಿಂದ ಭಯಕಂಪಾದಿರೂಪವಾದ ಅರ್ಥಕ್ರಿಯೆಯು ಉಂಟಾಗುವುದಿಲ್ಲ. ಭಯಕಂಪಾದಿಗಳು ಸರ್ಪಜ್ಞಾನಕಾರ್ಯ. ಆ ಜ್ಞಾನವಾದರೂ ರಜ್ಜುಸರ್ಪಸ್ಥಳದಲ್ಲಿಯೂ ಸತ್ಯವೇ ಆಗಿದೆ.

ವಿಶ್ವವು ಪ್ರಮಾಣದೃಷ್ಟವಾದುದರಿಂದಲೂ ಸತ್ಯವೆಂದು ಸಿದ್ಧವಾಗುತ್ತದೆ. ಪ್ರಮಾಣದೃಷ್ಟವಾಗಿದೆ ಮತ್ತು ಮಿಥ್ಯಾಭೂತವಾಗಿದೆ ಎಂಬುದು ವ್ಯಾಹತವಾದದ್ದು. ಸ್ವತಃ-ಪ್ರಾಮಾಣ್ಯವಾದಿಯಾದ ನೀನೂ ಸಹ ಪ್ರತ್ಯಕ್ಷಕ್ಕೆ ಪ್ರಾಮಾಣ್ಯವನ್ನು ಒಪ್ಪುತ್ತೀಯಷ್ಟೆ. ವ್ಯಾವಹಾರಿಕಪ್ರಾಮಾಣ್ಯ ಎಂಬ ವಾದವನ್ನು ಹಿಂದೆಯೇ ನಿರಾಕರಿಸಲಾಗಿದೆ. ಇನ್ನು ಅನುಮಾನ, ಆಗಮಗಳು ಪ್ರತ್ಯಕ್ಷಕ್ಕಿಂತ ದುರ್ಬಲವಾದವುಗಳು. ಏಕೆಂದರೆ ಪ್ರತ್ಯಕ್ಷವು ಅವುಗಳಿಗೆ ಉಪಜೀವ್ಯವಾದುದು. ಅನುಮಾನಾಗಮಗಳು ಉಪಜೀವಕವಾದವುಗಳು. ಉಪಜೀವ್ಯೋಪಜೀವಕಗಳಲ್ಲಿ ಉಪಜೀವ್ಯವೇ ಪ್ರಬಲವಾದುದು. ಆದ್ದರಿಂದ

ಮಿಥ್ಯಾತ್ವಾನುಮಾನದಿಂದ ಅಥವಾ ಮಿಥ್ಯಾತ್ವಶ್ರುತಿಯಿಂದ ವಿಶ್ವಪ್ರತ್ಯಕ್ಷಕ್ಕೆ ಎಂದೂ ಬಾಧವು ಬರಲು ಸಾಧ್ಯವಿಲ್ಲ. ಹಾಗೆ ಅನುಮಾನಾಗಮಗಳೇ ಪ್ರತ್ಯಕ್ಷವನ್ನು ಬಾಧಿಸುವುದಾದರೆ ಅಗ್ನಿಶೈತ್ಯಾನುಮಾನವು ಅಗ್ನಿಯು ಉಷ್ಣ ಎಂಬ ಪ್ರತ್ಯಕ್ಷಕ್ಕೆ ಬಾಧಕವಾಗಬೇಕಾದೀತು. ಹಾಗೆಯೇ 'ಯಜಮಾನಃ ಪ್ರಸ್ತರಃ' ಎಂಬ ವಾಕ್ಯದಲ್ಲಿಯೂ ಲಕ್ಷಣಾವೃತ್ತಿಯನ್ನು ಆಶ್ರಯಿಸಬೇಕಾದ ಪ್ರಸಂಗವಿರುತ್ತಿರಲಿಲ್ಲ. ನೀನಾದರೂ 'ತತ್ತ್ವಮಸಿ' ವಾಕ್ಯದಲ್ಲಿ ಪ್ರತ್ಯಕ್ಷವಿರೋಧದ ಭಯದಿಂದಲೇ ಜಹದಜಹಲ್ಲಕ್ಷಣಾವೃತ್ತಿಯನ್ನು ಅನುಸರಿಸಿ ಸರ್ವಜ್ಞತ್ವ, ಅಲ್ಪಜ್ಞತ್ವ ಮೊದಲಾದ ವಿರುದ್ಧ ಧರ್ಮಗಳನ್ನು ಬಿಟ್ಟು ಕೇವಲ ಚೈತನ್ಯಕ್ಕೆ ಐಕ್ಯವನ್ನು ಹೇಳುತ್ತೀಯೆ. ಪ್ರತ್ಯಕ್ಷವೇ ಬಾಧಿತವಾಗುವುದಾದರೆ 'ತತ್ತ್ವಮಸಿ' ವಾಕ್ಯವು ಸರ್ವಜ್ಞತ್ವವಿಶಿಷ್ಟಚೈತನ್ಯಕ್ಕೂ ಅಲ್ಪಜ್ಞತ್ವವಿಶಿಷ್ಟಚೈತನ್ಯಕ್ಕೂ ಅಭೇದವನ್ನು ಹೇಳುತ್ತದೆ ಎಂದೇ ಅಂಗೀಕರಿಸು. ಪ್ರತ್ಯಕ್ಷವಿರೋಧದ ಭಯವಿಲ್ಲವಷ್ಟೆ? ಆದ್ದರಿಂದ ಪ್ರತ್ಯಕ್ಷಾದಿಪ್ರಮಾಣದೃಷ್ಟವಾದ ಜಗತ್ತು ಸತ್ಯವೆಂದೇ ಸಿದ್ಧವಾಗುತ್ತದೆ.

## ದೃಶ್ಯತ್ವಾದಿಹೇತುಗಳು ಅಪ್ರಯೋಜಕ :

ಮಿಥ್ಯಾತ್ವವನ್ನು ಸಾಧಿಸಲು ದೃಶ್ಯತ್ವ, ಜಡತ್ವ, ಪರಿಚ್ಛಿನ್ನತ್ವ ಮೊದಲಾದವುಗಳನ್ನು ಹೇತುವನ್ನಾಗಿ ಮಾಡಿದ್ದೀಯೆ. ಇಲ್ಲಿ ಹೇತುವು ಇರಲಿ ಸಾಧ್ಯವು ಬೇಡ ಎಂಬ ಅಪ್ರಯೋಜಕತ್ವಶಂಕೆಯನ್ನು ಮಾಡಿದರೆ ಏನು ಬಾಧಕತರ್ಕವನ್ನು ಹೇಳುತ್ತೀಯೆ? ದೃಶ್ಯತ್ವವೆಂದರೆ ದರ್ಶನಯೋಗ್ಯತ್ವ. ಅದು ನಿರುಪಾಖ್ಯತ್ವ (ಜ್ಞಾನಾವಿಷಯತ್ವ)ವನ್ನು ನಿರಾಕರಿಸಬಹುದು. ಹಾಗೆಯೇ ಜಡತ್ವ ಎಂದರೆ ಜ್ಞಾನಶೂನ್ಯತ್ವ. ಅದು ತನಗೆ ವಿರುದ್ಧವಾದ ಜ್ಞಾತೃತ್ವವನ್ನು ನಿರಾಕರಿಸಬಹುದು. ಪರಿಚ್ಛಿನ್ನತ್ವವೆಂದರೆ ದೇಶದಿಂದ, ಕಾಲದಿಂದ ಮತ್ತು ಗುಣಗಳಿಂದ ಅವಧಿಯಿಂದ ಕೂಡಿರುವುದು. ಅದು ಕ್ರಮವಾಗಿ ಸರ್ವದೇಶವ್ಯಾಪ್ತಿಯನ್ನೂ, ನಿತ್ಯತ್ವವನ್ನೂ, ಅನಂತಗುಣಪೂರ್ಣತ್ವವನ್ನೂ ನಿರಾಕರಿಸಬಹುದು. ಸತ್ಯತ್ವವನ್ನು ಏಕೆ ನಿರಾಕರಿಸುತ್ತವೆ? ಘಟವು ಇದೆಯೋ ಇಲ್ಲವೋ ಎಂದು ಕೇಳಿದರೆ ಆ ವಾಕ್ಯವನ್ನು ಕೇಳಿದ ವ್ಯಕ್ತಿಯು ನೋಡಿ ಹೇಳುತ್ತೇನೆ ಎಂದು ಹೇಳಿ ಒಳಗೆ ಹೋಗಿ ಘಟವನ್ನು ನೋಡಿದರೆ ಅದು ಇದೆಯೆಂದೂ ನೋಡದಿದ್ದರೆ ಇಲ್ಲವೆಂದೂ ಹೇಳುತ್ತಾನೆ. ಇದೆ ಎಂದರೂ ವಿದ್ಯಮಾನವೆಂದರೂ ಸತ್ಯವೆಂದರೂ ಒಂದೇ ಅರ್ಥ. ಆದ್ದರಿಂದ ಘಟಕ್ಕೆ ದೃಶ್ಯತ್ವವಿದ್ದರೆ ಅದು ಸತ್ಯವೆಂದೂ, ಇಲ್ಲದಿದ್ದರೆ ಅಸತ್ಯವೆಂದೂ ಹೇಳುತ್ತಾನೆ. ಆದ್ದರಿಂದ ಲೋಕಮರ್ಯಾದೆಯನ್ನು ಅನುಸರಿಸುವ ತಾಂತ್ರಿಕನು ದೃಶ್ಯತ್ವವನ್ನು ಸತ್ಯತ್ವಕ್ಕೆ ಹೇತುವನ್ನಾಗಿ ಮಾಡಬೇಕೇ ಹೊರತು ಮಿಥ್ಯಾತ್ವಕ್ಕೆ ಹೇತುವನ್ನಾಗಿ ಮಾಡಬಾರದು.

ಹಾಗಾದರೆ 'ಇದಂ ರಜತಂ' ಎಂದು ಶುಕ್ತಿರಜತಕ್ಕೂ ದೃಶ್ಯತ್ವವಿರುವುದರಿಂದ ಅದರಿಂದ ಸತ್ಯತ್ವವನ್ನು ಸಾಧನೆ ಮಾಡಿದರೆ ಹೇತುವು ವಿರುದ್ಧವಾಗುವುದಷ್ಟೆ ಎಂಬ ಶಂಕೆಯು ಸರಿಯಲ್ಲ. ಏಕೆಂದರೆ ಶುಕ್ತಿರಜತದಲ್ಲಿ ದರ್ಶನಯೋಗ್ಯತ್ವವೇ ಇಲ್ಲ. ಹೇಗೆಂದರೆ 'ಸುರಭಿ

ಚಂದನಂ' ಎಂಬ ಚಾಕ್ಷುಷಪ್ರತ್ಯಕ್ಷದಲ್ಲಿ ಸೌರಭವು ಘ್ರಾಣೋಪನೀತವಾಗಿ ತೋರಿದರೂ ಅದು ಚಕ್ಷುಸ್ಸಿಗೆ ಯೋಗ್ಯವಲ್ಲ. ರೂಪಾದಿಗಳೇ ಚಕ್ಷುಸ್ಸಿಗೆ ಯೋಗ್ಯವಾದವುಗಳು. ಸಾಕ್ಷಿಯು ಮನಸ್ಸು ಮೊದಲಾದ ಒಳಗಿರುವ ಪದಾರ್ಥಗಳನ್ನು ಗ್ರಹಿಸುವ ವಿಷಯದಲ್ಲಿ ಸ್ವಾತಂತ್ರ್ಯವನ್ನು ಹೊಂದಿದೆ. ಬಹಿರರ್ಥದಲ್ಲಿ ಅದಕ್ಕೆ ಸ್ವಾತಂತ್ರ್ಯವಿಲ್ಲ. ಜ್ಞಾನದಿಂದ ಉಪನೀತವಾಗಿ ಘಟಾದಿಗಳು ಸಾಕ್ಷಿಗೆ ತೋರಿದರೂ ಘಟಾದಿಗಳು ಸಾಕ್ಷಿಗೆ ಯೋಗ್ಯವೇ ಅಲ್ಲ. ಯಾವ ಕ್ಲಪ್ತಸಾಮಗ್ರಿಯಿಂದ ಯಾವ ವಸ್ತುವಿನ ಬೋಧವು ಮತ್ತೆಮತ್ತೆ ಬರುತ್ತದೆಯೋ ಆ ವಸ್ತುವೇ ಆಯಾ ಇಂದ್ರಿಯಗಳಿಗೆ (ಸಾಕ್ಷಿಯೂ ಒಂದು ಇಂದ್ರಿಯವೇ) ಯೋಗ್ಯವಾದುದು. ಇನ್ನೊಂದು ಸಹಕಾರಿಯ ಬಲದಿಂದ ಆಗೊಮ್ಮೆ ಈಗೊಮ್ಮೆ ಯಾವ ವಸ್ತುವಿನ ಜ್ಞಾನವು ಬರುತ್ತದೆಯೋ ಆ ವಸ್ತುವು ಆ ಇಂದ್ರಿಯಕ್ಕೆ ಯೋಗ್ಯವೇ ಅಲ್ಲ. ಈ ಶಾಸ್ತ್ರಮರ್ಯಾದೆಯನ್ನು ಯಾರು ಅನುಸರಿಸುತ್ತಾರೆಯೋ ಅವರು ಶುಕ್ತಿರಜತದಲ್ಲಿ ದರ್ಶನಯೋಗ್ಯತ್ವವಿದೆಯೆಂದು ಹೇಳಲು ಸಾಧ್ಯವಿಲ್ಲ. ಆದ್ದರಿಂದ ಸತ್ಯತ್ವವನ್ನು ಸಾಧಿಸುವ ದೃಶ್ಯತ್ವಹೇತುವಿಗೆ ಶುಕ್ತಿರಜತದಲ್ಲಿ ವ್ಯಭಿಚಾರವಿಲ್ಲ. ಅಲ್ಲದೆ ಬಹಿರ್ದ್ರವ್ಯದ ಚಾಕ್ಷುಷಪ್ರತ್ಯಕ್ಷವು ಬರಬೇಕಾದರೆ ಮಹತ್ತ್ವವಿಶಿಷ್ಟವಾದ ಉದ್ಭೂತರೂಪವಿರಬೇಕಷ್ಟೆ? ಇದನ್ನು ಯೋಗ್ಯತೆ ಎಂದು ಹೇಳುತ್ತಾರೆ. ಶುಕ್ತಿರಜತದಲ್ಲಿ ಮಹತ್ತ್ವವೂ ಇಲ್ಲ, ಉದ್ಭೂತರೂಪವೂ ಇಲ್ಲ. ಆದ್ದರಿಂದಲೂ ಶುಕ್ತಿರಜತದಲ್ಲಿ ದೃಶ್ಯತ್ವವಿಲ್ಲ. ಆದ್ದರಿಂದ ದೃಶ್ಯತ್ವವನ್ನು ಸತ್ಯತ್ವಕ್ಕೆ ಹೇತುವನ್ನಾಗಿಮಾಡಿದರೆ ಯಾವ ದೋಷವೂ ಇಲ್ಲ. ದೃಶ್ಯತ್ವ ಮತ್ತು ಸತ್ಯತ್ವಗಳು ಬ್ರಹ್ಮನಲ್ಲಿ ಪರಸ್ಪರವ್ಯಾಪ್ತವಾಗಿವೆ. ಆದ್ದರಿಂದ ಮಿಥ್ಯಾತ್ವವನ್ನು ಕುರಿತು ದೃಶ್ಯತ್ವವನ್ನು ಹೇತುವನ್ನಾಗಿ ಮಾಡಿದರೆ ಅದು ವಿರುದ್ಧ ಮತ್ತು ಅಪ್ರಯೋಜಕ ಎಂದು ಉಪಪಾದನೆ ಮಾಡುತ್ತಾರೆ.

## ಮಾಯಾವಾದಿಗಳ ಮತದಲ್ಲಿ ಭ್ರಾಂತಿಯೂ, ಬಾಧವೂ ಅನುಪಪನ್ನವಾದವು:

ಆರೋಪವನ್ನು ಒಪ್ಪಿದರೆ ನಿರಧಿಷ್ಠಾನಕಭ್ರಮವನ್ನು ಒಪ್ಪುವ ಪ್ರಸಂಗವು ಬರುತ್ತದೆ ಎಂಬುದು ಮೊದಲನೆಯ ದೋಷ. ಏಕೆಂದರೆ ಚಾಕ್ಷುಷಾದಿವೃತ್ತಿಯಲ್ಲಿ ರೂಪರಹಿತನಾದ ಬ್ರಹ್ಮನು ಪ್ರಕಾಶಿಸುವುದಿಲ್ಲವಾದ್ದರಿಂದ 'ಅಯಂಘಟಃ' ಮೊದಲಾದ ಪ್ರತೀತಿಗಳಲ್ಲಿ ಅಧಿಷ್ಠಾನವಾದ ಬ್ರಹ್ಮನ ಉಲ್ಲೇಖವೇ ಇಲ್ಲ. ಅಧಿಷ್ಠಾನವಿಷಯಕತ್ವವಿಲ್ಲದಿದ್ದರೆ ಭ್ರಾಂತಿಯೇ ಆಗುವುದಿಲ್ಲ. ಆದರೂ ಇಂತಹ ಪ್ರತೀತಿಯು ಭ್ರಾಂತಿ ಎಂದು ಅಂಗೀಕರಿಸಿದರೆ ನಿರಧಿಷ್ಠಾನಭ್ರಮವನ್ನು ಒಪ್ಪಬೇಕಾಗುತ್ತದೆ. ನಮಗೆ ಅಧಿಷ್ಠಾನಬ್ರಹ್ಮ ಜ್ಞಾನವು ಉಂಟಾಗುತ್ತದೆ. ಅದನ್ನು ನೀನು ಒಪ್ಪುವುದಿಲ್ಲ. ಇನ್ನು ಆ ಜ್ಞಾನವು ಬ್ರಹ್ಮರೂಪವಾಗದಿದ್ದರೆ ಅದು ಮಿಥ್ಯೆಯಾಗಬೇಕು. ಅಲ್ಲಿ ಅಧಿಷ್ಠಾನಬ್ರಹ್ಮನು ಅಧ್ಯಸ್ತನಲ್ಲ. ಆಗಲೂ ಅಧಿಷ್ಠಾನಜ್ಞಾನವಿಲ್ಲ.

ಯೋಗಾಯೋಗವೆಂಬ ನಾಲ್ಕನೆಯ ದೋಷವನ್ನು ಹೇಳಿದ ರೀತಿಯಲ್ಲಿ ಇಂದ್ರಿಯಾರ್ಥಸನ್ನಿಕರ್ಷಜನ್ಯವಾದ ಅಪರೋಕ್ಷವೃತ್ತಿಯಿಂದ ಅಜ್ಞಾನಾವರಣವು ನಿವೃತ್ತವಾದ

ಮೇಲೆ ಅಧಿಷ್ಠಾನಚೈತನ್ಯವು ಅಭಿವ್ಯಕ್ತವಾಗುತ್ತದೆ. ಅಧಿಷ್ಠಾನಚೈತನ್ಯಕ್ಕೂ ವೃತ್ತಿಗೂ ಉಪರಾಗವುಂಟಾಗಬೇಕಾದರೆ ಮೊದಲು ವೃತ್ತಿ ಇರಬೇಕು. ವೃತ್ತಿಯು ಸನ್ನಿಕರ್ಷಜನ್ಯವಾದುದರಿಂದ ವೃತ್ತಿಗಿಂತ ಮೊದಲು ಸನ್ನಿಕರ್ಷವು ಇರಬೇಕು. ವಸ್ತುವೇ ಇಲ್ಲದಿದ್ದರೆ ಸನ್ನಿಕರ್ಷವುಂಟಾಗುವುದಿಲ್ಲವಾದ್ದರಿಂದ ಸನ್ನಿಕರ್ಷಕ್ಕಿಂತ ಮೊದಲು ವಸ್ತುವಿರಬೇಕು. ಆದ್ದರಿಂದ ವೃತ್ತಿ ಮತ್ತು ಚೈತನ್ಯಗಳಿಗಿಂತ ಮೊದಲೇ ಇರುವ ಘಟಾದಿಗಳು ನೂರು ಪ್ರಯತ್ನದಿಂದಲೂ ವೃತ್ತಿ, ಚೈತನ್ಯಗಳಲ್ಲಿ ಅಧ್ಯಸ್ತವಾಗುವುದಿಲ್ಲ. ಆದ್ದರಿಂದ ಅಲ್ಲಿ ಅಧಿಷ್ಠಾನದ ಪ್ರಸಕ್ತಿಯೇ ಇಲ್ಲ. ಆದರೂ ಆರೋಪವನ್ನು ಅಂಗೀಕರಿಸಿದರೆ ಅದನ್ನು ನಿರಧಿಷ್ಠಾನಕಭ್ರಮವೆಂದು ಒಪ್ಪಬೇಕಾಗುತ್ತದೆ.

ಮಾಯಾಸೃಷ್ಟಿಪಕ್ಷದಲ್ಲಿಯೂ ಮಾಯಾಮಯಪದಾರ್ಥಗಳು ಐಂದ್ರಜಾಲಿಕನಿಂದ ಕಲ್ಪಿತವಲ್ಲ. ಏಕೆಂದರೆ ಅವು ಅವನಿಗೆ ಕಾಣುವುದೇ ಇಲ್ಲ. ಮಾಯಾವಿಯ ಮಂತ್ರಾದಿಗಳಿಂದ ನೋಡುವವರ ದೃಷ್ಟಿಯಲ್ಲಿ ದೋಷವುಂಟಾದಾಗ ಅವರಿಗೆ ಮಾತ್ರ ಕಾಣುತ್ತದೆ. ಅದು ಭ್ರಾಂತಿಯಾದುದರಿಂದ ಅಲ್ಲಿ ಸನ್ನಿಕರ್ಷದ ಅಪೇಕ್ಷೆ ಇಲ್ಲ. ಜಗತ್ತಿನ ಜ್ಞಾನವಾದರೂ ನಿಯಮೇನ ಸನ್ನಿಕರ್ಷಾಪೇಕ್ಷವಾಗಿ ಬರುತ್ತಿದೆ. ಆದ್ದರಿಂದ ಜಗತ್ತು ಕಲ್ಪಿತವಲ್ಲ. ಆದರೂ ಜಗತ್ತಿನ ಜ್ಞಾನವನ್ನು ಭ್ರಾಂತಿ ಎಂದು ಅಂಗೀಕರಿಸಿದರೆ ಹಿಂದೆ ಹೇಳಿದಂತೆ ಅದೂ ನಿರಧಿಷ್ಠಾನಕಭ್ರಮವೇ ಆಗಬೇಕಾಗುತ್ತದೆ. ಅದನ್ನು ಪರನಾದರೂ ಅಂಗೀಕರಿಸಲು ಸಾಧ್ಯವಿಲ್ಲ.

ಪರೋಕ್ಷಪ್ರಮಾಸಾದೃಶ್ಯವೆಂಬುದು ಎರಡನೆಯ ದೋಷ. ಪರೋಕ್ಷಪ್ರಮಾಸ್ಥಳದಲ್ಲಿ ಅಧಿಷ್ಠಾನಚೈತನ್ಯದ ಅಭಿವ್ಯಕ್ತಿ ಇಲ್ಲ. ಆದರೂ ಅಲ್ಲಿ ಧರ್ಮಾದಿ ಅತೀಂದ್ರಿಯ ವಿಷಯಕವಾದ ಅಜ್ಞಾನವು ನಿವೃತ್ತಿಯನ್ನು ಹೊಂದುತ್ತದೆ. ಅದರಂತೆ ಅಪರೋಕ್ಷಪ್ರಮಾಸ್ಥಳದಲ್ಲಿಯೂ ಎಲ್ಲಾ ವ್ಯವಹಾರಗಳೂ ಹಾಗೆಯೇ ಉಪಪನ್ನವಾಗುವಾಗ ಅಲ್ಲಿ ಅಧಿಷ್ಠಾನಚೈತನ್ಯವನ್ನು ಅದರಲ್ಲಿ ಆರೋಪವನ್ನೂ ಕಲ್ಪನೆಮಾಡುವುದು ಅಯುಕ್ತವಾದುದು ಎಂಬುದು ಎರಡನೆಯ ದೋಷ.

ಪೂರ್ವಪ್ರಮಿತದೃಕ್ತ್ವ ಎನ್ನುವುದು ಮೂರನೆಯ ದೋಷ. ಅಪರೋಕ್ಷಸ್ಥಳದಲ್ಲಿ ಹಿಂದೆ ಹೇಳಿದ ರೀತಿಯಲ್ಲಿ ಸನ್ನಿಕರ್ಷಘಟಕತಯಾ ವಸ್ತುವು ಮೊದಲೇ ಸಿದ್ಧವಾಗಿದೆ. ಆದ್ದರಿಂದ ಪ್ರಮಿತವೂ ಆಗಿದೆ. ಅಂತಹ ವಸ್ತುವನ್ನು ಅನಂತರ ಉತ್ಪನ್ನವಾದ ಜ್ಞಾನದಲ್ಲಿ ಆರೋಪಮಾಡುವುದು ಅಯುಕ್ತವಾದುದು.

ಯೋಗಾಯೋಗ ಎಂಬುದು ನಾಲ್ಕನೆಯ ದೋಷ. ಜಗತ್ತು ಕಲ್ಪಿತವಾದರೆ ಶುಕ್ತಿರಜತಸ್ಥಳದಲ್ಲಿ ಹೇಗೆ ಸನ್ನಿಕರ್ಷವಿಲ್ಲದೆಯೇ ದೋಷದಿಂದ ಶುಕ್ತಿರಜತದ ಜ್ಞಾನವು ಬರುತ್ತದೆಯೋ ಅದರಂತೆ ಜಗತ್ತಿನ ಜ್ಞಾನವೂ ಸನ್ನಿಕರ್ಷನಿರಪೇಕ್ಷವಾಗಿ ಬರಬೇಕಾಗಿದ್ದಿತು.

ಆದರೆ ಜಗತ್ತಿನಜ್ಞಾನವು ನಿಯಮೇನ ಸನ್ನಿಕರ್ಷಸಾಪೇಕ್ಷವಾದುದು. ಆದ್ದರಿಂದ ಸನ್ನಿಕರ್ಷನಿಯಮದ ಅನುಪಪತ್ತಿ ಎಂಬುದು ಈ ನಾಲ್ಕನೆಯ ದೋಷ.

ಮಾಯಾವಿಭ್ರಾಂತ್ಯಯೋಗ ಎಂಬುದು ಐದನೆಯ ದೋಷ. ಮಾಯಾವಿಗೆ ತಾನು ಸೃಷ್ಟಿಮಾಡಿದ ಐಂದ್ರಜಾಲಿಕವಸ್ತುಗಳು ಕಾಣುವುದಿಲ್ಲ. ಆದರೆ ಈಶ್ವರನಿಗೆ ಜಗತ್ತು ಕಾಣುತ್ತದೆ. ಆದ್ದರಿಂದಲೇ ಅವನು ಜಗತ್ತಿನ ಸೃಷ್ಟಿಸ್ಥಿತಿಸಂಹಾರಗಳನ್ನು ಮಾಡುತ್ತಾನೆ. ಆದ್ದರಿಂದ ಅವನಿಗೆ ಭ್ರಾಂತಿಯನ್ನು ಒಪ್ಪಬೇಕಾಗುತ್ತದೆ. ಮಾಯಾವಿಗೆ ಮಾಯಾಮಯ ವಸ್ತುಗಳ ದರ್ಶನವನ್ನು ಅಂಗೀಕರಿಸುವುದು ಐದನೆಯ ದೋಷ.

ಅಪರಕ್ಕೆ ಯೋಗಾಯೋಗ ಎಂಬುದು ಆರನೆಯ ದೋಷ. ಅಪರ ಎಂದರೆ ಅರ್ಥಕ್ರಿಯಾಕಾರಿತ್ವ. ಜಗತ್ತು ಮಾಯಿಕವಾದರೆ ಅರ್ಥಕ್ರಿಯಾಕಾರಿತ್ವವು ಇರಬಾರದಾಗಿದ್ದಿತು. ಆದರೆ ಅರ್ಥಕ್ರಿಯಾಕಾರಿತ್ವವು ಅನುಭವಸಿದ್ಧವಾಗಿದೆ. ಆದ್ದರಿಂದ ಅನುಭವಸಿದ್ಧವಾದ ಅರ್ಥಕ್ರಿಯಾಕಾರಿತ್ವದ ಅನುಪಪತ್ತಿ ಎಂಬುದು ಆರೋಪಪಕ್ಷದಲ್ಲಿ ಆರನೆಯ ದೋಷ.

ರುದ್ರವಾಕ್ಯವಿರೋಧವೆಂಬುದು ಏಳನೆಯ ದೋಷ. ಪಂಚಮಸ್ಕಂಧದ **'ನಯಸ್ಯಮಾಯಾ'** ಎಂಬ ಶ್ಲೋಕದಲ್ಲಿ ಭಗವಂತನಿಗೆ ಮಾಯಾ, ಅವಿದ್ಯಾ, ಸತ್ವಾದಿಗುಣಗಳು, ಅಹಂಕಾರ ಇವು ಯಾವುದೂ ಸಂಸಕ್ತವಾಗುವುದಿಲ್ಲ ಎಂದು ಹೇಳಲಾಗಿದೆ. ಆದರೂ ಆರೋಪವನ್ನು ಅಂಗೀಕರಿಸಿ ಮಾಯಾಸೃಷ್ಟಿಯನ್ನು ಹೇಳಿದರೆ ಈ ರುದ್ರವಾಕ್ಯದ ವಿರೋಧವು ಬರುತ್ತದೆ.

ವರುಣವಾಕ್ಯದ ವಿರೋಧವೆಂಬುದು ಎಂಟನೆಯ ದೋಷ. ವರುಣನ ವಾಕ್ಯವೆಂದರೆ **'ನಮಸ್ತಸ್ಮೈ ಭಗವತೇ ಬ್ರಹ್ಮಣೇ ಪರಮಾತ್ಮನೇ। ನ ಯತ್ರ ಶ್ರೂಯತೇ ಮಾಯಾ ಲೋಕಸೃಷ್ಟಿವಿಕಲ್ಪನಾ'** ಎಂಬ ಭಾಗವತವಾಕ್ಯ. ಇಲ್ಲಿಯೂ ಮಾಯಾಸ್ಪರ್ಶವಿಲ್ಲವೆಂದು ಹೇಳಿರುವುದರಿಂದ ಈಶ್ವರನಿಂದ ಜಗತ್ತಿಗೆ ಮಾಯಾಸೃಷ್ಟಿಯನ್ನು ಅಂಗೀಕರಿಸಿದರೆ ಈ ವಾಕ್ಯದ ವಿರೋಧವು ಬರುತ್ತದೆ.

ಅರ್ಜುನನ ವಾಕ್ಯದ ವಿರೋಧವೆಂಬುದು ಒಂಬತ್ತನೆಯ ದೋಷ. ಅದು ಪ್ರಥಮಸ್ಕಂಧದ **'ಮಾಯಾಂ ವ್ಯುದಸ್ಯ ಚಿಚ್ಛಕ್ತ್ಯಾ ಕೈವಲ್ಯೇ ಸ್ಥಿತ ಆತ್ಮನಿ'** ಎಂಬ ಅರ್ಜುನನ ವಚನ. ಇಲ್ಲಿಯೂ ತನ್ನ ಚಿಚ್ಛಕ್ತಿಯಿಂದಲೇ ಈಶ್ವರನು ಮಾಯೆಯನ್ನು ನಿರಾಸಮಾಡಿದ್ದಾರೆ ಎಂದು ಹೇಳಿರುವುದರಿಂದ ಮಾಯಾಸೃಷ್ಟಿಯನ್ನು ಅಂಗೀಕರಿಸಿದರೆ ಈ ವಾಕ್ಯದ ವಿರೋಧವು ಬರುತ್ತದೆ.

ಶ್ರುತಿವಿರೋಧವು ಹತ್ತನೆಯ ದೋಷ. **'ಯಾಥಾತಥ್ಯತೋಽರ್ಥಾನ್ ವ್ಯದಧಾತ್'**, **'ವಿಶ್ವಂ ಸತ್ಯಂ'** ಇತ್ಯಾದಿ ಶ್ರುತಿಗಳು ಜಗತ್ತಿಗೆ ಸತ್ಯತ್ವವನ್ನೇ ಹೇಳುವುದರಿಂದ ಆರೋಪವನ್ನು

ಅಂಗೀಕರಿಸಿದರೆ ಇಂತಹ ಶ್ರುತಿಗಳ ವಿರೋಧವು ಬರುತ್ತದೆ ಎಂದು ಆರೋಪಪಕ್ಷದಲ್ಲಿ ಹತ್ತು ಬಾಧಕಗಳನ್ನು ಹೇಳುತ್ತಾರೆ.

ಇನ್ನು ಇದರಂತೆ ಜಗತ್ತಿಗೆ ಬಾಧವನ್ನು ಒಪ್ಪಿದರೂ ಆ ಬಾಧಕ್ಕೆ ಹತ್ತುಬಾಧಕಗಳನ್ನು ಹೇಳುತ್ತಾರೆ. ಜಗತ್ಸತ್ಯತ್ವದ ತ್ರೈಕಾಲಿಕನಿಷೇಧವೇ ಬಾಧವಷ್ಟೆ? ಶ್ರುತಿಯಲ್ಲಿ ಆಪಾತತಃ ಕಂಡುಬರುವ ಜಗತ್ತು ಇಲ್ಲ ಎಂಬ ಅರ್ಥದ ವಾಕ್ಯಗಳು ಪ್ರಾಗಭಾವ ಅಥವಾ ಧ್ವಂಸರೂಪವಾದ ಅರ್ಥವನ್ನು ಹೇಳುವುದರಿಂದ ಕಾಲತ್ರಯದಲ್ಲಿ ಜಗತ್ತಿಗೆ ಸತ್ವವಿಲ್ಲ ಎಂದು ಹೇಳುವ ಯಾವ ವಾಕ್ಯವೂ ಇಲ್ಲದಿರುವುದರಿಂದ ಸತ್ವಪ್ರತಿಷೇಧಾಭಾವ ಎಂಬುದು ಮೊದಲನೆಯ ಬಾಧಕ. 'ನೇಹನಾನಾಸ್ತಿ', 'ಅದ್ವಿತೀಯಂ' ಮೊದಲಾದ ವಾಕ್ಯಗಳು ಅಥವಾ ಪದಗಳು ಲಟ್‌ಪ್ರತ್ಯಯದಿಂದ ವರ್ತಮಾನಕಾಲದಲ್ಲಿ ನಿಷೇಧವನ್ನು ಮಾಡಿದರೂ ಕಾಲತ್ರಯದಲ್ಲಿ ಜಗತ್ತಿನ ನಿಷೇಧವಿಲ್ಲದಿರುವುದರಿಂದ ಬಾಧವು ಕೂಡುವುದಿಲ್ಲ ಎನ್ನುವುದು ಎರಡನೆಯ ಬಾಧಕ. ವೇದಗಳಿಗೆ ಅಖಂಡಾರ್ಥಪರತ್ವವನ್ನು ಒಪ್ಪುತ್ತೀಯೆ. ಆದ್ದರಿಂದ ಚರಮಸಾಕ್ಷಾತ್ಕಾರದಲ್ಲಿ ಬ್ರಹ್ಮಸ್ವರೂಪವು ಮಾತ್ರ ತೋರುತ್ತದೆ. ಅದು ಜಗತ್ಸತ್ಯತ್ವಕ್ಕೆ ವಿರೋಧಿ ಯಲ್ಲವಾದ್ದರಿಂದ ಅದಕ್ಕೆ ಬಾಧಕತ್ವವು ಕೂಡುವುದಿಲ್ಲ. ಇದು ಮೂರನೆಯ ದೋಷ. ಮತ್ತು ಚರಮಸಾಕ್ಷಾತ್ಕಾರವನ್ನು ನೀನು ನಿರ್ವಿಕಲ್ಪಕ ಎಂದು ಹೇಳುತ್ತೀಯೆ. ನಿರ್ವಿಕಲ್ಪಕಜ್ಞಾನವು ಎಂದೂ ಬಾಧಕವಲ್ಲವಾದ್ದರಿಂದ ಚರಮ ಸಾಕ್ಷಾತ್ಕಾರಕ್ಕೆ ಬಾಧಕತ್ವವು ಕೂಡುವುದಿಲ್ಲ ಎಂಬುದು ನಾಲ್ಕನೆಯ ದೋಷ. ಇನ್ನು 'ನೇಹನಾನಾಸ್ತಿ' ಇತ್ಯಾದಿ ವಾಕ್ಯಗಳು ಬ್ರಹ್ಮನಲ್ಲಿ ಜಗತ್ತನ್ನು ನಿಷೇಧಮಾಡಿದರೂ ತಮ್ಮ ತಮ್ಮ ಉಪಾದಾನಗಳಲ್ಲಿ ಘಟಪಟಾದಿ ಜಗತ್ತನ್ನು ನಿಷೇಧಮಾಡುವುದಿಲ್ಲ. ಸರ್ವತ್ರ ನಿಷೇಧವನ್ನು ಮಾಡದಿದ್ದರೆ ಬಾಧಕತ್ವವು ಕೂಡುವುದಿಲ್ಲ ಎಂಬುದು ಐದನೆಯ ದೋಷ. ಶಬ್ದಕ್ಕೆ ಪ್ರತ್ಯಕ್ಷಾನುಸಾರಿಯಾದ ಅರ್ಥವನ್ನು ಹೇಳಬೇಕು. ಇಲ್ಲದಿದ್ದರೆ ಲಕ್ಷಣಾವೃತ್ತಿಯೇ ನಾಶವನ್ನು ಹೊಂದುತ್ತದೆ. ಆದ್ದರಿಂದ ಪ್ರತ್ಯಕ್ಷವು ಸತ್ವವನ್ನು ವಿಷಯೀಕರಿಸುತ್ತಿರುವಾಗ ಶಬ್ದವು ಅದನ್ನು ನಿಷೇಧಮಾಡಲು ಸಾಧ್ಯವಿಲ್ಲ ಎಂಬುದು ಆರನೆಯ ಬಾಧಕ. ಮತ್ತು ನೀನು ಏಕಜ್ಞಾನದಿಂದ ಸರ್ವವಿಜ್ಞಾನವನ್ನು ಒಪ್ಪುತ್ತೀಯೆ. ಎಂದರೆ ಬ್ರಹ್ಮಜ್ಞಾನದಿಂದ ಸರ್ವಜಗದ್‌ಜ್ಞಾನವನ್ನು ಒಪ್ಪುತ್ತೀಯೆ. ಆದ್ದರಿಂದ ಏಕಜ್ಞಾನಕ್ಕೆ ವಿಷಯನಾದ ಬ್ರಹ್ಮನು ಸತ್ಯವಾದಂತೆ, ಅದೇ ಜ್ಞಾನಕ್ಕೆ ವಿಷಯವಾದ ಸರ್ವಜಗತ್ತೂ ಸತ್ಯವಾಗುತ್ತದೆ. ಇದು ಏಳನೆಯ ಬಾಧಕ. ಶ್ರುತಿಯೇ **'ವಿಶ್ವಂ ಸತ್ಯಂ'** ಇತ್ಯಾದಿಯಾಗಿ ಜಗತ್ತಿಗೆ ಸತ್ಯತ್ವವನ್ನು ಹೇಳುತ್ತಿದೆ. ಶ್ರುತಿಯು ಹೇಳಿದುದನ್ನು ಪುನಃ ಶ್ರುತಿಯೇ ನಿಷೇಧಮಾಡುವುದಿಲ್ಲ. ಹಾಗೆ ಮಾಡಿದರೆ ಅಪ್ರಾಮಾಣ್ಯವು ಬರುತ್ತದೆ. **'ಶಾಶ್ವತೀಭ್ಯಃ ಸಮಾಭ್ಯಃ'** ಎಂದು ಹೇಳಿ ಶ್ರುತಿಯ ಭಾವಿಬಾಧಕವನ್ನೂ ನಿರಾಸಮಾಡುತ್ತಿದೆ. ತ್ರೈಕಾಲಿಕ ನಿಷೇಧಪ್ರತಿಯೋಗಿತ್ವಾಭಾವರೂಪವಾದ ಸತ್ಯತ್ವವನ್ನು ಹೇಳುವ ಶ್ರುತಿಯು ತ್ರೈಕಾಲಿಕ ನಿಷೇಧಪ್ರತಿಯೋಗಿತ್ವರೂಪವಾದ ಮಿಥ್ಯಾತ್ವದ ಪ್ರತಿಷೇಧರೂಪವಾಗಿರುವುದರಿಂದ ಪ್ರಬಲವೂ ಆಗಿದೆ. ಆದ್ದರಿಂದ ಶ್ರುತಿಯಿಂದ ಮತ್ತು ಶ್ರುತಿಯ ಪ್ರಾಬಲ್ಯದಿಂದ ವಿರೋಧವು

ಬರುವುದರಿಂದ ಬಾಧವು ಕೂಡುವುದಿಲ್ಲ ಎಂಬುದು ಎಂಟನೆಯ ಬಾಧಕ. ಹತ್ತು ರೀತಿಯಲ್ಲಿ ಆರೋಪವೇ ಉಪಪನ್ನವಾಗುವುದಿಲ್ಲವೆಂದು ಸಮರ್ಥಿಸಿದ್ದೇವೆ. ಆರೋಪವೇ ಇಲ್ಲದಿದ್ದರೆ ಬಾಧವೇ ಉಂಟಾಗುವುದಿಲ್ಲ. ಇದು ಒಂಬತ್ತನೆಯ ಬಾಧಕ. ಮಿಥ್ಯಾತ್ವಶ್ರುತಿಗೆ ಜಗತ್ತಿನ ಸತ್ವನಿಷೇಧರೂಪವಾದ ಅರ್ಥವನ್ನು ಹೇಳಿದರೆ 'ಅಸದೇವೇದಮಗ್ರ ಆಸೀತ್' ಎಂಬ ಶ್ರುತಿಗೆ ಬ್ರಹ್ಮನ ಅಸತ್ವವೇ ಅರ್ಥ ಎಂದು ಹೇಳಬೇಕಾಗುತ್ತದೆ ಎಂಬುದು ಹತ್ತನೆಯ ಬಾಧಕ.

ಹೀಗೆ ಆರೋಪಪಕ್ಷದಲ್ಲಿ ಹತ್ತು ಬಾಧಕಗಳೂ ಬಾಧಪಕ್ಷದಲ್ಲಿ ಹತ್ತು ಬಾಧಕಗಳೂ ಇರುವುದರಿಂದ ಜಗತ್ತಿಗೆ ಆರೋಪವೂ ಇಲ್ಲ ಬಾಧವೂ ಇಲ್ಲ. ಆಕಾರಣದಿಂದ ಜಗತ್ತಿಗೆ ಸತ್ಯತ್ವವು ನಿರಾಕುಲವಾಗಿ ಸಿದ್ಧವಾಗುತ್ತದೆ ಎಂದು ತಿಳಿಸಿ ತಮ್ಮ ಈ ಚಿಂತನೆಯನ್ನು ಆಚಾರ್ಯರಿಗೆ ಸಮರ್ಪಿಸುತ್ತಾರೆ -

**ದಶಧಾ ಬಾಧಬಾಧಾನಾಂ ಪ್ರಮಿತಿರ್ಯಸ್ಯ ಚೇತಸಿ ।**
**ದಶಪ್ರಮತಿನಾಮಾಸೌ ಗುರುರ್ವಿಜಯತೇತರಾಮ್ ॥**

ಹೀಗೆ ವಿಶ್ವಸತ್ಯತ್ವವನ್ನು ಸಮರ್ಥನೆ ಮಾಡಲು ಗ್ರಂಥದುದ್ದಕ್ಕೂ ನೂರಾರು ಯುಕ್ತಿಗಳನ್ನು ಹೇಳಿ ಕೊನೆಯಲ್ಲಿ ಈ ವಿಶ್ವಸೌರಭವನ್ನು ದೇವರಿಗೆ ಸಮರ್ಪಿಸುತ್ತಾರೆ.

**ವಾದಿರಾಜಾಖ್ಯಯತಿನಾ ಸಾಧಿತಾ ಯುಕ್ತಿಮಲ್ಲಿಕಾ ।**
**ವಿಶ್ವಸೌರಭಸರ್ವಸ್ವಮಥ ವಿಷ್ಣೌ ನ್ಯವೇದಯತ್ ॥**

ಶ್ರೀಹರಿವಾಯುಗುರುಗಳ ಪ್ರೇರಣೆಯಂತೆ ಗ್ರಂಥದಲ್ಲಿ ಅಭಿರುಚಿಯುಂಟಾಗುವುದಕ್ಕಾಗಿ ಈ ಒಂದು ಸಣ್ಣ ಮುನ್ನುಡಿಯನ್ನು ಬರೆದಿದ್ದೇನೆ. ಗುರುಮುಖದಿಂದ ಉಪದೇಶಪೂರ್ವಕವಾಗಿ ಅಧ್ಯಯನಮಾಡಿದರೆ ಮಾತ್ರ ವಾದಿರಾಜರ ಮಾತುಗಳ ಸರಿಯಾದ ಅರ್ಥವು ತಿಳಿಯುತ್ತದೆ. ಈ ಒಂದು ಲೇಖನಪ್ರಯತ್ನದಿಂದ ಶ್ರೀಹರಿವಾಯುಗುರುಗಳು ಪ್ರಸನ್ನರಾಗಿ ಅನುಗ್ರಹವನ್ನು ಮಾಡಬೇಕೆಂದು ಬಯಸಿ ಲೇಖನವನ್ನು ಸಮಾಪ್ತಿಮಾಡುತ್ತಿದ್ದೇನೆ. ಶ್ರೀಕೃಷ್ಣಾರ್ಪಣಮಸ್ತು.

**- ಪಿ.ಎಸ್. ಶೇಷಗಿರಿ ಆಚಾರ್ಯ**



## ವಿಶ್ವಸೌರಭ ಲೇಖನಯಜ್ಞದಲ್ಲಿ ಭಾಗವಹಿಸಿದ ವಿದ್ವಾಂಸರುಗಳು

★ ವಿದ್ವಾನ್ ಡಿ. ಪ್ರಹ್ಲಾದಾಚಾರ್ಯ, ಬೆಂಗಳೂರು
★ ವಿದ್ವಾನ್ ಕೆ.ಪಿ. ವಾದಿರಾಜ ಆಚಾರ್ಯ, ಉಡುಪಿ
★ ವಿದ್ವಾನ್ ವಿಜಯೀಂದ್ರಾಚಾರ್ಯ. ಬೆ.ನಾ., ಮೈಸೂರು
★ ವಿದ್ವಾನ್ ಪೂರ್ಣಪ್ರಜ್ಞಾಚಾರ್ಯ, ಬೆಂಗಳೂರು
★ ವಿದ್ವಾನ್ ಧನಂಜಯಾಚಾರ್ಯ, ಬೆಂಗಳೂರು
★ ವಿದ್ವಾನ್ ರವಿಕುಮಾರಾಚಾರ್ಯ, ಉಡುಪಿ
★ ಡಾ|| ತಿರುಮಲಾಚಾರ್ಯ ಕುಲಕರ್ಣಿ, ಬೆಂಗಳೂರು
★ ವಿದ್ವಾನ್ ಎಚ್.ಪಿ. ನಾಗರಾಜಾಚಾರ್ಯ, ಬೆಂಗಳೂರು
★ ವಿದ್ವಾನ್ ಶೇಷಗಿರಿ ಆಚಾರ್ಯ. ಪಿ.ಎಸ್., ಮೈಸೂರು
★ ವಿದ್ವಾನ್ ಗುರುಪ್ರಸಾದಾಚಾರ್ಯ, ಪಲಿಮಾರು
★ ವಿದ್ವಾನ್ ಲಕ್ಷ್ಮೀಶಾಚಾರ್ಯ, ಪಲಿಮಾರು
★ ವಿದ್ವಾನ್ ವಿ. ಸತ್ಯನಾರಾಯಣಾಚಾರ್ಯ, ಉಡುಪಿ
★ ವಿದ್ವಾನ್ ಭೀಮಸೇನಾಚಾರ್ಯ ಗುತ್ತಲ್, ಬೆಂಗಳೂರು
★ ವಿದ್ವಾನ್ ಸಂದಲ್ ನಾರಾಯಣಾಚಾರ್ಯ, ಬೆಂಗಳೂರು
★ ವಿದ್ವಾನ್ ಬಾಟ್ನಿರಾಮಚಂದ್ರಾಚಾರ್ಯ, ಬೆಂಗಳೂರು
★ ವಿದ್ವಾನ್ ರಘುತ್ತಮಾಚಾರ್ಯ ನಾಗಸಂಪಿಗೆ, ಬಾಗಲಕೋಟೆ
★ ವಿದ್ವಾನ್ ರಂಗನಾಥಾಚಾರ್ಯ ಗಣಾಚಾರಿ, ಬೆಂಗಳೂರು
★ ವಿದ್ವಾನ್ ಹೊನ್ನಾಳಿ ಕೃಷ್ಣಾಚಾರ್ಯ, ಬೆಂಗಳೂರು
★ ವಿದ್ವಾನ್ ಎಲ್. ಸುಧೀಂದ್ರಾಚಾರ್ಯ, ಬೆಂಗಳೂರು
★ ವಿದ್ವಾನ್ ಮನೋಜವಾಚಾರ್ಯ, ಮುಳಬಾಗಿಲು

**ಮೂಲಪ್ರತಿಶೋಧಕರು :-**

★ ವಿದ್ವಾನ್ ಬಿ.ಎನ್. ಮಾಧವಾಚಾರ್ಯ, ಬೆಂಗಳೂರು
ವಿದ್ವಾನ್ ತಾಮ್ರಪರ್ಣಿ ಶ್ರೀನಿವಾಸಾಚಾರ್ಯರ ಶಿಷ್ಯರು

★ ವಿಶ್ವಸೌರಭದ ಅನೇಕ ಭಾಗಗಳನ್ನು ವಿದ್ವಾನ್ ಪಿ.ಎಸ್. ಶೇಷಗಿರಿ ಆಚಾರ್ಯರು ಅನುವಾದ ಮಾಡಿರುತ್ತಾರೆ.

# ಯುಕ್ತಿಮಲ್ಲಿಕಾವಿಶ್ವಸೌರಭಮ್ – ಸಂಪುಟ – ೭

## ವಿಷಯಾನುಕ್ರಮಣಿಕೆ

॥ ಶ್ರೀಮದ್‌ಹನುಮದ್ಭೀಮಮಧ್ವಾಂತರ್ಗತರಾಮಕೃಷ್ಣವೇದವ್ಯಾಸಾತ್ಮಕ-
ಲಕ್ಷ್ಮೀಹಯಗ್ರೀವಾಯನಮಃ ॥

**ಪ್ರಪಂಚೋ ಯದಿ ವಿದ್ಯೇತ ನಿವರ್ತೇತ ನ ಸಂಶಯಃ ।**
**ಮಾಯಾಮಾತ್ರಮಿದಂ ದ್ವೈತಮದ್ವೈತಂ ಪರಮಾರ್ಥತಃ ॥ ೧ ॥**

**ಅರ್ಥ–** ಪ್ರಪಂಚೋ ಯದಿ ವಿದ್ಯೇತ= ಪ್ರಪಂಚವೆಂಬ ಪಂಚಭೇದವು ಹುಟ್ಟುವುದಾದರೆ, ನಿವರ್ತೇತ= ನಾಶಹೊಂದೀತು, ನ ಸಂಶಯಃ= ಸಂಶಯವಿಲ್ಲ. ಆದ್ದರಿಂದ ಅದಕ್ಕೆ ಹುಟ್ಟು ಇಲ್ಲ, ಅನಾದಿ. ಇದಂ ದ್ವೈತಂ= ಈ ಭೇದವೆಂಬುದು, ಮಾಯಾಮಾತ್ರಂ= ಮಾಯೆಯೆಂದರೆ ಭಗವಂತನ ಪ್ರಜ್ಞೆ. ಅದು ಭೇದಪ್ರಪಂಚವನ್ನು ತಿಳಿದು ರಕ್ಷಿಸುತ್ತದೆ. ಅವನಿಗೆ ಭ್ರಾಂತಿ ಇಲ್ಲ. ಅವನು ತಿಳಿಯುವನೆಂದರೆ ಭೇದ ಪ್ರಪಂಚ ಸತ್ಯ. 'ಅದ್ವೈತಂ ಪರಮಾರ್ಥತಃ'= ಭಗವಂತನನ್ನು ಅದ್ವೈತ ಎಂದು ಕರೆಯುವುದು ಅವನು ಪರಮ ಅರ್ಥ, ಸರ್ವೋತ್ತಮ ವಸ್ತು, ಅದ್ವಿತೀಯ ಎಂಬ ಅರ್ಥದಲ್ಲಿ ಹೊರತು ದ್ವೈತ ಪ್ರಪಂಚವಿಲ್ಲದವನೆಂದಲ್ಲ.

**ಅನುವಾದ-** ಪಂಚಭೇದಗಳು ಒಂದು ಪಕ್ಷ ಉತ್ಪತ್ತಿಯನ್ನು ಹೊಂದುವುದಾದರೆ ಖಂಡಿತವಾಗಿ ನಿವೃತ್ತಿಯನ್ನು ಹೊಂದಬೇಕು. ಈ ಭೇದವು ಈಶ್ವರನ ಇಚ್ಛೆಯಿಂದ ನಿರ್ಮಿತವಾಗಿದೆ ಮತ್ತು ರಕ್ಷಿಸಲ್ಪಟ್ಟಿದೆ. ಸರ್ವೋತ್ತಮ ವಸ್ತುವಿನ ದೃಷ್ಟಿಯಿಂದ ಅದ್ವೈತವು ಹೇಳಲ್ಪಡುತ್ತದೆ.

**ವಿವರಣೆ** – ಪ್ರತಿಯೊಬ್ಬ ಅಜ್ಞಜೀವರಿಗೆ ದೇಹಾದಿ ಸಂಬಂಧವಿದೆ ಸ್ವಸ್ವಾಮಿಭಾವ ಸಂಬಂಧದ ಮಿಥ್ಯಾ ಅಭಿಮಾನವಿದೆ. ಈ ಪ್ರಾಕೃತದೇಹಾದಿಬಂಧವು ಸ್ವತಂತ್ರವಾಗಿ ಸ್ವಾಭಾವಿಕವಾಗಿ ಬಂಧಕವಾಗಿಲ್ಲ. ಇಂತಹ ಅಸ್ವತಂತ್ರವಾದ ಬಂಧವು ಒಂದು ವೇಳೆ ಅಸ್ವಾಭಾವಿಕವಾಗಿ ಇರುವುದಾದರೂ ಭಗವಂತನ ಅನುಗ್ರಹದಿಂದ ಖಂಡಿತವಾಗಿಯೂ ನಾಶವಾಗುತ್ತದೆ. ಬ್ರಹ್ಮಾದಿದೇವತೆಗಳು ಈ ಪ್ರಪಂಚವನ್ನು ಭೇದವಿಶಿಷ್ಟ, ಸತ್ಯ ಎಂದು ತಿಳಿದಿದ್ದಾರೆ. ಆದರೂ ಅಜ್ಞರು ಇದಕ್ಕಿಂತಲೂ ವಿಪರೀತವಾಗಿ ಜಗತ್ತನ್ನು ತಿಳಿಯುತ್ತಾರೆ. ಇಂತಹ ವಿಪರೀತವಾದ ಜ್ಞಾನವು ಏಕೆ ಉಂಟಾಯಿತೆಂದರೆ, ಅದು ಕೇವಲ ಭಗವಂತನ ಇಚ್ಛೆಯಿಂದ ಉಂಟಾದದ್ದೆಂದು ತಿಳಿಯಬೇಕು.

ವಿಕಲ್ಪೋ ವಿನಿವರ್ತೇತ ಕಲ್ಪಿತೋ ಯದಿ ಕೇನಚಿತ್ ।
ಉಪದೇಶಾದಯಂ ವಾದೋ ಜ್ಞಾತೇ ದ್ವೈತಂ ನ ವಿದ್ಯತೇ ॥ ೨ ॥

**ಅರ್ಥ–** ವಿಕಲ್ಪೋ= ಭೇದವು ಯದಿ ಕೇನಚಿತ್ ಕಲ್ಪಿತಃ= ಯಾರಿಂದಾದರೂ ಕಲ್ಪಿತವಾಗಿದ್ದಲ್ಲಿ, ವಿನಿವರ್ತೇತ= ನಿವೃತ್ತಿ ಹೊಂದಬೇಕಾದೀತು, ನಿವೃತ್ತಿ ಹೊಂದುವುದಿಲ್ಲವಾದ್ದರಿಂದ ಕಲ್ಪಿತವಲ್ಲ, ಸತ್ಯವೇ ಆಗಿದೆ. ಉಪದೇಶಾದ್ ಅಯಂ ವಾದಃ= ಗುರೂಪ-ದೇಶದಿಂದಲೇ ಈ ತತ್ವವಾದವು ತಿಳಿಯಬೇಕು. ಅಜ್ಞಾತೇ= ತಿಳಿಯದಿದ್ದರೆ, ದ್ವೈತಂ ನ ವಿದ್ಯತೇ= ಭೇದ ವಾಸ್ತವದಲ್ಲಿ ಇಲ್ಲ ಎಂದೇ ನಂಬುತ್ತಾರೆ ಅಜ್ಞಾನಿಗಳು.

**ಅನುವಾದ-** ಈ ಭೇದಪಂಚಕವು ಯಾರಿಂದಲಾದರೂ ಕಲ್ಪಿಸಲ್ಪಟ್ಟದ್ದರೆ ನಿವೃತ್ತಿಯನ್ನು ಹೊಂದಬೇಕಾದೀತು. ಈ ವಾದವನ್ನು ಗುರುಗಳ ಉಪದೇಶದಿಂದಲೇ ತಿಳಿಯಬೇಕು. ಅಜ್ಞಾನಿಗಳ ಮತದಲ್ಲಿ ಮಾತ್ರ ಭೇದವು ಇಲ್ಲ.

**ಭಾವವಿಲಾಸಿನೀ–** ವಿಶ್ವಸೌರಭ ಸರ್ವಸ್ವಂ ನಿರೂಪಯನ್ ಜಗನ್ಮಿಥ್ಯಾತ್ವ (ಪ್ರಪಂಚಮಿಥ್ಯಾತ್ವ) ಪ್ರತಿಪಾದಕತ್ವೇನ ಪರಾಭಿಮತಶ್ರುತೇರನುಕೂಲಮರ್ಥಂ ವದಂಸ್ತಾಂ ಶ್ರುತಿಮನುವದತಿ ॥ **ಪ್ರಪಂಚ ಇತ್ಯಾದಿನಾ ॥** 'ಜ್ಞಾತೇ ದ್ವೈತಂ ನವಿದ್ಯತ' ಇತ್ಯೇತದಂತ ಶ್ರುತೇಃ ಶ್ಲೋಕ - ದ್ವಯಮಿದಮ್ ॥

**ವಿವರಣೆ–** ದೇಹಾದಿಸಂಬಂಧವು, ಭೇದಪ್ರಪಂಚವು, ಮಿಥ್ಯೆ ಎಂದು ಅಜ್ಞಾನಿಗಳು ಹೇಳುತ್ತಾರೆ. ಆದರೆ ಭೇದ, ಸಂಬಂಧ ಇವುಗಳು ಒಂದು ವೇಳೆ ಕಲ್ಪಿತ ಎಂದು ಆಗಿದ್ದರೆ, ಆಗ ಜ್ಞಾನಿಗಳ ಉಪದೇಶದಿಂದ ನಿವೃತ್ತಿಯಾಗುತ್ತಿದ್ದವು. ಆದರೆ ಈ ಭೇದಾದಿಗಳು ಸತ್ಯವಾಗಿವೆ. ಇದು ಬೇರೆ ರೀತಿಯಾಗಿ ತಿಳಿಯಲ್ಪಟ್ಟಾಗ ತತ್ತ್ವಜ್ಞಾನದಿಂದ ಇಂತಹ ತಿಳುವಳಿಕೆ ಇಲ್ಲದಾಗುತ್ತದೆ. ಹೀಗೆ ಸಜ್ಜನರು ಅಭಿಪ್ರಾಯ ಪಡುತ್ತಾರೆ.

ಇಯಂ ಶ್ರುತಿಃ ಪಂಚಭೇದನಿತ್ಯತಾಸತ್ಯತೇ ಸ್ಫುಟಮ್ ।
ಸಯುಕ್ತಿಕಂ ಸಾಧಯಿತುಂ ಪ್ರಾವರ್ತತ ಕಿಲ ಕ್ರಮಾತ್ ॥ ೩ ॥

**ಅರ್ಥ–** ಇಯಂ ಶ್ರುತಿಃ = ಈ ಆಗಮವು, ಪಂಚಭೇದನಿತ್ಯತಾಸತ್ಯತೇ = ಪಂಚಭೇದಗಳ ನಿತ್ಯತ್ವವು ಮತ್ತು ಸತ್ಯತ್ವಗಳು ಇವುಗಳನ್ನು, ಸ್ಫುಟಂ = ಸ್ಪಷ್ಟವಾಗಿ, ಸಯುಕ್ತಿಕಂ = ಯುಕ್ತಿ-ಸಹಿತವಾಗಿ, ಕ್ರಮಾತ್ = ಕ್ರಮವಾಗಿ, ಸಾಧಯಿತುಂ = ಸಮರ್ಥಿಸಲು, ಪ್ರಾವರ್ತತ ಕಿಲ = ಪ್ರವೃತ್ತವಾಗಿದೆಯಷ್ಟೇ.

**ಅನುವಾದ-** ಈ ಶ್ರುತಿಯು ಪಂಚಭೇದಗಳಿಗೆ ಸಯುಕ್ತಿಕವಾಗಿ ನಿತ್ಯತ್ವ ಮತ್ತು ಸತ್ಯತ್ವಗಳನ್ನು ಸ್ಪಷ್ಟವಾಗಿ ಸಾಧಿಸಲು ಹೊರಟಿದೆ.

**ಭಾವವಿಲಾಸಿನೀ**– ಇಯಮ್ ಉಕ್ತಾ ಶ್ರುತಿಃ । ಮಾಂಡೂಕೋಪನಿಷದ್ವಾಕ್ಯದ್ವಯೇನಾಪಿ ತರ್ಕರೀತ್ಯಾ ಪ್ರವರ್ತನಾತ್ಸಯುಕ್ತಿಕಮಿತ್ಯುಕ್ತಮ್ । ಯದಿ ಪದದ್ವಯಸ್ಯ ಲಿಜಂತಪದಾನಾಂ ಚ ತರ್ಕಸ್ಫೋರಕಾರಣಾಮಪ್ಯಸಂದಿಗ್ಧತ್ವಾತ್ ಸ್ಫುಟಮಿತ್ಯುಕ್ತಮ್ । ಕ್ರಮಾತ್ ಪ್ರಥಮವಾಕ್ಯೇನ ಭೇದಪಂಚಕನಿತ್ಯತ್ವಂ ದ್ವಿತೀಯವಾಕ್ಯೇನ ತತ್ಸತ್ಯತ್ವಮಿತ್ಯರ್ಥಃ ॥೩॥

**ವಿವರಣೆ** – ಈ ಶ್ರುತಿಯು ಮೇಲ್ನೋಟಕ್ಕೆ ಮಾಯಾವಾದಿಸಿದ್ಧಾಂತಕ್ಕೆ ಪೂರಕವಾಗುವಂತೆ ಕಾಣುತ್ತದೆ. ವಸ್ತುತಃ ಷಡ್ವಿಧತಾತ್ಪರ್ಯಲಿಂಗಗಳಿಂದ ವಿಚಾರಮಾಡಲಾಗಿ ಜೀವ-ಜೀವರಿಗೆ, ಜಡ-ಜಡಕ್ಕೆ, ಜೀವ-ಜಡಕ್ಕೆ, ಜೀವ-ಪರಮಾತ್ಮರಿಗೆ, ಜಡ-ಪರಮಾತ್ಮರಿಗೆ, ಎಂಬ ಐದು ವಿಧ ಭೇದವನ್ನು ತರ್ಕ ರೀತಿಯಿಂದ ಯುಕ್ತಿಯುಕ್ತವಾಗಿ ಈ ಶ್ರುತಿಯು ಸಾಧಿಸುತ್ತದೆ. ಶ್ರುತಿಯ ಮೊದಲ ವಾಕ್ಯವು ಪಂಚಭೇದವು ನಿತ್ಯವೆಂಬ ಅಂಶವನ್ನು, ಎರಡನೆಯ ವಾಕ್ಯವು ಪಂಚಭೇದವು ಸತ್ಯ ಎಂಬ ವಿಷಯವನ್ನು ಸಾಧಿಸುತ್ತದೆ. ಭೇದಸಮೂಹವೇ ಪ್ರಪಂಚ ಎಂಬ ಅರ್ಥಕ್ಕೆ ವ್ಯಾಕರಣದಿಂದ ಪ್ರಾಮಾಣ್ಯವನ್ನು ಮುಂದೆ ಸಮರ್ಥಿಸುತ್ತಾರೆ.

ಯದಾಹ ಪಂಚದ್ದಶತೌ ವರ್ಗೇ ವೇತಿ ಸ ಪಾಣಿನಿಃ ।
ತೇನ ವರ್ಗೇ ನಿಪಾತೌ ದ್ವೌ ವಾಶಬ್ದೇನ ತಥಾಽಪರಮ್ ॥ ೪ ॥

ಅನುಶಾಸ್ತಿ ನ ಚೇತ್‌ತತ್‌ಸ್ಯಾದವ್ಯಯಂ ಸವ್ಯಯಂ ಕಿಲ ।
ಸ ಚ ಪ್ರಯೋಗಬಲತಃ ಪಂಚ ಇತ್ಯೇವ ಗಮ್ಯತೇ ॥ ೫ ॥

**ಅರ್ಥ**– ಯತ್ = ಯಾವ ಕಾರಣದಿಂದ, ಸಃ ಪಾಣಿನಿಃ = ಆ ಪಾಣಿನಿಯು, ಪಂಚದ್ದಶತೌ ವರ್ಗೇವಾ ಎಂದು, ಆಹ= ಹೇಳಿರುವನೋ, ತೇನ= ಅಕಾರಣದಿಂದ, ವರ್ಗೇ = ಪಂಚ ಮತ್ತು ದಶಗಳ ವರ್ಗಎಂಬ ಅರ್ಥಗಳಲ್ಲಿ, ಪಂಚದ್ದಶತೌ = ಪಂಚತ್ ದಶತ್ ಎಂಬ ಎರಡು ನಿಪಾತಗಳನ್ನು, ವಾಶಬ್ದೇನ= ವಾ ಶಬ್ದದಿಂದ, ತಥಾ ಅಪರಂ= ಹಾಗೇ ಪಂಚ ಎಂದು ಇನ್ನೊಂದು ನಿಪಾತವನ್ನು, ಅನುಶಾಸ್ತಿ= ಹೇಳಿರುವನು.

ನ ಚೇತ್ = ವಾ ಎಂಬ ಶಬ್ದದಿಂದ ಬೇರೊಂದನ್ನು ಪಿಧಾನಮಾಡಿದ್ದರೆ, ತತ್ ಅವ್ಯಯಂ = ಆ 'ವಾ' ಎಂಬ ಅವ್ಯಯವು, ಸವ್ಯಯಂ = ವ್ಯಯದಿಂದ ಸಹಿತವಾದದ್ದಾಗಿ (ವ್ಯರ್ಥವಾದದ್ದಾಗಿ) ಸ್ಯಾತ್ = ಆದೀತು. ಸ ಚ = ಆ ಪಂಚ ಎಂಬ ನಿಪಾತವಾದರೂ, ಪ್ರಯೋಗಬಲತಃ = ಪಂಚ ಎಂಬ ಪ್ರಯೋಗಸಾಮರ್ಥ್ಯದಿಂದ, ಪಂಚ ಇತ್ಯೇವ = ಪಂಚ ಎಂಬುದಾಗಿಯೇ, ಗಮ್ಯತೇ = ತಿಳಿಯಲ್ಪಡುತ್ತದೆ.

**ಅನುವಾದ**- ಪಾಣಿನಿಯು ಪಂಚದ್ದಶತೌ ವರ್ಗೇವಾ ಎಂದು ಹೇಳಿದ್ದಾನೆ. ಆದ್ದರಿಂದ ಪಂಚತ್ ಮತ್ತು ದಶತ್ ಎಂಬ ಎರಡು ಶಬ್ದಗಳು ಪಂಚವಸ್ತುಗಳ ಅಥವಾ

ದಶವಸ್ತುಗಳ ಸಮೂಹ ಎಂಬ ಅರ್ಥದಲ್ಲಿ ನಿಪಾತವಾಗಿದೆ. 'ವಾ' ಶಬ್ದದಿಂದ ಪಾಣಿನಿಯು ಇನ್ನೊಂದು ನಿಪಾತವನ್ನು ಹೇಳುತ್ತಾನೆ. ಇಲ್ಲದಿದ್ದರೆ ವಾ ಶಬ್ದವು ವ್ಯರ್ಥವಾಗುತ್ತದೆಯಷ್ಟೆ. ಆ ಇನ್ನೊಂದು ನಿಪಾತವಾದರೂ ಪಂಚ ಎಂಬ ಪ್ರಯೋಗ ಸಾಮರ್ಥ್ಯದಿಂದ ಪರರಿಂದ ಪಂಚ ಎಂದೇ ತಿಳಿಯುತ್ತದೆ.

**ಭಾವವಿಲಾಸಿನೀ–** ಯತ್ ಯಸ್ಮಾತ್ । ವರ್ಗೇ ಪಂಚಾನಾಂ ದಶಾನಾಂ ಚ ವರ್ಗೇ ದ್ವೌ ನಿಪಾತೌ ಪಂಚತ್ ದಶತ್ ಇತಿ ನಿಪಾತೌ (ನಿಪಾತ್ಯತೇ) । ಅಪರಂ ಪಂಚ ಇತಿ ನಿಪಾತಮ್ । ನ ಚೇತ್ ವಾಶಬ್ದೇನ ನಿಪಾತಾಂತರಂ ನಾನುಶಾಸ್ತಿ ಚೇತ್ । ತದವ್ಯಯಂ ವಾ ಇತ್ಯವ್ಯಯಮ್ । ವ್ಯರ್ಥಂ ಸ್ಯಾದಿತ್ಯರ್ಥಃ ಸವ್ಯಯಂ ವ್ಯಯೇನ ಸಹಿತಮ್ । (ವ್ಯರ್ಥಮಿತ್ಯರ್ಥಃ) ಉಕ್ತನಿಪಾತದ್ವಯಾನುಶಾಸನಸ್ಯ ಪಂಚದ್ದಶತೌ ವರ್ಗೇ ಇತ್ಯೇತಾವತ್ಯೆವ ಪೂರ್ತೇಸ್ತಸ್ಯ ಚಾನುಶಾಸನಸ್ಯ ನಿತ್ಯತ್ವೇನ ಕದಾಚಿತ್ ಭವತಃ ಕದಾಚಿನ್ನ ಭವತ (ನ ಕದಾಚಿದ್ಭವತಃ ಕದಾಚಿದ್ಭವತಃ) ಇತಿ ತತ್ರೈವ ತಯೋರ್ವಿಕಲ್ಪಾಸಂಭವಾತ್ ವಾಶಬ್ದಸ್ಯ ವೈಯರ್ಥ್ಯಮೇವ ಸ್ಯಾತ್ । ಪ್ರಕೃತಿಪ್ರತ್ಯಯವಿಧಾನಾದಿಶಬ್ದಾನುಶಾಸನಶೂನ್ಯತ್ವೇಽಪಿ ಕೇವಲಂ ಪ್ರಯೋಗಬಲಾದೇವ ನಿಪಾತ್ಯಮಾನಸ್ಯ ಶಬ್ದಸ್ಯ ನಿಪಾತತ್ವೇನ ಸ್ವತಸ್ಸಿದ್ಧಶಬ್ದಾಂತರಸ್ಯ ನಿಪಾತ-ಪಂಕ್ತಾವತ್ರ ಗ್ರಹಣಾಯೋಗಾಚ್ಚ ವಾಶಬ್ದಸ್ಯ ವೈಯರ್ಥ್ಯಮೇವ ಸ್ಯಾತ್ । ಶ್ರೌತ ಪ್ರಯೋಗಾನುಸಾರೇಣ ಪೂರ್ವನಿಪಾಂತರಗ್ರಹಣೇ (ಪೂರ್ವನಿಪಾತಾರ್ಥೇ ಪಂಚ ಇತಿ ನಿಪಾತಾಂತರಗ್ರಹಣೇ) ತು ಪಂಚಾನಾಂ ವರ್ಗ ಇತ್ಯಸ್ಮಿನ್ನರ್ಥೇ ಸ ವಾ ನಿಪಾತಃ ಅಯಂ ವಾ ನಿಪಾತ ಇತ್ಯರ್ಥಸಂಭವೇನ ವಾ ಶಬ್ದಸ್ಯ ಸಾರ್ಥಕ್ಯಂ ಸ್ಯಾತ್ । ಪೂರ್ವವತ್ಸ್ಪಷ್ಟಮನುಕ್ತ್ವಾ ವಾಶಬ್ದೇನೈವ ಸೂಚನಾತ್ ಸೂತ್ರತ್ವಮಪಿ ಸಮ್ಯಕ್‌ಸಂಪಾದಿತಂ ಸ್ಯಾತ್ । ತಸ್ಮಾದಿದಮೇವ ಸೂತ್ರಕೃತೋಽಭಿಪ್ರೇತಮಿತಿ ಭಾವಃ । ಸಃ ವಾಶಬ್ದಸೂಚಿತ ನಿಪಾತಃ । ಪ್ರಯೋಗಬಲತಃ ಪ್ರಪಂಚ (ಪಂಚ) ಇತಿ ಪ್ರಯೋಗಬಲತಃ ॥ ೪–೫ ॥

**ವಿವರಣೆ–** ಪಂಚದ್ದಶತೌ ವರ್ಗೇ ವಾ ಎಂಬ ಸೂತ್ರದಲ್ಲಿ ಐದರ ಸಮೂಹ, ಹತ್ತರ ಸಮೂಹ ಎಂಬ ಅರ್ಥದಲ್ಲಿ ಪಂಚತ್ ದಶತ್ ಎಂಬ ಶಬ್ದಗಳನ್ನು ನಿಪಾತಮಾಡಿಲಾಗಿದೆ. ನಿಪಾತ ಎಂದರೆ ಪ್ರಕೃತಿ ಪ್ರತ್ಯಯಗಳ ಯೋಜನೆಗಳನ್ನು ಹೇಳದೆ ಸಿದ್ಧರೂಪಗಳನ್ನು ಹೇಳುವುದು. ಆದ್ದರಿಂದ ಪ್ರಕೃತ ಪ್ರಪಂಚ ಎಂದರೆ ಐದರ ಸಮೂಹ ಎಂದು ಸಿದ್ಧವಾಗುತ್ತದೆ.

ಪಾಣಿನಿಯು ದಶತ್ ಪಂಚತ್ ಎಂಬ ನಿಪಾತದೊಡನೆ ವಾ ಎಂಬ ಅವ್ಯಯವನ್ನು ಪ್ರಯೋಗಮಾಡಿದ್ದಾನೆ. ಅಲ್ಲಿ ವಾ ಎಂಬ ಅವ್ಯಯವು ಪಂಚ ಎಂಬ ಶಬ್ದವನ್ನೇ ತಿಳಿಸುತ್ತದೆ. ಅದು ಅಲ್ಲ ಎಂದಾದರೆ ವಾ ಎಂಬ ಅವ್ಯಯವು ವ್ಯರ್ಥವಾಗಬೇಕಾದೀತು. ಆದ್ದರಿಂದ ಯೌಗಿಕವಾಗಿಯೂ ಪ್ರಪಂಚ ಎಂಬ ಶಬ್ದಕ್ಕೆ ಐದರ ಸಮೂಹ ಎಂಬ ಅರ್ಥವೇ ಸಿದ್ಧವಾಗುತ್ತದೆ.

**ಭಾವವಿಲಾಸಿನೀ–** ಇಯಮ್ ಉಕ್ತಾ ಶ್ರುತಿಃ । ಮಾಂಡೂಕೋಪನಿಷದ್ವಾಕ್ಯದ್ವಯೇನಾಪಿ ತರ್ಕರೀತ್ಯಾ ಪ್ರವರ್ತನಾತ್ಸಯುಕ್ತಿಕಮಿತ್ಯುಕ್ತಮ್ । ಯದಿ ಪದದ್ವಯಸ್ಯ ಲಿಙಂತಪದಾನಾಂ ಚ ತರ್ಕಸ್ಫೋರಕಾರಣಾಮಪ್ಯಸಂದಿಗ್ಧತ್ವಾತ್ ಸ್ಫುಟಮಿತ್ಯುಕ್ತಮ್ । ಕ್ರಮಾತ್ ಪ್ರಥಮವಾಕ್ಯೇನ ಭೇದಪಂಚಕನಿತ್ಯತ್ವಂ ದ್ವಿತೀಯವಾಕ್ಯೇನ ತತ್ಸತ್ಯತ್ವಮಿತ್ಯರ್ಥಃ ॥೩॥

**ವಿವರಣೆ –** ಈ ಶ್ರುತಿಯು ಮೇಲ್ನೋಟಕ್ಕೆ ಮಾಯಾವಾದಿಸಿದ್ಧಾಂತಕ್ಕೆ ಪೂರಕವಾಗುವಂತೆ ಕಾಣುತ್ತದೆ. ವಸ್ತುತಃ ಷಡ್ವಿಧತಾತ್ಪರ್ಯಲಿಂಗಗಳಿಂದ ವಿಚಾರಮಾಡಲಾಗಿ ಜೀವ-ಜೀವರಿಗೆ, ಜಡ-ಜಡಕ್ಕೆ, ಜೀವ-ಜಡಕ್ಕೆ, ಜೀವ-ಪರಮಾತ್ಮರಿಗೆ, ಜಡ-ಪರಮಾತ್ಮರಿಗೆ, ಎಂಬ ಐದು ವಿಧ ಭೇದವನ್ನು ತರ್ಕ ರೀತಿಯಿಂದ ಯುಕ್ತಿಯುಕ್ತವಾಗಿ ಈ ಶ್ರುತಿಯು ಸಾಧಿಸುತ್ತದೆ. ಶ್ರುತಿಯ ಮೊದಲ ವಾಕ್ಯವು ಪಂಚಭೇದವು ನಿತ್ಯವೆಂಬ ಅಂಶವನ್ನು, ಎರಡನೆಯ ವಾಕ್ಯವು ಪಂಚಭೇದವು ಸತ್ಯ ಎಂಬ ವಿಷಯವನ್ನು ಸಾಧಿಸುತ್ತದೆ. ಭೇದಸಮೂಹವೇ ಪ್ರಪಂಚ ಎಂಬ ಅರ್ಥಕ್ಕೆ ವ್ಯಾಕರಣದಿಂದ ಪ್ರಾಮಾಣ್ಯವನ್ನು ಮುಂದೆ ಸಮರ್ಥಿಸುತ್ತಾರೆ.

**ಯದಾಹ ಪಂಚದ್ದಶತೌ ವರ್ಗೇ ವೇತಿ ಸ ಪಾಣಿನಿಃ ।**
**ತೇನ ವರ್ಗೇ ನಿಪಾತೌ ದ್ವೌ ವಾಶಬ್ದೇನ ತಥಾಽಪರಮ್ ॥ ೪ ॥**

**ಅನುಶಾಸ್ತಿ ನ ಚೇತ್‌ತತ್‌ಸ್ಯಾದವ್ಯಯಂ ಸವ್ಯಯಂ ಕಿಲ ।**
**ಸ ಚ ಪ್ರಯೋಗಬಲತಃ ಪಂಚ ಇತ್ಯೇವ ಗಮ್ಯತೇ ॥ ೫ ॥**

**ಅರ್ಥ–** ಯತ್ = ಯಾವ ಕಾರಣದಿಂದ, ಸಃ ಪಾಣಿನಿಃ = ಆ ಪಾಣಿನಿಯು, ಪಂಚದ್ದಶತೌ ವರ್ಗೇವಾ ಎಂದು, ಆಹ= ಹೇಳಿರುವನೋ, ತೇನ= ಆಕಾರಣದಿಂದ, ವರ್ಗೇ = ಪಂಚ ಮತ್ತು ದಶಗಳ ವರ್ಗಎಂಬ ಅರ್ಥಗಳಲ್ಲಿ, ಪಂಚದ್ದಶತೌ = ಪಂಚತ್ ದಶತ್ ಎಂಬ ಎರಡು ನಿಪಾತಗಳನ್ನು, ವಾಶಬ್ದೇನ= ವಾ ಶಬ್ದದಿಂದ, ತಥಾ ಅಪರಂ= ಹಾಗೇ ಪಂಚ ಎಂದು ಇನ್ನೊಂದು ನಿಪಾತವನ್ನು, ಅನುಶಾಸ್ತಿ= ಹೇಳಿರುವನು.

ನ ಚೇತ್ = ವಾ ಎಂಬ ಶಬ್ದದಿಂದ ಬೇರೊಂದನ್ನು ವಿಧಾನಮಾಡಿದ್ದರೆ, ತತ್ ಅವ್ಯಯಂ = ಆ 'ವಾ' ಎಂಬ ಅವ್ಯಯವು, ಸವ್ಯಯಂ = ವ್ಯಯದಿಂದ ಸಹಿತವಾದದ್ದಾಗಿ (ವ್ಯರ್ಥವಾದದ್ದಾಗಿ) ಸ್ಯಾತ್ = ಆದೀತು. ಸ ಚ = ಆ ಪಂಚ ಎಂಬ ನಿಪಾತವಾದರೂ, ಪ್ರಯೋಗಬಲತಃ = ಪಂಚ ಎಂಬ ಪ್ರಯೋಗಸಾಮರ್ಥ್ಯದಿಂದ, ಪಂಚ ಇತ್ಯೇವ = ಪಂಚ ಎಂಬುದಾಗಿಯೇ, ಗಮ್ಯತೇ = ತಿಳಿಯಲ್ಪಡುತ್ತದೆ.

**ಅನುವಾದ-** ಪಾಣಿನಿಯು ಪಂಚದ್ದಶತೌ ವರ್ಗೇವಾ ಎಂದು ಹೇಳಿದ್ದಾನೆ. ಆದ್ದರಿಂದ ಪಂಚತ್ ಮತ್ತು ದಶತ್ ಎಂಬ ಎರಡು ಶಬ್ದಗಳು ಪಂಚವಸ್ತುಗಳ ಅಥವಾ

ದಶವಸ್ತುಗಳ ಸಮೂಹ ಎಂಬ ಅರ್ಥದಲ್ಲಿ ನಿಪಾತವಾಗಿದೆ. 'ವಾ' ಶಬ್ದದಿಂದ ಪಾಣಿನಿಯು ಇನ್ನೊಂದು ನಿಪಾತವನ್ನು ಹೇಳುತ್ತಾನೆ. ಇಲ್ಲದಿದ್ದರೆ ವಾ ಶಬ್ದವು ವ್ಯರ್ಥವಾಗುತ್ತದೆಯಷ್ಟೆ. ಆ ಇನ್ನೊಂದು ನಿಪಾತವಾದರೂ ಪಂಚ ಎಂಬ ಪ್ರಯೋಗ ಸಾಮರ್ಥ್ಯದಿಂದ ಪರರಿಂದ ಪಂಚ ಎಂದೇ ತಿಳಿಯುತ್ತದೆ.

**ಭಾವವಿಲಾಸಿನೀ–** ಯತ್ ಯಸ್ಮಾತ್ । ವರ್ಗೇ ಪಂಚಾನಾಂ ದಶಾನಾಂ ಚ ವರ್ಗೇ ದ್ವೌ ನಿಪಾತೌ ಪಂಚತ್ ದಶತ್ ಇತಿ ನಿಪಾತೌ (ನಿಪಾತ್ಯತೇ) । ಅಪರಂ ಪಂಚ ಇತಿ ನಿಪಾತಮ್ । ನ ಚೇತ್ ವಾಶಬ್ದೇನ ನಿಪಾತಾಂತರಂ ನಾನುಶಾಸ್ತಿ ಚೇತ್ । ತದವ್ಯಯಂ ವಾ ಇತ್ಯವ್ಯಯಮ್ । ವ್ಯರ್ಥಂ ಸ್ಯಾದಿತ್ಯರ್ಥಃ ಸವ್ಯಯಂ ವ್ಯಯೇನ ಸಹಿತವ್ । (ವ್ಯರ್ಥಮಿತ್ಯರ್ಥಃ) ಉಕ್ತನಿಪಾತದ್ವಯಾನುಶಾಸನಸ್ಯ ಪಂಚದ್ದಶತೌ ವರ್ಗೇ ಇತ್ಯೇತಾವತ್ಯೈವ ಪೂರ್ತೇಸ್ತಸ್ಯ ಚಾನುಶಾಸನಸ್ಯ ನಿತ್ಯತ್ವೇನ ಕದಾಚಿತ್ ಭವತಃ ಕದಾಚಿನ್ನ ಭವತ (ನ ಕದಾಚಿದ್ಭವತಃ ಕದಾಚಿದ್ಭವತಃ) ಇತಿ ತತ್ಯೈವ ತಯೋರ್ವಿಕಲ್ಪಾಸಂಭವಾತ್ ವಾಶಬ್ದಸ್ಯ ವೈಯರ್ಥ್ಯಮೇವ ಸ್ಯಾತ್ । ಪ್ರಕೃತಿಪ್ರತ್ಯಯವಿಧಾನಾದಿಶಬ್ದಾನುಶಾಸನಶೂನ್ಯತ್ವೇಽಪಿ ಕೇವಲಂ ಪ್ರಯೋಗಬಲಾದೇವ ನಿಪಾತ್ಯಮಾನಸ್ಯ ಶಬ್ದಸ್ಯ ನಿಪಾತತ್ವೇನ ಸ್ವತಸ್ಸಿದ್ಧಶಬ್ದಾಂತರಸ್ಯ ನಿಪಾತ-ಪಂಕ್ತಾವತ್ರ ಗ್ರಹಣಾಯೋಗಾಚ್ಚ ವಾಶಬ್ದಸ್ಯ ವೈಯರ್ಥ್ಯಮೇವ ಸ್ಯಾತ್ । ಶ್ರೌತ ಪ್ರಯೋಗಾನುಸಾರೇಣ ಪೂರ್ವನಿಪಾಂತರಗ್ರಹಣೇ (ಪೂರ್ವನಿಪಾತಾರ್ಥೇ ಪಂಚ ಇತಿ ನಿಪಾತಾಂತರಗ್ರಹಣೇ) ತು ಪಂಚಾನಾಂ ವರ್ಗ ಇತ್ಯಸ್ಮಿನ್ನರ್ಥೇ ಸ ವಾ ನಿಪಾತಃ ಅಯಂ ವಾ ನಿಪಾತ ಇತ್ಯರ್ಥಸಂಭವೇನ ವಾ ಶಬ್ದಸ್ಯ ಸಾರ್ಥಕ್ಯಂ ಸ್ಯಾತ್ । ಪೂರ್ವವತ್ಸ್ಪಷ್ಟಮನುಕ್ತ್ವಾ ವಾಶಬ್ದೇನೈವ ಸೂಚನಾತ್ ಸೂತ್ರತ್ವಮಪಿ ಸಮ್ಯಕ್ಸಂಪಾದಿತಂ ಸ್ಯಾತ್ । ತಸ್ಮಾದಿದಮೇವ ಸೂತ್ರಕೃತೋಽಭಿಪ್ರೇತಮಿತಿ ಭಾವಃ । ಸಃ ವಾಶಬ್ದಸೂಚಿತ ನಿಪಾತಃ । ಪ್ರಯೋಗಬಲತಃ ಪ್ರಪಂಚ (ಪಂಚ) ಇತಿ ಪ್ರಯೋಗಬಲತಃ ॥ ೪–೫ ॥

**ವಿವರಣೆ–** ಪಂಚದ್ದಶತೌ ವರ್ಗೇ ವಾ ಎಂಬ ಸೂತ್ರದಲ್ಲಿ ಐದರ ಸಮೂಹ, ಹತ್ತರ ಸಮೂಹ ಎಂಬ ಅರ್ಥದಲ್ಲಿ ಪಂಚತ್ ದಶತ್ ಎಂಬ ಶಬ್ದಗಳನ್ನು ನಿಪಾತಮಾಡಿಲಾಗಿದೆ. ನಿಪಾತ ಎಂದರೆ ಪ್ರಕೃತಿ ಪ್ರತ್ಯಯಗಳ ಯೋಜನೆಗಳನ್ನು ಹೇಳದೆ ಸಿದ್ಧರೂಪಗಳನ್ನು ಹೇಳುವುದು. ಆದ್ದರಿಂದ ಪ್ರಕೃತ ಪ್ರಪಂಚ ಎಂದರೆ ಐದರ ಸಮೂಹ ಎಂದು ಸಿದ್ಧವಾಗುತ್ತದೆ.

ಪಾಣಿನಿಯು ದಶತ್ ಪಂಚತ್ ಎಂಬ ನಿಪಾತದೊಡನೆ ವಾ ಎಂಬ ಅವ್ಯಯವನ್ನು ಪ್ರಯೋಗಮಾಡಿದ್ದಾನೆ. ಅಲ್ಲಿ ವಾ ಎಂಬ ಅವ್ಯಯವು ಪಂಚ ಎಂಬ ಶಬ್ದವನ್ನೇ ತಿಳಿಸುತ್ತದೆ. ಅದು ಅಲ್ಲ ಎಂದಾದರೆ ವಾ ಎಂಬ ಅವ್ಯಯವು ವ್ಯರ್ಥವಾಗಬೇಗಾದೀತು. ಆದ್ದರಿಂದ ಯೌಗಿಕವಾಗಿಯೂ ಪ್ರಪಂಚ ಎಂಬ ಶಬ್ದಕ್ಕೆ ಐದರ ಸಮೂಹ ಎಂಬ ಅರ್ಥವೇ ಸಿದ್ಧವಾಗುತ್ತದೆ.

**ತತ್‌ಪಂಚಾನಾಂ ಸಮೂಹೋऽಪಿ ಪಂಚೋऽಭೂದನುಶಾಸನಾತ್ ।**
**ತೇ ಚ ಪಂಚ ಪ್ರಸಿದ್ಧತ್ವಾದ್‌ಭೇದಾ ವೇದಾಂತವೇದಿಷು ॥ ೬ ॥**

**ಅರ್ಥ–** ತತ್ = ಆ ಕಾರಣದಿಂದ, ಅನುಶಾಸನಾತ್ = ವ್ಯಾಕರಣ ಸೂತ್ರದಿಂದ, ಪಂಚಾನಾಂ = ಐದರ, ಸಮೂಹೋऽಪಿ = ಸಮೂಹವೂ ಕೂಡ, ಪಂಚ = ಪಂಚ ಶಬ್ದಾರ್ಥವು, ಅಭೂತ್ = ಆಯಿತು, ತೇ = ಆ ವರ್ಗದಲ್ಲಿರುವ, ಪಂಚ = ಐದು, ವೇದಾಂತವೇದಿಷು = ತತ್ತ್ವವಾದಿಗಳಲ್ಲಿ, ಪ್ರಸಿದ್ಧತ್ವಾತ್ = ಪಂಚಭೇದತ್ವೇನ ಪ್ರಸಿದ್ಧವಾಗಿರುವುದರಿಂದ, ಭೇದಾಃ ಏವ = ಪಂಚಭೇದಗಳೇ.

**ಅನುವಾದ-** ಆದ್ದರಿಂದ ಐದರ ಸಮುದಾಯವು ಈ ವ್ಯಾಕರಣದ ಅನುಶಾಸನ ದಿಂದ ಪಂಚವೆಂದು ಕರೆಯಲ್ಪಡುತ್ತದೆ. ಆ ಪಂಚವಾದರೂ ವೇದಾಂತವಿದ್ಯೆಗಳಲ್ಲಿ ಪ್ರಸಿದ್ಧವಾದ ಭೇದಗಳೇ ಆಗಿವೆ.

**ಭಾವವಿಲಾಸಿನೀ–** ತತ್ತಸ್ಮಾತ್ । ಅಸ್ಯೈವ ವಿವರಣಮನುಶಾಸನಾದಿತಿ । ತೇ ವರ್ಗಾಂತಃಪಾತಿನಃ (ನಿಪಾತಃ) ಪಂಚ ವೇದಾಂತವೇದಿಷು ತತ್ತ್ವವಾದಿಷು ಪ್ರಸಿದ್ಧತ್ವಾತ್ ಪಂಚಭೇದತ್ವೇನ ಪ್ರಸಿದ್ಧತ್ವಾದ್ಭೇದಾ ಏವ । ಪ್ರಸಿದ್ಧಪರಿತ್ಯಾಗೇ ಕಾರಣಾಭಾವಾದಿತಿ ಭಾವಃ ॥ ೬ ॥

**ವಿವರಣೆ –** ವ್ಯಾಕರಣದಲ್ಲಿ ಐದರ ಸಮೂಹವನ್ನು ಪಂಚ ಎಂದು ಹೇಳಿದ್ದಾರೆ. ದ್ವೈತಸಿದ್ಧಾಂತದಲ್ಲಿ ಪ್ರಸಿದ್ಧವಾದ ಪಂಚಭೇದಗಳೇ ಪಂಚ ಎಂಬ ಶಬ್ದದ ಅರ್ಥ. ಪಂಚ ಎಂಬ ಶಬ್ದದಿಂದ ಈ ಪಂಚಭೇದವನ್ನೇ ಏಕೆ ಸ್ವೀಕರಿಸಬೇಕು ಎಂದರೆ, ಪ್ರಸಿದ್ಧವಾದದ್ದನ್ನು ಪರಿತ್ಯಾಗಮಾಡಬೇಕಾದರೆ ಏನಾದರೂ ಕಾರಣವಿರಬೇಕು. ಯಾವ ಕಾರಣವೂ ಇಲ್ಲವಾದ್ದರಿಂದ ಪ್ರಸಿದ್ಧ ಪಂಚಭೇದಗಳನ್ನು ಪಂಚ ಎಂಬ ಶಬ್ದದಿಂದ ಸ್ವೀಕರಿಸಬೇಕು.

**ಉಪಸರ್ಗೋऽಪವರ್ಗಾರ್ಥಜ್ಞಾನತ್ವಾದ್‌ವಿಷಿನಷ್ಟಿ ತಮ್ ।**
**ಅತಃ ಪಂಚವಿಧೋ ಭೇದಃ ಪ್ರಪಂಚೋಭೂದ್‌ವಿಚಾರಣೇ ॥ ೭ ॥**

**ಅರ್ಥ–** ಉಪಸರ್ಗಃ = ಪ್ರ ಎಂಬ ಉಪಸರ್ಗವು, ಅಪವರ್ಗಾರ್ಥಜ್ಞಾನತ್ವಾತ್ = ಯಾವುಗಳ ಜ್ಞಾನವು ಮೋಕ್ಷರೂಪಪ್ರಯೋಜನಕ್ಕಾಗಿದೆಯೋ ಅಂತಹ ಜ್ಞಾನ ವಿಷಯವಾದ್ದರಿಂದ, ತಂ = ಆ ಪಂಚವನ್ನು, ಪಿಶಿನಷ್ಟಿ = ಪ್ರತ್ಯಕ್ಷ ಎಂದು ವಿಶೇಷಣ ನೀಡಿ ಹೊಗಳುತ್ತದೆ, ಅತಃ = ಆದ್ದರಿಂದ, ಪಂಚವಿಧಃ = ಐದು ವಿಧವಾದ, ಭೇದಃ = ಭೇದವು, ವಿಚಾರಣೇ ಸತಿ = ವಿಚಾರಮಾಡುತ್ತಿರಲು, ಪ್ರಪಂಚಃ = ಪ್ರಪಂಚ ಶಬ್ದಾರ್ಥವು, ಅಭೂತ್ = ಆಯಿತು.

**ಅನುವಾದ-** 'ಪ್ರ' ಎಂಬ ಉಪಸರ್ಗವು ಈ ಭೇದಜ್ಞಾನಕ್ಕೆ ಮೋಕ್ಷಜ್ಞಾನ ಉಪಯೋಗಿ ಸ್ವರೂಪವಾದ ವಿಶೇಷವನ್ನು ಹೇಳುತ್ತದೆ. ಆದ್ದರಿಂದ ವಿಮರ್ಶೆ ಮಾಡಿದರೆ

ಪ್ರಪಂಚ ಎಂಬ ಶಬ್ದವು ಪಂಚವಿಧವಾದ ಭೇದವನ್ನು ಹೇಳುತ್ತದೆ ಎಂದು ಸಿದ್ಧವಾಗುತ್ತದೆ.

**ಭಾವವಿಲಾಸಿನೀ–** ಉಪಸರ್ಗಃ ಪ್ರೇತ್ಯುಪಸರ್ಗಃ। ಅಪವರ್ಗಾರ್ಥಜ್ಞಾನತ್ವಾದಿತ್ಯತ್ರಾ- ಪವರ್ಗಾರ್ಥಂ ಜ್ಞಾನಂ ಏಷಾಮಿತಿ ವಿಗ್ರಹಃ ॥ ೭ ॥

ತಂ ಭೇದವರ್ಗಂ ಸೈಷಾ ವಾಗಾಜುಹಾವ ತಯಾಽಽಖ್ಯಯಾ ।
ತತ್ಪಂಚಭೇದವರ್ಗೋಽಭೂತ್ ಪ್ರಪಂಚೋಽಯಂ ಶ್ರುತೌ ಶ್ರುತಃ ॥

**ಅರ್ಥ–** ಸಾ = ಆ ಮಾಂಡೂಕೋಪನಿಷತ್ತಿನ, ಏಷಾ = ಪ್ರಪಂಚೋ ಯದಿ ವಿದ್ಯೇತ ಎಂಬ ಈ, ವಾಕ್ = ಮಾತು, ತಂ ಭೇದವರ್ಗಂ = ಆ ಭೇದಸಮೂಹವನ್ನು, ತಯಾ = ಆ ಪ್ರಪಂಚ ಎಂಬ, ಆಖ್ಯಯಾ = ಹೆಸರಿನಿಂದ, ಆಜುಹಾವ = ಕರೆದಿದೆ. ತತ್ = ಆದ್ದರಿಂದ, ಪಂಚಭೇದವರ್ಗಃ = ಪಂಚಭೇದದ ಸಮೂಹ ರೂಪವಾದ, ಅಯಂ = ಪ್ರಪಂಚವು, ಶ್ರುತೌ ಶ್ರುತಃ = ಶ್ರುತ್ಯುಕ್ತವೆಂದಾಯಿತು.

**ಅನುವಾದ-** 'ಪ್ರಪಂಚೋ ಯದಿ ವಿದ್ಯೇತ' ಎಂಬ ಈ ಮಂತ್ರವು ಪ್ರಪಂಚ ಶಬ್ದದಿಂದ ಪ್ರಸಿದ್ಧವಾದ ಆ ಭೇದಪಂಚಕವನ್ನೇ ಹೇಳಿದೆ. ಆದ್ದರಿಂದ ಶ್ರುತಿಯಲ್ಲಿ ಹೇಳಲ್ಪಟ್ಟ ಈ ಪ್ರಪಂಚ ಶಬ್ದವು ಪಂಚಭೇದಗಳ ಸಮೂಹವನ್ನೇ ಹೇಳುತ್ತದೆ.

**ಭಾವವಿಲಾಸಿನೀ–** ತಂ ಪಂಚಂ ಸೈಷಾ ವಾಕ್ 'ಪ್ರಪಂಚೋ ಯದಿ ವಿದ್ಯೇತ' ಇತಿ ವಾಕ್ । ತಯಾಽಖ್ಯಯಾ ಪ್ರಪಂಚ ಇತ್ಯಾಖ್ಯಯಾ ॥ ೮ ॥

ಕೇವಲ ಪ್ರಯೋಗವಿದೆ ಎಂದ ಮಾತ್ರಕ್ಕೆ ಶ್ರುತಿಯು ಪ್ರಪಂಚ ಎಂಬ ಶಬ್ದದಿಂದ ಪಂಚಭೇದವನ್ನು ಹೇಳುತ್ತಿಲ್ಲ. ಮತ್ತೇನೆಂದರೆ ಬೇರೆ ಪ್ರಯೋಜನವೂ ಕೂಡ ಶ್ರುತಿಗೆ ಇದೆ ಎಂದು ತಿಳಿಸುತ್ತಿದ್ದಾರೆ-

ಕಿಂ ಚ ಪ್ರಪಂಚರೂಪಂ ಚ ತಂ ಪಂಚಂ ಸುಪ್ರಪಂಚಯನ್ ।
ಶ್ಲೋಕಃ ಪ್ರಪಂಚಮಾಹೇತಿ ಪ್ರಾಂಚಃ ಸಂಚೋದಯಂತಿ ನಃ ॥ ೯ ॥

**ಅರ್ಥ–** ಕಿಂಚ = ಮತ್ತೇನೆಂದರೆ, ಪ್ರಪಂಚರೂಪಂ = ಪ್ರಕೃಷ್ಟವಾದ ಪಂಚರೂಪವುಳ್ಳ, ತಂ = ಆ ಭೇದದ, ಪಂಚ = ಐದನ್ನು, ಸುಪ್ರಪಂಚಯನ್ = ಚೆನ್ನಾಗಿ ವಿಸ್ತಾರಮಾಡುತ್ತಾ, ಶ್ಲೋಕಃ = ಈ ಉಪನಿಷತ್ತಿನ ಮಂತ್ರವು, ಪ್ರಪಂಚಂ (ಇತಿ) = ಪ್ರಪಂಚ ಎಂಬುದಾಗಿ, ಆಹ = ಹೇಳಿದೆ. ಇತಿ = ಹೀಗೆ, ಪ್ರಾಂಚಃ = ಪೂರ್ವಸೂರಿಗಳು, ನಃ = ನಮಗೆ, ಸಂಚೋದಯಂತಿ = ಚೆನ್ನಾಗಿ ಉಪದೇಶಿಸುತ್ತಾರೆ.

**ಅನುವಾದ-** ಮತ್ತು ಪ್ರಪಂಚರೂಪವಾದ ಆ ಪಂಚಭೇದಗಳನ್ನು ಚೆನ್ನಾಗಿ ವಿಸ್ತಾರ ಮಾಡುವುದಾಗಿ ಈ ಮಂತ್ರವು ಪ್ರಪಂಚ ಎಂದು ಹೇಳಿದೆ ಎಂದು ನಮ್ಮ ಪೂರ್ವ ಸೂರಿಗಳು ಉಪದೇಶಿಸುತ್ತಾರೆ.

**ಭಾವವಿಲಾಸಿನೀ**– ನ ಕೇವಲಂ ಪ್ರಯೋಗಸಂಭವಮಾತ್ರಾಚ್ಛ್ರುತಿಃ ಪ್ರಪಂಚಶಬ್ದೇನ ಭೇದಪಂಚಕಮಾಹ। ಕಿಂತು ಪ್ರಯೋಜನಾಂತರಂ ಚ ಶ್ರುತೇರಭಿಪ್ರೇತಮಿತ್ಯಾಹ – **ಕಿಂಚೇತಿ ॥** ಅನಯಾಪಿ ವಿವಕ್ಷಯಾ ಜಗದ್ರೂಪ ಪ್ರಪಂಚ ವಾಚಕತಯೈವ ಪ್ರಸಿದ್ಧ ಪ್ರಪಂಚ ಶಬ್ದೇನ ತೇಷಾಮಾಹ್ವಾನೇ ಅರ್ಥಾತ್ ಪ್ರಪಂಚರೂಪತಾಪಿ ತೇಷಾಂ ಸಿದ್ಧ್ಯೇತ್ ಇತ್ಯಭಿಪ್ರೇತ್ಯ ಶ್ರುತಿರೇವಮಾಹೇತಿ ಭಾವಃ (ಏತತ್ ಪ್ರಚಲಿತಪಾಠೇ ನಾಸ್ತಿ) ॥ ೯ ॥

**ವಿವರಣೆ**– ಭೇದಪಂಚಕವನ್ನು ಹೇಳುವಂತಹ ಬೇರೆ ಶ್ರುತಿಗಳು ಇರುವಾಗ ವಿಶ್ವಪರ್ಯಾಯಶಬ್ದವಾದ ಪ್ರಪಂಚ ಎಂಬ ಶಬ್ದದಿಂದ ಭೇದಪಂಚಕವನ್ನು ಏಕೆ ಹೇಳಿದ್ದು? ಎಂದರೆ ಭೇದಪಂಚಕವು ವಸ್ತುಸ್ವರೂಪ, ಅಂದರೆ ತನಗೆ ಆಶ್ರಯವಾದ ಪ್ರಪಂಚಸ್ವರೂಪವೇ ಆಗಿದೆ. ಆಶ್ರಿತವಾದ ಈ ಭೇದಪಂಚಕ, ಸತ್ಯ ಎಂದಾಗ ಆಶ್ರಯವಾದ ಜಗತ್ತು ಸತ್ಯ ಎಂದಾಯಿತು. ಈ ಅಭಿಪ್ರಾಯವನ್ನು ತಿಳಿಸಲು ಶ್ರುತಿಯು ಭೇದಪಂಚಕವನ್ನು ಪ್ರಪಂಚ ಎಂಬ ಶಬ್ದದಿಂದ ಕರೆದಿದೆ.

**ಕಿಂಚೇದಂ ದ್ವೈತಮಿತ್ಯತ್ರೈವೋತ್ತರಾರ್ಧೇ ಸ್ವಯಂ ಶ್ರುತಿಃ ।**
**ಪರಾಮೃಶತಿ ಯದ್ಭೇದಂ ತೇನಾದಾವಪಿ ಭೇದವಾಕ್ ॥ ೧೦ ॥**

**ಅರ್ಥ**– ಕಿಂಚ = ಇಷ್ಟುಮಾತ್ರವಲ್ಲದೆ, ಇದಂ ದ್ವೈತಮಿತ್ಯತ್ರ = 'ಮಾಯಾಮಾತ್ರಂ ಇದಂ ದ್ವೈತಂ' ಎಂಬಲ್ಲಿ ಶ್ರುತಿಃ = ಶ್ರುತಿಯು, ಸ್ವಯಂ = ತಾನಾಗಿಯೇ, ಉತ್ತರಾರ್ಧೇ = ಮಂತ್ರದ ಉತ್ತರಾರ್ಧದಲ್ಲಿ, ಯತ್ = ಯಾವ ಕಾರಣದಿಂದ, ಭೇದಂ = ಭೇದವನ್ನು, ಪರಾಮೃಶತಿ = ಈ ಭೇದವು ಮಾಯಾಮಾತ್ರವೆಂದು ಪೂರ್ವಪ್ರಸಕ್ತವಾದ ಭೇದವನ್ನೇ ಇಟ್ಟುಕೊಳ್ಳುತ್ತದೆಯೋ, ತೇನ = ಆ ಕಾರಣದಿಂದ, ಆದೌ ಅಪಿ =ಪೂರ್ವದಲ್ಲಿಯೂ ಕೂಡ, ಭೇದವಾಕ್ = ಪ್ರಪಂಚ ಶಬ್ದದಿಂದ ಭೇದವನ್ನೇ ಹೇಳುವುದು, ಅಸ್ತಿ = ಆಗಿದೆ.

**ಅನುವಾದ**- ಮತ್ತು ಶ್ರುತಿಯು ಉತ್ತರಾರ್ಧದಲ್ಲಿ 'ಇದಂ ದ್ವೈತಂ' ಎಂದು ಈ ಮಂತ್ರದಲ್ಲಿಯೇ ಸ್ಪಷ್ಟವಾಗಿ ಭೇದವನ್ನೇ ಪರಾಮರ್ಶೆ ಮಾಡುತ್ತದೆ. ಆದ್ದರಿಂದ ಮೊದಲಿನ ವಾಕ್ಯವು (ಪೂರ್ವಾರ್ಧವು) ಭೇದವನ್ನೇ ಹೇಳಬೇಕಷ್ಟೆ.

**ಭಾವವಿಲಾಸಿನೀ**– ನ ಕೇವಲಂ ಸಂಭಾವನಾಮಾತ್ರೇಣ ಶ್ರೌತಪ್ರಪಂಚಶಬ್ದಸ್ಯ ಭೇದ-ಪರತ್ವವರ್ಣನಮ್ । ಕಿಂತ್ವಿದಮಿತಿ ಪ್ರಾಗುಕ್ತಾನುವಾದರೂಪಪದಘಟಿತೋತ್ತರ-ವಾಕ್ಯಪರ್ಯಾಲೋಚನಯಾಪಿ ಪೂರ್ವೋಕ್ತಃ ಪ್ರಪಂಚೋ ದ್ವೈತಮೇವ ಭವೇದಿತ್ಯಾಹ – **ಕಿಂಚೇದಮಿತಿ ।** ಅತ್ರಾಸ್ಮಿನ್ನೇವ ಲೋಕೇಶ್ಲೋಕೇ ಪರಾಮೃಶತಿ ಪ್ರಾಕ್‌ಪ್ರಸ್ತುತಾರ್ಥ-ಪರೇಣೇದಂಪದೇನ ಪರಾಮೃಶತಿ । ಯತ್ ಯಸ್ಮಾತ್ । ಆದೌ ಪೂರ್ವಾರ್ಧೇ ।

**ವಿವರಣೆ**– 'ಪ್ರಪಂಚೋ ಯದಿ ವಿದ್ಯೇತ' ಎಂಬಲ್ಲಿ ಪ್ರಪಂಚ ಶಬ್ದದಿಂದ ಪ್ರಸಿದ್ಧವಾದ ಭೇದ ಪಂಚಕವನ್ನೇ ಹೇಳುವ ವಿವಕ್ಷೆ ಶ್ರುತಿಗೆ ಇರಬಹುದು ಎಂದು ಕೇವಲ

ಊಹೆಯಲ್ಲ. ಅದೇ ಮಂತ್ರದ ಉತ್ತರಾರ್ಧದಲ್ಲಿ 'ಇದಂ ದ್ವೈತಂಮಾಯಾಮಾತ್ರಂ' ಈ ಭೇದವು ಮಾಯಾಮಾತ್ರವಾಗಿದೆ ಎಂದು 'ಇದಂ' ಶಬ್ದದಿಂದ ಭೇದವನ್ನೇ ಪರಾಮರ್ಶೆ ಮಾಡಿರುವುದರಿಂದ ಪರಾಮರ್ಶೆಗೆ ಪೂರ್ವದಲ್ಲಿ ಪ್ರಸಕ್ತಿ ಬೇಕಾಗುವುದರಿಂದ ಪೂರ್ವದಲ್ಲಿ 'ಪಪಂಚ' ಎಂಬ ಶಬ್ದದಿಂದ ಭೇದವನ್ನೇ ಶ್ರುತಿಯು ಹೇಳಿರಬೇಕು ಎನ್ನುವುದು ಸಿದ್ಧವಾಗುತ್ತದೆ.

**ಪ್ರಾಗ್ಭೇದಾಪ್ರಸ್ತುತೌ ದ್ವೈತಪದೇನೇಹ ಪುನಃ ಶ್ರುತಿಃ ।**
**ಕಥಂ ತಮೇವಾನುವದೇದನುಕ್ತಮನುವಕ್ತಿ ಕಃ ॥ ೧೧ ॥**

**ಅರ್ಥ–** ಪ್ರಾಕ್ = ಮೊದಲು, ಭೇದಾಪ್ರಸ್ತುತೌ = ಭೇದವು ಪ್ರಸಕ್ತವಾಗದಿದ್ದ ಪಕ್ಷದಲ್ಲಿ, ಇಹ= ಇಲ್ಲಿ, ದ್ವೈತಪದೇನ = ದ್ವೈತ ಎಂಬ ಪದದಿಂದ, ಶ್ರುತಿಃ = ಶ್ರುತಿಯು, ಪುನಃ = ಮತ್ತೂ, (ಇದಂ ದ್ವೈತಂ ಎಂದು) ಕಥಂ = ಹೇಗೆ, ತಮೇವ = ಆ ಭೇದವನ್ನೇ, ಅನುವದೇತ್ = ಅನುವಾದಮಾಡೀತು? ಅನುಕ್ತಂ = ಮೊದಲು ಹೇಳದೇ ಇದ್ದದ್ದನ್ನು, ಕಃ = ಯಾವನು, ಅನುವಕ್ತಿ = ಅನುವಾದ ಮಾಡುತ್ತಾನೆ.

**ಅನುವಾದ-** ಮೊದಲು ಭೇದದ ಪ್ರಸ್ತಾವವಿಲ್ಲದಿದ್ದರೆ ಶ್ರುತಿಯು ಉತ್ತರಾರ್ಧದಲ್ಲಿ ದ್ವೈತ ಎಂಬ ಪದದಿಂದ ಪುನಃ ಅದನ್ನು ಹೇಗೆ ಹೇಳುತ್ತದೆ? ಮೊದಲು ಹೇಳದಿದುದನ್ನು ಯಾವನು ಅನುವಾದ ಮಾಡುತ್ತಾನೆ? (ಪರಾಮರ್ಶೆ ಮಾಡುತ್ತಾನೆ?)

**ಭಾವವಿಲಾಸಿನೀ–** ಕಿಂಚೈಕಾರ್ಥಪ್ರತಿಪಾದಕೇಽಸ್ಮಿನ್ ಶ್ಲೋಕೇ ಪೂರ್ವಾರ್ಧೇ ಪ್ರತಿಪಾದಿತಸ್ಯೈವ ವಿಶೇಷ್ಯಸ್ಯೋತ್ತರಾರ್ಧೇಽಪಿ ಪ್ರತಿಪಾದ್ಯತ್ವಾತ್ ಉತ್ತರತ್ರ ಚ ಸ್ಪಷ್ಟಂ ದ್ವೈತವಿಕಲ್ಪಾದಿ ಪದೇನೋಕ್ತ ಏವಾರ್ಥಃ ಪೂರ್ವತ್ರಾಪಿ ಪ್ರಪಂಚಪದೇನ ವಕ್ತವ್ಯಃ । ಅನ್ಯಥಾ ಪೂರ್ವೋತ್ತರವಾಕ್ಯಯೋರಸಂಗತಿಪ್ರಸಂಗಾತ್ । ದ್ವೈತಾದಿಪದಾನಾಂ ನಿರವಕಾಶತ್ವೇನ ಪ್ರಪಂಚಪದಸ್ಯೋಕ್ತವಿಧಯಾ ಸಾವಕಾಶತ್ವೇನ ನಿರವಕಾಶಾನುಸಾರೇಣೈವ ಸಾವಕಾಶಸ್ಯ ಯೋಜ್ಯತ್ವಾಚ್ಚ । ಅತಃ ಪ್ರಪಂಚಪದೇನ ಪ್ರಾಗುಕ್ತಸ್ಯ ದ್ವೈತಪದೇನ ಪುನರನುವಾದಾತ್ ವಾದಾನುವಾದನ್ಯಾಯೇನೈವೇಕಾರ್ಥ್ಯಸಿದ್ಧಿಃ । ಪೂರ್ವಪರಾಮರ್ಶಿನೇದಂ ಪದೇನ ತಂ ಪರಾಮೃಶ್ಯ ತಸ್ಯ ದ್ವೈತತಾವಿಧಾನೇ ತು ಶ್ರುತ್ಯೈವ ಪ್ರಪಂಚಶಬ್ದಸ್ಯ ದ್ವೈತಾರ್ಥತ್ವೇನ ವ್ಯಾಖ್ಯಾತತ್ವಾತ್ ಕಿಮು ವಕ್ತವ್ಯಮೈಕಾರ್ಥ್ಯಮ್ । ಅತಸ್ತತ್ತ್ವವಾದಿನಾಮಾಚಾರ್ಯ ಏವ ಶ್ರೌತಮತಾಚಾರ್ಯ ಇತ್ಯಾಹ – **ಪ್ರಾಗ್ಭೇದೇತಿ** ॥ ೧೧ ॥

**ವಿವರಣೆ** – ಸಮಗ್ರ ಶ್ಲೋಕವು ಪೂರ್ವಾರ್ಧದಲ್ಲಿ ಹೇಳಿದ ವಿಷಯವನ್ನೇ ಉತ್ತರಾರ್ಧದಲ್ಲೂ ಪ್ರತಿಪಾದನೆ ಮಾಡಿದರೆ ಶ್ಲೋಕವನ್ನು ಏಕಾರ್ಥಪ್ರತಿಪಾದಕ ಎನ್ನುತ್ತಾರೆ. ಹೀಗಾಗಿ 'ಪ್ರಪಂಚೋಯದಿ' ಶ್ಲೋಕದಲ್ಲಿ ಪೂರ್ವಾರ್ಧದಲ್ಲಿ ಹೇಳಿರುವ

ವಿಷಯವನ್ನೇ ಉತ್ತರಾರ್ಧದಲ್ಲಿ ಹೇಳಬೇಕು.ದ್ವೈತ ವಿಕಲ್ಪ ಮೊದಲಾದ ಪದಗಳಿಂದ ಭೇದವೇ ಉತ್ತರಾರ್ಧದಲ್ಲಿ ಉಕ್ತವಾಗಿದೆ ಎಂದಮೇಲೆ ಏಕಾರ್ಥಕತ್ವ ಬರಬೇಕೆಂದರೆ ಪೂರ್ವಾರ್ಧದಲ್ಲಿರುವ ಪ್ರಪಂಚ ಶಬ್ದದಿಂದಲೂ ಭೇದವನ್ನೇ ಹೇಳಬೇಕು. ಪ್ರಪಂಚವನ್ನಲ್ಲ. ಅಷ್ಟು ಮಾತ್ರವಲ್ಲದೆ ದ್ವೈತ ಮೊದಲಾದ ಪದಗಳು ನಿರವಕಾಶ ಶಬ್ದಗಳು. ಪ್ರಪಂಚ ಎಂಬ ಶಬ್ದಕ್ಕೆ ಹಿಂದೆ ಹೇಳಿದಂತೆ ಜಗತ್ತು ಎಂದೂ ಅರ್ಥವಿದೆ. ಆದ್ದರಿಂದ ಅದು ಸಾವಕಾಶ. ನಿರವಕಾಶಕ್ಕೆ ಅನುಸಾರವಾಗಿ ಸಾವಕಾಶವನ್ನು ಯೋಜನೆ ಮಾಡಬೇಕು. ಆದ್ದರಿಂದ ನಿರವಕಾಶವಾದ ಭೇದಾರ್ಥ 'ದ್ವೈತ' ವಿಕಲ್ಪ ಶಬ್ದಗಳಿಗೆ ಅನುಸಾರವಾಗಿ ಪ್ರಪಂಚಶಬ್ದಕ್ಕೆ ಭೇದವೆಂಬ ಅರ್ಥಯೋಜನೆಯನ್ನು ಮಾಡಬೇಕು. ಈ ದೃಷ್ಟಿಯಿಂದಲೂ ಶ್ರುತಿಯಲ್ಲಿ ಪ್ರಪಂಚ ಎಂಬ ಶಬ್ದಕ್ಕೆ ಭೇದಪಂಚಕ ಎಂಬ ಅರ್ಥವೇ ಸಿದ್ಧವಾಗುತ್ತದೆ. ಆದ್ದರಿಂದ ಪ್ರಪಂಚ ಎಂಬ ಶಬ್ದದಿಂದ ಯಾವುದನ್ನು ಶ್ರುತಿಯು ಹೇಳಿದೆಯೋ, ಅದನ್ನೇ ದ್ವೈತ ಎಂಬ ಪದದಿಂದ ಅನುವಾದಮಾಡಿದೆ. ಈ ವಾದಾನುವಾದ ನ್ಯಾಯದಿಂದ ಪೂರ್ವೋತ್ತರಾರ್ಧಗಳಿಗೆ ಏಕಾರ್ಥಬೋಧಕತ್ವವು ಸಿದ್ಧವಾಗುತ್ತದೆ. ಇನ್ನು ಪೂರ್ವದಲ್ಲಿ ಹೇಳಿದ್ದನ್ನು ಪರಾಮರ್ಶಮಾಡುವ ಇದಂ ಎಂಬ ಪದದಿಂದ ಪೂರ್ವಾರ್ಧದಲ್ಲಿ ಪ್ರಪಂಚ ಶಬ್ದದಿಂದ ಹೇಳಿದ್ದನ್ನೇ ಅನುವಾದ ಮಾಡಿ ಅದನ್ನು ದ್ವೈತ ಶಬ್ದದಿಂದ ಕರೆದು 'ಪ್ರಪಂಚ' ಎಂದರೆ 'ದ್ವೈತ' ಎಂದು ಹೇಳಿದೆ. ಹೀಗೆ ಶ್ರುತಿಯಿಂದಲೇ ಪ್ರಪಂಚ ಶಬ್ದಕ್ಕೆ ದ್ವೈತ ಎಂಬ ಅರ್ಥವನ್ನು ಹೇಳಿದ ಹಾಗಾಯಿತು. ಆದ್ದರಿಂದ ಪೂರ್ವಾಪರಗಳಿಗೆ ಏಕಾರ್ಥತಾ ಎಂಬುದು ಕೈಮುತ್ಯನ್ಯಾಯದಂತೆ ದೃಢವಾಗುತ್ತದೆ. ವೇದಕ್ಕೆ ಅಭಿಪ್ರೇತವಾದ ಅರ್ಥವನ್ನು ಹೇಳಿದ್ದರಿಂದ, ತತ್ತ್ವವಾದಿಗಳ ಆಚಾರ್ಯರಾದ ಶ್ರೀಮದಾಚಾರ್ಯರೇ ಶ್ರೌತಾಚಾರ್ಯರು, ಅಂದರೆ ವೇದಗಳಿಗೆ ಸರಿಯಾದ ಅರ್ಥವನ್ನು ಹೇಳಿದವರು ಎಂದು ಸಿದ್ಧವಾಯಿತು.

ವಾದಾನುವಾದಾವೇಕಸ್ಯೇತ್ಯಾಹುಃ ಪ್ರಾಹುಣಿಕಾ ಅಪಿ ।
ಇದಮಿತ್ಯುದಿತಾರ್ಥಸ್ಯ ಪರಾಮರ್ಶೇ ತು ಕಿಂ ಪುನಃ ॥ ೧೨ ॥

**ಅರ್ಥ**–ವಾದಾನುವಾದೌ = ವಾದ ಮತ್ತು ಅನುವಾದಗಳು, ಏಕಸ್ಯ = ಒಂದೇ ವಿಷಯಕ್ಕೆ ಸಂಬಂಧಪಡಬೇಕು, ಇತಿ = ಎಂದು, ಪ್ರಾಹುಣಿಕಾ ಅಪಿ = ಪ್ರಮಾಣದಲ್ಲಿ ವಿಶ್ವಾಸವುಳ್ಳ ಸಜ್ಜನರು, ಆಹುಃ = ಹೇಳುತ್ತಾರೆ. ಇದಂ ಇತಿ = ಇದಂ ಎಂದು, ಉದಿತಾರ್ಥಸ್ಯ = ಹಿಂದೆ ಹೇಳಿದ ಅರ್ಥದ, ಪರಾಮರ್ಶೇ ತು = ಪರಾಮರ್ಶ ಮಾಡಿದಲ್ಲಿ, ಕಿಂ ಪುನಃ = ಏನು ಹೇಳುವುದು?

**ಅನುವಾದ**- ವಾದ ಮತ್ತು ಅನುವಾದಗಳು ಒಂದೇ ವಸ್ತುವಿಗೆ ಸಂಬಂಧಿಸಿದವು ಎಂದು ಪ್ರಾಮಾಣಿಕರು ಹೇಳುತ್ತಾರೆ. ಇಲ್ಲಿ ಇದಂ ಎಂದು ಸ್ಪಷ್ಟವಾಗಿ ಹಿಂದೆ ಹೇಳುವ

ವಸ್ತುವಿನ ಪರಾಮರ್ಶೆ ಇರುವಾಗ ಪೂರ್ವಾರ್ಧೋಕ್ತ ಮತ್ತು ಉತ್ತರಾರ್ಧೋಕ್ತದಲ್ಲಿರುವ ವಸ್ತುವು ಒಂದೇ ಎಂದು ಬೇರೆ ಹೇಳುವ ಅವಶ್ಯಕತೆ ಇಲ್ಲ.

**ಭಾವವಿಲಾಸಿನೀ–** ಪ್ರಾಹುಣಿಕಾ ಇತ್ಯನೇನ ಯಾಂ ಕನ್ಯಾಂ ಕನ್ಯಾಪಕ್ಷಿಯೋ ವೃಣೀಧ್ವಮಿತಿ ವಕ್ತಿ । ತಾಮೇವ ವರಪಕ್ಷೀಯೋಽಪಿ ವೃಣೀಮಹ ಇತ್ಯನುವಕ್ತಿ । ನಾನ್ಯಾಮ್ । ಅತೋಽಜ್ಞಜನಾನಾಮಪಿ ಸಂಮತೋಽಯಮರ್ಥ ಇತಿ ಸೂಚಯತಿ ॥ ೧೨ ॥

**ವಿವರಣೆ –** ಕನ್ಯೆಯ ಕಡೆಯವರು ಈ ಕನ್ಯೆಯನ್ನು ಸ್ವೀಕರಿಸಿರೆಂದು ಹೇಳಿದಾಗ ವರನ ಕಡೆಯವರು ಆ ಕನ್ಯೆಯನ್ನೇ ಸ್ವೀಕರಿಸುವೆವೆನ್ನುತ್ತಾರೆ. ಹೊರತು ಬೇರೆ ಕನ್ಯೆಯನ್ನಲ್ಲ. ಇವೇ ಲೌಕಿಕದಲ್ಲಿ ವಾದ- ಅನುವಾದಗಳು. ಹೀಗೆ ಶಾಸ್ತ್ರ ತಿಳಿಯದ ಲೌಕಿಕರೂ ಕೂಡ ವಾದ-ಅನುವಾದಗಳು ಒಂದೇ ವಿಷಯದ ಬಗ್ಗೆ ಇರಬೇಕೆನ್ನುತ್ತಾರೆ. ಶಾಸ್ತ್ರಜ್ಞರ ಬಗ್ಗೆ ಏನು ಹೇಳಬೇಕು?

ಅತಃ ಪ್ರಪಂಚೋ ಭೇದೋಽಭೂಚ್ಛ್ರುತೇರ್ಹೃದಯಶೋಧನೇ ।
ವ್ಯಾಖ್ಯಾಂ ತತ್ಖ್ಯಾಪಯೇದ್ದಿಕ್ಷು ಭೇರ್ಯಾಚಾರ್ಯಶಿರೋಮಣೇಃ ॥ ೧೩ ॥

**ಅರ್ಥ–** ಶ್ರುತೇಃ = ವೇದದ, ಹೃದಯಶೋಧನೇ = ಅಂತರ್ಯವನ್ನು ಹುಡುಕುತ್ತಿರಲು, ಪ್ರಪಂಚಃ ಭೇದಃ = ಪ್ರಪಂಚವೆಂದರೆ ಪಂಚಭೇದವು ಎಂದು, ಅಭೂತ್ = ಸಿದ್ಧವಾಯಿತು. ತತ್ = ಶ್ರುತಿಯಿಂದ ಮಾಡಲ್ಪಟ್ಟ ವ್ಯಾಖ್ಯಾನ ಹಾಗೂ ಆಚಾರ್ಯರಿಂದ ಮಾಡಲ್ಪಟ್ಟ ವ್ಯಾಖ್ಯಾನ ಒಂದೇ ಆದುದರಿಂದ, ಆಚಾರ್ಯಶಿರೋಮಣೇಃ = ಉಪದೇಶಕರಲ್ಲಿ ಅತ್ಯಂತ ಶ್ರೇಷ್ಠರಾದ ಮಧ್ವಾಚಾರ್ಯರ, ವ್ಯಾಖ್ಯಾಂ = ವ್ಯಾಖ್ಯಾನವನ್ನು ದಿಕ್ಷು = ದಶದಿಕ್ಕುಗಳಲ್ಲಿ, ಭೇರ್ಯಾ = ಭೇರಿ ಎಂಬ ವಾದ್ಯವಿಶೇಷದಿಂದ, ಖ್ಯಾಪಯೇತ್ = ಪ್ರಸಿದ್ಧಗೊಳಿಸಬೇಕು.

**ಅನುವಾದ-** ಆದ್ದರಿಂದ ಶ್ರುತಿಯ ಅಭಿಪ್ರಾಯವನ್ನು ವಿಮರ್ಶೆ ಮಾಡಿದರೆ ಪ್ರಪಂಚ ಎಂದರೆ ಭೇದಪಂಚಕವಾಯಿತು. ಆಚಾರ್ಯ ಶಿರೋಮಣಿಗಳಾದ ಶ್ರೀಮಧ್ವಾಚಾರ್ಯರ ಈ ವ್ಯಾಖ್ಯಾನವನ್ನು ದಿಕ್ಕು-ದಿಕ್ಕುಗಳಲ್ಲಿ ಘೋಷಿಸಬೇಕು.

**ಭಾವವಿಲಾಸಿನೀ–** ತತ್ ತಸ್ಮಾತ್ ಶ್ರುತಿಕೃತವ್ಯಾಖ್ಯಾನಸ್ಯಾಚಾರ್ಯಕೃತವ್ಯಾಖ್ಯಾನಸ್ಯ ಚೈಕತ್ವಾತ್ ॥ ೧೩ ॥

**ವಿವರಣೆ -** ಶ್ರುತಿಯಲ್ಲಿರುವ ಪ್ರಪಂಚ ಶಬ್ದಕ್ಕೆ ಪಂಚಭೇದವೆಂದು ಶ್ರೀಮದಾಚಾರ್ಯರು ವ್ಯಾಖ್ಯಾನ ಮಾಡಿದ್ದು ಸರಸವಲ್ಲ, ಬಲಾತ್ಕಾರವೆಂದು ಸಾಮಾನ್ಯ ಜನರು ಭಾವಿಸಬಹುದು. ಆದರೆ ಶ್ರುತಿಯು ತಾನೇ ಪ್ರಪಂಚವೆಂದರೆ ಭೇದಪಂಚಕವೆಂದು ವ್ಯಾಖ್ಯಾನ ಮಾಡಿದೆ.

**ತ್ವಂ ಚ ದ್ವೈತಂ ಭಿದಾಂ ಬ್ರೂಷೇ ತಥಾಽದ್ವೈತಂ ತವಾಽಭಿದಾ ।**
**ಅರ್ಥಾತ್ ಪ್ರಪಂಚೋಽಪಿ ಭೇದಃ ಕಿಂ ಶಬ್ದಂ ತು ಪ್ರಮುಂಚಸಿ ॥೧೪॥**

**ಅರ್ಥ–** ತ್ವಂ ಚ = ಮಾಯಾವಾದಿಯಾದ ನೀನು, ದ್ವೈತಂ = ದ್ವೈತ ಎಂಬ ಶಬ್ದದ ಅರ್ಥವನ್ನು, ಭಿದಾ ಇತಿ = ಭೇದ ಎಂಬುದಾಗಿ, ಬ್ರೂಷೇ = ಹೇಳುತ್ತೀ. ತಥಾ = ಹಾಗೇ, ಅದ್ವೈತಂ = ಅದ್ವೈತವು ತವ= ನಿನ್ನ ಮತದಲ್ಲಿ, ಅಭಿಧಾ= ಅಭೇದವೇ, ಅರ್ಥಾತ್ = ಒಇದಂ ಶಬ್ದದಿಂದ, ಪ್ರಪಂಚಃ= ಪ್ರಪಂಚವೆಂದರೆ, ಭೇದಃ = ಭೇದರೂಪವಾದದ್ದು. ಶಬ್ದಂ ತು = 'ಪ್ರಪಂಚ ಶಬ್ದವು ಭೇದಪರ' ಎಂಬ ಸ್ಪಷ್ಟ ಶಬ್ದವನ್ನು ಮಾತ್ರ, ಕಿಂ ಪ್ರಮುಂಚಸಿ= ಏಕೆ ಬಹಿಷ್ಕರಿಸುವಿ.

**ಅನುವಾದ-** ನೀನಾದರೂ ದ್ವೈತ ಎಂದರೆ ಭೇದವನ್ನು ಮತ್ತು ಅದ್ವೈತವೆಂದರೆ ಅಭೇದವೆಂದು ಹೇಳುತ್ತೀಯೆ. ಅರ್ಥಾತ್ ಪ್ರಪಂಚವೆಂದರೂ ಭೇದವೆಂದಾಯಿತು. ಪ್ರಪಂಚ ಶಬ್ದವು ಭೇದಪರ ಎಂಬ ಸ್ಪಷ್ಟವಚನವು ಏಕೆ ನಿರಾಕರಿಸುತ್ತೀಯೆ?

**ಭಾವವಿಲಾಸಿನೀ–** ಶಬ್ದಃ ಪ್ರಪಂಚಶಬ್ದೋ ಭೇದಪರ ಇತಿ ಸ್ಪಷ್ಟಂ ವಚನಮ್ ॥ ೧೪ ॥

**ವಿವರಣೆ-** ನೀನು ದ್ವೈತಶಬ್ದಕ್ಕೆ ಭೇದ ಎಂಬ ಅರ್ಥವನ್ನು ಅಂಗೀಕಾರಮಾಡಿದ್ದೀ. ಹಾಗೇ ಅದ್ವೈತಶಬ್ದಕ್ಕೆ ಅಭೇದ ಎಂಬ ಅರ್ಥವನ್ನು ಮಾಡಿದ್ದೀ. ಪ್ರಕೃತ ಪ್ರಪಂಚ ಎಂಬ ಶಬ್ದವು ಭೇದಾರ್ಥಕ ಎಂದು ಸಿದ್ಧವಾದ ಮೇಲೆ ಆ ದ್ವೈತ ಶಬ್ದಸಮಾನಾರ್ಥಕವನ್ನು ಬಿಟ್ಟು ಪ್ರಪಂಚ ಎಂಬ ಶಬ್ದಕ್ಕೆ ಜಗತ್ತು ಎಂಬ ಅರ್ಥವನ್ನು ಮಾತ್ರ ಏಕೆ ಗ್ರಹಣಮಾಡುತ್ತೀ ಎಂದು ಪ್ರಶ್ನೆ ಮಾಡುತ್ತಿದ್ದಾರೆ.

ವಾಗೀಶ ಏವ ವಾಗರ್ಥಾವೇಕೀಕುರ್ಯಾನ್ನ ಚಾಪರಃ ।
ನ ಚೇದ್ವಿಕಲ್ಪಶಬ್ದೇನ ಭೇದಮೇವ ಕಥಂ ಬುಧಾಃ ।
ಪ್ರಾವಕ್ಷ್ಯನ್ನುತ್ತರಶ್ಲೋಕೇ ನಾವಕ್ಷ್ಯನ್ ಯದಿ ತಂ ಪುರಾ ॥ ೧೫ ॥

**ಅರ್ಥ–** ವಾಗೀಶ ಏವ = ಭಾರತೀಪತಿ ಮುಖ್ಯಪ್ರಾಣದೇವರೇ, ವಾಗರ್ಥೌ = ಶಬ್ದ ಮತ್ತು ಆ ಶಬ್ದದ ಅರ್ಥವನ್ನು, ಏಕೀಕುರ್ಯಾತ್= ಶಬ್ದಾನುಸಾರಿಯಾದ ಅರ್ಥವನ್ನು ಹೇಳಲು ಸಮರ್ಥರಾಗಿದ್ದಾರೆ. ಅಪರಃ = ಇನ್ನೊಬ್ಬನು, ನ ಚ = ಇಲ್ಲವೇ ಇಲ್ಲ, ನ ಚೇತ್ = ವಾಯುದೇವರನನ್ನು ಬಿಟ್ಟು ಬೇರೊಬ್ಬರು ಸಮರ್ಥರಿರುತ್ತಿದ್ದರೆ, ಬುಧಾಃ= ಪಂಡಿತರು, ಯದಿ= ಒಂದು ಪಕ್ಷದಲ್ಲಿ, ಪುರಾ= ಪೂರ್ವಾರ್ಧದಲ್ಲಿ, ತಂ= ಭೇದವನ್ನು, ನ ಅವಕ್ಷ್ಯನ್= ಹೇಳಲಿಲ್ಲವೆಂದಾದರೆ, ಉತ್ತರ ಶ್ಲೋಕೇ= ಮುಂದಿನ ಶ್ಲೋಕದಲ್ಲಿ, ವಿಕಲ್ಪಶಬ್ದೇನ= ವಿಕಲ್ಪ ಎಂಬ ಶಬ್ದದಿಂದ, ಭೇದಂ ಏವ= ಭೇದವನ್ನೇ, ಕಥ= ಹೇಗೆ, ಪ್ರಾವಕ್ಷ್ಯನ್= ಹೇಳುತ್ತಿದ್ದರು?

**ಅನುವಾದ-** ವಾಗೀಶರಾದ ಶ್ರೀಮಧ್ವಾಚಾರ್ಯರೇ ವಾಕ್ ಮತ್ತು ಅರ್ಥಗಳನ್ನು ಒಂದುಗೂಡಿಸಲು ಸಮರ್ಥರು. ಇನ್ನೊಬ್ಬನು ಸಮರ್ಥನಲ್ಲ. ಇಲ್ಲದಿದ್ದರೆ ಹಿಂದಿನ ಶ್ಲೋಕದಲ್ಲಿ ಭೇದವನ್ನು ಹೇಳದಿದ್ದರೆ 'ವಿಕಲ್ಪೋ ನಿವರ್ತೇತ' ಎಂಬ ಉತ್ತರ ಶ್ಲೋಕದಲ್ಲಿ ಜ್ಞಾನಿಗಳು ಭೇದವನ್ನು ಹೇಗೆ ಹೇಳುತ್ತಾರೆ?

**ಭಾವವಿಲಾಸಿನೀ–** ವಾಗೀಶಃ ಭಾರತೀಪತಿಃ ಶ್ರೀಮುಖ್ಯಪ್ರಾಣಃ । ಏಕೀಕುರ್ಯಾತ್ । ವಾಗನುಸಾರೇಣಚಾರ್ಥರ್ಥಂ ವದೇದಿತ್ಯರ್ಥಃ । ನ ಚೇದಪರ ಏಕೀಕರಣಸಮರ್ಥೋ ನ ಚೇತ್ । ತಂ ಭೇದವವ್ । ಪುರಾ ಪೂರ್ವವಾಕ್ಯೇ । ಪ್ರಪಂಚದ್ವೈತವಿಕಲ್ಪಶಬ್ದಾನಾಂ ಭೇದಪರತ್ವಸ್ಯೈವ ವ್ಯಾಖ್ಯಾತತ್ವೇನಾಸ್ಮದಾಚಾರ್ಯ ಏವ ಪೂರ್ವೋತ್ತರವಾಕ್ಯಾನಾಮರ್ಥಾನಾಂ ಚೈಕೀಕರಣಸಮರ್ಥಃ । ಅನ್ಯೇತು ಪ್ರಪಂಚ ಶಬ್ದೇನ ಪೂರ್ವಶ್ಲೋಕೇ ಪ್ರಪಂಚಮೇವೋಕ್ತ್ವೋತ್ತರಾರ್ಥೇ ಚ ದ್ವೈತವಿಕಲ್ಪಾದಿಶಬ್ದೈಃ ಪುನರ್ಭೇದಸ್ಯ ಕಥನಾತ್ ಪೂರ್ವೋತ್ತರವಾಕ್ಯಾರ್ಥ ಕಥನಾಸಮರ್ಥಾ ಇತಿ ಭಾವಃ ॥೧೫॥

**ವಿವರಣೆ -** ಪ್ರಪಂಚ, ವಿಕಲ್ಪ, ದ್ವೈತ ಈ ಶಬ್ದಗಳಿಗೆ ಭೇದಪರತಯಾ ವ್ಯಾಖ್ಯಾನವನ್ನು ಆಚಾರ್ಯರು ಮಾಡಿದ್ದಾರೆ. ಹೀಗೆ ವ್ಯಾಖ್ಯಾನ ಮಾಡಿದ್ದರಿಂದ ಪೂರ್ವೋತ್ತರವಾಕ್ಯಗಳಿಗೆ ಏಕಾರ್ಥತ್ವವನ್ನು ತಂದು ಕೊಟ್ಟ ಹಾಗೆ ಆಯಿತು. ಆದ್ದರಿಂದ ಶ್ರೀಮದಾಚಾರ್ಯರೇ ಏಕಾಭಿಪ್ರಾಯ ಬರುವಂತೆ ವ್ಯಾಖ್ಯಾನಮಾಡಲು ಸಮರ್ಥರಾಗಿದ್ದಾರೆ. ಬೇರೆಯವರಾದರೂ ಪೂರ್ವಶ್ಲೋಕದಲ್ಲಿ ಪ್ರಪಂಚ ಶಬ್ದಕ್ಕೆ ಭೇದವೆಂಬ ಅರ್ಥವನ್ನು ಹೇಳದೆ ಜಗತ್ತು ಎಂಬ ಅರ್ಥವನ್ನೇ ಹೇಳಿ, ಮುಂದೆ ದ್ವೈತ, ವಿಕಲ್ಪ ಮೊದಲಾದ ಶಬ್ದಗಳಿಗೆ ಮಾತ್ರ ಭೇದ ಎಂಬ ಅರ್ಥವನ್ನು ಹೇಳಿದ್ದಾರೆ. ಹೀಗೆ ವ್ಯಾಖ್ಯಾನಮಾಡಿದರೆ ಪೂರ್ವೋತ್ತರವಾಕ್ಯಗಳಿಗೆ ಏಕಾರ್ಥತಾ ಸಿದ್ಧವಾಗುವುದಿಲ್ಲ, ಆದ್ದರಿಂದ ಪೂರ್ವೋತ್ತರ ವಾಕ್ಯಗಳಿಗೆ ಏಕಾರ್ಥತೆಯನ್ನು ಹೇಳುವುದರಲ್ಲಿ ಪರರು ಸಮರ್ಥರಲ್ಲ.

**ಸಮಾಖ್ಯಾ ಹಿ ಮಹಾವ್ಯಾಖ್ಯಾ ಪ್ರಾಯಪಾಠೇ ತು ಕಿಂ ಪುನಃ ।**
**ಅರ್ಥಾಂತರಾಯುಕ್ತಿತಶ್ಚ ಭೇದಾರ್ಥಾ ವಾಕ್ ನ ಸಂಶಯಃ ॥ ೧೬ ॥**

**ಅರ್ಥ–** ಸಮಾಖ್ಯಾ = ಈ ವಾಕ್ಯದಲ್ಲಿ ಹೇಳಿರುವ ವಿಷಯವನ್ನು ಹೇಳುವ ಸಮಾನವಾದ ಬೇರೊಂದು ಉಕ್ತಿಯು, ಮಹಾವ್ಯಾಖ್ಯಾ = ಈ ವಾಕ್ಯಕ್ಕೆ ಪರಮೋತ್ಕೃಷ್ಟವಾದ ವ್ಯಾಖ್ಯಾನವಾಗಿದೆ. ಪ್ರಾಯಪಾಠೇ ತು = ಒಂದೇ ಪಂಕ್ತಿಯಲ್ಲಿ ಬೇರೆ ಪದಗಳಿಂದ ಹಿಂದೆ ಹೇಳಿದ ವಿಷಯವು ವ್ಯಾಖ್ಯಾನಗೊಂಡಿದ್ದರೆ, ಕಿಂ ಪುನಃ = ಅತ್ಯಂತ ಉತ್ತಮವಾದದ್ದೆಂದು ಪ್ರತ್ಯೇಕವಾಗಿ ಏನು ಹೇಳುವುದಿದೆ. ಅರ್ಥಾಂತರಾಯುಕ್ತಿತಃ ಚ =ಬೇರೊಂದು ಅರ್ಥವು ಯುಕ್ತಿವಿರುದ್ಧವೂ ಆಗಿರುವುದರಿಂದ, ವಾಕ್ = ಪ್ರಪಂಚೋ ಯದಿ ವಿದ್ಯೇತ ಎಂಬ

ಶ್ರುತಿಯು, ಭೇದಾರ್ಥಾ ಅಸ್ತಿ = ಭೇದ ಎಂಬ ಅರ್ಥವುಳ್ಳದ್ದು ಆಗಿದೆ. ನ ಸಂಶಯಃ = ಈ ವಿಷಯದಲ್ಲಿ ಸಂಶಯವೇ ಇಲ್ಲ.

**ಅನುವಾದ-** **ಸಮಾಖ್ಯಾ ಎನ್ನುವುದು ಒಂದು ದೊಡ್ಡ ವ್ಯಾಖ್ಯಾನವಷ್ಟೆ. ಇನ್ನು ಅದೇ ಸ್ಥಳದಲ್ಲಿರುವ ಪ್ರಾಯಪಾಠವು ವ್ಯಾಖ್ಯಾನವೆಂದು ಹೇಳುವುದೇನಿದೆ? ಬೇರೆಯ ಅರ್ಥವು ಕೂಡುವುದಿಲ್ಲವಾದ್ದರಿಂದಲೂ ಪ್ರಪಂಚ ಎಂಬ ಶಬ್ದವು ಭೇದವೆಂಬ ಅರ್ಥವನ್ನೇ ಹೇಳುತ್ತದೆ. ಇದರಲ್ಲಿ ಸಂಶಯವಿಲ್ಲ.**

**ಭಾವವಿಲಾಸಿನೀ–** **ಸಮಾಖ್ಯಾ ಅನ್ಯತ್ರ ಸಮಾನಾಖ್ಯಾ ಮಹಾವ್ಯಾಖ್ಯಾ ಸ್ಥಾನಾಂತರಗತ-ಸ್ವಸಮಾನವಾಕ್ಯಸ್ಯ ವ್ಯಾಖ್ಯಾನರೂಪಾ । ಪ್ರಾಯಪಾಠೇ ಏಕಪಂಕ್ತಾವೇವ ಪಾಠೇ । ವಾಕ್ಯಾರ್ಥ-ಪರ್ಯಾಲೋಚನಯಾ ಚ ಭೇದಪಂಚಕಮೇವ ಪ್ರಪಂಚ ಇತ್ಯಾಹ – ಅರ್ಥೇತಿ ॥ ೧೬ ॥**

**ವಿವರಣೆ–** ಸಮಾಖ್ಯಾ ಎಂದರೆ ಅನ್ಯತ್ರ ಸಮಾನ ಆಖ್ಯಾ. - ಬೇರೆ ಕಡೆ ಇಲ್ಲಿ ಹೇಳಿದ ವಾಕ್ಯಕ್ಕೆ ಸಮಾನವಾದ ವಿಷಯವನ್ನು ಹೇಳುವುದು. ಅದು ಈ ವಾಕ್ಯದ ವ್ಯಾಖ್ಯಾನರೂಪವಾದದ್ದು. ಅದುವೇ ಉತ್ತಮ ವ್ಯಾಖ್ಯಾನ ಎಂದಾದರೆ ಪ್ರಾಯಪಾಠದಲ್ಲಿ ಪೂರ್ವಾಪರ ಶಬ್ದಗಳಿಗೆ ಒಂದೇ ಅರ್ಥವನ್ನು ಮಾಡಬೇಕೆಂದು ಹೇಳುವ ಅವಶ್ಯಕತೆ ಏನಿದೆ? ಅಭಿಪ್ರಾಯ ಏನೆಂದರೆ ಒಂದೇ ಪಂಕ್ತಿಯಲ್ಲಿ ಮೊದಲು ಹೇಳಿದ ಶಬ್ದದ ಅರ್ಥವನ್ನು ಮುಂದೆ ಮತ್ತೊಂದು ಶಬ್ದವು ಅದೇ ಅರ್ಥವನ್ನು ವಿವರಿಸಿದರೆ ಅದನ್ನು ಪ್ರಾಯಪಾಠ ಎನ್ನುತ್ತಾರೆ. ಪ್ರಕೃತ ಒಂದೇ ಶ್ಲೋಕದಲ್ಲಿ ಪ್ರಪಂಚ ಎಂಬ ಶಬ್ದದ ಅರ್ಥವನ್ನು ದ್ವೈತ ಎಂಬ ಶಬ್ದವು ವ್ಯಾಖ್ಯಾನಮಾಡಿದರೆ ಇನ್ನೂ ಉತ್ತಮ ಎಂದಾಯಿತು. ಪ್ರಪಂಚ ಶಬ್ದಕ್ಕೆ ದ್ವೈತ ಎಂಬ ಅರ್ಥವನ್ನು ಬಿಟ್ಟು ಜಗತ್ತೆಂದು ಬೇರೆ ಅರ್ಥ ಕೂಡುವುದಿಲ್ಲವಾದ್ದರಿಂದಲೂ ಪ್ರಪಂಚ ಶಬ್ದ ಭೇದಾರ್ಥವನ್ನು ಹೇಳಬೇಕು. ಇದನ್ನು ಮುಂದಿನ ಶ್ಲೋಕದಲ್ಲಿ ಸ್ಪಷ್ಟಗೊಳಿಸುತ್ತಾರೆ.

**ಯದಿ ಪ್ರಪಂಚೋ ವಿದ್ಯೇತ ನಿವರ್ತೇತ ತದಾ ಕಿಲ ।**
**ಇಮಮರ್ಥಂ ಮಹಾಽನರ್ಥಕರಂ ಕಃ ಪಂಡಿತೋ ವದೇತ್ ।**
**ಬ್ರಹ್ಮೈವೋನ್ಮೂಲಯೇದ್ಯಸ್ಮಾತ್ತರ್ಕೋಽಯಮತಿಕರ್ಕಶಃ ॥ ೧೭ ॥**

**ಅರ್ಥ–** ಪ್ರಪಂಚಃ = ಪ್ರಪಂಚವು, ಯದಿ = ಒಂದು ವೇಳೆ, ವಿದ್ಯೇತ = ವಾಸ್ತವಿಕವಾಗಿ ಇರುವುದಾದರೆ (ಸತ್ಯವಾಗಿದ್ದರೆ), ತದಾ = ಆಗ, ನಿವರ್ತೇತ = ಬಾಧಿಸಲ್ಪಡುತ್ತದೆ. ಕಿಲ = ಹೀಗೆ ನಿನ್ನಿಂದ ಹೇಳಲ್ಪಟ್ಟಿದೆಯಷ್ಟೇ. ಮಹಾನರ್ಥಕರಂ = ಬಹು ಅನರ್ಥವನ್ನುಂಟು ಮಾಡುವ, ಇಮಂ ಅರ್ಥಂ = ಈ ಅರ್ಥವನ್ನು, ಕಃ = ಯಾವ, ಪಂಡಿತಃ = ಪಂಡಿತನು, ವದೇತ್ = ಹೇಳಿಯಾನು. ಯಸ್ಮಾತ್ = ಏಕೆಂದರೆ, ಬ್ರಹ್ಮ ಏವ = ಸತ್ಯಭೂತನಾದ ಬ್ರಹ್ಮನನ್ನೇ, ಉನ್ಮೂಲಯೇತ್ = ಇಲ್ಲವೆನಿಸೀತು. ಅಯಂ ತರ್ಕಃ = ಈ ಪ್ರಪಂಚೋ

ಯದಿವಿದ್ಯೇತ ಎಂಬ ಯುಕ್ತಿಯು, ಕರ್ಕಶಃ ಅಭೂತ್ = ಕೇಳಲಿಕ್ಕೆ ಅಶಕ್ಯವಾಯಿತು (ಅಸಾಧಕವಾಯಿತು)

**ಅನುವಾದ-** **ಪ್ರಪಂಚವು ಒಂದು ಪಕ್ಷ ವಿದ್ಯಮಾನವಾದರೆ ಅದು ನಿವೃತ್ತಿಯನ್ನು ಹೊಂದಬೇಕಾದೀತು ಎಂಬ ಈ ಮಹಾ ಅನರ್ಥಕರವಾದ ಅರ್ಥವನ್ನು ಯಾವ ಪಂಡಿತನು ಹೇಳುತ್ತಾನೆ? ಏಕೆಂದರೆ ಅದು ಕ್ರೂರವಾದ ತರ್ಕವು. ಈ ತರ್ಕವು ಬ್ರಹ್ಮನನ್ನೇ ಕಿತ್ತೊಗೆಯುತ್ತದೆ.**

**ಭಾವವಿಲಾಸಿನೀ–** ಸ್ವಾಭಿಲಷಿತಮರ್ಥಂ ವಕ್ತುಂ ಪರಸ್ಯಾರ್ಥಮನೂದ್ಯ ದೂಷಯತಿ ॥ ಯದೀತಿ ॥ ವಿದ್ಯೇತ ಸತ್ಯಂ ಭವೇದಿತ್ಯರ್ಥಃ । ನಿವರ್ತೇತ ಬಾಧ್ಯೇತ ॥ ೧೭ ॥

**ವಿವರಣೆ–** ಪ್ರಪಂಚೋ ಯದಿ ವಿದ್ಯೇತ ನಿವರ್ತೇತ ಎಂಬ ವಾಕ್ಯಕ್ಕೆ ಜಗತ್ತು ಸತ್ಯವಾಗಿದ್ದರೆ ಆಗ ಬಾಧಿತವಾಗುತ್ತದೆ ಎಂದು ಯಥಾಶ್ರುತ ಅರ್ಥ ಮಾಡಿದರೆ ಅದು ಬಹು ಅನರ್ಥವನ್ನುಂಟುಮಾಡುತ್ತದೆ. ಇದನ್ನು ಯಾವ ಪಂಡಿತನು ಹೇಳಿಯಾನು? ಏಕೆಂದರೆ ಬ್ರಹ್ಮನೂ ಸತ್, ಅಂತಹ ಸತ್ತಾದ ಬ್ರಹ್ಮನೇ ನಾಶವನ್ನು ಹೊಂದಬೇಕಾಗುತ್ತದೆ. ಆದ್ದರಿಂದ ನೀವು ಹೇಳುವ ತರ್ಕವು ಇಷ್ಟಘಾತಕವಾದ್ದರಿಂದ ಕೇಳಲಿಕ್ಕೆ ಅತ್ಯಂತ ಕರ್ಕಶವಾಗಿರುತ್ತದೆ.

**ಬಾಧೋ ನಿವೃತ್ತಿಶಬ್ದಾರ್ಥೋ ವಿದ್ಯಮಾನತ್ವಮದ್ಭುತಮ್ ।**
**ವ್ಯಾಪ್ನೋತಿ ಬಾಧ್ಯತಾಂ ನಾತ್ರ ಸಂಶಯಃ ಕಿಲ ಧೀಮತಾಮ್ ॥ ೧೮ ॥**

**ಅರ್ಥ–** ಬಾಧಃ = ಬಾಧವು, ನಿವೃತ್ತಿಶಬ್ದಾರ್ಥಃ = ನಿವೃತ್ತಿಶಬ್ದದ ಅರ್ಥವು, ವಿದ್ಯಮಾನತ್ವಂ = ಸತ್ಯವಾಗಿ ಇರುವಿಕೆಯು, ಬಾಧ್ಯತಾಂ = ಬಾಧ್ಯತ್ವವನ್ನು (ಇಲ್ಲದಿರುವಿಕೆಯನ್ನು), ವ್ಯಾಪ್ನೋತಿ = ವ್ಯಾಪಿಸಿಕೊಂಡಿದೆ ಎಂದರೆ ಇದು, ಅದ್ಭುತಂ = ಯಾವೆರಡಕ್ಕೆ ವಿರೋಧವಿದೆಯೋ, ಅವುಗಳಿಗೆ ವ್ಯಾಪ್ತಿಯನ್ನು ಹೇಳುವುದು ಲೋಕವಿಲಕ್ಷಣವಾಗಿದೆ. ಧೀಮತಾಂ = ಜ್ಞಾನಿಗಳಿಗೆ, ಅತ್ರ= ಯತ್ ವಿದ್ಯತೇ, ತತ್ ಬಾಧ್ಯಂ= ವಿಷಯದಲ್ಲಿ ಇರುವುದು ಇಲ್ಲವಾಗುತ್ತದೆ ಎಂಬ ವ್ಯಾಪ್ತಿಯ ವಿಷಯದಲ್ಲಿ ಜ್ಞಾನಿಗಳಿಗೆ, ನ ಸಂಶಯಃ ಕಿಲ= ಸಂಶಯವಿಲ್ಲವಂತೆ!

**ಅನುವಾದ-** **ನಿವೃತ್ತಿ ಶಬ್ದದ ಅರ್ಥವು ಬಾಧ. ವಿದ್ಯಮಾನತ್ವವು ಬಾಧ್ಯತ್ವಕ್ಕೆ ವ್ಯಾಪ್ಯವಾಗುತ್ತದೆ ಎಂಬ ನಿನ್ನ ವಿರುದ್ಧ ವ್ಯಾಪ್ತವು ಲೋಕವಿಲಕ್ಷಣವು. ಈ ವಿಷಯದಲ್ಲಿ ಮೇಧಾವಿಗಳಿಗೆ ಸಂಶಯವಿಲ್ಲ ಎಂಬ ನಿನ್ನ ಹೇಳಿಕೆಯು ಅದ್ಭುತವಾದುದು.**

**ಭಾವವಿಲಾಸಿನೀ**— ವಿದ್ಯಮಾನತ್ವಂ ಬಾಧ್ಯತಾಂ ವ್ಯಾಪ್ನೋತಿ ಕಿಲ । ಅದ್ಭುತಮಿತಿ ಸಂಬಂಧಃ । ಅತ್ರ ಯದ್ವಿದ್ಯಮಾನಂ ತದ್ಬಾಧ್ಯಂ ಇತ್ಯಸ್ಮಿನ್ ಅರ್ಥೇ ॥ ೧೮ ॥

**ವಿವರಣೆ** – ಪ್ರಪಂಚೋ ಯದಿ ವಿದ್ಯೇತ ನಿವರ್ತೇತ ನ ಸಂಶಯ ಎಂಬ ಶ್ರುತಿಗೆ ನೀವು ಹೇಳಿದಂತೆ ''ಒಂದು ವೇಳೆ ಜಗತ್ತು ಇದ್ದರೆ ನಿವೃತ್ತಿ ಆಗುತ್ತದೆ. ಈ ವಿಷಯದಲ್ಲಿ ಸಂಶಯವಿಲ್ಲ'' ಎಂದು ಅರ್ಥ ಮಾಡಿದರೆ ಬಹಳ ಹಾಸ್ಯಾಸ್ಪದವಾಗುತ್ತದೆ. ನೀವು ಹೇಳಿದಂತೆ ಅರ್ಥೈಸಿದರೆ ಯತ್ರ ಸತ್ಯತ್ವಂ ತತ್ರ ನಿವೃತ್ತಿಃ ಎಂಬುದಾಗಿ ವ್ಯಾಪ್ತಿಯನ್ನು ಹೇಳಿದಂತಾಯಿತು. ಈ ವ್ಯಾಪ್ತಿಯನ್ನು ಯಾರೂ ಒಪ್ಪುವುದಿಲ್ಲ. ನೀವೂ ಸಹ ಒಪ್ಪುವುದಿಲ್ಲ. ಏಕೆಂದರೆ ಶುಕ್ತಿಯಲ್ಲಿ ತೋರುವ ಅಸತ್ತಾದ ರಜತಕ್ಕೇನೇ ಬಾಧವನ್ನು ಹೇಳುತ್ತೀರಿ. ಹೊರತು ಸತ್ಯವಾದ ಶುಕ್ತಿಗೆ ಬಾಧವನ್ನು ಹೇಳುವುದಿಲ್ಲ. ಆದ್ದರಿಂದ ನೀವು ಹೇಳುವಂತೆ ಈ ವ್ಯಾಪ್ತಿ ಯಾರಿಗೂ ಸಂಮತವಲ್ಲ. ಇದನ್ನು ರಾಜರು ಅದ್ಭುತಂ ಎಂಬ ಪದದಿಂದ ಗೇಲಿಮಾಡುತ್ತಿದ್ದಾರೆ.

ಏವಂ ಚ ಬ್ರಹ್ಮಣೋ ಹರ್ತ್ರೀ ಕಿಂ ನ ವ್ಯಾಪ್ತಿರಿಯಂ ತವ ।
ವಿಪರ್ಯಯೋ ಮಹಾನಾಸೀತ್ತರ್ಕಸ್ಯಾಸ್ಯ ವಿಪರ್ಯಯೇ ॥ ೧೯ ॥

**ಅರ್ಥ**— ಏವಂ = ಹೀಗೆ, ತವ = ನಿನಗೆ ಸಂಮತವಾಗಿರುವ, ಇಯಂ ವ್ಯಾಪ್ತಿಃ = ಈ ಯದ್ವಿದ್ಯತೇ ತದ್ಬಾಧ್ಯತೇ ಎಂಬ ವಾಪ್ತಿಯು, ಬ್ರಹ್ಮಣಃ = ಪರಬ್ರಹ್ಮನ, ಹರ್ತ್ರೀ = ಸಂಹಾರಕವು, ನ ಕಿಂ = ಆಗುವುದಿಲ್ಲವೇನು? ಅಸ್ಯತರ್ಕಸ್ಯ= ಈ ತರ್ಕವನ್ನು, ವಿಪರ್ಯಯೇ = ವಿಪರ್ಯಯದಲ್ಲಿ, ಪರ್ಯವಸಾನೇ= ಪರ್ಯವಸಾನ ಮಾಡಿದಾಗ, ಮಹಾನ್ ವಿಪರ್ಯಯಃ= ದೊಡ್ಡ ಅನರ್ಥವಾಗುತ್ತದೆ.

**ಅನುವಾದ**- ಈ ರೀತಿಯಾಗಿ ಈ ನಿನ್ನ ವ್ಯಾಪ್ತಿಯು ಬ್ರಹ್ಮನನ್ನೇ ಸಂಹಾರ ಮಾಡುವುದಿಲ್ಲವೇ? ಈ ತರ್ಕಕ್ಕೆ ವಿಪರ್ಯಯದಲ್ಲಿ ಪರ್ಯವಸಾನವನ್ನು ಮಾಡಿದರೆ ನಿನಗೆ ದೊಡ್ಡ ಅನರ್ಥವೇ ಉಂಟಾಗುತ್ತದೆ.

**ಭಾವವಿಲಾಸಿನೀ**— ಹರ್ತ್ರೀ ಸಂಹರ್ತ್ರೀ । ಯದ್ವಿದ್ಯತೇ ತದ್ಬಾಧ್ಯತೇ ಇತಿ ವ್ಯಾಪ್ತ್ಯಂಗೀಕಾರೇ (ನ್ಯಾಯಾಂಗೀಕಾರೇ) ಬ್ರಹ್ಮಣ ಏವ ಬಾಧ್ಯತ್ವಪ್ರಸಂಗಾದಿತಿ ಭಾವಃ । ವಿಪರ್ಯಯಃ ಅನರ್ಥಃ । ಅಬಾಧ್ಯತ್ವೇನ ಸತ್ಯತ್ವನಿರಾಕರಣಾದಿತಿ ಭಾವಃ । ವಿಪರ್ಯಯೇ ವಿಪರ್ಯಯ-ಪರ್ಯವಸಾನ ಇತ್ಯರ್ಥಃ ॥ ೧೯ ॥

**ವಿವರಣೆ** – ಯದ್ವಿದ್ಯತೇ ತದ್ಬಾಧ್ಯತೇ ಎಂಬ ವ್ಯಾಪ್ತಿಯನ್ನು ಮಾಯಾವಾದಿಯು ಹೇಳುತ್ತಿದ್ದಾನೆ. ಅಂದರೆ ಯಾವುದು ಇದೆಯೋ ಅದು ಬಾಧಿತವಾಗುವುದು. ಬ್ರಹ್ಮ ಸತ್ಯ ಎಂದು ಅಂಗೀಕಾರಮಾಡಿದ್ದಾನೆ. ಅವನೂ ಬಾಧ್ಯನಾಗಬೇಕಾದೀತು. ಬಾಧ್ಯವಾದ

ರಜತವು ಹೇಗೆ ಇಲ್ಲವೆಂದಾಗುತ್ತದೋ ಹಾಗೆ ಬ್ರಹ್ಮನು ಇಲ್ಲವೆಂದಾಗಬೇಕಾದೀತು ಎಂದು ಇದು ಒಂದು ಅನುಪಪತ್ತಿ. ಅಲ್ಲದೇ ಇನ್ನೂ ಒಂದು ಅನುಪಪತ್ತಿ ಇದೆ. ಈ ವ್ಯಾಪ್ತಿಯನ್ನು ವಿಪರ್ಯಯ ಪರ್ಯವಸಾನ ಮಾಡಿದಾಗ ಇನ್ನೊಂದು ಅನರ್ಥ ವುಂಟಾಗುತ್ತದೆ. ವಿಪರ್ಯಯಪರ್ಯವಸಾನವೆಂದರೆ ಹೇಳಿರುವ ತರ್ಕವನ್ನು ತಿರುಗಿಸಿ ಹೇಳುವುದು. ಉದಾಹರಣೆಗೆ ಬೆಣ್ಣೆಯನ್ನು ತಿಂದಿದ್ದರೆ ಕೈ ಜಿಡ್ಡಾಗುತ್ತಿತ್ತು. ಕೈಯು ಜಿಡ್ಡಾಗಿಲ್ಲವಾದ್ದರಿಂದ ಬೆಣ್ಣೆಯನ್ನು ತಿಂದಿಲ್ಲ ಎಂದು ಹೀಗೆ ತಿರುಗಿಸಿ ಹೇಳಿ ಉಕ್ತಾರ್ಥವನ್ನು ಸಾಧನೆಮಾಡುತ್ತಾರೆ. ಹಾಗೆ ಪ್ರಕೃತ ಯದ್ವಿದ್ಯತೇ ತದ್ಬಾಧ್ಯತೇ ಎಂಬ ತರ್ಕವನ್ನು, ಬ್ರಹ್ಮ ತು ನ ಬಾಧ್ಯತೇ, ಅತಃ ನ ವಿದ್ಯತೇ ಎಂದು ವಿಪರ್ಯಯವರ್ಯವಸಾನ ಮಾಡಿದಾಗ ಬ್ರಹ್ಮನು ಬಾಧ್ಯನಾಗುವುದಿಲ್ಲವಾದ್ದರಿಂದ ಸತ್ ಆಗುವುದಿಲ್ಲವೆಂದು ಬ್ರಹ್ಮನಿಗೆ ಸತ್ವವೇ ಇಲ್ಲವೆಂದಾಗುತ್ತದೆ ಎಂಬ ಮಹಾ ಅನರ್ಥವುಂಟಾಗುತ್ತದೆ. ಬ್ರಹ್ಮ ಸತ್ಯಂ ಎಂಬುದಾಗಿ ಒಪ್ಪಿರುವ ನಿಮ್ಮ ಸಿದ್ಧಾಂತಕ್ಕೆ ವಿರೋಧವಾಗಿ ಮಾತನಾಡಿದ ಹಾಗೆ ಆಗುತ್ತದೆ. ಆದ್ದರಿಂದ ಅಪಸಿದ್ಧಾಂತದೋಷ ನಿನಗೆ ಬರುತ್ತದೆ.

ಅಬಾಧ್ಯತ್ವೇನ ನಾಸ್ತಿತ್ವಂ ಯನ್ನಾಸ್ತಿಕಮತೇಽಪಿ ನ ।
ಅತಃ ಸರ್ವೈಶ್ಚ ಧಾತ್ವರ್ಥೋ ವಾಚ್ಯೋಽನ್ಯೋಽತ್ರ ಮಯ್ಯೈವ ನ ॥ ೨೦ ॥

**ಅರ್ಥ–** ಯತ್ = ಯಾವ ಕಾರಣದಿಂದ, ಅಬಾಧ್ಯತ್ವೇನ = ಅಬಾಧ್ಯತ್ವ ಪ್ರಯುಕ್ತವಾಗಿ, ನಾಸ್ತಿತ್ವಂ = ನಾಸ್ತಿತ್ವವು (ಅಭಾವವು). ನಾಸ್ತಿಕಮತೇ ಅಪಿ = ಶೂನ್ಯವಾದಿಯ ಮತದಲ್ಲೂ ಕೂಡ, ನ = ಇಲ್ಲ, ಅತಃ= ವಿದ್ ಧಾತುವಿಗೆ 'ಇದೆ' ಎಂಬ ಪ್ರಸಿದ್ಧಾರ್ಥ ವಿರುವುದರಿಂದ, ಮಯಾ ಏವ ನ = ನನ್ನಿಂದ ಮಾತ್ರವಲ್ಲ, ಸರ್ವೈಶ್ಚ = ಎಲ್ಲರಿಂದಲೂ ಕೂಡ, ಅತ್ರ = ಪ್ರ ಪಂಚೋ ಯದಿ ವಿದ್ಯೇತ ಎಂಬಲ್ಲಿ, ಧಾತ್ವರ್ಥಃ = ವಿದ್ ಎಂಬ ಧಾತುವಿಗೆ ಅರ್ಥವು, ಅನ್ಯಃ= ಬೇರೆಯೇ, ವಾಚ್ಯಃ = ಹೇಳಲ್ಪಡಬೇಕು.

**ಅನುವಾದ-** ಯಾವುದು ಅಬಾಧ್ಯವೋ ಅದು ಇಲ್ಲ ಎಂಬ ವ್ಯಾಪ್ತಿಯು ನಾಸ್ತಿಕ ಮತದಲ್ಲಿಯೂ ಇಲ್ಲ. ಆದ್ದರಿಂದ ವಿದ್ಯತೇ ಎಂಬಲ್ಲಿರುವ ವಿದ್ ಧಾತುವಿಗೆ ಎಲ್ಲರೂ ಬೇರೆ ಅರ್ಥವನ್ನೇ ಹೇಳಬೇಕು. ನಾನೊಬ್ಬನೇ ಅಲ್ಲ.

**ಭಾವವಿಲಾಸಿನೀ–** ಯತ್ ಯಸ್ಮಾತ್ । ನಾಸ್ತಿಕಮತೇ ಶೂನ್ಯವಾದಿಮತೇ । ಅತಃ ಪ್ರಸಿದ್ಧಧಾತ್ವರ್ಥಸ್ಯ ವಿರುದ್ಧತ್ವಾತ್ ॥ ೨೦ ॥

**ವಿವರಣೆ** – ಯತ್ರ ಅಬಾಧ್ಯತ್ವಂ ತತ್ರ ಸತ್ಯತ್ವಾಭಾವಃ ಎಂಬ ವ್ಯಾಪ್ತಿಯು ಸರ್ವಂ ಶೂನ್ಯಂ ಎಂದು ಸರ್ವಶೂನ್ಯಪ್ರತಿಪಾದಕನಾದ ಶೂನ್ಯವಾದಿಯೂ ಕೂಡ ಒಪ್ಪಿಲ್ಲ.

ಆದ್ದರಿಂದ ನಾವು ಮಾತ್ರವಲ್ಲದೇ ಎಲ್ಲರೂ ಕೂಡ ವಿದ್ಯತೇ ಎಂಬಲ್ಲಿ ವಿದ ಧಾತುವಿಗೆ ಪ್ರಸಿದ್ಧವಾದ ಇರುವಿಕೆ ಎಂಬ ಅರ್ಥವನ್ನು ಬಿಟ್ಟು ಉತ್ಪತ್ತಿ ಎಂಬ ಬೇರೆ ಅರ್ಥವನ್ನೇ ಅಂಗೀಕಾರ ಮಾಡಿದ ಹಾಗೆ ಆಯಿತು.

**ಉತ್ಪತ್ತಿನಾಶೌ ಯದ್ವ್ಯಾಪ್ತೌ ನಿವೃತ್ತಿಶ್ಚ ವಿನಾಶನಮ್ ।**
**ಅತೋ ವ್ಯಾಪಕಶಕ್ತ್ಯೈವ ವ್ಯಾಪ್ಯೋತ್ಪತ್ತಿರಿಹಾಗತಾ ॥ ೨೧ ॥**

**ಅರ್ಥ–** ಯತ್ = ಯಾವ ಕಾರಣದಿಂದ, ಉತ್ಪತ್ತಿನಾಶೌ = ಹುಟ್ಟು ಮತ್ತು ನಾಶಗಳು, ವ್ಯಾಪ್ತೌ = ವ್ಯಾಪ್ತಿವುಳ್ಳವುಗಳು. (ಸ್ತಃ = ಆಗಿವೆಯೋ) ನಿವೃತ್ತಿಃ = ನಿವರ್ತೇತ ಎಂಬ ಶಬ್ದದ ಅರ್ಥವು, ವಿನಾಶನಂ ಚ = ನಾಶವೇ, ಅಸ್ತಿ = ಆಗಿದೆಯೋ. ಅತಃ = ಶ್ರುತಿಯಲ್ಲಿ ಇರುವ ನಿವೃತ್ತಿ ಎಂಬ ಪದದಿಂದ ವಿನಾಶಕ್ಕೆ ವ್ಯಾಪಕತ್ವವನ್ನು ಹೇಳಿದ್ದರಿಂದ, ವ್ಯಾಪಕಶಕ್ತ್ಯಾ ಏವ = ವ್ಯಾಪಕವಾದ ವಿನಾಶದ ಶಕ್ತಿಯಿಂದಲೇ, ವ್ಯಾಪ್ಯೋತ್ಪತ್ತಿಃ = ವ್ಯಾಪ್ಯವಾದ ಉತ್ಪತ್ತಿಯು, ಇಹ = ಈ ಶ್ರುತಿಯಲ್ಲಿ, ಆಗತಾ = ವಿದ್ಯತೇ ಎಂಬ ಶಬ್ದಕ್ಕೆ ಅರ್ಥವಾಗಿ ಬಂದಿದೆ.

**ಅನುವಾದ-** ಉತ್ಪತ್ತಿ ಮತ್ತು ನಾಶಗಳು ಪರಸ್ಪರ ವ್ಯಾಪ್ಯವಾದವುಗಳು ಮತ್ತು ನಿವೃತ್ತಿ ಎಂದರೆ ವಿನಾಶವೇ ಸರಿ. ಆದ್ದರಿಂದ ವ್ಯಾಪಕವಾದ ವಿನಾಶದ ಶಕ್ತಿಯಿಂದ ಇಲ್ಲಿ ವಿದ್ ಧಾತುವಿನ ಅರ್ಥವಾಗಿ ವ್ಯಾಪ್ಯವಾದ ಉತ್ಪತ್ತಿಯು ಪ್ರಾಪ್ತವಾಗುತ್ತದೆ.

**ಭಾವವಿಲಾಸಿನೀ–** ಯತ್ ಯಸ್ಮಾತ್ ವ್ಯಾಪ್ತೌ (ವ್ಯಾಪ್ತಿಮಂತೌ) ಯತ್ಕಾರ್ಯಂ ತದನಿತ್ಯಮಿತಿ ನಿಯಮಾತ್ । ನಿವೃತ್ತಿಃ ನಿವರ್ತೇತಿ ಪದಪ್ರಾತಿಪದಿಕಾರ್ಥಭೂತಾ ನಿವೃತ್ತಿಃ । ವಿನಾಶನಂ ವಿನಾಶನಮೇವ । ನಿವೃತ್ತಿವಿನಾಶಶಬ್ದಯೋಃ ಪರ್ಯಾಯತ್ವಾದಿತಿ ಭಾವಃ । ಅತಃಶ್ರುತೌ ನಿವೃತ್ತಿಪದೇನ ವಿನಾಶಸ್ಯ ವ್ಯಾಪಕತ್ವಕಥನಾತ್ । ವ್ಯಾಪಕಶಕ್ತ್ಯಾ ವ್ಯಾಪಕೀಭೂತ ವಿನಾಶಶಕ್ತ್ಯಾ । ವ್ಯಾಪ್ಯಾ ವಿನಾಶವ್ಯಾಪ್ಯಾ । ಉತ್ಪತ್ತಿವಿನಾಶಯೋರ್ವ್ಯಾಪ್ಯವ್ಯಾಪಕಭಾವಸ್ಯ ಸರ್ವಸಂಮತತ್ವಾತ್ ವ್ಯಾಪಕೀಭೂತವಿನಾಶಸ್ಯ ಚ ಶ್ರುತೌ ಸ್ಪಷ್ಟಂ ನಿವರ್ತೇತೇತಿ ಕಥನಾತ್ ವಿದ್ಯೇತೇತಿ ವ್ಯಾಪ್ಯ-ತಯೋಕ್ತಾ ವೃತ್ತಿರಪ್ಯುತ್ಪತ್ತಿರೇವ ಭವೇತ್ । ವ್ಯಾಪಕಯೋಗ್ಯಸ್ಯೈವ ವ್ಯಾಪ್ಯಸ್ಯ ವಕ್ತವ್ಯತ್ವಾತ್ । ಅನ್ಯಥಾಗಂಗಾಪದೇನಘೋಷಾಧಾರತ್ವಯೋಗ್ಯತೀರ ಗ್ರಹಣಮಾಕಸ್ಮಿಕಂ ಸ್ಯಾತ್ । ಯದಾ ವ್ಯಾಪಕಸ್ಯ ವೃತ್ತ್ಯಂತರಕಲ್ಪನಯಾಪಿ ಸ್ವಯೋಗ್ಯವ್ಯಾಪ್ಯಕಲ್ಪನೇ ಶಕ್ತಿಃ । ಕಿಮು ವಾಚ್ಯಂ ತದಾ ಧಾತೂನಾಮನೇಕಾರ್ಥತ್ವಾದಿತ್ಯನುಶಾಸನಾತ್ ಸತ್ತಾಮೇವ ಮುಖ್ಯವೃತ್ತೌ ತತ್ಕಲ್ಪನಮಿತಿ ಭಾವಃ ॥ ೨೧ ॥

**ವಿವರಣೆ –** ಅನಿತ್ಯತ್ವ ಮತ್ತು ಕಾರ್ಯತ್ವಗಳು ಪರಸ್ಪರ ವ್ಯಾಪ್ತಿ ಉಳ್ಳವುಗಳಾಗಿವೆ. ಅಂದರೆ ಯತ್ ಕಾರ್ಯಂ ತದನಿತ್ಯಂ, ಯದನಿತ್ಯಂ ತತ್ಕಾರ್ಯಂ ಎಂಬುದಾಗಿ ಪರಸ್ಪರವಾಗಿ ವ್ಯಾಪ್ತಿಯನ್ನು ಹೇಳಲಿಕ್ಕೆ ಬರುತ್ತದೆ. ಉದಾಹರಣೆಗೆ ಮಡಿಕೆ ರೂಪ ಕಾರ್ಯವು ಕುಲಾಲವ್ಯಾಪಾರದಿಂದ ಹುಟ್ಟಿದೆ. ಆದ್ದರಿಂದ ಅನಿತ್ಯ. ಮಡಿಕೆ

ನಾಶವಾಗುತ್ತದೆ. ಆದ್ದರಿಂದ ಹುಟ್ಟಿದೆ ಎಂದು ಹೇಳಬಹುದು. ಪ್ರಕೃತ ಶ್ರುತಿಯಲ್ಲಿ ನಿವರ್ತೇತ ಎಂಬುದಕ್ಕೆ ನಿವೃತ್ತಿ ಅಂದರೆ ನಾಶ ಎಂದು ಅರ್ಥ. ಏಕೆಂದರೆ ನಿವೃತ್ತಿ, ನಾಶ ಎರಡೂ ಪರ್ಯಾಯ ಪದಗಳು. ಆದ್ದರಿಂದ ಶ್ರುತಿಯಲ್ಲಿ 'ನಿವರ್ತೇತ' ಎಂಬ ಶಬ್ದದಿಂದ ವಿನಾಶಕ್ಕೆ ವ್ಯಾಪಕತ್ವವನ್ನು ಹೇಳಿದೆ. ಯಾವುದು ಯಾವುದು ನಾಶವಾಗುತ್ತದೋ, ಅದೆಲ್ಲವೂ ಉತ್ಪನ್ನವಾಗಿರಲೇಬೇಕು ಎಂಬ ವ್ಯಾಪ್ತಿಬಲದಿಂದ ವಿನಾಶವ್ಯಾಪ್ಯವಾದ ಉತ್ಪತ್ತಿಯು 'ವಿದ್ಯೇತ' ಎಂಬ ಶಬ್ದಕ್ಕೆ ಅರ್ಥ ಎಂದು ಸಿದ್ಧವಾಗುತ್ತದೆ. ಅಂದರೆ ಉತ್ಪತ್ತಿ ವಿನಾಶಗಳಿಗೆ ವ್ಯಾಪ್ಯವ್ಯಾಪಕಭಾವವು ಸರ್ವ ಸಮ್ಮತವಾದ್ದರಿಂದ ವ್ಯಾಪಕವಾದ ವಿನಾಶವನ್ನು ನಿವರ್ತೇತ ಎಂಬ ಪದದಿಂದ ಶ್ರುತಿಯಲ್ಲಿ ಸ್ಪಷ್ಟವಾಗಿ ಉಲ್ಲೇಖಮಾಡಿದ್ದರಿಂದ ವಿದ್ಯೇತ ಎಂಬುದು ವ್ಯಾಪ್ಯವಾದ ಉತ್ಪತ್ತಿಗೆ ವಾಚಕ, ಅದಕ್ಕೆ ಉತ್ಪತ್ತಿ ಎಂಬ ಅರ್ಥವು ಸಿದ್ಧವಾಯಿತು. ಏಕೆಂದರೆ ವ್ಯಾಪಕಯೋಗ್ಯವಾದದ್ದೇ ವ್ಯಾಪ್ಯ ಎಂದು ಹೇಳುತ್ತಾರೆ. ಉದಾಹರಣೆಗೆ ವ್ಯಾಪಕ ಅಗ್ನಿ. ಅದಕ್ಕೆ ಯೋಗ್ಯವಾದ ವ್ಯಾಪ್ಯವಾದದ್ದು ಯಾವುದೆಂದರೆ ಧೂಮ. ವ್ಯಾಪಕವಾಚಿಯಾದ ಶಬ್ದದ ಜೊತೆಗೆ ವ್ಯಾಪ್ಯವಾಚಿಯಾದ ಶಬ್ದವಿರುವಾಗ ಆ ವ್ಯಾಪ್ಯ ವಾಚಿಶಬ್ದ ವ್ಯಾಪಕಕ್ಕೆ ಯೋಗ್ಯವಾದ ವ್ಯಾಪ್ಯವನ್ನೇ ಹೇಳಬೇಕು. ಘೋಷ ಶಬ್ದದ ಜೊತೆಗೆ ಬಂದಿರುವ ಗಂಗಾ ಶಬ್ದವು ಘೋಷಾಧಾರತ್ವ ಯೋಗ್ಯವಾದ ತೀರವನ್ನೇ ಹೇಳುತ್ತದೆ. ಗಂಗಾಶಬ್ದಕ್ಕೆ ತೀರದಲ್ಲಿ ಶಕ್ತಿವೃತ್ತಿ ಇಲ್ಲ. ಅದನ್ನು ಬಿಟ್ಟು ಲಕ್ಷಣಾವೃತ್ತಿಯಿಂದಲಾದರೂ ತೀರವನ್ನು ಹೇಳುವುದು ಸರಿ ಎನ್ನುವುದಾದರೆ ಲಕ್ಷಣಾವೃತ್ತಿಯಿಂದಾದರೂ ವ್ಯಾಪ್ಯವಾಚಿಯಾದ ಶಬ್ದವು ವ್ಯಾಪಕ ಯೋಗ್ಯವಾದ ವ್ಯಾಪ್ಯವನ್ನೇ ಹೇಳಬೇಕು. ಹೇಳುವಂತೆ ಮಾಡುವ ಶಕ್ತಿ ವ್ಯಾಪಕ ವಾಚಿ ಶಬ್ದಕ್ಕಿದೆ. ಶಕ್ತಿ ವೃತ್ತಿಯೇ ಇರುವಾಗ ಆ ಶಕ್ತಿ ಇದೆ ಎಂದು ಬೇರೇನು ಹೇಳಬೇಕು?

ಯತಃ ಪ್ರಾಗಸತಃ ಸತ್ವೈವೋತ್ಪತ್ತಿರ್ಧಾತುತೋಽಪಿ ತತ್ ॥ ೨೨ ॥

ಯಥಾ ಸತ್ತಾರ್ಥಧಾತ್ವರ್ಥೋ ಭೂತಿರ್ಜನ್ಮ ವಿದಾಂ ಮತೇ ।
ತಥೇಹ ಸತ್ತಾರ್ಥಧಾತೋರರ್ಥೋಽಪ್ಯುತ್ಪತ್ತಿರೇವ ಹಿ ॥ ೨೩ ॥

ತಸ್ಮಾದುತ್ಪತ್ತಿರತ್ರಾರ್ಥೋ ಯದ್‌ಧಾತ್ವರ್ಥೋಽಪ್ಯನೇಕಧಾ ॥ ೨೪ ॥

**ಅರ್ಥ–** ಯತಃ = ಯಾವ ಕಾರಣದಿಂದ, ಪ್ರಾಕ್ = ಮೊದಲು, ಅಸತಃ ಏವ = ಅಸತ್ತಿಗೇ, ಸತ್ತಾ ಏವ = ಸತ್ವಪ್ರಾಪ್ತಿಯೇ, ಉತ್ಪತ್ತಿಃ = ಉತ್ಪತ್ತಿಯೋ, ತತ್ = ಆದ್ದರಿಂದ, ಧಾತುತಃ ಅಪಿ = ಧಾತುವಿನಿಂದಲೂ ಕೂಡ, ಉತ್ಪತ್ತಿಃ= ಉತ್ಪತ್ತಿ ಎಂಬ ಅರ್ಥವು, ಇಹ ಆಗತಾ= ಇಲ್ಲಿ ಸಿದ್ಧವಾಯಿತು, ಯಥಾ = ಹೇಗೆ, ಸತ್ತಾರ್ಥಭಾತ್ವರ್ಥಃ = ಸತ್ ಎಂಬ ಶಬ್ದದ ಅರ್ಥವನ್ನು ಹೇಳುವ ಧಾತುವಿನ ಅರ್ಥವು, ವಿದಾಂ = ಜ್ಞಾನಿಗಳ, ಮತೇ = ಮತದಲ್ಲಿ, ಭೂತಿಃ =

ಇರುವಿಕೆಯು, ಜನ್ಮ = ಉತ್ಪತ್ತಿಯೋ, ತಥಾ = ಹಾಗೆ, ಇಹ = ಈ ಶ್ರುತಿಯಲ್ಲಿಯೂ ಕೂಡ, ಸತ್ತಾರ್ಥಧಾತೋಃ = ಸತ್ತಾ ಎಂಬ ಅರ್ಥವುಳ್ಳ ಧಾತುವಿಗೆ, ಉತ್ಪತ್ತಿಃ ಏವ = ಉತ್ಪತ್ತಿಯೆಂದೇ, ಅರ್ಥಃ = ಅರ್ಥವು, ಹಿ = ಇದು ಪ್ರಸಿದ್ಧವು.

ಯತ್ = ಯಾವ ಕಾರಣದಿಂದ, ಧಾತ್ವರ್ಥಃ ಅಪಿ = ಪ್ರಸಿದ್ಧವಾದ ಧಾತುಗಳ ಅರ್ಥವೂ ಕೂಡ, ಅನೇಕಧಾ = ಬಹಳ ಪ್ರಕಾರವಾಗಿದೆಯೋ, ತಸ್ಮಾತ್ = ಆದ್ದರಿಂದ, ಅತ್ರ = ಇಲ್ಲಿಯೂ ಕೂಡ, ಉತ್ಪತ್ತಿಃ ಏವ = ಉತ್ಪತ್ತಿಯೇ, ಅರ್ಥಃ = ಅರ್ಥವು. ಇಹ ಆಗತಾ = ಇಲ್ಲಿ ಸಿದ್ಧವಾಯಿತು.

**ಅನುವಾದ –** ಹೇಗೆ ಮೊದಲು ಅವಿದ್ಯಮಾನವಾದುದಕ್ಕೆ ಅನಂತರ ಉಂಟಾಗುವ ವಿದ್ಯಮಾನತ್ವವೇ ಉತ್ಪತ್ತಿ ಶಬ್ದಾರ್ಥ. ವಿದ್ ಧಾತುವಿನಿಂದಲೂ ಈ ಅರ್ಥವು ಲಭ್ಯವಾಗುತ್ತದೆ. ಸತ್ತಾರ್ಥಕವಾದ ವಿದ್ ಧಾತುವಿಗೂ ಜ್ಞಾನಿಗಳ ಪಕ್ಷದಲ್ಲಿ ಭೂತಿ, ಉತ್ಪತ್ತಿ ಎಂದೇ ಅರ್ಥ. ಆದ್ದರಿಂದ ಇಲ್ಲಿ ಸತ್ತಾರ್ಥಕವಾದ ವಿದ್ ಧಾತುವಿಗೆ ಉತ್ಪತ್ತಿ ಎಂದೇ ಅರ್ಥ. ಧಾತುವಿಗೆ ಅನೇಕ ಅರ್ಥಗಳಿರುತ್ತವೆ ಎಂಬ ವಚನದಿಂದಲೂ ಇಲ್ಲಿ ವಿದ್ ಧಾತುವಿಗೆ ಉತ್ಪತ್ತಿ ಎಂಬ ಅರ್ಥವನ್ನು ಹೇಳಬೇಕು.

**ಭಾವವಿಲಾಸಿನೀ–** ವಿದ ಸತ್ತಾಯಾಮಿತಿ ಪ್ರಸಿದ್ಧಧಾತ್ವರ್ಥತ್ವೇನೈವ ದ್ವೇಧೋತ್ಪತ್ತಿಮಾನಯತಿ ॥ **ಯತ ಇತಿ ॥** ಧಾತುತಃ । ಪ್ರಸಿದ್ಧಧಾತ್ವರ್ಥತಃ । ತತ್ ತಸ್ಮಾತ್ । ಉತ್ಪತ್ತಿರಿಹಾಗತೇತಿ ಪೂರ್ವೇಣಾನ್ವಯಃ ॥ ೨೨–೨೩ ॥

ನಿಮಿತ್ತಾಂತರಂಚಾಹ – **ಯದ್ಧಾತ್ವರ್ಥ ಇತಿ ।** ಯತ್ ಯಸ್ಮಾತ್ ತಸ್ಮಾದಿತಿ ಪೂರ್ವೇಣಾನ್ವಯಃ । ''ಅನೇಕಾರ್ಥಾ ಹಿ ಧಾತವ'' ಇತಿ ವಚನಾದಿತಿ ಭಾವಃ ॥ ೨೪ ॥

**ವಿವರಣೆ -** ಉತ್ಪತ್ತಿ ಎಂದರೆ ಏನು ಎಂಬ ಪ್ರಶ್ನೆಗೆ ಹೀಗೆ ಉತ್ತರಿಸಬಹುದು. ಈ ಮೊದಲಿಗೆ ಯಾವುದು ಅಸತ್ತಾಗಿತ್ತೋ ಅದು ಅನಂತರ ಸತ್ತಾಗುವುದೇ ಅದರ ಉತ್ಪತ್ತಿ. ಉದಾಹರಣೆಗೆ ಕುಂಬಾರ ನಾಳೆ ಒಂದು ಮಡಕೆಯನ್ನು ಮಾಡುತ್ತಾನೆ ಎಂದರೆ ಇಂದು ಆ ಮಡಕೆ ಅಸತ್ ಅಂದರೆ ಇಲ್ಲ. ಅಸತ್ತಾದ ಆ ಮಡಿಕೆ ಕುಂಬಾರನ ಕ್ರಿಯೆಯಿಂದ ನಾಳೆ ಸತ್ತೆನಿಸುವುದನ್ನು ಉತ್ಪತ್ತಿ ಎನ್ನುತ್ತಾರೆ. ತಥಾ ಚ ವಿದಧಾತುವಿನ ಅರ್ಥ ಸತ್ತಾ ಎಂದು, ಸತ್ತಾ ಎಂದರೆ ಉತ್ಪತ್ತಿ ಎಂದು ಧಾತುವಿನಿಂದಲೇ ಸಿದ್ಧವಾಯಿತು. ಏಕೆಂದರೆ ನಾಳೆ ಅದನ್ನು ವಿದ್ಯತೇ, ಇದೆ ಎನ್ನುತ್ತಾರೆ. ಉತ್ಪನ್ನವಾಯಿತು ಎನ್ನುತ್ತಾರೆ.

ವಿದಧಾತುವಿಗೆ ಸತ್ತಾ ಎಂಬ ಅರ್ಥ ಮಾತ್ರವಲ್ಲದೆ ಉತ್ಪತ್ತಿ ಎಂಬ ಅರ್ಥವಿದೆ ಎಂದೂ ಹೇಳುತ್ತಿದ್ದಾರೆ-

ಏವಂ ಚ ನಿತ್ಯಜಡಗೋ ಜೀವಗೋ ಬ್ರಹ್ಮಗಶ್ಚ ಯಃ ।
ಭೇದವರ್ಗಃ ಪ್ರಪಂಚಾಖ್ಯೋ ಯದ್ಯುತ್ಪದ್ಯೇತ ತರ್ಹ್ಯಸೌ ॥ ೨೫ ॥

ವಿನಶ್ಯೇನ್ನ ಚ ನಾಶೋಽಸ್ತಿ ತಸ್ಮಾನ್ನೋತ್ಪದ್ಯತೇ ಚ ಸಃ ।
ಇತಿ ತನ್ನಿತ್ಯತಾಮಾಹ ಶ್ರುತಿರ್ನಾಸ್ತ್ಯತ್ರ ಸಂಶಯಃ ॥ ೨೬ ॥

**ಅರ್ಥ–** ಏವಂ ಚ = ಹೀಗೆ, ನಿತ್ಯಜಡಗಃ = ಅವ್ಯಾಕೃತಾಕಾಶ, ಕಾಲ, ಪ್ರಕೃತಿ, ವೇದ ಮೊದಲಾದ ಅಚೇತನದಲ್ಲಿರುವ, ಜೀವಗಃ = ಜೀವನಲ್ಲಿ ಇರುವ, ಬ್ರಹ್ಮಗಶ್ಚ = ಬ್ರಹ್ಮನಲ್ಲಿಯೂ ಇರುವ, ಯಃ = ಯಾವ, ಪ್ರಪಂಚಾಖ್ಯಃ = ಪ್ರಪಂಚವೆಂಬ ಭೇದ ಸಮೂಹವು, ಯದಿ = ಒಂದು ವೇಳೆ, ಉತ್ಪದ್ಯತೇ = ಹುಟ್ಟುತ್ತದೆ ಎಂದಾದರೆ, ತರ್ಹಿ = ಆ ಪಕ್ಷದಲ್ಲಿ, ಅಸೌ = ಈ ಭೇದವು, ವಿನಶ್ಯೇತ = ನಾಶವನ್ನು ಹೊಂದುತ್ತದೆ. ನಾಶಃ = ಆ ಭೇದ ಪಂಚಕದ ನಾಶವು, ನ ಚ ಅಸ್ತಿ = ಇರುವುದೇ ಇಲ್ಲ, ತಸ್ಮಾತ್ = ಆದ್ದರಿಂದ, ಸಃ = ಆ ಭೇದ ಪಂಚಕವು, ನ ಚ ಉತ್ಪದ್ಯತೇ = ಹುಟ್ಟುವುದೇ ಇಲ್ಲ, ಇತಿ = ಹೀಗೆ, ತನ್ನಿತ್ಯತಾಂ = ಆ ಭೇದ ಪಂಚಕದ ನಿತ್ಯತ್ವವನ್ನು, ಶ್ರುತಿಃ = ಪ್ರಪಂಚೋ ಯದಿ ಎಂಬ ಶ್ರುತಿಯು, ಆಹ = ಹೇಳುತ್ತದೆ. ಅತ್ರ = ಈ ವಿಷಯದಲ್ಲಿ, ನ ಸಂಶಯಃ = ಸಂಶಯವಿಲ್ಲ.

**ಅನುವಾದ-** ಆದ್ದರಿಂದ ನಿತ್ಯಜಡದಲ್ಲಿರುವ ಜೀವನಲ್ಲಿರುವ ಮತ್ತು ಬ್ರಹ್ಮನಲ್ಲಿರುವ ಯಾವ ಪ್ರಪಂಚವೆಂಬ ಹೆಸರಿನ ಭೇದ ಸಮೂಹವಿದೆಯೋ ಅದಕ್ಕೆ ಉತ್ಪತ್ತಿ ಇರುವುದಾದರೆ ನಾಶವನ್ನು ಹೊಂದಬೇಕಾದೀತು. ಆದರೆ ನಾಶವಿಲ್ಲ. ಆದ್ದರಿಂದ ಉತ್ಪತ್ತಿಯೂ ಇಲ್ಲ ಎಂದು ಶ್ರುತಿಯು ಭೇದ ಸಮೂಹಕ್ಕೆ ನಿತ್ಯತ್ವವನ್ನೇ ಹೇಳುತ್ತದೆ. ಈ ವಿಷಯದಲ್ಲಿ ಸಂಶಯವಿಲ್ಲ.

**ಭಾವವಿಲಾಸಿನೀ–** ಅತೋಽಪಿ ಘಟಾದಿಪ್ರಪಂಚೋ ನಾತ್ರ ಶ್ರುತೌ ವಿವಕ್ಷಿತಃ । ತರ್ಕಸ್ಯ ವಿಪರ್ಯಯೇಽಪರ್ಯವಸಾನಪ್ರಸಂಗಾತ್ । ಕಿಂತು ನಿತ್ಯಧರ್ಮಿಕತ್ವಾದನಾದಿನಿತ್ಯಂ ಭೇದಪಂಚಕಮೇವೋಕ್ತರೀತ್ಯಾ ಶ್ರುತ್ಯಾವಿವಕ್ಷಿತಮಿತ್ಯಾಹ – **ಏವಂ ಚೇತಿ** ॥ ನಿತ್ಯಜಡಗಃ ಅವ್ಯಾಕೃತಾಕಾಶಕಾಲಪ್ರಕೃತಿವೇದಾದಿನಿಷ್ಠಃ । ಭೇದವರ್ಗಃ ಜಡೇಶ್ವರಭೇದೋ ಜಡಜೀವಭೇದೋ ಜಡಾನಾಂ ಪರಸ್ಪರಭೇದೋ ಜೀವೇಶ್ವರಭೇದೋ ಜೀವಾನಾಂ ಪರಸ್ಪರಭೇದಶ್ಚೇತಿ ತ್ರಿವರ್ಗನಿಷ್ಠಃ ಪಂಚವಿಧೋ ಭೇದಸಮೂಹಃ । ತನ್ನಿತ್ಯತಾಂ ಭೇದಪಂಚಕನಿತ್ಯತಾಮ್ । ಪಂಚತಯಾಪಿ ಸಿದ್ಧಾನಾಂ ಪಂಚಭೂತಾದೀನಾಮುತ್ಪನ್ನವಿನಷ್ಟತ್ವೇನ ಅನಾದಿನಿತ್ಯಾನಾಂ ಜೀವೇಶ್ವರ ನಿತ್ಯಜಡಾನಾಂ ತ್ರಿತ್ವೇನ ಚ ತರ್ಕವಿಷಯತ್ವಾಯೋಗಾತ್ ಅನಾದಿನಿತ್ಯತಯಾ ಪಂಚತಯಾ ಚ ಪ್ರಸಿದ್ಧಂ ಭೇದಪಂಚಕಮೇವ ಶ್ರುತ್ಯರ್ಥ ಇತಿ ಭಾವೇನೋಕ್ತಂ ನಾಸ್ತ್ಯತ್ರ ಸಂಶಯ ಇತಿ ॥ ೨೫–೨೬ ॥

**ವಿವರಣೆ-** ಶ್ರುತಿಯಲ್ಲಿರುವ ಪ್ರಪಂಚ ಎಂಬ ಶಬ್ದಕ್ಕೆ ಘಟಮೊದಲಾದ ಪಂಚಭೂತಗಳೆಂಬ ಪ್ರಪಂಚ ಎಂಬ ಅರ್ಥ ವಿವಕ್ಷಿತವಾಗಿದ್ದಲ್ಲಿ, ಯದಿ ವಿದ್ಯೇತ ತರ್ಹಿ ನಿವರ್ತೇತ ಎಂಬ ತರ್ಕವನ್ನು ವಿಪರ್ಯಯಪರ್ಯವಸಾನ ಮಾಡಲು ಆಗುವುದಿಲ್ಲ. ಭೇದವರ್ಗ ಎಂದರೆ ಜೀವೇಶ್ವರ ಭೇದ, ಜಡಜೀವಗಳಿಗೆ ಪರಸ್ಪರ ಭೇದ, ಜೀವರಲ್ಲಿ

ಪರಸ್ಪರಭೇದ, ಜಡ ಈಶ್ವರ ಭೇದ, ಜಡಗಳಿಗೆ ಪರಸ್ಪರ ಭೇದ ಎಂಬುದಾಗಿ ನಿತ್ಯವರ್ಗದಲ್ಲಿರುವ ಐದು ವಿಧವಾದ ಭೇದಗಳ ಸಮೂಹ ಎಂದು ಅರ್ಥ.

ಭೇದಪ್ರಪಂಚಕ್ಕೆ ಶ್ರುತಿಯು ನಿತ್ಯತ್ವವನ್ನು ಹೇಳಿದೆ. ಈ ವಿಷಯದಲ್ಲಿ ಸಂಶಯವಿಲ್ಲ ಎಂದು ಹೇಳುತ್ತಿವೆ. ಇದರ ಅಭಿಪ್ರಾಯ ಏನೆಂದರೆ ಐದು ಎಂದು ಪ್ರಸಿದ್ಧವಾದವುಗಳು - ಪಂಚಭೂತಗಳು. ಅವುಗಳಿಗೆ ಉತ್ಪತ್ತಿನಾಶಗಳಿದೆ. ಆದ್ದರಿಂದ ಇವು ತರ್ಕಕ್ಕೆ ವಿಷಯವಾಗುವುದಿಲ್ಲ, ಇನ್ನು ಅನಾದಿನಿತ್ಯವಾದ ಜೀವ - ಈಶ್ವರ - ಜಡ, ಇವು ಮೂರರ ಗುಂಪಾಯಿತು. ಆದ್ದರಿಂದ ಇವು ತರ್ಕಕ್ಕೆ ವಿಷಯವಾಗುವುದಿಲ್ಲ, ಆದ್ದರಿಂದ ಅನಾದಿನಿತ್ಯಎಂದೂ, ಪಂಚ ಎಂದೂ ಪ್ರಸಿದ್ಧವಾದದ್ದು ಭೇದಪಂಚಕವೇ. ಆದ್ದರಿಂದ ಈ ವಿಷಯದಲ್ಲಿ ಸಂಶಯವಿಲ್ಲ ಎಂದು ಹೇಳಿದ್ದು.

ಪೂರ್ವಭಾಗದಲ್ಲಿ ನಿತ್ಯತ್ವವನ್ನು ಹೇಳಿ ಉತ್ತರಾರ್ಧದಲ್ಲಿ ಪ್ರಪಂಚಕ್ಕೆ ಮಿಥ್ಯಾತ್ವವನ್ನು ಹೇಳಿದರೆ ಸ್ವತಃ ವಿರುದ್ಧವಾಗುತ್ತದೆ. ಆದ್ದರಿಂದ ಮಿಥ್ಯಾತ್ವವು ಶ್ರುತಿಗಳಿಗೆ ಅಭಿಪ್ರೇತವಾಗಿರುವುದಿಲ್ಲ, ಕಿಂತು ಸತ್ಯತ್ವವೇ ಅಭಿಪ್ರೇತವಾಗಿದೆ. ಎಂಬುದನ್ನು ತಿಳಿಸುವುದಕ್ಕೋಸ್ಕರ ಮುಂದಿನ ಗ್ರಂಥ ಹೊರಟಿದೆ.

ಇತ್ಯರ್ಧೇ ನಿತ್ಯತಾಮುಕ್ತ್ವಾ ವಕ್ತ್ಯರ್ಧೇ ಸತ್ಯತಾಂ ಚ ಸಾ ॥ ೨೭ ॥

**ಅರ್ಥ**– ಇತಿ = ಹೀಗೆ, ಅರ್ಧೇ = ಪೂರ್ವಾರ್ಧದಲ್ಲಿ, ನಿತ್ಯತಾಂ = ಪ್ರಪಂಚನಿತ್ಯತ್ವವನ್ನು, ಉಕ್ತ್ವಾ = ಹೇಳಿ, ಸಾ = ಆ ವಿಕಲ್ಪೋ ಎಂಬ ಶ್ರುತಿಯು, ಅರ್ಧೇ = ಉತ್ತರಾರ್ಧದಲ್ಲಿ, ಸತ್ಯತಾಂ ಚ = ಸತ್ಯತ್ವವನ್ನೇ, ವಕ್ತಿ = ಹೇಳುತ್ತದೆ.

**ಅನುವಾದ**- ಹೀಗೆ ಪೂರ್ವಾರ್ಧದಲ್ಲಿ ನಿತ್ಯತ್ವವನ್ನು ಹೇಳಿ ಶ್ರುತಿಯು ಉತ್ತರಾರ್ಧದಲ್ಲಿ ಸತ್ಯತ್ವವನ್ನು ಹೇಳುತ್ತದೆ.

**ಭಾವವಿಲಾಸಿನೀ**– ಪೂರ್ವಾರ್ಧೇ ನಿತ್ಯತಾಮುಕ್ತ್ವಾ ಪುನರುತ್ತರಾರ್ಧೇಮಿಥ್ಯಾತ್ವಕಥನಸ್ಯ ವಿರುದ್ಧತ್ವಾನ್ನ ತಚ್ಛ್ರುತ್ಯಭಿಪ್ರೇತಂ ಕಿಂತು ಸತ್ಯತ್ವಮೇವೇತ್ಯಾಹ – ಇತ್ಯರ್ಧ ಇತಿ । ಸಾ ಶ್ರುತೇಃ ॥ ೨೭ ॥

ಮಾತ್ರಾ ಲೇಶಸ್ತದ್ವಿಹೀನಃ ಸ್ಯಾದಮಾತ್ರೋ ವಿವೇಕಿನಾಮ್ ।
ಮಾಯಾಲೇಶೋಜ್ಝಿತಂ ವಸ್ತು ಮಾಯಾಮಾತ್ರಂ ತತೋಽಭವತ್ ॥

ಉಕ್ತದ್ವೈತಂ ಚ ಮಾಯಾಯಾ ಲೇಶತೋಽಪ್ಯುಜ್ಝಿತಂ ಕಿಲ ।
ಅತಸ್ತದ್ ಬ್ರಹ್ಮವದ್ ದ್ವೈತಂ ಸಚ್ಚಾಭೂತ್ಪರಮಾರ್ಥತಃ ॥ ೨೮ ॥

**ಅರ್ಥ–** ಮಾತ್ರಾ= ಮಾತ್ರಾ ಶಬ್ದಾರ್ಥವು, ಲೇಶಃ= ಲೇಶವೆಂದು, ಭವತಿ= ಆಗುತ್ತವೆ, ತದ್ವಿಹೀನಃ= ಲೇಶ ವಿಹೀನವಾದದ್ದು, ವಿವೇಕಿನಾಂ= ತಿಳುವಳಿಕೆಯುಳ್ಳವರಿಗೆ, ಅಮಾತ್ರಃ= ಅಮಾತ್ರ ಶಬ್ದವಾಚ್ಯವಾದದ್ದಾಗಿ, ಸ್ಯಾತ್= ಆಗುತ್ತದೆ, ಮಾಯಾಲೇಶೋಜ್ಝಿತಂ = ಮಾಯೆಯ ಲೇಶವೂ ಇಲ್ಲದ, ವಸ್ತು = ವಸ್ತುವು, ತತಃ = ಮಾಯಾರಹಿತವಾದ್ದರಿಂದಲೇ, ಮಾಯಾಽಮಾತ್ರಂ = ಮಾಯಾಽಮಾತ್ರವೆಂದು, ಅಭವತ್ = ಆಯಿತು. ಉಕ್ತದ್ವೈತಂ ಚ = ಹೇಳಲಾದ ದ್ವೈತವಾದರೂ, (ಭೇದಪಂಚಕವೂ) ಮಾಯಾಯಾಃ ಲೇಶತಃ ಅಪಿ = ಅಲ್ಪವಾದ ಮಾಯೆಯಿಂದಲೂ, ಉಜ್ಝಿತಂ= ರಹಿತವಾಗಿದೆ, ಕಿಲ = ಹೀಗೆ ಶ್ರುತಿಯು ಹೇಳುತ್ತಿದೆ. ಅತಃ = ಆದ್ದರಿಂದ, ತತ್ ದ್ವೈತಂ = ಆ ಭೇದವು, ಬ್ರಹ್ಮವತ್ = ಪರಬ್ರಹ್ಮನಂತೆ, ಪರಮಾರ್ಥತಃ ಚ = ಪಾರಮಾರ್ಥಿಕವಾಗಿಯೇ, ಸತ್ = ಸತ್ಯವು, ಅಭೂತ್= ಆಗಿದೆ.

**ಅನುವಾದ-** ಮಾತ್ರ ಎಂದರೆ ಲೇಶ ಎಂದು ಅರ್ಥ. ಅಮಾತ್ರ ಎಂಬ ಶಬ್ದಕ್ಕೆ ವಿವೇಕಿಗಳ ಮತದಲ್ಲಿ ಲೇಶವೂ ಇಲ್ಲದವನು ಎಂದು ಅರ್ಥ. ಆದ್ದರಿಂದ ಮಾಯಾಮಾತ್ರ ಶಬ್ದಕ್ಕೆ ಮಾಯಾಲೇಶವೂ ಇಲ್ಲದವನು ಎಂದು ಅರ್ಥವಾಗುತ್ತದೆ. ಪೂರ್ವದಲ್ಲಿ ಹೇಳಲ್ಪಟ್ಟ ದ್ವೈತವು ಮಾಯಾಲೇಶದಿಂದಲೂ ರಹಿತವಾದುದಷ್ಟೆ. ಆದ್ದರಿಂದ ಆ ದ್ವೈತವು ಬ್ರಹ್ಮನಂತೆ ಪಾರಮಾರ್ಥಿಕ ಸತ್ಯವೇ ಆಯಿತು.

**ಭಾವವಿಲಾಸಿನೀ–** ತದ್ವಿಹೀನಃ ತೇನಲೇಶೇನಾಪಿ ಹೀನಃ । ತತಃ ಅಮಾತ್ರಮಿತಿ ಚ್ಛೇದಸಂಭವಾತ್ತಸ್ಯ ಚ ಪದಸ್ಯ ಲೇಶರಾಹಿತ್ಯಾರ್ಥಕತ್ವಾತ್ । ಮಾಯಾಯಾ ಅಮಾತ್ರಂ ಮಾತ್ರಾರಹಿತಮಿತಿ ಕುಲಿಶಕ್ಷತಾನಾಮವೇದನಾಜ್ಞಮಿತಿವದ್ಯೋಗಸಂಭವಾಚ್ಚ । ಸಾದೇರೇವ ಮಾಯಾಮಯತ್ವೇನಾನಾದೇರಸ್ಯ ಬ್ರಹ್ಮವನ್ಮಾಯಾಲೇಶಸಹಿತತ್ವಸ್ಯಾಪ್ಯಯೋಗೇನ ಕಥಂ ಮಿಥ್ಯಾತ್ವಮಿತಿ ಹೇತುಗರ್ಭತಯಾ ಪರಂ ಧಿಕ್ಕೃತ್ಯ ಸ್ವಾಭಿಮತಸತ್ಯತ್ವಂ ಸ್ಥಾಪಯಿತುಂ ಶ್ರುತೇರಯಮುತ್ತರದಾನಕ್ರಮಃ ॥ ೨೮–೨೯ ॥

**ವಿವರಣೆ –** ಮಾಯಾ ಶಬ್ದಕ್ಕೆ ಅಮಾತ್ರ ಎಂಬಲ್ಲಿ ಏಕದೇಶವಾದ ಮಾತ್ರ ಶಬ್ದದೊಂದಿಗೆ ಅನ್ವಯ ಕುಲಿಶಕ್ಷತಗಳ (ವಜ್ರಾಯುಧದ ಗಾಯಗಳ) ವೇದನೆಯನ್ನು ಕಂಡರಿಯದು ಎಂದು ಮಹಾಕವಿಪ್ರಯೋಗದಂತೆ ಕೂಡುತ್ತದೆ. ಅನಾದಿಯಾದ ಈ ಭೇದಪಂಚಕವು ಬ್ರಹ್ಮನಂತೆ ಮಾಯಾಲೇಶರಹಿತ ಎಂದ ಮೇಲೆ ಮಿಥ್ಯಾತ್ವ ಹೇಗೆ ಎಂದು ಶ್ರುತಿಯು ಅದ್ವೈತಿಯನ್ನು ಧಿಕ್ಕರಿಸುತ್ತಿದೆ.

ಮಾಯಾ ಹಿ ಕಲ್ಪನಾಮೂಲಂ ತಸ್ಯಾ ಲೇಶೋಪಿ ಯಸ್ಯ ನ ।
ತದ್ ದ್ವೈತಂ ಪರಮಂ ತತ್ವಂ ಕಿಂ ನ ಸ್ಯಾಚ್ಛಬ್ದಶೋಧನೇ ॥ ೩೦ ॥

**ಅರ್ಥ–** ಮಾಯಾ ಹಿ = ಮಾಯೆಯೇ, ಕಲ್ಪನಾಮೂಲಂ = ಮಿಥ್ಯಾ ಭೇದ ಕಲ್ಪನೆಗೆ ಮೂಲ ಎಂದು ನಿನ್ನ ಮತ ಪ್ರಸಿದ್ಧವಾಗಿದೆ, ಯಸ್ಯ = ಯಾವ ಭೇದಕ್ಕೆ, ತಸ್ಯಾಃ = ಆ ಮಾಯೆಯ, ಲೇಶಃ ಅಪಿ ನ = ಕಿಂಚಿತ್ತೂ ಸಂಬಂಧವಿಲ್ಲವೋ. ತತ್ ದ್ವೈತಂ= ಆ ಭೇದವು, ಶಬ್ದಶೋಧನೇ = ಮಾಯಾಮಾತ್ರ ಎಂಬ ಶಬ್ದಕ್ಕೆ ಪ್ರಾಮಾಣಿಕವಾಗಿ ಅರ್ಥಚಿಂತನೆಯನ್ನು ಮಾಡಿದಾಗ, ಪರಮಂ ತತ್ತ್ವಂ = ಶ್ರೇಷ್ಠವಾದ ತತ್ತ್ವವು, ಕಿಂ ನ ಸ್ಯಾತ್ = ಯಾಕೆ ಆಗಬಾರದು?

**ಅನುವಾದ-** ಮಾಯೆಯು ಎಲ್ಲಾ ಕಲ್ಪನೆಗಳಿಗೆ ಮೂಲವಷ್ಟೆ. ಯಾವುದಕ್ಕೆ ಆ ಮಾಯೆಯ ಲೇಶದ ಸಂಬಂಧವು ಇಲ್ಲವೋ ಅಂತಹ ಭೇದವು ಶಬ್ದಶಕ್ತಿಯನ್ನು ವಿಚಾರ ಮಾಡಿದರೆ ಪರಮತತ್ವವಾಗಲಿಲ್ಲವೇ?

**ಭಾವವಿಲಾಸಿನೀ–** ಶಬ್ದಶೋಧನೇ ಮಾಯಾಮಾತ್ರಶಬ್ದಶೋಧನೇ ॥೩೦॥

**ವಿವರಣೆ –** ಭೇದವು ಮಿಥ್ಯಾ ಅಂದರೆ ಕಲ್ಪಿತ, ಕಲ್ಪನೆಗೆ ಮೂಲ ಮಾಯೆ ಎಂದು ಅದ್ವೈತ ಮತದಲ್ಲಿ ಪ್ರಸಿದ್ಧವಾಗಿದೆ. ಆದರೆ ಶ್ರುತಿಯು ಭೇದಕ್ಕೆ ಮಾಯಾ ಲೇಶವೂ ಮೂಲವಾಗಿಲ್ಲ ಎಂದು ಹೇಳುತ್ತಿದೆ. ಆದರಿಂದ ಭೇದ ಪರಮ ಸತ್ಯ. ಕಲ್ಪಿತವಲ್ಲ. ಇದು ಶ್ರುತಿಯಲ್ಲಿರುವ ಮಾಯಾಮಾತ್ರ ಎಂಬ ಶಬ್ದ ಶೋಧನೆ ಮಾಡಿದಾಗ ತಿಳಿಯುತ್ತದೆ. ಮೇಲಿನ ನೋಟಕ್ಕೆ ಕಾಣುವ ಅರ್ಥವಿಟ್ಟುಕೊಂಡರೆ ಮಾಯಾ ಏವ ಮಾಯಾಮಾತ್ರಂ ಕೇವಲ ಮಾಯೆ. ಭೇದ ಮಾಯೆಯಿಂದ ಕಲ್ಪಿತ ಹೊರತು ಸತ್ಯವಲ್ಲ ಎಂದು ಕಾಣುತ್ತದೆ. ಅದು ಪೂರ್ವೋತ್ತರ ವಿರುದ್ಧ. ತನಗೆ ತಾನೇ ವಿರುದ್ಧ. ಆದರಿಂದ ಶಬ್ದದ ಅರ್ಥ ಏನೆಂದು ಶೋಧನೆ ಮಾಡಬೇಕು.

ಮಿಥ್ಯಾತ್ವಾರ್ಥಂ ತು ಪೂರ್ವೋಕ್ತಂ ನಿತ್ಯತ್ವಂ ಸಹತೇ ನ ತೇ ।
ಉತ್ತರಶ್ಲೋಕತರ್ಕೋಽಪಿ ನ್ಯಕ್ಕರೋತ್ಯತಿಕರ್ಕಶಃ ॥ ೩೧ ॥

**ಅರ್ಥ–** ಪೂರ್ವೋಕ್ತಂ= ಹಿಂದಿನ ಶ್ಲೋಕದಲ್ಲಿ ಹೇಳಲ್ಪಟ್ಟ, ನಿತ್ಯತ್ವಂ= ನಿತ್ಯತ್ವವು, ತೇ= ನಿನ್ನ, ಮಿಥ್ಯಾತ್ವಾರ್ಥಂ= ಮಿಥ್ಯಾ ಎಂಬ ಅರ್ಥವನ್ನು, ನ ಸಹತೆ= ಸಹಿಸುವುದಿಲ್ಲ, ಮತ್ತೇನೆಂದರೆ, ಅತಿಕರ್ಕಶಃ = ಅತ್ಯಂತ ಕಠೋರವಾದ, ಉತ್ತರಶ್ಲೋಕತರ್ಕಃ = ಮುಂದಿನ ಶ್ಲೋಕದಲ್ಲಿ ಹೇಳಿದ ಯದಿ ಕೇನಚಿತ್ ಕಲ್ಪಿತಃ ಸ್ಯಾತ್ ತರ್ಹಿ ನಿವರ್ತೇತ, ನ ನಿವರ್ತತೇ ತಸ್ಮಾತ್ ನ ಕಲ್ಪಿತಃ ಎಂಬ ಈ ತರ್ಕವು, ನ್ಯಕ್ಕರೋತಿ = ಮಿಥ್ಯಾತ್ವವನ್ನು ನಿರಾಕರಿಸುತ್ತದೆ.

**ಅನುವಾದ-** ಪೂರ್ವದಲ್ಲಿ ನೀನು ಹೇಳಿದ ಮಿಥ್ಯಾ ಎಂಬ ಅರ್ಥವನ್ನು ಅಂಗೀಕರಿಸಿದರೆ ಆ ಅರ್ಥವು ನಿತ್ಯತ್ವವನ್ನು ಸಹಿಸುವುದಿಲ್ಲ. ಮುಂದಿನ ಶ್ರುತಿಯಲ್ಲಿ ಹೇಳಿದ ಅತಿಕ್ರೂರವಾದ ತರ್ಕವೂ ಸಹ ಮಿಥ್ಯಾತ್ವವನ್ನು ನಿರಾಕರಿಸುತ್ತದೆ.

**ಭಾವವಿಲಾಸಿನೀ–** ಪೂರ್ವೋಕ್ತಂ ನಿತ್ಯತ್ವಂ ತೇ ಮಿಥ್ಯಾತ್ವಾರ್ಥಂ ನ ಸಹತ ಇತಿ ಯೋಜನಾ । ಉತ್ತರ ಶ್ಲೋಕತರ್ಕಃ ಯದಿ ಕೇನಚಿತ್‌ಕಲ್ಪಿತಃ ಸ್ಯಾತ್ ತರ್ಹಿ ವಿನಿವರ್ತೇತ ಬಾಧ್ಯೇತ । ನಚ ವಿನಿವರ್ತತೇ । ತಸ್ಮಾನ್ನ ಕಲ್ಪಿತ ಇತಿ ತರ್ಕಃ ॥ ೩೧ ॥

ಅದ್ವೈತಂ ಪರಮಾರ್ಥತಃ ಎಂಬ ವಾಕ್ಯಶೇಷಕ್ಕೆ ಸಂಗತಿಯನ್ನು ಕೊಡುತ್ತಿದ್ದಾರೆ.

ಏವಂ ಸಾ ದ್ವೈತಸತ್ಯತ್ವಂ ಸಾಧಯಿತ್ವಾ ಸಹೇತುಕಮ್ ।
ಅದ್ವೈತಃ ಸರ್ವಭಾವಾನಾಮಿತ್ಯಾದ್ಯುಕ್ತಿಂ ಸ್ವರೋಧಿನೀಮ್ ।
ಅರ್ಥಾಂತರೇ ನೇತುಕಾಮಾ ಪುನರಾಹ ಶ್ರುತಿಃ ಕಿಲ ॥ ೩೨ ॥

**ಅರ್ಥ–** ಏವಂ = ಹೀಗೆ, ಸಾ = ಪ್ರಪಂಚೋ ಯದಿ ಮತ್ತು ವಿಕಲ್ಪೋ ಎಂಬ ಶ್ರುತಿಃ= ಶ್ರುತಿಯು, ದ್ವೈತಸತ್ಯತ್ವಂ = ಭೇದಸತ್ಯತ್ವವನ್ನು, ಸಹೇತುಕಂ = ಯುಕ್ತಿಸಹಿತವಾಗಿ, ಸಾಧಯಿತ್ವಾ= ಸಾಧಿಸಿ, ಸರ್ವಭಾವಾನಾಂ = ಎಲ್ಲಾವಸ್ತುಗಳ, ಅದ್ವೈತಃ= ಅದ್ವೈತ ಎಂದು, ಇತ್ಯಾದಿ= ಇದೇ ಮೊದಲಾದ, ಸ್ವವಿರೋಧಿನೀಂ = ತನ್ನ ಅರ್ಥವನ್ನು ತಡೆಯುವ, ಉಕ್ತಿಂ = ನುಡಿಯನ್ನು, ಅರ್ಥಾಂತರೇ = ಬೇರೆ ಅರ್ಥದಲ್ಲಿ, ನೇತುಕಾಮಾ = ಒಯ್ಯಲು ಇಚ್ಛಿಸುವುದಾಗಿ, ಪುನಃ =ಮತ್ತೆ, ಆಹ= ಹೇಳಿತು.

**ಅನುವಾದ-** ಹೀಗೆ ಆ ಶ್ರುತಿಯು ಸಯುಕ್ತಿಕವಾಗಿ ದ್ವೈತ ಸತ್ಯತ್ವವನ್ನು ಸಾಧಿಸಿ, 'ಅದ್ವೈತಃ ಸರ್ವಭಾವಾನಾಂ' ಇವೇ ಮುಂತಾದ ತನಗೆ ವಿರೋಧಿಯಾಗಿ ಕಾಣುವ ವೇದವಾಕ್ಯಗಳಿಗೆ ಅರ್ಥಾಂತರವನ್ನು ಮಾಡಲು ಪುನಃ ಉಪಕ್ರಮಿಸುವುದಷ್ಟೆ.

**ಭಾವವಿಲಾಸಿನೀ–** ''ಅದ್ವೈತಂ ಪರಮಾರ್ಥತ'' ಇತಿ ವಾಕ್ಯಶೇಷಸ್ಯ ಸಂಗತಿಮಾಹ – **ಏವಮಿತಿ** ॥ ೩೨ ॥

**ವಿವರಣೆ –** ಪ್ರಪಂಚೋ ಯದಿ ವಿದ್ಯೇತ ಮತ್ತು ವಿಕಲ್ಪೋ ವಿನಿವರ್ತೇತ ಎಂಬ ಎರಡು ಶ್ರುತಿಗಳು ಭೇದಸತ್ಯತ್ವವನ್ನು, ಯುಕ್ತಿಸಹಿತವಾಗಿ ಸಾಧಿಸಿದವು. ಇದಕ್ಕೆ ಅದ್ವೈತಃ ಸರ್ವಭಾವಾನಾಂ ಇತ್ಯಾದಿ ಶ್ರುತಿಗಳಿಂದಲೇ ವಿರೋಧ ಬಂದಿತು. ಆ ಶ್ರುತಿಗೆ ಬೇರೆ ಅರ್ಥವನ್ನು ಹೇಳಿ ವಿರೋಧವನ್ನು ಪರಿಹರಿಸಲು ಅದ್ವೈತಂ ಪರಮಾರ್ಥತಃ ಎಂಬ ವಾಕ್ಯವು ಹೊರಟಿದೆ.

ಯದದ್ವೈತಂ ತತ್ರ ತತ್ರ ಶ್ರೂಯತೇ ಸ್ಮರ್ಯತೇಽಪಿ ವಾ ।
ಸರ್ವೋತ್ತಮತ್ವಾತ್‌ಪರಮಮರ್ಥಂ ಹರಿಮಪೇಕ್ಷ್ಯತತ್ ॥ ೩೩ ॥

**ಅರ್ಥ–** ತತ್ರ ತತ್ರ = ವೇದದಲ್ಲಿ ಅಲ್ಲಲ್ಲಿ ಯತ್ ಅದ್ವೈತಂ = ಯಾವ ಅದ್ವೈತವು, ಶ್ರೂಯತೇ =ಶ್ರುತಿಗಳಲ್ಲಿ ಉಕ್ತವಾಗಿವೆಯೋ, ಅಪಿ ವಾ = ಅಥವಾ, ಸ್ಮರ್ಯತೇ =

ಸ್ಮೃತಿಗಳಲ್ಲಿ ಉಲ್ಲೇಖಿತವಾಗಿದೆಯೋ, ತತ್ = ಆ ಅದ್ವೈತವು, ಸರ್ವೋತ್ತಮತ್ವಾತ್ = ಸರ್ವೋತ್ತಮನಾದ್ದರಿಂದ, ಪರಮಂ = ಶ್ರೇಷ್ಠವಾದ, ಅರ್ಥಂ = ವಸ್ತುವಾದ, ಹರಿಂ= ಶ್ರೀಹರಿಯನ್ನು, ಅಪೇಕ್ಷ್ಯ= ಉದ್ದೇಶಿಸಿ, ಉಕ್ತಂ= ಹೇಳಲ್ಪಟ್ಟಿದೆ.

**ಅನುವಾದ-** ಶ್ರುತಿಗಳಲ್ಲಿ ಮತ್ತು ಸ್ಮೃತಿಗಳಲ್ಲಿ ಅಲ್ಲಲ್ಲಿ ಯಾವ ಅದ್ವೈತಃ ಎಂಬ ಶಬ್ದವು ಕಂಡುಬರುತ್ತದೆಯೋ ಅದು ಸರ್ವೋತ್ತಮನಾದ್ದರಿಂದ ಪರಮಾರ್ಥನಾದ ಹರಿಯನ್ನು ಅಪೇಕ್ಷಿಸಿ ಹೇಳಿದುದು.

**ಭಾವವಿಲಾಸಿನೀ–** ಸಂಗತಿಮುಕ್ತ್ವಾರ್ಥಮಾಹ – ಯತದ್ವೈತಮಿತಿ ॥ ಅಪೇಕ್ಷ್ಯ ಅಂತರ್ಭಾವ್ಯ । ಏವಂ ಚ ಸ್ವವತ್ಸರ್ವೋತ್ತಮೀಭೂತದ್ವಿತೀಯರಹಿತ ಇತ್ಯರ್ಥಮಪೇಕ್ಷ್ಯ ತದದ್ವೈತಪದಂ ಶ್ರುತೌ ಶ್ರೂಯತ ಇತಿ ಭಾವಃ ॥ ೩೩ ॥

**ವಿವರಣೆ –** ಶ್ರುತಿಸ್ಮೃತಿಗಳಲ್ಲಿ ಅದ್ವೈತ ಶಬ್ದವು ಕಾಣಸಿಗುತ್ತದೆ. ಆ ಅದ್ವೈತ ಎಂಬ ಶಬ್ದಕ್ಕೆ ಅರ್ಥ ಅದ್ವಿತೀಯ ಸರ್ವೋತ್ತಮ ವಸ್ತು ಎರಡನೆಯದ್ದು ಇಲ್ಲದ್ದು ಎಂದು. ಅಂದರೆ ಅವನೇ ಸರ್ವೋತ್ತಮ ಎಂದು ಅರ್ಥ. ಒಟ್ಟಾರೆ ಸಮಾನರಹಿತ ಎಂದರ್ಥ. ಅದ್ವೈತಃ ಸರ್ವಭಾವಾನಾಂ ದೇವಸ್ತುರ್ಯೋ ವಿಭು ಸ್ಮೃತಃ ಎಂಬಲ್ಲಿ ಶ್ರುತಿಯು ಭಗವಂತನು ಸರ್ವೋತ್ತಮ, ದ್ವಿತೀಯ ರಹಿತ ಎಂಬ ಅರ್ಥವನ್ನು ಇಟ್ಟುಕೊಂಡೇ ಅದ್ವೈತ ಶಬ್ದ ಪ್ರಯೋಗ ಮಾಡಿದೆ.

**ಯತೋ ಲ್ಯಬ್‌ಲೋಪತಃ ಪ್ರಾಪ್ತಾ ಪಂಚಮ್ಯಸ್ತಿ ಸ್ಥಲೇ ಸ್ಥಲೇ ।**
**ಅತಃ ಸಾಽರ್ಥಾಂತರಂ ಬ್ರೂಯಾದಿತ್ಯುಕ್ತ್ವಾ ವಿರರಾಮ ಚ ॥ ೩೪ ॥**

**ಅರ್ಥ–** ಯತಃ= ಯಾವ ಕಾರಣದಿಂದ, ಸ್ಥಲೇ ಸ್ಥಲೇ= ಅಲ್ಲಲ್ಲಿ, ಲ್ಯಬ್ಲೋಪತಃ= ಲ್ಯಪ್ ಪ್ರತ್ಯಯಾಂತ ಶಬ್ದಲೋಪವನ್ನು ನಿಮಿತ್ತೀಕರಿಸಿ, ಪ್ರಾಪ್ತಾ= ಪ್ರಾಪ್ತವಾಗಿರುವ, ಪಂಚಮೀ= ಪಂಚಮೀ ವಿಭಕ್ತಿಯು, ಅಸ್ತಿ= ಇದೆಯೋ, ಅತಃ= ಆದ್ದರಿಂದ, ಅದ್ವೈತಂ ಪರಮಾರ್ಥತಃ ಎಂಬ ಶ್ರುತಿಯೂ, ಅರ್ಥಾಂತರಂ= ಉತ್ತಮವಾದ ಇನ್ನೊಂದು ಅರ್ಥವನ್ನು, ಬ್ರೂಯಾತ್= ಹೇಳಿಯೇ ತೀರುತ್ತದೆ. ಇತಿ= ಈ ರೀತಿಯಾಗಿ, ಉಕ್ತ್ವಾ= ಹೇಳಿ, ಸಾ= ಅದ್ವೈತಃ ಸರ್ವಭಾವಾನಾಂ ಎಂಬ ಶ್ರುತಿಯು, ವಿರರಾಮ ಚ= ಸುಮ್ಮನಾಯಿತಷ್ಟೇ.

**ಅನುವಾದ-** ಅಲ್ಲಲ್ಲಿ ಲ್ಯಬ್ಲೋಪ ನಿಮಿತ್ತ ಪಂಚಮಿ ವಿಭಕ್ತಿಯು ಇರುವುದರಿಂದ ಅದ್ವೈತ ಸರ್ವಭಾವಾನಾಂ ಎಂಬ ಶ್ರುತಿಯು ಅರ್ಥಾಂತರವನ್ನು ಹೇಳುತ್ತಿದೆ ಎಂದು ಹೇಳಿ ಈ ಮಂತ್ರವು ವಿರಾಮವನ್ನು ಹೊಂದಿತು.

**ಭಾವವಿಲಾಸಿನೀ**–ಸ್ಥಲೇ ಸ್ಥಲೇ ಪ್ರಾಸಾದಮಾರುಹ್ಯ ಪ್ರೇಕ್ಷತ ಇತ್ಯಾದ್ಯರ್ಥೇ ಪ್ರಯುಕ್ತೇ ಪ್ರಾಸಾದಾತ್ಪ್ರೇಕ್ಷತ ಇತಿ ವಾಕ್ಯೇ ಆರುಹ್ಯೇತಿ ಲ್ಯಪಃ ಲ್ಯಬಂತಪದಸ್ಯ ಲೋಪಂ ನಿಮಿತ್ತೀಕೃತ್ಯ ಪ್ರಾಪ್ತಾ ಪ್ರಾಸಾದಾದಿತ್ಯಾದಿ ಪಂಚಮೀ । ಅರ್ಥಾಂತರವಮ್ ಉತ್ತಮದ್ವಿತೀಯರಹಿತ ಇತ್ಯರ್ಥವಮ್ । ಸಾ ಅದ್ವೈತಃಸರ್ವಭಾವನಾಮಿತಿ ಶ್ರುತಿಃ ॥ ೩೪ ॥

**ವಿವರಣೆ** - ಲೋಕದಲ್ಲಿಯೂ ಅಲ್ಲಲ್ಲಿ ಲ್ಯಬ್ಲೋಪನಿಮಿತ್ತವಾದ ಪಂಚಮೀವಿಭಕ್ತಿಯನ್ನು ಪ್ರಯೋಗಮಾಡುವುದುಂಟು. ಅಂತಹ ಕಡೆಗಳಲ್ಲಿ ಪಂಚಮಿಗೆ ಬೇರೆ ಅರ್ಥವನ್ನು ಹೇಳಬೇಕು. ಉದಾಹರಣೆಗೆ ಪ್ರಾಸಾದಾತ್ ಪ್ರೇಕ್ಷತೇ ಎಂಬಲ್ಲಿ ಇರುವ ಪಂಚಮೀವಿಭಕ್ತಿಯು ಲ್ಯಬ್‌ಲೋಪನಿಮಿತ್ತಕವಾದದ್ದು. ಅಲ್ಲಿ ಪಂಚಮಿಗೆ ಆರುಹ್ಯ ಮಾಳಿಗೆಯ ಮೇಲೇರಿ ಎಂದು ಅರ್ಥಮಾಡುತ್ತೇವೆ. ಅದರಂತೆ ಅದ್ವೈತಂ ಪರಮಾರ್ಥತಃ ಎಂಬಲ್ಲಿ ಸರ್ವೋತ್ತಮನಾದ ಭಗವಂತನನ್ನು ಸೇರಿಸಿಕೊಂಡು ಅವನಂತೆ ಉತ್ತಮನಾದ ಎರಡನೇ ವ್ಯಕ್ತಿಯಿಲ್ಲ ಎಂಬ ಅರ್ಥವೇ ಅದ್ವೈತ ಶಬ್ದಾರ್ಥ ಹೊರತು ಎರಡನೇ ಪದಾರ್ಥ ಯಾವುದೂ ಇಲ್ಲವೆಂದು ಅರ್ಥ ಹೊರಡುವುದಿಲ್ಲ. ಹೀಗಾಗಿ ಭೇದ ಸತ್ಯತ್ವ ನಿತ್ಯತ್ವಕ್ಕೆ ವಿರೋಧ ಬರುವುದಿಲ್ಲ ಎಂದು ಹೇಳಿ ಶ್ರುತಿಯು ಸುಮ್ಮನಾಯಿತು.

ಪುನಃ ಕುವಾದಿನಾಂ ಪ್ರೋಕ್ತಕುತರ್ಕಚ್ಛೇದನಾಯ ಸಾ ।
ತರ್ಕಮುದ್ರಾಮುಪಾಶ್ರಿತ್ಯ ಪ್ರತಿಬ್ರೂತೇ ಪರಾನ್ ಕಿಲ ॥ ೩೫ ॥

**ಅರ್ಥ**– ಪುನಃ = ಮತ್ತೊಂದು ರೀತಿಯಿಂದ, ಕುವಾದಿನಾಂ = ದುರಾಗ್ರಹ ಯುಕ್ತರಾದವಾದಿಗಳ, ಪ್ರೋಕ್ತಕುತರ್ಕಚ್ಛೇದನಾಯ = ಹೇಳಲ್ಪಟ್ಟ ಕೆಟ್ಟ ತರ್ಕವನ್ನು ಖಂಡನೆ ಮಾಡುವುದಕ್ಕಾಗಿ, ಸಾ = ವಿಕಲ್ಪೋ ಎಂಬ ಶ್ರುತಿಯು, ತರ್ಕಮುದ್ರಾಂ = ತರ್ಕದ ಪ್ರಕಾರವನ್ನು, ಆಶ್ರಿತ್ಯ = ಆಶ್ರಯಿಸಿ, ಪರಾನ್ = ಮಾಯಾವಾದಿಗಳನ್ನು ಕುರಿತು, ಪ್ರತಿಬ್ರೂತೇ ಕಿಲ = ಹೇಳುತ್ತಿದೆಯಷ್ಟೇ.

**ಅನುವಾದ**– ಪುನಃ ಕುವಾದಿಗಳು ಹೇಳಿದ ಕುತರ್ಕವನ್ನು ನಿರಸನ ಮಾಡಲು ಶ್ರುತಿಯು ತರ್ಕಶೈಲಿಯನ್ನು ಅವಲಂಬಿಸಿ ಅವರಿಗೆ ಉತ್ತರವನ್ನು ಹೇಳುವುದಷ್ಟೆ?

**ಭಾವವಿಲಾಸಿನೀ**– ದ್ವಿತೀಯಶ್ಲೋಕಸ್ಯ ಸಂಗತಿಮಾಹ – ಪುನರಿತಿ ॥ ಅನಾದಿನಿತ್ಯತ್ವಸ್ಯ ಪ್ರಾಕ್‌ಪ್ರಸ್ತಾವಿತತ್ವೇನ ವಿವೇಕಿನಾಂ ಮತೇ ಪುನರಜ್ಞಾನಕಲ್ಪಿತತ್ವಾದಿಶಂಕಯಾ ಏವಾನುತ್ಥಾನಾತ್ ಕುವಾದಿನಾಂ ಕುತ್ಸಿತಾನಾಂ ದುರಾಗ್ರಹಗೃಹೀತಾನಾಂ ವಾದಿನಾಮಿತ್ಯುಕ್ತಮ್ । ಮಾಯಾಮಾತ್ರಪದಸ್ಯ ಪ್ರಾಗುಕ್ತಯೌಗಿಕಾರ್ಥಮನಂಗೀಕುರ್ವತಾಂ ವಾದಿನಾಂ ಸಂಭವದರ್ಥದ್ವಯ ಪದಸ್ಯಾಪೇಕ್ಷಿತಮರ್ಥಂ ನಾಂಗೀಕರೋಷಿ ಚೇತ್ ಸ್ಪಷ್ಟಮೇವ ವದಾಮಿತಿ ಪ್ರವೃತ್ತೇತಿ ಭಾವಃ ॥ ೩೫ ॥

**ವಿವರಣೆ -** ಭೇದವು ಅನಾದಿನಿತ್ಯವೆಂದು ಹಿಂದೆ ಪ್ರಸ್ತಾಪಮಾಡಿದ್ದರಿಂದ ಜ್ಞಾನಿಗಳ ಮತದಲ್ಲಿ ಭೇದ ಪ್ರಪಂಚವು ಅಜ್ಞಾನಕಲ್ಪಿತ ಎಂಬ ಸಂಶಯವೇ ಹುಟ್ಟುವುದಿಲ್ಲ. ಆದರೂ ಮಾಯಾವಾದಿಗಳು ಶಂಕಿಸುತ್ತಿದ್ದಾರೆ. ಆದ್ದರಿಂದ ಅವರನ್ನು ಕುವಾದಿಗಳೆಂದು ಕರೆದಿದ್ದಾರೆ. ಕುವಾದಿಗಳೆಂದರೆ ದುರಾಗ್ರಹಗೃಹೀತರಾದ ವಾದಿಗಳು ಎಂದು ಅರ್ಥ. ಮಾಯಾ ಮಾತ್ರ ಶಬ್ದಕ್ಕೆ ಮಾಯಾಕಲ್ಪಿತ ಎಂದು ಒಂದೇ ಅರ್ಥವಲ್ಲ. ಮಾಯೆಯಿಂದ ಅಕಲ್ಪಿತ' ಎಂದೂ ಅರ್ಥ ಸಂಭವವಿದೆ. ಈ ಎರಡು ಅರ್ಥಗಳಲ್ಲಿ ನನಗೆ ಅಪೇಕ್ಷಿತವಾದ ಎರಡನೇ ಅರ್ಥವನ್ನು ನೀನು ಅಂಗೀಕರಿಸದಿದ್ದಲ್ಲಿ ನಾನೇ ಅದನ್ನು ಸ್ಪಷ್ಟವಾಗಿ ಹೇಳುತ್ತೇನೆ ಎನ್ನುತ್ತ ಶ್ರುತಿಯು 'ವಿಕಲ್ಪೋ ವಿನಿವರ್ತೇತ' ಎಂದು ಹೇಳಲು ಹೊರಟಿದೆ. ಇದು ಎರಡನೇ ಶ್ರುತಿಗೆ ಸಂಗತಿ.

ವಿಕಲ್ಪನಾಮಾ ಭೇದೋಽಯಂ ವಸ್ತುವೈಚಿತ್ರ್ಯಕಲ್ಪನಾತ್ ।
ಸಂವೃತ್ಯಾ ಮಾಯಯಾ ವಾಽಜ್ಞಾನೇನ ವಾ ಯೇನ ಕೇನಚಿತ್ ॥ ೩೬ ॥

ಯದಿ ಕಲ್ಪಿತ ಏವ ಸ್ಯಾದ್‌ಬಾಧಾಖ್ಯವಿನಿವೃತ್ತಿಮಾನ್ ।
ತದಾ ಸ್ಯಾದುಪಸರ್ಗೋಽಸೌ ಯತೋ ಬಾಧಮಸಾಧಯತ್ ॥ ೩೭ ॥

**ಅರ್ಥ–** ವಸ್ತುವೈಚಿತ್ರ್ಯಕಲ್ಪನಾತ್= ವಸ್ತುಗಳಲ್ಲಿ ವೈಚಿತ್ರ್ಯ ಕಲ್ಪಿಸಿದ್ದರಿಂದ, ಅಯಂ= ಈ, ಭೇದಃ= ಭೇದವು, ವಿಕಲ್ಪನಾಮಾ= ವಿಕಲ್ಪ ಎಂಬ ಹೆಸರುಳ್ಳದ್ದು ಸಂವೃತ್ಯಾ = ಬೌದ್ಧರಿಂದ ಅಂಗೀಕೃತವಾದ ಸಂವೃತಿಯಿಂದಾಗಲೀ, ವಾ = ಅಥವಾ, ಮಾಯಯಾ = ಅದ್ವೈತಿಗಳಿಂದ ಅಂಗೀಕೃತವಾದ ಮಾಯೆಯಿಂದಾಗಲೀ, ಅಜ್ಞಾನೇನ ವಾ= ಅಜ್ಞಾನದಿಂದಾಗಲಿ ಯೇನ ಕೇನಚಿತ್ = ಬೇರೆ ಕಾರಣದಿಂದ ಆಗಲಿ, ಯದಿ ಕಲ್ಪಿತ ಏವ = ಒಂದು ವೇಳೆ ಕಲ್ಪಿತವೆಂದಾದ ಪಕ್ಷದಲ್ಲಿ, ತದಾ= ಆಗ, ಅಸೌ= ಭೇದವು, ಬಾಧಾಖ್ಯ = ಬಾಧವೆಂಬ, ವಿನಿವೃತ್ತಿಮಾನ್= ವಿನಿವೃತ್ತಿಯುಳ್ಳದ್ದು ಸ್ಯಾತ್ = ಆದೀತು ಯತಃ= ಏಕೆಂದರೆ, ಅಸೌ= ಈ, ಉಪಸರ್ಗಃ= ವಿ ಎಂಬ ಉಪಸರ್ಗವು, ಬಾಧಂ = ಬಾಧವನ್ನು ಅಸಾಧಯತ್ = ಸಾಧಿಸಿತು.

**ಅನುವಾದ-** ವಸ್ತುಗಳ ವೈಚಿತ್ರ್ಯಕ್ಕೆ ಕಾರಣವಾದ ವಿಕಲ್ಪ ಎಂದು ಕರೆಯಲ್ಪಡುವ ಈ ಭೇದವು ಸಂವೃತಿಯಿಂದಲಾಗಲೀ, ಮಾಯೆಯಿಂದಲಾಗಲೀ ಅಥವಾ ಅಜ್ಞಾನದಿಂದಲಾಗಲೀ ಯಾರಿಂದಲಾದರೂ ಕಲ್ಪಿಸಲ್ಪಟ್ಟಿದ್ದರೆ ಆಗ ಅದಕ್ಕೆ ಬಾಧರೂಪವಾದ ವಿಶೇಷವಾದ ನಿವೃತ್ತಿಯು ಇರಬೇಕಾದಿದ್ದಿತು (ಎಂದು ಶ್ರುತಿಯು ಹೇಳುತ್ತದೆ). ವಿನವರ್ತೇತ ಎಂಬಲ್ಲಿರುವ ವಿ ಎಂಬ ಉಪಸರ್ಗವು ಈ ನಿವೃತ್ತಿಯು ಬಾಧರೂಪವಾದುದೇ ಎಂದು ಸಾಧಿಸುತ್ತದೆ.

**ಭಾವವಿಲಾಸಿನೀ–** ಅಸಾವುಪಸರ್ಗಃ ವೀತ್ಯುಪಸರ್ಗಃ ॥ ೩೬,–೩೭ ॥

**ಯತ್ಪ್ರಾಚೀನೋಪಸರ್ಗೋಽತ್ರ ನಞರ್ಥೋಽಭಾವವಾಕ್ ತತಃ ।**
**ವಿಶೇಷೇಣ ನಿವೃತ್ತಿರ್ಯಾ ಸೋಽತ್ಯಂತಾಭಾವ ಏವ ಹಿ ॥ ೩೮ ॥**

**ಅರ್ಥ–** ಯತ್ = ಯಾವ ಕಾರಣದಿಂದ, ಅತಃ= ಪ್ರಪಂಚೋ ಯದಿ ಎಂಬ ಶ್ರುತಿಯಲ್ಲಿ, ಪ್ರಾಚೀನೋಪಸರ್ಗಃ = ಮೊದಲಿರುವ ನಿ ಎಂಬ ಉಪಸರ್ಗವು, ನಞರ್ಥಃ = ನಕಾರಾರ್ಥಕವೋ ಆ ಕಾರಣದಿಂದ ನಿವೃತ್ತಿ ಶಬ್ದವು, ಅಭಾವವಾಕ್ = ಅಭಾವವನ್ನು ಹೇಳವುದು ಆಗಿದೆ, ಯಾ = ಯಾವ, ವಿಶೇಷೇಣ = ಕಾಲತ್ರಯಾವೃತ್ತಿತ್ವ ರೂಪವಾದ ಅತಿಶಯದಿಂದ ಕೂಡಿದ, ನಿವೃತ್ತಿಃ = ನಿವೃತ್ತಿಯೋ, ಸಃ = ಅದು, ಅತ್ಯಂತಾಭಾವ ಏವ ಹಿ= ಅತ್ಯಂತಾಭಾವವೇ= ಆಗಿದೆ.

**ಅನುವಾದ–** ನಿವೃತ್ತಿಯಲ್ಲಿರುವ 'ನಿ' ಎಂಬ ಉಪಸರ್ಗವು ನಿಷೇಧಾರ್ಥಕವಾಗಿ ಅಭಾವವನ್ನು ಹೇಳುತ್ತದೆ. ನಿವೃತ್ತಿ ಎಂದರೆ ಅಭಾವ ಎಂದು ಅರ್ಥ. 'ವಿ' ಎಂಬ ಉಪಸರ್ಗವು ವಿಶೇಷೇಣ ನಿವೃತ್ತಿಯನ್ನು ಹೇಳುವುದರಿಂದ ವಿನವೃತ್ತಿ ಎಂದರೆ ಅತ್ಯಂತಾಭಾವವೆಂದೇ ಅರ್ಥವಾಗುತ್ತದೆ.

**ಭಾವವಿಲಾಸಿನೀ–** ಕಥಮಿತ್ಯತ ಆಹ – **ಯದಿತಿ** ॥ ಯತ್ ಯಸ್ಮಾತ್ । ಪ್ರಾಚೀನೋಪಸರ್ಗಃ ನೀತ್ಯುಪಸರ್ಗಃ । ನಿವೃತ್ತಿರಭಾವಃ । ಸಃ ವಿಶೇಷೇಣಾಭಾವಃ । ಅತ ಏವ ಉತ್ತರಭಾವ ರೂಪವಿನಾಶವಾಚಕನಿವೃತ್ತಿಪದೇ ಪೂರ್ವಶ್ರುತೌ ಅಸ್ಯೋಪಸರ್ಗಸ್ಯಾಭಾವಃ ॥ ೩೮ ॥

**ವಿವರಣೆ –** ಪ್ರಪಂಚೋ ಯದಿ ಎಂಬ ಪೂರ್ವಶ್ರುತಿಯಲ್ಲಿ ನಿವರ್ತೇತ ಎಂಬ ಶಬ್ದವಿದೆ. ಅಲ್ಲಿ ನಿ ಎಂಬ ಉಪಸರ್ಗವಿದೆ. ಆ ನಿ ಎಂಬುದು ಪ್ರಾಚೀನೋಪಸರ್ಗ. ಅಂದರೆ ಪೂರ್ವಪ್ರಸಕ್ತವಾದ ಉಪಸರ್ಗ. ಆ ನಿ ಎಂಬ ಉಪಸರ್ಗವು ನಕಾರಾರ್ಥಕವಾದದ್ದು. ನಿಷೇಧಾರ್ಥವಾದದ್ದು. ಅಂದರೆ ಅಭಾವವನ್ನು ಹೇಳುತ್ತದೆ. ನಿವೃತ್ತಿ ಎಂದರೆ ವಿನಾಶವೆಂಬ ಅಭಾವ ಎಂದು ಅರ್ಥ. ವಿಕಲ್ಪೋ ಯದಿ ಎಂಬ ಎರಡನೆಯ ಶ್ರುತಿಯಲ್ಲಿ ವಿನಿವರ್ತೇತ ಎಂಬ ಶಬ್ದವಿದೆ. ಅಲ್ಲಿ ನಿ ಎಂಬ ಉಪಸರ್ಗದ ಜೊತೆಗೆ ವಿ ಎಂಬ ಉಪಸರ್ಗವೂ ಸೇರಿದೆ. ಅದು ವಿಶೇಷವಾದ ನಿವೃತ್ತಿಯನ್ನು ಹೇಳುತ್ತದೆ. ವಿಶೇಷ ನಿವೃತ್ತಿ ಎಂದರೆ ಅತ್ಯಂತಾಭಾವ ಎಂಬ ಅರ್ಥವು ಲಬ್ಧವಾಯಿತು.

ಕಾರಣಸಹಿತವಾಗಿ ವಿಪರ್ಯಯಪರ್ಯವಸಾನ ಮಾಡುತ್ತಿದ್ದಾರೆ–

**ನ ಚ ಬಾಧೋಽಸ್ಯ ನಿತ್ಯಸ್ಯ ತೇನಾಸೌ ಕಲ್ಪಿತೋಽಪಿ ನ ।**
**ಇತಿ ಸಾ ಭೇದಸತ್ಯತ್ವದ್ರೋಹಿಣಾಂ ಪ್ರಾಹಿಣೋದ್ಭಯಮ್ ॥ ೩೯ ॥**

**ಅರ್ಥ–** ನಿತ್ಯಸ್ಯ = ಕಾಲತ್ರಯದಲ್ಲೂ ಇರುವ, ಅಸ್ಯ = ಈ ಪ್ರಪಂಚಕ್ಕೆ, ಬಾಧಃ = ಮೂರು ಕಾಲದಲ್ಲಿರುವ ಅಭಾವವು, ನ ಚ = ಇಲ್ಲವೇ ಇಲ್ಲ, ತೇನ = ಅದರಿಂದ, ಅಸೌ = ಈ

ಭೇದವು, ಕಲ್ಪಿತಃ ಅಪಿ ನ = ಕಲ್ಪಿತವೂ ಅಲ್ಲ, ಇತಿ = ಹೀಗೆ, ಸಾ = ಆ ಶ್ರುತಿಯು, ಭೇದಸತ್ಯತ್ವ ದ್ರೋಹಿಣಾಂ = ಭೇದಸತ್ಯತ್ವವನ್ನು ದ್ವೇಷಮಾಡುವವರಿಗೆ, ಭಯಂ = ಭಯವನ್ನು, ಪ್ರಾಹಿಣೋತ್ = ತಂದುಕೊಟ್ಟಿತು.

**ಅನುವಾದ-** ಆದರೆ ನಿತ್ಯವಾದ ಈ ಪಂಚಕಕ್ಕೆ ಬಾಧವಿಲ್ಲ. ಆದ್ದರಿಂದ ಅದು ಕಲ್ಪಿತವೂ ಅಲ್ಲ ಎಂದು ಈ ವಾಕ್ಯವು ಭೇದ ಸತ್ಯತ್ವಕ್ಕೆ ದ್ರೋಹವನ್ನು ಬಗೆಯುವರ ಮನಸ್ಸಿನಲ್ಲಿ ಭಯವನ್ನು ಉಂಟು ಮಾಡುತ್ತದೆ.

**ಭಾವವಿಲಾಸಿನೀ–** ಸಹೇತುಕಂ ವಿಪರ್ಯಯೇ ಪರ್ಯವಸಾನಮಾಹ – **ನ ಚೇತಿ** ॥ ನಿತ್ಯಸ್ಯ ಕಾಲತ್ರಯೇಽಪಿ ವಿದ್ಯಮಾನಸ್ಯ । ಬಾಧಃ ಕಾಲತ್ರಯೇಽಭಾವಃ ॥ ೩೯ ॥

**ವಿವರಣೆ** - ಬಾಧ ಎಂದರೆ ಕಾಲತ್ರಯದಲ್ಲಿ ಇರುವ ಅಭಾವ ಎಂದರ್ಥ. ಯಾವುದು ಮೂರು ಕಾಲದಲ್ಲಿ ಇಲ್ಲವೋ ಅದನ್ನು ಬಾಧ್ಯ ಎಂದು ಹೇಳುತ್ತಾರೆ. ಉದಾಹರಣೆಗೆ ಶುಕ್ತಿಯಲ್ಲಿ ತೋರುವ ರಜತ, ಹಗ್ಗದಲ್ಲಿ ಆರೋಪಿತವಾದ ಹಾವು ಇತ್ಯಾದಿಗಳು ಮೂರು ಕಾಲದಲ್ಲೂ ಇಲ್ಲ. ಆದ್ದರಿಂದ ಸಮೀಚೀನಜ್ಞಾನವು ಬಂದಾಗ ರಜತ, ಹಾವು ಬಾಧಿತವಾಗುತ್ತವೆ. ಅಂದರೆ ಕಾಲತ್ರಯದಲ್ಲಿ ಇಲ್ಲ ಎಂದಾಗುತ್ತವೆ.

**ಭೇದವಿಷಯದಲ್ಲಿ ಖಂಡನಕಾರನಿಂದ ಹೇಳಲ್ಪಟ್ಟ ಭಿನ್ನಾಭಿನ್ನಾದಿವಿಕಲ್ಪಗಳನ್ನು ಪ್ರಾಚೀನರು ಅದ್ವೈತದ ವಿಷಯದಲ್ಲಿಯೂ ಇವೆ ಎಂದು ಹೇಳಿದ್ದಾರೆ. ಅದನ್ನು ಶ್ರುತಿ ಸಮ್ಮತವೆಂದು ತೋರಿಸಲು ಶ್ರುತಿಗೆ ಇನ್ನೊಂದು ಅರ್ಥವನ್ನು ಹೇಳುತ್ತಿದ್ದಾರೆ-**

**ಅಥವಾ ಭೇದತತ್ವೇಽಸ್ಮಿನ್ ಭಿನ್ನಾಭಿನ್ನಾದಿರೂಪಕಃ ।**
**ವಿಕಲ್ಪೋ ಯದಿ ಕೇನಾಪಿ ಕಲ್ಪಿತಃ ಸ್ಯಾತ್ಕುಬುದ್ಧಿನಾ ॥ ೪೦ ॥**

**ಅದ್ವೈತೇ ತಸ್ಯ ದುಸ್ತತ್ವೇ ವಿನಿವರ್ತೇತ ತರ್ಹಿ ಸಃ ।**
**ವಿನಿವೃತ್ತಿಂ ಯತಃ ಪ್ರಾಹುಃ ಪರಾವೃತ್ಯಾಗತಿಂ ಬುಧಾಃ ॥ ೪೧ ॥**

**ಇತಿ ವಾಽರ್ಥಮಭಿಪ್ರೇತ್ಯ ದುಸ್ತರ್ಕಂ ಧಿಕ್ಚಕಾರ ಸಾ ।**
**ಅತಃ ಖಂಡನಕಾರಸ್ಯ ಖಂಡಯಾಮಾಸ ಖಂಡನಮ್ ॥ ೪೨ ॥**

**ಅರ್ಥ–** ಅಥವಾ = ಬೇರೆ ಪ್ರಕಾರದಿಂದ ಶ್ರುತಿಯ ಅರ್ಥ ಹೀಗಿದೆ, ಭಿನ್ನಾಭಿನ್ನಾದಿರೂಪಕಃ = ಭಿನ್ನ ಅಭಿನ್ನ ಮೊದಲಾದ, ವಿಕಲ್ಪಃ = ವಿಕಲ್ಪವು, ಅಸ್ಮಿನ್ = ಈ, ಭೇದತತ್ವೇ = ಭೇದ ಪ್ರಮೇಯದಲ್ಲಿ, ಕೇನಾಪಿ = ದುರ್ಬುದ್ಧಿಯಿಂದ ಯಾರಿಂದಾದರೂ, ಯದಿ ಕಲ್ಪಿತಃ ಸ್ಯಾತ್= ಒಂದು ವೇಳೆ ಕಲ್ಪಿತವಾದರೆ. ತರ್ಹಿ= ಆ ಪಕ್ಷದಲ್ಲಿ, ಸಃ ವಿಕಲ್ಪಃ = ಆ ವಿಕಲ್ಪವು, ತಸ್ಯ = ಅದ್ವೈತಿಯ, ಅದ್ವೈತೇ = ಅದ್ವೈತವೆಂಬ, ದುಸ್ತತ್ವೇ = ದುಷ್ಟಸಿದ್ಧಾಂತದಲ್ಲಿ, ತರ್ಹಿ = ಆಗ, ವಿ

ನಿವರ್ತೇತ = ಹಿಂತಿರುಗುತ್ತದೆ ಎಂದು ಶ್ರುತಿಯು ಹೇಳುತ್ತಿದೆ, ಯತಃ = ಏಕೆಂದರೆ, ಬುಧಾಃ = ಜ್ಞಾನಿಗಳು, ವಿನಿವೃತ್ತಿಂ= ವಿನಿವೃತ್ತಿ ಎಂದರೆ, ಪರಾವೃತ್ಯಾಗತಿಂ = ಹಿಂತಿರುಗಿ ಬಂದು ಸ್ವಪಕ್ಷದಲ್ಲಿ ಸೇರಿಕೊಳ್ಳುವುದೆಂದು, ಪ್ರಾಹುಃ = ಹೇಳುತ್ತಾರೆ. ಇತಿ ವಾ = ಹೀಗೆನ್ನುವ ಅರ್ಥವನ್ನಾಗಲೀ, ಅಭಿಪ್ರೇತ್ಯ= ನಿರೂಪಣೆಮಾಡಲು ಅಪೇಕ್ಷಿಸಿದ್ದಾಗಿ, ಸಾ = ಆ ಶ್ರುತಿಯು, ದುಸ್ತರ್ಕಂ = ದುಷ್ಟತರ್ಕವನ್ನು, ಧಿಕ್ಚಕಾರ = ಧಿಕ್ಕರಿಸಿತು. ಅತಃ = ಆದ್ದರಿಂದ, ಖಂಡನಕಾರಸ್ಯ = ಖಂಡನಕಾರನ, ಖಂಡನಂ = ಖಂಡನೆಯನ್ನು, ಖಂಡಯಾಮಾಸ = ಖಂಡಿಸಿತು.

**ಅನುವಾದ** - ಅಥವಾ ಈ ಭೇದತತ್ತ್ವದಲ್ಲಿ ಯಾವನಾದರು ಕುಬುದ್ಧಿಯು ಅದು ಧರ್ಮಿಗಿಂತ ಭಿನ್ನವೋ ಅಥವಾ ಅಭಿನ್ನವೋ ಎಂದು ವಿಕಲ್ಪವನ್ನು ಮಾಡಿದರೆ ಈ ವಿಕಲ್ಪವು ಅವನು ಅಂಗೀಕರಿಸಿದ ದುಷ್ಟತತ್ತ್ವವಾದ ಅದ್ವೈತದಲ್ಲಿಯೇ ಹಿಂದಿರುಗಿ ಬರುತ್ತದೆ. ಏಕೆಂದರೆ ವಿವೇಕಿಗಳಾದವರು ಅಥವಾ ಜ್ಞಾನಿಗಳಾದವರು ವಿನಿವೃತ್ತಿ ಎಂದರೆ ಹಿಂದಿರುಗಿ ಬರುವಿಕೆ ಎಂದೇ ಹೇಳುತ್ತಾರೆ. ಶ್ರುತಿಯು ಈ ಅರ್ಥವನ್ನಾದರೂ ಮನಸ್ಸಿನಲ್ಲಿಟ್ಟುಕೊಂಡು ದುಸ್ತರ್ಕವನ್ನು ಧಿಕ್ಕರಿಸಿದೆ. ಆದ್ದರಿಂದ ಖಂಡನಕಾರನ ಖಂಡನೆಯನ್ನು ಅದು ಖಂಡಿಸಿದೆ.

**ಭಾವವಿಲಾಸಿನೀ**– ಭೇದೇ ಖಂಡನಕೃತೋಕ್ತಭಿನ್ನಾಭಿನ್ನಾದಿವಿಕಲ್ಪದೂಷಣಮೈಕ್ಯೇऽಪಿ ಪ್ರಾಂಚಃ ಪ್ರಾಸಂಜಯನ್ । ತಂ ಚ ಶ್ರೌತಂ ಕರ್ತುಂ ಶ್ರುತೇರರ್ಥಾಂತರಮಾಹ – **ಅಥವೇತಿ** ।। ೪೦ ।।

ತಸ್ಯ ಮಾಯಿನಃ । ಸಃ ವಿಕಲ್ಪಃ । ವಿನಿವರ್ತೇತ ಪರಾವೃತ್ಯ ಗಚ್ಛೇತ್ । ಪರಸ್ಯಾಪಾದಿತೋ ವಿಕಲ್ಪಃಸ್ವಪಕ್ಷೇऽಪ್ಯಾಪತೇದಿತಿ ಯಾವತ್ । ವೃತ್ತಿರ್ವರ್ತನಜೀವನ ಇತ್ಯನುಶಾಸನಾಜ್ಜೀವನಸ್ಯ ವೃತ್ತಿತ್ವೇ ನಿವೃತ್ತಿರಭಾವಃ । ವರ್ತನಸ್ಯ ವೃತ್ತಿತ್ವೇ ನಿವೃತ್ತಿಃ ಪರಾವೃತ್ತಿರಿತ್ಯಾಹ – **ವಿನಿವೃತ್ತಿಮಿತಿ** ।। ನಿರ್ವಿಶೇಷಬ್ರಹ್ಮವಾದಿನಾ ಪರೇಣಾಸ್ಮದ್ವತ್ಪರಿಹರ್ತುಮಶಕ್ಯತ್ವೇನಾಪರಿಹಾರ್ಯೈವೇಯಂ ನಿವೃತ್ತಿಃ ಪರಸ್ಯೇತಿ ಸೂಚಯಿತುಂ ಶ್ರುತಿರುಪಸರ್ಗೇಣ ತಾಂ ವಿಶಿನಷ್ಟಿ । ತೇನ ನೇದಂ ಪ್ರತಿಬಂದೀಮಾತ್ರಗ್ರಹಣಮ್ । ಕಿಂತು ಪರಸ್ಯ ಗಲಗ್ರಹಣಮೇವೇತಿ ಶ್ರುತಿರೇವ ವಿಸ್ಮರಣಶೀಲಾ ನಾಸ್ಮಾನಪಿ ಬೋಧಯತೀತಿ ಭಾವಃ ।। ೪೧–೪೨।।

**ವಿವರಣೆ** - ಭೇದವು ಭೇದಿಗಿಂತ ಭಿನ್ನವೋ ಅಭಿನ್ನವೋ ಭಿನ್ನಾಭಿನ್ನವೋ? ಭಿನ್ನವೆಂದರೆ ಆ ಭೇದವೂ ಭಿನ್ನ ಎಂದು ಮುಂತಾಗಿ ಅನವಸ್ಥಾದೋಷ ಬರುತ್ತದೆ. ಭೇದಿಗೆ ಅಭಿನ್ನವಾದರೆ ಭೇದಭೇದಿಗಳಲ್ಲಿ ಯಾವುದರೊಂದು ಇದೆ, ಎರಡಿಲ್ಲ ಎಂಬ ದೋಷ. ಭಿನ್ನಾಭಿನ್ನವೆಂದರೆ ಎರಡೂ ದೋಷ ಎಂದು ಭೇದದ ವಿಷಯದಲ್ಲಿ ವಿಕಲ್ಪ ಮಾಡಿದರೆ ಅದು ಅಭೇದ ವಿಷಯದಲ್ಲಿ ಹಿಂತಿರುಗಿ ಬರುತ್ತದೆ. ಬ್ರಹ್ಮನಿಗಿಂತ ಅಭೇದ ಭಿನ್ನವಾದರೆ ಮಿಥ್ಯೆಯಾಗುವುದು. ಅಭೇದ ಬ್ರಹ್ಮಾಭಿನ್ನವಾದರೆ ಅವುಗಳಲ್ಲಿ ಯಾವುದಾದರೊಂದೇ ಇದೆ. ಎರಡೂ ಇರಲಾರದೆಂಬ ದೋಷ. ಭಿನ್ನಾಭಿನ್ನವೆಂದರೆ ಎರಡೂ ದೋಷಗಳು ಬರುತ್ತವೆ. ಹೀಗೆ ಭೇದದ ಮೇಲೆ ವಿಕಲ್ಪ ದೋಷವನ್ನು

ಹೇಳಿದರೆ ಅದು ಅಭೇದಕ್ಕೇ ಹಿಂತಿರುಗಿ ಬರುತ್ತದೆ ಎಂದು ಶ್ರುತಿಯೇ ಹೇಳುತ್ತಿದೆ. ಮತ್ತು ನಾವು ಭೇದವು ಭೇದಿ ಸ್ವರೂಪವೆಂದರೂ ವಿಶೇಷ ಬಲದಿಂದ ಭೇದಿಯಲ್ಲಿ ಭೇದವನ್ನು ಹೇಳಿ ದೋಷ ಪರಿಹಾರ ಮಾಡಿಕೊಳ್ಳುವೆವು. ಅದ್ವೈತಿ ನಿರ್ವಿಶೇಷ ಬ್ರಹ್ಮನಲ್ಲಿ ಅಭೇದವಿದೆ ಎಂದು ಹೇಳಲು ಅವಕಾಶವಿಲ್ಲ. ಹೀಗಾಗಿ ನಾವು ಕೇವಲ ಪ್ರತಿಬಂದಿಯನ್ನು ಕೊಟ್ಟಿಲ್ಲ. ಅವನು ಹೇಳಿದ ತರ್ಕವನ್ನು ಅವನ ಮೇಲೆಯೇ ಪ್ರಯೋಗಿಸಿ ಏನೂ ಪರಿಹಾರವಿಲ್ಲದೆ ಮೂಕನಾಗುವಂತೆ ಮಾಡಿದ್ದೇನೆ ಎಂದು ಶ್ರುತಿ ನಮಗೆ ಹೇಳುತ್ತಿದೆ. ಇದನ್ನು ಮರೆಯಬೇಡಿ ಎಂದು 'ಉಪದೇಶಾದಯಂ ವಾದೋ' ಎಂಬ ಶ್ರುತಿಯ ಉತ್ತರಾರ್ಧಕ್ಕೆ ಸಂಗತಿಯನ್ನು ಹೇಳುತ್ತಿದ್ದಾರೆ ಎಂದು ಅಭಿಪ್ರಾಯ.

ಬೋಧೋಽಯಂ ತರ್ಹಿ ಸರ್ವಸ್ಯ ಕುತೋ ನಾಸೀದಿತೀರಿತೇ ।
ತತ್ರ ಹೇತುಮುಪಾದಾತುಂ ಪುನಃ ಪ್ರಾವರ್ತತ ಶ್ರುತಿಃ ॥ ೪೩ ॥

**ಅರ್ಥ–** ತರ್ಹಿ = ಹಾಗಾದರೆ, ಅಯಂ = ಈ ಭೇದನಿತ್ಯತ್ವ ಮತ್ತು ಸತ್ಯತ್ವವಿಷಯಕವಾದ, ಬೋಧಃ= ಜ್ಞಾನವು, ಸರ್ವಸ್ಯ = ಎಲ್ಲರಿಗೆ, ಕುತಃ = ಯಾವ ಕಾರಣದಿಂದ, ನ ಆಸೀತ್ = ಬರಲಿಲ್ಲ, ಇತಿ ಈರಿತೇ = ಹೀಗೆ ಪ್ರಶ್ನೆ ಮಾಡಿದರೆ, ತತ್ರ = ಆ ವಿಷಯದಲ್ಲಿ ಹೇತುಂ = ಕಾರಣವನ್ನು, ಉಪಾದಾತುಂ = ಹೇಳಲು, ಶ್ರುತಿಃ = ಶ್ರುತಿಯು, ಪುನಃ = ಮತ್ತೆ, ಪ್ರಾವರ್ತತ = ಪ್ರವೃತ್ತವಾಯಿತು.

**ಅನುವಾದ -** ಹಾಗಾದರೆ ಇಂತಹ ಜ್ಞಾನವು ಎಲ್ಲರಿಗೂ ಏಕೆ ಉಂಟಾಗಲಿಲ್ಲ ಎಂಬ ಶಂಕೆ ಉಂಟಾದರೆ ಅದಕ್ಕೆ ಕಾರಣವನ್ನು ಹೇಳಲು ಶ್ರುತಿಯು ಪುನಃ ಪ್ರವರ್ತಿಸುತ್ತದೆ.

**ಭಾವವಿಲಾಸಿನೀ–** 'ಉಪದೇಶಾದಯಂ ವಾದ' ಇತ್ಯುತ್ತರಾರ್ಧ ಸಂಗತಿಮಾಹ - **ಬೋಧೋಽಯಮಿತಿ** ॥ ಅಯಂ ಭೇದನಿತ್ಯತ್ವ ಸತ್ಯತ್ವ ವಿಷಯಃ ॥ ೪೩ ॥

ಶ್ರುತಿಗಳಲ್ಲಿರುವ ಪದಗಳ ಯೋಜನೆಯನ್ನು ಮಾಡುತ್ತಿದ್ದಾರೆ-

ಗುರೂಪದೇಶಾದ್ ಜ್ಞಾತೇಽರ್ಥೇ ಸೋಽಯಂ ವಾದಃ ಸತಾಂ ಹೃದಿ ।
ಸ್ಥಿರೀಭವತಿ ತಚ್ಚಿತ್ತೇ ನಾದ್ವೈತಂ ವಿದ್ಯತೇ ಕಿಲ ॥ ೪೪ ॥

**ಅರ್ಥ–** ಗುರೂಪದೇಶಾತ್ = ಗುರೂಪದೇಶದಿಂದ, ಜ್ಞಾತೇ ಅರ್ಥೇ = ಅರ್ಥವು ತಿಳಿಯಲ್ಪಟ್ಟಾಗ, ಸಃ = ಪ್ರಸಿದ್ಧವಾದ, ಅಯಂ = ಈ ಭೇದವು ನಿತ್ಯ ಮತ್ತು ಸತ್ಯ ಎಂಬ, ವಾದಃ= ವಾದವು, ಸತಾಂ =ಸಜ್ಜನರ, ಹೃದಿ= ಮನಸ್ಸಿನಲ್ಲಿ, ಸ್ಥಿರೀಭವತಿ = ದೃಢವಾಗಿ ನಿಲ್ಲುತ್ತದೆ. ತಚ್ಚಿತ್ತೇ = ಸಜ್ಜನರ ಮನಸ್ಸಿನಲ್ಲಿ, ಅದ್ವೈತಂ = ಅದ್ವೈತವು, ನ ವಿದ್ಯತೇ ಕಿಲ =

ಇರುವುದಿಲ್ಲವಷ್ಟೇ.

**ಅನುವಾದ** - ಗುರೂಪದೇಶದಿಂದ ಶ್ರುತ್ಯರ್ಥವನ್ನು ತಿಳಿಯುವವರ ಮನಸ್ಸಿನಲ್ಲಿ ಈ ವಾದವು ಸ್ಥಿರವಾಗಿ ನಿಲ್ಲುತ್ತದೆ. ಅವರ ಮನಸ್ಸಿನಲ್ಲಿ ಅದ್ವೈತವು ಇಲ್ಲವಷ್ಟೆ?

**ಭಾವವಿಲಾಸಿನೀ**– ಶ್ರೌತಪದಾನಿ ಯೋಜಯತಿ । **ಗುರ್ವಿತಿ** ॥ ಸತಾಂ ಹೃದಿ ಸ್ಥಿರೀಭವತೀತ್ಯೇತದಂತೇನ ''ಉಪದೇಶಾದಯಂ ವಾದೋ ಜ್ಞಾತ'' ಇತಿ ವಾಕ್ಯಯೋಜನಾ ಕೃತೇತಿ ಜ್ಞಾತವ್ಯಮ್ । ಗುರೋರಿತಿ ಅರ್ಥ ಇತಿ ಚೋಪದೇಶಜ್ಞಾತಪದಯೋರಪೇಕ್ಷಿತಶೇಷ-ಪೂರಣಮ್ । ತಚ್ಚಿತ್ತೇ ಗುರೂಪದಿಷ್ಟಜ್ಞಾನೇನ ದೃಢಭೇದಜ್ಞಾನವತಸ್ತಸ್ಯ ವಿದುಷಶ್ಚಿತ್ತೇ । ನಾದ್ವೈತಂ ವಿದ್ಯತ ಇತಿ ಅದ್ವೈತಂ ನ ವಿದ್ಯತ ಇತ್ಯಸ್ಯಾಪೇಕ್ಷಿತಶೇಷಪೂರಣಪೂರ್ವಕ-ಮರ್ಥಕಥನಮ್ ॥ ೪೪ ॥

ವಾದೋಽಜ್ಞಾತೇ ದ್ವೈತಂ ನ ವಿದ್ಯತೇ ಎಂಬಲ್ಲಿ ಅಜ್ಞಾತೇ ದ್ವೈತಂ ಎಂಬ ಪದವಿಭಾಗ ಮಾಡಿ ಅರ್ಥವನ್ನು ಹೇಳುತ್ತಿದ್ದಾರೆ-

**ಗುರೂಪದೇಶಾತ್ತತ್ತ್ವಾರ್ಥೇ ತ್ವಜ್ಞಾತೇ ಸ್ವಸ್ವಬುದ್ಧಿಭಿಃ ।**
**ಯಸ್ಮಿನ್ಕಸ್ಮಿಂಶ್ಚಿದರ್ಥೇ ಚ ಜ್ಞಾತೇ ಸತಿ ದುರಾತ್ಮನಾಮ್ ॥ ೪೫ ॥**

**ತೇಷಾಂ ಹೃದಿ ತಮೋ ದಾತುಂ ಸೋಽಯಂ ವಾದಸ್ತು ತಿಷ್ಠತಿ ।**
**ಯಃ ಪೂರ್ವಂ ಖಂಡನೇ ಪ್ರೋಕ್ತೋ ನ ದ್ವೈತಂ ವಿದ್ಯತೇ ಕಿಲ ॥ ೪೬ ॥**

**ಅರ್ಥ**– ತತ್ತ್ವಾರ್ಥೇ ತು = ಯಥಾರ್ಥವಾದ ಅರ್ಥವು, ಗುರೂಪದೇಶಾತ್= ಗುರೂಪದೇಶದಿಂದ, ಅಜ್ಞಾತೇ ಸತಿ= ಅಜ್ಞಾತವಾಗುತ್ತಿರಲು, ಸ್ವಸ್ವಬುದ್ಧಿಭಿಃ = ತಮ್ಮ ತಮ್ಮ ಬುದ್ಧಿಗಳಿಂದ, ಯಸ್ಮಿನ್ ಕಸ್ಮಿನ್‌ಚಿತ್ ಅರ್ಥೇ = ಯಾವುದಾದರೊಂದು ವಿಪರೀತವಾದ ಅರ್ಥವು, ದುರಾತ್ಮನಾಂ = ದುಷ್ಟಸ್ವರೂಪದ ಜೀವರಿಗೆ, ಜ್ಞಾತೇ ಸತಿ = ತಿಳಿಯಲ್ಪಡುತ್ತಿರಲು, ತೇಷಾಂ = ಆ ದುರ್ಜನರ, ಹೃದಿ = ಮನಸ್ಸಿನಲ್ಲಿ, ತಮಃ ದಾತುಂ = ತಮಸ್ಸನ್ನು ಕೊಡಲು, ಯಃ = ಯಾವುದು, ಪೂರ್ವಂ = ಮೊದಲು, ಖಂಡನೇ = ಖಂಡನವೆಂಬ ಶ್ರೀ ಹರ್ಷನ ಗ್ರಂಥದಲ್ಲಿ, ಪ್ರೋಕ್ತಃ =ಹೇಳಲ್ಪಟ್ಟಿತ್ತೋ, ಸೋಽಯಂ ವಾದಃ = ಆ ವಿಕಲ್ಪ ರೂಪವಾದವಾದವು, ತಿಷ್ಠತಿ ತು = ಸ್ಥಿರವಾಗಿ ನಿಲ್ಲುತ್ತದೆ, ದ್ವೈತಂ = ಮಿಥ್ಯಾಜ್ಞಾನವು, ವಿದ್ಯತೇ = ನಿಲ್ಲುತ್ತದೆಯಷ್ಟೇ!

**ಅನುವಾದ** - ಗುರೂಪದೇಶದಿಂದ ತತ್ತ್ವಜ್ಞಾನವನ್ನು ಪಡೆಯದೆ ತಮ್ಮ ತಮ್ಮ ಬುದ್ಧಿಗೆ ತೋರಿದಂತೆ ಅರ್ಥಗಳನ್ನು ತಿಳಿಯುವ ದುರಾತ್ಮರ ಹೃದಯದಲ್ಲಿ ಅಜ್ಞಾನವನ್ನು ಸ್ಥಿರೀಕರಿಸಲು ಮೊದಲು ಖಂಡನಕಾರನು ಹೇಳಿದ ಭೇದವು ಇಲ್ಲ ಎಂಬ ವಾದವು ಸ್ಥಿರವಾಗಿ ನಿಲ್ಲುತ್ತದೆ.

**ಭಾವವಿಲಾಸಿನೀ–ಅಜ್ಞಾತ ಇತಿ ದ್ವೈತಮಿತಿ ಚ ಪದಚ್ಛೇದೇಽಪ್ಯರ್ಥಮಾಹ – ಗುರೂಪದೇಶಾದಿತಿ॥ ಅತ್ರಾಪ್ಯರ್ಥಯೋಗ್ಯಂ ಶೇಷಪೂರಣಂ ಸ್ವಸ್ವಬುದ್ಧಿಭಿರಿತ್ಯಾದಿ ಅನೇನ ಜ್ಞಾತ ಇತ್ಯಪಿ ಪದಚ್ಛೇದಮಭಿಪ್ರೈತಿ । ತತ್ರಾರ್ಥೇಽಜ್ಞಾತೇ ಸ್ವೋತ್ಪ್ರೇಕ್ಷಯಾ ಯಸ್ಮಿನ್ ಕಸ್ಮಿಂಶ್ಚಿದ್ವಿಪರೀತಾರ್ಥೇ ಚ ಜ್ಞಾತೇ ಸತೀತ್ಯರ್ಥಃ । ಸೋಽಯಂ ವಾದಃ ಭೇದೋ ಭಿನ್ನೋ ವಾಽಭಿನ್ನೋ ವೇತ್ಯಾದಿ ವಿಕಲ್ಪದೂಷಣರೂಪವಾದಃ । ನ ದ್ವೈತಂ ವಿದ್ಯತೇ ಕಿಲೇತಿ ದ್ವೈತಂ ನ ವಿದ್ಯತ ಇತ್ಯಸ್ಯಾರ್ಥಕಥನವ್ । ಗುರುವಮುಲ್ಲಂಘ್ಯ ಸ್ವೋತ್ಪ್ರೇಕ್ಷಯಾಽಽಪಾತಾರ್ಥ ಏವ ಕೃತಮತೀನಾಮದ್ವೈತೇ ರುಚಿರ್ಜಾಯತೇ । (ದ್ವೈತೇಽರುಚಿಶ್ಚ) ಗುರುಣಾ ಸ್ವಾಭಿಪ್ರಾಯೇ ವಿವಿಚ್ಯಬೋಧಿತೇ ಸತಿ ಪೂರ್ವೋತ್ತರಾ ವಿರುದ್ಧಯೋಗ್ಯವಾಕ್ಯಾರ್ಥಜ್ಞಾನೇ ಸತಿ ದ್ವೈತ ಏವ ರುಚಿರ್ಜಾಯತೇ (ನತ್ವದ್ವೈತೇ) । ಏವಂ ಚೋದ್ಧತಾನುದ್ಧತಭೇದೇನ ವಿದುಷಾಂ ದ್ವೈವಿಧ್ಯಾತ್ಸರ್ವೇಷಾಮೇಕಪ್ರಕಾರೋ ಬೋಧೋ ನ ಜಾಯತೇ ಇತಿ ಶ್ರುತೇರ್ಹೃದಯಮ್ ॥**

**ವಿವರಣೆ** - ಗುರುಗಳಿಂದ ಉಪದಿಷ್ಟವಾದ ಈ ಶ್ರುತಿಯ ಅರ್ಥವು ತಿಳಿಯಲ್ಪಡದೆ ಯಾವುದಾದರೊಂದು ವಿಪರೀತವಾದ ಅರ್ಥವು ತಿಳಿಯಲ್ಪಟ್ಟರೆ, ಅಂತಹ ದುಷ್ಟಸ್ವಭಾವದ ಜೀವರ ಹೃದಯದಲ್ಲಿ ಅಜ್ಞಾನವನ್ನು ಸ್ಥಿರವಾಗಿ ತುಂಬುವುದಕ್ಕಾಗಿ, ಶ್ರೀಹರ್ಷನು ಬರೆದ ಖಂಡನಖಂಡಖಾದ್ಯವೆಂಬ ಗ್ರಂಥದಲ್ಲಿ ಹೇಳಿದಂತೆ ಭೇದಾಭೇದಾದಿ ವಿಕಲ್ಪವಾದವೇ ನಿಲ್ಲುತ್ತದೆ. ಗುರೂಪದೇಶದಿಂದ ದ್ವೈತವನ್ನು ಸರಿಯಾಗಿ ತಿಳಿದರೆ ಅವರ ಹೃದಯದಲ್ಲಿ ದ್ವೈತವೇ ದೃಢವಾಗಿ ನಿಲ್ಲುತ್ತದೆ. ಅದ್ವೈತ ಅಲ್ಲಿ ಇರುವುದಿಲ್ಲ. ಜೀವರ ಯೋಗ್ಯತಾನುಸಾರ ಅವರವರ ಅಭಿರುಚಿಗೆ ತಕ್ಕಂತೆ ಅರ್ಥವನ್ನು ಗ್ರಹಿಸುತ್ತಾರೇ ವಿನಃ ಏಕಪ್ರಕಾರವಾದ ಜ್ಞಾನವು ಎಲ್ಲರಿಗೂ ಬರುವುದಿಲ್ಲವೆಂದು ಶ್ರುತಿಯ ತಾತ್ಪರ್ಯ. ಗುರೂಪದೇಶವನ್ನು ಉಲ್ಲಂಘಿಸಿ ತಮ್ಮ ಊಹೆಯಿಂದ ಮೇಲೆ ತೋರುವ ಅರ್ಥದಲ್ಲಿ ಅಭಿರುಚಿಯುಳ್ಳ ಜೀವರೂ ಇದ್ದಾರೆ. ಹಾಗೆಯೇ ಗುರೂಪದೇಶವನ್ನು ತಿಳಿದು ಭೇದಜ್ಞಾನವನ್ನು ಪಡೆಯುವವರೂ ಇದ್ದಾರೆ. ಉದ್ಧತ ಅನುದ್ಧತ ಎಂಬ ಭೇದದಿಂದ ವಿದ್ವಜ್ಜನರಲ್ಲಿಯೂ ಸಹ ಒಂದೇ ರೀತಿಯಾದ ಜ್ಞಾನವು ಉಂಟಾಗುವುದಿಲ್ಲ ಎಂದು ಶ್ರುತಿಯ ಅಭಿಪ್ರಾಯ.

ಇತ್ಯರ್ಥದ್ವಯಮಪ್ಯುತ್ತರಾರ್ಧೇಽಸೌ ವಾಗ್ ಜಗೌ ಕಿಲ ।
ಭೇದಸೌರಭಸರ್ವಸ್ವಂ ನಿತ್ಯಂ ಸತ್ಯಮತೋಽಭವತ್ ॥ ೪೭ ॥

**ಅರ್ಥ**– ಇತಿ ಅರ್ಥದ್ವಯಂ = ಹೀಗೆಂಬ ಎರಡು ಅರ್ಥಗಳನ್ನು, ಉತ್ತರಾರ್ಧೇ = ಉತ್ತರಾರ್ಧದಲ್ಲಿ, ಅಸೌ ವಾಕ್ = ಈ ಶ್ರುತಿಯು, ಜಗೌ ಕಿಲ = ಹೇಳಿದೆಯಷ್ಟೇ. ಅತಃ = ಆದ್ದರಿಂದ, ಭೇದಸೌರಭಸರ್ವಸ್ವಂ = ಭೇದಸೌರಭದ ಎಲ್ಲಾ ಪ್ರಮೇಯಗಳೂ, ನಿತ್ಯಂ = ನಿತ್ಯವೂ, ಸತ್ಯಂ = ಸತ್ಯವೂ, ಅಭವತ್ = ಆದವು.

**ಅನುವಾದ** - ಹೀಗೆ ಆ ಶ್ರುತಿಯು ಉತ್ತರಾರ್ಧದಲ್ಲಿ ಎರಡು ಅರ್ಥಗಳನ್ನು ಹೇಳಿತು. ಆದ್ದರಿಂದ ಭೇದಸೌರಭ ಸರ್ವಸ್ವವೆಲ್ಲವೂ ನಿತ್ಯವೂ, ಸತ್ಯವೂ ಆಯಿತು.

**ಭಾವವಿಲಾಸಿನೀ**– ಏತಚ್ಛ್ರುತಿವ್ಯಾಖ್ಯಾನಂ ಸೌರಭದ್ವಯಸಂಗತತ್ವಾದಾದೌ ಕೃತಮಿತಿ ಸೂಚಯನ್ ವಿಶ್ವಸೌರಭಸರ್ವಸ್ವಮಾರಭತೇ । ಭೇದಸೌರಭೇತಿ । ಅತಃ ಉಕ್ತಶ್ರೌತಯುಕ್ತಿತಃ ಇದಮುಪಲಕ್ಷಣಂ ಪ್ರಪಂಚಮಿಥ್ಯಾತ್ವಾಖ್ಯ ಪರಾರ್ಥಖಂಡನೇನ ಸಾಕ್ಷಾದ್ವಿಶ್ವ ಸೌರಭೋಪಯೋಗೋಪಿ ಅಭಿಲಪಿತಾ ದ್ರಷ್ಟವ್ಯಃ ।। ೪೭ ।।

**ವಿವರಣೆ** - ಉದ್ಧತ ವಿದ್ವಾಂಸರು ಮತ್ತು ಅನುದ್ಧತ ವಿದ್ವಾಂಸರು ಎಂಬ ಭೇದದಿಂದ ಜೀವರಿಗೆ ಭೇದಜ್ಞಾನ ಹಾಗೂ ಅಭೇದಜ್ಞಾನ ಎಂಬ ವಿಭಿನ್ನ ಜ್ಞಾನವು ಬರುತ್ತದೆ ಎಂದು ಉಪದೇಶಾದಯಂ ವಾದಃ ಎಂಬ ಉತ್ತರಾರ್ಧವು ವರ್ಣಿಸುತ್ತದೆ. ಸಜ್ಜನರಿಗೆ ಬರುವ ಜ್ಞಾನವೇ ಯಥಾರ್ಥವಾದ್ದರಿಂದ ಭೇದಸೌರಭದಲ್ಲಿ ವಿವೇಚನೆ ಮಾಡಿದ ಎಲ್ಲಾ ಭೇದಗಳು ನಿತ್ಯ ಮತ್ತು ಸತ್ಯ ಎಂದು ಸಿದ್ಧವಾದವು. ಉದ್ಧತರಾದ ವಿದ್ವಾಂಸರಿಗೆ ಭೇದಜ್ಞಾನ ಬರುವುದಿಲ್ಲ. ವಿನೀತರಾದ ವಿದ್ವಾಂಸರಿಗೆ ಮಾತ್ರ ಬರುತ್ತದೆ ಎನ್ನುವುದು ಶ್ರುತಿಯ ಹಾರ್ದವಾಗಿದೆ. ಈ ಶ್ರುತಿಯ ವ್ಯಾಖ್ಯಾನ ಹಿಂದಿನ ಭೇದ ಸೌರಭಕ್ಕೂ ಈ ವಿಶ್ವಸೌರಭಕ್ಕೂ ಬೇಕಾಗಿದೆ. ಏಕೆಂದರೆ ಹಿಂದೆ ಹೇಳಿದ ಭೇದ ಸತ್ಯತ್ವವನ್ನೇ ಮುಂದೆ ಹೇಳುವ ಪ್ರಪಂಚ ಸತ್ಯತ್ವವನ್ನೇ ಈ ಶ್ರುತಿ ಹೇಳುತ್ತಿದೆ.

**ಧರ್ಮಸ್ಯ ಧರ್ಮಿಮೂಲತ್ವಾಜ್ಜೀವನಿತ್ಯಜಡಾತ್ಮಕಮ್ ।**
**ವಿಶ್ವಸೌರಭಸರ್ವಸ್ವಮಪಿ ತಾದೃಗಭೂದ್‌ಬಲಾತ್ ।। ೪೮ ।।**

**ಏವಂಚ ಪ್ರಕೃತೇರ್ನಿತ್ಯಸತ್ಯಭಾವೇ ಸಮರ್ಥಿತೇ ।**
**ತದುಪಾದಾನಕಂ ಸರ್ವಂ ಸತ್ಯಮಾಸೀದಿದಂ ಜಗತ್ ।। ೪೯ ।।**

**ಅರ್ಥ**– ಧರ್ಮಸ್ಯ =ಧರ್ಮಕ್ಕೆ, ಧರ್ಮಿಮೂಲತ್ವಾತ್ = ಧರ್ಮಿಯು ಮೂಲಾಧಾರ ವಾದ್ದರಿಂದ, ಜೀವನಿತ್ಯಜಡಾತ್ಮಕಂ = ಜೀವ ಮತ್ತು ನಿತ್ಯಜಡಾತ್ಮಕವಾದ, ವಿಶ್ವಸೌರಭಸರ್ವ ಸ್ವಂ = ವಿಶ್ವಸೌರಭದಲ್ಲಿ ಪ್ರತಿಪಾದ್ಯವಾದ ಚೇತನಾಚೇತನಾತ್ಮಕವಾದ ಎಲ್ಲಾ ಪ್ರಪಂಚವೂ ಕೂಡ, ಬಲಾತ್ = ಶ್ರುತಿಬಲದಿಂದಲೇ, ತಾದೃಕ್ = ನಿತ್ಯತ್ವ ಹಾಗೂ ಸತ್ಯತ್ವವುಳ್ಳದ್ದು, ಅಭೂತ್ = ಆಯಿತು. ಏವಂ ಚ= ಹೀಗೆಯೇ, ಪ್ರಕೃತೇಃ= ಪ್ರಕೃತಿಗೆ, ನಿತ್ಯಸತ್ಯಬಾವೇ = ನಿತ್ಯತ್ವ ಮತು ಸತ್ಯತ್ವಗಳು, ಸಮರ್ಥಿತೇ ಸತಿ = ಸಮರ್ಥಿಸಲ್ಪಡುತ್ತಿರಲು, ತದುಪಾದಾನಕಂ = ಆ ಪ್ರಕೃತಿಯೇ ಉಪಾದಾನವಾಗಿಯುಳ್ಳ, ಇದಂ ಸರ್ವಂ = ಈ ಎಲ್ಲಾ, ಜಗತ್ = ಜಗತ್ತೂ ಕೂಡ, ಸತ್ಯಂ = ಸತ್ಯವೂ, ಆಸೀತ್ = ಆಯಿತು.

**ಅನುವಾದ** - ಭೇದವೆಂಬ ಧರ್ಮವು ಪದಾರ್ಥವೆಂಬ ಧರ್ಮಿಯ ಮೂಲವಾದ್ದರಿಂದ ಜೀವ ನಿತ್ಯಜಡ ಮೊದಲಾದ ವಿಶ್ವಸೌರಭದಲ್ಲಿ ಪ್ರತಿಪಾದಿಸಿದ ಎಲ್ಲ ಪದಾರ್ಥಗಳು ಅದೇ ನ್ಯಾಯದಿಂದ ನಿತ್ಯವು ಮತ್ತು ಸತ್ಯವು ಆದವು. ಹೀಗೆ ಪ್ರಕೃತಿಗೆ ನಿತ್ಯತ್ವ ಮತ್ತು ಸತ್ಯತ್ವವನ್ನು ಸಮರ್ಥಿಸಿದ ಮೇಲೆ ಆ ಪ್ರಕೃತಿಗೆ ಉಪಾದಾನವಾಗಿ ಹೊಂದಿದ ಈ ಜಗತ್ತೆಲ್ಲವೂ ಸತ್ಯವೆಂದೇ ಸಿದ್ಧವಾಯಿತು.

**ಭಾವವಿಲಾಸಿನೀ**– ತಾದೃಕ್ ನಿತ್ಯಂ ಸತ್ಯಂ ಚ । ವಿಶ್ವಸೌರಭಾಂತರ್ಗತಂ ಜೀವಾಖ್ಯಂ ನಿತ್ಯಜಡಾತ್ಮಕಂ ಚ ವಸ್ತುದ್ವಯಮೇತಚ್ಛ್ರುತಿಬಲಾದೇವ ನಿತ್ಯಂ ಸತ್ಯಂ ಚಾಸೀದಿತಿ ಭಾವಃ ॥ ೪೮– ೪೯ ॥

ಅತಃ ಶ್ರುತಿರಿಯಂ ರಮ್ಯಾ ದೇಹಲೀದೀಪವದ್ ಬಭೌ ।
ಯತಃ ಸ್ಥಾನದ್ವಯಸ್ಯಾರ್ಥಮುದಮೀಮಿಲದುಚ್ಚಕೈಃ ॥ ೫೦ ॥

**ಅರ್ಥ**– ಅತಃ = ಆದ್ದರಿಂದ, ಇಯಂ = ಈ ಶ್ರುತಿಯು, ದೇಹಲೀದೀಪವತ್ = ಹೊಸ್ತಿಲಿನ ಮೇಲಿನ ದೀಪದಂತೆ, ರಮ್ಯಾ = ಮನೋಹರವಾಗಿ, ಬಭೌ = ಶೋಭಿಸಿತು. ಯತಃ = ಏಕೆಂದರೆ, ಸ್ಥಾನದ್ವಯಸ್ಯ = ಎರಡೂ ಭಾಗದ, ಅರ್ಥಂ = ಅರ್ಥವನ್ನು, ಉಚ್ಚಕೈಃ = ಸ್ಪಷ್ಟವಾಗಿ, ಉದಮೀಮಿಲತ್ = ಪ್ರಕಟಪಡಿಸಿತು.

**ಅನುವಾದ** - ಆದ್ದರಿಂದ ಮನೋಹರವಾದ ಈ ಶ್ರುತಿಯು ಹೊಸ್ತಿಲಿನ ಮೇಲಿನ ದೀಪದಂತೆ ಎರಡು ಕಡೆಗಳಲ್ಲಿಯೂ ಪ್ರಕಾಶವನ್ನು ಚೆಲ್ಲುತ್ತದೆ. ಏಕೆಂದರೆ ಭೇದಸೌರಭ ಸಾರವಾದ ಭೇದ ನಿತ್ಯತ್ವವನ್ನು ಮತ್ತು ವಿಶ್ವಸೌರಭ ಸಾರವಾದ ವಿಶ್ವಸತ್ಯತ್ವವನ್ನು ಸ್ಪಷ್ಟವಾಗಿ ಪ್ರಕಾಶಪಡಿಸುತ್ತದೆ.

**ಭಾವವಿಲಾಸಿನೀ**– ಉದಮೀಮಿಲತ್ ಉನ್ಮೀಲಯಾಮಾಸ ॥ ೫೦ ॥

ಶ್ರೀಮಧ್ವಮುನಿಚಂದ್ರಸ್ಯ ಜ್ಯೋತ್ಸ್ನಾ ಕೃತ್ಸ್ನಾ ಜಗತ್ ತ್ರಯೇ ।
ಮದ್‌ಹೃದ್‌ವ್ಯೋಮ್ನ್ಯಸ್ಯ ಸದ್ಧಾಮ್ನಿ ವ್ಯಾಪ್ತೇಯಮಪಿ ಚಂದ್ರಿಕಾ ॥ ೫೧ ॥

**ಅರ್ಥ**– ಕೃತ್ಸ್ನಾ = ಪೂರ್ಣವಾದ, ಜ್ಯೋತ್ಸ್ನಾ = ವಾಗ್ವೈಖರಿ ಎಂಬ ಬೆಳದಿಂಗಳು, ಶ್ರೀಮನ್ಮಧ್ವಮುನಿಚಂದ್ರಸ್ಯ = ಕಾಂತಿಯುಕ್ತರಾದ ಶ್ರೀಮನ್ಮಧ್ವಮುನಿಗಳೆಂಬ ಚಂದ್ರನದ್ದೇ ಆಗಿದೆ. ಸದ್ಧಾಮ್ನಿ = ಸಜ್ಜನರ ಹೃದಯಮಂದಿದಲ್ಲಿ, ಮದ್ ಹೃದ್‌ವ್ಯೋಮ್ನಿ= ನನ್ನ ಹೃದಯಾಕಾಶದಲ್ಲಿ, ಜಗತ್ರಯೇ ಅಪಿ = ಮೂರು ಲೋಕಗಳಲ್ಲಿಯೂ ಕೂಡ, ವ್ಯಾಪ್ತಾ = ಹರಡಿದ, ಇಯಂ = ಈ ಜ್ಞಾನರೂಪವಾದ, ಚಂದ್ರಿಕಾ = ಬೆಳದಿಂಗಲು, ಅಸ್ಯ = ಮಧ್ವಾಚಾರ್ಯರದ್ದೇ ಆಗಿದೆ.

**ಅನುವಾದ** - ಶ್ರೀಮಧ್ವಾಚಾರ್ಯರೆಂಬ ಮುನಿಚಂದ್ರರ ಬೆಳದಿಂಗಳು ಮೂರು ಜಗತ್ತಿನಲ್ಲಿಯೂ ಹರಡಿದೆ. ಆ ಚಂದ್ರಿಕೆಯು ನನ್ನ ಹೃದಯಾಕಾಶವೆಂಬ ಅವರ ಶ್ರೇಷ್ಠವಾದ ವಾಸಸ್ಥಾನದಲ್ಲಿಯೂ ವ್ಯಾಪ್ತವಾಗಿದೆ.

**ಭಾವವಿಲಾಸಿನೀ–** ಏತಚ್ಛ್ರುತಿವ್ಯಾಖ್ಯಾನಕೌಶಲ್ಯಂ ಶ್ರೀಮದಾಚಾರ್ಯಕೃಪಯೈವ ಪ್ರಾಪ್ತಮಿತಿ ಮನ್ವಾನಸ್ತಂ ಸ್ತೌತಿ । **ಶ್ರೀಮಧ್ವೇತಿ** ॥ ಜ್ಯೋತ್ಸ್ನಾ ವಾಗ್ವೈಖರ್ಯಾಖ್ಯಜ್ಯೋತ್ಸ್ನಾ । ಕೃತ್ಸ್ನಾ ಸಂಪೂರ್ಣಾ ಯಥಾ ಚಂದ್ರಜ್ಯೋತ್ಸ್ನಾ ತ್ರೈಲೋಕ್ಯವ್ಯಾಪಿನ್ಯಪಿ ಚಂದ್ರಸ್ಯೈವ ನಾನ್ಯಸ್ಯ ತಥಾ ಮಧ್ವಮುನೇರ್ವಾಗ್ವೈಖರೀ ತ್ರಿಲೋಕೀಸ್ಥಾನಾಂ ಸರ್ವೇಷಾಂ ಸಾಧೂನಾಂ ಸ್ವಶಿಷ್ಯತ್ವಾತ್ ಸ್ವಮುಖತೋ ವ್ಯಾಖ್ಯಾನೇನ ವಾ ತತ್ತದ್ಗ್ರಂಥಸ್ಥಿತ್ವಾಬೋಧೋದ್ಬೋಧನೇನ ವಾ ತ್ರೈಲೋಕ್ಯವ್ಯಾಪಿನ್ಯಪಿ ತಸ್ಯೈವೇತ್ಯರ್ಥಃ । ಅಸ್ಯ ಸದ್ಧಾಮ್ನಿ ಮದ್ಹೃದ್ವ್ಯೋಮ್ನಿ ಚ ವ್ಯಾಪ್ತೇಯಂ ಚಂದ್ರಿಕಾ ಶ್ರೀಮಧ್ವಮುನಿಚಂದ್ರಸ್ಯೈವೇತಿ ಯೋಜನಾ । ಮಮಾಪಿ ತದ್ಭಕ್ತೇಷ್ವೇಕತ್ವಾತ್ ಸ ಏವ ಬೋಧೋದ್ಬೋಧಕ ಇತಿ ಭಾವಃ ॥ ೫೦ ॥

**ವಿವರಣೆ** - ಇಲ್ಲಿಯವರೆಗೆ ಮಾಡಲ್ಪಟ್ಟ ವ್ಯಾಖ್ಯಾನವು ಮಧ್ವಾಚಾರ್ಯರ ಕೃಪೆಯಿಂದಲೇ ಆದದ್ದು. ಏಕೆಂದರೆ ಅವರು ವಿಷ್ಣುತತ್ವವಿನಿರ್ಣಯಮೊದಲಾದ ಗ್ರಂಥಗಳಲ್ಲಿ ಶ್ರುತಿಗೆ ವ್ಯಾಖ್ಯಾನಮಾಡಿ ತಿಳಿಸಿದ್ದಾರೆ. ಅದನ್ನು ಅನುಸರಿಸಿಯೇ ಇಲ್ಲಿ ವ್ಯಾಖ್ಯಾನ ಮಾಡಲಾಗಿದೆ. ಆದ್ದರಿಂದ ಈ ವ್ಯಾಖ್ಯಾನವು ಆಚಾರ್ಯರ ಮಾತಿನ ಚಾತುರ್ಯವೆಂಬ ಬೆಳದಿಂಗಳ ಪ್ರಕಾಶ ಎಂದು ವರ್ಣಿಸಿದ್ದಾರೆ. ಆಕಾಶದಲ್ಲಿ ಕಾಣುವ ಚಂದ್ರನ ಬೆಳದಿಂಗಳ ಪ್ರಕಾಶವು ಬಾಹ್ಯಪ್ರಪಂಚದಲ್ಲಿ ವ್ಯಾಪಿಸಿದರೆ ಈ ಆಚಾರ್ಯರ ಮಾತಿನ ಚಾತುರ್ಯವೆಂಬ ಬೆಳದಿಂಗಳ ಪ್ರಕಾಶವು ಎಲ್ಲಾ ಸಜ್ಜನರ ಹೃದಯದಲ್ಲಿ, ರಾಜರ ಹೃದಯದಲ್ಲಿ, ಮೂರು ಲೋಕಗಳಲ್ಲಿಯೂ ವ್ಯಾಪಿಸಿದೆಯೆಂದು ಆಚಾರ್ಯರ ಜ್ಞಾನದ ಹಿರಿಮೆಯನ್ನು ಕೊಂಡಾಡಿದ್ದಾರೆ.

ದಯಾಶೀಲೇನ ಕೋಲೇನ ಪಾಲೇನಾತಿಬಲೀಯಸಾ ।
ಮಹ್ಯೈದ್ರುಹ್ಯನ್ಮದಾನ್ಮುಹ್ಯಂಸ್ತಸ್ಕರಃ ಪ್ರತಿಚಸ್ಕರೇ ॥ ೫೨ ॥

**ಅರ್ಥ–** ತಸ್ಕರಃ = ಕಳ್ಳನಾದ ದೈತ್ಯ ಹಿರಣ್ಯಾಕ್ಷನು, ಮದಾತ್ = ಅಹಂಕಾರದಿಂದ, ಮಹ್ಯೈ = ಭೂಮಿಗಾಗಿ, ಮುಹ್ಯನ್ = ಮೋಹಗೊಂಡವನಾಗಿ, ದ್ರುಹ್ಯನ್ = (ವರಾಹನನ್ನು) ದ್ವೇಷಿಸುತ್ತಾ, ಬಲೀಯಸಾ = ಬಲಿಷ್ಠನಾದ, ಪಾಲೇನ = ರಕ್ಷಕನಾದ, ದಯಾಶೀಲೇನ = ಕರುಣಾಸಂಪನ್ನನಾದ, ಕೋಲೇನ = ವರಾಹ ರೂಪಿಯಾದ ಶ್ರೀಹರಿಯಿಂದ, ಪ್ರತಿಚಸ್ಕರೇ = ಯುದ್ಧದಲ್ಲಿ ಹತನಾದನು.

**ಅನುವಾದ** - ದೈತ್ಯ ಹಿರಣ್ಯಾಕ್ಷ ಪಾತಾಳಕ್ಕೊಯ್ದು ಭೂಮಿಯನ್ನು ವರಾಹ ರೂಪಿಯಾದ ಹರಿಯು ಸ್ವಸ್ಥಾನದಲ್ಲಿ ಇಡಬೇಕೆಂದು ಹೊತ್ತು ತರುವಾಗ ಆ ಹಿರಣ್ಯಾಕ್ಷನು ಗರ್ವದಿಂದ ವರಾಹನನ್ನು ತಡೆದನು. ಭೂಮಿಯಲ್ಲಿ ಮೋಹ ಗೊಂಡಿದ್ದನು.

ಕಳ್ಳನೂ ಆಗಿದ್ದನು. ಆ ಸಮಯದಲ್ಲಿ ಲೋಕಪಾಲಕನಾದ ಸರ್ವ ಸಮರ್ಥನಾದ ಕರುಣಾಸಂಪನ್ನನಾದ ವರಾಹರೂಪೀ ಹರಿಯು ಹಿರಣ್ಯಾಕ್ಷನನ್ನು ಯುದ್ಧದಲ್ಲಿ ಕೊಂದು ಭೂಮಿಯನ್ನುದ್ಧರಿಸಿದನು.

**ಭಾವವಿಲಾಸಿನೀ–** ವರಾಹಾವತಾರಕಥಯಾ ವಿಶ್ವಸತ್ಯತ್ವಮನುಭಾವಯತಿ ॥ ದಯಾಶೀಲೇನೇತಿ ॥ ತಸ್ಕರಃ ಹಿರಣ್ಯಾಕ್ಷಃ । ಪ್ರತಿಚಸ್ಕರೇ ನಿಹತೋಽಭೂತ್ ॥ ೫೨ ॥

**ವಿವರಣೆ** - ಶ್ಲೋಕದಲ್ಲಿನ 'ತಸ್ಕರಃ' ಎಂಬ ಶಬ್ದವು ಭೂಮಿಯನ್ನು ಕದ್ದ ದಿತಿಪುತ್ರ ಹಿರಣ್ಯಾಕ್ಷನನ್ನು ಹೇಳುತ್ತದೆ. 'ಪಾಲೇನ' ಎಂಬುದು ಹೇತುಗರ್ಭ ವಿಶೇಷಣ. 'ರಕ್ಷಕನಾಗಿದ್ದರಿಂದಲೇ' ಭೂಮಿಯನ್ನು ಹೊತ್ತುತಂದಿದ್ದಾನೆಂದು ಭಾವ. ವರಾಹಾವತಾರ ಕಥೆಯಿಂದ ವಿಶ್ವಸತ್ಯತ್ವ ಅನುಭವ ಸಿದ್ಧ ಎಂದು ಸಮರ್ಥಿಸುತ್ತಾರೆ.

**ತಿರೋಭಾವಕೃತೋ ಹಂತಾ ಸೋಽತ್ಯಂತಾಭಾವಕಾರಿಣಮ್ ।**
**ರಕ್ಷೋ ರೂಕ್ಷೇಭಹರ್ಯಕ್ಷೋ ನ ರಕ್ಷೇದಿತಿ ಮೇ ಮತಿಃ ॥ ೫೩ ॥**

**ಅರ್ಥ–** ತಿರೋಭಾವಕೃತಃ = ಅಸ್ತಿತ್ವದಲ್ಲಿರುವ ಭೂಮಿಯನ್ನು ಕೇವಲ ಮರೆಮಾಡಲು ಯತ್ನಿಸಿದ ರಕ್ಷಃ= ಅದ್ವೈತಿಯೆಂಬ ರಾಕ್ಷಸನನ್ನು, ಹಿರಣ್ಯಾಕ್ಷ ರಾಕ್ಷಸನನ್ನು, ಹಂತಾ = ಕೊಂದಿರುವ, ರೂಕ್ಷೇಭಹರ್ಯಕ್ಷಃ = ಉಗ್ರರಾಕ್ಷಸರೆಂಬ ಆನೆಗಳಿಗೆ ಸಿಂಹದಂತಿರುವ, ಸಃ = ವರಾಹನು ಅತ್ಯಂತಾಭಾವಕಾರಿಣಮ್ = ಜಗತ್ತಿನ ಅತ್ಯಂತಾಭಾವವನ್ನು (ಮಿಥ್ಯಾತ್ವವನ್ನು), ಸಮರ್ಥಿಸಲು ಹೊರಟ, ನ ರಕ್ಷೇತ್ = ರಕ್ಷಿಸಲಾರನು, ಇತಿ = ಎಂದು, ಮೇ = ನನ್ನ ಮತಿಃ = ಬುದ್ಧಿಯು.

**ಅನುವಾದ** - ಹಿರಣ್ಯಾಕ್ಷ ದೈತ್ಯನು ಭೂಮಿಯನ್ನು ಮುಳುಗಿಸಿ ಕಾಣದಂತೆ ಮಾಡಬೇಕೆಂದು ಪ್ರಯತ್ನಿಸಿದ. ಇದರಿಂದ ಕೋಪಗೊಂಡ ವರಾಹನು ಅವನನ್ನು ವಧಿಸಿದ. ಮುಚ್ಚಿಡಲು ಯತ್ನಿಸಿದ ರಾಕ್ಷಸನನ್ನೇ ವಧಿಸಿದ ಉಗ್ರ ರಾಕ್ಷಸಗಜ ಸಿಂಹನಾದ ವರಾಹನು ಜಗನ್ಮಿಥ್ಯಾತ್ವ ವಾದಿಯನ್ನು ಸುಮ್ಮನೆ ಬಿಡುವನೆ? ಜಗನ್ಮಿಥ್ಯಾತ್ವ ವಾದಿಯನ್ನು ಅಂಧಃ ತಮಸ್ಸಿನಲ್ಲಿಯೇ ಶಿಕ್ಷಿಸುವನು ಎಂದು ಭಾವ.

**ಭಾವವಿಲಾಸಿನೀ–** ತಿರೋಭಾವಕೃತಃ ವಿದ್ಯಮಾನಾಯಾ ಏವ ಭೂಮೇರ್ಜಲಾಂತರ್ನಿಇತ್ವಾದರ್ಶನ ಮಾತ್ರಂ ಸಂಪಾದಿತವಂತಃ । ಸಃ ವರಾಹಃ ॥ ೫೩ ॥

**ವಿವರಣೆ** - ದೈತ್ಯನೊಬ್ಬನು ಜಗತ್ತಿಗೆ ತಾತ್ಕಾಲಿಕವಾಗಿ ತಿರೋಭಾವವನ್ನು ಮಾಡ ಹೊರಟಾಗಲೇ ಕ್ಷಮಿಸದ ಹರಿಯು ತ್ರೈಕಾಲಿಕವಾದ ಅತ್ಯಂತಾಭಾವವನ್ನು ಸಮರ್ಥಿಸಲು ಎಡೆಗೊಡುವನೇ? ಎಂದು ಭಾವ.

ಜಗತ್ಸತ್ಯತ್ವವಿಷಯದಲ್ಲಿ ಕೃಷ್ಣಾವತಾರ ಕಥೆಯೂ ಪ್ರಮಾಣವಾಗಿದೆ ಎಂದು ಸಮರ್ಥಿಸುತ್ತಿದ್ದಾರೆ-

ಅಸತ್ಯಮಪ್ರತಿಷ್ಠಂ ತೇ ಜಗದಾಹುರನೀಶ್ವರಮ್ ।
ಅಪರಸ್ಪರಸಂಭೂತಂ ಕಿಮನ್ಯತ್ಕಾಮಹೈತುಕಮ್ ॥ ೫೪ ॥

ಏತಾಂ ದೃಷ್ಟಿಮವಷ್ಟಭ್ಯ ನಷ್ಟಾತ್ಮಾನೋಽಲ್ಪಬುದ್ಧಯಃ ।
ಪ್ರಭವಂತ್ಯುಗ್ರಕರ್ಮಾಣಃ ಕ್ಷಯಾಯ ಜಗತೋಽಹಿತಾಃ ॥ ೫೫ ॥
ಇತಿ ಗೀತಾಸು ಹರಿಣಾ ಜಗನ್ಮಿಥ್ಯಾತ್ವವಾದಿನಾಮ್ ।
ಜಗತಃ ಕ್ಷಯಕೃತ್ತಾ ಚ ಜಗತೋಽಹಿತತಾ ತಥಾ ॥ ೫೬ ॥

ಉಕ್ತಾ ಸೋಽಪಿ ಜಗತ್ಕರ್ತಾ ಹರ್ತಾ ಚೋತ್ಪಥವರ್ತಿನಾಮ್ ।
ಅತೋಽತಿಭೀತೋ ಯಾತೋಽಹಂ ಮತಂ ಸತ್ಯತ್ವವೇದಿನಾಮ್ ।
ವೇದಾನುಮೋದಿನಾಂ ವೈರಿಭೇದಿನಾಂ ತತ್ವವಾದಿನಾಮ್ ॥ ೫೭ ॥

**ಅರ್ಥ–** ತೇ = ಆಸುರೀಗುಣದವರು, ಜಗತ್ = ಜಗತ್ತು, ಅಸತ್ಯಂ= ಸುಳ್ಳಾದುದು, ಅಪ್ರತಿಷ್ಠಂ = ಬಾಧಜ್ಞಾನದಿಂದ ನಾಶವಾಗುವುದೆಂದು, ಅನೀಶ್ವರಂ= ಸ್ವಾಮಿ ಇಲ್ಲದ್ದು, ಅಪರಸ್ಪರ ಸಂಭೂತಂ= ಕಾರ್ಯ-ಕಾರಣಗಳ ಸಂಬಂಧವಿಲ್ಲದೆ ಹುಟ್ಟಿದ್ದು, ಕಿಮನ್ಯತ್= ಇಷ್ಟೇ ಅಲ್ಲದೆ ಬೇರೇನೆಂದರೆ, ಕಾಮಹೈತುಕಂ= ಅವಿದ್ಯಾಪರಿಣಾಮವಾದ ಸದಸದ್ವಿಲಕ್ಷಣ ವಸ್ತುವೆಂದು, ಆಹುಃ = ಹೇಳುತ್ತಾರೆ.

ಏತಾಂ ದೃಷ್ಟಿಂ= ಇಂತಹ ಅನ್ಯಥಾ ಜ್ಞಾನವನ್ನು, ಅವಷ್ಟಭ್ಯ= ಆಶ್ರಯಿಸಿ, ನಷ್ಟಾತ್ಮಾನಃ = ನಷ್ಟವಾದ ಸ್ವರೂಪ ಉಳ್ಳವರಾಗಿ, ಅಲ್ಪಬುದ್ಧಯಃ= ವಿವೇಕಶೂನ್ಯರಾಗಿ, ಜಗತಃ = ಜಗತ್ತಿನ, ಕ್ಷಯಾಯ= ನಾಶಕ್ಕಾಗಿ, ಉಗ್ರಕರ್ಮಾಣಃ= ಕ್ರೂರಕರ್ಮಿಗಳಾಗಿ, ಅಹಿತಾಃ= ಕೆಟ್ಟವರಾಗಿ, ಪ್ರಭವಂತಿ= ಹುಟ್ಟುತ್ತಿರುತ್ತಾರೆ.

ಇತಿ= ಈ ರೀತಿಯಾಗಿ, ಗೀತಾಸು= ಗೀತೆಗಳಲ್ಲಿ, ಹರಿಣಾ= ಶ್ರೀಕೃಷ್ಣನಿಂದ, ಜಗನ್ಮಿಥ್ಯಾತ್ವವಾದಿನಾಂ= ಜಗನ್ಮಿಥ್ಯಾತ್ವ ವಾದಿಗಳಿಗೆ, ಜಗತಃ= ಜಗತ್ತಿನ, ಕ್ಷಯಕೃತ್ತಾ= ನಾಶಕರ್ತೃತ್ವ ದೋಷವು, ತಥಾ= ಹಾಗೆಯೇ, ಜಗತಃ= ಜಗತ್ತಿನ, ಅಹಿತತಾ ಚ= ಅಹಿತಕೃತತ್ವ ದೋಷವೂ, ಉಕ್ತಾ= ಹೇಳಲ್ಪಟ್ಟಿದೆ.

ಸೋಽಪಿ= ಆ ಕೃಷ್ಣ ಪರಮಾತ್ಮನಾದರೂ, ಜಗತ್‌ಕರ್ತಾ= ಜಗತ್ತಿನ ಸೃಷ್ಟಿ ಕರ್ತೃವಾಗಿದ್ದಾನೆ (ಆದ್ದರಿಂದಲೇ), ಉತ್ಪಥವರ್ತಿನಾಂ= ತನ್ನ ಸಿದ್ಧಾಂತಕ್ಕೆ ವಿರುದ್ಧವಾಗಿ ವರ್ತಿಸುವವರ, ಹರ್ತಾ ಚ= ಸಂಹಾರಕನೂ ಆಗಿದ್ದಾನೆ. ಅತಃ= ಜಗನ್ಮಿಥ್ಯಾತ್ವವು ಕೃಷ್ಣನಿಗೆ ಅನಭಿಪ್ರೇತವಾದ

ಕಾರಣದಿಂದಲೇ ಅತಿಭೀತಃ= ಕೃಷ್ಣನಿಂದ ಅತಿನಿಂದಿತವಾದ ಮತವನ್ನು ಸ್ವೀಕರಿಸಿದರೆ ಅವರಂತೆ ನನ್ನನ್ನೂ ಸಂಹರಿಸಿಯಾನು ಎನ್ನುವ ಭಯವನ್ನು ಹೊಂದಿದವನಾಗಿ ಸತ್ಯತ್ವವೇದಿನಾಂ= ಜಗತ್ಸತ್ಯತ್ವವನ್ನು ತಿಳಿದಿರುವ, ವೇದಾನುಮೋದಿನಾಂ= ವೇದವನ್ನು ಅನುಸರಿಸಿರುವ, ವೈರಿಭೇದಿನಾಂ= ಪರವಾದಿಗಳೆಂಬ ವೈರಿಗಳನ್ನು ಖಂಡಿಸುವ, ತತ್ವವಾದಿನಾಂ= ತತ್ವವಾದಿಗಳ, ಮತಂ = ಸಿದ್ಧಾಂತವನ್ನು, ಯಾತೋಹಂ= ನಾನು ಅನುಸರಿಸಿದ್ದೇನೆ.

**ಅನುವಾದ** - ಕೃಷ್ಣನು ದೈವಾಸುರಸಂಪದ್ವಿಭಾಗಯೋಗವೆಂಬ ಹದಿನಾರನೇ ಅಧ್ಯಾಯದಲ್ಲಿ ಆಸುರೀಗುಣಿಗಳಲ್ಲಿ ಜಗನ್ಮಿಥ್ಯಾತ್ವ ವಾದಿಗಳನ್ನು ಸೇರಿಸಿದ್ದಾನೆ. ಆಸುರೀಗುಣದವರು ಈ ಜಗತ್ತು 'ಮಿಥ್ಯಾ ಬಾಧಜ್ಞಾನದಿಂದ ವಿನಾಶ್ಯ, ನಿಯಮ್ಯವಲ್ಲ, ಕಾರ್ಯಕಾರಣ ಅಸಂಬದ್ಧ, ಸದಸದ್ವಿಲಕ್ಷಣ ಎಂದೆಲ್ಲಾ ಹೇಳುತ್ತಾರೆ. ವಿವೇಕಹೀನರಾದ ಇವರು ಅನ್ಯಥಾಜ್ಞಾನವನ್ನು ಆಶ್ರಯಿಸಿದವರಾಗಿ ಆತ್ಮನಾಶಕ್ಕೀಡಾಗುತ್ತಿದ್ದಾರೆ. ಜಗತ್ತಿನ ನಾಶಕರಾಗಿ ಕ್ರೂರಕರ್ಮಿಗಳಾಗಿ, ಅಹಿತಕಾರಿಗಳಾಗಿ ಪುನಃ ಪುನಃ ಹುಟ್ಟುತ್ತಿದ್ದಾರೆ.

ಹೀಗೆ ಕೃಷ್ಣನು ಜಗನ್ಮಿಥ್ಯಾತ್ವವಾದಿಗಳಿಗೆ 'ಜಗತ್ತಿನ ನಾಶಕರು, 'ಜಗತ್ತಿನ ಕಂಟಕರು' ಎಂಬ ದೋಷಗಳ ಪಟ್ಟಿಯನ್ನು ಸೂಚಿಸಿದ್ದಾನೆ. ಕೃಷ್ಣನ ಮಾತು ಪರಮ ಪ್ರಾಮಾಣಿಕ. ಏಕೆಂದರೆ ಈ ಸತ್ಯಭೂತವಾದ ಜಗತ್ತಿನ ಸೃಷ್ಟಿಕರ್ತನು ಕೃಷ್ಣನೇ ಆಗಿದ್ದಾನೆ. ಆದ್ದರಿಂದಲೇ ತನ್ನ ಸಿದ್ಧಾಂತಕ್ಕೆ ವಿರುದ್ಧವಾಗಿ ಉದ್ಧಟರಾಗಿ ವರ್ತಿಸುವವರನ್ನು ಸಂಹರಿಸುತ್ತಾನೆ. ಇಲ್ಲಿ ಸಂಹಾರವೆಂದರೆ ಸುಖದ ಸಂಹಾರವೇ ಆಗಿದೆ.

'ಜಗನ್ಮಿಥ್ಯಾತ್ವವು ಕೃಷ್ಣನಿಗೆ ಅಸಮ್ಮತವಾದ ಕಾರಣದಿಂದಲೇ ಇಂತಹ ಅತಿನಿಂದಿತವಾದ ಮತವನ್ನು ಸ್ವೀಕರಿಸಿದರೆ ಅವರಂತೆ ನನ್ನನ್ನೂ ಸಂಹರಿಸುತ್ತಾನೆ ಎನ್ನುವ ಭಯವನ್ನು ನಾನು (ವಾದಿರಾಜ ಮುನಿಯು) ಹೊಂದಿ, ತತ್ತ್ವವಾದಿಗಳ ಸಿದ್ಧಾಂತವನ್ನು ಅನುಸರಿಸಿದ್ದೇನೆ'.

ತತ್ತ್ವವಾದಿಗಳಾದರೂ ಕೃಷ್ಣನಿಗೆ ಸಮ್ಮತವಾಗುವಂತೆ ಜಗತ್ಸತ್ಯತ್ವವನ್ನು ಪ್ರತಿಪಾದಿಸುತ್ತಾರೆ. ವೇದಗಳಿಗೆ ಅನುಗುಣವಾಗಿ ಮಾತನಾಡುತ್ತಾರೆ. ಪರವಾದಿ ಭಯಂಕರರಾಗಿದ್ದಾರೆ. ಆದ್ದರಿಂದ ಶ್ರುತಿ ಸ್ಮೃತಿ ಸಮ್ಮತವಾದ ಮತವನ್ನೇ ನಾನು ಆಶ್ರಯಿಸಿದ್ದೇನೆ.

**ಭಾವವಿಲಾಸಿನೀ**– ಕೃಷ್ಣಾವತಾರಕಥಯಾಪಿ ಜಗತ್ಸತ್ಯತಾಂ ಸಪ್ರಮಾಣೀಕರೋತಿ– **ಅಸತ್ಯಮಿತಿ** ॥ ಸೋಽಪಿ ಕೃಷ್ಣೋಽಪಿ । ಅತಃ ಜಗನ್ಮಿಥ್ಯಾತ್ವಸ್ಯ ಕೃಷ್ಣಾನಭಿಪ್ರೇತತ್ವಾತ್ । ಅತಿಭೀತಃ ಸ್ವವಿನಿಂದಿತಮತಪರಿಗ್ರಹೇ ಮಾಮಪಿ ಹನಿಷ್ಯತೀತಿ ಭಯವಾನ್ ॥ ೫೪–೫೭ ॥

**ವಿವರಣೆ** - 'ಅತೋಽತಿಭೀತೋ ಯಾತೋಹಂ' ಎಂಬ ರಾಜರ ಮಾತು ಅತ್ಯಂತ ಸ್ವರಸವಾದುದು. ತತ್ತ್ವವಾದದ ಮತಕ್ಕೆ ಸಜ್ಜನರನ್ನು ಕರೆತರುವುದಕ್ಕಾಗಿ ಇಂತಹ ಮಾತುಗಳನ್ನು ಅನೇಕ ಬಾರಿ ಆಡಿದ್ದಾರೆ. ರಾಜರಿಗೆ ಮಾಯಾವಾದಿಗಳಿಂದ ಭಯವು ಇಲ್ಲವೇ ಇಲ್ಲ. ಆದರೆ, ಭಗವಂತನಿಗೆ ಅಪ್ರಿಯವಾದ್ದರಿಂದ ಮಾಯಾವಾದ ಮತವನ್ನು ಆಶ್ರಯಿಸಲು ಭಯವಿದೆ. ಆಶ್ರಯಿಸಿದರೆ ನನ್ನನ್ನು ಹರಿ ಕೊಲ್ಲುವನು ಎಂದು ರಾಜರು ಭಯಪಡುತ್ತಾರೆ. ಭಯಪಡಬೇಕು.

'ದುಷ್ಕರ್ಮಕ್ಕೆ ಹೆದರದಿರುವ ಮಕ್ಕಳಿಗೆ ತಂದೆಯೋ ತಾಯಿಯೋ' ನಾನಂತೂ ಕಲಿಗೆ ಹೆದರುತ್ತೇನೆ ಎಂದರೆ ಮಾತ್ರ ಮಕ್ಕಳೂ ಹೆದರಿ ತಂದೆ-ತಾಯಂದಿರ ಮಾರ್ಗವನ್ನು ಅನುಸರಿಸುತ್ತಾರೆ. ಇದರಂತೆ ಮಾತೃಹೃದಯದ ರಾಜರೂ 'ನಾನಂತೂ ಜಗನ್ಮಿಥ್ಯಾತ್ವ ವಾದಕ್ಕೆ ಹೆದರುತ್ತೇನೆ' ಎಂದರೆ, ಪ್ರಾಮಾಣಿಕರಾದ ಸಜ್ಜನರೂ ತತ್ವವಾದಕ್ಕೆ ಬರುತ್ತಾರೆ. ರಾಜರೆಂಬ ತಾಯಿಯ ಮಾರ್ಗವನ್ನು ಮಕ್ಕಳಾದ ನಾವು ಅನುಸರಿಸಬೇಕೆಂದು ಭಾವ. ಗುಣಸೌರಭದಲ್ಲಿ ಇಂತಹುದೇ ಒಂದು ಮಾತಿದೆ ನೋಡಿ.

ಅತೋಮಾಯಾವಾದಮತಾನ್ನಾಮ್ನೈವಾತಿಜುಗುಪ್ಸಿತಾತ್ ।
ಭೀತೋಹಮಭಜಂ ತತ್ವವಾದಿನಾಮೇವ ಪದ್ಧತಿಮ್ (೧-೨೦)

ಈ ಶ್ಲೋಕಕ್ಕೆ ಸುರೋತ್ತಮತೀರ್ಥರು ಇದು ಶಾಸ್ತ್ರಸಮ್ಮತವಾದ ಭಯವೆಂದು ಪ್ರತಿಪಾದಿಸಿದ್ದಾರೆ.

ನಿಂದಾಂ ಭಗವತಃ ಶೃಣ್ವನ್ ತತ್ಪರಸ್ಯ ಜನಸ್ಯ ವಾ ।
ತತೋನಾಪೈತಿ ಯಸೋಽಪಿ ಯಾತ್ಯಧಃ ಸುಕೃತಾಚ್ಚ್ಯುತಃ ॥

ಹರಿನಿಂದನೆ-ಹರಿಭಕ್ತರ ನಿಂದನೆ ನಡೆಯುವ ಸ್ಥಳದಿಂದ ಹೆದರಿ ಅಲ್ಲಿಂದ ಕದಲದಿದ್ದರೆ ಅವನು ಪುಣ್ಯದಿಂದ ವಂಚಿತನಾಗಿ ಅಧಃಪತನಕ್ಕೆ ತುತ್ತಾಗುತ್ತಾನೆ ಎಂಬ ಪ್ರಮಾಣದ ಆಧಾರದಿಂದ ರಾಜರು ಹೆದರಿದ್ದೇನೆ ಎಂದು ಹೇಳಿದ್ದಾರೆ.

ಪ್ರಕಾರಾಂತರದಿಂದ ಮಿಥ್ಯಾತ್ವವಾದದ ನಿರಾಕರಣೆ -

ಭವತೀತಿ ಹಿ ಭೂರೇಷಾ ತದಭಾವಃ ಕಥಂ ವದ ।
ದೇಹಾಭಾವೇ ಕಥಂ ವಾಕ್ ತೇ ತಸ್ಯ ಸತ್ತ್ವೇಽಪಿ ಸಾ ಕಥಮ್ ॥ ೫೮ ॥

**ಅರ್ಥ**– ಏಷಾ ಭೂಃ= ಈ ಭೂ ಎಂಬ ಶಬ್ದವು, ಭವತಿ= ಇರುತ್ತದೆ, ಇತಿ= ಎಂಬ ಅರ್ಥದಲ್ಲಿ, ಹಿ= ಇದೆಯಷ್ಟೇ, ಆದ್ದರಿಂದ ತದಭಾವಃ= ಜಗತ್ತಿನ ಅಭಾವವು, ಕಥಂ= ಹೇಗೆಂದು, ವದ= ಹೇಳು, ದೇಹಾಭಾವೇ= ಪಾಂಚಭೌತಿಕದೇಹವೇ ಇಲ್ಲವೆಂದಾದರೆ, ತೇ= ನಿನ್ನ, ವಾಕ್= ಜಗನ್ಮಿಥ್ಯಾ ಎಂಬ ಮಾತು, ಕಥಂ= ಹೇಗೆ ಸತ್ಯವಾದೀತು ಎಂದು ಹೇಳು.

ಕಾರಣದಿಂದಲೇ ಅತಿಭೀತಃ= ಕೃಷ್ಣನಿಂದ ಅತಿನಿಂದಿತವಾದ ಮತವನ್ನು ಸ್ವೀಕರಿಸಿದರೆ ಅವರಂತೆ ನನ್ನನ್ನೂ ಸಂಹರಿಸಿಯಾನು ಎನ್ನುವ ಭಯವನ್ನು ಹೊಂದಿದವನಾಗಿ ಸತ್ಯತ್ವವೇದಿನಾಂ= ಜಗತ್ಸತ್ಯತ್ವವನ್ನು ತಿಳಿದಿರುವ, ವೇದಾನುಮೋದಿನಾಂ= ವೇದವನ್ನು ಅನುಸರಿಸಿರುವ, ವೈರಿಭೇದಿನಾಂ= ಪರವಾದಿಗಳೆಂಬ ವೈರಿಗಳನ್ನು ಖಂಡಿಸುವ, ತತ್ವವಾದಿನಾಂ= ತತ್ವವಾದಿಗಳ, ಮತಂ = ಸಿದ್ಧಾಂತವನ್ನು, ಯಾತೋಹಂ= ನಾನು ಅನುಸರಿಸಿದ್ದೇನೆ.

**ಅನುವಾದ** - ಕೃಷ್ಣನು ದೈವಾಸುರಸಂಪದ್ವಿಭಾಗಯೋಗವೆಂಬ ಹದಿನಾರನೇ ಅಧ್ಯಾಯದಲ್ಲಿ ಆಸುರೀಗುಣಿಗಳಲ್ಲಿ ಜಗನ್ಮಿಥ್ಯಾತ್ವ ವಾದಿಗಳನ್ನು ಸೇರಿಸಿದ್ದಾನೆ. ಆಸುರೀಗುಣದವರು ಈ ಜಗತ್ತು 'ಮಿಥ್ಯಾ ಬಾಧಜ್ಞಾನದಿಂದ ವಿನಾಶ್ಯ, ನಿಯಮ್ಯವಲ್ಲ, ಕಾರ್ಯಕಾರಣ ಅಸಂಬದ್ಧ, ಸದಸದ್ವಿಲಕ್ಷಣ ಎಂದೆಲ್ಲಾ ಹೇಳುತ್ತಾರೆ. ವಿವೇಕಹೀನರಾದ ಇವರು ಅನ್ಯಥಾಜ್ಞಾನವನ್ನು ಆಶ್ರಯಿಸಿದವರಾಗಿ ಆತ್ಮನಾಶಕ್ಕೀಡಾಗುತ್ತಿದ್ದಾರೆ. ಜಗತ್ತಿನ ನಾಶಕರಾಗಿ ಕ್ರೂರಕರ್ಮಿಗಳಾಗಿ, ಅಹಿತಕಾರಿಗಳಾಗಿ ಪುನಃ ಪುನಃ ಹುಟ್ಟುತ್ತಿದ್ದಾರೆ.

ಹೀಗೆ ಕೃಷ್ಣನು ಜಗನ್ಮಿಥ್ಯಾತ್ವವಾದಿಗಳಿಗೆ 'ಜಗತ್ತಿನ ನಾಶಕರು, 'ಜಗತ್ತಿನ ಕಂಟಕರು' ಎಂಬ ದೋಷಗಳ ಪಟ್ಟಿಯನ್ನು ಸೂಚಿಸಿದ್ದಾನೆ. ಕೃಷ್ಣನ ಮಾತು ಪರಮ ಪ್ರಾಮಾಣಿಕ. ಏಕೆಂದರೆ ಈ ಸತ್ಯಭೂತವಾದ ಜಗತ್ತಿನ ಸೃಷ್ಟಿಕರ್ತನು ಕೃಷ್ಣನೇ ಆಗಿದ್ದಾನೆ. ಆದ್ದರಿಂದಲೇ ತನ್ನ ಸಿದ್ಧಾಂತಕ್ಕೆ ವಿರುದ್ಧವಾಗಿ ಉದ್ಧಟರಾಗಿ ವರ್ತಿಸುವವರನ್ನು ಸಂಹರಿಸುತ್ತಾನೆ. ಇಲ್ಲಿ ಸಂಹಾರವೆಂದರೆ ಸುಖದ ಸಂಹಾರವೇ ಆಗಿದೆ.

'ಜಗನ್ಮಿಥ್ಯಾತ್ವವು ಕೃಷ್ಣನಿಗೆ ಅಸಮ್ಮತವಾದ ಕಾರಣದಿಂದಲೇ ಇಂತಹ ಅತಿನಿಂದಿತವಾದ ಮತವನ್ನು ಸ್ವೀಕರಿಸಿದರೆ ಅವರಂತೆ ನನ್ನನ್ನೂ ಸಂಹರಿಸುತ್ತಾನೆ ಎನ್ನುವ ಭಯವನ್ನು ನಾನು (ವಾದಿರಾಜ ಮುನಿಯು) ಹೊಂದಿ, ತತ್ತ್ವವಾದಿಗಳ ಸಿದ್ಧಾಂತವನ್ನು ಅನುಸರಿಸಿದ್ದೇನೆ'.

ತತ್ತ್ವವಾದಿಗಳಾದರೂ ಕೃಷ್ಣನಿಗೆ ಸಮ್ಮತವಾಗುವಂತೆ ಜಗತ್ಸತ್ಯತ್ವವನ್ನು ಪ್ರತಿಪಾದಿಸುತ್ತಾರೆ. ವೇದಗಳಿಗೆ ಅನುಗುಣವಾಗಿ ಮಾತನಾಡುತ್ತಾರೆ. ಪರವಾದಿ ಭಯಂಕರರಾಗಿದ್ದಾರೆ. ಆದ್ದರಿಂದ ಶ್ರುತಿ ಸ್ಮೃತಿ ಸಮ್ಮತವಾದ ಮತವನ್ನೇ ನಾನು ಆಶ್ರಯಿಸಿದ್ದೇನೆ.

**ಭಾವವಿಲಾಸಿನೀ–** ಕೃಷ್ಣಾವತಾರಕಥಯಾಪಿ ಜಗತ್ಸತ್ಯತಾಂ ಸಪ್ರಮಾಣೀಕರೋತಿ– **ಅಸತ್ಯಮಿತಿ ॥** ಸೋऽಪಿ ಕೃಷ್ಣೋऽಪಿ । ಅತಃ ಜಗನ್ಮಿಥ್ಯಾತ್ವಸ್ಯ ಕೃಷ್ಣಾನಭಿಪ್ರೇತತ್ವಾತ್ । ಅತಿಭೀತಃ ಸ್ವವಿನಿಂದಿತಮತಪರಿಗ್ರಹೇ ಮಾಮಪಿ ಹನಿಷ್ಯತೀತಿ ಭಯವಾನ್ ॥ ೫೪–೫೭ ॥

**ವಿವರಣೆ -** 'ಅತೋಽತಿಭೀತೋ ಯಾತೋಹಂ' ಎಂಬ ರಾಜರ ಮಾತು ಅತ್ಯಂತ ಸ್ವರಸವಾದುದು. ತತ್ತ್ವವಾದದ ಮತಕ್ಕೆ ಸಜ್ಜನರನ್ನು ಕರೆತರುವುದಕ್ಕಾಗಿ ಇಂತಹ ಮಾತುಗಳನ್ನು ಅನೇಕ ಬಾರಿ ಆಡಿದ್ದಾರೆ. ರಾಜರಿಗೆ ಮಾಯಾವಾದಿಗಳಿಂದ ಭಯವು ಇಲ್ಲವೇ ಇಲ್ಲ. ಆದರೆ, ಭಗವಂತನಿಗೆ ಅಪ್ರಿಯವಾದ್ದರಿಂದ ಮಾಯಾವಾದ ಮತವನ್ನು ಆಶ್ರಯಿಸಲು ಭಯವಿದೆ. ಆಶ್ರಯಿಸಿದರೆ ನನ್ನನ್ನು ಹರಿ ಕೊಲ್ಲುವನು ಎಂದು ರಾಜರು ಭಯಪಡುತ್ತಾರೆ. ಭಯಪಡಬೇಕು.

'ದುಷ್ಕರ್ಮಕ್ಕೆ ಹೆದರದಿರುವ ಮಕ್ಕಳಿಗೆ ತಂದೆಯೋ ತಾಯಿಯೋ' ನಾನಂತೂ ಕಲಿಗೆ ಹೆದರುತ್ತೇನೆ ಎಂದರೆ ಮಾತ್ರ ಮಕ್ಕಳೂ ಹೆದರಿ ತಂದೆ-ತಾಯಂದಿರ ಮಾರ್ಗವನ್ನು ಅನುಸರಿಸುತ್ತಾರೆ. ಇದರಂತೆ ಮಾತೃಹೃದಯದ ರಾಜರೂ 'ನಾನಂತೂ ಜಗನ್ಮಿಥ್ಯಾತ್ವ ವಾದಕ್ಕೆ ಹೆದರುತ್ತೇನೆ' ಎಂದರೆ, ಪ್ರಾಮಾಣಿಕರಾದ ಸಜ್ಜನರೂ ತತ್ವವಾದಕ್ಕೆ ಬರುತ್ತಾರೆ. ರಾಜರೆಂಬ ತಾಯಿಯ ಮಾರ್ಗವನ್ನು ಮಕ್ಕಳಾದ ನಾವು ಅನುಸರಿಸಬೇಕೆಂದು ಭಾವ. ಗುಣಸೌರಭದಲ್ಲಿ ಇಂತಹುದೇ ಒಂದು ಮಾತಿದೆ ನೋಡಿ.

**ಅತೋಮಾಯಾವಾದಮತಾನ್ನಾಮ್ನೈವಾತಿಜುಗುಪ್ಸಿತಾತ್ ।**
**ಭೀತೋಹಮಭಜಂ ತತ್ವವಾದಿನಾಮೇವ ಪದ್ಧತಿಮ್ (೧-೨೦)**

ಈ ಶ್ಲೋಕಕ್ಕೆ ಸುರೋತ್ತಮತೀರ್ಥರು ಇದು ಶಾಸ್ತ್ರಸಮ್ಮತವಾದ ಭಯವೆಂದು ಪ್ರತಿಪಾದಿಸಿದ್ದಾರೆ.

ನಿಂದಾಂ ಭಗವತಃ ಶೃಣ್ವನ್ ತತ್ಪರಸ್ಯ ಜನಸ್ಯ ವಾ ।
ತತೋನಾಪೈತಿ ಯಸೋಽಪಿ ಯಾತ್ಯಧಃ ಸುಕೃತಾಚ್ಚ್ಯುತಃ ॥

ಹರಿನಿಂದನೆ-ಹರಿಭಕ್ತರ ನಿಂದನೆ ನಡೆಯುವ ಸ್ಥಳದಿಂದ ಹೆದರಿ ಅಲ್ಲಿಂದ ಕದಲದಿದ್ದರೆ ಅವನು ಪುಣ್ಯದಿಂದ ವಂಚಿತನಾಗಿ ಅಧಃಪತನಕ್ಕೆ ತುತ್ತಾಗುತ್ತಾನೆ ಎಂಬ ಪ್ರಮಾಣದ ಆಧಾರದಿಂದ ರಾಜರು ಹೆದರಿದ್ದೇನೆ ಎಂದು ಹೇಳಿದ್ದಾರೆ.

ಪ್ರಕಾರಾಂತರದಿಂದ ಮಿಥ್ಯಾತ್ವವಾದದ ನಿರಾಕರಣೆ -

**ಭವತೀತಿ ಹಿ ಭೂರೇಷಾ ತದಭಾವಃ ಕಥಂ ವದ ।**
**ದೇಹಾಭಾವೇ ಕಥಂ ವಾಕ್ ತೇ ತಸ್ಯ ಸತ್ತ್ವೇಽಪಿ ಸಾ ಕಥಮ್ ॥ ೫೮ ॥**

**ಅರ್ಥ–** ಏಷಾ ಭೂಃ= ಈ ಭೂ ಎಂಬ ಶಬ್ದವು, ಭವತಿ= ಇರುತ್ತದೆ, ಇತಿ= ಎಂಬ ಅರ್ಥದಲ್ಲಿ, ಹಿ= ಇದೆಯಷ್ಟೇ, ಆದ್ದರಿಂದ ತದಭಾವಃ= ಜಗತ್ತಿನ ಅಭಾವವು, ಕಥಂ= ಹೇಗೆಂದು, ವದ= ಹೇಳು, ದೇಹಾಭಾವೇ= ಪಾಂಚಭೌತಿಕದೇಹವೇ ಇಲ್ಲವೆಂದಾದರೆ, ತೇ= ನಿನ್ನ, ವಾಕ್= ಜಗನ್ಮಿಥ್ಯಾ ಎಂಬ ಮಾತು, ಕಥಂ= ಹೇಗೆ ಸತ್ಯವಾದೀತು ಎಂದು ಹೇಳು.

ತಸ್ಯ= ದೇಹದ, ಸತ್ವೇಪಿ= ಅಸ್ತಿತ್ವವಿದ್ದರೂ, ಸಾ= ಆ ದೇಹವು ಮಿಥ್ಯಾ, ಎಂಬ ಮಾತು, ಕಥಂ= ಹೇಗೆ ಸತ್ಯವಾದೀತೆಂದು ಹೇಳು.

**ಅನುವಾದ** - 'ಭವತಿ ಇತಿ ಭೂಃ' ಎಂಬ ವ್ಯುತ್ಪತ್ತಿಯಿಂದ ಭೂ ಎಂದರೆ ಇರುವುದು ಎಂದೇ ಅರ್ಥ. ಆದ್ದರಿಂದ ಇಲ್ಲದಿರುವುದು ಜಗತ್ತು ಎಂದು ಹೇಗೆ ಹೇಳುತ್ತೀ ಹೇಳು! ಇಷ್ಟೇ ಅಲ್ಲದೆ, ಪಂಚಭೂತಾತ್ಮಕವಾದ ಜಗತ್ತೇ ಇಲ್ಲವೆನ್ನುವಿಯಾದರೆ ಪಂಚಭೂತಾತ್ಮಕವಾದ ನಿನ್ನ ದೇಹವೂ ಇಲ್ಲ ಎಂದು ಹೇಳಿದಂತಾಗುತ್ತದೆ. ದೇಹವೇ ಇಲ್ಲ ಎಂದಾದರೆ ನಾಲಿಗೆ ಇಲ್ಲವಾಗುವುದರಿಂದ 'ಜಗನ್ಮಿಥ್ಯಾತ್ವ' ಮಾತನ್ನಾದರೂ ಹೇಗೆ ಹೇಳುತ್ತೀ ಹೇಳು!! ಹಾಗೆ ಹೇಳಿದರೆ 'ನಾನು ಮೂಕ' ಎನ್ನುವಂತೆ ಅಸಂಬದ್ಧವಾದೀತು. ಇನ್ನು ದೇಹದ ಸತ್ಯತ್ವವನ್ನು ನೀನು ಅಂಗೀಕರಿಸಿದರೂ 'ದೇಹವೂ ಮಿಥ್ಯಾ' ಎಂಬ ಮಾತನ್ನು ಹೇಗೆ ಹೇಳುತ್ತೀ ಹೇಳು!! ಹಾಗೆ ಹೇಳಿದರೆ 'ನನ್ನ ತಾಯಿ ಬಂಜೆ' ಎಂದಂತೆ ಅಸಂಬದ್ಧವಾದೀತು.

ಮುಂದೆ ತತ್ವವಾದಿಗಳ ದೃಷ್ಟಿಯಿಂದ ಜಗತ್ಸತ್ವವು ಹೇಗೆ ಎಂದು ಹೇಳುತ್ತಾರೆ -

ನಿಮಿತ್ತಂ ಕಾಲಕರ್ಮಾದಿ ಕರ್ತಾ ನಾರಾಯಣಃ ಪ್ರಭುಃ ॥ ೫೯ ॥

ಉಪಾದಾನಂ ತು ಸೈವೈಕಾ ಪ್ರಕೃತಿಸ್ತ್ರಿಗುಣಾತ್ಮಿಕಾ ।
ಇತಿ ಶ್ರುತಿಪುರಾಣಾದ್ಯೈರ್ಜಗತಃ ಸೃಷ್ಟಿರೀರ್ಯತೇ ॥ ೬೦ ॥

**ಅರ್ಥ–** ಕಾಲಕರ್ಮಾದಿ ನಿಮಿತ್ತಂ= ಕಾಲ ಕರ್ಮಾದಿಗಳು ನಿಮಿತ್ತ, ಪ್ರಭುಃ= ಸರ್ವ ಸಮರ್ಥನಾದ, ನಾರಾಯಣಃ= ಶ್ರೀಮನ್ನಾರಾಯಣನು, ಕರ್ತಾ= ಸ್ವತಂತ್ರವಾಗಿ ಸೃಷ್ಟಿ ಮಾಡುವವನು, ತ್ರಿಗುಣಾತ್ಮಿಕಾ= ಸತ್ವ-ರಜಸ್-ತಮಸ್ಸು ಎಂಬ ಮೂರು ಗುಣಸ್ವರೂಪಳಾದ, ಏಕಾ=ಪ್ರಧಾನಳಾದ, ಸೈವ ಪ್ರಕೃತಿಃ= ಆ ಪ್ರಕೃತಿಯು, ಉಪಾದಾನಂ ತು= ಉಪಾದಾನ ಕಾರಣ! ಇತಿ= ಈ ರೀತಿಯಾಗಿ, ಜಗತ್ಸೃಷ್ಟಿ= ಜಗತ್ತಿನ ಸೃಷ್ಟಿಯು, ಶ್ರುತಿಸ್ಮೃತಿಪುರಾಣಾದ್ಯೈಃ= ಶ್ರುತಿ-ಸ್ಮೃತಿ-ಪುರಾಣಾದಿಗಳಲ್ಲಿ, ಈರ್ಯತೇ= ಹೇಳಲ್ಪಡುತ್ತದೆ.

**ಅನುವಾದ** - ಕಾಲ-ಕರ್ಮಾದಿಗಳು ನಿಮಿತ್ತಕಾರಣಗಳು. ಸರ್ವಸಮರ್ಥನಾದ ನಾರಾಯಣನು ಜಗತ್ತಿಗೆ ಕರ್ತಃ. ತ್ರಿಗುಣಾತ್ಮಕ ಜಡ ಪ್ರಕೃತಿಯು ಜಗತ್ತಿಗೆ ಉಪಾದಾನ ಕಾರಣವಾಗಿದೆ. ಇದು ಜಗತ್ಸೃಷ್ಟಿಯ ಕ್ರಮ. ಇದೇ ಸಕಲ ಶ್ರುತಿ-ಸ್ಮೃತಿ-ಪುರಾಣಗಳಲ್ಲಿ ಹೇಳಿರುವ ಕ್ರಮ.

**ವಿವರಣೆ** - ಜಗತ್ತು ಮಿಥ್ಯಾ ಎಂದರೆ ಹಗ್ಗದಲ್ಲಿ ಕಂಡ ಹಾವಿನಂತೆ ಎಂದಂತಾಗುವುದು. ಆದರೆ ಈ ಹಾವಿನಂತೆ ಜಗತ್ತು ಬರಿಕಲ್ಪನೆಯಲ್ಲ. ಅದಕ್ಕೆ ಸೃಷ್ಟಿಯಿದೆ. ಸೃಷ್ಟಿಗೆ ಬೇಕಾಗುವ ನಿಮಿತ್ತ ಉಪಾದಾನ ಕರ್ತಾ ಮೂವರೂ ಇರುವಾಗ ಸೃಷ್ಟಿ ಇಲ್ಲ ಎನ್ನಬಾರದು.

**ಮಾಯಾಖ್ಯಾ ಪ್ರಕೃತೇರಸ್ತಿ ತೇನ ಮಾಯಾಮಯಾಭಿದಾ ।**
**ಪ್ರಾಕೃತಾಖ್ಯಾ ಚ ಜಗತಃ ಪ್ರೋಚ್ಯತೇ ತತ್ರತತ್ರ ಹಿ ॥ ೬೧ ॥**

**ಅರ್ಥ–** ಮಾಯಾಖ್ಯಾ= ಮಾಯೆ ಎಂಬ ಹೆಸರು, ಪ್ರಕೃತೇಃ= ಪ್ರಕೃತಿ ತತ್ವಕ್ಕೆ, ಅಸ್ತಿ= ಇದೆ, ತೇನ= ಆದುದರಿಂದ, ಜಗತ್ತಿಗೆ ಮಾಯಾಮಯಾಭಿದಾ= ಮಾಯಾಮಯ ಎಂದು ಹೆಸರು, ಚ= ಮತ್ತು, ಜಗತಃ= ಜಗತ್ತಿಗೆ, ತತ್ರ ತತ್ರ= ವೇದ ಪುರಾಣಗಳಲ್ಲಿ, ಪ್ರಾಕೃತಾಖ್ಯಾ= ಪ್ರಾಕೃತ ಎಂಬ ಹೆಸರು, ಪ್ರೋಚ್ಯತೇ ಹಿ= ಹೇಳಲ್ಪಡುತ್ತದೆಯಷ್ಟೆ!

**ಅನುವಾದ -** ಇನ್ನು ಶ್ರುತಿಯಲ್ಲಿ ಅಲ್ಲಲ್ಲಿ ಜಗತ್ತು 'ಮಾಯಾಮಯ' ಎಂದು ಹೇಳಿದ್ದಾರಲ್ಲ ಎಂದರೆ, ಇಲ್ಲಿ ಮಾಯೆ ಎಂದರೆ ಪ್ರಕೃತಿಯೇ ಹೊರತು ಅದ್ವೈತಿ ಹೇಳುವ ಅವಿದ್ಯೆಯು ಅಲ್ಲ. ಏಕೆಂದರೆ ಪ್ರಾಕೃತವೆಂದೂ ಜಗತ್ತನ್ನು ವೇದ ಪುರಾಣಗಳಲ್ಲಿ ಹೇಳಿದೆ. ಪ್ರಕೃತಿಯ ನಾಮಾಂತರವೇ 'ಮಾಯಾ' ತ್ರಿಗುಣಾತ್ಮಕವಾದ ಜಡ ಪ್ರಕೃತಿಯನ್ನಿಟ್ಟುಕೊಂಡು ಜಗತ್ತನ್ನು 'ಮಾಯಾಮಯ' ಎಂಬ ಶಬ್ದದಿಂದ ಶ್ರುತಿಯು ಹೇಳುತ್ತದೆ. ಅದರಿಂದ ಅಜ್ಞಾನದ ಕಾರ್ಯ ಜಗತ್ತು ಅಜ್ಞಾನವೇ ಜಗತ್ತಾಗಿ ಪರಿಣಮಿಸಿದೆ. ಅದರಿಂದ ಮಿಥ್ಯೆ ಎನ್ನುವುದು ಯುಕ್ತವಲ್ಲ. ಜಗತ್ತು ಜ್ಞಾನನಿವರ್ತ್ಯವಲ್ಲ.

**ಭಾವವಿಲಾಸಿನೀ–** ತಸ್ಯ ದೇಹಸ್ಯ ಸಾ ದೇಹಮಿಥ್ಯಾತ್ವವಾಕ್ ॥ ೫೮-೬೧ ॥

**ಬ್ರಹ್ಮಜ್ಞಾನನಿವರ್ತ್ಯತ್ವಮೇಷಾಂ ನ ಶ್ರೂಯತೇ ಕ್ವಚಿತ್ ।**
**ಅತೋ ಮಿಥ್ಯಾತ್ವಮಪ್ಯೇಷಾಮಾಗ್ರಹಾದೇವ ಕೇವಲಮ್ ॥ ೬೨ ॥**

**ಅರ್ಥ–** ಏಷಾಂ= ಮಹದಾದಿ ತತ್ವಗಳಿಗೆ, ಬ್ರಹ್ಮಜ್ಞಾನನಿವರ್ತ್ಯತ್ವಂ= ಬ್ರಹ್ಮಜ್ಞಾನದಿಂದ ಕಾಣದೆ ಹೋಗುವಿಕೆಯು, ಕ್ವಚಿತ್= ಯಾವ ಶ್ರುತಿಸ್ಮೃತಿಪುರಾಣಗಳಲ್ಲಿಯೂ, ನ ಶ್ರೂಯತೇ= ಕೇಳಲ್ಪಡುವುದಿಲ್ಲ, ಅತಃ= ಆದಕಾರಣದಿಂದ, ಏಷಾಂ= ಮಹದಾದಿ ತತ್ವಗಳ, ಮಿಥ್ಯಾತ್ವಮಪಿ= ಮಿಥ್ಯಾತ್ವವೂ ಕೂಡ, ಕೇವಲಂ= ಕೇವಲ, ಏಷಾಮಾಗ್ರಹಾದೇವ= ಈ ಮಾಯಾವಾದಿಗಳ ಆಗ್ರಹದಿಂದಲೇ (ಹೇಳಲ್ಪಟ್ಟಿರುತ್ತದೆ).

**ಅನುವಾದ -** ಹಗ್ಗವನ್ನು ಹಗ್ಗವೆಂದು ತಿಳಿದಾಗ ಹಾವು ನಿವೃತ್ತವಾಗುತ್ತದೆ. ಹಾಗೆ ಬ್ರಹ್ಮಜ್ಞಾನದಿಂದ ಜಗತ್ತು ನಿವೃತ್ತವಾಗುತ್ತದೆ. ಅದರಿಂದ ಜಗತ್ತು ಮಿಥ್ಯಾ ಎಂದು ಅದ್ವೈತ ಹೇಳುವುದಕ್ಕೆ ಏನೂ ಪ್ರಮಾಣವಿಲ್ಲ. ಮಹದಾದಿ ಚತುರ್ವಿಂಶತಿ ತತ್ವಗಳು ಬ್ರಹ್ಮಜ್ಞಾನದಿಂದ ನಿವೃತ್ತಿಯನ್ನು ಹೊಂದುತ್ತದೆ. (ಬ್ರಹ್ಮಜ್ಞಾನ ಬಂದ ಬಳಿಕ ಜಗತ್ತೆಲ್ಲವೂ ಮಿಥ್ಯಾ ಆಗುತ್ತದೆ) ಎಂದು ಹೇಳಿದ ನಿನಗೆ ಯಾವ ಪ್ರಮಾಣದ ಆಧಾರವೂ ಇಲ್ಲ, ಕೇವಲ ಆಗ್ರಹದಿಂದ ತತ್ವಗಳನ್ನು ಮಿಥ್ಯಾ ಎಂದು ಹೇಳುತ್ತಿರುವಿ!!

**ಭಾವವಿಲಾಸಿನೀ–** ಏಷಾಂ ಮಹದಾದೀನಾಮ್ ॥ ೬೨ ॥

**ವಿವರಣೆ -** 'ಅನಂತದೋಷದುಷ್ಟತ್ವಾತ್ ಹೇಯಂ ಮಾಯಾಮತಂ ಶುಭೈಃ' ಎಂಬ ಅನುವ್ಯಾಖ್ಯಾನದ ವಚನವನ್ನು ಇಲ್ಲಿ ಅನುಸಂಧಾನಕ್ಕೆ ತಂದುಕೊಳ್ಳಬೇಕು. ಅವಿದ್ಯಾ ಪರಿಣಾಮವೇ ಜಗತ್ತು. ಆದ್ದರಿಂದ ಜ್ಞಾನನಿವರ್ತ್ಯ ಎಂಬುದಕ್ಕೆ ಪ್ರಮಾಣವಿಲ್ಲ. ಪ್ರಕೃತಿಕಾರ್ಯ ಎನ್ನಲು ಪ್ರಮಾಣವಿದೆ ಎಂದು ಮುಂದಿನ ಮಾತಿನಲ್ಲಿ ಹೇಳುತ್ತಿದ್ದಾರೆ.

ಮಯಾಽಧ್ಯಕ್ಷೇಣ ಪ್ರಕೃತಿಃ ಸೂಯತೇ ಸಚರಾಚರಮ್ ।
ಇತಿ ಪ್ರಕೃತಿಕಾರ್ಯತ್ವಂ ಗೀತೋಕ್ತಮನುಸಂಸ್ಮರ ॥ ೬೩ ॥

**ಅರ್ಥ–** ಅಧ್ಯಕ್ಷೇಣ= ಅಧ್ಯಕ್ಷನಾದ, ಮಯಾ= ನನ್ನಿಂದ, ಸಚರಾಚರಂ= ಚರಾಚರಾತ್ಮಕವಾದ ಪ್ರಪಂಚವನ್ನೂ, ಪ್ರಕೃತಿಃ= ಪ್ರಕೃತಿಯೂ, ಸೂಯತೇ= ಹಡೆಯುತ್ತಾಳೆ, ಇತಿ= ಇಂತೆಂಬ, ಗೀತೋಕ್ತಂ= ಗೀತೆಯಲ್ಲಿ ಹೇಳಿದ ಪ್ರಕೃತಿಕಾರ್ಯತ್ವಂ= ಜಗತ್ತು, ಪ್ರಕೃತಿಯ ಕಾರ್ಯ ಎಂಬುದನ್ನು (ಜಗತ್ತಿಗೆ ಪ್ರಕೃತಿ ಕಾರ್ಯತ್ವವನ್ನು) ಅನುಸಂಸ್ಮರ=ಸ್ಮರಣೆಗೆ ತಂದುಕೊ!!

**ಅನುವಾದ -** ಶ್ರೀಕೃಷ್ಣನು ಗೀತೆಯಲ್ಲಿ 'ಜಗತ್ತಿಗೆ ಅಧ್ಯಕ್ಷ ನಾನು. ಚರಾಚರಾತ್ಮಕವಾದ ಪ್ರಪಂಚವು ಪ್ರಕೃತಿಯಿಂದ ನನ್ನಿಂದ ಹುಟ್ಟುತ್ತದೆ' ಎಂದು ಹೇಳಿದ್ದಾನೆ. 'ಉಪಾದಾನಕಾರಣವಾದ ಪ್ರಕೃತಿಯ ಕಾರ್ಯವೇ ಈ ಜಗತ್ತು' ಎಂಬ ಈ ಕೃಷ್ಣನ ಮಾತನ್ನು ಸ್ಮರಣೆಗೆ ತಂದುಕೋ. ಆಗ ನಿನಗೆ ಜಗತ್ತನ್ನು ಅವಿದ್ಯೋಪಾದಾನಕ' ಎಂದು ಹೇಳಲಾಗದು.

ತ್ವಿ
**ಭಾವವಿಲಾಸಿನೀ–** ಅಜ್ಞಾನನಿವರ್ತತ್ವಾಭಾವೇ ಕೇವಲಂ ಪ್ರಕೃತಿಕಾರ್ಯತ್ವೇ ಚ ಪ್ರಮಾಣಂ ಸ್ಮಾರಯತಿ ॥ ಮಯೇತಿ ॥ ೬೩ ॥

ಅಜ್ಞಾನೋಪಾದಾನಕತ್ವಾಭಾವಾತ್ ತನ್ನ ಮೃಷಾ ಜಗತ್ ।
ಅನಾದ್ಯನಂತಕಾಲೇಷು ನೈವಾಸ್ಯೋಪರಮಃ ಕಿಲ ।
ಕಥಂ ಮಿಥ್ಯಾತ್ವಮಸ್ಯ ಸ್ಯಾದ್ ಭ್ರಾಂತಿಸಿದ್ಧತ್ವಮೇವ ವಾ ॥ ೬೪ ॥

**ಅರ್ಥ–** ತತ್= ಹಿಂದೆ ಹೇಳಿದ ಗೀತಾವಾಕ್ಯದ ಬಲದಿಂದ, ಅಜ್ಞಾನೋಪಾದಾನಕತ್ವಾಭಾವಾತ್= ಜಗತ್ತಿನ ಉತ್ಪತ್ತಿಗೆ ಅಜ್ಞಾನವು ಉಪಾದಾನ ಕಾರಣವೆಂಬ ವಾದವು ಕೂಡುವುದಿಲ್ಲವಾದ ಕಾರಣದಿಂದ, ಜಗತ್= ಜಗತ್ತು, ನ ಮೃಷಾ= ಸುಳ್ಳಲ್ಲ, ಅಸ್ಯ= ಪ್ರತ್ಯಕ್ಷಸಿದ್ಧವಾದ ಜಗತ್ತಿಗೆ ಅನಾದ್ಯನಂತ ಕಾಲೇಷು= ಅನಾದ್ಯನಂತ ಕಾಲದಲ್ಲಿಯೂ, ಉಪರಮಃ= ಅಂತ್ಯವೆಂಬುದು, ನೈವಕಿಲ= ಇಲ್ಲವಷ್ಟೇ! ಆದ್ದರಿಂದ ಅಸ್ಯ= ಜಗತ್ತಿಗೆ, ಮಿಥ್ಯಾತ್ವಂ= ಜ್ಞಾನ

ಬಂದಾಗ ಕಾಣದೆ ಹೋಗುವಿಕೆಯಾಗಲಿ, ವಾ= ಅಥವಾ ಭ್ರಾಂತಿಸಿದ್ಧತ್ವಮೇವ= ಭ್ರಾಂತಿಯಲ್ಲಿಯೇ ಕಾಣುವುದಾಗಲಿ, ಕಥಂಸ್ಯಾತ್= ಹೇಗೆ ಹೊಂದಿಕೆಯಾದೀತು?

**ಅನುವಾದ** - ಅನೇಕ ಪ್ರಮಾಣಗಳಿಂದ ಜಗತ್ತಿಗೆ 'ಅಜ್ಞಾನೋಪಾದಾನಕತ್ವವು' ಇಲ್ಲವೆಂದಾಯಿತು. ಆದ್ದರಿಂದಲೇ ಜಗತ್ತು ಸುಳ್ಳಲ್ಲ, ಭ್ರಾಂತಿಯಲ್ಲಿ ಮಾತ್ರ ಕಾಣುವಂಥದ್ದಲ್ಲ ಮತ್ತು ಜಗತ್ತಿನ ಪ್ರವಾಹವು ನಿತ್ಯವಾದುದರಿಂದ ಅನಾದಿ-ಅನಂತ ಕಾಲದಲ್ಲಿಯೂ ಜಗತ್ತಿನ ಉಪರಮವೆಂಬುದಿಲ್ಲ. ಹೀಗಿರಲು ಇಂತಹ ಜಗತ್ತಿಗೆ ಜ್ಞಾನ ನಿವರ್ತ್ಯತ್ವವನ್ನೂ ನಿನ್ನಿಂದ ಹೇಳಲಾಗದು.

ವಿವರಣೆ - ಜಗತ್ಪ್ರವಾಹಃ ಸತ್ಯೋಯಂ ಪಂಚಭೇದ ಸಮನ್ವಿತಃ ।
ಪಂಚಭೇದಾಃ ಇಮೇ ನಿತ್ಯಾಃ ಸರ್ವಾವಸ್ಥಾಸು ಸರ್ವಶಃ ।
ಮುಕ್ತಾವಪಿ ನ ಹೀಯಂತೇ ॥

ಎಂಬ ಪ್ರಮಾಣವನ್ನು ಇಲ್ಲಿ ಸ್ಮರಿಸಿಕೊಳ್ಳಬಹುದು. ಜಗತ್ತು ನಿತ್ಯ ಎನ್ನಲು ಪ್ರಮಾಣ.

ಏವಮೇತದನಾದ್ಯಂತಂ ಭೂತಸಂಘಾತಕಾರಕಮ್ ।
ಅನಾದಿನಿಧನಂ ಲೋಕೇ ಚಕ್ರಂ ಸಂಪರಿವರ್ತತೇ ॥ ೬೫ ॥

ಇತಿ ಭಾರತವಾಕ್ಯೇನ ಹ್ಯನಾದ್ಯಂತತ್ವಮುಚ್ಯತೇ ।
ಅನಂತತ್ವಾದಬಾಧ್ಯಂ ಚ ಜಗದ್ ಬ್ರಹ್ಮವದೇವ ಹಿ ॥ ೬೬ ॥

**ಅರ್ಥ**– ಏವಂ= ಈ ಪ್ರಕಾರವಾಗಿ, ಏತತ್= ಈ ಜಗತ್ತು, ಅನಾದ್ಯಂತಂ= ಉತ್ಪತ್ತಿ ನಾಶವಿಲ್ಲದ್ದು, ಭೂತಸಂಘಾತಕಾರಕಂ= ಜೀವಸಮೂಹಗಳ ಸ್ಥಿತಿಗೆ ಕಾರಣವು, ಅನಾದಿನಿಧನಂ= ಉತ್ಪತ್ತಿ ನಾಶವಿಲ್ಲದ್ದು ಹೀಗೆ, ಲೋಕೇ= ವಿಶ್ವದಲ್ಲಿ, ಚಕ್ರಂ= ಜಗಚ್ಚಕ್ರವು, ಸಂಪರಿವರ್ತತೇ= ಸುತ್ತುತ್ತಲೇ ಇದೆ. ಇತಿ= ಈ ರೀತಿಯಾದ, ಭಾರತವಾಕ್ಯೇನ= ಮಹಾಭಾರತದ ವಾಕ್ಯದಿಂದ, ಅನಾದ್ಯಂತತ್ವಂ= ಅನಾದ್ಯನಂತತ್ವವು ಉಚ್ಯತೇ ಹಿ= ಹೇಳಲ್ಪಟ್ಟಿದೆಯಷ್ಟೇ! ಆದ್ದರಿಂದ ಜಗಚ್ಚ= ಜಗತ್ತು ಕೂಡ ಬ್ರಹ್ಮವದೇವ = ಬ್ರಹ್ಮನಂತೆಯೇ, ಅನಂತತ್ವಾತ್= ಅನಂತನಾಗಿರುವುದರಿಂದ, ಅಬಾಧ್ಯಂ= ಬಾಧವಿಲ್ಲದ್ದು ಎಂದು, ಹಿ= ಸಿದ್ಧವಾಯಿತಷ್ಟೇ!!

**ಅನುವಾದ** - ಈ ಜಗತ್ತು ಅನಾದಿ ಅನಂತಕಾಲದಲ್ಲಿ ಅನೇಕ ಜೀವರ ಸ್ಥಿತಿಗೆ ಕಾರಣವಾಗಿದೆ. ಹೀಗೆ ನಿರಂತರ ಜಗಚ್ಚಕ್ರವು ನಡೆಯುತ್ತಿದೆ ಎಂದು ಮಹಾಭಾರತದಲ್ಲಿದೆ. ಇದರಿಂದ ಜಗತ್ತು ಅನಾದಿ ಅನಂತ ಕಾಲದಿಂದಲೂ ಅಬಾಧ್ಯವಾಗಿಯೇ ಇದೆ. ಬ್ರಹ್ಮನು ಹೇಗೆ ಅಬಾಧ್ಯನೋ ಜಗತ್ತೂ ಹಾಗೆ ಅಬಾಧ್ಯವು ಎಂದು ತಿಳಿಯುತ್ತಿದೆ.

**ಭಾವವಿಲಾಸಿನೀ**– ತದ್ಗೀತಾವಾಕ್ಯಬಲಾತ್ । ।೬೪-೬೬ ॥

**ಅತೋಽವಸಾನಂ ತನ್ನಿತ್ಯೇ ನ ಬ್ರಹ್ಮಣಿ ಜಗತ್ಯಪಿ ।**
**ಏಕಂ ಸ್ವರೂಪತೋ ನಿತ್ಯಂ ಅನ್ಯನ್ನಿತ್ಯಂ ಪ್ರವಾಹತಃ ॥ ೬೭ ॥**

**ಅರ್ಥ**– ಅತಃ= ಆದ್ದರಿಂದ, ತತ್= ಭಾರತಾದಿವಾಕ್ಯದ ಬಲದಿಂದ, ನಿತ್ಯೇ ಬ್ರಹ್ಮಣಿ= ನಿತ್ಯನಾದ ಪರಬ್ರಹ್ಮನಲ್ಲಿಯೂ, ಜಗತಿ ಅಪಿ= ಜಗತ್ತಿನಲ್ಲಿಯೂ, ಅವಸಾನಂ ನ= ನಾಶವಿಲ್ಲ (ಎಂಬುದು ಸಿದ್ಧವಾಯಿತು), ಏಕಂ= ಇವುಗಳಲ್ಲಿ ಒಂದಾದ ಪರಬ್ರಹ್ಮ ಎಂಬ ವಸ್ತುವು, ಸ್ವರೂಪತಃ= ಸ್ವಭಾವದಿಂದಲೇ, ನಿತ್ಯಂ- ನಿತ್ಯವಾದುದು, ಅನ್ಯತ್= ಬ್ರಹ್ಮನಿಗಿಂತ ಭಿನ್ನವಾದ, ಜಗತ್ತು ಪ್ರವಾಹತಃ ನಿತ್ಯಂ= ಪ್ರವಾಹತಃ ನಿತ್ಯವಾದುದು.

**ಅನುವಾದ** - ಆದ್ದರಿಂದ ಭಾರತ ಪ್ರಮಾಣವನ್ನನುಸರಿಸಿ ಜಗತ್ತು-ಪರಬ್ರಹ್ಮರಿಗೆ ಅಬಾಧ್ಯತ್ವವನ್ನು ನಿರ್ಣಯಿಸಿದಂತಾಯಿತು. ಇಲ್ಲಿ ಇಷ್ಟು ವ್ಯತ್ಯಾಸ. ಪರಬ್ರಹ್ಮನು ಸ್ವಭಾವದಿಂದಲೇ ನಿತ್ಯನು. ಜಗತ್ತು ಪ್ರವಾಹತಃ ನಿತ್ಯವು. ಅದರಲ್ಲಿಯೂ ಕಾಲ ಆಕಾಶ ಪ್ರಕೃತಿ ಮುಂತಾದವು ಸ್ವರೂಪತಃ ನಿತ್ಯವೇ.

**ಭಾವವಿಲಾಸಿನೀ**– ತದ್ಭಾರತಾದಿವಾಕ್ಯಬಲಾತ್ । ಏಕಂ ಬ್ರಹ್ಮ । ಅನ್ಯಜ್ಜಗತ್ । ಜಗತ್ಯಪಿ ಕಾಲಾಕಾಶಪ್ರಕೃತ್ಯಾದಿಕಂ ಬ್ರಹ್ಮವತ್ಸ್ವರೂಪತೋ ನಿತ್ಯಮಿತ್ಯಪಿ ದ್ರಷ್ಟವ್ಯಮ್ ॥ ೬೭ ॥

**ಮಾಯಾವಾದಿಗಳು ಹೇಳುವ 'ವಿಶ್ವಮಿಥ್ಯಾತ್ವ' 'ಬ್ರಹ್ಮಪರಿಣಾಮಿತ್ವ' ಮುಂತಾದ ಪಕ್ಷಗಳನ್ನು ಪೂರ್ವಪಕ್ಷವನ್ನಾಗಿ ಮಾಡಿ ಜಗತ್ಸತ್ಯವೆಂಬುದು ಶ್ರುತಿಯ ಸಿದ್ಧಾಂತ ಎಂದು ಶ್ರುತಿಯಿಂದಲೇ ಹೇಳಲ್ಪಟ್ಟಿದೆ ಎಂದು ಮುಂದೆ ಹೇಳುತ್ತಿದ್ದಾರೆ -**

**ಸ್ವಪ್ನಮಾಯಾಸರೂಪೇತಿ ಸೃಷ್ಟಿರನ್ಯೈರ್ವಿಕಲ್ಪಿತಾ ॥ ೬೮ ॥**

**ಅರ್ಥ**– ಅನ್ಯೈಃ= ವಿಚಾರಹೀನರಿಂದ, ಸೃಷ್ಟಿಃ= ಜಗತ್ತಿನ ಸೃಷ್ಟಿಯು, ಸ್ವಪ್ನಮಾಯಾ ಸರೂಪಾ= ಸ್ವಪ್ನದಲ್ಲಿ ಕಾಣುವ ಪದಾರ್ಥಗಳಂತೆ ಮಿಥ್ಯಾ ಸೃಷ್ಟಿಯು, ಇತಿ= ಎಂದು ವಿಕಲ್ಪಿತಾ= ಸತ್ಯಕ್ಕಿಂತ ವಿರುದ್ಧವಾಗಿ ತಿಳಿಯಲ್ಪಟ್ಟಿದೆ.

**ಅನುವಾದ** - ವಿಚಾರಹೀನವಾದಿಗಳೂ ಈ ಜಗತ್ತಿನ ಸೃಷ್ಟಿಯ ಬಗ್ಗೆ ಮಾತನಾಡಿದ್ದಾರೆ. ಅವರು ಸ್ವಪ್ನ ಪದಾರ್ಥಗಳನ್ನು ಮಿಥ್ಯಾ ಎನ್ನುತ್ತಾರೆ. ಅದರಂತೆ ಈ ಜಗತಿನ ಸೃಷ್ಟಿಯು ಮಿಥ್ಯಾ ಎನ್ನುತ್ತಾರೆ. ಇವರ ಮಾತು ಸತ್ಯಕ್ಕೆ ದೂರವಾದುದು.

**ಭಾವವಿಲಾಸಿನೀ**– ವಿಶ್ವಮಿಥ್ಯಾತ್ವಬ್ರಹ್ಮಪರಿಣಾಮಾದಿಪಕ್ಷಾನ್ಪೂರ್ವಪಕ್ಷೀಕೃತ್ಯ ಶ್ರುತ್ಯೈವ ತತ್ಸತ್ಯತ್ವಸ್ಯ ಸ್ವಸಿದ್ಧಾಂತತಯಾ ಕಥನಾಚ್ಚ ವಿಶ್ವಂ ಸತ್ಯಮಿತ್ಯಾಹ – **ಸ್ವಪ್ನಮಾಯೇತಿ** ॥ ಯದ್ಯಪಿ ವಿಭೂತಿಪ್ರಸವಂ ತ್ವನ್ಯೇ ಮನ್ಯಂತೇ ಸೃಷ್ಟಿಚಿಂತಕಾ ಇತಿ ಶ್ರುತಿಃ ಪ್ರಾಚೀನಾ । ತಥಾಪಿ ಬ್ರಹ್ಮಣೋ ವಿವಿಧತಯಾ

ಘಟಪಟಾದ್ಯಾತ್ಮನಾ ಭೂತಿಂ ಭವನಂ ಪ್ರಸವಂ ಸೃಷ್ಟಿಂ ಮನ್ಯಂತ ಇತಿ ಪರಿಣಾಮ ಪಕ್ಷಸ್ಯೈವೋಕ್ತತ್ವಾತ್ತಸ್ಯ ಚ ವಿಶ್ವಸತ್ಯತ್ವವಾದಿನಾಂ ಸಾಕ್ಷಾದ್ವಿರುದ್ಧಪೂರ್ವಪಕ್ಷತ್ವಾಭಾವಾತ್ ಅಸ್ಯೈವ ಗ್ರಹಣಮ್ ॥ ೬೮ ॥

**ವಿವರಣೆ** - ಯದ್ಯಪಿ 'ವಿಭೂತಿಂ ಪ್ರಸವಂ ತ್ವನ್ಯೇ ಮನ್ಯಂತೇ ಸೃಷ್ಟಿಚಿಂತಕಾಃ' ಎಂಬ ಶ್ರುತಿಯು 'ಸ್ವಪ್ನಮಾಯಾ ಸರೂಪಾ' ಎಂಬ ಶ್ರುತಿಗಿಂತಲೂ ಮೊದಲಿನ ಶ್ರುತಿಯು. ಆ ಶ್ರುತಿಯ ಅರ್ಥ ಹೀಗಿದೆ. 'ಅನ್ಯೇ ಸೃಷ್ಟಿ ಚಿಂತಕಾಃ= ಕೆಲವರು ಬ್ರಹ್ಮನ ಘಟಾದಿ ಸ್ವರೂಪವನ್ನು ಹೊಂದುವಿಕೆಯನ್ನು ಪ್ರಸವಂ= ಸೃಷ್ಟಿ ಎಂದು ಮನ್ಯಂತೇ= ತಿಳಿಯುತ್ತಾರೆ' ಎಂದು.'ಘಟಪಟಾದಿರೂಪನಾಗಿ ಬ್ರಹ್ಮನೇ ಪರಿಣಾಮವನ್ನು ಹೊಂದುತ್ತಾನೆ' ಎಂಬುದಾಗಿ ಪರಿಣಾಮ ವಾದವನ್ನು ಈ ಶ್ರುತಿಯು ಅನುವಾದ ಮಾಡಿದೆ. ಪ್ರಕೃತ ವಿಶ್ವಸತ್ಯತ್ವವಾದಿಗಳಾದ ನಮಗೆ 'ಪರಿಣಾಮ' ವಾದಿಗಳು ನೇರವಾಗಿ ಪೂರ್ವಪಕ್ಷಿಗಳಾಗಲಾರರು. 'ವಿಶ್ವಮಿಥ್ಯಾತ್ವ' ವಾದಿಗಳೇ ನೇರವಾಗಿ ಪೂರ್ವಪಕ್ಷಿಗಳು. ಅಂತಹ ವಾದಿಗಳ ಬಗ್ಗೆ ಮಾತನಾಡುವ ಶ್ರುತಿ 'ಸ್ವಪ್ನಮಾಯಾ' ಎಂಬ ಶ್ರುತಿ. ಆದ್ದರಿಂದ ನಂತರದ ಶ್ರುತಿಯಾಗಿದ್ದರೂ ಸಾಕ್ಷಾತ್ ಪೂರ್ವಪಕ್ಷವನ್ನು ನಿರಾಕರಿಸುವ ಶ್ರುತಿ ಇದಾಗಿದೆ ಎಂದು 'ಸ್ವಪ್ನಮಾಯಾ' ಎಂಬ ಶ್ರುತಿಯನ್ನೇ ಇಲ್ಲಿ ಇಟ್ಟುಕೊಂಡಿದ್ದಾರೆ.

ಶ್ರುತಿಯ ನಿಜವಾದ ಅಭಿಪ್ರಾಯವೇನೆಂದು ತಿಳಿಸುತ್ತಿದ್ದಾರೆ -

ಮಿಥ್ಯಾಸೃಷ್ಟಿಕಥಾ ಯೇಯಂ ಸಾಽನ್ಯೇಷಾಂ ಕಲ್ಪನಾ ಕಿಲ ।
ಇತ್ಯನ್ಯಮತಮಾಕ್ಷಿಪ್ಯ ಶ್ರುತಿಃ ಸ್ವಮತಮಾಹ ಚ ॥ ೬೯ ॥

**ಅರ್ಥ**– ಇಯಂ ಯಾ= ಈ ಯಾವ ಮಿಥ್ಯಾಸೃಷ್ಟಿಕಥಾ= ಸ್ವಪ್ನಮಾಯಾ ಸರೂಪಾ ಎಂದು ಹೇಳಿದ ಮಿಥ್ಯಾಸೃಷ್ಟಿ ಇದೆಯೋ, ಸಾ= ಅದು, ಅನ್ಯೇಷಾಂ= ಬೇರೆಯವರ ಕಲ್ಪನಾ ಕಿಲ= ಸ್ವಕಪೋಲಕಲ್ಪಿತವಾದ ಅಭಿಪ್ರಾಯವಾಗಿದೆಯಷ್ಟೆ ಇತಿ= ಈ ರೀತಿಯಾಗಿ ಶ್ರುತಿಃ= ಶ್ರುತಿಯು ಅನ್ಯಮತಂ= ಮಿಥ್ಯಾಸೃಷ್ಟಿ ಮತವನ್ನು ಆಕ್ಷಿಪ್ಯ= ಸ್ವಕಪೋಲಕಲ್ಪಿತ ಎಂದು ನಿರಾಕರಿಸಿ, ಸ್ವಮತಂ= ತನ್ನ ನಿಜವಾದ ಅಭಿಪ್ರಾಯವನ್ನು ಇಚ್ಛಾಮಾತ್ರ ಸೃಷ್ಟಿ ಎಂದು, ಆಹ ಚ= ಹೇಳಿರುತ್ತದೆಯಷ್ಟೆ.

**ಅನುವಾದ** - ಜಗತ್ತಿನ ಸೃಷ್ಟಿಯು ಸ್ವಪ್ನಮಾಯಾಸರೂಪಾ ಸ್ವಪ್ನದಂತೆ ಇಂದ್ರಜಾಲದಂತೆ ಮಿಥ್ಯಾಭೂತವಾದುದು ಎಂಬುದಾಗಿ ಕೆಲವರು ಏನು ಹೇಳಿದ್ದಾರೆಯೋ ಅದು ಅನ್ಯೈರ್ವಿಕಲ್ಪಿತಾ ಅನ್ಯರ ಸ್ವಕಪೋಲಕಲ್ಪಿತವಾದ ವಿಚಾರವು ಎಂದು ಶ್ರುತಿಯು 'ಮಿಥ್ಯಾಸೃಷ್ಟಿ' ಮತವನ್ನು ಆಕ್ಷೇಪಿಸಿ ತನಗೆ ಸಮ್ಮತವಾದ ಮತವನ್ನು ಮುಂದೆ 'ಇಚ್ಛಾಮಾತ್ರಂ' ಎಂದು ಹೇಳಿದೆಯಷ್ಟೇ.

**ಭಾವವಿಲಾಸಿನೀ–** ಶ್ರುತೇರಭಿಪ್ರಾಯಮಾಹ – **ಮಿಥ್ಯಾಸೃಷ್ಟೀತಿ** ॥ ಸ್ವಪ್ನಮಾಯಾಸರೂಪೇತ್ಯಸ್ಯ ತಾತ್ಪರ್ಯಕಥನಂ ಮಿಥ್ಯೇತಿ । ವಿಶೇಷೇಣ ಕಲ್ಪಿತಾ ವಿಕಲ್ಪಿತೇತ್ಯಸ್ಯಾಭಿಪ್ರಾಯಃ ಕಲ್ಪನಾ ಕಿಲೇತಿ । ಅನ್ಯಮತಂ ಮಿಥ್ಯಾಸೃಷ್ಟಿಮತಮ್ । ಆಕ್ಷಿಪ್ಯ ಸ್ವಕಪೋಲಕಲ್ಪಿತತ್ವೇನಾನ್ಯಮತತ್ವೇನ ಚ ನಿರಾಕೃತ್ಯ ॥ ೭೯॥

**ವಿವರಣೆ** - ರಾಜರು ಮಿಥ್ಯಾಸೃಷ್ಟಿ ವಾದಿಗಳನ್ನು ನಿರಾಕರಿಸಲು ಶ್ರುತ್ಯಸ್ತ್ರಗಳನ್ನು ಬಳಸಿದ್ದಾರೆ. ಮಿಥ್ಯಾಸೃಷ್ಟಿಮತವನ್ನು ಶ್ರುತಿಗಳೇ ಅನುವಾದ ಮಾಡಿಕೊಂಡು ನಿರಾಕರಿಸುವಾಗ ಇಂತಹ ಮತಗಳನ್ನು ಉಪೇಕ್ಷಿಸಿ ತತ್ವವಾದಿಗಳಾದ ನಮ್ಮ ಮತವನ್ನು ಆಶ್ರಯಿಸಿ ಎಂದು ಮಾರ್ಮಿಕವಾಗಿ ನಿರೂಪಿಸಿದ್ದಾರೆ.

ಶ್ರುತಿಯ ನಿಜವಾದ ಅಭಿಪ್ರಾಯವನ್ನು ಮುಂದೆ ತಿಳಿಸುತ್ತಿದ್ದಾರೆ -

ಇಚ್ಛಾಮಾತ್ರಂ ಪ್ರಭೋಃ ಸೃಷ್ಟಿರಿತಿ ಸೃಷ್ಟೌ ವಿನಿಶ್ಚಿತಾಃ ।
ಸ್ವೇಚ್ಛಯೈವ ಪ್ರಭುಃ ಸರ್ವಂ ಸೃಜತೀಶೋ ನ ಮಾಯಯಾ ॥ ೭೦ ॥

ವಿಶಿಷ್ಯ ನಿಶ್ಚಿತಂ ಸೃಷ್ಟೌ ಯೇಷಾಂ ತೇಷಾಂ ತ್ವಿದಂ ಹೃದಿ ।
ಇತಿ ಸ್ತುತ್ಯೋತ್ತರಾರ್ಧೋಕ್ತಮೇವ ಸ್ವಮತಮಾಹ ಸಾ ॥ ೭೧ ॥

**ಅರ್ಥ–** ಪ್ರಭೋಃ= ಸರ್ವಸಮರ್ಥನಾದ ಶ್ರೀಮನ್ನಾರಾಯಣನ ಸೃಷ್ಟಿಃ= ಸೃಷ್ಟಿಯು, ಇಚ್ಛಾಮಾತ್ರಂ= ಕೇವಲ ಇಚ್ಛೆಯಿಂದಲೇ (ಆಗಿದೆ). ಇತಿ= ಎಂಬುದಾಗಿ, ಸೃಷ್ಟೌ= ಸೃಷ್ಟಿ ವಿಷಯದಲ್ಲಿ, ವಿನಿಶ್ಚಿತಾಃ= ಒಳ್ಳೆಯ ನಿಶ್ಚಯ ಹೊಂದಿದವರಾಗಿದ್ದಾರೆ.

ಪ್ರಭುಃ= ಸರ್ವಸಮರ್ಥನಾದ, ಈಶಃ= ಜಗದೀಶನು, ಸರ್ವಂ= ಸಮಗ್ರ ಜಗತ್ತನ್ನು, ಸ್ವೇಚ್ಛಯೈವ= ತನ್ನ ಇಚ್ಛಾನುಸಾರವಾಗಿಯೇ ಸೃಜತಿ= ಸೃಷ್ಟಿಸುತ್ತಾನೆ. ಮಾಯಯಾ= ಪರವಾದಿಗಳು ಹೇಳುವಂತೆ ಅವಿದ್ಯಾರೂಪವಾದ ಮಾಯೆಯಿಂದ, ನ ಸೃಜತಿ= ಸೃಷ್ಟಿಸುವುದಿಲ್ಲ, ಯೇಷಾಂ= ಯಾರಿಗೆ, ಸೃಷ್ಟೌ= ಸೃಷ್ಟಿ ವಿಷಯದಲ್ಲಿ ವಿಶಿಷ್ಯನಿಶ್ಚಿತಂ= ಒಳ್ಳೆಯ ನಿಶ್ಚಯಪಿದೆಯೋ ತೇಷಾಂ= ಅವರ, ಹೃದಿ= ಹೃದಯದಲ್ಲಿ, ಇದಂ ತು= ಇಚ್ಛಾಮಾತ್ರ ಸೃಷ್ಟಿಯು ಎಂಬ ಅಭಿಪ್ರಾಯವೇ ಇರುತ್ತದೆ. ಇತಿ= ಈ ರೀತಿಯಾಗಿ, ಸ್ತುತ್ಯಾ= ಪ್ರಶಂಸೆಯಿಂದ, ಸಾ= ಆ ಶ್ರುತಿಯು, ಉತ್ತರಾರ್ಧೋಕ್ತಮೇವ = ಇಚ್ಛಾಮಾತ್ರವೇ ಸೃಷ್ಟಿ ಎಂಬ ಈ ಉತ್ತರಾರ್ಧದಲ್ಲಿರುವ ಮಾತನ್ನೇ ಸ್ವಮತಂ= ತನ್ನ ಅಭಿಪ್ರಾಯವೆಂದು, ಆಹ= ಹೇಳಿತು.

**ಅನುವಾದ** - 'ಸರ್ವಸಮರ್ಥನಾದ ಶ್ರೀಮನ್ನಾರಾಯಣನ ಸೃಷ್ಟಿಯು ಕೇವಲ ಅವನ ಇಚ್ಛೆಯಿಂದಲೇ ಆಗಿದೆ ಎಂದು ಸೃಷ್ಟಿಯಲ್ಲಿ ಒಳ್ಳೆಯ ನಿಶ್ಚಯ ಬುದ್ಧಿಯುಳ್ಳವರ ಅಭಿಪ್ರಾಯವಾಗಿದೆ' (ಎಂಬ ಶ್ರುತಿಯ ಅಭಿಪ್ರಾಯವನ್ನು ರಾಜರು ಮತ್ತೂ

ಸ್ಪಷ್ಟವಾಗಿ ವ್ಯಾಖ್ಯಾನಿಸುತ್ತಾರೆ). ಸರ್ವ ಸಮರ್ಥನಾದ ನಾರಾಯಣನು ತನ್ನ ಇಚ್ಛೆಯಿಂದಲೇ ಜಗತ್ತೆಲ್ಲವನ್ನೂ ಸೃಷ್ಟಿಸುತ್ತಾನೆ. ಮಾಯೆಯಿಂದಲ್ಲ, ದೃಢವಾದ ನಿಶ್ಚಯವುಳ್ಳವರು ಯಾರೋ ಅವರ ಹೃದಯದಲ್ಲಿ ಸೃಷ್ಟಿಯ ವಿಷಯದಲ್ಲಿ 'ಇಚ್ಛಾಮಾತ್ರಂ' ಎಂಬ ಅಭಿಪ್ರಾಯವೇ ದೃಢವಾಗಿ ಇದೆ. ಈ ರೀತಿಯಾಗಿ ಸೃಷ್ಟಿಯ ಬಗ್ಗೆ ಮಾತನಾಡಿ ಕೊನೆಯ ಈ ಅಭಿಪ್ರಾಯವನ್ನು ಶ್ರುತಿಯೇ ಪ್ರಶಂಸೆ ಮಾಡಿದೆ. ಪ್ರಶಂಸೆಯ ಮೂಲಕ 'ಇಚ್ಛಾಮಾತ್ರಂ' ಎಂಬ ಉತ್ತರಾರ್ಧದಲ್ಲಿ ಹೇಳಿದ ಅಭಿಪ್ರಾಯವು ತನ್ನದ್ದೇ ಅಭಿಪ್ರಾಯವೆಂದೂ ಹೇಳಿದೆ.

**ಭಾವವಿಲಾಸಿನೀ**– ಶ್ರುತೇರಭಿಪ್ರಾಯಮಾಹ – **ಸ್ವೇಚ್ಛಯೇತಿ** ॥ ಮಾತ್ರಪದಸ್ಯಾರ್ಥಮಾಹ – **ಏವೇತಿ** ॥ ತೇನಾಪಿ ವ್ಯವಚ್ಛೇದ್ಯಮಾಹ – **ನ ಮಾಯಯೇತಿ** ॥ ವಿನಿಶ್ಚಿತ ಪದಸ್ಯಾರ್ಥಕಥನಂ । **ವಿಶಿಷ್ಯೇತಿ** ॥ ನಿಶ್ಚಿತಂ ನಿಶ್ಚಯಃ । ಭಾವೇ ಕ್ತಪ್ರತ್ಯಯಃ ಸ್ತುತ್ಯಾ ಏವಂ ವದಂತೋ ವಿಶಿಷ್ಯ ನಿಶ್ಚಯವಂತ ಇತಿ ಸ್ತುತ್ಯಾ । ಉಪಲಕ್ಷಣಂ ಚೈತತ್ । ಅನ್ಯ ಇತ್ಯಾದ್ಯನುಕ್ತ್ಯಾ ಚೇತ್ಯಪಿ ದ್ರಷ್ಟವ್ಯಮ್ ॥ ೭೦-೭೧ ॥

**ವಿವರಣೆ** - 'ಇಚ್ಛಾಮಾತ್ರಂ' ಎಂಬಲ್ಲಿನ 'ಮಾತ್ರ' ಶಬ್ದದ ಅರ್ಥವನ್ನು 'ಸ್ವೇಚ್ಛಯೈವ' ಎಂಬಲ್ಲಿನ 'ಏವ'ಕಾರದಿಂದ ಹೇಳುತ್ತಾರೆ. ಏವಕಾರವು 'ಅನ್ಯಯೋಗ ವ್ಯವಚ್ಛೇದ'ವನ್ನು ಮಾಡುತ್ತಿದೆ. ಅದನ್ನೇ ಮುಂದೆ 'ನ ಮಾಯಯಾ' ಎಂದು ವಿವರಿಸಿದ್ದಾರೆ. 'ವಿನಿಶ್ಚಿತಾಃ' ಎಂದರೆ 'ವಿಶಿಷ್ಯ ನಿಶ್ಚಿತವಂತಃ' ಎಂದು ಅರ್ಥ 'ವಿಶಿಷ್ಯ ನಿಶ್ಚಿತಂ' ಎಂಬಲ್ಲಿ ಭಾವಾರ್ಥದಲ್ಲಿ ಕ್ತ ಪ್ರತ್ಯಯ ಬಂದಿದೆ. 'ವಿನಿಶ್ಚಿತಾಃ' ಎಂದು ಶ್ರುತಿಯು ಇಚ್ಛಾಮಾತ್ರ ಸೃಷ್ಟಿ ವಾದಿಗಳನ್ನು ಸ್ತುತಿ ಮಾಡುತ್ತಿದೆ. 'ವಿನಿಶ್ಚಿತ' ಒಳ್ಳೆಯ ನಿಶ್ಚಯ ಉಳ್ಳವರು ಎಂದು ಸ್ತುತಿ. ಅನ್ಯೇ ಎಂದು ಮುಂತಾಗಿ 'ಇದು ಅನ್ಯರ ಮತ' ಎಂದು ನಿಂದೆಯನ್ನು ಮಾಡಿಲ್ಲ. ಹೀಗೆ ಇಚ್ಛಾಮಾತ್ರಸೃಷ್ಟಿಯು ಶ್ರುತಿಗೆ ತನ್ನ ಮತ ಎಂದು ಅಭಿಪ್ರಾಯ ಕಾಣುತ್ತದೆ.

'ವಿನಿಶ್ಚಿತಾಃ' ಎಂಬುದಕ್ಕೆ ಇನ್ನೊಂದು ಅಭಿಪ್ರಾಯವಿದೆ ಎಂದು ಮುಂದೆ ತಿಳಿಸುತ್ತಾರೆ-

ಸೃಷ್ಟೌ ನಿಶ್ಚಯವಂತೋ ಯೇ ಪಕ್ಷಮೇನಂ ವದಂತಿ ತೇ ।
ಸಂದಿಗ್ಧಮನಸಸ್ತ್ವನ್ಯಾನ್ ಪಕ್ಷಾನಾಚಕ್ಷತೇ ಕಿಲ ॥ ೭೨ ॥

**ಅರ್ಥ**– ಯೇ= ಯಾರು, ಸೃಷ್ಟೌ= ಸೃಷ್ಟಿ ವಿಷಯದಲ್ಲಿ, ನಿಶ್ಚಯವಂತಃ= ನಿಶ್ಚಯ ಉಳ್ಳವರೋ, ತೇ= ಅವರು, ಏನಂ ಪಕ್ಷಂ= ಇಚ್ಛಾಮಾತ್ರಂ ಎಂಬ ಪಕ್ಷವನ್ನು, ವದಂತಿ= ಹೇಳುತ್ತಾರೆ. ಸಂದಿಗ್ಧಮನಸಸ್ತು= ಗೊಂದಲದ ಮನಸ್ಸಿನವರಾದರೂ, ಅನ್ಯಾನ್ ಪಕ್ಷಾನ್= ಸ್ವಪ್ನಮಾಯಾ ಇತ್ಯಾದಿ ಪಕ್ಷಗಳನ್ನು, ಆಚಕ್ಷತೇ ಕಿಲ= ಹೇಳುತ್ತಾರಷ್ಟೆ!

**ಅನುವಾದ** - ಸೃಷ್ಟಿಯ ಬಗ್ಗೆ ನಿಖರವಾದ ಜ್ಞಾನವುಳ್ಳವರು, ಹರಿಯ ಇಚ್ಛೆಯಿಂದಲೇ ಜಗತ್ತಿನ ಸೃಷ್ಟಿಯಾಗಿದೆ ಎನ್ನುವ ಪಕ್ಷವನ್ನೇ ಹೇಳುತ್ತಾರೆ. ಯಾರಿಗೆ ಶ್ರುತಿಗಳ ಬಗ್ಗೆ

ಸರಿಯಾದ ಪರಿಚಯವಿಲ್ಲವೋ, ಸಂದೇಹಗ್ರಸ್ತರಾಗಿದ್ದಾರೆಯೋ ಅವರು ಬುದ್ಧಿ ಮೋಹದಿಂದ ಬೇರೆ ಬೇರೆ ವಿಕಲ್ಪಗಳನ್ನು ಮಾಡಿಕೊಂಡು ಸೃಷ್ಟಿಯ ಬಗ್ಗೆ ತಪ್ಪಾದ ಪಕ್ಷಗಳನ್ನು ಆಶ್ರಯಿಸುತ್ತಾರೆ. ಎಂಬುದು 'ವಿನಿಶ್ಚಿತಾಃ' ಎಂಬ ಶಬ್ದದಿಂದ ಉದಿಸಿದ ಇನ್ನೊಂದು ಅರ್ಥ.

**ಭಾವವಿಲಾಸಿನೀ**– ವಿನಿಶ್ಚಿತಪದಸ್ಯಾಭಿಪ್ರಾಯಾಂತರಮಪ್ಯಾಹ – ಸೃಷ್ಟಾವಿತಿ ॥ ೭೨ ॥

ಯತಃ ಪಕ್ಷಾಂತರೇ ಸರ್ವತ್ರಾನ್ಯ ಇತ್ಯಾಹ ಸಾ ಶ್ರುತಿಃ ।
ಕಾಲಚಿಂತಕಪಕ್ಷತ್ವಮೇಕಪಕ್ಷೇ ಜಗಾದ ಚ ॥ ೭೩ ॥

**ಅರ್ಥ**– ಯತಃ= ಯಾವ ಕಾರಣದಿಂದ, ಸಾ ಶ್ರುತಿಃ= ಆ ಶ್ರುತಿಯು, ಪಕ್ಷಾಂತರೇ ಸರ್ವತ್ರ= ಬೇರೆ ಪಕ್ಷವನ್ನು ಹೇಳುವಲ್ಲೆಲ್ಲ, ಅನ್ಯ ಇತಿ= ಬೇರೆಯವರು ಎಂದು, ಆಹ= ಹೇಳಿತು ಚ= ಮತ್ತು, ಏಕಪಕ್ಷೇ= ಕಾಲಾತ್ಪಸೂತಿಂ ಭೂತಾನಾಂ ಮನ್ಯಂತೇ ಕಾಲಚಿಂತಕಾಃ ಎಂಬ ಒಂದು ಪಕ್ಷದಲ್ಲಿ ಕಾಲಚಿಂತಕ ಪಕ್ಷತ್ವಂ= ಕಾಲಚಿಂತಕಪಕ್ಷತ್ವವನ್ನು, ಜಗಾದ= ಹೇಳಿತು.

**ಅನುವಾದ** - ಜಗತ್ತಿನ ಸೃಷ್ಟಿಯು ಹೇಗಾಯಿತೆಂದು ನಿರ್ಣಯಿಸಲು ಹೊರಟ ಶ್ರುತಿಯು ತನಗೆ ಅಸಮ್ಮತವಾದ ಮತಗಳ ಬಗ್ಗೆ ಹೇಳುವಾಗಲೆಲ್ಲ 'ಅನ್ಯೇ ಅನ್ಯೇ'ಎಂದೇ ಹೇಳಿದೆ. 'ಕಾಲಾತ್ಪಸೂತಿಂ ಭೂತಾನಾಂ ಮನ್ಯಂತೇ ಕಾಲಚಿಂತಕಾಃ' ಎಂಬ ತನಗೆ ಅಸಮ್ಮತವಾದ ಪಕ್ಷವನ್ನು ಕೆಲವರ ಪಕ್ಷವೆಂದು ಶ್ರುತಿಯು ಅನುವಾದ ಮಾಡಿದೆ.

**ಭಾವವಿಲಾಸಿನೀ**– ಏಕಪಕ್ಷೇ ಕಾಲಾತ್ಪಸೂತಿಂ ಭೂತಾನಾಂ ಮನ್ಯಂತೇ ಕಾಲಚಿಂತಕಾ ಇತಿ ಪಕ್ಷೇ ॥೭೩॥

**ವಿವರಣೆ** - ಕೆಲವು ಕಾಲಚಿಂತಕರು ಭೂತಗಳ ಸೃಷ್ಟಿ ಕಾಲದಿಂದ ಎಂದು ಹೇಳುತ್ತಾರೆ. ಆದರೆ ಈ ಪಕ್ಷವೂ ಸರಿಯಲ್ಲ ಎಂದು ಭಾವ.

ಅತೋಽಪಿ ಪಕ್ಷಾಸ್ತೇ ಸರ್ವೇ ಸ್ವಪಕ್ಷಾ ನೇತಿ ಶಂಸತಿ ।
ಅತ್ರಕರ್ತುಃ ಪ್ರಭುತ್ವೋಕ್ತ್ಯಾಽಪ್ಯಭಿಪ್ರೈತಿ ಸ್ವಪಕ್ಷತಾಮ್ ॥ ೭೪ ॥

**ಅರ್ಥ**– ಅತಃ= ಆದ್ದರಿಂದ (ಶ್ರುತಿಯು) ಅನುವಾದಿಸಿದ, ತೇ ಸರ್ವೇಽಪಿ ಪಕ್ಷಾಃ= ಸೃಷ್ಟಿಯ ವಿಚಾರದ ಆ ಎಲ್ಲ ಪಕ್ಷಗಳೂ, ಸ್ವಪಕ್ಷಾ ನೇತಿ= ತನ್ನ ಪಕ್ಷಗಳಲ್ಲ, ಇತಿ= ಎಂಬುದಾಗಿ ಶಂಸತಿ= ಹೇಳುತ್ತಿದೆ. ಅತ್ರ= ಇಚ್ಛಾಮಾತ್ರಂ ಎಂಬ ಶ್ರುತಿಯಲ್ಲಿ, ಕರ್ತುಃ= ಸೃಷ್ಟಿಕರ್ತನಾದ ಹರಿಗೆ, ಪ್ರಭುತ್ವೋಕ್ತ್ಯಾಪಿ= ಪ್ರಭುತ್ವ ಸ್ವಪಕ್ಷತಾಂವನ್ನು ಹೇಳಿರುವುದರಿಂದಲೂ, ಇಚ್ಛಾಮಾತ್ರ ಸೃಷ್ಟಿಯನ್ನು ಸ್ವಪಕ್ಷತಾಂ ಅಭಿಪ್ರೈತಿ= ತನ್ನ ಪಕ್ಷವೆಂದು ಸೂಚಿಸುತ್ತಿದೆ.

**ಅನುವಾದ** - ಸೃಷ್ಟಿಯ ಬಗ್ಗೆ ಇರುವ ಬೇರೆ ಪಕ್ಷಗಳನ್ನೆಲ್ಲ ಶ್ರುತಿಯು ತಿಳಿಸಿ ಇವುಗಳೆಲ್ಲವೂ ತನಗೆ ಸಮ್ಮತವಾದ ಪಕ್ಷಗಳಲ್ಲ ಎಂದು ಸ್ಪಷ್ಟವಾಗಿ ಹೇಳುತ್ತಿದೆ. 'ಇಚ್ಛಾಮಾತ್ರಂ' ಎಂಬ ಶ್ರುತಿಯ ಅಭಿಪ್ರಾಯವು ತನ್ನ ಪಕ್ಷವೆಂದು ತಿಳಿಸುವುದಕ್ಕಾಗಿ ಕೇವಲ ಇಚ್ಛಾಮಾತ್ರದಿಂದ ಹರಿಯು ಜಗನ್ನಿರ್ಮಾಣ ಮಾಡುವ ಸಾಮರ್ಥ್ಯ ಉಳ್ಳವನು ಎಂದು ಪ್ರಭು ಎಂಬ ಪದವನ್ನು ಪ್ರಶಂಸೆಯನ್ನಾಗಿಯೂ ಉಪೋದ್ಬಲಕ ಯುಕ್ತಿಯನ್ನಾಗಿಯೂ ಶ್ರುತಿಯು ನೀಡಿದೆ.

**ಭಾವವಿಲಾಸಿನೀ**– ಪ್ರಭುತ್ವೋಕ್ತ್ಯಾ ಪ್ರಭೋರಿತಿ ಮಹಾಸಾಮರ್ಥ್ಯೋಕ್ತಿ ರೂಪ-ಪ್ರಶಂಸಯಾ । ಉಪಲಕ್ಷಣಂ ಚೈತತ್ । ಮಹಾಸಮರ್ಥಸ್ಯ ಐಂದ್ರಜಾಲಿಕಸೃಷ್ಟ್ಯಯೋಗಾತ್ । ಹೀನಜಗದಾಕಾರೇಣ ಪರಿಣಾಮಾಯೋಗಾತ್ ಜಡೇ ಕಾಲೇ ಪ್ರಾಧಾನ್ಯದಾನಾಯೋಗಾಚ್ಚ ಮಿಥ್ಯಾಸೃಷ್ಟ್ಯಾದಿಪಕ್ಷಾಣಾಂ ಪೂರ್ವಪಕ್ಷತಾಂ ಚ ಸೂಚಯತೀತ್ಯಪಿ ದ್ರಷ್ಟವ್ಯಮ್ ॥ ೭೪ ॥

**ವಿವರಣೆ** - 'ಪ್ರಭುತ್ವೋಕ್ತ್ಯಾ' ಎಂದರೆ 'ಪ್ರಭೋಃ' ಎಂದು ಶ್ರುತಿಯಲ್ಲಿ ಶ್ರೀಹರಿಗೆ 'ಮಹಾಸಾಮರ್ಥ್ಯ ಉಳ್ಳವನು' ಎಂದು ಮಾಡಿದ ಪ್ರಶಂಸೆ ಎಂದು ಅರ್ಥ. ಇಲ್ಲಿ 'ಪ್ರಭು' ಎಂಬ ಪದವು ಪ್ರಶಂಸೆ ಮಾಡುವುದು ಉಪಲಕ್ಷಣ. ಮಹಾಸಾಮರ್ಥ್ಯ ಉಳ್ಳವನಾದ್ದರಿಂದ ಶ್ರೀಹರಿಯು ಇಂದ್ರಜಾಲವಿದ್ಯೆ ಬಲ್ಲವನು ಸೃಷ್ಟಿಸುವ ಕೃತ್ರಿಮ ಪದಾರ್ಥಗಳಂತೆ ಕೃತ್ರಿಮವಾದ ಜಗತ್ತನ್ನು ನಿರ್ಮಿಸನು. ಹೀನವಾದ ಜಗತ್ತಿನ ಆಕಾರದಲ್ಲಿ ಪರಿಣಾಮವನ್ನು ಹೊಂದನು. ಜಗತ್ ಸೃಷ್ಟಿಯ ವಿಷಯದಲ್ಲಿ ಜಡವಾದ ಕಾಲಕ್ಕೆ ಪ್ರಾಧಾನ್ಯವನ್ನು ಭಗವಂತ ಕೊಡಲಾರನು. ಆದ್ದರಿಂದ ಮಿಥ್ಯಾಸೃಷ್ಟಿ ಪಕ್ಷದಿಂದ ಆರಂಭಿಸಿ ಎಲ್ಲಾ ಪಕ್ಷಗಳೂ ಪೂರ್ವಪಕ್ಷಗಳೆಂದು ಪ್ರಭು ಪದವು ಯುಕ್ತಿಗಳನ್ನು ಸೂಚಿಸುತ್ತಿದೆ ಎಂದೂ ತಿಳಿಯಬೇಕು.

ಭೋಗಾರ್ಥಂ ಸೃಷ್ಟಿರಿತ್ಯನ್ಯೇ ಕ್ರೀಡಾರ್ಥಮಿತಿಚಾಪರೇ । ದೇವಸ್ಯೈಷ ಸ್ವಭಾವೋಽಯಮಾಪ್ತ ಕಾಮಸ್ಯ ಕಾಸ್ಪೃಹಾ ಎಂಬ ಶ್ರುತಿಯು ಫಲಪರೀಕ್ಷಾ ಶ್ರುತಿ ಎನಿಸಿದೆ. ಈ ಶ್ರುತಿಯು 'ಆಪ್ತಕಾಮಸ್ಯ ಕಾ ಸ್ಪೃಹಾ' ಎಂಬ ಮಾತಿನ ಮೂಲಕ 'ಭೋಗಕ್ಕಾಗಿ ಸೃಷ್ಟಿ' 'ಕ್ರೀಡೆಗಾಗಿ ಸೃಷ್ಟಿ' ಎಂಬ ಎರಡೂ ಫಲಗಳನ್ನು ನಿರಾಕರಿಸಿ, ಸೃಷ್ಟಿಯು ಶ್ರೀಹರಿಯ ಸ್ವಭಾವ' ಎಂಬ ಒಂದೇ ಪಕ್ಷವು ತನಗೆ ಸಮ್ಮತ ಎಂದು ಹೇಳಿದೆ. ಹೀಗೆ ಹೇಳಿದ್ದರಿಂದ ಹಿಂದಿನ ಶ್ರುತಿಯಲ್ಲಿ ಹೇಳಿದ 'ಭೋಗಾರ್ಥಂ' 'ಕ್ರೀಡಾರ್ಥಂ' ಎಂಬ ಎರಡು ಪಕ್ಷಗಳೂ ಪೂರ್ವ ಪಕ್ಷಗಳೇ ಆಗಿವೆ ಎಂದು ಮುಂದೆ ವಿವರಣ ಮಾಡಿ ಹೇಳುತ್ತಿದ್ದಾರೆ.

ಯತಃ ಫಲವಿಕಲ್ಪೇಽಪಿ ಸರ್ವಾನ್ ಪಕ್ಷಾನುಪೇಕ್ಷ್ಯ ಸಾ ।
ದೇವಸ್ಯೈಷ ಸ್ವಭಾವೋಽಯಮಾಪ್ತಕಾಮಸ್ಯ ಕಾ ಸ್ಪೃಹಾ ।
ಇತ್ಯೇಕಮೇವ ಸ್ವಮತಂ ನಿರ್ಣಿನಾಯ ತತೋಽಪಿ ತತ್ ॥ ೭೫ ॥

**ಅರ್ಥ–** ಯತಃ= ಯಾವ ಕಾರಣದಿಂದ, ಫಲವಿಕಲ್ಪೇಪಿ= ಸೃಷ್ಟಿಯ ಉದ್ದೇಶದಲ್ಲಿ ಭೋಗಕ್ಕಾಗಿ ಕ್ರೀಡೆಗಾಗಿ ಎಂಬ ಫಲಗಳ ಭೇದವಿದ್ದಾಗಲೂ ಸರ್ವಾನ್= ಆ ಎಲ್ಲಾ ಪಕ್ಷಾನ್= ಪಕ್ಷಗಳನ್ನು, ಸಾ= ಆ ಶ್ರುತಿಯು, ಉಪೇಕ್ಷ್ಯ= ಕಡೆಗಣಿಸಿ, ಏಷಃ= ಈ ಅಯಂ= ಜಗತ್ಸರ್ಜನರೂಪನಾದ ವ್ಯಾಪಾರವು, ದೇವಸ್ಯ= ಕ್ರೀಡಾದಿಗುಣ ವಿಶಿಷ್ಟನಾದ ಶ್ರೀಹರಿಯ ಸ್ವಭಾವಃ= ಸಹಜ ಪ್ರಕ್ರಿಯೆಯು ಆಪ್ತಕಾಮಸ್ಯ= ಪೂರ್ಣಕಾಮನಿಗೆ, ಸ್ಪೃಹಾ= ಭೋಗದ ಆಸೆಯು ಕಾ= ಎಲ್ಲಿಯದ್ದು ಇತಿ= ಈ ರೀತಿಯಾಗಿ ತತ್= ಇಚ್ಛಾಮಾತ್ರಂ, ಏಕಮೇವ= ಒಂದೇ ಪ್ರಮೇಯವನ್ನು, ಸ್ವಮತಂ= ತನ್ನ ಮತವೆಂದು, ನಿರ್ಣಿನಾಯ= ನಿರ್ಣಯಿಸಿತೋ, ತತೋಪಿ= ಆ ಕಾರಣದಿಂದಲೂ, ತತ್= ಹಿಂದೆ ಹೇಳಿದ ಮತವೇ ಸ್ವಮತ.

**ಅನುವಾದ** - ಶ್ರೀಹರಿಯು ಸೃಷ್ಟಿಯನ್ನು ಭೋಗಕ್ಕಾಗಿ ಮಾಡುತ್ತಾನೆ. ಕ್ರೀಡೆಗಾಗಿ ಮಾಡುತ್ತಾನೆ ಎಂದು ಬೇರೆ ಬೇರೆ ಪಕ್ಷಗಳಿವೆ. ಆದರೆ ಶ್ರುತಿಮಾತೆಯು ದೇವರ ಸೃಷ್ಟಿಯು ಅವನ ಸ್ವಭಾವವೇ ಆಗಿದೆ ವಿನಾಃ ತನ್ನ ಯಾವ ಸ್ವಾರ್ಥದ ಉದ್ದೇಶಕ್ಕಾಗಿಯೂ ಸೃಷ್ಟಿಮಾಡುವುದಿಲ್ಲ. ಸೃಷ್ಟಿಯು ಕ್ರೀಡಾದಿಗುಣ ವಿಶಿಷ್ಟನಾದ ಭಗವಂತನ ಸ್ವಭಾವವೇ ಆಗಿದೆ. ಆಪ್ತಕಾಮನಾದ ಹರಿಗೆ ಕಾಮನೆ ಎಲ್ಲಿಂದ? ಹೀಗೆ ಒಂದೇ ಒಂದು ತತ್ತ್ವವನ್ನು ಶ್ರುತಿಯು ಮೊದಲಿನಿಂದ ಕೊನೆಯತನಕವೂ ನಿರ್ಣಯ ಮಾಡಿ ಹೇಳುತ್ತಿದೆ. ಆದ್ದರಿಂದ ಇಚ್ಛಾಮಾತ್ರಂ ಪ್ರಭೋಃ ಸೃಷ್ಟಿಃ ಎಂಬುದೇ ಶ್ರುತಿಗೆ ಸಮ್ಮತವಾದ ಸಿದ್ಧಾಂತ.

**ವಿವರಣೆ** - ಆನಂದ್ರೋದ್ರೇಕವಾದಾಗ ನರರು ನರ್ತನ-ಗಾನಾದಿಗಳನ್ನು ಮಾಡುತ್ತಾರೆ. ಅವರಿಗೆ ನರ್ತನ- ಗಾನಗಳನ್ನು ಮಾಡಿ ಆನಂದ ಹೊಂದಬೇಕೆಂಬ ಉದ್ದೇಶವಿಲ್ಲ. ಹೊರತು ಆನಂದೋದ್ರೇಕದಿಂದಲೇ ನರ್ತನಾದಿಗಳನ್ನು ಮಾಡುತ್ತಾರೆ. ಇದು ಕೇವಲ ಲೀಲೆ. ಇದು ಹೇಗೋ ಅದರಂತೆಯೇ ಶ್ರೀಹರಿಯ ಜಗತ್ಸೃಷ್ಟ್ಯಾದಿ ವ್ಯಾಪಾರವೂ ಆನಂದೋದ್ರೇಕದಿಂದಲೇ ನಡೆಯುತ್ತದೆ. ಆದ್ದರಿಂದ ಇದೂ ಲೀಲೆ ಎನಿಸಿದೆ. ಲೀಲೆಯನ್ನು ಉದ್ದೇಶವಾಗಿಟ್ಟುಕೊಂಡು ಈ ಜಗತ್ತಿನ ಸೃಷ್ಟಿ ಮಾಡಲಾರ. ಹೀಗೆ ಹೇಳಿದರೆ ಲೀಲಾಕಾಮನೆ ಉಳ್ಳವನೆಂದು ಪುನಃ ಅಪೂರ್ಣತ್ವ ದೋಷವೇ ಬಂದೀತು? ಆದ್ದರಿಂದ ಕ್ರೀಡಾರ್ಥಂ ಕ್ರೀಡೆಯ ಉದ್ದೇಶದಿಂದ ಜಗತ್ತಿನ ಸೃಷ್ಟಿಯನ್ನು ಮಾಡುತ್ತಾನೆ ಎಂಬುದೂ ಪೂರ್ವಪಕ್ಷವೇ ಆಯಿತು. (ಖಂಡನೀಯವೇ ಆಯಿತು). ಆದ್ದರಿಂದಲೇ ಸೂತ್ರಕಾರರೂ ಕೂಡ 'ಲೋಕವತ್ತು ಲೀಲಾಕೈವಲ್ಯಂ' ಎಂದು 'ಕೇವಲ ಲೀಲಾ' ಎಂದರು. 'ಲೀಲಾರ್ಥಂ' ಎನ್ನಲಿಲ್ಲ ಎಂದು ಭಾವ.

ಕಾ ಸ್ಪೃಹೇತಿ ಯತಃ ಕ್ರೀಡಾಭೋಗಪಕ್ಷೌ ಸಹೇತುಕಮ್ ॥ ೭೬ ॥

**ಆಚಿಕ್ಷೇಪ ಸ್ವಭಾವೇನ ಕರ್ತುಃ ಪೂರ್ಣಸ್ಯ ಚ ಪ್ರಭೋಃ ।**
**ಕಾ ಫಲಸ್ಯ ಸ್ಪೃಹಾ ತೇನ ಪೂರ್ವೌ ದ್ವೌ ಪೂರ್ವಪಕ್ಷಿಣಾಮ್ ॥ ೭೭ ॥**

**ಪ್ರಭುತ್ವದೂಷಕೌ ವಿಷ್ಣೋರ್ನ ಮತ್ಪಕ್ಷಾವುಭಾವಪಿ ।**
**ತೃತೀಯ ಏವ ಪಕ್ಷೋ ಮೇ ಪ್ರಭುತಾಪೋಷಕಃ ಪ್ರಭೋಃ ॥ ೭೮ ॥**

**ಅರ್ಥ–** ಯತಃ= ಯಾವ ಕಾರಣದಿಂದ (ಶ್ರುತಿಯು), ಕಾಸ್ಪೃಹಾ= ಏನು ಆಸೆ ಇದ್ದೀತು? ಇತಿ= ಎಂಬ ಮಾತಿನ ಮೂಲಕ, ಸಹೇತುಕಂ= ಆಸೆಯಿಲ್ಲ ಎಂಬ ಹೇತುವಿನ ಮೂಲಕ, ಕ್ರೀಡಾಭೋಗಪಕ್ಷೌ= ಕ್ರೀಡೆಯ ಆಸೆ ಭೋಗದ ಆಸೆ ಎಂಬ ಎರಡು ಪಕ್ಷಗಳನ್ನು, ಆಚಿಕ್ಷೇಪ= ನಿರಾಕರಿಸಿದೆ.

ಪ್ರಭೋಃ= ಸರ್ವಸಮರ್ಥನಾದ, ಸ್ವಭಾವೇನ ಕರ್ತುಃ= ಸ್ವಭಾವದಿಂದಲೇ ಜಗತ್ತಿನ ಸೃಷ್ಟಿಕರ್ತನಾದ, ಪೂರ್ಣಸ್ಯ ಚ= ಪೂರ್ಣಕಾಮನೂ ಆದ ಹರಿ, ಫಲಸ್ಯ= ಫಲದ ಸ್ಪೃಹಾ= ಆಸೆಯು, ಕಾ= ಯಾವುದು ಎಲ್ಲಿಂದ? ತೇನ= ಅದರಿಂದ, ವಿಷ್ಣೋಃ= ವಿಷ್ಣುವಿನ ಪ್ರಭುತ್ವ ದೂಷಕೌ= ಪ್ರಭುತ್ವವನ್ನೇ ನಿಂದಿಸುವ ಪೂರ್ವೌದ್ವೌ= ಕ್ರೀಡಾರ್ಥಂ ಭೋಗಾರ್ಥಂ ಎಂಬ ಎರಡು ಪಕ್ಷಗಳು ಪೂರ್ವಪಕ್ಷಿಣಾಂ= ಪೂರ್ವ ಪಕ್ಷಿಗಳಿದ್ದು, ಉಭಾವಪಿ= ಈ ಎರಡು ಪಕ್ಷಗಳೂ, ನ ಮತ್ಪಕ್ಷೌ= ನನ್ನ (ಶ್ರುತಿಯ) ಪಕ್ಷಗಳಲ್ಲ ತೃತೀಯ ಏವ= ಮೂರನೆಯದ್ದಾದ ಇಚ್ಛಾಮಾತ್ರ ಸ್ವಭಾವ ಎಂಬ, ಮೇ ಪಕ್ಷಃ= ನನ್ನ ಪಕ್ಷವು, ಪ್ರಭೋಃ= ಸಮರ್ಥನಾದ ವಿಷ್ಣುವಿನ, ಪ್ರಭುತಾಪೋಷಕಃ= ಪ್ರಭುತ್ವಕ್ಕೆ ಪೋಷಕವಾದದ್ದು (ಇಚ್ಛಾಮಾತ್ರಂ ಎಂಬ ಪಕ್ಷವು).

**ಅನುವಾದ - ಪೂರ್ಣನಾದ ಸರ್ವಶಕ್ತನಾದ ಸೃಷ್ಟಾರನಾದ ಹರಿಗೆ ಸೃಷ್ಟಿಯು ಸ್ವಭಾವವಾದುದರಿಂದ ಆಪ್ತಕಾಮನಾದುದರಿಂದಲೂ 'ಕ್ರೀಡಾರ್ಥಂ' 'ಭೋಗಾರ್ಥಂ' ಎಂಬ ಎರಡು ಪಕ್ಷಗಳು ಸರಿಯಾಗಲಾರವು ಎಂದು ಶ್ರುತಿಯು ಯುಕ್ತಿಬದ್ಧವಾಗಿ ನಿರಾಕರಿಸಿದೆ.**

**ಸೃಷ್ಟಿ ಕ್ರಿಯೆಯು ಪರಮಾತ್ಮನ ಸ್ವಭಾವ. ಪೂರ್ಣಕಾಮನಾದ ಹರಿಗೆ ಆಸೆಯಾದರೂ ಎಲ್ಲಿಂದ? ಇಂತಹ ಹರಿಯು ಕ್ರೀಡೆಯ ಸಂತೋಷಕ್ಕಾಗಿಯೋ, ಆನಂದ ಭೋಗಕ್ಕಾಗಿಯೋ ಈ ಸೃಷ್ಟಿಯನ್ನು ಮಾಡುತ್ತಾನೆ ಎಂದರೆ ಈ ಮಾತು ಅವನ ಪ್ರಭುತ್ವವನ್ನೇ ನಿಂದಿಸಿದಂತೆ. ಆದ್ದರಿಂದ 'ಭೋಗಾರ್ಥಂ' 'ಕ್ರೀಡಾರ್ಥಂ' ಎಂಬ ಎರಡು ಪಕ್ಷಗಳು ಶ್ರುತಿಗೆ ಸಮ್ಮತವಾದವುಗಳಲ್ಲ. ಆದ್ದರಿಂದ ಇವುಗಳು ಶ್ರುತಿಗೆ ಪೂರ್ವ ಪಕ್ಷಗಳು ಎಂದೇ ತಿಳಿಯಬೇಕು. 'ಇಚ್ಛಾಮಾತ್ರಂ ಪ್ರಭೋಃ ಸೃಷ್ಟಿಃ' ಎಂಬ ಮೂರನೇ ಪಕ್ಷವೇ ಶ್ರುತಿಗೆ ಸಮ್ಮತವಾದ ಪಕ್ಷವು. ಏಕೆಂದರೆ ಈ ಪಕ್ಷದಿಂದ**

ಶ್ರೀಹರಿಯ ಪ್ರಭುತ್ವಕ್ಕೆ ಹಾನಿ ಉಂಟಾಗದು? ಆದ್ದರಿಂದ 'ಪ್ರಭುತ್ವಕ್ಕೆ' ಪೋಷಕವಾದ ಈ ಪಕ್ಷವನ್ನೇ ಆಶ್ರಯಿಸಬೇಕು.

**ಭಾವವಿಲಾಸಿನೀ–** ''ಭೋಗಾರ್ಥಂ ಸೃಷ್ಟಿರಿತ್ಯನ್ಯೇ ಕ್ರೀಡಾರ್ಥಮಿತಿ ಚಾಪರೇ । ದೇವಸ್ಯೈಷ ಸ್ವಭಾವೋಯಮಾಪ್ತಕಾಮಸ್ಯ ಕಾ ಸ್ಪೃಹಾ'' ಇತಿ ಫಲಪರೀಕ್ಷಾಗ್ರಂಥೇ ಕಾ ಸ್ಪೃಹೇತಿ ಪಕ್ಷದ್ವಯಂ ಸ್ಪಷ್ಟಂ ದೂಷಯಿತ್ವಾ ಏಕಸ್ಯೈವ ಸ್ವಪಕ್ಷತ್ವೇನೋಕ್ತತ್ವಾತ್ ಅತ್ರಾಪಿ ಪ್ರಾಚೀನಪಕ್ಷದ್ವಯಂ ಪೂರ್ವಪಕ್ಷ ಏವೇತ್ಯಾಹ – ಯತ ಇತಿ ॥ ತತ್ಪೂರ್ವೋಕ್ತಂ ಪ್ರಮೇಯಮ್ । ಯಥಾ ಆನಂದೋದ್ರೇಕಾನ್ನರ್ತನಗಾನಾದಿಕಂ ಕುರ್ವತೋ ನ ತದುದ್ದೇಶ್ಯಂ ಕಿಂತ್ವಾನಂದೋದ್ರೇಕಾದೇವ ಕೇವಲಂ ಸಾ ಲೀಲಾ । ತಥಾ ಭಗವತೋಽಪ್ಯಾನಂದೋದ್ರೇಕಾದೇವ ಜಗತ್ಸೃಷ್ಟ್ಯಾದಿಲೀಲಾ । ನ ಪುನರುದ್ದೇಶ್ಯಾಪಿ ಸಾ ಅಪೂರ್ಣತ್ವಾಪಾತಾತ್ । ಅತಃ ಕ್ರೀಡಾರ್ಥಂ ಕ್ರೀಡೋದ್ದೇಶೇನ ಸೃಷ್ಟಿರಿತ್ಯಪಿ ಪೂರ್ವಪಕ್ಷ ಏವ । ಅತ ಏವ ಹಿ ಸೂತ್ರಕಾರೋಽಪಿ ಲೋಕವತ್ತುಲೀಲಾಕೈವಲ್ಯಮಿತಿ ಕೇವಲಂ ಲೀಲೇತ್ಯಾಹ ॥ ೭೫-೭೭ ॥

ವಿಷ್ಣೋಃ ಪ್ರಭುತ್ವದೂಷಕೌ ಪೂರ್ವೌ ದ್ವೌ ಪಕ್ಷೌ ಪೂರ್ವಪಕ್ಷಿಣಾಮಿತಿ ಸಂಬಂಧಃ ॥ ೭೮ ॥

ಭಗವಂತನಿಗೆ ಸೃಷ್ಟ್ಯಾದಿ ವ್ಯಾಪಾರಗಳಿಂದ ಏನೂ ಪ್ರಯೋಜನವಿಲ್ಲ, ಇದು ಶ್ರುತಿಯ ಸ್ವಂತ ಅನುಭವದ ಮಾತು ಎಂದು ಸ್ಪಷ್ಟಪಡಿಸಿ ಇದಕ್ಕೆ ಪೂರಕವಾಗಿ 'ವಾಸುದೇವ ಸಹಸ್ರನಾಮ' ದಲ್ಲಿ ಬಂದಿರುವ ಪರಾರ್ಥಕರ್ತಾ, ಕೃತ್ಯಜ್ಞಃ ಸ್ವಾರ್ಥಕೃತ್ಯ ಸದೋಜ್ಝಿತಃ ಎಂಬ ಮೂರು ನಾಮಗಳನ್ನು ಮುಂದೆ ಪ್ರಮಾಣವನ್ನಾಗಿ ನೀಡುತ್ತಿದ್ದಾರೆ-

ಮಾಮಾನಯತ್ ತಮೋಜಿದ್ ಯಃ ಪುತ್ರಾಯೋಪದಿದೇಶ ಚ ।
ಪರಾರ್ಥಕರ್ತಾ ಕೃತ್ಯಜ್ಞಃ ಸ್ವಾರ್ಥಕೃತ್ಯಸದೋಜ್ಝಿತಃ ॥ ೭೯ ॥

ಕೋನ್ವರ್ಥಸ್ತಸ್ಯ ತೇನಾಭೂತ್ ಪೂರ್ಣಃ ಸ್ವಫಲವಾನ್ನ ತತ್ ।
ಅನ್ವಭಾವಿ ಮಯ್ಯೈವೇದಂ ತೇನಾನುಭವಬಾಧಿತೌ ॥ ೮೦ ॥

ತಾ ಪೂರ್ವೌ ನೈವ ಪಕ್ಷೌ ಮೇ ಕಿಂತು ಗಂತುಸ್ತಮಾಂಸಿ ತೌ ।
ಇತ್ಯರ್ಥಃ ಪ್ರಬಲಾಕ್ಷೇಪಲಭ್ಯೋ ಹ್ಯತ್ರೋಪಲಭ್ಯತೇ ॥ ೮೧ ॥

ಅತಃ ಫಲಪರೀಕ್ಷಾಯಾಮೇಕಸ್ಯೈವ ಸ್ವಪಕ್ಷತಾಮ್ ।
ಸಾಽಭಿಪ್ರೈತಿ ತಥಾ ಪೂರ್ವತ್ರಾಪ್ಯೇಕಸ್ಯ ಸ್ವಪಕ್ಷತಾಮ್ ॥ ೮೨ ॥

**ಅರ್ಥ–** ತಮೋಜಿತ್= ತಮೋನಾಮಕ ದೈತ್ಯನನ್ನು ಸದೆಬಡಿದ, ಯಃ= ಯಾವ ಭಗವಂತನು, ಮಾಂ= ಶ್ರುತಿರೂಪಳಾದ ನನ್ನನ್ನು ಆನಯತ್= ತಂದನೋ, ಚ= ಮತ್ತು,

ಯಃ= ಯಾವ ಭಗವಂತನು, ಪುತ್ರಾಯ= ಮಗನಾದ ಚತುರ್ಮುಖ ಬ್ರಹ್ಮನಿಗೋಸ್ಕರ, ಉಪದಿದೇಶ= ಶ್ರುತಿರೂಪಳಾದ ನನ್ನನ್ನು ಉಪದೇಶಿಸಿದನೋ, ಕೃತಜ್ಞಃ= ಮಾಡಬೇಕಾದ ಕೆಲಸಗಳನ್ನು ಚೆನ್ನಾಗಿ ಬಲ್ಲವನೂ, ಪರಾರ್ಥಕರ್ತಾ= ಪರಪ್ರಯೋಜನಕ್ಕಾಗಿ ಕರ್ಮಗಳನ್ನು ಮಾಡುವವನೂ, ಸ್ವಾರ್ಥಕೃತ್ಯ= ಸ್ವಪ್ರಯೋಜನದ ಕ್ರಿಯೆಗಳಿಂದ, ಸದೋಜ್ಝಿತಃ= ನಿರಂತರ ದೂರನೂ ಆಗಿರುವನೋ, ತಸ್ಯ= ಬ್ರಹ್ಮೋಪದೇಶಕನಾದ ಸರ್ವಜ್ಞನಿಗೆ ತೇನ= ಶ್ರುತಿಗಳನ್ನು ಹೊತ್ತುತಂದಿದ್ದರಿಂದ, ಕೋನ್ವರ್ಥಃ= ಏನು ಪ್ರಯೋಜನವಿದೆ? ತತ್= ಆಕಾರಣದಿಂದ, ಸ್ವಫಲವಾನ್ನ= ಸ್ವ ಪ್ರಯೋಜನ ಉಳ್ಳವನಲ್ಲ (ಆದ್ದರಿಂದಲೇ) ಪೂರ್ಣಃ= ಪರಿಪೂರ್ಣನು ಅಭೂತ್= ಆದನು, ಇದಂ= ಈ ಸ್ವಪ್ರಯೋಜನರಾಹಿತ್ಯ ಪ್ರಮೇಯವು, ಮಯ್ಯೈವ= ಶ್ರುತಿ ರೂಪಳಾದ ನನ್ನಿಂದಲೇ, ಅನ್ವಭಾವಿ= ಸೃಷ್ಟಿಯ ಆರಂಭದಲ್ಲಿ ಅನುಭವಿಸಲ್ಪಟ್ಟಿತು, ತೇನ= ಆ ಕಾರಣದಿಂದ, ಅನುಭವಬಾಧಿತೌ= ನನ್ನ ಅನುಭವಕ್ಕೆ ವಿರುದ್ಧಗಳಾದ ತೌ ಪೂರ್ವಪಕ್ಷೌ= ಭೋಗಾರ್ಥಂ ಕ್ರೀಡಾರ್ಥಂ ಎಂಬ ಆ ಎರಡು ಪೂರ್ವಪಕ್ಷಗಳು, ಮೇ= ನನ್ನ, ಪಕ್ಷೌ= ಸಿದ್ಧಾಂತಗಳು, ನೈವ= ಅಲ್ಲವೇ ಅಲ್ಲ, ಕಿಂತು= ಹೊರತು, ತೌ= ಆ ಎರಡು ಪಕ್ಷಗಳು, ತಮಾಂಸಿ= ಅಂಧಃ ತಮಸ್ಸುಗಳನ್ನು, ಗಂತುಃ= ಹೋಗುವವನದ್ದು, ಇತಿ= ಈ ರೀತಿಯಾಗಿ ಪ್ರಬಲಾಕ್ಷೇಪಲಭ್ಯಃ= ಪ್ರಬಲವಾದ ಆಕ್ಷೇಪದಿಂದ ಲಭ್ಯವಾದ ಅರ್ಥಃ= ಅರ್ಥವು, ಅತ್ರ= ಈ ಶ್ರುತಿಪ್ರಕರಣದಲ್ಲಿ, ಉಪಲಭ್ಯತೇ ಹಿ= ದೊರೆಯುತ್ತಿದೆಯಷ್ಟೇ! ಅತಃ= ಆದ್ದರಿಂದ ಫಲಪರೀಕ್ಷಾಯಾಂ= ಫಲ ಪರೀಕ್ಷಾ ಶ್ರುತಿ ಪ್ರಕರಣದಲ್ಲಿ, ಸಾ= ಆ ಶ್ರುತಿಯು ಏಕಸ್ಯೈವ= ದೇವಸ್ಯೈಷ ಎಂಬ ಒಂದನ್ನೇ ಸ್ವಪಕ್ಷತಾಂ= ತನಗೆ ಸಮ್ಮತವಾದ ಪಕ್ಷವೆಂದು, ಅಭಿಪ್ರೈತಿ= ಅಭಿಪ್ರಾಯ ಹೊಂದಿದೆ, ತಥಾ= ಅದರಂತೆ, ಪೂರ್ವತ್ರಾಪಿ= ದೇವಸ್ಯೈಷ ಎಂಬ ಪ್ರಕರಣಕ್ಕಿಂತ ಹಿಂದಿನ ಪ್ರಕರಣವಾದ ವಿಭೂತಿಂ ಪ್ರಸವಂ' 'ಸ್ವಪ್ನಮಾಯಾ' ಎಂಬ ಪ್ರಕರಣದಲ್ಲಿಯೂ, ಏಕಸ್ಯ- ಇಚ್ಛಾಮಾತ್ರಂ ಎಂಬ ಮಾತೊಂದನ್ನೇ, ಸ್ವಪಕ್ಷತಾಂ= ತನ್ನ ಸಿದ್ಧಾಂತವೆಂದು, ಅಭಿಪ್ರೈತಿ= ಶ್ರುತಿಯು ಅಭಿಪ್ರಾಯಪಟ್ಟಿದೆ.

(ಈ ಪ್ರಕರಣವನ್ನು ರಾಜರು ಶ್ರುತಿಮಾತೆಯೇ ಮಾತನಾಡುವಂತೆ ಚಿತ್ರಿಸಿದ್ದಾರೆ).

**ಅನುವಾದ - ಶ್ರುತಿಮಾತೆ ಹೇಳುತ್ತಿದ್ದಾಳೆ : 'ತಮೋನಾಮಕನಾದ ದೈತ್ಯನು ಬ್ರಹ್ಮದೇವರ ಮನೆಯಿಂದ ಶ್ರುತಿರೂಪಳಾದ ನನ್ನನ್ನು ಕದ್ದು ತಂದ. ಬ್ರಹ್ಮದೇವರು ದೇವರಲ್ಲಿ ಮೊರೆಹೊಕ್ಕರು. ಅವರ ಪ್ರಾರ್ಥನೆಯಂತೆ ದೈತ್ಯನ ಕೈಯಲ್ಲಿ ಸಿಕ್ಕಿಬಿದ್ದ ನನ್ನನ್ನು ರಕ್ಷಿಸಿ ದೈತ್ಯನನ್ನು ಸಂಹರಿಸಿ ಶ್ರೀಹರಿಯು ಹೊತ್ತು ತಂದು ಬ್ರಹ್ಮದೇವರಿಗೆ ಉಪದೇಶಿಸಿದ. ಯಾವ ಕೆಲಸಗಳನ್ನು ಹೇಗೆ ಮಾಡಬೇಕೆಂದು ಚೆನ್ನಾಗಿ ಬಲ್ಲವನು ಅವನೊಬ್ಬನೇ. ಹೀಗಿದ್ದರೂ ಯಾವ ಕೆಲಸಗಳನ್ನು ತನಗಾಗಿ ಮಾಡದೆ ಇನ್ನೊಬ್ಬರ ಪ್ರಯೋಜನಕ್ಕಾಗಿ ಮಾಡುವವನೂ ಆತನೇ ಆಗಿದ್ದಾನೆ. ಸ್ವಾರ್ಥದ ಕೆಲಸಗಳನ್ನು ಎಂದೂ ಮಾಡಲಾರ'.**

(ಇಷ್ಟು ವಿಚಾರ ವಾಸುದೇವ ಸಹಸ್ರನಾಮದಲ್ಲಿದೆ. ಪರಾರ್ಥಕರ್ತಾ, ಕೃತ್ಯಜ್ಞಃ, ಸ್ವಾರ್ಥ ಕೃತ್ಯ ಸದೋಜ್ಝಿತಃ ಎಂದು ಮೂರು ವಾಸುದೇವ ಸಹಸ್ರನಾಮಾಂತ ರ್ಗತವಾದ ನಾಮಗಳು).

''ಬ್ರಹ್ಮಾದಿ ಬುದ್ಧಿಗೆ ನಿಲುಕದ ವಿಚಾರವನ್ನು ತಿಳಿದ ಸರ್ವಜ್ಞ ಶಿಖಾಮಣಿಯಾದ ಶ್ರೀಹರಿಗೆ ಶ್ರುತಿಗಳನ್ನು ಹೊತ್ತು ತಂದಿದ್ದರಿಂದ ಯಾವ ಲಾಭವಿದೆ? ಶ್ರುತಿಯನ್ನು ತಂದಿದ್ದರಿಂದ ತನಗೆ ಲಾಭವಿರುತ್ತಿದ್ದರೆ ಅದನ್ನು ಅನ್ಯರಿಗೆ ನೀಡುವುದು ಕೂಡುವುದಿಲ್ಲ. ಆದರೆ ಬ್ರಹ್ಮನಿಗೆ ನೀಡಿದ್ದಾನೆ. ವಿಚಾರ ಮಾಡಿರಿ! ಆದ್ದರಿಂದ ಪೂರ್ಣನಾದ ಹರಿಯು ಸ್ವಾರ್ಥ ಉಳ್ಳವನಲ್ಲವೆಂದೇ ಸಿದ್ಧವಾಯಿತು. ಈ ಪ್ರಮೇಯವನ್ನು ಸೃಷ್ಟಿಯ ಆರಂಭದಲ್ಲಿ ಶ್ರುತಿರೂಪಳಾದ ನಾನು ಚೆನ್ನಾಗಿ ಅನುಭವಿಸಿ ಹೇಳುತ್ತಿದ್ದೇನೆ. ಆದ್ದರಿಂದ ಭೋಗಾರ್ಥ ಮತ್ತು ಕ್ರೀಡಾರ್ಥ ಎಂಬ ಹಿಂದಿನ ಮಾತುಗಳು ಶ್ರುತಿರೂಪಳಾದ ನನ್ನ ಅನುಭವದಿಂದ ಬಾಧಿತಳಾಗಿದ್ದಾವೆ. ಆದ್ದರಿಂದ ಅವುಗಳು ನನ್ನ ಪಕ್ಷಗಳಲ್ಲ. ಹೊರತು ಅಂಧಂತಮೋಯೋಗ್ಯರ ಪಕ್ಷಗಳಾಗಿವೆ''.

ಹೀಗೆ ಶ್ರುತಿಮಾತೆಯ ಪ್ರಬಲವಾದ ಆಕ್ಷೇಪದ ಹಿನ್ನೆಲೆಯಲ್ಲಿ ದೊರೆತ ಅರ್ಥವು ಇಷ್ಟು. 'ಫಲಪರೀಕ್ಷಾ ಗ್ರಂಥ' ದಲ್ಲಿ ಹೇಳಲ್ಪಟ್ಟ ವಿಚಾರಗಳಲ್ಲಿ ಶ್ರುತಿಗೆ ಸಮ್ಮತವಾದ ಪಕ್ಷವು 'ದೇವಸ್ಯೈಷ' ಎಂಬ ಒಂದೇ ಪಕ್ಷವೇ ಆಗಿದೆ. ಅದರಂತೆ ವಿಭೂತಿಂ ಪ್ರಸವಂ, ಸ್ವಪ್ನಮಾಯಾಸರೂಪಾ ಎಂಬಲ್ಲಿಯೂ ಇಚ್ಛಾಮಾತ್ರಂ ಎಂಬ ಮಾತೇ ತನಗೆ ಅಭಿಮತವಾದ ಸಿದ್ಧಾಂತ ಎಂದು ಶ್ರುತಿ ಹೇಳುತ್ತಿದೆ.

**ಭಾವವಿಲಾಸಿನೀ–** ಭಗವತಃ ಸ್ವಪ್ರಯೋಜನಾಭಾವೇ ಶ್ರುತೇರನುಭವಂ ವಿಶೇಷ್ಯನಿರ್ದೇಶವ್ಯಾಜೇನ ವಾಸುದೇವಸಹಸ್ರನಾಮಸ್ಥನಾಮಾನಿ ಚ ಪ್ರಮಾಣಯತಿ ॥ **ಮಾಮಿತಿ** ॥ ಬ್ರಹ್ಮಣಃ ಸದನಾತ್ತಮೋನಾಮಕದೈತ್ಯೇನ ನೀತಾಂ ಶ್ರುತಿರೂಪಾಂ ಮಾಂ ತಸ್ಯ ಬ್ರಹ್ಮದೀನಾಂ ಬುದ್ಧ್ಯಗೋಚರಕೌಶಲಾಭಿಜ್ಞಸ್ಯ ಸರ್ವಜ್ಞಸ್ಯ । ತೇನ ಶ್ರುತೀನಾಮಾನಯನೇನ । ಅರ್ಥಾಭಾವಮೇವ ವಿಶದಯತಿ ॥ **ಪುತ್ರಾಯೇತಿ** ॥ ಪುತ್ರಭೂತಬ್ರಹ್ಮಣಃ ಪ್ರಯೋಜನಾರ್ಥಮೇವಾನೀತವಾನ್ । ನ ಸ್ವಾರ್ಥಮ್ । ತಥಾಸತಿ ಪರಸ್ಮೈ ಪ್ರದಾನಾಯೋಗಾದಿತಿ ಭಾವಃ । ತತ್ತಸ್ಮಾತ್ । ಪಶ್ಚಾದೇವೇರ್ದೇನ ಪ್ರಯೋಜನಾಭಾವಸ್ಯ ಲೋಕಸಿದ್ಧತ್ವಾತ್ ಸ್ವಸ್ಯಾಪಿ ವೇದಾನಯನೇನ ಪ್ರಯೋಜನಾಭಾವಂ ಸ್ಫೋರಯಿತುಮೇವ ಹಯಶ್ವರೂಪೇಣ ಮತ್ಸ್ಯರೂಪೇಣ ಚಾನೀತವಾನ್ । ಅನ್ಯಥಾ ನರರೂಪೇಣೈವಾನೇಷ್ಯತ್ । ಏತದಪ್ಯಭಿಪ್ರೇತ್ಯೋಕ್ತಂ ತಸ್ಯೇತಿ । ಅಶ್ವಸ್ಯ ಮತ್ಸ್ಯಸ್ಯ ಚೇತ್ಯರ್ಥಃ । ಇದಂ ಸ್ವಪ್ರಯೋಜನರಾಹಿತ್ಯಮ್ ॥ ೭೯-೮೦ ॥

ಸಾ ಶ್ರುತಿಃ ॥ ೮೨ ॥

**ವಿವರಣೆ** - ಲೋಕದಲ್ಲಿ ಕುದುರೆ-ಮೀನು ಮುಂತಾದ ಪಶು-ಪ್ರಾಣಿಗಳಿಗೆ ವೇದದಿಂದ ಯಾವ ಪ್ರಯೋಜನವೂ ಇಲ್ಲ. ಈ ವಿಚಾರ ಲೋಕಪ್ರಸಿದ್ಧವಾದುದು. ಇದರಂತೆ ಭಗವಂತನಿಗೂ ವೇದಗಳಿಂದ ಯಾವ ಪ್ರಯೋಜನವೂ ಇಲ್ಲ. ಇದನ್ನು ಶ್ರೀಹರಿಯು ಸ್ಪಷ್ಟಪಡಿಸಲೆಂದೇ ವೇದಗಳನ್ನು ಹಯಗ್ರೀವ, ಮತ್ಸ್ಯ ರೂಪಗಳಿಂದ ಹೊತ್ತು ತಂದಿದ್ದಾನೆ. ಇಲ್ಲವಾದಲ್ಲಿ ನರರೂಪದಿಂದಲೇ ತರಬಹುದಿತ್ತು. ತನಗೆ ಯಾವ ಸ್ವಾರ್ಥವೂ ಇಲ್ಲ ಎಂದು ಸ್ಪಷ್ಟಪಡಿಸಲಿಕ್ಕಾಗಿಯೇ ಪಶ್ವಾದಿರೂಪಗಳಿಂದ ವೇದ ತಂದಿದ್ದಾನೆ. ತಂದು ತಾನೇ ಇಟ್ಟುಕೊಳ್ಳದೇ ಬ್ರಹ್ಮನಿಗೆ ಕೊಟ್ಟಿದ್ದಾನೆ. ಆದರಿಂದ ತನ್ನ ಸ್ವಾರ್ಥವಿಲ್ಲ. ಇದನ್ನು ರಾಜರು ಕೋನ್ವರ್ಥಃ ತಸ್ಯ ತೇನಾಭೂತ್ ಎಂಬಲ್ಲಿ ತಸ್ಯ ಎಂಬ ಪದದಿಂದ ಸೂಚಿಸಿದ್ದಾರೆ.

'ಇಚ್ಛಾಮಾತ್ರಂ ಪ್ರಭೋಃ ಸೃಷ್ಟಿಃ' ಎಂಬ ಮೂರನೇ ಪಕ್ಷವೇ ಸ್ವಪ್ನಮಾಯಾ ಸರೂಪೇತಿ ಎಂಬಲ್ಲಿ ಕ್ರೀಡಾರ್ಥಂ ಸೃಷ್ಟಿರಿತ್ಯನ್ಯೇ ಎಂಬಲ್ಲಿಯೂ ಸಿದ್ಧಾಂತವಾಗಿದೆ ಎನ್ನಲು ಇನ್ನೊಂದು ಉಪೋದ್ಬಲಕ ಯುಕ್ತಿಯನ್ನು ಮುಂದೆ ಹೇಳುತ್ತಾರೆ -

ದೇವಸ್ಯ ಹ್ಯಾಪ್ತಕಾಮಸ್ಯ ಪ್ರಾಗುಕ್ತಾ ಪ್ರಭುತೋಚಿತಾ ।
ಅತಃ ಸಮಾಖ್ಯಯಾ ಪಕ್ಷೌ ತಾವೇವಾಭಿಮತೌ ಜಗೌ ॥ ೮೩ ॥

ಸ್ವಭಾವತೋಕ್ತಿತಶ್ಚಾಂತೇ ಮಾಯಾಸೃಷ್ಟಿಂ ನಿಷೇಧತಿ ।
ಅತ್ರೋಕ್ತಂ ನಿಃ ಸ್ಪೃಹತ್ವಂ ಚ ತಥೇಶಸ್ಯಾಪ್ತಕಾಮತಾ ॥ ೮೪ ॥

ಸೃಷ್ಟೇರಿಚ್ಛಾಮಾತ್ರತೋಕ್ತ್ಯಾ ಯತ್ ತತ್ರಾಪಿ ನಿರೂಪ್ಯತೇ ।
ಅತೋಪಿ ಪಕ್ಷೌ ದ್ವಾವೇತೌ ಶ್ರುತೇಃ ಸ್ವಮತತಾಂ ಗತೌ ॥ ೮೫ ॥

**ಅರ್ಥ–** ಆಪ್ತಕಾಮಸ್ಯ= ಆಪ್ತಕಾಮನಾದ ದೇವಸ್ಯ= ಕ್ರೀಡಾದಿಗುಣ ವಿಶಿಷ್ಟನಾದ, ಅಸ್ಯ ಹಿ= ಶ್ರೀಹರಿಗೇ, ಪ್ರಾಗುಕ್ತಾ= ಹಿಂದಿನ 'ಇಚ್ಛಾಮಾತ್ರಂ ಪ್ರಭೋಃ ಸೃಷ್ಟಿಃ' ಎಂಬ ಶ್ರುತಿಯಲ್ಲಿ ಹೇಳಿದ ಪ್ರಭುತಾ= ಪ್ರಭುತ್ವವು, ಉಚಿತಾ= ಹೊಂದಿಕೆಯಾಗುತ್ತದೆ. ಅತಃ= ಆದ ಕಾರಣ, ಸಮಾಖ್ಯಯಾ= ದೇವಸ್ಯೈಷಃ ಎಂಬ ಶುತಿಗೆ 'ಇಚ್ಛಾಮಾತ್ರಂ ಪ್ರಭೋಃ' ಎಂಬ ಶ್ರುತಿಯು ಸಮಾಖ್ಯೆಯಾಗಿರುವುದರಿಂದ, ತಾವೇವ= ಪರಸ್ಪರ ಈ ಎರಡು ಪಕ್ಷೌ= ಪಕ್ಷಗಳನ್ನೇ, ಅಭಿಮತೌ ಜಗೌ= ತನ್ನ ಅಭಿಮತವಾದ ಸಿದ್ಧಾಂತವೆಂದು ಉಪನಿಷತ್ತು ಹೇಳುತ್ತಿವೆ. ಮಾಯಾಸೃಷ್ಟಿಂ= ಸ್ವಪ್ನಮಾಯಾ ಸರೂಪೇತಿ ಎಂಬ ಆರಂಭದ ಶ್ರುತಿಯಲ್ಲಿಹೇಳಿದ ಮಾಯಾ ಸೃಷ್ಟಿಯನ್ನು ಅಂತೇ= ಕೊನೆಯ ಶ್ರುತಿಯಲ್ಲಿ, ಸ್ವಭಾವತೋಕ್ತಿತಃ= ದೇವಸ್ಯೈಷ ಸ್ವಭಾವೋಯಂ ಎಂಬ ಸ್ವಭಾವ ಎಂಬ ಮಾತಿನಿಂದ ನಿಷೇಧತಿ= ನಿಷೇಧಿಸುತ್ತಿದೆ. ಅತ್ರೋಕ್ತಂ= ದೇವಸ್ಯೈಷ ಎಂಬ ಶ್ರುತಿಯಲ್ಲಿ ಹೇಳಿದ, ನಿಸ್ಪೃಹತ್ವಂ= ಕಾಸ್ಪೃಹಾ ಎಂಬ ಆಸೆಯ ಅಭಾವವು, ತಥಾ= ಹಾಗೆಯೇ, ಮಾಯಾ ಸೃಷ್ಟಿಯನ್ನು ನಿಷೇಧಿಸುತ್ತದೆ,

ಆಪ್ತಕಾಮತಾ= ಸ್ವರಮಣತ್ವವು, ತತ್ರಾಪಿ= ಇಚ್ಛಾಮಾತ್ರಂ ಎಂಬ ಶ್ರುತಿಯಲ್ಲಿ ಸೃಷ್ಟೇರಿಚ್ಛಾಮಾತ್ರತೋಕ್ತ್ಯಾ= ಸೃಷ್ಟಿಯು ಇಚ್ಛಾಮಾತ್ರದಿಂದ ಆಗಿದೆ ಎಂಬ ಮಾತಿನ ಮೂಲಕ ನಿರೂಪ್ಯತೇ= ಹೇಳಲ್ಪಟ್ಟಿದೆ. ಯತ್ ಅತೋಽಪಿ= ಈ ಕಾರಣದಿಂದಲೂ, ಏತೌ ದ್ವಾವಕ್ಷೌ= 'ಇಚ್ಛಾಮಾತ್ರಂ ಸ್ವಭಾವೋಽಯಂ' ಎಂಬ ಪಕ್ಷಗಳು, ಶ್ರುತೇಃ= ಶ್ರುತಿಗೆ ಸ್ವಮತತಾಂ ಗತೌ= ಸ್ವಾಭಿಪ್ರಾಯವೆನಿಸಿದವು.

**ಅನುವಾದ -** (ದೇವಸ್ಯೈಷ ಎಂಬ ಶ್ರುತಿಯಲ್ಲಿ ಹೇಳಿದ) 'ಆಪ್ತಕಾಮತ್ವ' 'ದೇವತ್ವ' ಗುಣವಿಶಿಷ್ಟನಾದ ಶ್ರೀಹರಿಗೇ 'ಇಚ್ಛಾಮಾತ್ರಂ' ಎಂಬ ಶ್ರುತಿಯಲ್ಲಿ ಹೇಳಿದ 'ಪ್ರಭುತ್ವ' ಗುಣವು ಹೊಂದಿಕೆಯಾಗುತ್ತದೆ. ಆದ್ದರಿಂದ 'ದೇವಸ್ಯೈಷ' ಎಂಬ ಶ್ರುತಿಯು 'ಇಚ್ಛಾಮಾತ್ರಂ' ಎಂಬ ಶ್ರುತಿಯು, ಪರಸ್ಪರವಾಗಿ ಸಮಾಖ್ಯಾ ಶ್ರುತಿ ಎನಿಸಿವೆ. ಹೊಂದಿಕೆಯಾಗುವ ಸಿದ್ಧಾಂತ ಪ್ರಮೇಯ ಗುಣಗಳನ್ನು ಪರಸ್ಪರ ಹೇಳುತ್ತಿವೆ. 'ದೇವಸ್ಯೈಷ' ಎಂಬ ಶ್ರುತಿಯಲ್ಲಿ ಹೇಳಿದ 'ಸ್ವಭಾವ' ಎಂಬ ವಚನವು ಮಾಯಾ ಸೃಷ್ಟಿಯಲ್ಲ ಎಂದು 'ಇಚ್ಛಾಮಾತ್ರಂ' ಶ್ರುತಿಗೆ ಪೂರಕವಾಗಿ ಮಾತನಾಡುತ್ತಿದೆ. ದೇವಸ್ಯೈಷ ಎಂಬ ಶ್ರುತಿಯಲ್ಲಿ ಹೇಳಿದ ನಿಸ್ಸ್ಪೃಹತ್ವ, ಆಪ್ತಕಾಮತ್ವ ಗುಣಗಳನ್ನು ಇಚ್ಛಾಮಾತ್ರಂ ಎಂಬ ಶ್ರುತಿಯು ಇಚ್ಛಾಮಾತ್ರ ಎಂಬ ವಚನದಿಂದ ಅಲ್ಲಿ ಹೇಳುತ್ತಿದೆ. ಆದ್ದರಿಂದಲೂ ಇಚ್ಛಾಮಾತ್ರಂ ದೇವಸ್ಯೈಷ ಈ ಎರಡು ಶ್ರುತಿಗಳೂ ತನಗೆ ಅಭಿಮತವಾದ ಸಿದ್ಧಾಂತವನ್ನೇ ಹೇಳುತ್ತಿವೆ.

**ಭಾವವಿಲಾಸಿನೀ–** ತೃತೀಯಪಕ್ಷಯೋರೇವೋಭಯತ್ರಾಪಿ ಸಿದ್ಧಾಂತತ್ವೇನ ಸೂಚಕಾಂತರಂ ಚಾಹ **– ದೇವಸ್ಯೇತಿ ॥** ಸಮಾಖ್ಯಯಾ ಮಹಾಮಹಿಮ ಪ್ರತಿಪಾದಕತ್ವೇನ ಸಮಾನಾಖ್ಯಯಾ ಯತ್ ಯಸ್ಮಾತ್ । ತತ್ರ ''ಇಚ್ಛಾಮಾತ್ರಂ ಪ್ರಭೋಃಸೃಷ್ಟಿಃ'' ಇತಿ ಪಕ್ಷೇ ॥ ೮೩-೮೫ ॥

'ವಿಭೂತಿಂ ಪ್ರಸವಂ ತ್ವನ್ಯೇ ಮನ್ಯಂತೇ ಸೃಷ್ಟಿಚಿಂತಕಾಃ' ಎಂದು ಶ್ರುತಿಯು ಪರಿಣಾಮವಾದವನ್ನು ಅನುವಾದಿಸಿಕೊಂಡು ಮುಂದೆ ನಿರಾಕರಿಸುತ್ತಿದೆ. 'ಸ್ವಪ್ನಮಾಯಾ ಸರೂಪೇತಿ ಸೃಷ್ಟಿರನ್ಯೈರ್ವಿಕಲ್ಪಿತಾ' ಎಂಬ ಶ್ರುತಿಯು ಮಿಥ್ಯಾ ಸೃಷ್ಟಿವಾದವನ್ನು ಅನುವಾದಿಸಿಕೊಂಡು ಮುಂದೆ ನಿರಾಕರಿಸುತ್ತಿದೆ. ಈ ಪರಿಣಾಮ ಸೃಷ್ಟಿ- ಮಿಥ್ಯಾ ಸೃಷ್ಟಿಯನ್ನು ಹೇಳುವ ಈರ್ವರ ಮತದ ಪ್ರಕಾರವೂ ಬ್ರಹ್ಮನಿಗೇ ಸಕಲ ಜಗತ್ತಿನ ಭೋಗ-ಕ್ರೀಡೆಗಳು ಹೇಳಲ್ಪಟ್ಟಿವೆ. ಆದ್ದರಿಂದ ಈ ಎರಡು ಪಕ್ಷಗಳೂ ಕ್ರೀಡಾರ್ಥಂ, ಭೋಗಾರ್ಥಂ ಎಂಬ ನಿಂದನೀಯ ಪಕ್ಷಗಳಲ್ಲಿಯೇ ಸೇರಿಕೊಂಡಿವೆ. ಆದ್ದರಿಂದ ವಿಭೂತಿಂ, ಸ್ವಪ್ನಮಾಯಾ ಎಂಬ ಈ ಎರಡೂ ಪಕ್ಷಗಳ ನಿರಾಕರಣೆಯನ್ನು ಅವಶ್ಯವಾಗಿ ಮಾಡಬೇಕು. ಹಾಗಾಗಿ ಈ ಎರಡೂ ಪಕ್ಷಗಳೂ ಶ್ರುತಿಮಾತೆಗೆ ಪೂರ್ವ ಪಕ್ಷಗಳಾಗಿವೆ. ಇದು ಅಪರಿಹಾರ್ಯ ಎಂದು ಮುಂದಿನ ಮಾತುಗಳಿಂದ ತಿಳಿಸುತ್ತಿದ್ದಾರೆ -

ನಾನಾಜೀವಾದಿಭಾವೇನ ಕ್ರೀಡಾಭೋಗಾದಿಲಬ್ಧಯೇ ।
ಯತಃ ಸೃಷ್ಟಿಪರೀಕ್ಷಾಯಾಮಪಿ ಪಕ್ಷದ್ವಯಂ ಪ್ರಭೋಃ ॥ ೮೬ ॥

ಸೃಷ್ಟಿಮಾಹ ತತಸ್ತಚ್ಚ ಪಕ್ಷದ್ವಯಮಿಯಂ ಶ್ರುತಿಃ ।
ಫಲಾಸ್ಯಾಕ್ಷೇಪಿಕಾ ನ್ಯಾಯಸಾಮ್ಯಾದಾಕ್ಷಿಪದೇವ ಹಿ ॥ ೮೭ ॥

ಕಾಸ್ಪೃಹೇತಿ ಶ್ರುತಿಸ್ತಸ್ಮಾತ್ ಸ್ಥಾನದ್ವಿತಯಗೌ ಚ ತೌ ।
ದ್ವೌ ದ್ವೌ ಪಕ್ಷೌ ಫಲಾಪೇಕ್ಷಾಪಕ್ಷಪರ್ಯವಸಾಯಿನೌ ।
ಧಿಕ್ಕೃತ್ಯ ತತ್ರ ಚಾತ್ರಾಪಿ ತೃತೀಯಂ ಪಕ್ಷಮಾದದೇ ॥ ೮೮ ॥

**ಅರ್ಥ–** ಯತಃ= ಯಾವ ಕಾರಣದಿಂದ ಸೃಷ್ಟಿಪರೀಕ್ಷಾಯಾಂ= ಸೃಷ್ಟಿ ಪರೀಕ್ಷಾ ಮಾಡಿದಾಗ, ಪಕ್ಷದ್ವಯಂ ವಿಭೂತಿಂ, ಸ್ವಪ್ನಮಾಯಾ ಎಂಬ ಎರಡು ಪಕ್ಷಗಳು, ಪ್ರಭೋಃ= ಬ್ರಹ್ಮನಿಗೆ ಕ್ರೀಡಾಭೋಗಾದಿಲಬ್ಧಯೇ= ಕ್ರೀಡಾ-ಭೋಗಗಳ ಪ್ರಾಪ್ತಿಗೆ, ನಾನಾ ಜೀವಾದಿ ಭಾವೇನ= ನಾನಾ ಜೀವಭಾವ ರೂಪದಿಂದ, ಸೃಷ್ಟಿಂ= ಸೃಷ್ಟಿಯನ್ನು, ಆಹ= ಹೇಳಿದುವೋ, ತತಃ= ಆ ಕಾರಣದಿಂದ, ಫಲಸ್ಯ ಆಕ್ಷೇಪಿತಾ= ಫಲವನ್ನು ಆಕ್ಷೇಪಿಸುವ, ಇಯಂ ಶ್ರುತಿಃ= ಆಪ್ತಕಾಮಸ್ಯ ಕಾಸ್ಪೃಹಾ ಎಂಬ ಶ್ರುತಿಯು ತಚ್ಚ ಪಕ್ಷದ್ವಯಂ= ವಿಭೂತಿಂ, ಸ್ವಪ್ನಮಾಯಾ ಎಂಬ ಎರಡು ಪಕ್ಷಗಳನ್ನು, ನ್ಯಾಯ ಸಾಮ್ಯಾತ್= ಆಕ್ಷೇಪಿನ್ಯಾಯ ಸಾಮ್ಯದಿಂದ ಆಕ್ಷಿಪದೇವ ಹಿ= ಖಂಡಿಸಿದೆಯಷ್ಟೇ! ತಸ್ಮಾತ್= ಆದಕಾರಣದಿಂದ ಕಾ ಸ್ಪೃಹಾ ಇತಿ ಶ್ರುತಿಃ= ಕಾ ಸ್ಪೃಹಾ ಎಂಬ ಶ್ರುತಿಯು, ತೌ ಚ = ಆ ಎರಡು, ಸ್ಥಾನದ್ವಿತಯಗೌ= ಎರಡು ಸ್ಥಾನಗಳಲ್ಲಿರುವ, ದ್ವೌ ದ್ವೌ= ಎರಡು ಎರಡು ಫಲಾಪೇಕ್ಷಾ ಪಕ್ಷಪರ್ಯವಸಾಯಿನೌ= ಹರಿಗೆ ಫಲದ ಅಪೇಕ್ಷೆ ಇದೆ ಎಂದು ಹೇಳುವಲ್ಲಿ ಪರ್ಯವಸಾನಗೊಳಿಸುವ, ಪಕ್ಷೌ= ಸಿದ್ಧಾಂತಾಭಾಸ ಪಕ್ಷಗಳನ್ನು, ಧಿಕ್ಕೃತ್ಯ= ತಿರಸ್ಕರಿಸಿ, ತತ್ರ= ಮೊದಲಿನ ಪ್ರಕರಣದಲ್ಲಿ, ಅತ್ರಾಪಿ= ದೇವಸ್ಯೈಷ ಎಂಬ ಪ್ರಕರಣದಲ್ಲಿಯೂ, ತೃತೀಯಂ= ಮೂರನೆಯದ್ದಾದ, ಪಕ್ಷಂ= 'ಇಚ್ಛಾಮಾತ್ರಂ' ಮತ್ತು ಅಥವಾ 'ದೇವಸ್ಯೈಷ ಸ್ವಭಾವೋಯಂ' ಎಂಬ ಪಕ್ಷವನ್ನೇ, ಆದದೇ= ಸ್ವೀಕರಿಸಿತು.

**ಅನುವಾದ** - ಪರಿಣಾಮ ಸೃಷ್ಟಿವಾದ ಮತ್ತು ಮಿಥ್ಯಾಸೃಷ್ಟಿವಾದಗಳೆರಡೂ ಬ್ರಹ್ಮನಿಗೆ ಕ್ರೀಡಾಭೋಗ ಪ್ರಾಪ್ತಿಯನ್ನು ಹೇಳುತ್ತಿವೆ. ಕ್ರೀಡಾಭೋಗ ಪ್ರಾಪ್ತಿಗಾಗಿಯೇ ಈ ಸೃಷ್ಟಿ ಎಂದು ಈರ್ವರೂ ವಾದಿಗಳು ಹೇಳುತ್ತಾರೆ. 'ಆಪ್ತಕಾಮಸ್ಯ ಕಾ ಸ್ಪೃಹಾ' ಎಂಬ ಶ್ರುತಿಯು ಈ ವಾದವನ್ನು ಹಿಂದಿನಂತೆ ಚೆನ್ನಾಗಿ ಯುಕ್ತಿಬದ್ಧವಾಗಿ ಆಕ್ಷೇಪಿಸಿದೆ. ಆದ್ದರಿಂದ 'ಕಾ ಸ್ಪೃಹಾ' ಎಂಬ ಶ್ರುತಿಯು 'ಇಚ್ಛಾಮಾತ್ರಂ' ಎಂಬ ಶ್ರುತಿಯ ಹಿಂದೆ ಸೃಷ್ಟಿ ಪರೀಕ್ಷಾ ಗ್ರಂಥದಲ್ಲಿ ಹೇಳಿದ 'ವಿಭೂತಿಂ ಪ್ರಸವಂ' 'ಸ್ವಪ್ನಮಾಯಾಸರೂಪಾ' ಎಂಬ ಎರಡು ಶ್ರುತಿಗಳಿಂದ ಪ್ರಸಕ್ತವಾದ ಮಾತುಗಳನ್ನು ಖಂಡಿಸುತ್ತದೆ. 'ದೇವಸ್ಯೈಷ ಸ್ವಭಾವೋಯಂ' ಎಂಬ ಶ್ರುತಿಯ ಹಿಂದೆ ಪ್ರಸ್ತುತವಾದ 'ಭೋಗಾರ್ಥಂ ಸೃಷ್ಟಿ' 'ಕ್ರೀಡಾರ್ಥಂ' ಎಂಬ ಪಕ್ಷಗಳನ್ನೂ ಖಂಡಿಸುತ್ತದೆ. ಈ

ಎರಡು ಪ್ರಕರಣಗಳಲ್ಲಿ ಪ್ರಸ್ತುತವಾದ ನಾಲ್ಕು ಪಕ್ಷಗಳನ್ನು ಖಂಡಿಸಿ ಕೊನೆಗೆ ಇಚ್ಛಾಮಾತ್ರಂ ಎಂಬ ಮೂರನೇ ಪಕ್ಷವೇ ಇಲ್ಲಿಯೂ ಸ್ವಭಾವವೆಂಬ ಮೂರನೇ ಪಕ್ಷವೇ ತನ್ನ ಸಿದ್ಧಾಂತವೆಂದು ಸ್ಥಾಪಿಸುತ್ತದೆ.

ಆಪ್ತಕಾಮಸ್ಯ ಕಾ ಸ್ಪೃಹಾ ಎಂಬ ಶ್ರುತಿಯನ್ನು ಅನುಪಮ ಅಥವಾ ಅಭೂತೋಪಮ ಅಲಂಕಾರದಿಂದ ವರ್ಣಿಸುತ್ತಿದ್ದಾರೆ -

**ಭಾವವಿಲಾಸಿನೀ–** ಕಿಂಚ ಪರಿಣಾಮಸೃಷ್ಟಿಪಕ್ಷೇ ಮಿಥ್ಯಾಸೃಷ್ಟಿಪಕ್ಷೇ ಚ ಬ್ರಹ್ಮಣ ಏವ ಸಕಲ ಸಾಂಸಾರಿಕ ಭೋಗಕ್ರಿಡಯೋರುಕ್ತೇಸ್ತಯೋರಪಿ ಪಕ್ಷಯೋರ್ಭೋಗಾರ್ಥಂ ಸೃಷ್ಟಿರಿತಿ ಕ್ರೀಡಾರ್ಥಮಿತಿ ಚ ದೂಷ್ಯಪಕ್ಷದ್ವಯ ಪರ್ಯವಸಾಯಿತಯಾ ದೂಷ್ಯತ್ವಾವಶ್ಯಂಭಾವೇನ ಪೂರ್ವಪಕ್ಷತ್ವಸ್ಯಾಪ್ಯಪರಿಹಾರ್ಯತ್ವಮೇವೇತ್ಯಾಹ – **ನಾನೇತಿ** ॥೮೬-೮೮॥

ಚತುರ್ಮುಖಸ್ಯ ವಾಣೀವ ವಾಣೀಯಂ ಶೋಭತೇತರಾಮ್ ।
ಏಕಾಕಾರಾಪಿ ಯಾ ಪಕ್ಷಚತುಷ್ಕಂ ಶುಷ್ಕಮಾತನೋತ್ ॥ ೮೯ ॥

**ಅರ್ಥ–** ಇಯಂ ವಾಣೀ= ಕಾಸ್ಪೃಹಾ ಎಂಬ ಶ್ರುತಿವಚನವು, ಚತುರ್ಮುಖಸ್ಯ= ಚತುರ್ಮುಖ ಬ್ರಹ್ಮನ, ವಾಣೀವ= ಮಾತಿನಂತೆ ಇದೆ. ಆದರೆ ಶೋಭತೇತರಾಮ್= ಇನ್ನೂ ಹೆಚ್ಚು ಅತಿಶಯವಾಗಿ ಶೋಭಿಸುತ್ತಿದೆ. ಏಕೆಂದರೆ, ಏಕಾಕಾರಾಪಿ= ಕಾಸ್ಪೃಹಾ ಎಂಬ ಒಂದೇ ಆಕಾರದ ಪ್ರುತಿ ಆಗಿದ್ದರೂ, ಯಾ= ಯಾವ ಶ್ರುತಿಯು ಪಕ್ಷ ಚತುಷ್ಕಂ= (೧) ವಿಭೂತಿಂ ಪ್ರಸವಂ, (೨) ಸ್ವಪ್ನಮಾಯಾಸರೂಪಾ, (೩) ಭೋಗಾರ್ಥಂ ಸೃಷ್ಟಿಃ (೪) ಕ್ರೀಡಾರ್ಥಂ ಸೃಷ್ಟಿಃ ಎಂಬ ನಾಲ್ಕು ಪಕ್ಷಗಳನ್ನು ಶುಷ್ಕಂ= ನೀರಸವನ್ನಾಗಿ ಆತನೋತ್= ಉಂಟು ಮಾಡಿತು.

**ಅನುವಾದ** - ಆಪ್ತಕಾಮಸ್ಯ ಕಾ ಸ್ಪೃಹಾ ಎಂಬ ಶ್ರುತಿಯುಚತುರ್ಮುಖ ಬ್ರಹ್ಮವಾಣಿಯಂತಿದೆ. ಬ್ರಹ್ಮನ ನಾಲ್ಕು ಮುಖಗಳು ಏಕಕಾಲಕ್ಕೆ ನಾಲ್ಕು ಆಕ್ಷೇಪಗಳಿಗೆ ಉತ್ತರಿಸುವಂತೆ ಕಾ ಸ್ಪೃಹಾ ಎಂಬ ಒಂದೇ ವಾಕ್ಯದಲ್ಲಿ ಅಡಕವಾದ ನಾಲ್ಕು ಯುಕ್ತಿ ಸರಣಿಯು ವಿಕಾರವಾದ- ಮಿಥ್ಯಾವಾದ- ಭೋಗವಾದ- ಕ್ರೀಡಾವಾದಗಳೆಂಬ ನಾಲ್ಕು ಪಕ್ಷಗಳನ್ನು ಖಂಡಿಸುತ್ತಿದೆ. ಆದರೆ ಒಂದು ವ್ಯತ್ಯಾಸವಿದೆ. ಬ್ರಹ್ಮ ನಾಲ್ಕು ಮುಖಗಳಿಂದ ಏಕಕಾಲದಲ್ಲಿ ನಾಲ್ಕು ಬೇರೆ ಬೇರೆ ವಾಕ್ಯಗಳನ್ನು ಹೇಳಿ ನಾಲ್ಕು ಪಕ್ಷ ಖಂಡನ ಮಾಡುತ್ತಾನೆ. ಈ ಶ್ರುತಿ ಮಾತ್ರ 'ಕಾ ಸ್ಪೃಹಾ' ಎಂಬ ಒಂದೇ ವಾಕ್ಯದಿಂದ ನಾಲ್ಕು ಪಕ್ಷ ಖಂಡನೆ ಮಾಡುತ್ತಿದೆ. ಆದ್ದರಿಂದ ಇದು ಇನ್ನೂ ಹೆಚ್ಚು ಶೋಭಿಸುತ್ತದೆ.

**ಭಾವವಿಲಾಸಿನೀ–** ಇಯಂ ವಾಣೀ ಕಾ ಸ್ಪೃಹೇತಿ ವಾಣೀ । ಯಥಾ ಚತುರ್ಮುಖಸ್ಯ ವಾಣೀ ಏಕದೈವ ಮುಖಚತುಷ್ಟಯೇನೋತ್ಥಿತಪಕ್ಷಚತುಷ್ಟಯಮಪಿ ಪ್ರತ್ಯಾಕ್ಷಿಪತಿ । ತಥಾ ಇಯಮೇಕೈವ ವಾಣೀ

**ಪಕ್ಷಚತುಷ್ಟಯಮಪಿ ಧಿಕ್ಕರೋತಿ ಅತಶ್ಚತುರ್ಮುಖಸ್ಯ ವಾಣೀವೇತ್ಯುಕ್ತಮ್ । ವಸ್ತುತಸ್ತು ಸಾ ವಿವಿಧಾ। ಇಯಮೇಕೈವ । ಅತೋ ನಿರುಪಮೇತಿ ಭಾವೇನೋಕ್ತಂ ಶೋಭತೇತರಾಮಿತಿ । ಅಭೂತೋಪಮಾ ವಾ ಇಯಮಿತಿ ಭಾವೇನಾಹ – ಏಕಾಕಾರೇತಿ ।। ಯಾ ಬ್ರಹ್ಮಣೋ ವಾಣೀ ಪಕ್ಷಚತುಷ್ಟಯ ನಿರಾಕರಣಾಯೈಕಾಕಾರಂ ನಾನಾರ್ಥಕಂ ವಾಕ್ಯಂ ಬ್ರಹ್ಮಾಪಿ ಪ್ರಯುಂಕ್ತೇ ಚೇತ್ಸಾ ವಾಣೀ ಅಸ್ಯಾ ಉಪಮಾ ಸ್ಯಾದಿತಿ ಭಾವಃ ।। ೮೯ ।।**

**ವಿವರಣೆ** – ಹೇಗೆ ಚತುರ್ಮುಖನ ವಾಣಿಯು, ನಾಲ್ಕು ಮುಖದಿಂದ ನಾಲ್ಕು ಪೂರ್ವಪಕ್ಷಗಳನ್ನು ಕುರಿತು ಒಂದೇ ಕಾಲಕ್ಕೆ ಉತ್ತರಿಸುತ್ತದೆಯೋ ಅದರಂತೆ ಕಾ ಸ್ಪೃಹಾ ಎಂಬ ಒಂದೇ ವಾಣಿಯು ಅಪ್ರಾಮಾಣಿಕಗಳಾದ ನಾಲ್ಕು ಪಕ್ಷಗಳನ್ನೂ ಧಿಕ್ಕರಿಸುತ್ತಿದೆ. ಆದ್ದರಿಂದ ಚತುರ್ಮುಖನ ವಾಣಿಯಂತೆ ಎಂದಿದ್ದಾರೆ.

ವಸ್ತುತಸ್ತು ಬ್ರಹ್ಮನದ್ದು ನಾಲ್ಕು ಮುಖಗಳು ಮತ್ತು ನಾಲ್ಕು ವಾಣಿಗಳು. ಆದರೆ ಕಾ ಸ್ಪೃಹಾ ಎಂಬುದು ಒಂದೇ ಮಾತು. ಅದರಿಂದ ಕಾ ಸ್ಪೃಹಾ ಎಂಬ ಮಾತಿಗೆ ಉಪಮೆಯೇ ಇಲ್ಲವೆಂದು ತಿಳಿಸಲು ಶೋಭತೇತರಾಮ್ ಬ್ರಹ್ಮನ ವಾಣಿಯಂತಲ್ಲ, ಅದಕ್ಕಿಂತಲೂ ಹೆಚ್ಚು ಶೋಭಿಸುತ್ತದೆ ಎಂದಿದ್ದಾರೆ ಅಥವಾ ಬ್ರಹ್ಮನೂ ಕೂಡ ಒಂದೇ ಮಾತನ್ನು ನಾಲ್ಕು ಮುಖಗಳಿಂದ ಉಚ್ಚರಿಸಿದರೆ ಆಗ ಮಾತ್ರ ಈ ಶ್ರುತಿಗೆ ಅದು ಉಪಮಾನವಾದೀತು. ಇದು ಅಭೂತೋಪಮಾ ಅಲಂಕಾರವೆಂದು ಕಾ ಸ್ಪೃಹಾ ವಾಣಿಯನ್ನು ಹೇಳಬಹುದೆಂದು ಏಕಾಕಾರಾಪಿ ಎಂದಿದ್ದಾರೆ.

ಆಪ್ತಕಾಮಸ್ಯ ಕಾ ಸ್ಪೃಹಾ ಎಂಬ ಶ್ರುತಿಗೂ 'ಇಚ್ಛಾಮಾತ್ರಂ ಪ್ರಭೋಃ ಸೃಷ್ಟಿಃ' ಎಂಬ ಶ್ರುತಿಗೂ ಒಂದೇ ಅರ್ಥವೆಂದು ಮುಂದೆ ಪ್ರತಿಪಾದಿಸುತ್ತಿದ್ದಾರೆ -

**ಇಚ್ಛಾಮಾತ್ರಮಿತೀಶಸ್ಯ ಸೃಷ್ಟೀಚ್ಛೈವಾಸ್ತಿ ಕೇವಲಮ್ ।**
**ನ ಫಲೇಚ್ಛೇತ್ಯಾಹ ತತ್ತಾನ್ ಪಕ್ಷಾನೇಷಾಽಪ್ಯದೂಷಯತ್ ।। ೯೦ ।।**

**ಅರ್ಥ**– ಇಚ್ಛಾಮಾತ್ರಂ ಇತಿ= ಇಚ್ಛಾಮಾತ್ರಂ ಎಂದು, ಈಶಸ್ಯ= ಪರಮಾತ್ಮನಿಗೆ, ಕೇವಲಂ= ಕೇವಲ ಸೃಷ್ಟೀಚ್ಛಾ ಏವ= ಸೃಷ್ಟಿಸುವ ಇಚ್ಛೆಯು ಮಾತ್ರ, ಅಸ್ತಿ= ಇದೆ, ನ ಫಲೇಚ್ಛಾ= ಫಲದ ಇಚ್ಛೆಯು ಇಲ್ಲ, ಇತಿ= ಎಂಬುದಾಗಿ, ಆಹ= ಹೇಳಿತು. ಈ ರೀತಿಯಾಗಿ ತತ್= ಫಲವನ್ನು ಶ್ರುತಿಯು ಆಕ್ಷೇಪಿಸುತ್ತಿರುವುದರಿಂದ, ತಾನ್ ಅಪಿ= ಎರಡು ಸ್ಥಾನಗಳಲ್ಲಿನ ನಾಲ್ಕು ಪಕ್ಷಗಳನ್ನು ಕೂಡ, ಏಷಾ= ಇಚ್ಛಾಮಾತ್ರಂ ಎಂಬ ಶ್ರುತಿಯು ಅದೂಷಯತ್= ನಿರಾಕರಿಸಿತು.

**ಅನುವಾದ – ಇಚ್ಛಾಮಾತ್ರಂ ಎಂಬ ಶ್ರುತಿಯು ಕೂಡ ಪರಮಾತ್ಮನಿಗೆ ಕೇವಲ ಸೃಷ್ಟಿಯ ಇಚ್ಛೆಯು ಮಾತ್ರ ಇದೆ ಫಲದ ಇಚ್ಛೆಯು ಇಲ್ಲ ಎಂದು ಹೇಳುವ ಮೂಲಕ ಎರಡು**

ಸ್ಥಳಗಳಲ್ಲಿ ಹೇಳಿದ ಹಿಂದಿನ ನಾಲ್ಕೂ ಪಕ್ಷಗಳನ್ನು ಕೂಡ ತಾನೇ ನಿರಾಕರಿಸಿದಂತಾಯಿತು.

**ಭಾವವಿಲಾಸಿನೀ–** ಕಾ ಸ್ಪೃಹೇತಿ ಶ್ರುತೇರಿಚ್ಛಾಮಾತ್ರಮಿತಿ ಶ್ರುತೇಶ್ಚೈಕಾರ್ಥತಾಮುಪಪಾದಯತಿ ॥ ಇಚ್ಛೇತಿ ॥ ತತ್ ಫಲಾಕ್ಷೇಪಕತ್ವಾತ್ । ತಾನ್ ಸ್ಥಾನದ್ವಯಸ್ಥಚುತುಷ್ಪಕ್ಷಾನ್ । ಏಷಾ ಇಚ್ಛಾಮಾತ್ರಮಿತಿ ಶ್ರುತಿಃ ॥ ೯೦ ॥

ಅತಃ ಸ್ಥಾನದ್ವಯಗತಾವಪ್ಯೇಕಾರ್ಥಪರಾಯಣೌ ।
ಶಬ್ದೌ ವಿಧಿಪ್ರಾಣಸಮೌ ಸತ್ಯಂ ಲೋಕಮರಕ್ಷತಾಮ್ ॥ ೯೧ ॥

**ಅರ್ಥ–** ಅತಃ= ಆದ ಕಾರಣದಿಂದ, ಸ್ಥಾನದ್ವಯಗತಾವಪಿ= ಎರಡು ಸ್ಥಾನಗಳಲ್ಲಿ ಇದ್ದರೂ ಕೂಡ ಶಬ್ದೌ= ಇಚ್ಛಾಮಾತ್ರಂ ದೇವಸ್ಯೈಷ ಎಂಬ ಶ್ರುತಿಗಳು ಏಕಾರ್ಥಪರಾಯಣೌ= ಒಂದೇ ಅರ್ಥವನ್ನು ನಿರ್ಣಯಿಸುವ ಎರಡಕ್ಕೂ ಒಂದೇ ಅರ್ಥವೆಂದು ನಿರ್ಣಯಿಸುತ್ತವೆ. ಬ್ರಹ್ಮವಾಯುಗಳೂ ಸತ್ಯಲೋಕಪಾಲನವೆಂಬ ಒಂದೇ ಕಾರ್ಯ ಮಾಡುತ್ತಾರೆ. ಆದ್ದರಿಂದ ಈ ಶ್ರುತಿಗಳು ವಿಧಿಪ್ರಾಣಸಮೌ= ಬ್ರಹ್ಮ ವಾಯುಗಳಂತಿವೆ. ಸತ್ಯಂ ಲೋಕಂ= ಸತ್ಯಲೋಕವನ್ನು ಅರಕ್ಷತಾಮ್= ರಕ್ಷಿಸಿದುವು. ಲೋಕವನ್ನು ಸತ್ಯವನ್ನಾಗಿ ಮಾಡಿ ರಕ್ಷಿಸಿದವು. ಬ್ರಹ್ಮ ವಾಯುಗಳು ಸತ್ಯಲೋಕವನ್ನು ರಕ್ಷಿಸಿದರು.

**ಅನುವಾದ -** 'ಇಚ್ಛಾಮಾತ್ರಂ' 'ದೇವಸ್ಯೈಷ' ಎಂಬ ಶ್ರುತಿಗಳು ಎರಡು ಸ್ಥಾನಗಳಲ್ಲಿದ್ದರೂ ಇವುಗಳ ಗುರಿ ಒಂದೇ ಆಗಿದೆ. ವಿಷ್ಣುವಿಗೆ ಸ್ವಾರ್ಥವಿಲ್ಲದ ಇಚ್ಛಾಮಾತ್ರ ಸೃಷ್ಟಿಯನ್ನೇ ಸಮರ್ಥಿಸುತ್ತಿವೆ. ಆದ್ದರಿಂದ ಈ ಎರಡು ಶ್ರುತಿಗಳನ್ನು ಬ್ರಹ್ಮ-ವಾಯುಗಳಿಗೆ ಹೋಲಿಸಬಹುದು. ಬ್ರಹ್ಮವಾಯುಗಳು ಪ್ರತ್ಯೇಕವಾಗಿ ಬೇರೆ ಬೇರೆ ಪದವಿಗಳಲ್ಲಿ ಕುಳಿತಿದ್ದರೂ ಕೂಡ ಸತ್ಯಲೋಕ ರಕ್ಷಣೆ ಎಂಬ ಕಾರ್ಯ ಒಂದೇ ಆಗಿದೆ. ಇದರಂತೆ ಎರಡು ಸ್ಥಾನಗಳಲ್ಲಿ ಈ ಶ್ರುತಿಗಳಿದ್ದರೂ 'ಇಚ್ಛಾಮಾತ್ರ' ಸೃಷ್ಟಿಯನ್ನೇ ಸಮರ್ಥಿಸುವ ಉದ್ದೇಶ ಉಳ್ಳವುಗಳಾಗಿವೆ.

**ಭಾವವಿಲಾಸಿನೀ–** ಶಬ್ದೌ ಉಕ್ತವಾಕ್ಯದ್ವಯರೂಪಶಬ್ದೌ । ಉಕ್ತವಿಧಯಾ ಉಭಯೋರೇಕಾರ್ಥತ್ವ ಪ್ರತಿಪಾದಕತ್ವಾದೇಕಾರ್ಥಪರಾಯಣೌ ಸಿಂಹಾಸನದ್ವಯಗತಯೋರ್ವಿಧಿಪ್ರಾಣಯೋರಪಿ ಸತ್ಯಲೋಕಾಖ್ಯೈಕಾರ್ಥ ಪರಿಪಾಲಕತ್ವಾದ್ವಿಧಿಪ್ರಾಣಸಮಾವಿತ್ಯುಕ್ತಮ್ । ''ಸ್ವಪ್ನಮಾಯಾಸರೂಪ'' ಇತಿ ಮಿಥ್ಯಾಸೃಷ್ಟಿಪಕ್ಷಾದಿಪಕ್ಷಚತುಷ್ಟಯಸ್ಯ ಪ್ರತಿಷೇಧಾಲ್ಲೋಕಂ ಸತ್ಯಂ ಕೃತ್ವಾऽರಕ್ಷತಾಮ್ । ವಿಧಿಪ್ರಾಣಪಕ್ಷೇ ತು ಸತ್ಯಾಖ್ಯಂ ಲೋಕಮಿತಿ ಯೋಜನಾ ॥ ೯೧ ॥

**ವಿವರಣೆ** - 'ಇಚ್ಛಾಮಾತ್ರಂ' 'ದೇವಸ್ಯೈಷ' ಎಂಬ ಶ್ರುತಿಗಳು ಬೇರೆ ಬೇರೆ ಸ್ಥಾನಗಳಲ್ಲಿ ಉಕ್ತವಾದ ಶ್ರುತಿಗಳಾಗಿದ್ದರೂ ಅವುಗಳೂ ಒಂದೇ ಅಭಿಪ್ರಾಯವನ್ನು ನಿರೂಪಿಸುತ್ತಿವೆ. ಅದು ಹೇಗೆಂದರೆ ಸತ್ಯಲೋಕದಲ್ಲಿ ಬ್ರಹ್ಮ-ವಾಯುಗಳು ಇಬ್ಬರೂ ಇದ್ದಾರೆ. ಪ್ರತ್ಯೇಕ ಪ್ರತ್ಯೇಕ ಬ್ರಹ್ಮ ಪದವಿ ವಾಯು ಪದವಿಗಳಲ್ಲಿದ್ದಾರೆ. ಹಾಗಿದ್ದರೂ ಒಂದೇ ಸತ್ಯಲೋಕದ ರಕ್ಷಕರಾಗಿದ್ದಾರೆ. ಇದರಂತೆ ಹರಿಯ 'ಇಚ್ಛಾಮಾತ್ರ ಸೃಷ್ಟಿ' ಯನ್ನೇ ಉಭಯಸ್ಥಾನಗತ ಉಭಯ ಶ್ರುತಿಗಳೂ ಸಮರ್ಥಿಸುತ್ತಿದೆ. ಆದ್ದರಿಂದ ಈ ಶ್ರುತಿಗಳು ಬ್ರಹ್ಮ ಪ್ರಾಣರಂತಿವೆ. ಸ್ವಪ್ನಮಾಯಾ ಸರೂಪೇತಿ ಮುಂತಾದ ಮಿಥ್ಯಾಸೃಷ್ಟ್ಯಾದಿ ಪಕ್ಷಚತುಷ್ಟಯವನ್ನು ನಿರಾಕರಿಸುತ್ತಿರುವುದರಿಂದ ಜಗತ್ಸತ್ಯತ್ವವನ್ನು ಸಮರ್ಥಿಸುವ ಮೂಲಕ ಇಚ್ಛಾಸೃಷ್ಟಿಯನ್ನು ಸಾಧಿಸಿವೆ. ಪ್ರಾಣಬ್ರಹ್ಮರು ಸತ್ಯಲೋಕವನ್ನು ರಕ್ಷಿಸಿದರೆ ಈ ಶ್ರುತಿಯು ಲೋಕದ ಸತ್ಯತ್ವವನ್ನು ರಕ್ಷಿಸಿದೆ ಎಂದು ಭಾವ.

ಈಗ ಸಮಸ್ತ ಶ್ರುತಿಗಳ ಅಭಿಪ್ರಾಯವನ್ನು ವರ್ಣಿಸುತ್ತಾರೆ. ಜೊತೆಗೆ ಶ್ರುತ್ಯುಕ್ತ ಪದಗಳನ್ನು ಚೆನ್ನಾಗಿ ವಿಮರ್ಶಿಸಿ ನೋಡಿದರೆ ಮಿಥ್ಯಾಸೃಷ್ಟಿ ಪಕ್ಷವು ಅತಿನಿಂದಿತ ಪಕ್ಷವೆಂದು ತಿಳಿಯುತ್ತದೆ. ವಿರುದ್ಧವಾದ ಬೇರೆ ಬೇರೆ ಪಕ್ಷಗಳನ್ನು ಮಿಥ್ಯಾಸೃಷ್ಟಿ ಪಕ್ಷವು ಅವಲಂಬಿಸಿದ್ದರಿಂದ ಸಂಶಯ ಮೂಲಮತವಾಗಿದೆ. ಇಷ್ಟೇ ಅಲ್ಲದೆ ಸಾಕ್ಷಾತ್ ಬ್ರಹ್ಮಸೂತ್ರಕ್ಕೆ ವಿರುದ್ಧವಾಗಿದೆ. ಆದ್ದರಿಂದ ಶ್ರುತಿಗೆ ಸಮ್ಮತವಾದದ್ದು ಸೂತ್ರಕ್ಕೆ ಸಮ್ಮತವಾದದ್ದು ವಿಶ್ವಸತ್ಯತ್ವವೇ ಎಂದು ಮುಂದೆ ಹೇಳುತ್ತಿದ್ದಾರೆ -

ಕಿಂಚಾವಿಕಾರರೂಪಸ್ಯ ಬ್ರಹ್ಮಣೋ ಜಗದಾತ್ಮನಾ ।
ವಿಕಾರಾಪಾದಕಂ ವಿಶ್ವೋಪಾದಾನತ್ವಮತಂ ಪುರಾ ।
ಅನ್ಯ ಇತ್ಯನ್ಯಪಕ್ಷತ್ವಂ ವದಂತೀ ನಾನ್ವಮಂಸ್ತ ಸಾ ॥ ೯೨ ॥

ವಿಭೂತಿಂ ಪ್ರಸವಂ ತ್ವನ್ಯ ಇತಿ ಯಚ್ಛ್ರೂಯತೇ ಶ್ರುತೌ ।
ವಿವಿಧಾಕಾರಭವನಂ ವಿಭೂತಿರ್ಹಿ ವಿದಾಂ ಮತೇ ॥ ೯೩ ॥

**ಅರ್ಥ**– ಕಿಂಚ= ಇಷ್ಟೇ ಅಲ್ಲದೆ, ಅವಿಕಾರರೂಪಸ್ಯ= ನಿರ್ವಿಕಾರ ಸ್ವರೂಪನಾದ ಬ್ರಹ್ಮಣಃ= ಬ್ರಹ್ಮನಿಗೆ, ಜಗದಾತ್ಮನಾ= ಜಗತ್ಸ್ವರೂಪವಾಗಿ, ವಿಕಾರಾಪಾದಕಂ= ವಿಕಾರ ಹೊಂದುವಿಕೆಯನ್ನು ಆರೋಪಿಸುವ ವಿಶ್ವೋಪಾದಾನತ್ವಮತಂ= ವಿಶ್ವೋಪಾದಾನ ಕಾರಣತ್ವ ಮತವನ್ನು, ಪುರಾ= ಹಿಂದೆಯೇ, ಅನ್ಯ ಇತಿ= ವಿಭೂತಿಂ ಪ್ರಸವಂತ್ವನ್ಯೇ ಎಂಬುದಾಗಿ, ಅನ್ಯಪಕ್ಷತ್ವಂ= ತನಗೆ ಅಸಮ್ಮತ ಪಕ್ಷವೆಂದು, ವಂದತೀ= ಹೇಳುವ ಸಾ= ಆ ಶ್ರುತಿಯು, ನ ಅನ್ವಮಂಸ್ತ= ಅಂಗೀಕರಿಸಲಿಲ್ಲ.

ಯತ್= ಯಾವ ಕಾರಣದಿಂದ ವಿಭೂತಿಂ ಪ್ರಸವಂ ತ್ವನ್ಯೇ= ವಿಭೂತಿಂ ಪ್ರಸವಂ ತ್ವನ್ಯೇ ಇತಿ= ಎಂಬುದಾಗಿ, ಶ್ರುತೌ= ಶ್ರುತಿಯಲ್ಲಿ ಶ್ರೂಯತೇ= ಕೇಳಲ್ಪಡುತ್ತದೋ, ವಿದಾಂಮತೇ= ವಿದ್ವಾಂಸರ ಅಭಿಪ್ರಾಯದಲ್ಲಿ ವಿವಿಧಾಕಾರ ಭವನಂ= ನಾನಾ ಆಕಾರವನ್ನು

ಹೊಂದುವುದೇ ವಿಭೂತಿರ್ಹಿ= ವಿಭೂತಿ ಎನಿಸಿದೆಯಷ್ಟೇ! ತಸ್ಮಾತ್ = ಆದಕಾರಣದಿಂದ, ನ ಅನ್ವಮಂಸ್ತ= ಪರಿಣಾಮವಾದವನ್ನು ಶ್ರುತಿಯು ಅಂಗೀಕರಿಸಲಿಲ್ಲ

**ಅನುವಾದ** - ಕೆಲವರು ಜಗತ್ತಿಗೆ ಬ್ರಹ್ಮನೇ ಉಪಾದಾನ ಕಾರಣ ಎಂದು ಹೇಳುತ್ತಾರೆ. ನಿರ್ವಿಕಾರನಾದ ಬ್ರಹ್ಮನೇ ಜಗದಾತ್ಮನಾ ಪರಿಣಾಮ ಹೊಂದುತ್ತಾನೆ ಎಂಬ ಈ ಪಕ್ಷವನ್ನು ಶ್ರುತಿಯೇ ನಿರಾಕರಿಸಿದೆ. ಅನ್ಯೇ ಎಂಬ ಮಾತಿನ ಮೂಲಕ ಈ ಪಕ್ಷವು ತನಗೆ ಅಸಂಮತ ಎಂದು ಶ್ರುತಿಯು ಹೇಳಿದೆ. ವಿವಿಧವಾದ ಘಟ-ಪಟಾದಿ ಜಗದಾತ್ಮನಾ ಪರಿಣಾಮ ಹೊಂದುತ್ತಾನೆ ಎಂದರ್ಥವಲ್ಲ. ಆದ್ದರಿಂದಲೇ ಈ ವಿಶ್ವೋಪಾದಾನತ್ವಮತವನ್ನು ಶ್ರುತಿ ನಿರಾಕರಿಸಿದೆ ಎಂದು ಭಾವ.

**ಭಾವವಿಲಾಸಿನೀ**– ಅಧುನಾ ಸಮಸ್ತಶ್ರುತೇರಭಿಪ್ರಾಯಂ ವರ್ಣಯನ್ ಶ್ರೌತಪದಪರ್ಯಾಲೋಚನಾಯಾಂ ಮಿಥ್ಯಾಸೃಷ್ಟಿಪಕ್ಷಸ್ಯ ವಿರುದ್ಧನಾನಾಪಕ್ಷಾವಲಂಬನೇನ ಸಂಶಯಮೂಲಮತತಯಾಽತಿವಿನಿಂದಿತತ್ವಲಾಭಾತ್ಸಾಕ್ಷಾತ್ ಸೂತ್ರವಿರುದ್ಧತಯಾ ಚ ವಿಶ್ವಸತ್ಯತ್ವಮೇವ ಶ್ರುತಿಸೂತ್ರಯೋರಭಿಪ್ರೇತಾರ್ಥ ಇತ್ಯಾಹ – **ಕಿಂಚೇತ್ಯಾದಿನಾ** ॥ ಸಾ ಶ್ರುತಿಃ । ಯತ್ ಯಸ್ಮಾತ್ । ಯಸ್ಮಾತ್ ಚ ವಿವಿಧಾಕಾರಭವನಂ ವಿಭೂತಿಃ । ತಸ್ಮಾನ್ನಾನ್ವಮಂಸ್ತೇತಿ ಪೂರ್ವೇಣಾನ್ವಯಃ ॥ ೯೨-೯೩ ॥

ಜಗನ್ಮಿಥ್ಯಾತ್ವ ವಾದವನ್ನು ಇತರ ವಾದಗಳನ್ನೂ ಮುಂದೆ ದೂಷಿಸುತ್ತಾರೆ –

ಸರ್ವಮಿಥ್ಯಾತ್ವವಾದಂ ಚ ಮಧ್ಯೇ ಸಾಽತಿವಿಗರ್ಹಿತಮ್ ।
ಸೋಪಹಾಸಂ ದೂಷಯಿತುಂ ಪುನರಾಹೇತಿ ಮೇ ಮತಿಃ ॥ ೯೪ ॥

ಅನ್ಯೈರಿತ್ಯನ್ಯಮತತಾಂ ಯದತ್ರಾಪ್ಯಾಹ ಸಾ ಸ್ಫುಟಮ್ ।
ವಿಕಲ್ಪಿತತ್ವವಾಚಾ ಚ ಸರ್ವೇ ಸಂದಿಹತೇ ಪರಮ್ ॥ ೯೫ ॥

ನೈವ ನಿರ್ಣಯವಂತಸ್ತ ಇತಿ ತಾನಾಹ ಸಾ ಶ್ರುತಿಃ ।
ವಿರುದ್ಧಕಲ್ಪನಾರೂಪೋ ವಿಕಲ್ಪಃ ಸಂಶಯೋ ಯತಃ ॥ ೯೬ ॥

ಯತಃ ಸ್ವಪ್ನವದಿತ್ಯೇಕೋ ವಕ್ತಿ ಮಾಯಾವದಿತ್ಯಪಿ ।
ಅನ್ಯೋ ರಜ್ಜುಭುಜಂಗೀವದಿತಿ ವಕ್ತಿ ತಥಾಪರಃ ॥ ೯೭ ॥

ಏವಂ ದೃಷ್ಟಾಂತವಿಭ್ರಾಂತಸ್ವಾಂತಾಸ್ತೇ ಸರ್ವಖಂಡನೇ ।
ದೃಷ್ಟಾಂತಂ ಕ್ವಾಪ್ಯಪಶ್ಯಂತಃ ಸದಾ ಸಂಶೇರತೇ ಕಿಲ ॥ ೯೮ ॥

**ಅರ್ಥ**– ಚ= ಮತ್ತು, ಸಾ= ಆ ಶ್ರುತಿಯು, ಅತಿ ವಿಗರ್ಹಿತಂ= ಅತಿ ನಿಂದಿತವಾದ, ಸರ್ವಮಿಥ್ಯಾತ್ವವಾದಂ= ಜಗತ್ತೆಲ್ಲವು ಸುಳ್ಳೆಂಬ ವಾದವನ್ನು ಮಧ್ಯೇ= ಪರಿಣಾಮವಾದ

ಮತ್ತು ಸ್ವಮತಗಳ ಮಧ್ಯದಲ್ಲಿ, ಸೋಪಹಾಸಂ= ಅಪಹಾಸ ಪೂರ್ವಕವಾಗಿ ದೂಷಯಿತುಂ= ನಿಂದಿಸಲು, ಪುನಃ= ಪುನಃ, ಆಹ= ಹೇಳಿತು, ಇತಿ= ಎಂಬುದಾಗಿ, ಮೇ= ನನ್ನ ಮತಿಃ= ಬುದ್ಧಿಯು, ಯತ್= ಯಾವ ಕಾರಣದಿಂದ, ಸಾ= ಆ ಶ್ರುತಿಯು, ಅನ್ಯೈ ಇತಿ= ಅನ್ಯೈಃ ಎಂಬ ಶಬ್ದದ ಮೂಲಕ, ಅನ್ಯಮತತಾಂ= ಬೇರೆಯವರ ಮತವೆಂದು, ಅತ್ರಾಪಿ= ಇಲ್ಲಿಯೂ, ಸ್ಫುಟಂ= ಸ್ಪಷ್ಟವಾಗಿ, ಆಹ= ಹೇಳಿತು, ಚ= ಮತ್ತು, ವಿಕಲ್ಪಿತತ್ವವಾಚಾ= ವಿಕಲ್ಪಿತಾ ಎಂಬ ಮಾತಿನಿಂದ, ಸರ್ವೇ= ಎಲ್ಲರೂ, ಸಂದಿಹತೇ= ಈ ಜಗನ್ಮಿಥ್ಯಾವಾದದಲ್ಲಿ ಸಂದೇಹ ಉಳ್ಳವರೇ ಆಗಿದ್ದಾರೆ. ಪರಂ= ಹೊರತಾಗಿ, ತೇ= ಅದ್ವೈತಿಗಳು, ನೈವ ನಿರ್ಣಯವಂತಃ= ನಿಶ್ಚಯಹೊಂದಲಿಲ್ಲ, ಇತಿ= ಎಂಬುದಾಗಿ, ತಾನ್= ಪರವಾದಿಗಳನ್ನು ಕುರಿತು, ಸಾ= ಆ ಶ್ರುತಿಯು, ಆಹ= ಹೇಳಿತು.

ಯತಃ= ಯಾವ ಕಾರಣದಿಂದ ವಿರುದ್ಧಕಲ್ಪನಾರೂಪಃ= ನಾನಾ ಬಗೆಯ ಸಂಶಯವನ್ನು ತಾಳುವುದೇ ವಿಕಲ್ಪಃ= ವಿಕಲ್ಪವು. ಆದ್ದರಿಂದ ಇದೇ ಸಂಶಯಃ= ಸಂಶಯವು ಯತಃ= ಯಾವ ಕಾರಣದಿಂದ ಏಕಃ= ಒಬ್ಬ ವಾದಿಯು ಸ್ವಪ್ನವತ್= ಜಗತ್ತು ಸ್ವಪ್ನದಂತೆ ಎಂದು ವಕ್ತಿ= ಹೇಳುತ್ತಾನೆ. ಅನ್ಯಃ= ಬೇರೊಬ್ಬನು, ಮಾಯಾವತ್= ಮಾಯಾನಿರ್ಮಿತ ವಸ್ತುವಿನಂತೆ, ಇತ್ಯಪಿ= ಹೀಗೆಂದೂ ವಕ್ತಿ= ಹೇಳುತ್ತಾನೆ. ತಥಾ= ಹಾಗೆಯೇ ಅಪರಃ= ಮತ್ತೊಬ್ಬನು ರಜ್ಜುಭುಜಂಗೀವತ್= ಹಗ್ಗದಲ್ಲಿ ಕಂಡ ಸರ್ಪದಂತೆ ಎಂದು ವಕ್ತಿ= ಹೇಳುತ್ತಾನೆ.

ತೇ= ಅವರೆಲ್ಲರೂ ಏವಂ= ಹಿಂದೆ ಹೇಳಿದ ಪ್ರಕಾರದಂತೆ ದೃಷ್ಟಾಂತ ವಿಭ್ರಾಂತಸ್ವಾಂತಾಃ= ದೃಷ್ಟಾಂತ ವಿಷಯದಲ್ಲಿ ಇದೆ ಎಂಬ ನಿಶ್ಚಯವಿಲ್ಲದ ಅಂತಃಕರಣ ಉಳ್ಳವರಾಗಿ ಸರ್ವಖಂಡನೇ= ಎಲ್ಲಾ ಪದಾರ್ಥ ಪಕ್ಷಗಳನ್ನು ಖಂಡಿಸುವುದರಲ್ಲಿ ದೃಷ್ಟಾಂತಂ= ದೃಷ್ಟಾಂತವನ್ನು, ಕ್ವಾಪಿ= ಎಲ್ಲಿಯೂ, ಅಪಶ್ಯಂತಃ= ಕಾಣದವರಾಗಿ ಸದಾ= ಯಾವಾಗಲೂ ಸಂಶೇರತೇಕಿಲ= ಸಂಶಯಗ್ರಸ್ತರಾಗಿಯೇ ಇರುತ್ತಾರಷ್ಟೇ!

**ಅನುವಾದ** - ವಿಭೂತಿಂ ಪ್ರಸವಂತ್ವನ್ಯೇ ಮನ್ಯಂತೇ ಸೃಷ್ಟಿಚಿಂತಕಾಃ ಎಂಬ ಮತ್ತು ಇಚ್ಛಾಮಾತ್ರಂ ಪ್ರಭೋಃ ಸೃಷ್ಟಿರಿತಿ ಸೃಷ್ಟೌ ವಿನಿಶ್ಚಿತಾಃ ಎಂಬ ಶ್ರುತಿಗಳ ಮಧ್ಯದಲ್ಲಿ ಶ್ರುತಿಯು ಖಂಡಿಸಲು ಹೇಳಿದ ಮಾತೇ ಸ್ವಪ್ನಮಾಯಾ ಸರೂಪೇತಿ ಸೃಷ್ಟಿರನ್ಯೈರ್ವಿಕಲ್ಪಿತಾ ಎಂಬ ಮಾತು. ಪರಿಣಾಮವಾದವನ್ನು ನಿರಾಕರಿಸಿದ ನಂತರ ಸರ್ವಮಿಥ್ಯಾತ್ವವಾದವನ್ನು ಶ್ರುತಿಯು ನಿರಾಕರಿಸುತ್ತಿದೆ. ಪರಿಣಾಮವಾದವೇ ಗರ್ಹಿತವಾದಾಗ ಸರ್ವಂ ಮಿಥ್ಯಾ ಎಂಬ ವಾದವು ಹೇಗೆ ಸ್ವೀಕಾರ್ಯವಾದೀತೆಂದು ಶ್ರುತಿಯು ಅಪಹಾಸ ಮಾಡುತ್ತಿದೆ. ಅದಕ್ಕೇ ಅನ್ಯೈಃ ಎಂಬುದಾಗಿ ಇದು ಬೇರೆಯವರ ಮತ ಶ್ರುತಿಯ ಮತವೆಲ್ಲವೆಂದು ಸರ್ವಮಿಥ್ಯಾತ್ವವಾದವನ್ನು ಸ್ಪಷ್ಟವಾಗಿ ನಿರಾಕರಿಸಿದೆ. ವಿಕಲ್ಪಿತಾ ಎಂಬ ಮಾತೂ ಅವರನ್ನು ಗೇಲಿಮಾಡುವ ಮಾತೇ ಆಗಿದೆ. ಏಕೆಂದರೆ ವಿಕಲ್ಪ ಶಬ್ದಕ್ಕೆ ಸಂಶಯ

**ಎಂದು ಅರ್ಥ. ಮಿಥ್ಯಾವಾದಕ್ಕೆ ಸರಿಯಾದ ದೃಷ್ಟಾಂತ ಯಾವುದೆಂಬ ವಿಷಯದಲ್ಲಿ ಅವರಿಗೆ ಸಂಶಯವೇ ಇದೆ ವಿನಾ ನಿಶ್ಚಯಜ್ಞಾನವಿಲ್ಲ ಎಂದು ಶ್ರುತಿಯು ಅವರನ್ನು ಉಪಹಾಸ ಪೂರ್ವಕ ನಿಂದಿಸುತ್ತಿದೆ. ಒಬ್ಬ ಅದ್ವೈತಿ ಈ ಜಗತ್ತು ಸ್ವಪ್ನದಂತೆ ಭ್ರಾಂತಿಕಲ್ಪಿತ ಎಂದರೆ ಮತ್ತೊಬ್ಬ ಇಂದ್ರಜಾಲನಿರ್ಮಿತ ಮಾಯಾವಸ್ತುವಿನಂತೆ ಎಂದು ಹೇಳುತ್ತಾನೆ. ಮತ್ತೊಬ್ಬ ಹಗ್ಗದಲ್ಲಿ ಕಾಣುವ ಸರ್ಪದಂತೆ ಎಂದು ಹೇಳುತ್ತಾನೆ. ಈ ಸ್ವಪ್ನ, ರಜ್ಜುಸರ್ಪ, ಇಂದ್ರಜಾಲವಸ್ತುಗಳೆಂಬ ದೃಷ್ಟಾಂತಗಳು ಅವರವರಿಗೆ ಸರಿಯಲ್ಲ ಎಂದೇ ತೋರುತ್ತಿವೆ. ಪ್ರಪಂಚದ ಎಲ್ಲ ಪದಾರ್ಥ ಸತ್ಯತ್ವವನ್ನು ಖಂಡಿಸುವ ದೃಷ್ಟಾಂತವು ದೃಷ್ಟಾಂತವಿಭ್ರಾಂತರಾದ ಇವರಿಗೆ ತೋರುತ್ತಿಲ್ಲ. ಸರ್ವದಾ ಸಂಶಯವೇ ಇರುತ್ತದೆ.**

**ಭಾವವಿಲಾಸಿನೀ–** ಮಧ್ಯೇ ಪರಿಣಾಮಮಮತಸ್ವಮತಯೋರ್ಮಧ್ಯೇ । ಅತ ಏವಂ ದೃಷ್ಟಾಂತವಿಭ್ರಾಂತಸ್ವಾಂತಾ ಇತ್ಯಾದಿ ಯೋಜನಾ । ದೃಷ್ಟಾಂತವಿಭ್ರಾಂತಸ್ವಾಂತಾ ಇತ್ಯನೇನೇದಮಭಿಪ್ರೈತಿ । ಸ್ವಪ್ನೇ ಚಕ್ಷುರಾದೀಂದ್ರಿಯಾಣಾಮಭಾವೇಽಪಿ ಚಾಕ್ಷುಷತ್ವಾದಿನಾ ದೃಶ್ಯಮಾನಾಃ ಪದಾರ್ಥಾಃ ಸಂತು ಮಿಥ್ಯಾ । ಜಾಗ್ರತವಸ್ಥಾಯಾಂ ತೈಸ್ತೈರಿಂದ್ರಿಯೈ-ರ್ದೃಶ್ಯಮಾನಾಸ್ತೇ ತೇ ಪದಾರ್ಥಾಃ ಕುತೋ ಮಿಥ್ಯೇತಿ ವೈಷಮ್ಯಾದ್ಭೀತಃಸ್ವಪ್ನದೃಷ್ಟಾಂತಮುಪೇಕ್ಷ್ಯ ಮಾಯಾದೃಷ್ಟಾಂತಮೂಚಿತವಾನ್ । ತತ್ರಾಪಿ ಮಾಯಾವಿನಾಽಪರಮೇಶ್ವರೇಣ ದೃಶ್ಯಮಾನಮಿದಂ ಜಗತ್ಕಥಂ ಮಾಯಾವಿನಾಽದೃಶ್ಯಮಾನಮಾಯಿಕಪದಾರ್ಥವದಿತಿ ಶಂಕಾಕಲಂಕಿತಧಿ ್ಯಸ್ತಮಪಿ ಜಹೌ । ರಜ್ಜುಭುಜಂಗೀಶುಕ್ತಿರೂಪ್ಯಾದಿಕಮುಕ್ತವಾನ್ । ಇಹಾಪ್ಯರ್ಥಕ್ರಿಯಾನರ್ಹೇಽಭ್ಯಸ್ತೇಽಭ್ಯಸ್ತದರ್ಹೇ ಜಗತಿ ಪುನರ್ವೈಷಮ್ಯದರ್ಶನಾದ್ಭೀತಃ ದೃಷ್ಟಾಂತಾಂತರಮಾಚಕ್ಷಾಣಶ್ಚೇದಮದೋವೇತ್ಯದ್ಯಾಪಿ ವಿಭ್ರಾಮ್ಯತೀತಿ ॥ ೯೪-೯೮ ॥

**ವಿವರಣೆ** - ದೃಷ್ಟಾಂತ ವಿಭ್ರಾಂತಾಃ ಎಂಬುದರ ಅಭಿಪ್ರಾಯವಿಷ್ಟು-

ಸ್ವಪ್ನದಲ್ಲಿ ಚಕ್ಷುರಾದಿ ಇಂದ್ರಿಯಗಳು ಇಲ್ಲದಿದ್ದರೂ ನೋಡುವ ಮೊದಲಾದ ವ್ಯಾಪಾರಗಳು ನಡೆಯುತ್ತವೆ ಎಂದರೆ, ಇದು ಕೇವಲ ಭ್ರಾಂತಿ ಎನ್ನೋಣ. ಎಚ್ಚರದಲ್ಲಿ ಚಕ್ಷುರಿಂದ್ರಿಯಗಳಿವೆ. ಅವುಗಳ ಮೂಲಕ ಗೋಚರವಾಗುವ ನೋಡುವ ಮೊದಲಾದ ವ್ಯಾಪಾರಗಳು ಸ್ವಪ್ನ ಪದಾರ್ಥಗಳಂತೆ ಮಿಥ್ಯಾ ಏಕೆ?

ಈ ರೀತಿ ವೈಷಮ್ಯದಿಂದ ಭೀತನಾದ ವಾದಿಯು ಸ್ವಪ್ನದೃಷ್ಟಾಂತವನ್ನು ಉಪೇಕ್ಷಿಸಿ ಮಾಯಾ ದೃಷ್ಟಾಂತವನ್ನು ಹೇಳಿದನು. ಇಂದ್ರಜಾಲವಿದ್ಯೆ ಬಲ್ಲವನು ಮಿಥ್ಯಾಭೂತ ಪದಾರ್ಥಗಳನ್ನು ರಚಿಸುವಂತೆ ಈ ಜಗತ್ತೂ ಈಶ್ವರನೆಂಬ ಒಬ್ಬ ಐಂದ್ರಜಾಲಿಕನ ಸೃಷ್ಟಿಯಾಗಿರುವುದರಿಂದ ಮಿಥ್ಯಾಭೂತವಾದುದು ಎಂದು ಹೇಳಿದ. ಅಲ್ಲಿಯೂ ಆ ವಾದಿಗೆ ಸಂಶಯಬಂದಿತು. ಅಲ್ಲಿ ಮಾಯಾವಿಯಾದ ಐಂದ್ರಜಾಲಿಕ ತಾನು ನಿರ್ಮಿಸಿದ

ಪದಾರ್ಥವನ್ನು ತಾನು ನೋಡಲಾರ. ಆದರೆ ಮಾಯಾವಿಯಾದ ಈಶ್ವರ ತಾನು ನಿರ್ಮಿಸಿರುವ ಈ ಜಗತ್ತನ್ನು ನೋಡುತ್ತಿದ್ದಾನೆ. ಆದ್ದರಿಂದ ಐಂದ್ರಜಾಲಿಕನ ಪದಾರ್ಥದಂತೆ ಎಂದು ಹೇಳುವುದು ಹೇಗೆ? ಎಂದು ಪುನಃ ಶಂಕಿತನಾದ. ಸಂಶಯದಿಂದ ಮಾಯಾ ಎಂಬ ದೃಷ್ಟಾಂತವನ್ನೂ ಬಿಟ್ಟ ರಜ್ಜುಭುಜಂಗೀ ಶುಕ್ತಿರೂಪ್ಯದ ದೃಷ್ಟಾಂತದಂತೆ ಈ ಜಗತ್ತು ಎಂದ. ಪುನಃ ಇಲ್ಲಿ ಇವನಿಗೆ ಸಂಶಯವು ಬಾರದಿರಲಿಲ್ಲ. ರಜ್ಜುಭುಜಂಗೀ ಕಚ್ಚುವುದಿಲ್ಲ. ಶುಕ್ತಿರೂಪ್ಯದಿಂದ ಆಭರಣವಾಗುವುದಿಲ್ಲ. ಈ ದೃಷ್ಟಾಂತ ಗಳಲ್ಲಿ ಅರ್ಥಕ್ರಿಯಾಕಾರಿತ್ವ ಕಾಣಿಸುತ್ತಿಲ್ಲ. ಆದರೆ ಈ ಜಗತ್ತು ಅರ್ಥಕ್ರಿಯಾಕಾರಿಯಾಗಿ ಕಾಣಿಸುತ್ತಿದೆ. ಆದ್ದರಿಂದ ಈ ದೃಷ್ಟಾಂತಗಳೂ ಸರಿಯಾಗವೆಂದು ಪರವಾದಿಯು ಸಂಶಯಪೀಡಿತನಾಗಿ ಬೇರೆ ದೃಷ್ಟಾಂತವನ್ನು ಕಾಣದವನಾಗಿ ಇಂದಿಗೂ ಇದೋ ಅದೋ ಎಂದು ಸಂಶಯದಿಂದ ಹೊಯ್ದಾಡುತ್ತಿದ್ದಾನೆ ಎಂದು ಅಭಿಪ್ರಾಯ.

ರಾಜರು ಶ್ರುತಿಗಳ ಗೂಢಾಭಿಪ್ರಾಯವನ್ನು ಹಯಗ್ರೀವ ದೇವರ ಉಪಾಸನೆಯಿಂದ ಕಂಡುಕೊಂಡು ದೇವರು ನನಗೆ ಅನುಗ್ರಹಿಸಿದ ಬುದ್ಧಿ ಎಂಬ ಅಭಿಪ್ರಾಯದಲ್ಲಿ ಮೇ ಮತಿಃ ಎಂದಿದ್ದಾರೆ. ಸ್ವಪ್ನ, ಮಾಯಾ ಇತ್ಯಾದಿ ಮಾತುಗಳ ಮರ್ಮವೇನೆಂದು ಸ್ವಾರಸ್ಯಕರವಾಗಿ ಇಲ್ಲಿ ಸ್ಪಷ್ಟಪಡಿಸಿ ಕೊನೆಗೆ ಸಂಶೇರತೇ ಕಿಲ ಎಂದು ಕಿಲ ಶಬ್ದದಿಂದ ತಮ್ಮ ಮಾತಿಗೆ ಗೀತಾ ಸ್ಮೃತಿ ಸಂವಾದಿಯಾಗಿದೆ ಎಂದು ಸೂಚಿಸಿದ್ದಾರೆ.

**ಅನೇಕ ಚಿತ್ತಾವಿಭ್ರಾಂತಾಃ ಮೋಹಜಾಲ ಸಮಾವೃತಾಃ ।**
**ಪ್ರಸಕ್ತಾಃ ಕಾಮಭೋಗೇಷು ಪತಂತಿ ನರಕೇಽಶುಚೌ** ಎಂಬುದಾಗಿ.

ಶ್ರುತಿಯು 'ಪರಿಣಾಮವಾದ' 'ಮಿಥ್ಯಾತ್ವವಾದ'ಗಳನ್ನು ಮಾತ್ರ ಖಂಡಿಸಿದೆ ಉಳಿದ ಮಾತುಗಳು ಶ್ರುತಿಗೆ ಸಮ್ಮತವೇ? ಎಂದರೆ ಅದಕ್ಕೆ ಉತ್ತರಿಸುತ್ತಿದ್ದಾರೆ -

**ಅನ್ಯೇತು ವಾದಿನೋ ವಿಶ್ವಸತ್ಯತ್ವದ್ರೋಹಿಣೋ ನಹಿ ।**
**ಇತಿ ತಾಂಸ್ತಾನುಪೇಕ್ಷ್ಯಾಂತೇ ಶ್ರುತಿಃ ಸ್ವಮತಮಾದದೇ ॥ ೯೯ ॥**

**ಯತೋಽನ್ಯಮತತಾಶಂಸಿ ಪದಂ ನಾತ್ರ ಪ್ರದೃಶ್ಯತೇ ।**
**ಅತಃ ಸ್ವಮತಮೇವೈತದಿತಿ ಮನ್ಯಾಮಹೇ ವಯಮ್ ।**
**ವಿನಿಶ್ಚಿತತ್ವಸ್ತುತ್ಯಾ ಚ ತಥಾಽಂತೇ ಕಥನಾದಪಿ ॥ ೧೦೦ ॥**

**ಅರ್ಥ–** ಅನ್ಯೇವಾದಿನಸ್ತು= ಕಾಲ ಚಿಂತಕ ತಾರ್ಕಿಕ, ಸಾಂಖ್ಯ ಮುಂತಾದ ವಾದಿಗಳಾದರೂ ನಹಿ ವಿಶ್ವಸತ್ಯತ್ವ ದ್ರೋಹಿಣಃ= ವಿಶ್ವಸತ್ಯತ್ವದ್ರೋಹಿಗಳಲ್ಲ ಇತಿ= ಈ ಕಾರಣದಿಂದ ತಾಂಸ್ತಾನ್= ಆಯಾ ಇತರ ವಾದಿಗಳನ್ನು ಉಪೇಕ್ಷ್ಯ= ಶ್ರುತಿಯು ಉಪೇಕ್ಷಿಸಿ ಅಂತೇ= ಕೊನೆಯಲ್ಲಿ ಸ್ವಮತಂ= ತನ್ನ ಸಿದ್ಧಾಂತವನ್ನು ಆದದೇ= ಸ್ವೀಕರಿಸಿದೆ.

ಯತಃ= ಯಾವ ಕಾರಣದಿಂದ ಅತ್ರ= ಈ ಶ್ರುತಿಭಾಗದಲ್ಲಿ ಅನ್ಯಮತತಾಶಂಸಿ= ಬೇರೆಯವರ ಮತವೆಂದು ನಿಂದಿಸುವ, ಪದಂ= ಪದವು ನ ಪ್ರದೃಶ್ಯತೇ= ಕಂಡು ಬರುತ್ತಿಲ್ಲ, ಅತಃ= ಆದ್ದರಿಂದ ಏತತ್= ಇಚ್ಛಾಮಾತ್ರಂ ಎಂಬುದು ಸ್ವಮತಮೇವ= ಶ್ರುತಿಯ ಸಿದ್ಧಾಂತವೇ ಇತಿ= ಹೀಗೆಂದು ವಯಂ= ನಾವು ಮನ್ಯಾಮಹೇ= ತಿಳಿದುಕೊಂಡಿರುತ್ತೇವೆ. ವಿನಿಶ್ಚಿತತ್ವ ಸ್ತುತ್ಯಾ= ವಿನಿಶ್ಚಿತಾ ಎಂಬ ಸ್ತುತಿರೂಪವಾದ ವಚನದಿಂದ ಚ= ಮತ್ತು ತಥಾ= ವಿನಿಶ್ಚಿತ ಎಂದು, ಅಂತೇ= ಕೊನೆಯಲ್ಲಿ ಕಥನಾದಪಿ= ಹೇಳಿರುವ ಕಾರಣದಿಂದಲೂ (ಸ್ವಮತಮೇವೈತದಿತಿ ಮನ್ಯಾಮಹೇ)

**ಅನುವಾದ** - ತಾರ್ಕಿಕರಾಗಲೀ ಸಾಂಖ್ಯರಾಗಲೀ ವಿಶ್ವಸತ್ಯತ್ವಕ್ಕೆ ವಿರುದ್ಧವಾಗಿ ಮಾತನಾಡುವವರಲ್ಲ. ಆದ್ದರಿಂದ ಅವರನ್ನು ಅತ್ಯಂತ ದುಷ್ಟ ಮತಗಳ ಸಾಲಿನಲ್ಲಿ ಹೇಳದೆ ಉಪೇಕ್ಷಿಸಿ ತನ್ನ ಸಿದ್ಧಾಂತವನ್ನು ಶ್ರುತಿಯು ಕೊನೆಗೆ ಸ್ಥಾಪಿಸಿತು.

'ಇಚ್ಛಾಮಾತ್ರಂ ಪ್ರಭೋಃ ಸೃಷ್ಟಿ' ಎಂಬುದು ನಿಶ್ಚಯಜ್ಞಾನ ಉಳ್ಳವರ ಅಭಿಪ್ರಾಯವೆಂದು ತನಗಭಿಮತವಾದ ಸಿದ್ಧಾಂತದ ಬಗ್ಗೆ ಪ್ರಶಂಸೆಯ ಮಾತನ್ನು ಹೇಳಿದೆ. ಇಷ್ಟೇ ಅಲ್ಲದೆ ದೇವಸ್ಯೈಷ ಸ್ವಭಾವೋಽಯಂ' ಎಂದು ಕೊನೆಗೆ ಹೇಳಿದೆಯಾದ್ದರಿಂದ 'ಇಚ್ಛಾಮಾತ್ರಂ ಸೃಷ್ಟಿಂ' ಎಂಬುದೇ ಶ್ರುತಿಗೆ ಸಮ್ಮತವಾದ ಸಿದ್ಧಾಂತವೆಂದು ನಾವು ತಿಳಿದಿದ್ದೇವೆ.

**ಭಾವವಿಲಾಸಿನೀ**— ಅನ್ಯೇ ತಾರ್ಕಿಕಸಾಂಖ್ಯಾದಯಃ । ತಾಂಸ್ತಾನ್ ತಾರ್ಕಿಕಸಾಂಖ್ಯಾದೀನ್ । ಸ್ವಮತಾತಿವಿರುದ್ಧತ್ವಾನ್ಸತದ್ವಯಮೇವ ದೂಷಯಿತ್ವಾಽವಿರುದ್ಧಂ ಮತಮವಿದೂಷ್ಯಮತ-ಪಂಕ್ತಾವುಪೇಕ್ಷ್ಯೇತಿ ಯಾವತ್ ॥ ೯೯-೧೦೦ ॥

**ವಿವರಣೆ** - ಶ್ರುತಿಯ ಮತಕ್ಕೆ ಅತ್ಯಂತ ವಿರುದ್ಧವಾದವುಗಳು 'ಪರಿಣಾಮವಾದ' 'ಜಗನ್ಮಿಥ್ಯಾತ್ವವಾದ' ಆದ್ದರಿಂದ ಶ್ರುತಿಯು ಅವೆರಡು ಮಾತುಗಳನ್ನು ಖಂಡಿಸಿತು. ತನ್ನ ಸಿದ್ಧಾಂತಕ್ಕೆ ಈ ಮಾತುಗಳಂತೆ ವಿರುದ್ಧವಾಗಿ ನಿಲ್ಲದ ಇತರ ಮತಗಳನ್ನು ಅತಿನಿಂದ್ಯವಾದ ಮತಗಳ ಸಾಲಿನಲ್ಲಿ ಸೇರಿಸಿ ಹೇಳದೆ ಉಪೇಕ್ಷಿಸಿತು ಎಂದು ಅಭಿಪ್ರಾಯ.

ಜಗತ್ಸೃಷ್ಟಿಗೆ ಪ್ರಕೃತಿಯೇ ಕಾರಣವೆಂದು ಹೇಳುವ ಸಾಂಖ್ಯಮತ. ಈಶ್ವರನೇ ಕಾರಣನೆಂದು ಹೇಳುವ ತಾರ್ಕಿಕಮತ. ಕಾಲ-ಕರ್ಮಾದಿಗಳನ್ನು ಕಾರಣ ಎಂದು ಹೇಳುವ ಕಾಲಚಿಂತಕಾದಿ ಮತ ಇವೆಲ್ಲವೂ ಶ್ರುತಿಗೆ ಸಮ್ಮತವಾದ ಮತಗಳಲ್ಲ. ಏಕೆಂದರೆ ತಾರ್ಕಿಕರು ಈಶ್ವರನಿಗೆ ಜಗತ್ ಸೃಷ್ಟಿಯಲ್ಲಿ ಕಾಲಾದಿಗಳಂತೆ ಸಾಧಾರಣ ಕಾರಣತ್ವ ಮಾತ್ರವಿದೆ ಎನ್ನುತ್ತಾರೆ. ಇದು ಶ್ರುತಿಗೆ ಅಸಮ್ಮತ. ಹೀಗೆ ಬೇರೆ ಬೇರೆ ಪಕ್ಷಗಳು ಭಗವಂತನ ಉಪೇಕ್ಷೆಯನ್ನು ಮಾಡಿದ್ದಾವೆ. ಹಾಗಾಗಿ ಈ ಮತಗಳು ಸ್ವಲ್ಪ ಅನುಕೂಲಗಳಾಗಿ ಕಂಡುಬಂದರೂ ಅನಾನುಕೂಲಗಳಾಗಿಯೂ ಕಂಡುಬರುತ್ತವೆ ಎಂದು

ತಿಳಿಸಲು ಕೊನೆಗೊಂದು ಕಾಲಚಿಂತಕ ಪಕ್ಷವನ್ನು ಶ್ರುತಿಯು ನಿರಾಕರಿಸಿದೆ. ಉಪಲಕ್ಷಣಯಾ ಎಲ್ಲವೂ ಹೀಗೆಯೇ ನಿರಾಕಾರ್ಯ ಎಂದು ತಿಳಿಯಬೇಕು.

ಕಾಲಚಿಂತಕಪಕ್ಷಂ ತು ಸ್ವಾನುಕೂಲತ್ವತಃ ಶ್ರುತಿಃ ।
ಪುನರ್ಜಗಾದ ಸಿದ್ಧಾಂತಃ ಸ ಏವೇತಿ ಮತಿರ್ಮಮ ॥ ೧೦೧ ॥

**ಅರ್ಥ–** ಶ್ರುತಿಃ= ಶ್ರುತಿಯು ಕಾಲಚಿಂತಕ ಪಕ್ಷಂ ತು= ಕಾಲ ಚಿಂತಕ ಪಕ್ಷವನ್ನಾದರೂ ಸ್ವಾನುಕೂಲತ್ವತಃ= ತನಗೆ ಸ್ವಲ್ಪ ಮಾತ್ರ ಅನುಕೂಲವಾದುದೆಂದು ಪುನಃ ಜಗಾದ= ಪುನಃ ಹೇಳಿತು ಆದರೆ ಸ ಏವ= ಇಚ್ಛಾಮಾತ್ರಂ ಎಂಬ ಶ್ರುತಿಯಲ್ಲಿ ಹೇಳಿದ್ದೇ ಸಿದ್ಧಾಂತ ಇತಿ= ಸಿದ್ಧಾಂತವೆಂದು ಮಮ= ನನ್ನ ಮತಿಃ= ಬುದ್ಧಿಯು.

**ಅನುವಾದ –** ಶ್ರುತಿಗೆ ಕಾಲಚಿಂತಕ ಪಕ್ಷವು ಬಲು ವಿರೋಧಿಯಲ್ಲ. ಜಗತ್ಸೃಷ್ಟಿಗೆ ಕಾಲವು ಕಾರಣವಾಗಿದೆ. ಸ್ವತಂತ್ರವಾಗಿಯಲ್ಲ. ಆದ್ದರಿಂದ ಅನುಕೂಲವೆಂದಿದ್ದಾರೆ. ಆದರೆ ಇಚ್ಛಾಮಾತ್ರಂ ಎಂಬುವುದೇ ಸಿದ್ಧಾಂತವೆಂಬುದು ನನ್ನ ಬುದ್ಧಿಯು. ಕಾಲಚಿಂತಕ ಪಕ್ಷ ಸಾಂಖ್ಯ ತಾರ್ಕಿಕಾದಿ ಮತಗಳಿಗೂ ಉಪಲಕ್ಷಣ. ಅವೂ ಶ್ರುತಿಗೆ ಸಮ್ಮತವಲ್ಲ. ಪರಿಣಾಮ ಮಿಥ್ಯಾತ್ವವಾದಗಳನ್ನು ನಿರಾಕರಿಸಿ ಇಚ್ಛಾಮಾತ್ರ ಸೃಷ್ಟಿ ಸಿದ್ಧಾಂತವನ್ನು ಹೇಳಿಯಾಗಿದ್ದರೂ ಪುನಃ ಕಾಲಚಿಂತಕ ಪಕ್ಷವನ್ನು ಕೊನೆಗೆ ಹೇಳಿದ್ದು ಶ್ರುತಿಗೆ ಸ್ವಮತ ಎಂಬ ಅಭಿಪ್ರಾಯವಿರಬಹುದೇ? ಎಂಬ ಶಂಕೆಯನ್ನು ಪರಿಹರಿಸಲು 'ತು' ಶಬ್ದವನ್ನು ರಾಜರು ಹಾಕಿದ್ದಾರೆ. ಅದು ವಿಶೇಷವನ್ನು ಸೂಚಿಸುತ್ತದೆ. ಕಾಲಚಿಂತಕ ಪಕ್ಷ ಅತ್ತ ಪರಪಕ್ಷವೂ ಅಲ್ಲ, ಇತ್ತ ಸಿದ್ಧಾಂತವೂ ಅಲ್ಲ. ಸ್ವಲ್ಪ ಅನುಕೂಲವಾದರೂ ಅನುಕೂಲವೇ ಆಗಿದೆ ಎಂದು. ಅದರಿಂದ ಶ್ರುತಿ ಪರಪಕ್ಷ ಸಾಲಿನಲ್ಲಿ 'ಅನ್ಯೇ' ಎಂದೂ ಸೇರಿಸಲಿಲ್ಲ. ಸಿದ್ಧಾಂತ ಪಕ್ಷದಲ್ಲಿಯೂ ಸೇರಿಸಲಿಲ್ಲ. ಏಕೆಂದರೆ ಅದು ಪೂರ್ತಿ ಅನುಕೂಲವೂ ಅಲ್ಲ ಎಂದು ಅಭಿಪ್ರಾಯ. ಇದನ್ನು ಸ್ಪಷ್ಟವಾಗಿ ಶ್ರುತಿ ಹೇಳದಿರುವುದು ಮೋಹನಕ್ಕಾಗಿ. ದುರ್ಮತ ಪ್ರವೃತ್ತವಾಗಲಿ ಎಂದು.

**ಭಾವವಿಲಾಸಿನೀ–** ಪ್ರಕೃತಿಕಾರಣತಾಪ್ರತಿಪಾದಕಸಾಂಖ್ಯಮತಸ್ಯೇಶ್ವರಕಾರಣತಾಪ್ರತಿಪಾದಕ-ತಾರ್ಕಿಕಮತಸ್ಯ ಕಾಲಕರ್ಮಾದಿಕಾರಣತಾಪ್ರತಿಪಾದಕಕಾಲಚಿಂತಕಾದಿಮತಸ್ಯಚೈತಾ-ವನ್ಮಾತ್ರೇಣ ಸ್ವಾನುಕೂಲತ್ವೇಽಪಿ ತತ್ಸ್ವಾತಂತ್ರ್ಯಸ್ಯ ತಾರ್ಕಿಕೋಕ್ತಪರಮಾಣು- ಪ್ರೇರಕತ್ವಮಾತ್ರಸ್ಯ ಚ ಸ್ವಾನಭಿಮತತ್ವೇನಾನುಕೂಲಾ- ನನುಕೂಲೇ ಮತಾನ್ಯೇತಾನಿ ಪೂರ್ವಪಂಕ್ತೌ ಸ್ವಪಂಕ್ತೌ ಚ ನಿರ್ದಿಶ್ಯ ಸರ್ವಥಾ ಸ್ವಾನುಕೂಲತ್ವಶಂಕಾನಿರಾಸಾಯಾಂತೇ ನಿರ್ದೇಷ್ಟುಕಾಮಾ ಶ್ರುತಿರ್ಗ್ರಂಥ-ಗೌರವಭಯಾದುಪಲಕ್ಷಣಯೈಕಂ ಮತಮಂತೇ ನಿರ್ದಿಷ್ಟತ್ವೇನ ಸ್ವಮತತ್ವಭ್ರಾಂತಿಂ ನಿವಾರಯಿತುಂ ಸ್ವಾಸ್ವರಸಬೀಜಂ ಚ ಸೂಚಯಂತೀ ನಾನಾದುರ್ಮತಪ್ರವರ್ತನಾಯ ಸ್ಪಷ್ಟಮದೂಷಯಂತೀ ಚಾಹೇತ್ಯಾಹ – **ಕಾಲಚಿಂತಕೇತಿ** ॥ ತುಶಬ್ದೋಽವಾಂತರವಿಶೇಷ- ದ್ಯೋತನಾರ್ಥಃ । ಸ ಚೋಕ್ತ ಏವ । ಸ ಏವ ಇಚ್ಛಾಮಾತ್ರಮಿತಿ ವಾಕ್ಯೋಕ್ತ ಏವ ॥ ೧೦೧ ॥

**ವಿವರಣೆ** - ಇಲ್ಲಿಯ ತನಕ ಉದಾಹರಿಸಿದ ಶ್ರುತಿಭಾಗವು ಮಾಂಡೂಕೋಪನಿಷತ್ತಿನ ಪ್ರಥಮ ಖಂಡದ ಕೊನೆಯ ಭಾಗದಲ್ಲಿ ಬರುತ್ತದೆ. ಉಪನಿಷತ್ತಿನ ಆನುಪೂರ್ವಿ-ಭಾಷ್ಯ- ವಿವರಣೆಗಳನ್ನು ಇಲ್ಲಿ ನೀಡಲಾಗಿದೆ.

ಉಪನಿಷತ್ತು (ಮಾಂಡೂಕ)

**ಪ್ರಭವಃ ಸರ್ವಭೂತಾನಾಂ ಸತಾಮಿತಿ ವಿನಿಶ್ಚಯಃ ।**
**ಸರ್ವಂ ಜನಯತಿ ಪ್ರಾಣಶ್ಚೇತೋಂಶಾನ್ ಪುರುಷಃ ಪೃಥಕ್ ॥**

ವಿಶ್ವಾದಿ ನಾಲ್ಕು ರೂಪಗಳುಳ್ಳ ಶ್ರೀಹರಿಯು ಎಲ್ಲ ವಸ್ತುಗಳ ಸೃಷ್ಟಿಕರ್ತ ಎಂಬುದು ಸಜ್ಜನರ ಅಭಿಪ್ರಾಯವಾಗಿದೆ. ಗುಣಪೂರ್ಣನಾಗಿದ್ದು ಪುರುಷ ಎಂದೂ ಚೇಷ್ಟಕನಾಗಿದ್ದು ಪ್ರಾಣ ಎಂದೂ ಕರೆಸಿಕೊಳ್ಳುವ ಶ್ರೀಹರಿಯು ಸರ್ವವನ್ನು ಸೃಷ್ಟಿಸುವನು. ಜ್ಞಾನರೂಪವಾದ ಕಿರಣಗಳಿಂದ ಕೂಡಿರುವ ಜೀವಾತ್ಮರನ್ನು ದೇವ, ದಾನವ, ಮನುಷ್ಯಾದಿ ನಾನಾ ವಿಧದಿಂದ ಸೃಷ್ಟಿಸುವನು.

**ವಿಭೂತಿಂ ಪ್ರಸವಂ ತ್ವನ್ಯೇ ಮನ್ಯಂತೇ ಸೃಷ್ಟಿಚಿಂತಕಾಃ ।**
**ಸ್ವಪ್ನಮಾಯಾಸರೂಪೇತಿ ಸೃಷ್ಟಿರನ್ಯೈರ್ವಿಕಲ್ಪಿತಾ ।**

ಕೆಲವರು ಸೃಷ್ಟಿಯ ಬಗ್ಗೆ ವಿಚಾರ ನಡೆಸುತ್ತ, ಬ್ರಹ್ಮನು ಜೀವ ಜಡಾತ್ಮಕ ವಾದ ಈ ಪ್ರಪಂಚಾತ್ಮಕವಾಗಿ ಪರಿಣಾಮಗೊಳ್ಳುವುದೇ ಪ್ರಪಂಚದ ಸೃಷ್ಟಿ ಎಂದು ತಿಳಿಯುತ್ತಾರೆ. ಇನ್ನು ಕೆಲವು ಸ್ವಾಪ್ನ ಪದಾರ್ಥಗಳಂತೆ, ಮಾಯಾ ನಿರ್ಮಿತ ವಸ್ತುಗಳಂತೆ ಮಿಥ್ಯಾ ಸೃಷ್ಟಿ ಎಂದೂ ನಾನಾವಿಧವಾಗಿ ಕಲ್ಪಿಸಿದ್ದಾರೆ.

**ಇಚ್ಛಾಮಾತ್ರಂ ಪ್ರಭೋಃ ಸೃಷ್ಟಿರಿತಿ ಸೃಷ್ಟೌ ವಿನಿಶ್ಚಿತಾಃ ।**
**ಕಾಲಾತ್ ಪ್ರಸೂತಿಂ ಭೂತಾನಾಂ ಮನ್ಯಂತೇ ಕಾಲಚಿಂತಕಾಃ ॥**

ಜಗತ್ತಿನ ಸೃಷ್ಟಿಯನ್ನು ಭಗವಂತನು ಇಚ್ಛಾಮಾತ್ರದಿಂದ ಅನಾಯಾಸವಾಗಿ ವಿಲಂಬವಿಲ್ಲದೆ ತಾನೂ ಯಾವ ವಿಕಾರ ಹೊಂದದೆ ಮಾಡುತ್ತಾನೆ ಎಂದು ಸಜ್ಜನರು ನಿಶ್ಚಿತವಾಗಿ ಅಭಿಪ್ರಾಯಪಡುತ್ತಾರೆ. ಕಾಲವೇ ಪರತತ್ವವೆಂದು ತಿಳಿದವರು ಸಕಲ ಜೀವಿಗಳೂ ಕಾಲದಿಂದಲೇ ಉತ್ಪನ್ನವಾಗುವವೆಂದು ಅಭಿಪ್ರಾಯಪಡುತ್ತಾರೆ.

**ಭೋಗಾರ್ಥಂ ಸೃಷ್ಟಿರಿತ್ಯನ್ಯೇ ಕ್ರೀಡಾರ್ಥಮಿತಿ ಚಾಪರೇ ।**
**ದೇವಸ್ಯೈಷಃ ಸ್ವಭಾವೋಽಯಂ ಆಪ್ತಕಾಮಸ್ಯ ಕಾ ಸ್ಪೃಹಾ ॥**

ಶ್ರೀಹರಿಯು ತನ್ನ ಆನಂದಕ್ಕಾಗಿ ಜಗತ್ತನ್ನು ಸೃಷ್ಟಿಸುವನೆಂದು ಕೆಲವರ ಅಭಿಪ್ರಾಯ. ಮತ್ತೆ ಕೆಲವರು ಅವನು ಕ್ರೀಡೆಗಾಗಿ ಸೃಷ್ಟಿಸುವನೆಂದು ಅಭಿಪ್ರಾಯ ಪಡುವರು, ವಸ್ತುತಃ ಸ್ವೇಚ್ಛೆಯಿಂದ ಸೃಷ್ಟ್ಯಾದಿ ವ್ಯಾಪಾರವನ್ನು ಮಾಡುವುದು ಭಗವಂತನ ಸ್ವಭಾವ. ಹೊರತು

ಯಾವುದೇ ಪ್ರಯೋಜನಕ್ಕಾಗಿ ಅಲ್ಲ. ಸದಾ ಸಂತೃಪ್ತನಾದ ಆತನಿಗೆ ಯಾವ ಪ್ರಯೋಜನದ ಬಯಕೆ ಇದ್ದೀತು?

ಭಾಷ್ಯ

ಪ್ರಭವಃ ಸರ್ವಭಾವಾನಾಂ ವಿಷ್ಣುರೇವ ನ ಸಂಶಯಃ ।
ಇತ್ಥಂ ಸತಾಂ ನಿಶ್ಚಯಃ ಸ್ಯಾದನ್ಯಥಾ ತ್ವಸತಾಂ ಭವೇತ್ ॥

ಸರ್ವಸ್ಯ ಹಿ ಪ್ರಣೇತೃತ್ವಾತ್ ಪ್ರಾಣೋ ನಾರಾಯಣಃ ಪರಃ ।
ತಾಂ ಸೃಷ್ಟಿಂ ಬಹುಧಾ ಪ್ರಾಹುಃ ಜ್ಞಾನಿನೋऽಜ್ಞಾನಿನಸ್ತಥಾ ।

ವಿಷ್ಣುರ್ವಿಕೃತಿಮಾಯಾತಿ ಮಹದಾದಿಸ್ವರೂಪಿಣೀಂ ।
ತತ್ತದ್‌ವಿವಿಧಭೂತಿಸ್ತು ಸೃಷ್ಟಿಃ ಪ್ರೋಕ್ತಾ ಹ್ಯಪಂಡಿತೈಃ ॥

ಸ್ವಪ್ನಮಾಯಾಸರೂಪಾಂ ಚ ಕೇಚಿದಜ್ಞಾ ಜನಾ ವಿದುಃ ।
ಅವಿಕಾರಸ್ಯ ಚಿನ್ಮಾತ್ರಸ್ವೇಚ್ಛಯೈವಾಖಿಲಂ ಜಗತ್ ॥

ಉತ್ಪದ್ಯತ ಇತಿ ಪ್ರಾಜ್ಞಾಃ ಪ್ರಾಹುರ್ಬ್ರಹ್ಮಾದಯೋऽಖಿಲಾಃ ।
ಪೂರ್ಣಶಕ್ತೇಃ ಕುತೋ ಮಾಯಾ ಸಾರ್ವಜ್ಞಾತ್ ಸ್ವಪ್ನವತ್ ಕುತಃ ॥

ಸರ್ವದೋಷವ್ಯತೀತಸ್ಯ ವಿಕಾರಃ ಕುತ ಇಷ್ಯತೇ ।
ತಸ್ಮಾದೇವಾವಿಕಾರಸ್ಯ ವಿಷ್ಣೋರಿಚ್ಛಾವಶಾದಿದಂ ॥

ಯಥಾರ್ಥಮೇವ ಸಂಭೂತಮಿತಿ ವೇದವಚೋऽಖಿಲಮ್ ।
ಕೇಚಿತ್ಕಾಲತ ಏವೈತಾಂ ಸೃಷ್ಟಿಮಾಹುರಕೋವಿದಾಃ ॥

ಕೇಚಿದ್ರುದ್ರಾದ್ ಬ್ರಹ್ಮಣಶ್ಚ ಪ್ರಧಾನಾದಿತಿ ಚಾಪರೇ ।
ವಿಮೂಢಾಃ ಸರ್ವ ಏವೈತೇ ಯತೋ ನಾರಾಯಣಃ ಪರಃ ॥

ಸರ್ವಕರ್ತಾ ಸರ್ವಶಕ್ತಿರೇಕ ಏವ ನ ಚಾಪರಃ ।
ಪ್ರಧಾನಕಾಲಬ್ರಹ್ಮೇಶಮುಖಾಃ ಸರ್ವೇऽಪಿ ತದ್ವಶಾಃ ॥

ತಸ್ಯಾಪಿ ವಿಷ್ಣೋಃ ಸೃಷ್ಟಿಂ ತು ಕೇಚಿದಾಹುರನೈಪುಣಾಃ ।
ಅತೃಪ್ತಸ್ಯೈವ ಭೋಗಾರ್ಥಂ ಕ್ರೀಡಾರ್ಥಂ ತು ವಿಪಶ್ಚಿತಃ ।
ಸಾ ಚ ಕ್ರೀಡಾ ಸ್ವಭಾವೋऽಸ್ಯ ಕುತೋऽತೃಪ್ತ್ಯಾ ಸ್ಪೃಹಾ ವಿಭೋಃ ॥

॥ ಇತಿ ಹರಿವಂಶೇಷು ॥

ಪರಮಾತ್ಮನು ನಿರ್ವಹಿಸುತ್ತಿರುವ ಸೃಷ್ಟಿಕಾರ್ಯವನ್ನು ಜ್ಞಾನಿಗಳು ಹಾಗೂ ಅಜ್ಞಾನಿಗಳು ಬೇರೆ ಬೇರೆ ರೀತಿಯಾಗಿ ನಿರೂಪಿಸುವರು. ಭಗವಂತನು ಆಯಾಯ

ಪದಾರ್ಥ ರೂಪದಿಂದ ಪರಿಣಾಮಗೊಳ್ಳುವುದೇ ಸೃಷ್ಟಿ ಎಂಬುದಾಗಿ ಭಾಸ್ಕರಾದಿಗಳು ಹೇಳುವರು. ಶ್ರೀವಿಷ್ಣು ಮಹದಾದಿ ತತ್ವರೂಪವಾಗಿ ಪರಿಣಮಿಸುವನೆಂದು ಅವರ ಪ್ರತಿಪಾದನೆಯಾಗಿದೆ. ಮತ್ತೆ ಕೆಲವು ಅಜ್ಞಾನಿಗಳು ಜಗತ್ ಸೃಷ್ಟಿಯನ್ನು ಸ್ವಾಪ್ನ ಪದಾರ್ಥಗಳ ಸೃಷ್ಟಿಯಂತೆ ಐಂದ್ರಜಾಲಿಕ ಸೃಷ್ಟಿಯಂತೆ ಅತಾತ್ವಿಕವೆನ್ನುವರು. ಆದರೆ ಜ್ಞಾನಿಗಳಾದ ಬ್ರಹ್ಮಾದಿಗಳೆಲ್ಲರೂ ವಿಕಾರಶೂನ್ಯನಾದ ಶ್ರೀಹರಿಯ ಜ್ಞಾನಾತ್ಮಕವಾದ ಇಚ್ಛೆಯಿಂದಲೇ ಸಮಸ್ತ ಜಗತ್ತೂ ಉತ್ಪನ್ನವಾಗುವುದೆಂದು ಹೇಳುವರು. ಪೂರ್ಣಶಕ್ತಿ ಸಂಪನ್ನನಾದ ಭಗವಂತನಿಗೆ ಮಾಯೆಯನ್ನು ಅವಲಂಬಿಸುವ ಅಗತ್ಯವಾದರೂ ಏನಿದೆ? ಸ್ವಪ್ನವು ಅಜ್ಞಾನದ ಕಾರ್ಯವಾಗಿದೆ. ಭಗವಂತನು ಸರ್ವಜ್ಞ, ಅಂತಹ ಭಗವಂತ ಜಗತ್ತನ್ನು ಅಜ್ಞಾನದಿಂದ ಕಾಣುತ್ತಿದ್ದಾನೆ ಎನ್ನುವುದಾದರೂ ಹೇಗೆ? ಸರ್ವದೋಷ ದೂರನಾದ ಭಗವಂತನಿಗೆ ಮಹತ್ತತ್ವಾದಿ ರೂಪವಾಗಿ ಪರಿಣಾಮವೂ ಕೂಡಲಾರದು. ಆದುದರಿಂದ ಅವಿಕಾರಿಯಾದ ಭಗವಂತನ ಇಚ್ಛೆಯಿಂದ ಸೃಷ್ಟವಾದ ಈ ಪ್ರಪಂಚ ಸತ್ಯವಾಗಿಯೇ ಇದೆ. ಇದನ್ನು ವೇದಗಳೆಲ್ಲ ಸಾರುತ್ತಿವೆ.

ಕೆಲವು ಅಜ್ಞಾನಿಗಳು ಕಾಲದಿಂದಲೇ ಜಗತ್ತಿನ ಸೃಷ್ಟಿಯಾಗುವುದು ಎನ್ನುವರು. ಮತ್ತೆ ಕೆಲವರು ರುದ್ರನಿಂದ ಸೃಷ್ಟಿಯಾಗುವುದೆಂದೂ ಇನ್ನು ಕೆಲವರು ಚತುರ್ಮುಖನಿಂದ ಸೃಷ್ಟಿಯಾಗುವುದೆಂದೂ ಉಳಿದ ಕೆಲವರು ಜಡಪ್ರಕೃತಿಯಿಂದಲೇ ಸೃಷ್ಟಿಯಾಗುವುದೆಂದೂ ವಾದಿಸುವರು. ಇವರೆಲ್ಲರೂ ಮೂಢರು. ಯಾಕೆಂದರೆ ಸರ್ವೋತ್ತಮನಾದ ನಾರಾಯಣನೊಬ್ಬನೇ ಸರ್ವಸಮರ್ಥನಾಗಿದ್ದು ಸರ್ವಕರ್ತೃ ಎನಿಸಿರುವನು. ಪ್ರಕೃತಿ, ಕಾಲ, ಚತುರ್ಮುಖ, ರುದ್ರ ಮೊದಲಾದವರೆಲ್ಲರೂ ನಾರಾಯಣನ ಅಧೀನರು.

ಬುದ್ಧಿ ಇಲ್ಲದ ಕೆಲವರು ಶ್ರೀವಿಷ್ಣುವೇ ಸೃಷ್ಟಿಯನ್ನು ಮಾಡುವನೆಂದು ಒಪ್ಪುವುದಾದರೂ, ಅತೃಪ್ತನಾದ ಶ್ರೀಹರಿಯು ಭೋಗಕ್ಕಾಗಿ ಸೃಷ್ಟಿಯನ್ನು ನಡೆಸುವನು ಎನ್ನುವರು. ಇನ್ನೂ ಕೆಲವು ಅಜ್ಞಾನಿಗಳು ಭಗವಂತನು ಆಲಸ್ಯ ಪರಿಹಾರಕವಾದ ಕ್ರೀಡೆಗಾಗಿ ಸೃಷ್ಟಿಸುವನು ಎನ್ನುವರು. ಜ್ಞಾನಿಗಳ ಅಭಿಪ್ರಾಯದಲ್ಲಿ ಕ್ರೀಡೆ ಭಗವಂತನ ಸ್ವಭಾವವೆನಿಸಿದೆ. ಸರ್ವಸಮರ್ಥನಾಗಿದ್ದು ವಿಭು ಎನಿಸಿರುವ ಅವನಿಗೆ ಅತೃಪ್ತಿಯಿಂದಾಗಿ ಬಯಕೆ ಉಂಟಾಗುವುದಾದರೂ ಹೇಗೆ? ಎಂದು ಹರಿವಂಶದಲ್ಲಿದೆ.

**ಯತಃ ಸ್ವಪ್ನಾದಿವೈಧರ್ಮ್ಯಂ ಜಗತಃ ಸೂತ್ರಕೃತ್ ಸ್ವಯಂ ।**
**ಸ್ಪಷ್ಟಮಾಹ ತತೋಽಪ್ಯೇಷ ಪಕ್ಷೋ ನ ಶ್ರುತಿಸೂತ್ರಯೋಃ ।**
**ಮತಸ್ತತ್ ಪೂರ್ವಪಕ್ಷೋಽಸಾವಾಸೀನ್ನಾಸ್ತ್ಯತ್ರ ಸಂಶಯಃ ॥ ೧೦೨ ॥**

**ಅರ್ಥ**-ಯತಃ= ಯಾವ ಕಾರಣದಿಂದ ಸೂತ್ರಕೃತ್= ಸೂತ್ರಕಾರರು ಸ್ವಯಂ= ತಾವಾಗಿಯೇ ಜಗತಃ= ಜಗತ್ತಿಗೆ ಸ್ವಪ್ನಾದಿ ವೈಧರ್ಮ್ಯಂ= ಸ್ವಪ್ನಾದಿಗಳಿಂದ ವಿರುದ್ಧ

ಧರ್ಮಗಳನ್ನು ಸ್ಪಷ್ಟಂ= ಸ್ಪಷ್ಟವಾಗಿ ಆಹ= ಹೇಳಿರುವರೋ ತತೋಪಿ= ಆ ಕಾರಣದಿಂದಲೂ ಏಷ ಪಕ್ಷಃ = ಸರ್ವ ಮಿಥ್ಯಾತ್ವಪಕ್ಷವು ಶ್ರುತಿಸೂತ್ರಯೋಃ= ಶ್ರುತಿ ಮತ್ತು ಸೂತ್ರಗಳಿಗೆ ನ ಮತಃ= ಸಮ್ಮತವಲ್ಲವು ತತ್= ಶ್ರುತಿ-ಸೂತ್ರ ವಿರುದ್ಧವಾದುದರಿಂದ ಅಸೌ= ಸರ್ವ ಮಿಥ್ಯಾತ್ವ ಪಕ್ಷವು ಪೂರ್ವಪಕ್ಷಃ= ಪೂರ್ವಪಕ್ಷವೇ ಆಸೀತ್= ಆಯಿತು ಅತ್ರ= ಈ ವಿಷಯದಲ್ಲಿ ಸಂಶಯಃ ನ ಅಸ್ತಿ= ಸಂದೇಹವು ಇರುವುದಿಲ್ಲ.

**ಅನುವಾದ** - ಶ್ರುತಿಯು ಹರಿಯ ಸೃಷ್ಟಿಯನ್ನು ಸ್ವಪ್ನದಂತಲ್ಲ ಎಂದಿಷ್ಟೇ ಹೇಳಿದರೆ ಸೂತ್ರವು 'ವೈಧರ್ಮ್ಯಾಚ್ಚ ನ ಸ್ವಪ್ನಾದಿವತ್' ಎಂದು ಅಬಾಧಿತವಾಗಿರುವುದರಿಂದ ಜಗತ್ತು ಸ್ವಪ್ನಾದಿಗಳಂತಲ್ಲ ಎಂದು ಸ್ಪಷ್ಟವಾಗಿ ಹೇಳುತ್ತಿದೆ. ಆದ್ದರಿಂದ ಸರ್ವಮಿಥ್ಯಾತ್ವ ಪಕ್ಷವು ಶ್ರುತಿ- ಸೂತ್ರಗಳಿಗೆ ಸಮ್ಮತವಾದ ಪಕ್ಷವಾಗಿಲ್ಲ. ಹೊರತು ಸಿದ್ಧಾಂತಕ್ಕೆ ವಿರುದ್ಧವಾದುದರಿಂದ ಪೂರ್ವಪಕ್ಷವೇ ಆಗಿದೆ. ಇದರಲ್ಲಿ ಯಾವ ಸಂಶಯವೂ ಇರುವುದಿಲ್ಲ.

**ಭಾವವಿಲಾಸಿನೀ**– ತತ್ ತಸ್ಮಾತ್ ಶ್ರುತಿಸೂತ್ರವಿರುದ್ಧದ್ವಾತ್ ।।೧೦೨।।

**ವಿವರಣೆ** - ಓಂ ವೈಧರ್ಮ್ಯಾಚ್ಚ ನ ಸ್ವಪ್ನಾದಿವತ್ ಓಂ.

ವೈಧರ್ಮ್ಯಾತ್= ವೈಲಕ್ಷಣ್ಯವಿರುವುದರಿಂದ, ಸ್ವಪ್ನಾದಿವತ್= ಸ್ವಾಪ್ನಪದಾರ್ಥಗಳಂತೆ ಈ ಜಗತ್ತು, ನ= ಅಸತ್ ಅಲ್ಲ.

**ತಸ್ಮಾತ್ ಸ್ವಪ್ನಾದಿಸಾರೂಪ್ಯಾನ್ಮಾಯಾಸೃಷ್ಟಿಂ ವದನ್ನಯಂ ।**
**ಮಾಯಾವಾದೀ ಶ್ರುತೇರ್ಹಾರ್ದವೇದೀ ನೈವಾಭವತ್ ಕುಧೀಃ ॥ ೧೦೩॥**

**ಅತಃ ಸರ್ವಸ್ಯ ಸತ್ಯತ್ವಸಿದ್ಧಾಂತೋಽಭೂಚ್ಛ್ರುತೇರ್ಬಲಾತ್ ।**
**ಮಿಥ್ಯಾತ್ವಂ ಪೂರ್ವಪಕ್ಷತ್ವಾದುಪೇಕ್ಷ್ಯಮಿತಿ ಚ ಸ್ಥಿತಂ ॥ ೧೦೪ ॥**

**ಅರ್ಥ**– ತಸ್ಮಾತ್= ಶ್ರುತಿ-ಸೂತ್ರ ವಿರುದ್ಧಮತಾವಲಂಬಿಯಾದ್ದರಿಂದ ಸ್ವಪ್ನಾದಿ ಸಾರೂಪ್ಯಾತ್= ಸ್ವಪ್ನ ಸಾದೃಶ್ಯವಿರುವುದರಿಂದ ಮಾಯಾಸೃಷ್ಟಿಂ= ಕಲ್ಪಿತ ಸೃಷ್ಟಿಯನ್ನು ವದನ್= ಹೇಳುತ್ತಿರುವ ಅಯಂ= ಈ ಮಾಯಾವಾದೀ= ಮಾಯಾವಾದಿಯು ಶ್ರುತೇಃ= ಶ್ರುತಿಯ ಹಾರ್ದವೇದೀ= ಹೃದಯವನ್ನು ಬಲ್ಲವನು ನೈವ ಅಭವತ್= ಆಗಲಿಲ್ಲ ಕಿಂತು ಕುಧೀಃ= ಕುತ್ಸಿತಬುದ್ಧಿಯುಳ್ಳವನು (ಅಭವತ್= ಆದನು). ಅತಃ= ಆದುದರಿಂದ ಶ್ರುತೇರ್ಬಲಾತ್ = ಶ್ರುತಿ ಸೂತ್ರಗಳ ಬಲದಿಂದ ಸರ್ವಸ್ಯ= ಜಗತ್ತಿಗೆ ಸತ್ಯತ್ವಸಿದ್ಧಾಂತಃ= ಸತ್ಯತ್ವ ನಿರ್ಣಯವು ಅಭೂತ್= ಆಯಿತು. ಮಿಥ್ಯಾತ್ವಂ ಚ= ಮಿಥ್ಯಾತ್ವವಾದರೂ ಪೂರ್ವಪಕ್ಷತ್ವಾತ್= ಪೂರ್ವಪಕ್ಷವಾದುದರಿಂದ, ಉಪೇಕ್ಷ್ಯಮಿತಿ= ಉಪೇಕ್ಷಿಸಲರ್ಹ- ವಾದುದೆಂದು, ಸ್ಥಿತಮ್= ನಿರ್ಣಯವಾಯಿತು.

**ಅನುವಾದ** - ಶ್ರುತಿ-ಸೂತ್ರಗಳಲ್ಲಿ ಯಾವುದು ಪೂರ್ವಪಕ್ಷವೆಂದು ಖಂಡಿಸಲ್ಪಟ್ಟಿದೆಯೋ ಅದೇ ಮಾಯಾಸೃಷ್ಟಿಯನ್ನು ಸಿದ್ಧಾಂತವನ್ನಾಗಿ ಸ್ಥಾಪಿಸಲು ಹೊರಟ ಮಾಯಾವಾದಿಯು ಶ್ರುತಿಯ ಹೃದಯವನ್ನು ಬಲ್ಲವನಾಗಿಲ್ಲ. ಇಚ್ಛಾಮಾತ್ರಂ ಮುಂತಾದ ವಾಕ್ಯಗಳು ಕಾಣುತ್ತಿದ್ದರೂ ವಿರುದ್ಧವಾಗಿ ಮಾತನಾಡಿದ್ದರಿಂದ ದುರ್ಬುದ್ಧಿಯವನೂ ಆಗಿದ್ದಾನೆ. ಆದ್ದರಿಂದ ಶ್ರುತಿ-ಸೂತ್ರಗಳ ಬಲದಿಂದ ಸಮಗ್ರ ಜಗತ್ತು ಸತ್ಯವೆಂದು ನಿರ್ಣಯವಾಯಿತು. ಜಗತ್ ಮಿಥ್ಯಾತ್ವವಾದವು ಪೂರ್ವಪಕ್ಷವಾಯಿತು. ಆದ್ದರಿಂದ ಇದು ಉಪೇಕ್ಷಣೀಯವೆಂದು ದೃಢವಾಯಿತು.

**ಭಾವವಿಲಾಸಿನೀ**– ತಸ್ಮಾಚ್ಛ್ರುತಿಸೂತ್ರವಿರುದ್ಧಮತಾವಲಂಬಿತ್ವಾತ್ । ಶ್ರುತೇರಿತ್ಯುಪಲಕ್ಷಣಮ್ । ಸೂತ್ರಸ್ಯೇತ್ಯಪಿ ದ್ರಷ್ಟವ್ಯಮ್ ॥ ೧೦೩-೧೦೪ ॥

ಇಚ್ಛಾಮಾತ್ರೇ ತು ಸಾ ಸೃಷ್ಟಿರ್ಯಸ್ಮಾದವ್ಯವಧಾನತಃ ।
ಸ್ಯಾದೇವ ತತ್‌ಕ್ಷಣೇ ತಸ್ಮಾತ್ ತಾಂ ತತ್ತ್ವೇನ ಶ್ರುತಿರ್ಜಗೌ ॥ ೧೦೫ ॥

ಯಥಾ ಸತ್ಯಾ ಹರೇರಿಚ್ಛಾ ತಥಾ ಸೃಷ್ಟಿಶ್ಚ ಸಾ ಸತೀ ।
ಇತಿ ಪ್ರಬೋಧನಾಯಾಪಿ ತಾಂ ತತ್ತ್ವೇನ ಜಗೌ ಶ್ರುತಿಃ ॥ ೧೦೬ ॥

**ಅರ್ಥ**– ಇಚ್ಛಾಮಾತ್ರೇ= ಇಚ್ಛೆ ಉಂಟಾದ ಮಾತ್ರಕ್ಕೇ, ತತ್‌ಕ್ಷಣೇ= ತತ್ ಕ್ಷಣದಲ್ಲಿ, ಅವ್ಯವಧಾನತಃ= ಬೇರೆ ಸ್ವತಂತ್ರ ಕಾರಣದ ವ್ಯವಧಾನವಿಲ್ಲದೆಯೇ, ಸಾ ಸೃಷ್ಟಿಃ ಸ್ಯಾದೇವ= ಆ ಸೃಷ್ಟಿಯು ಆಗಿಯೇ ತೀರುವುದು. ತಸ್ಮಾತ್= ಆದರಿಂದ, ತಾಂ= ಆ ಸೃಷ್ಟಿಯನ್ನು, ತತ್ತ್ವೇನ= ಇಚ್ಛಾಮಾತ್ರವೆಂದು, ಶ್ರುತಿಃ= ಶ್ರುತಿಯು, ಜಗೌ= ಹೇಳಿತು.

ಯಥಾ= ಹೇಗೆ, ಹರೇರಿಚ್ಛಾ= ಹರಿಯ ಇಚ್ಛೆಯು, ಸತ್ಯಾ= ಸತ್ಯವೋ, ತಥಾ= ಅದರಂತೆ ಸಾ ಸೃಷ್ಟಿಶ್ಚ= ಆ ಜಗತ್ ಸೃಷ್ಟಿಯೂ ಸತೀ= ಸತ್ಯವಾದುದು ಇತಿ= ಈ ರೀತಿಯಾಗಿ ಪ್ರಬೋಧನಾಯಾಪಿ= ತಿಳಿಸುವುದಕ್ಕಾಗಿಯೂ ತಾಂ= ಜಗತ್ ಸೃಷ್ಟಿಯನ್ನು ಶ್ರುತಿಃ= ಶ್ರುತಿಯು ತತ್ತ್ವೇನ= ಇಚ್ಛಾಮಾತ್ರಂ ಎಂಬುದಾಗಿ ಜಗೌ= ಹೇಳಿತು.

**ಅನುವಾದ** - ಭಗವಂತನಿಂದ ನಡೆಯುವ ಜಗತ್ತಿನ ಸೃಷ್ಟಿಯು ಅವನು ಇಚ್ಛೆ ಮಾಡಿದೊಡನೆ ಸ್ವಲ್ಪವೂ ಕಾಲದ ತಡೆ ಇಲ್ಲದೆ ನಡೆಯುತ್ತದೆ. ಆದ್ದರಿಂದಲೇ ಶ್ರುತಿಯು ಇಚ್ಛಾಮಾತ್ರಂ, ಸಂಕಲ್ಪಿಸಿದ ತತ್ ಕ್ಷಣದಲ್ಲಿ ಮಾಡುತ್ತಾನೆಂದು ಶ್ರುತಿಯು ಹೇಳಿದೆ. ಹೇಗೆ ಶ್ರೀಹರಿಯ ಇಚ್ಛೆಯು ಸತ್ಯವಾದುದೋ' ಹಾಗೆಯೇ ಅವನಿಂದ ನಿರ್ಮಿಸಲ್ಪಡುವ ಈ ಜಗತ್ ಸೃಷ್ಟಿಯೂ ಸತ್ಯವಾದುದೇ ಆಗಿದೆ ಎಂದು ತಿಳಿಸಲೂ ಕೂಡ ಇಚ್ಛಾಮಾತ್ರಂ ಎಂದು ಶ್ರುತಿ ಹೇಳಿದೆ.

**ಭಾವವಿಲಾಸಿನೀ–** ತಾಂ ಸೃಷ್ಟಿಮ್ । ತತ್ತ್ವೇನ ಇಚ್ಛಾಮಾತ್ರತ್ವೇನ । ಯಥಾಲೀಲಾಮಾತ್ರೇಣ ಶತ್ರೂನ್ ಸಂಹರತೋ ಲೀಲೈವ ಶತ್ರುಹರಣಮಿತಿ ವ್ಯಪದೇಶಃ ತಥೇತ್ಯರ್ಥಃ ॥೧೦೫-೧೦೬॥

**ವಿವರಣೆ** - ಲೀಲಾಮಾತ್ರದಿಂದ ಶತ್ರುಗಳನ್ನು ಸಂಹರಿಸುವವನಿಗೆ ಹೇಗೆ ಶತ್ರುಹರಣವು ಲೀಲೆ ಎಂದು ಹೇಳುತ್ತಾರೆಯೋ ಅದರಂತೆ ಇಚ್ಛಾಮಾತ್ರದಿಂದ ಜಗತ್ತನ್ನು ಸೃಷ್ಟಿಸುವ ಹರಿಗೆ ಜಗತ್ಸರ್ಜನವು ಇಚ್ಛಾಮಾತ್ರ ಎಂದು ಭಾವ. ಇಲ್ಲಿ ರಾಜರು ಮಾತ್ರ ಶಬ್ದದ ಸ್ವಾರಸ್ಯವನ್ನು ಎರಡು ರೀತಿಯಾಗಿ ವ್ಯಾಖ್ಯಾನಿಸಿದ್ದಾರೆಂದು ತಿಳಿಯಬೇಕು.

ಇಚ್ಛಾಮಾತ್ರಂ ಎಂದು ಹೇಳಿದ್ದರಿಂದ ಬೇರೆ ಪ್ರಯೋಜನವೂ ಇದೆ ಎಂದು ಹೇಳುತ್ತಾರೆ –

ಪ್ರಭೋಃ ಸಕಾಶಾದ್ ಯಾಸೃಷ್ಟಿಸ್ತಸ್ಯಾಂ ಸೃಷ್ಟಾವಿಯಂ ಸ್ಥಿತಿಃ ।
ಪ್ರಭೋಃ ಸಕಾಶಾದ್ ಯಾಸೃಷ್ಟಿರ್ಮತ್ಸ್ಯಕೂರ್ಮಾದಿರೂಪಿಣೀ ॥ ೧೦೭ ॥

ಸಾ ತ್ವಿಚ್ಛಾಮಾತ್ರಮೇವೇತಿ ಭಾವಾದ್ವಾ ಪ್ರಾಹ ತಾಂ ತಥಾ ।
ದ್ವಯೋರಪ್ಯನುಕೂಲಾಯ ಮನ್ಯೇ ಸಾಮಾನ್ಯಕೀರ್ತನಮ್ ॥ ೧೦೮ ॥

**ಅರ್ಥ–** ಪ್ರಭೋಃ ಸಕಾಶಾತ್= ಸರ್ವಸಮರ್ಥನಾದ ಪರಮಾತ್ಮನ ದೆಸೆಯಿಂದ ಯಾ ಸೃಷ್ಟಿಃ= ಯಾವ ಜಗತ್ತಿನ ಸೃಷ್ಟಿ ಇದೆಯೋ ತಸ್ಯಾಂ ಸೃಷ್ಟೌ= ಆ ಸೃಷ್ಟಿ ವಿಷಯದಲ್ಲಿ ಇಯಂ ಸ್ಥಿತಿಃ= ಕೇವಲ ಇಚ್ಛೆ ಸಾಕು ಇನ್ನೊಂದರ ಅಪೇಕ್ಷೆಯಿಲ್ಲ. ಅದರಿಂದ ಇಚ್ಛಾಮಾತ್ರಂ ಎಂಬುದಾಗಿಯೇ ಸೃಷ್ಟಿಯ ಸ್ಥಿತಿಯು (ಇನ್ನು) ಪ್ರಭೋಃ ಸಕಾಶಾತ್= ಸರ್ವಸಮರ್ಥನಾದ ಪರಮಾತ್ಮನ ದೆಸೆಯಿಂದ ಯಾ= ಯಾವ ಮತ್ಸ್ಯಕೂರ್ಮಾದಿ ರೂಪಿಣೀ ಸೃಷ್ಟಿಃ= ಮತ್ಸ್ಯಕೂರ್ಮಾದಿ ರೂಪದ ಸೃಷ್ಟಿಯೋ ಸಾ ತು= ಆ ಸೃಷ್ಟಿಯಾದರೂ ಇಚ್ಛಾಮಾತ್ರಮೇವ= ಇಚ್ಛಾಮಾತ್ರವೇ ಆಗಿದೆ ಇತಿ= ಎಂಬ ಭಾವಾದ್ವಾ= ಅಭಿಪ್ರಾಯದಿಂದಲೂ ತಾಂ = ಸೃಷ್ಟಿಯನ್ನು ತಥಾ= ಇಚ್ಛಾಮಾತ್ರಂ ಎಂಬುದಾಗಿ ಪ್ರಾಹ= ಹೇಳಿತು. ದ್ವಯೋರಪಿ= ಎರಡು ಅರ್ಥಗಳ ಅನುಕೂಲಾಯ= ಲಾಭಕ್ಕೋಸ್ಕರ ಸಾಮಾನ್ಯಕೀರ್ತನಂ= ಇಚ್ಛಾಮಾತ್ರಂ ಎಂದು ಸಾಮಾನ್ಯವಾಗಿ ಹೇಳಿದ್ದು ಎಂದು, ಮನ್ಯೇ= ತಿಳಿದಿದ್ದೇನೆ.

**ಅನುವಾದ** - ಭಗವಂತನಿಂದ ನಡೆಯುವ ಪ್ರಪಂಚದ ಸೃಷ್ಟಿಗಳೆಲ್ಲವೂ ಕೇವಲ ಭಗವಂತನ ಸಂಕಲ್ಪ ಮಾತ್ರದಿಂದಲೇ ನಡೆಯುತ್ತವೆ ಎಂದು ತಿಳಿಸಲು ಶ್ರುತಿಯು ಇಚ್ಛಾಮಾತ್ರಂ ಎಂದಿದೆ. ಅಥವಾ ಶ್ರೀಹರಿಯ ದೆಸೆಯಿಂದ ಮತ್ಸ್ಯ-ಕೂರ್ಮಾದಿ ರೂಪದ ಯಾವ ಸೃಷ್ಟಿಯು ಆಗಿದೆಯೋ ಅದು ಹರೀಚ್ಛೆಯೇ ಆಗಿದೆ. ಹರಿಯ ಇಚ್ಛಾದಿ ಗುಣಗಳಿಗೂ ಮತ್ಸ್ಯಾದಿ ರೂಪಗಳ ಭೇದವಿಲ್ಲ. ಅದರಿಂದ ಇಚ್ಛೈವ ಇಚ್ಛಾಮಾತ್ರಂ ಎನ್ನಬೇಕು ಎಂಬ ಅಭಿಪ್ರಾಯದಿಂದ ಇಚ್ಛಾಮಾತ್ರಂ ಎಂದು ಶ್ರುತಿಯು ಹೇಳಿದೆ. ಪ್ರಪಂಚದ ಸೃಷ್ಟಿಯೂ ಮತ್ಸ್ಯಾದಿ ರೂಪಸೃಷ್ಟಿಯೂ ಹೀಗೆ

**ಅನುವಾದ -** ಶ್ರುತಿ-ಸೂತ್ರಗಳಲ್ಲಿ ಯಾವುದು ಪೂರ್ವಪಕ್ಷವೆಂದು ಖಂಡಿಸಲ್ಪಟ್ಟಿದೆಯೋ ಅದೇ ಮಾಯಾಸೃಷ್ಟಿಯನ್ನು ಸಿದ್ಧಾಂತವನ್ನಾಗಿ ಸ್ಥಾಪಿಸಲು ಹೊರಟ ಮಾಯಾವಾದಿಯು ಶ್ರುತಿಯ ಹೃದಯವನ್ನು ಬಲ್ಲವನಾಗಿಲ್ಲ, ಇಚ್ಛಾಮಾತ್ರಂ ಮುಂತಾದ ವಾಕ್ಯಗಳು ಕಾಣುತ್ತಿದ್ದರೂ ವಿರುದ್ಧವಾಗಿ ಮಾತನಾಡಿದ್ದರಿಂದ ದುರ್ಬುದ್ಧಿಯವನೂ ಆಗಿದ್ದಾನೆ. ಆದ್ದರಿಂದ ಶ್ರುತಿ-ಸೂತ್ರಗಳ ಬಲದಿಂದ ಸಮಗ್ರ ಜಗತ್ತು ಸತ್ಯವೆಂದು ನಿರ್ಣಯವಾಯಿತು. ಜಗತ್ ಮಿಥ್ಯಾತ್ವವಾದವು ಪೂರ್ವಪಕ್ಷವಾಯಿತು. ಆದ್ದರಿಂದ ಇದು ಉಪೇಕ್ಷಣೀಯವೆಂದು ದೃಢವಾಯಿತು.

**ಭಾವವಿಲಾಸಿನೀ–** ತಸ್ಮಾಚ್ಛ್ರುತಿಸೂತ್ರವಿರುದ್ಧಮತಾವಲಂಬಿತ್ವಾತ್ । ಶ್ರುತೇರಿತ್ಯುಪಲಕ್ಷಣಮ್ । ಸೂತ್ರಸ್ಯೇತ್ಯಪಿ ದ್ರಷ್ಟವ್ಯಮ್ ॥ ೧೦೩-೧೦೪ ॥

ಇಚ್ಛಾಮಾತ್ರೇ ತು ಸಾ ಸೃಷ್ಟಿರ್ಯಸ್ಮಾದವ್ಯವಧಾನತಃ ।
ಸ್ಯಾದೇವ ತತ್ಕ್ಷಣೇ ತಸ್ಮಾತ್ ತಾಂ ತತ್ತ್ವೇನ ಶ್ರುತಿರ್ಜಗೌ ॥ ೧೦೫ ॥

ಯಥಾ ಸತ್ಯಾ ಹರೇರಿಚ್ಛಾ ತಥಾ ಸೃಷ್ಟಿಶ್ಚ ಸಾ ಸತೀ ।
ಇತಿ ಪ್ರಬೋಧನಾಯಾಪಿ ತಾಂ ತತ್ತ್ವೇನ ಜಗೌ ಶ್ರುತಿಃ ॥ ೧೦೬ ॥

**ಅರ್ಥ–** ಇಚ್ಛಾಮಾತ್ರೇ= ಇಚ್ಛೆ ಉಂಟಾದ ಮಾತ್ರಕ್ಕೇ, ತತ್ಕ್ಷಣೇ= ತತ್ ಕ್ಷಣದಲ್ಲಿ, ಅವ್ಯವಧಾನತಃ= ಬೇರೆ ಸ್ವತಂತ್ರ ಕಾರಣದ ವ್ಯವಧಾನವಿಲ್ಲದೆಯೇ, ಸಾ ಸೃಷ್ಟಿಃ ಸ್ಯಾದೇವ= ಆ ಸೃಷ್ಟಿಯು ಆಗಿಯೇ ತೀರುವುದು. ತಸ್ಮಾತ್= ಆದರಿಂದ, ತಾಂ= ಆ ಸೃಷ್ಟಿಯನ್ನು, ತತ್ತ್ವೇನ= ಇಚ್ಛಾಮಾತ್ರವೆಂದು, ಶ್ರುತಿಃ= ಶ್ರುತಿಯು, ಜಗೌ= ಹೇಳಿತು.

ಯಥಾ= ಹೇಗೆ, ಹರೇರಿಚ್ಛಾ= ಹರಿಯ ಇಚ್ಛೆಯು, ಸತ್ಯಾ= ಸತ್ಯವೋ, ತಥಾ= ಅದರಂತೆ ಸಾ ಸೃಷ್ಟಿಶ್ಚ= ಆ ಜಗತ್ ಸೃಷ್ಟಿಯೂ ಸತೀ= ಸತ್ಯವಾದುದು ಇತಿ= ಈ ರೀತಿಯಾಗಿ ಪ್ರಬೋಧನಾಯಾಪಿ= ತಿಳಿಸುವುದಕ್ಕಾಗಿಯೂ ತಾಂ= ಜಗತ್ ಸೃಷ್ಟಿಯನ್ನು ಶ್ರುತಿಃ= ಶ್ರುತಿಯು ತತ್ತ್ವೇನ= ಇಚ್ಛಾಮಾತ್ರಂ ಎಂಬುದಾಗಿ ಜಗೌ= ಹೇಳಿತು.

**ಅನುವಾದ -** ಭಗವಂತನಿಂದ ನಡೆಯುವ ಜಗತ್ತಿನ ಸೃಷ್ಟಿಯು ಅವನು ಇಚ್ಛೆ ಮಾಡಿದೊಡನೆ ಸ್ವಲ್ಪವೂ ಕಾಲದ ತಡೆ ಇಲ್ಲದೆ ನಡೆಯುತ್ತದೆ. ಆದ್ದರಿಂದಲೇ ಶ್ರುತಿಯು ಇಚ್ಛಾಮಾತ್ರಂ, ಸಂಕಲ್ಪಿಸಿದ ತತ್ ಕ್ಷಣದಲ್ಲಿ ಮಾಡುತ್ತಾನೆಂದು ಶ್ರುತಿಯು ಹೇಳಿದೆ. ಹೇಗೆ ಶ್ರೀಹರಿಯ ಇಚ್ಛೆಯು ಸತ್ಯವಾದುದೋ' ಹಾಗೆಯೇ ಅವನಿಂದ ನಿರ್ಮಿಸಲ್ಪಡುವ ಈ ಜಗತ್ ಸೃಷ್ಟಿಯೂ ಸತ್ಯವಾದುದೇ ಆಗಿದೆ ಎಂದು ತಿಳಿಸಲೂ ಕೂಡ ಇಚ್ಛಾಮಾತ್ರಂ ಎಂದು ಶ್ರುತಿ ಹೇಳಿದೆ.

**ಭಾವವಿಲಾಸಿನೀ–** ತಾಂ ಸೃಷ್ಟಿಮ್ । ತತ್ತ್ವೇನ ಇಚ್ಛಾಮಾತ್ರತ್ವೇನ । ಯಥಾಲೀಲಾಮಾತ್ರೇಣ ಶತ್ರೂನ್ ಸಂಹರತೋ ಲೀಲೈವ ಶತ್ರುಹರಣಮಿತಿ ವ್ಯಪದೇಶಃ ತಥೇತ್ಯರ್ಥಃ ।।೧೦೫-೧೦೬।।

**ವಿವರಣೆ** - ಲೀಲಾಮಾತ್ರದಿಂದ ಶತ್ರುಗಳನ್ನು ಸಂಹರಿಸುವವನಿಗೆ ಹೇಗೆ ಶತ್ರುಹರಣವು ಲೀಲೆ ಎಂದು ಹೇಳುತ್ತಾರೆಯೋ ಅದರಂತೆ ಇಚ್ಛಾಮಾತ್ರದಿಂದ ಜಗತ್ತನ್ನು ಸೃಷ್ಟಿಸುವ ಹರಿಗೆ ಜಗತ್ಸರ್ಜನವು ಇಚ್ಛಾಮಾತ್ರ ಎಂದು ಭಾವ. ಇಲ್ಲಿ ರಾಜರು ಮಾತ್ರ ಶಬ್ದದ ಸ್ವಾರಸ್ಯವನ್ನು ಎರಡು ರೀತಿಯಾಗಿ ವ್ಯಾಖ್ಯಾನಿಸಿದ್ದಾರೆಂದು ತಿಳಿಯಬೇಕು.

ಇಚ್ಛಾಮಾತ್ರಂ ಎಂದು ಹೇಳಿದ್ದರಿಂದ ಬೇರೆ ಪ್ರಯೋಜನವೂ ಇದೆ ಎಂದು ಹೇಳುತ್ತಾರೆ –

ಪ್ರಭೋಃ ಸಕಾಶಾದ್ ಯಾಸೃಷ್ಟಿಸ್ತಸ್ಯಾಂ ಸೃಷ್ಟಾವಿಯಂ ಸ್ಥಿತಿಃ ।
ಪ್ರಭೋಃ ಸಕಾಶಾದ್ ಯಾಸೃಷ್ಟಿರ್ಮತ್ಸ್ಯಕೂರ್ಮಾದಿರೂಪಿಣೀ ।। ೧೦೭ ।।

ಸಾ ತ್ವಿಚ್ಛಾಮಾತ್ರಮೇವೇತಿ ಭಾವಾದ್ವಾ ಪ್ರಾಹ ತಾಂ ತಥಾ ।
ದ್ವಯೋರಪ್ಯನುಕೂಲಾಯ ಮನ್ಯೇ ಸಾಮಾನ್ಯಕೀರ್ತನಮ್ ।। ೧೦೮ ।।

**ಅರ್ಥ–** ಪ್ರಭೋಃ ಸಕಾಶಾತ್= ಸರ್ವಸಮರ್ಥನಾದ ಪರಮಾತ್ಮನ ದೆಸೆಯಿಂದ ಯಾ ಸೃಷ್ಟಿಃ= ಯಾವ ಜಗತ್ತಿನ ಸೃಷ್ಟಿ ಇದೆಯೋ ತಸ್ಯಾಂ ಸೃಷ್ಟೌ= ಆ ಸೃಷ್ಟಿ ವಿಷಯದಲ್ಲಿ ಇಯಂ ಸ್ಥಿತಿಃ= ಕೇವಲ ಇಚ್ಛೆ ಸಾಕು ಇನ್ನೊಂದರ ಅಪೇಕ್ಷೆಯಿಲ್ಲ. ಅದರಿಂದ ಇಚ್ಛಾಮಾತ್ರಂ ಎಂಬುದಾಗಿಯೇ ಸೃಷ್ಟಿಯ ಸ್ಥಿತಿಯು (ಇನ್ನು) ಪ್ರಭೋಃ ಸಕಾಶಾತ್= ಸರ್ವಸಮರ್ಥನಾದ ಪರಮಾತ್ಮನ ದೆಸೆಯಿಂದ ಯಾ= ಯಾವ ಮತ್ಸ್ಯಕೂರ್ಮಾದಿ ರೂಪಿಣೀ ಸೃಷ್ಟಿಃ= ಮತ್ಸ್ಯಕೂರ್ಮಾದಿ ರೂಪದ ಸೃಷ್ಟಿಯೋ ಸಾ ತು= ಆ ಸೃಷ್ಟಿಯಾದರೂ ಇಚ್ಛಾಮಾತ್ರಮೇವ= ಇಚ್ಛಾಮಾತ್ರವೇ ಆಗಿದೆ ಇತಿ= ಎಂಬ ಭಾವಾದ್ವಾ= ಅಭಿಪ್ರಾಯದಿಂದಲೂ ತಾಂ = ಸೃಷ್ಟಿಯನ್ನು ತಥಾ= ಇಚ್ಛಾಮಾತ್ರಂ ಎಂಬುದಾಗಿ ಪ್ರಾಹ= ಹೇಳಿತು. ದ್ವಯೋರಪಿ= ಎರಡು ಅರ್ಥಗಳ ಅನುಕೂಲಾಯ= ಲಾಭಕ್ಕೋಸ್ಕರ ಸಾಮಾನ್ಯಕೀರ್ತನಂ= ಇಚ್ಛಾಮಾತ್ರಂ ಎಂದು ಸಾಮಾನ್ಯವಾಗಿ ಹೇಳಿದ್ದು ಎಂದು, ಮನ್ಯೇ= ತಿಳಿದಿದ್ದೇನೆ.

**ಅನುವಾದ** - ಭಗವಂತನಿಂದ ನಡೆಯುವ ಪ್ರಪಂಚದ ಸೃಷ್ಟಿಗಳೆಲ್ಲವೂ ಕೇವಲ ಭಗವಂತನ ಸಂಕಲ್ಪ ಮಾತ್ರದಿಂದಲೇ ನಡೆಯುತ್ತವೆ ಎಂದು ತಿಳಿಸಲು ಶ್ರುತಿಯು ಇಚ್ಛಾಮಾತ್ರಂ ಎಂದಿದೆ. ಅಥವಾ ಶ್ರೀಹರಿಯ ದೆಸೆಯಿಂದ ಮತ್ಸ್ಯ-ಕೂರ್ಮಾದಿ ರೂಪದ ಯಾವ ಸೃಷ್ಟಿಯು ಆಗಿದೆಯೋ ಅದು ಹರೀಚ್ಛೆಯೇ ಆಗಿದೆ. ಹರಿಯ ಇಚ್ಛಾದಿ ಗುಣಗಳಿಗೂ ಮತ್ಸ್ಯಾದಿ ರೂಪಗಳ ಭೇದವಿಲ್ಲ. ಅದರಿಂದ ಇಚ್ಛೈವ ಇಚ್ಛಾಮಾತ್ರಂ ಎನ್ನಬೇಕು ಎಂಬ ಅಭಿಪ್ರಾಯದಿಂದ ಇಚ್ಛಾಮಾತ್ರಂ ಎಂದು ಶ್ರುತಿಯು ಹೇಳಿದೆ. ಪ್ರಪಂಚದ ಸೃಷ್ಟಿಯೂ ಮತ್ಸ್ಯಾದಿ ರೂಪಸೃಷ್ಟಿಯೂ ಹೀಗೆ

ಇಚ್ಛಾಮಾತ್ರವಾಗಬಹುದಾದ್ದರಿಂದ ಸಾಮಾನ್ಯವಾಗಿ ಇಚ್ಛಾಮಾತ್ರಂ ಎಂದು ಶ್ರುತಿಯು ಹೇಳಿದೆ ಎಂದು ನಾನು ತಿಳಿದಿದ್ದೇನೆ.

**ಭಾವವಿಲಾಸಿನೀ–** ಯಾ ಸೃಷ್ಟಿಃ ಜಗತ್‌ಸೃಷ್ಟಿಃ । ಮುಖ್ಯೈಕ್ಯಸ್ಯ ಸರ್ವಮತೇ ಬಾಧಿತತ್ವಾತ್ ಪ್ರಯೋಜನಾಂತರಾಯಾಪ್ಯೇವಂ ಪ್ರಯೋಗ ಇತ್ಯಾಹ – **ಪ್ರಭೋರಿತಿ** ॥ ತಾಂ ಸೃಷ್ಟಿಮ್ ॥೧೦೭-೧೦೮॥

ಇನ್ನೊಂದು ಪ್ರಯೋಜನವನ್ನೂ ಹೇಳುತ್ತಿದ್ದಾರೆ -

**ಇಚ್ಛಾಧೀನಂ ಯತಃ ಸರ್ವಮುಪಾದಾನಾದಿ ಕಾರಣಮ್ ।**
**ಅತಸ್ತಸ್ಯಾಃ ಪ್ರಧಾನತ್ವಾತ್ ಸೈವ ಸೃಷ್ಟಿರಿತೀರಿತಮ್ ॥ ೧೦೯ ॥**

**ಅರ್ಥ–** ಯತಃ= ಯಾವ ಕಾರಣದಿಂದ ಸರ್ವಂ ಉಪಾದಾನಾದಿಕಾರಣಂ= ಜಗತ್ತಿನ ಸೃಷ್ಟಿಗೆ ಬೇಕಾದ ಉಪಾದಾನಾದಿ ಎಲ್ಲ ಕಾರಣಗಳೂ ಇಚ್ಛಾಧೀನಂ= ಭಗವಂತನ ಇಚ್ಛೆಗೆ ಅಧೀನಗಳಾಗಿ ಇದ್ದಾವೆಯೋ ಅತಃ= ಆದ್ದರಿಂದ ತಸ್ಯಾಃ= ಭಗವಂತನ ಇಚ್ಛೆಯೇ ಪ್ರಧಾನತ್ವಾತ್= ಪ್ರಮುಖವಾದುದರಿಂದ ಸೈವ= ಇಚ್ಛೆಯೇ ಸೃಷ್ಟಿಃ ಇತಿ= ಸೃಷ್ಟಿ ಎಂದು ಈರೀತಂ= ಹೇಳಲ್ಪಟ್ಟಿತು.

**ಅನುವಾದ -** ಜಗತ್ತಿನ ಸೃಷ್ಟಿಗೆ ಬೇಕಾದ ಉಪಾದಾನ ನಿಮಿತ್ತ ಮುಂತಾದ ಕಾರಣಗಳೆಲ್ಲವೂ ಭಗವಂತನ ಇಚ್ಛಾಧೀನವಾಗಿಯೇ ನಡೆಯುವವುಗಳಾಗಿವೆ. ಆದ್ದರಿಂದ ಭಗವಂತನ ಇಚ್ಛೆಯೇ ಪ್ರಧಾನವೆಂದಾಯಿತು. ಬೇರೆ ಪ್ರಧಾನ ಕಾರಣವಿಲ್ಲ ಎಂದು 'ಮಾತ್ರ' ಶಬ್ದ ಹೇಳುತ್ತದೆ. ಹೊರತು ಉಪಾದಾನಾದಿ ಕಾರಣವೇ ಇಲ್ಲ ಎಂದಲ್ಲ. ಆದ್ದರಿಂದಲೇ ಶ್ರುತಿಯು ಪ್ರಭೋಃ ಸೃಷ್ಟಿಃ ಇಚ್ಛಾಮಾತ್ರಂ ಎಂದಿತು.

**ಭಾವವಿಲಾಸಿನೀ–** ಪ್ರಯೋಜನಾಂತರಂ ಚಾಹ – **ಇಚ್ಛಾಧೀನಮಿತಿ** ॥ ೧೦೯ ॥

ಶ್ರುತಿಪದಗಳ ಸಮುದಾಯದಿಂದ ಸಿದ್ಧವಾದ ಬೇರೆ ಬೇರೆ ಪ್ರಮೇಯಗಳನ್ನು ವಿಸ್ತಾರವಾಗಿ ಹೇಳುತ್ತಿದ್ದಾರೆ-

**ಸ್ವಾಜ್ಞಾನತೋ ಜಗತ್ ಸೃಷ್ಟಿಂ ತಸ್ಯಾಃ ಸ್ವಾನಿಷ್ಟರೂಪತಾಮ್ ।**
**ನ್ಯವಾರಯತ್ ಪ್ರಭುಪದಮಿಚ್ಛಾಮಾತ್ರಪದಂ ಚ ತತ್ ॥ ೧೧೦ ॥**

**ಅರ್ಥ–** ತತ್ ಪ್ರಭುಪದಂ= ಶ್ರುತಿಯಲ್ಲಿರುವ ಪ್ರಭುಪದವು ಇಚ್ಛಾಮಾತ್ರ ಪದಂ ಚ= ಇಚ್ಛಾಮಾತ್ರಂ ಎಂಬ ಪದವೂ ಕೂಡ, ಸ್ವಾಜ್ಞಾನತೋ= ಬ್ರಹ್ಮನ ಅಜ್ಞಾನದಿಂದ ಜಗತ್ಸೃಷ್ಟಿಂ= ಜಗತ್ಸೃಷ್ಟಿಯು ಎಂಬ ವಿಷಯವನ್ನು, ತಸ್ಯಾಃ= ಆ ಸೃಷ್ಟಿಗೆ ಸ್ವಾನಿಷ್ಟರೂಪತಾಂ= ಆಯಾಸಾದಿ ಅನಿಷ್ಟರೂಪವನ್ನು, ನ್ಯವಾರಯತ್= ತಡೆಯಿತು.

**ಅನುವಾದ** - ಬ್ರಹ್ಮನ ಅಜ್ಞಾನವೇ ಜಗತ್ತಿಗೆ ಉಪಾದಾನ ಕಾರಣವು ಎಂದು ಬ್ರಹ್ಮಾಜ್ಞಾನೋಪಾದಾನಕತ್ವವನ್ನು ಪರವಾದಿಗಳು ಜಗತ್ತಿಗೆ ಹೇಳುತ್ತಾರೆ. ಆದರೆ ಇದು ಅತ್ಯಂತ ಅಪ್ರಾಮಾಣಿಕ. ಜಗತ್ತಿಗೆ ಬ್ರಹ್ಮನ ಇಚ್ಛೆ ಕಾರಣ ಹೊರತು ಅಜ್ಞಾನವಲ್ಲ ಎಂದು ಇಚ್ಛಾಮಾತ್ರಂ ಎಂಬ ಶ್ರುತಿಯು ನಿರಾಕರಿಸುತ್ತಿದೆ. ಶ್ರುತಿಯು ಪ್ರಭು ಪದವನ್ನು ಹೇಳುವ ಮೂಲಕ ಅಜ್ಞಾನಾಯಾಸಾದಿಗಳು ಜಗತ್ಸೃಷ್ಟಿಕರ್ತನಾದ ಹರಿಗೆ ಇಲ್ಲ ಎಂದು ಅಜ್ಞಾನಾಯಾಸಗಳನ್ನು ತಡೆದಿದೆ. ಇಚ್ಛಾಮಾತ್ರಂ ಎಂಬ ಪದವು ಜಗತ್ಸೃಷ್ಟಿ ಮಾಡಲು ಹರಿಗೆ ಆಯಾಸಾದಿ ದೋಷಗಳಿಲ್ಲ ಎಂದೂ ತಿಳಿಸಿದೆ. ಆದ್ದರಿಂದ ಶ್ರೀಹರಿಯು ಜಗತ್ಸೃಷ್ಟಿಯನ್ನು ಸರ್ವಜ್ಞನಾಗಿ ಲೀಲೆಯಿಂದಲೇ ಮಾಡುತ್ತಾನೆಂದು ತಿಳಿಸಿದಂತಾಯಿತು.

**ವಿವರಣೆ** - ಇಚ್ಛಾಮಾತ್ರದಿಂದ ಜಗತ್ತನ್ನು ಸೃಷ್ಟಿಸುತ್ತಾನಾದ್ದರಿಂದ ಆಯಾಸಾದಿಗಳು ಇಲ್ಲವೆಂದು ಪ್ರಭುವಾದ್ದರಿಂದ ಅಜ್ಞಾನವೂ ಇಲ್ಲವೆಂದು ಸಿದ್ಧವಾಯಿತು. ಬ್ರಹ್ಮನಿಗೆ ಅಜ್ಞಾನವೇ ಇಲ್ಲವಾದ್ದರಿಂದ ಜಗತ್ತಿಗೆ ಅಜ್ಞಾನೋಪಾದಾನಕತ್ವವನ್ನು ಹೇಳಲಾಗದು ಎಂದು ಭಾವ.

ಸ್ವಾಜ್ಞಾನಂ ಚ ಪ್ರಭುತ್ವಂ ಚ ಯತೋ ನೈಕತ್ರ ಯುಜ್ಯತೇ ।
ಯತೋ ನೇಚ್ಛತಿ ಸರ್ವೋಽಪಿ ಸ್ವಾನಿಷ್ಟಂ ಕಿಮುತ ಪ್ರಭುಃ ।
ತಸ್ಮಾತ್ ಪ್ರಕೃತಿತಃ ಸೃಷ್ಟಿರ್ಜೀವಾನಾಂ ಸುಖದುಃಖದಾ ॥ ೧೧೧ ॥

**ಅರ್ಥ**– ಯತಃ= ಯಾವ ಕಾರಣದಿಂದ, ಸ್ವಾಜ್ಞಾನಂ ಚ= ತನ್ನ ಅಜ್ಞಾನವು, ಪ್ರಭುತ್ವಂ ಚ= ಮತ್ತು ಪ್ರಭುತ್ವವು, ಏಕತ್ರ= ಒಂದೇ ಕಡೆಯಲ್ಲಿ, ನ ಯುಜ್ಯತೇ= ಕೂಡುವುದಿಲ್ಲವೋ, ಮತ್ತು, ಯತಃ= ಯಾವ ಕಾರಣದಿಂದ, ಸರ್ವೋಽಪಿ= ಯಾವನೂ ಕೂಡ, ಸ್ವಾನಿಷ್ಟಂ= ತನ್ನ ಅನಿಷ್ಟವನ್ನು, ನೇಚ್ಛತಿ= ಬಯಸುವುದಿಲ್ಲವೋ ಆ ಕಾರಣದಿಂದ, ಪ್ರಭುಃ= ಸಮರ್ಥನಾದ ಹರಿಯು, ಕಿಮುತ= ಅಜ್ಞಾನವನ್ನಾಗಲೀ ಅಥವಾ ಅನಿಷ್ಟವನ್ನಾಗಲೀ ಬಯಸುವನೇನು? ತಸ್ಮಾತ್= ಆ ಕಾರಣದಿಂದ, ಪ್ರಕೃತಿತಃ= ಪ್ರಕೃತಿಯಿಂದ ಮಾಡಿದ, ಸೃಷ್ಟಿಃ= ಸೃಷ್ಟಿಯು, ಜೀವಾನಾಂ= ಜೀವರಿಗೆ, ಸುಖದುಃಖದಾ= ಸುಖದುಃಖಗಳನ್ನು ಕೊಡುವಂತಹದಾಗಿದೆ.

**ಅನುವಾದ** - ಯಾವ ಕಾರಣದಿಂದ, ಒಂದೇ ಕಡೆಯಲ್ಲಿ ತನ್ನ ಅಜ್ಞಾನವು ಮತ್ತೆ ತನ್ನ ಪ್ರಭುತ್ವವು ಕೂಡುವುದಿಲ್ಲವೋ ಮತ್ತು ಯಾವ ಕಾರಣದಿಂದ ಯಾವನೂ ಸಹ ತನ್ನ ಅನಿಷ್ಟವನ್ನು ಬಯಸುವುದಿಲ್ಲವೋ, ಆ ಕಾರಣದಿಂದ, ಪ್ರಭುವಾದ ಹರಿಯು ತನ್ನಲ್ಲಿ ಅಜ್ಞಾನವನ್ನು ಘಟನೆ ಮಾಡುತ್ತಾನೆಯೇ ಅಥವಾ ಅನಿಷ್ಟವನ್ನು ಬಯಸುತ್ತಾನೆಯೇ? ಅದು ಇಲ್ಲವೆಂದು ಕೈಮುತ್ಯ ನ್ಯಾಯದಿಂದ ಸಿದ್ಧವಾಗುತ್ತದೆ.

ಆದ್ದರಿಂದ ಜಡ ಪ್ರಕೃತಿಯನ್ನು ನಿಮಿತ್ತ ಮಾಡಿಕೊಂಡು ಹರಿಯು ಮಾಡಿದ ಸೃಷ್ಟಿಯು ಜೀವರಿಗೆ ಸುಖದುಃಖಗಳನ್ನು ಕೊಡುವಂತಹದಾಗಿದೆ.

**ಯತಶ್ಚ ಕಾ ಸ್ಪೃಹೇತ್ಯಂತೇ ಸ್ವಫಲಂ ಚ ನಿಷೇಧತಿ ।**
**ತತಃ ಸ್ವವಿಫಲಾಪ್ತ್ಯೈ ತಾಂ ಸೃಷ್ಟಿಂ ಕಃ ಕೋವಿದೋ ವದೇತ್ ॥ ೧೧೨ ॥**

**ಅರ್ಥ–** ಯತಶ್ಚ= ಮತ್ತು ಯಾವ ಕಾರಣದಿಂದ, ಅಂತೇ= ಕೊನೆಯಲ್ಲಿ, ಕಾಸ್ಪೃಹೇತಿ= ಯಾವ ಪ್ರಯೋಜನವಿದೆ ಎಂದು, ಸ್ವಫಲಂ ಚ= ಈಶ್ವರನಿಗೆ ಉಂಟಾಗುವ ಫಲವನ್ನು, ನಿಷೇಧತಿ= ನಿಷೇಧ ಮಾಡುತ್ತದೆಯೋ, ತತಃ= ಆ ಕಾರಣದಿಂದ, ಸ್ವವಿಫಲಾಪ್ತ್ಯೈ= ತನಗೆ ವಿರುದ್ಧವಾದ ಅನಿಷ್ಟಫಲ ಉಂಟಾಗುವುದಕ್ಕೋಸ್ಕರ, ಏತಾಂ ಸೃಷ್ಟಿಂ= ಇಂತಹ ಸೃಷ್ಟಿಯನ್ನು, ಕಃ ಕೋವಿದಃ= ಯಾವ ವಿದ್ವಾಂಸನು, ವದೇತ್= ಹೇಳುತ್ತಾನೆ?

**ಅನುವಾದ** - ಮತ್ತು ಯಾವ ಕಾರಣದಿಂದ ಶ್ರುತಿಯು ಕೊನೆಯಲ್ಲಿ 'ಕಾಸ್ಪೃಹಾ' ಎಂಬ ಶಬ್ದಗಳಿಂದ ಈಶ್ವರನಿಗೆ ಸ್ವಫಲವನ್ನು ನಿಷೇಧ ಮಾಡುತ್ತದೆಯೋ, ಆ ಕಾರಣದಿಂದ ತನಗೆ ಅನಿಷ್ಟರೂಪವಾದ ವಿರುದ್ಧ ಫಲವನ್ನು ಕೊಡುವ ಇಂತಹ ಸೃಷ್ಟಿಯನ್ನು ಯಾವ ವಿದ್ವಾಂಸನು ಹೇಳುತ್ತಾನೆ?

**ವಿವರಣೆ** - 'ಕಾ ಸ್ಪೃಹಾ' ಎಂದು ಯಾವ ಫಲವೂ ಇಲ್ಲವೆಂದು ಶ್ರುತಿಯು ಆಕ್ಷೇಪ ಸ್ವರೂಪವಾಗಿ ಹೇಳುತ್ತಿದೆ. ಆದ್ದರಿಂದ ಈಶ್ವರನಿಗೆ ಇಷ್ಟವಾದ ಫಲವಿಲ್ಲವೆಂದಾಯಿತು. ಇಷ್ಟವಾದ ಫಲವೇ ಇಲ್ಲದಿರುವಾಗ ತನಗೆ ಅನಿಷ್ಟವಾದ ಫಲವು ಉಂಟಾಗುವಂತೆ ಈಶ್ವರನು ಸೃಷ್ಟಿಯನ್ನು ಮಾಡುತ್ತಾನೆ ಎಂದು ಯಾವ ವಿದ್ವಾಂಸನು ಹೇಳುವುದಿಲ್ಲ ಎಂದು ಅಭಿಪ್ರಾಯ.

**ಆಪ್ತಕಾಮತ್ವಮಪಿ ಚ ಕಥಂ ಸಂಗಚ್ಛತೇ ತದಾ ।**
**ಅತಃ ಶ್ರುತಿಪದಾರ್ಥಜ್ಞೋ ನ ತದ್ ವ್ಯಾಖ್ಯಾತುಮರ್ಹತಿ ॥ ೧೧೩ ॥**

**ಅರ್ಥ–** ತದಾ= ಅಂತಹ ತನಗೆ ಅನಿಷ್ಟವಾದ ಸೃಷ್ಟಿಯನ್ನು ಅಂಗೀಕರಿಸಿದರೆ, ಆಪ್ತಕಾಮತ್ವಮಪಿ ಚ= ಆಪ್ತಕಾಮತ್ವವಾದರೂ ಕೂಡ, ಕಥಂ= ಹೇಗೆ, ಸಂಗಚ್ಛತೇ= ಉಪಪನ್ನವಾಗುತ್ತದೆ, ಅತಃ= ಆದ್ದರಿಂದ, ಶ್ರುತಿಪದಾರ್ಥಜ್ಞಃ= ಶ್ರುತಿಯ ಪದಗಳ ಅರ್ಥಗಳ ಜ್ಞಾನವುಳ್ಳವನು, ತದ್ ವ್ಯಾಖ್ಯಾತುಂ= ಅದನ್ನು ವ್ಯಾಖ್ಯಾನ ಮಾಡಲು (ಹಾಗೆ ವ್ಯಾಖ್ಯಾನ ಮಾಡಲು) ನ ಅರ್ಹತಿ= ಯುಕ್ತನಾಗುವುದಿಲ್ಲ.

**ಅನುವಾದ** - ಸೃಷ್ಟಿಯು ಈಶ್ವರನಿಗೆ ಸ್ವಾನಿಷ್ಟರೂಪವಾದರೆ ಅವನಿಗೆ ಆಪ್ತಕಾಮತ್ವವು ಹೇಗೆ ಕೂಡುತ್ತದೆ. ಆದ್ದರಿಂದ ಶ್ರುತಿಯ ಪದಗಳ ಅರ್ಥವನ್ನು ತಿಳಿದವನು ಹೀಗೆ ವ್ಯಾಖ್ಯಾನ ಮಾಡುವುದಿಲ್ಲ.

**ವಿವರಣೆ** - ಸೃಷ್ಟಿಯು ಈಶ್ವರನಿಗೆ ಅನಿಷ್ಟರೂಪವಾದರೆ ಅದು ಕಾಮ ಎಂದರೆ ಕಾಮ್ಯವೇ ಆಗುವುದಿಲ್ಲ. ಇನ್ನು ಆಪ್ತಕಾಮತ್ವವು ಎಲ್ಲಿಂದ ಬರಬೇಕು ಎಂದು ಅಭಿಪ್ರಾಯ.

**ಸತ್ಯಪೀತಾಂಬರಾಲಾಭೇ ಮಾಯಾಪೀತಾಂಬರಂ ಸೃಜೇತ್ ।**
**ಲಬ್ಧೇ ತು ಸತ್ಯವಸನೇ ಮಾಯಾಸೃಷ್ಟೌ ಯತೇತ ಕಃ ॥ ೧೧೪ ॥**

**ಅರ್ಥ**– ಸತ್ಯಪೀತಾಂಬರಾಲಾಭೇ= ಸತ್ಯವಾದ ಪೀತಾಂಬರವು ದೊರೆಯದಿದ್ದರೆ, ಮಾಯಾಪೀತಾಂಬರಂ= ಮಾಯಿಕವಾದ ಪೀತಾಂಬರವನ್ನು, ಸೃಜೇತ್= ಸೃಷ್ಟಿ ಮಾಡಬಹುದು, ಸತ್ಯವಸನೇ= ಸತ್ಯವಾದ ವಸ್ತ್ರವು, ಲಬ್ಧೇ ತು= ದೊರೆಯುತ್ತಿರಲು, ಮಾಯಾಸೃಷ್ಟೌ= ಮಾಯಾಸೃಷ್ಟಿಯಲ್ಲಿ, ಕಃ ಯತೇತ= ಯಾವನು ಪ್ರಯತ್ನ ಮಾಡುತ್ತಾನೆ?

**ಅನುವಾದ** - ಸತ್ಯಪೀತಾಂಬರವು ದೊರೆಯದಿದ್ದರೆ ಮಾಯಿಕ ಪೀತಾಂಬರವನ್ನು ಸೃಷ್ಟಿಸಬಹುದು. ಸತ್ಯವಾದ ಪೀತಾಂಬರವು ದೊರೆಯುತ್ತಿರುವಾಗ ಯಾವನು ಮಾಯಾಸೃಷ್ಟಿಯಲ್ಲಿ ಪ್ರಯತ್ನಪಡುತ್ತಾನೆ?

**ಮಾಯಾಸೃಷ್ಟಿಂ ನಿರಾಚಷ್ಟೇ ಪ್ರಭುತ್ವೋಕ್ತಿರತಃ ಪ್ರಭೋಃ ।**
**ಸ್ವಪ್ನಮಾಯಾಸರೂಪೇತಿ ತತೋಽಪಿ ಸ್ವಮತಂ ನ ತತ್ ॥ ೧೧೫ ॥**

**ಅರ್ಥ**– ಅತಃ= ಆ ಕಾರಣದಿಂದ, ಪ್ರಭುತ್ವೋಕ್ತಿಃ= (ಪ್ರಭು ಎಂಬ ವಚನವು), ಪ್ರಭೋಃ= ಪ್ರಭುವಾದ ಈಶ್ವರನಿಗೆ, ಮಾಯಾಸೃಷ್ಟಿಂ= ಮಾಯಾಸೃಷ್ಟಿಯನ್ನು, ನಿರಾಚಷ್ಟೇ= ನಿರಾಕರಿಸುತ್ತದೆ. ತತೋಽಪಿ= ಆ ಕಾರಣದಿಂದಲೂ, ಸ್ವಪ್ನಮಾಯಾಸರೂಪೇತಿ= ಸ್ವಪ್ನ ಸದೃಶ ಮತ್ತು ಮಾಯಾಸದೃಶ ಎಂಬ, ತತ್= ಆ ವಚನವು, ನ ಸ್ವಮತಂ= ಶ್ರುತಿಯ ಸ್ವಂತ ಅಭಿಪ್ರಾಯವಲ್ಲ.

**ಅನುವಾದ** - 'ಇಚ್ಛಾಮಾತ್ರಂ ಪ್ರಭೋ ಸೃಷ್ಟಿಃ' ಎಂಬಲ್ಲಿರುವ ಪ್ರಭು ಪದವು ಈಶ್ವರನಿಗೆ ಮಾಯಾಸೃಷ್ಟಿಯನ್ನು ನಿರಾಕರಿಸುತ್ತದೆ. ಆದ್ದರಿಂದಲೇ 'ಸ್ವಪ್ನಮಾಯಾ ಸರೂಪೇತಿ' ಎಂಬ ವಚನವು ಶ್ರುತಿಯ ಸ್ವಂತ ಅಭಿಪ್ರಾಯವಲ್ಲ.

**ವಿವರಣೆ** - 'ಇಚ್ಛಾಮಾತ್ರಂ ಪ್ರಭೋಃ ಸೃಷ್ಟಿಃ' ಎಂಬಲ್ಲಿರುವ ಪ್ರಭು ಪದವು ಈಶ್ವರನಿಗೆ ಮಹಾಸಾಮರ್ಥ್ಯವನ್ನು ಹೇಳುವುದರಿಂದ ಅವನು ಮಾಯಾಸೃಷ್ಟಿಯನ್ನು ಮಾಡಬೇಕಾದ ಪ್ರಸಂಗವೇ ಇಲ್ಲ. ಇಚ್ಛಾಮಾತ್ರಂ ಎಂಬಲ್ಲಿರುವ ಮಾತ್ರ ಪದವು ಕೇವಲ ಅವನ ಇಚ್ಛೆಯಿಂದಲೇ ಸೃಷ್ಟಿಯಾಗುತ್ತದೆ. ಆದ್ದರಿಂದ ಈಶ್ವರನಿಗೆ ಸೃಷ್ಟಿಯಿಂದ ಆಯಾಸವಿಲ್ಲ ಎಂದು ಸೂಚಿಸುತ್ತದೆ. ಹಾಗೆಯೇ, ಇಚ್ಛೆಯಿಂದಲೇ ಸೃಷ್ಟಿ ಹೊರತು,

ಅಜ್ಞಾನದಿಂದ ಸೃಷ್ಟಿಯಲ್ಲ ಎಂಬ ವಿಷಯವನ್ನು ಸೂಚಿಸುತ್ತದೆ. ಪ್ರಭು ಪದವೂ ಸಹ ಈಶ್ವರನಿಗೆ ಅಜ್ಞಾನ, ಆಯಾಸ ಮೊದಲಾದ ದೋಷಗಳಿಲ್ಲವೆಂದು ಸೂಚಿಸುತ್ತದೆ ಎಂದು ಅಭಿಪ್ರಾಯ.

ಯತಶ್ಚ ಸೂತ್ರೇ ವೈಧರ್ಮ್ಯಾಚ್ಚ ನ ಸ್ವಪ್ನಾದಿವತ್ತ್ವಿತಿ ।
ಸ್ವಪ್ನವೈಧರ್ಮ್ಯಮುದಿತಂ ತಸ್ಮಾದಪಿ ನ ತನ್ಮತಮ್ ॥ ೧೧೬ ॥

ಯತಶ್ಚ ಪದಶಕ್ತ್ಯಾ ತನ್ಮತಂ ಶ್ರುತಿರಗರ್ಹಯತ್ ।
ತತೋಽಪ್ಯನ್ಯಮತಂ ಮನ್ಯೇ ನಾನ್ಯತ್ವೋಕ್ತ್ಯೈವ ಕೇವಲಮ್ ॥ ೧೧೭ ॥

**ಅರ್ಥ–** ಯತಶ್ಚ= ಯಾವ ಕಾರಣದಿಂದ, ವೈಧರ್ಮ್ಯಾಚ್ಚ ನ ಸ್ವಪ್ನಾದಿವತ್ ಇತಿ= ವೈಧರ್ಮ್ಯಾಚ್ಚ ನ ಸ್ವಪ್ನಾದಿವತ್ ಎಂಬ, ಸೂತ್ರೇತು= ಸೂತ್ರದಲ್ಲಿಯಾದರೂ, ಸ್ವಪ್ನವೈಧರ್ಮ್ಯಂ= ಜಗತ್ತಿಗೆ ಸ್ವಪ್ನ ವೈಧರ್ಮ್ಯವು, ಉದಿತಂ= ಹೇಳಲ್ಪಟ್ಟಿದೆ, ತಸ್ಮಾದಪಿ= ಆ ಕಾರಣದಿಂದಲೂ, ತತ್= ಮಿಥ್ಯಾತ್ವವು, ನ ಮತಂ= ಶ್ರುತಿ ಸಮ್ಮತವಲ್ಲ.

ಯತಶ್ಚ= ಯಾವ ಕಾರಣದಿಂದ, ತನ್ಮತಂ= ಮಿಥ್ಯಾತ್ವಮತವನ್ನು, ಶ್ರುತಿಃ= ವೇದವು, ಪದಶಕ್ತ್ಯಾ= ಪದಗಳಲ್ಲಿ ಸ್ವರಸವಾಗಿ ಕಾಣುವ ಸತ್ಯತ್ವ ಪ್ರತಿಪಾದನ ಶಕ್ತಿಯಿಂದಲೂ, ಅಗರ್ಹಯತ್= ನಿಂದಿಸಿತೋ, ತತೋಽಪಿ= ಆ ಕಾರಣದಿಂದಲೂ, ಅನ್ಯಮತಂ= ಶ್ರುತಿಗೆ ಅಸಮ್ಮತವಾದ ಮತವೆಂದು, ಮನ್ಯೇ= ತಿಳಿದಿದ್ದೇನೆ. ಕೇವಲಂ= ಕೇವಲ ಅನ್ಯತ್ವೋಕ್ತ್ಯೈವ= ಅನ್ಯ ಎಂದು ಶ್ರುತಿ ಹೇಳಿದ್ದರಿಂದಲೇ, ನ= ಅಲ್ಲ.

**ಅನುವಾದ** - ವೈಧರ್ಮ್ಯಾಚ್ಚ ನ ಸ್ವಪ್ನಾದಿವತ್ ಎಂಬ ಸೂತ್ರದಲ್ಲಿ ಜಗತ್ತಿಗೆ ಬಾಧವಿಲ್ಲದಿರುವುದರಿಂದ ಸ್ವಪ್ನಮಾಯಿಕ ಶುಕ್ತಿರಜತಾದಿ ಪದಾರ್ಥಗಳ ವೈಧರ್ಮ್ಯವನ್ನು ಸೂತ್ರಕಾರರು ಹೇಳಿದ್ದಾರೆ. ಆದ್ದರಿಂದಲೂ ಜಗತ್ತು ಸ್ವಪ್ನದಂತೆ ಮಿಥ್ಯಾ ಎಂದು ಹೇಳಲಾಗದು. ಇಷ್ಟೇ ಅಲ್ಲದೆ ವೇದವು ಪದಶಕ್ತಿಯಿಂದಲೂ ಮಿಥ್ಯಾತ್ವವಾದವನ್ನು ನಿರಾಕರಿಸಿದೆ. ಆದ್ದರಿಂದಲೂ ಮಿಥ್ಯಾತ್ವವಾದವು ಶ್ರುತಿಗೆ ಅಸಮ್ಮತವಾದ ವಾದವೆಂದು ತಿಳಿಯುತ್ತೇನೆ. ಕೇವಲ ಅನ್ಯೈರ್ವಿಕಲ್ಪಿತಾ ಎಂಬಲ್ಲಿನ ಅನ್ಯ ಶಬ್ದದಿಂದ ಮಾತ್ರವಲ್ಲದೆ ಪ್ರಭೋಃ ಇಚ್ಛಾಮಾತ್ರಂ ಸ್ವಭಾವೋಽಯಂ ಆಪ್ತಕಾಮಸ್ಯ ಸ್ವಪ್ನಮಾಯಾ ಮುಂತಾದ ಪದಶಕ್ತಿಯಿಂದಲೂ ಅನ್ಯಮತಗಳನ್ನು ಶ್ರುತಿಯು ನಿರಾಕರಿಸಿದೆ ಎಂದು ಅಭಿಪ್ರಾಯ.

**ಭಾವವಿಲಾಸಿನೀ–** ಶ್ರೌತಪದಾವಲ್ಯಾ ಸಿದ್ಧಪ್ರಮೇಯಾಂತರಾಣಿ ಚ ವಿಸ್ತರೇಣಾಹ – ಸ್ವಾಜ್ಞಾನತ ಇತ್ಯಾದಿನಾ ॥ ತಸ್ಮಾತ್ ಸೃಷ್ಟೇಃ । ಇಚ್ಛಾಮಾತ್ರೇಣ ಸೃಷ್ಟಿರ್ನತ್ವಜ್ಞಾನಾದಿತ್ಯರ್ಥಸ್ಯೇಚ್ಛಾಮಾತ್ರೇಣ

ಸೃಷ್ಟತ್ವಾದಾಯಾಸಾಭಾವಸ್ಯ ಚ ಸಿದ್ಧೇಃ ಪ್ರಭೋಶ್ಚಾಜ್ಞಾನಾಯಾಸಾಸಂಭವಾದಿತಿ ಭಾವಃ । ತಸ್ಮಾದಜ್ಞಾನಾದ್ಯಸಂಭವಾತ್ ॥ ೧೧೦-೧೧೫ ॥

ಪ್ರಾಗರ್ಥತೋ ಗೃಹೀತಂ ಸೂತ್ರಂ ಸ್ಪಷ್ಟಂ ಚ ದರ್ಶಯತಿ ॥ ಯತಶ್ಚೇತಿ ॥ ಸ್ವಪ್ನವೈಧರ್ಮ್ಯಂ ಸ್ವಪ್ನಾದಿವೈಧರ್ಮ್ಯಮ್ । ಆದಿಪದೇನ ಮಾಯಾಶುಕ್ತಿರೂಪ್ಯಾದಿಕಂ ಗೃಹ್ಯತೇ ॥೧೧೬-೧೧೭॥

**ವಿವರಣೆ** - ವೈಧರ್ಮಾಚ್ಚನಸ್ವಪ್ನಾದಿವತ್ ಸೂತ್ರಾರ್ಥ ವೈಧರ್ಮ್ಯಾತ್= ಅಬಾಧ್ಯತ್ವ ರೂಪವಾದ ವೈಲಕ್ಷಣವಿರುವುದರಿಂದ, ಸ್ವಪ್ನಾದಿವತ್= ಸ್ವಾಪ್ನ ಮಾಯಿಕ ಮತ್ತು ಶುಕ್ತಿ ರಜತಾದಿ ಪದಾರ್ಥಗಳಂತೆ ಈ ಜಗತ್ತು ಅಸತ್ ಅಲ್ಲ.

> ಯತಃ ಸ್ವಭಾವತ್ವೈವೋಕ್ತಾ ಕರ್ತೃತ್ವಾದೇಃ ಪರಾತ್ಮನಿ ।
> ಸ್ವಭಾವಸ್ಯಾನಪಾಯಾದಿಯುಕ್ತ್ಯಾ ತನ್ನಿತ್ಯತೋದಿತಾ ।
> ಅಜ್ಞಾನೋಪಾಧಿಕತ್ವಂ ಚ ತದ್ಧರ್ಮಾಣಾಂ ನಿವಾರಿತಮ್ ॥ ೧೧೮ ॥

**ಅರ್ಥ**– ಯತಃ= ಯಾವ ಕಾರಣದಿಂದ (ಶ್ರುತಿಯಲ್ಲಿ), ಕರ್ತೃತ್ವಾದೇಃ= ಜಗತ್ಕರ್ತತ್ವಾದಿಗಳಿಗೆ, ಪರಾತ್ಮನಿ= ಶ್ರೀಹರಿಯಲ್ಲಿ, ಸ್ವಭಾವತ್ವೈವ= ಸ್ವಾಭಾವಿಕತ್ವವೇ, ಉಕ್ತಾ= ಹೇಳಲ್ಪಟ್ಟಿದೆ. ಸ್ವಭಾವಸ್ಯಾನಪಾಯಾದಿಯುಕ್ತ್ಯಾ= ಸ್ವಭಾವಸ್ಯ ಅನಪಾಯಾತ್ ಎಂಬ ಯುಕ್ತಿಯಿಂದ ಮತ್ತು ಅನೌಪಾಧಿಕತ್ವ ಯುಕ್ತಿಯಿಂದ, ತನ್ನಿತ್ಯತಾ= ಕರ್ತೃತ್ವಾದಿ ಧರ್ಮಗಳಿಗೆ ನಿತ್ಯತ್ವವು (ಶ್ರುತಿಯಲ್ಲಿ), ಉದಿತಾ= ಹೇಳಲ್ಪಟ್ಟಿದೆ. ತದ್ಧರ್ಮಾಣಾಂ= ಭಗವದ್ಧರ್ಮಗಳಿಗೆ, ಅಜ್ಞಾನೋಪಾಧಿಕತ್ವಂ ಚ = ಅಜ್ಞಾನೋಪಾಧಿಕತ್ವವು, ನಿವಾರಿತಂ= ನಿರಾಕರಿಸಿದಂತಾಯಿತು.

**ಅನುವಾದ** - ಶ್ರುತಿಯು ಶ್ರೀಹರಿಯಲ್ಲಿರುವ ಗುಣಧರ್ಮಗಳು ಸ್ವಾಭಾವಿಕವೆಂದಿದೆ. ಎಂದಿಗೂ ಸ್ವಭಾವವು ಬಿಟ್ಟು ಹೋಗದು. ಸ್ವಭಾವಸ್ಯ ಅನಪಾಯಾತ್ ಎಂದು ನಿಯಮವಿದೆ. ಆದ್ದರಿಂದ ಹರಿಯಲ್ಲಿರುವ ಕರ್ತೃತ್ವಾದಿ ಗುಣಗಳು ಸ್ವಾಭಾವಿಕವಾದ್ದರಿಂದ ನಿತ್ಯ ಎಂದು ಸಿದ್ಧವಾಯಿತು ಮತ್ತು ಅದ್ವೈತಿಗಳು ಬ್ರಹ್ಮನಿಗೆ ಅಜ್ಞಾನೋಪಾಧಿಯನ್ನು ಕಲ್ಪಿಸಿ ಆ ಬ್ರಹ್ಮನ ಅಜ್ಞಾನದಿಂದ ಈ ಜಗತ್ತಿಗೆ ಸೃಷ್ಟಿ ಆಗಿದೆ ಎಂದು ಏನು ಹೇಳುತ್ತಾರೆಯೋ ಆ ಮತವನ್ನು ನಿರಾಕರಿಸಿ ಸ್ವಾಭಾವಿಕ ಎಂದು ಶ್ರುತಿಯು ಸ್ವಭಾವೋಯಂ ಎಂಬ ಪದದಿಂದ ಹೇಳುವಾಗ ಸ್ವಾಭಾವಿಕವಾದುದಕ್ಕೆ ಔಪಾಧಿಕತ್ವವು ಕೊಡುವುದಿಲ್ಲವಾದ್ದರಿಂದ ಅನೌಪಾಧಿಕವೆಂದ ಮೇಲೆ ನಿತ್ಯವೆಂದೂ ಸಿದ್ಧವಾಯಿತು.

**ಭಾವವಿಲಾಸಿನೀ**– ತನ್ನಿತ್ಯತಾ ಕರ್ತೃತ್ವಾದಿ ನಿತ್ಯತಾ । ತದ್ಧರ್ಮಾಣಾಂ ಭಗವದ್ಧರ್ಮಾಣಾಂ ಸ್ವಭಾವಸ್ಯೌಪಾಧಿಕತ್ವಾಯೋಗಾದಿತಿ ಭಾವಃ ॥ ೧೧೮ ॥

ತೇನ ಲಕ್ಷಣತಾಟಸ್ಥ್ಯಂ ನಾನುಮೇನೇ ಪರಾತ್ಮನಿ ।
ದೇವಸಂಬಂಧಿತೋಕ್ತ್ಯಾ ಚ ನಾನ್ವಮಂಸ್ತ ತದನ್ಯಗಮ್ ॥ ೧೧೯ ॥

**ಅರ್ಥ–** ತೇನ= ಸ್ವಭಾವೋಽಯಂ ಎಂಬ ಮಾತಿನಿಂದಲೇ, ಪರಾತ್ಮನಿ= ಪರಬ್ರಹ್ಮನಲ್ಲಿ ಲಕ್ಷಣತಾಟಸ್ಥ್ಯಂ= ತಟಸ್ಥ ಲಕ್ಷಣವನ್ನು (ಶ್ರುತಿಯು), ನಾನುಮೇನೇ= ಒಪ್ಪಿಕೊಂಡಿಲ್ಲ ದೇವಸಂಬಂಧಿತೋಕ್ತ್ಯಾ= ದೇವಸ್ಯೈಷ ಎಂಬ ಭಗವತ್ಸಂಬಂಧಿತ್ವವನ್ನು ಹೇಳಿದ್ದರಿಂದಲೂ ತತ್= ಜಗತ್ಸೃಷ್ಟಿಕರ್ತೃತ್ವವು, ಅನ್ಯಗಂ= ಮಾಯೆಯಲ್ಲಿದೆ ಎಂಬುದನ್ನು (ಶ್ರುತಿಯು), ನ ಅನ್ವಮಂಸ್ತ= ಅಂಗೀಕರಿಸಲಿಲ್ಲ.

**ಅನುವಾದ -** ಶ್ರುತಿಯು ದೇವರ ಗುಣಗಳು ಸ್ವಾಭಾವಿಕ ಎಂದು ಹೇಳಿದ್ದರಿಂದ, ದೇವನು ನಿರ್ಧರ್ಮಕ ಅವನ ಗುಣಗಳು ತಟಸ್ಥ ಅವನಲ್ಲಿಲ್ಲ ಮಾಯೆಯಲ್ಲಿದೆ ಎಂಬ ವಾದವನ್ನು ಶ್ರುತಿಯು ನಿರಾಕರಿಸಿದಂತಾಯಿತು. ಇನ್ನು ದೇವಸ್ಯ ಎಂದು ಷಷ್ಠೀ ವಿಭಕ್ತಿಯು ಸಂಬಂಧವನ್ನು ಹೇಳುವುದರಿಂದ ದೇವನಲ್ಲಿಲ್ಲದೆ ಮಾಯೆಯಲ್ಲಿದೆ ಎಂಬ ಮತವನ್ನೂ ನಿರಾಕರಿಸಿತು.

**ಭಾವವಿಲಾಸಿನೀ –** ದೇವಸಂಬಂಧಿತೋಕ್ತ್ಯಾ ''ದೇವಸ್ಯೈಷ'' ಇತಿ ಭಗವತ್ ಸಂಬಂಧಿ ತೋಕ್ತ್ಯಾ । ತತ್ ಜಗತ್‌ಸೃಷ್ಟಿಕರ್ತೃತ್ವಮ್ ॥ ೧೧೯ ॥

**ವಿವರಣ -** ಪ್ರಕೃಷ್ಟಪ್ರಕಾಶಶ್ಚಂದ್ರ ಎಂಬುದು ಸ್ವರೂಪ ಲಕ್ಷಣಕ್ಕೆ ಉದಾಹರಣೆ. ವೃಕ್ಷಸ್ಯ ಶಾಖಾಗ್ರಂ ಎಂಬುದು ತಟಸ್ಥಲಕ್ಷಣಕ್ಕೆ ಉದಾಹರಣೆ. ಇಲ್ಲಿ ವೃಕ್ಷದ ಶಾಖಾಗ್ರವು ತಟಸ್ಥ-ಇದು ಚಂದ್ರನ ಲಕ್ಷಣ ಎನ್ನುವುದು ತಟಸ್ಥಲಕ್ಷಣ. ಅದ್ವೈತಿಗಳು ಬ್ರಹ್ಮನು ನಿರ್ಧರ್ಮನೆಂದು ಅವನಲ್ಲಿ ತಟಸ್ಥಲಕ್ಷಣವನ್ನು ಹೇಳುತ್ತಾರೆ. ಶ್ರುತಿಯಲ್ಲಿ ಹರಿಯ ಗುಣಗಳು ಸ್ವಭಾವ ಭೂತವಾದವು ಸ್ವಭಾವೋಽಯಂ ಎಂದು ಹೇಳಿದ್ದರಿಂದ ದೇವಸ್ಯ ಎಂದು ಸಂಬಂಧವನ್ನು ಹೇಳಿದ್ದರಿಂದ ತಟಸ್ಥಲಕ್ಷಣವನ್ನು ಹೇಳಲಾಗದೆಂದು ರಾಜರು ತಿಳಿಸಿದ್ದಾರೆ.

ಯಚ್ಚ ಸೃಷ್ಟ್ಯಾದಿಕರಣಕ್ರಿಯೈವೋಕ್ತಾ ಸ್ವಭಾವತಃ ।
ತತ್ ಕ್ರಿಯಾನಿತ್ಯತಾ ಚೋಕ್ತಾ ಶಕ್ತಿವ್ಯಕ್ತ್ಯಾತ್ಮತಾ ಹರೌ ॥ ೧೨೦ ॥

ಯತಃ ಕ್ರಿಯಾನಿತ್ಯತೋಕ್ತ್ಯಾ ಕಾರ್ಯಸ್ಯಾಪಿ ಪ್ರವಾಹತಃ ।
ನಿತ್ಯತ್ವಮುದಿತಂ ಸರ್ವಲಯಂ ತೇನ ನ್ಯವಾರಯತ್ ॥ ೧೨೧ ॥

ಭಾವಿಬಾಧಕಶಂಕಾಂ ಚ ತತ ಏವ ನಿರಾಕರೋತ್ ।
ಪಾರಮಾರ್ಥಿಕಸತ್ಯತ್ವಂ ಜಗತಸ್ತೇನ ಸಾ ಜಗೌ ॥ ೧೨೨ ॥

**ಅರ್ಥ–** ಚ= ಮತ್ತು ಯತ್= ಯಾವ ಕಾರಣದಿಂದ ಸ್ವಭಾವತಃ= ಸ್ವಭಾವ ಎಂಬ ಶಬ್ದದಿಂದ ಸೃಷ್ಟ್ಯಾದಿ ಕರಣಕ್ರಿಯೈವ= ಸೃಷ್ಟ್ಯಾದಿಗಳನ್ನು ಮಾಡುವ ಕ್ರಿಯೆಯೇ ಉಕ್ತಾ= (ಶ್ರುತಿಯಲ್ಲಿ) ಹೇಳಲ್ಪಟ್ಟಿದೆಯೋ ತತ್= ಆ ಕಾರಣದಿಂದ ಹರೌ= ಶ್ರೀಹರಿಯಲ್ಲಿ ಕ್ರಿಯಾನಿತ್ಯತಾ= ಕ್ರಿಯಾನಿತ್ಯತ್ವವು ಶಕ್ತಿವ್ಯಕ್ತ್ಯಾತ್ಮತಾ= ಶಕ್ತಿವ್ಯಕ್ತಿ ಎಂಬ ಗುಣಸ್ವಭಾವವೂ ಉಕ್ತಾ= ಹೇಳಲ್ಪಟ್ಟಿತು. ಯತಃ= ಯಾವ ಕಾರಣದಿಂದ (ಶ್ರುತಿಯಲ್ಲಿ) ಕ್ರಿಯಾನಿತ್ಯತೋಕ್ತ್ಯಾ= ಹರಿಯ ಕ್ರಿಯಾನಿತ್ಯತ್ವವನ್ನು ಹೇಳಿದ್ದರಿಂದ ಕಾರ್ಯಸ್ಯಾಪಿ= ಕಾರ್ಯವಾದ ಪ್ರಪಂಚಕ್ಕೂ ಪ್ರವಾಹತಃ= ಪ್ರವಾಹತಃ ನಿತ್ಯತ್ವಂ= ನಿತ್ಯತ್ವವು ಉದಿತಂ= ಹೇಳಲ್ಪಟ್ಟಿತು. ತೇನ= ಹೀಗೆ ಹೇಳಿದ್ದರಿಂದ ಸರ್ವಲಯಂ= ಜಗತ್ತಿನ ಆತ್ಯಂತಿಕ ಲಯವನ್ನು ನ್ಯವಾರಯತ್= (ಶ್ರುತಿಯು) ತಡೆಯಿತು.

ತತ ಏವ= ಪ್ರವಾಹತಃ ನಿತ್ಯವಾದ ಕಾರಣದಿಂದಲೇ ಭಾವಿಬಾಧಕಶಂಕಾಂ= ಬ್ರಹ್ಮಜ್ಞಾನದಿಂದ ಜಗತ್ತು ಬಾಧ್ಯವಾಗುತ್ತದೆ ಎಂಬ ಶಂಕೆಯನ್ನು ನಿರಾಕರೋತ್= ನಿರಾಕರಿಸಿತು. ತೇನ= ಕ್ರಿಯಾನಿತ್ಯ ಎಂಬ ಮಾತಿನಿಂದಲೇ ಸಾ= ಆ ಶ್ರುತಿಯು ಜಗತಃ= ಜಗತ್ತಿಗೆ ಪಾರಮಾರ್ಥಿಕ ಸತ್ಯತ್ವಂ= ಪಾರಮಾರ್ಥಿಕ ಸತ್ಯತ್ವವನ್ನು ಜಗೌ= ಹೇಳಿತು.

**ಅನುವಾದ** - ಶ್ರುತಿಯಲ್ಲಿ ಸ್ವಭಾವ ಎಂಬ ಶಬ್ದದಿಂದ ಭಗವಂತನ ಸೃಷ್ಟ್ಯಾದಿಗಳನ್ನು ಮಾಡುವ ಕ್ರಿಯೆಯನ್ನು ಹೇಳಲಾಗಿದೆ. ಸೃಷ್ಟ್ಯಾದಿಕರಣಕ್ರಿಯೆಯು ಸ್ವಾಭಾವಿಕ ಎಂದರ್ಥ. ಜಗತ್ಸೃಷ್ಟಿಕ್ರಿಯೆಗೆ ನಿತ್ಯತ್ವವನ್ನು ಶ್ರುತಿ ಹೇಳಿದಂತಾಯಿತು. ನಿತ್ಯ ಎಂದರೆ ಶಕ್ತ್ಯಾತ್ಮನಾ ನಿತ್ಯ ಎಂದೂ ಹೇಳಿದಂತಾಯಿತು. ಜಗತ್ಸರ್ಜನಶಕ್ತನಾದ ಹರಿಯ ಜಗತ್ಸರ್ಜನ ಶಕ್ತಿಯು ಶಕ್ತ್ಯಾತ್ಮನಾ ಇದೆ. ಕಾಲಿಕವಾಗಿ ಅಭಿವ್ಯಕ್ತವಾಗುತ್ತದೆ ಎಂದರೆ ಮಾತ್ರ ಶಕ್ತಿಗೆ ನಿತ್ಯತ್ವ ಕೂಡುತ್ತದೆ ಎಂಬ ಅಭಿಪ್ರಾಯವನ್ನೂ ಸ್ವಭಾವ ಎಂಬ ಶಬ್ದದಿಂದಲೇ ತಿಳಿಸಿದಂತಾಯಿತು. ಶ್ರೀಹರಿಯ ಕ್ರಿಯೆಯು ನಿತ್ಯ. ಕಾಲಕಾಲಕ್ಕೆ ಸರಿಯಾಗಿ ವ್ಯಕ್ತವಾಗುವಂಥದ್ದೆಂದಾದ ಬಳಿಕ ಕಾರ್ಯವಾದ ಪ್ರಪಂಚವೂ ಕಾಲಕಾಲಕ್ಕೆ ಹುಟ್ಟುತ್ತಲೇ ಇರುವುದರಿಂದ ಪ್ರವಾಹತಃ ನಿತ್ಯವಾಗಿದೆ ಎಂದು ತಿಳಿಸಿದಂತಾಯಿತು. ಇದರಿಂದ ಮಾಯಾವಾದಿಗಳು ಬ್ರಹ್ಮಜ್ಞಾನದಿಂದ ಜಗತ್ತು ಬಾಧ್ಯವಾಗುತ್ತದೆ ಎಂದು ಏನು ಹೇಳುತ್ತಾರೆಯೋ ಅಂತಹ ಜಗತ್ತಿನ ಸಾರ್ವಕಾಲಿಕ ಲಯವನ್ನು ಶ್ರುತಿಯು ಸ್ವಭಾವ ಎಂಬ ಶಬ್ದದಿಂದಲೇ ನಿರಾಕರಿಸಿದಂತಾಯಿತು. ಜಗತ್ಪ್ರವಾಹವು ಸತ್ಯವಾದುದರಿಂದ ಬ್ರಹ್ಮಜ್ಞಾನದಿಂದ ಜಗತ್ತು ಮುಂದೆ ಬಾಧ್ಯವಾಗುತ್ತದೆ ಎಂಬ ಭಾವಿಬಾಧಕ ಶಂಕೆಯನ್ನು ನಿರಾಕರಿಸಿದಂತಾಯಿತು. ಬ್ರಹ್ಮಜ್ಞಾನದಿಂದ ಜಗತ್ತು ಬಾಧ್ಯವಲ್ಲವೆಂದು ನಿರ್ಣಯವಾದ ಮೇಲೆ ಜಗತ್ತಿಗೆ ಪಾರಮಾರ್ಥಿಕ ಸತ್ಯತ್ವವನ್ನೂ ಶ್ರುತಿಯೇ ಹೇಳಿದಂತಾಯಿತು.

**ಭಾವವಿಲಾಸಿನೀ** – ಯತ್ ಯಸ್ಮಾತ್ । ತತ್ ತಸ್ಮಾತ್ ಕ್ರಿಯಾಯಾಶ್ಚ ಸ್ವಭಾವತ್ವೇನೋಕ್ತತ್ವಾತ್ । ಶಕ್ತಿವ್ಯಕ್ತ್ಯಾತ್ಮತಾ ಚ ಉಕ್ತಾ ಅರ್ಥಾದುಕ್ತಪ್ರಾಯಾ ಜಗತ್ಸೃಷ್ಟ್ಯಾದಿಕ್ರಿಯಾಯಾಃ ಸರ್ವದಾ ವ್ಯಕ್ತಭಾವೇನ ಶಕ್ತ್ಯಾತ್ಮನಾ ಸತ್ತ್ವ ಏವ ತನ್ನಿತ್ಯತ್ವಸ್ಯ ನಿರ್ವಾಹ್ಯತ್ವಾದಿತಿ ಭಾವಃ ॥ ೧೨೦-೧೨೨ ॥

**ವಿವರಣೆ** - ಶಕ್ತಿವ್ಯಕ್ತ್ಯಾತ್ಮತ್ವವು ಅರ್ಥಾತ್ ಶ್ರುತಿಯಿಂದ ಹೇಳಲ್ಪಟ್ಟಂತಾಯಿತು ಎಂದು ತಿಳಿಯಬೇಕು. ಜಗತ್ತಿನ ಸೃಷ್ಟ್ಯಾದಿ ಕ್ರಿಯೆಗೆ ಯಾವಾಗಲೂ ವ್ಯಕ್ತಭಾವವು ಇಲ್ಲವಾದ್ದರಿಂದ ಶಕ್ತ್ಯಾತ್ಮನಾ ಸತ್ವವೇ ಜಗನ್ನಿತ್ಯತ್ವವನ್ನು ನಿರ್ವಹಿಸುತ್ತದೆ ಎಂದು ಭಾವ.

**ತಸ್ಮಾತ್ ಸೃಷ್ಟೇಃ ಸ್ವಭಾವತ್ವಕೀರ್ತನಾತ್ ಸೃಜ್ಯವಸ್ತುನಃ ।**
**ಸ್ವಭಾವತ್ವೈವ ಪ್ರಾಪ್ತೇತಿ ತದಭಾವೋ ನ ಕರ್ಹಿಚಿತ್ ॥ ೧೨೩ ॥**

**ಅರ್ಥ**– ತಸ್ಮಾತ್= ಆದ್ದರಿಂದ, ಸೃಷ್ಟೇಃ ಸ್ವಭಾವತ್ವಕೀರ್ತನಾತ್= ಸೃಷ್ಟಿಯನ್ನು ಭಗವಂತನ ಸ್ವಭಾವ ಎಂದಿರುವುದರಿಂದ, ಸೃಜ್ಯವಸ್ತುನಃ= ಸೃಜ್ಯ ವಸ್ತುವಿಗೆ, ಸ್ವಭಾವತ್ವೈವ= ಸ್ವಭಾವತ್ವವೇ, ಪ್ರಾಪ್ತಾ ಇತಿ= ಸಿದ್ಧವಾದ್ದರಿಂದ, ತದಭಾವೋ= ಅದರ ಅಭಾವವು, ನ ಕರ್ಹಿಚಿತ್= ಎಂದೂ ಇಲ್ಲ.

**ಅನುವಾದ** - ಸೃಷ್ಟಿ ಕ್ರಿಯೆಯನ್ನು ಭಗವಂತನ ಸ್ವಭಾವವೆಂದಿರುವುದರಿಂದ ಸೃಜ್ಯ ವಸ್ತುವು ಸ್ವಾಭಾವಿಕವೇ ಹೊರತು ಕಲ್ಪಿತವಲ್ಲವೆಂದು ಸಿದ್ಧವಾಯಿತು. ಹೀಗಾಗಿ ಬ್ರಹ್ಮಜ್ಞಾನ ಬಂದೊಡನೆ ಜಗತ್ತು ಬಾಧಿತವಾಗಿ ಪೂರ್ತಿ ಲಯಹೊಂದುವುದು ಯಾವ ಕಾಲದಲ್ಲಿಯೂ ಇಲ್ಲ.

**ಭಾವವಿಲಾಸಿನೀ**– ತದಭಾವಃ ಜಗತಃಸರ್ವಥಾಽಭಾವಃ ॥ ೧೨೩ ॥

**ವಿವರಣೆ** - ಸೃಷ್ಟಿಕ್ರಿಯೆ ಭಗವಂತನ ಸ್ವಭಾವವೆಂದ ಮೇಲೆ ಅಜ್ಞಾನದಿಂದ ಜಗತ್ತು ಅವನಲ್ಲಿ ಆರೋಪಿತವಲ್ಲವೆಂದಂತಾಯಿತು. ಆರೋಪಿತವಲ್ಲದ್ದು ತತ್ವಜ್ಞಾನದಿಂದ ಬಾಧಿತವಾಗದು. ಬಾಧವೆಂದರೆ, ಅಜ್ಞಾನ ಮತ್ತು ಅದರ ಪರಿಣಾಮವಾದ ಜಗತ್ತು ಎರಡೂ ಪೂರ್ತಿ ನಾಶವಾಗುವುದು. ಅದ್ವೈತಿಯು ಹೇಳುವ ಪೂರ್ತಿನಾಶ ಶಕ್ಯವಿಲ್ಲ.

**ಸ್ವೇಚ್ಛಯೈವ ಚ ಸೃಷ್ಟ್ಯುಕ್ತೇಃ ಕರ್ತೃತಾಂ ಘಟಕರ್ತೃವತ್ ।**
**ಆಹೋಪಾದಾನತಾಂ ತೇನ ಪ್ರತ್ಯಾಹ ಪರಮಾತ್ಮನಃ ॥ ೧೨೪॥**

**ಅರ್ಥ**– ಸ್ವೇಚ್ಛಯಾ ಏವ ಚ= (ಭಗವಂತನ) ಸ್ವೇಚ್ಛೆಯಿಂದಲೇ, ಸೃಷ್ಟ್ಯುಕ್ತೇಃ= ಸೃಷ್ಟಿ ಎಂದು ಹೇಳಿರುವುದರಿಂದ, ಘಟಕರ್ತೃವತ್= ಕುಲಾಲನಂತೆ, ಕರ್ತೃತಾಂ= ಕರ್ತೃತ್ವವನ್ನು, ಆಹ= ಹೇಳಿತು, ತೇನ= ಆ ಇಚ್ಛಾಪೂರ್ವಕ ಸೃಷ್ಟಿ ಎಂಬುದರಿಂದ, ಪರಮಾತ್ಮನಃ=

ಪರಮಾತ್ಮನಿಗೆ, ಉಪಾದಾನತಾಂ= ಉಪಾದಾನತ್ವವನ್ನು, (ಬ್ರಹ್ಮನೇ ಜಗದಾಕಾರದಿಂದ ಕಾಣುವನು ಎಂಬುದನ್ನು), ಪ್ರತ್ಯಾಹ= ನಿರಾಕರಿಸಿತು.

**ಅನುವಾದ** - ಇಚ್ಛಾಮಾತ್ರಂ 'ಪ್ರಭೋಃ ಸೃಷ್ಟಿಃ' ಎಂಬ ಶ್ರುತಿಯು ಭಗವಂತನ ಇಚ್ಛೆಯಿಂದಲೇ ಸೃಷ್ಟಿ ಎಂದು ಹೇಳುತ್ತಿದೆ. ಇದರಿಂದ ಭಗವಂತನಿಗೆ ಕುಲಾಲನಂತೆ ಕರ್ತೃತ್ವವನ್ನು ಹೇಳಿದಂತಾಗುತ್ತದೆ. ಇಚ್ಛಾಪೂರ್ವಕಸೃಷ್ಟಿಯನ್ನು ಹೇಳಿರುವುದರಿಂದ ಪರಮಾತ್ಮನೇ ಜಗದಾಕಾರನಾಗಿ ಭ್ರಾಂತಿಯಲ್ಲಿ ಕಾಣುತ್ತಾನೆ ಎಂದು ಜಗತ್ತಿಗೆ ಬ್ರಹ್ಮನು ವಿವರ್ತೋಪಾದಾನ ಎಂಬ ವಾದವನ್ನು ನಿರಾಕರಿಸಿದಂತಾಗುತ್ತದೆ.

**ಭಾವವಿಲಾಸಿನೀ**– ತೇನ ಇಚ್ಛಾಪೂರ್ವಕಸರ್ಜನೇನ ॥ ೧೨೪ ॥

**ವಿವರಣೆ** - ಈ ಶ್ಲೋಕದಲ್ಲಿ ಇರುವ ತೇನ ಎಂಬ ಪದಕ್ಕೆ ಇಚ್ಛಾಪೂರ್ವಕ ಸೃಷ್ಟಿಯಿಂದ ಎಂದು ಅರ್ಥವಾಗುತ್ತದೆ. ಇಚ್ಛಾಮಾತ್ರಂ ಪ್ರಭೋಃ ಸೃಷ್ಟಿಃ ಎಂಬ ಶ್ರುತಿಯು ಇಲ್ಲಿ ಉದಾಹೃತವಾಗಿದೆ. ಇದರಲ್ಲಿ ಇರುವ ಇಚ್ಛಾಮಾತ್ರಂ ಎಂಬ ಪದಕ್ಕೆ ಇಚ್ಛೆಯಿಂದಲೇ ಎಂದು ಅರ್ಥ ಹೇಳಿದ್ದೇವೆ. ಅದು ಈ ಶಬ್ದದಿಂದ ಹೇಗೆ ತಿಳಿಯುತ್ತದೆ. ಏಕೆಂದರೆ ಇಚ್ಛಾಮಾತ್ರಂ ಎಂಬಲ್ಲಿ ಇರುವ ಮಾತ್ರ ಶಬ್ದಕ್ಕೆ ಕೇವಲ ಎಂದು ಅರ್ಥ. ಹಾಗಾದರೆ ಕೇವಲ ಇಚ್ಛೆಯೇ ಸೃಷ್ಟಿ ಎಂದು ಅರ್ಥವಾಗುತ್ತದೆ. ಇಚ್ಛೆಯಿಂದ ಸೃಷ್ಟಿ ಎಂದು ಅರ್ಥ ಬರುವುದಿಲ್ಲ. ಮತ್ತು ಈ ಶ್ರುತಿಯಲ್ಲಿ ಇಚ್ಛೆ ಮತ್ತು ಸೃಷ್ಟಿಗಳಿಗೆ ಅಭೇದವು ತಿಳಿಯುತ್ತದೆ. ಇಚ್ಛೆಯಿಂದ ಸೃಷ್ಟಿ ಎಂದು ಅರ್ಥಮಾಡಿದಾಗ ಅಭೇದವು ತೋರುವುದಿಲ್ಲ. ಇದಕ್ಕೆ ಸಮಾಧಾನ ಹೀಗೆ. ಇಲ್ಲಿ ಇರುವ ಇಚ್ಛಾಮಾತ್ರಂ ಎಂಬ ಶಬ್ದಕ್ಕೆ ಯಾವುದೇ ವಿಧವಾದ ಆಯಾಸವಿಲ್ಲದೆ ಸ್ವತಂತ್ರವಾದ ಇನ್ನೊಂದು ಸಾಧನವಿಲ್ಲದೆ ತನ್ನ ಸಂಕಲ್ಪದ ಉತ್ತರ ಕಾಲದಲ್ಲಿ ಕೇವಲ ತನ್ನ ಇಚ್ಛೆಯಿಂದಲೇ ಜಗತ್ತಿನ ಸೃಷ್ಟಿಯನ್ನು ಮಾಡುತ್ತಾನೆ ಎಂಬ ಅರ್ಥವು ತಿಳಿಯುತ್ತದೆ. ಈ ರೀತಿಯಾಗಿ ಕಾರ್ಯ ಮತ್ತು ಕಾರಣಗಳಿಗೆ ಅಭೇದ ಹೇಳುವುದು ಲೋಕದಲ್ಲಿ ಕಂಡಿದೆ. ಬಡಗಿಯಿಂದ ನಿರ್ಮಿತವಾದ ಪ್ರಾಸಾದವನ್ನು ಕಂಡು ಇದು ಬಡಗಿಯ ಚಮತ್ಕಾರ ಎಂದು ಹೇಳುವುದು ಕಂಡಿದೆ. ಶ್ರುತಿಗೆ ಈ ರೀತಿಯ ಅರ್ಥವನ್ನು ಮಾಡದಿದ್ದರೆ, ಬಾಧಕ ಇದೆ. (ಐಕ್ಯವನ್ನು ಹೇಳಲು ಬರುವುದಿಲ್ಲ). ಹೇಗೆಂದರೆ ಬಾಹ್ಯ ಜಗತ್ತಿನಲ್ಲಿ ಇರುವ ಸ್ವರೂಪರೂಪ ಉತ್ಪತ್ತಿಗೂ ಮೊದಲೇ ಅಂತಃಕರಣದಲ್ಲಿ ಇರುವ ಭಗವಂತನ ಇಚ್ಛೆಗೂ ಅಭೇದ ಹೇಳಲು ಬರುವುದಿಲ್ಲ. ಆದ್ದರಿಂದ ಭಗವಂತನ ಇಚ್ಛೆಯಿಂದಲೇ ಸೃಷ್ಟಿ ಎಂದು ಅರ್ಥಮಾಡಬೇಕು. ಆಗ ಜಗತ್ತಿಗೆ ಬ್ರಹ್ಮೋಪಾದಾನಕತ್ವವು ಕೂಡುವುದಿಲ್ಲ. ಇದಕ್ಕೆ ದೃಷ್ಟಾಂತವನ್ನು ತೋರಿಸುತ್ತಿದ್ದಾರೆ. ಘಟಕರ್ತೃವತ್ ಎಂದು, ಕುಲಾಲನು ಘಟಕ್ಕೆ ವಿವರ್ತೋಪಾದಾನ ಕಾರಣ ಎಂದು ಕರೆಯುವುದಿಲ್ಲ. ಅವನು ಆ ಘಟಕ್ಕೆ ನಿಮಿತ್ತಕಾರಣನು ಕರ್ತನು. ಮಣ್ಣನ್ನು ಉಪಾದಾನ ಕಾರಣ ಎಂದು ಕರೆಯುತ್ತಾರೆ.

ಹಾಗೆಯೇ ಇಲ್ಲಿಯೂ ಬ್ರಹ್ಮನು ಜಗತ್ತಿನ ಸೃಷ್ಟಿಗೆ ನಿಮಿತ್ತ ಕಾರಣನು. ಉಪಾದಾನಕಾರಣನಲ್ಲ.

**ತದೀಯಪ್ರಭುತಾಮಾಹ ಯತಶ್ಚ ಪರಮಾತ್ಮನಃ ।**
**ಸರ್ವತೋತ್ಯಂತಭೇದಂ ಚ ಸರ್ವೇಶತ್ವಂ ಚ ವಕ್ತಿ ತತ್ ॥ ೧೨೫ ॥**

**ಅರ್ಥ–** ಯತಶ್ಚ= ಯಾವ ಕಾರಣದಿಂದಲೇ, ಪರಮಾತ್ಮನಃ= ಪರಮಾತ್ಮನಿಗೆ, ತದೀಯ ಪ್ರಭುತಾಂ= ಪ್ರಪಂಚದ ಮೇಲಿನ ಪ್ರಭುತ್ವವನ್ನು, ಆಹ= ಹೇಳಿರುವುದೋ, ತತ್= ಆ ಕಾರಣದಿಂದ, ಸರ್ವತಃ= ಸರ್ವಜಗತ್ತಿನಿಂದ, ಅತ್ಯಂತಭೇದಂ ಚ= ಅತ್ಯಂತ (ಸರ್ವಪ್ರಕಾರದ) ಭೇದವನ್ನು, ಸರ್ವೇಶತ್ವಂ ಚ= ಸರ್ವೇಶತ್ವವನ್ನು (ಸರ್ವಸ್ವಾಮಿತ್ವ ವನ್ನು ನಿಯಾಮಕತ್ವವನ್ನು) ವಕ್ತಿ= ಹೇಳುತ್ತದೆ.

**ಅನುವಾದ -** ಇಚ್ಛಾಮಾತ್ರಂ ಪ್ರಭೋಃ ಸೃಷ್ಟಿಃ ಎಂಬ ಶ್ರುತಿಯು ಭಗವಂತನನ್ನು ಜಗತ್ತಿಗೆ ಪ್ರಭು ಎಂದು ಕರೆಯುತ್ತಿದೆ. ಈ ರೀತಿ ಪ್ರಭುತ್ವವನ್ನು ಹೇಳುವುದರಿಂದ ಭಗವಂತನು ಈ ಎಲ್ಲ ಜಗತ್ತಿನಿಂದ ಎಲ್ಲಾ ಪ್ರಕಾರದಿಂದಲೂ ಭಿನ್ನ ಮತ್ತು ಎಲ್ಲದಕ್ಕೂ ನಿಯಾಮಕ ಎಂದು ತಿಳಿದಂತಾಗುತ್ತದೆ.

**ಭಾವವಿಲಾಸಿನೀ–** ತತ್ತಸ್ಮಾತ್ ॥ ೧೨೫ ॥

**ವಿವರಣೆ -** ಎಲ್ಲಿ ಪ್ರಭು ಅಥವಾ ರಾಜಾ ಎಂಬ ವ್ಯವಹಾರವನ್ನು ಮಾಡುತ್ತಾರೋ ಅಲ್ಲಿ ಅಭೇದವಾಗಲೀ, ಉಪಾದಾನ ಕಾರಣತ್ವವಾಗಲೀ ಕೂಡುವುದಿಲ್ಲ ಎಂಬ ಯುಕ್ತಿಯನ್ನು ತೋರಿಸುತ್ತಿದ್ದಾರೆ. ಅಂದರೆ ಲೋಕದಲ್ಲಿ ರಾಜನಾದವನು ಎಂದೂ ರಾಜ್ಯವಾಗಲಾರ ಮತ್ತು ಪ್ರಜೆಯೂ ಆಗುವುದಿಲ್ಲ. ರಾಜನು ಜಗತ್ತಿಗಿಂತ ಭಿನ್ನ, ಪ್ರಜೆಗಳಿಂದಲೂ ಭಿನ್ನನಾಗಿರುವುದು ಎಲ್ಲರ ಅನುಭವ ಉಂಟು ಎಂದು ತೋರಿಸುತ್ತಿದ್ದಾರೆ. ಶ್ರೌತಪದಗಳ ಸ್ವಾರಸ್ಯದಿಂದಲೇ ಸ್ವಪ್ನಮಾಯಾಸರೂಪಾ ಎಂಬ ಶ್ರುತಿಯಿಂದ ಪರನ ಅಕುಶಲತೆಯನ್ನು ತೋರಿಸುತ್ತಿದ್ದಾರೆ.

**ಸ್ವಪ್ನಮಾಯಾಸರೂಪೇತಿ ಸೃಷ್ಟಿಂ ವಾಚಾ ವದಂತಿ ತೇ ।**
**ಅರ್ಥತಸ್ತದ್ವಿರೋಧಾತ್ ತೈಃ ಕಲ್ಪಿತಾ ಜಗತೋ ಜನಿಃ ॥ ೧೨೬ ॥**

**ಅರ್ಥ–** ಸ್ವಪ್ನಾಮಾಯಾಸರೂಪಾ= ಸ್ವಪ್ನಮಾಯೆಗಳ ಸಮಾನರೂಪವುಳ್ಳದ್ದು, ಇತಿ= ಎಂದು, ತೇ= ಮಾಯಾವಾದಿಗಳು, ಸೃಷ್ಟಿಂ= ಸೃಷ್ಟಿಯನ್ನು, ವಾಚಾ= ನುಡಿಯಿಂದ, ವದಂತಿ= ಹೇಳುತ್ತಾರೆ, ಅರ್ಥತಃ= ಅರ್ಥದಲ್ಲಿ, ತದ್ವಿರೋಧಾತ್= ಅವುಗಳಿಗೆ ವಿರೋಧವಾಗಿ, ತೈಃ= ಪರರಿಂದ, ಜಗತಃ= ಜಗತ್ತಿನ, ಜನಿಃ= ಉತ್ಪತ್ತಿಯು, ಕಲ್ಪಿತಾ= ಕಲ್ಪಿಸಿ ಹೇಳಲಾಗಿದೆ.

**ಅನುವಾದ** - ಸ್ವಪ್ನ ಮತ್ತು ಮಾಯೆಯಂತೆ ಈ ಜಗತ್ತಿನ ಸೃಷ್ಟಿ ಎಂದು ಮಾಯಾವಾದಿಗಳು ಕೇವಲ ಮಾತಿನಿಂದ ಹೇಳುತ್ತಾರೆ. ಆದರೆ ಜಗತ್ತಿನ ಉತ್ಪತ್ತಿಯನ್ನು ಹೇಳುವಾಗ ತಮ್ಮ ಮಾತಿಗೆ ವಿರುದ್ಧವಾದ ಸೃಷ್ಟಿ ಕಲ್ಪನೆಯನ್ನು ಮಾಡುತ್ತಾರೆ.

**ಭಾವವಿಲಾಸಿನೀ**–ಪ್ರಕಾರಾಂತರೇಣಾಪಿ ಶ್ರೌತಪದಮರ್ಯಾದಯೈವ ಪರಸ್ಯಾಕೌಶಲಂ ಪ್ರದರ್ಶಯತಿ ॥ **ಸ್ವಪ್ನಮಾಯೇತಿ** ॥ ಸ್ವಪ್ನಮಾಯಾಸರೂಪಾ ಸ್ವಪ್ನಮಾಯಯೋಃ ಸಮಾನರೂಪಾ । ವಿಕಲ್ಪಿತೇತ್ಯಸ್ಯಾರ್ಥಮಾಹ – **ಅರ್ಥತ ಇತಿ** ॥ ೧೨೬ ॥

**ವಿವರಣೆ** - ಮಾಂಡೂಕೋಪನಿಷತ್ತಿನಲ್ಲಿ ಇರುವ ಸ್ವಪ್ನಮಾಯಾಸರೂಪೇತಿ ಎಂಬ ಶ್ರುತಿಗೆ ಮಾಯಾವಾದಿಗಳು ಬ್ರಹ್ಮವಿವರ್ತವೇ ಈ ಜಗತ್ತು ಎಂದು ಅರ್ಥೈಸುತ್ತಾರೆ. ಈ ಅರ್ಥವು ಶ್ರುತಿಯ ಶಬ್ದಕ್ಕೆ ಸರಿಯಾದುದಲ್ಲ ಎಂದು ಪರನ ಅಕುಶಲತೆಯನ್ನು ತೋರಿಸುತ್ತಾರೆ.

ಸ್ವಪ್ನೇಹಿ ದ್ರಷ್ಟೃದೇಹೋಸ್ತಿ ಶಯ್ಯಾಭೂವಸನಾದಿಕಮ್ ।
ಅನ್ಯೇ ಚ ಜಾಗ್ರತಃ ಸಂತಿ ಸ್ವಾಪ್ನಂ ತನ್ನಾಸ್ತಿ ಕಿಂಚನ ॥ ೧೨೭ ॥

**ಅರ್ಥ**– ಸ್ವಪ್ನೇ= ಸ್ವಪ್ನದಲ್ಲಿ, ದೃಷ್ಟೃ ದೇಹಃ= ಜೀವ ದೇಹವು, (ಸುಪ್ತಿಯಲ್ಲಿ ಸರ್ವ ಲಯವನ್ನು ಅದ್ವೈತಿಗಳು ಅಂಗೀಕರಿಸಿದರೂ ಸ್ವಪ್ನದಲ್ಲಿ ಸರ್ವಲಯವನ್ನು ಅಂಗೀಕರಿಸದಿರುವುದರಿಂದ), ಶಯ್ಯಾಭೂವಸನಾದಿಕಂ= ಹಾಸಿಗೆ, ಭೂಮಿ, ವಸ್ತ್ರಾದಿಗಳು, ಅಸ್ತಿ= ಇರುತ್ತವೆ, ಅನ್ಯೇ ಜಾಗ್ರತಃ ಅಪಿ= ಬೇರೆ ಜಾಗ್ರದವಸ್ಥೆಯಲ್ಲಿ ಇರುವ ಪುರುಷರೂ, ಸಂತಿ= ಇರುತ್ತಾರೆ, ಸ್ವಾಪ್ನಂತತ್= ಸ್ವಪ್ನದಲ್ಲಿ ಕಂಡ ಸ್ಥೂಲ ವಸ್ತುಗಳಾದ ಗಜ ಕುದುರೆ ಮುಂತಾದ ವಸ್ತುಗಳು, ಕಿಂಚನ= ಕೆಲವು ಮಾತ್ರ , ನಾಸ್ತಿ= ಇರುವುದಿಲ್ಲ.

**ಅನುವಾದ** - ಜಗತ್ತಿನ ಸೃಷ್ಟಿ ವಿಷಯದಲ್ಲಿ ಸ್ವಪ್ನ ದೃಷ್ಟಾಂತವು ಯುಕ್ತವಾಗುವುದಿಲ್ಲ. ಸ್ವಪ್ನಾವಸ್ಥೆಯಲ್ಲಿ ಜೀವನ ದೇಹ, ಶಯ್ಯಾ , ಭೂಮಿ, ವಸ್ತ್ರಾದಿಗಳು ಇರುತ್ತವೆ. ಸ್ವಪ್ನದಲ್ಲಿ ಕಂಡ ಗಜ, ಅಶ್ವಾದಿಗಳು ಮಾತ್ರ ಸ್ಥೂಲರೂಪದಲ್ಲಿ ಇರುವುದಿಲ್ಲ. ಸ್ವಾಪ್ನ ಕರಿತುರಗಾದಿಗಳು ಸ್ವಾಪ್ನ ಜಗನ್ನಿರ್ಮಾತನಾದ ಶ್ರೀಹರಿಯಿಂದ ಜೀವನ ಮನಸ್ಸಿನ ಪೂರ್ವಸಂಸ್ಕಾರವನ್ನು ಉಪಾದಾನವಾಗಿ ಇಟ್ಟುಕೊಂಡು ಸೂಕ್ಷ್ಮವಾಸನಾ ರೂಪವಾಗಿ ಇರುತ್ತವೆ. ಆದರೆ ಜಾಗ್ರಜ್ಜಗತ್ತು ಹಾಗೆ ಸೂಕ್ಷ್ಮ ವಸ್ತುಗಳುಳ್ಳದ್ದು ಅಲ್ಲ.

**ಭಾವವಿಲಾಸಿನೀ**– ವಿರುದ್ಧಕಲ್ಪನಾಮೇವ ವಿವಿಚ್ಯ ದರ್ಶಯತಿ ॥ **ಸ್ವಪ್ನೇಽಪೀತಿ** ॥ ದ್ರಷ್ಟುರ್ಜೀವಸ್ಯ ದೇಹಃ । ಸುಪ್ತೌ ಸರ್ವಲಯಾಂಗೀಕಾರೇಽಪಿ ಸ್ವಪ್ನೇ ತದನಂಗೀಕಾರಾತ್ । ಜಾಗ್ರತಃ ಜಾಗ್ರದವಸ್ಥಾಪನ್ನಾಃ ಪುರುಷಾಃ । ಸ್ವಾಪ್ನಂ ಸ್ವಪ್ನೇ ದೃಶ್ಯಮಾನಂ ಕರಿತುರಗಾದಿಕಮ್ ।

ಕಿಂಚನ ಸ್ಥೂಲರೂಪಮ್ । ತತ್ರಾಪಿ ಸೃಷ್ಟಿಕಥನಾತ್ ಸೂಕ್ಷ್ಮರೂಪೇಣ ಕರಿತುರಗಾದಿಕಮಸ್ತೀತಿ ಭಾವಃ ॥ ೧೨೭ ॥

**ವಿವರಣೆ** - ಮಾಯಾವಾದಿಗಳು ಸ್ವಪ್ನಮಾಯಾಸರೂಪಾ ಎಂಬ ಶ್ರುತಿಯನ್ನು ಆದರಿಸಿ, ಜಗತ್ತಿನ ಸೃಷ್ಟಿಗೆ ಸ್ವಪ್ನ ದೃಷ್ಟಾಂತವನ್ನು ಕೊಡುತ್ತಾರೆ. ಆದರೆ ಸ್ವಪ್ನಕ್ಕೂ ಮತ್ತು ಜಗತ್ತಿನ ಸೃಷ್ಟಿಗೂ ದೃಷ್ಟಾಂತ ದಾರ್ಷ್ಟಾಂತಿಕಭಾವವು ಕಂಡುಬರುವುದಿಲ್ಲ. ಏಕೆಂದರೆ ದೃಷ್ಟಾಂತವಾದ ಸ್ಥಳದಲ್ಲಿ ಸುಪ್ತಿಯಂತೆ ಸರ್ವಲಯವೆಂದು ಅದ್ವೈತಿಗಳೇ ಒಪ್ಪಿಲ್ಲ, ಸ್ವಪ್ನ ನೋಡುವವನ ದೇಹವು ಅವನಿಗೆ ಕಾಣದಿದ್ದರೂ ಬೇರೆಯವರಿಗೆ ಕಾಣುವುದರಿಂದ ಸತ್ಯವಾಗಿದೆ. ಮತ್ತು ಭೂಮಿ, ಹಾಸಿಗೆ ವಸ್ತ್ರ ಮೊದಲಾದವುಗಳೂ ಹಾಗೇ ಸತ್ಯವಾಗಿವೆ. ಇವೆಲ್ಲವೂ ಸ್ವಪ್ನಕಾಲದಲ್ಲಿಯೂ ಸತ್ಯವಾಗಿವೆ ಮತ್ತು ಸ್ವಪ್ನಾನಂತರ ಜಾಗ್ರದವಸ್ಥೆಯಲ್ಲಿಯೂ ಸತ್ಯವಾಗಿದೆ. ಆದರೆ ಸ್ವಪ್ನದಲ್ಲಿ ಕಂಡ ಆನೆ ಕುದುರೆ ಮುಂತಾದ ವಸ್ತುಗಳು ಮಾತ್ರ ಸ್ವಪ್ನಕಾಲದಲ್ಲಿ ಸ್ಥೂಲವಾದ ಬಾಹ್ಯಪದಾರ್ಥರೂಪದಿಂದ ಇಲ್ಲ. ಸೂಕ್ಷ್ಮವಾಸನಾ ರೂಪದಿಂದ ಇವೆ. (ಸತ್ಯವಾಗಿವೆ) ಭಗವಂತನು ಸ್ವಪ್ನಕಾಲದಲ್ಲಿ ಆಯಾ ವಸ್ತುಗಳನ್ನು ಜೀವನ ಕರ್ಮ ಹಾಗೂ ಯೋಗ್ಯತೆಗೆ ಅನುಗುಣವಾಗಿ ಸೃಷ್ಟಿ ಮಾಡುತ್ತಾನೆ. ಇದು ದಾರ್ಷ್ಟಾಂತಿಕವಾದ ಜಗತ್ ಸೃಷ್ಟಿ ವಿಷಯದಲ್ಲಿ ಸಮನ್ವಯವಾಗುವುದಿಲ್ಲ. ಏಕೆಂದರೆ ಬ್ರಹ್ಮಾತಿರಿಕ್ತವಾದ ಎಲ್ಲಾ ಜಗತ್ತೂ ಮಿಥ್ಯಾ. ಸ್ವಪ್ನಕಾಲದಲ್ಲಿ ಕೆಲವು ಮಾತ್ರ ಅಸತ್ಯ, ಆದರೆ ಜಗತ್ತಿನಲ್ಲಿ ಎಲ್ಲವೂ ಅಸತ್ಯ. ಆದ್ದರಿಂದ ನಿಮ್ಮ ಜಗತ್‌ಸೃಷ್ಟಿ ವಿಷಯದಲ್ಲಿ ಸ್ವಪ್ನದೃಷ್ಟಾಂತ ಸರಿಯಾದುದಲ್ಲ.

ಮಾಯಾಯಾಂ ಚ ಸ್ವದೇಹೋಸ್ತಿ ಚಕ್ಷುರಾದೀಂದ್ರಿಯಾಣಿ ಚ ।
ಭೂರ್ದ್ರಷ್ಟಾರಶ್ಚ ತೇ ಸರ್ವೇ ಮಾಯಿಕಂ ನಾಸ್ತಿ ಕಿಂಚನ ।
ತತ್ಸರೂಪಾ ಸ್ವಸೃಷ್ಟಿಶ್ಚೇತ್ ಸರ್ವಂ ಮಿಥ್ಯಾ ಕಥಂ ಭವೇತ್ ॥ ೧೨೮ ॥

**ಅರ್ಥ–** ಮಾಯಾಯಾಂ ಚ= ಮಾಯೆಯಲ್ಲಿ ಕೂಡ, ಸ್ವದೇಹಃ= ತನ್ನ (ಮಾಯಾಕರ್ತೃವಿನ) ದೇಹವು, ಅಸ್ತಿ= ಇರುತ್ತದೆ, ಚ= ಮತ್ತು, ಚಕ್ಷುರಾದೀಂದ್ರಿಯಾಣಿ ಚ= ಕಣ್ಣು ಮುಂತಾದ ಇಂದ್ರಿಯಗಳೂ, ಭೂಃ= ಭೂಮಿಯು, ದ್ರಷ್ಟಾರಃ ಚ= ನೋಡುವ ಜನರೂ, ತೇ ಸರ್ವೇ= ಈ ಎಲ್ಲವೂ (ಸಂತಿ= ಇರುತ್ತವೆ), ಮಾಯಿಕಂ= ಮಾಯೆಯಿಂದ ಕಂಡ, ಕಿಂಚನ= ಕೆಲವು ವಿಚಿತ್ರ ವಸ್ತುಗಳೂ ಮಾತ್ರ, ನಾಸ್ತಿ= ಇರುವುದಿಲ್ಲ, ತತ್ಸರೂಪಾ= ಮಾಯಾಸಮಾನರೂಪದ್ದೇ, ಸ್ವಸೃಷ್ಟಿಃ ಚೇತ್= ತನಗೆ ಮಾಯಾವಾದಿಗೆ ಅಭಿಮತ ಜಗತ್‌ಸೃಷ್ಟಿಯು ಆಗುವುದಾದರೆ, ಸರ್ವಂ= ಎಲ್ಲವೂ ಭೂಮಿ, ಮನುಷ್ಯ, ಈಶ್ವರ, ದೇಹ, ಮನೆ, ವಸ್ತ್ರ ಅಲಂಕಾರಾದಿಗಳೆಲ್ಲವೂ, ಕಥಂ= ಹೇಗೆ, ಮಿಥ್ಯಾ= ಮಿಥ್ಯವಾದುದು, ಭವೇತ್= ಆಗುತ್ತದೆ.

**ಭಾವವಿಲಾಸಿನೀ–** ಕಿಂಚನೇತ್ಯನೇನ ಮಾಯಿಕೇಽಪಿ ಮಾಯಾನಿದಾನಭೂತಂ ಔಷಧಾದಿಕಂ ವಾ ತೃಣಾದಿಕಂ ವಾ ಕಿಂಚಿದಸ್ತೀತಿ ಸೂಚಯತಿ ॥ ತತ್‌ಸರೂಪಾ ಸ್ವಪ್ನಮಾಯಾಸರೂಪಾ । ಸ್ವಸೃಷ್ಟಿಃ ಸ್ವಾಭಿಮತಜಗತ್‌ಸೃಷ್ಟಿಃ । ಸರ್ವಂ ಚೈತನ್ಯವ್ಯತಿರಿಕ್ತಂ ಭೂಭೂಧರಾದಿಕವ್ ಈಶ್ವರದೇಹಗೇಹವಸನಾಲಂಕಾರಾದಿಕಂ ಚ ॥ ೧೨೮ ॥

**ವಿವರಣೆ -** ಹಿಂದಿನ ಶ್ಲೋಕದಲ್ಲಿ ಸ್ವಪ್ನಮಾಯಾಸರೂಪಾ ಎಂಬ ಶ್ರುತಿಯಲ್ಲಿ ಹೇಳಿದ ಸ್ವಪ್ನ ಸಾದೃಶ್ಯವನ್ನು ನಿರಾಕರಿಸಿ (ನೀವು ಮಾಡುವ ಶ್ರುತ್ಯರ್ಥವು ಸರಿಯಾದುದ್ದಲ್ಲ ಎಂದು) ಈ ಶ್ಲೋಕದಲ್ಲಿ ಅದೇ ಶ್ರುತಿಯಲ್ಲಿ ಉದಾಹರಿಸಿದ ಮಾಯಾ ಎಂಬ ದೃಷ್ಟಾಂತದ ಸಾದೃಶ್ಯವನ್ನೂ ನಿರಾಕರಣೆ ಮಾಡುತ್ತಿದ್ದಾರೆ.

ಜಗತ್‌ಸೃಷ್ಟಿ ವಿಷಯದಲ್ಲಿ ಮಾಯೆಯಂತೆ ಈ ಜಗತ್ತಿನ ಸೃಷ್ಟಿ ಎಂದು ಹೇಳುವುದು ಸರಿಯಾದುದ್ದಲ್ಲ. ಏಕೆಂದರೆ ಮಾಯೆಯಲ್ಲಿ ಮಾಯಾಕರ್ತೃವಿನ ದೇಹ, ಇಂದ್ರಿಯಾದಿಗಳೂ ಎಲ್ಲವೂ ಸತ್ಯವಾಗಿವೆ. ಯಾವುದೂ ಮಾಯಾ ನಿರ್ಮಿತವಲ್ಲ. ಮತ್ತು ಮಾಯಾ (ಇಂದ್ರಜಾಲ)ಕ್ಕೆ ಬೇಕಾದ ಔಷಧ, ಹುಲ್ಲು ಇತ್ಯಾದಿಗಳು ಸತ್ಯವಾಗಿವೆ. ಆದ್ದರಿಂದ ನಿನಗೆ ಅಭಿಮತವಾದ ಮಿಥ್ಯಾಜಗತ್‌ಸೃಷ್ಟಿಯನ್ನು ಮಾಯಾದೃಷ್ಟಾಂತದಿಂದ ಸಾಧಿಸಲಾಗುವುದಿಲ್ಲ, ಮಾಯೆಯಲ್ಲಿ ಕೆಲವು ಸತ್ಯವಾದದ್ದಿವೆ. ನೀನು ಹೇಳುವ ಮಿಥ್ಯಾಜಗತ್‌ಸೃಷ್ಟಿಯಲ್ಲಿ ಚೈತನ್ಯಕ್ಕಿಂತ ಅತಿರಿಕ್ತವಾದ ಯಾವ ವಸ್ತುವೂ ಸತ್ಯವಲ್ಲ ಎಂದು ಸಾಧಿಸಲು ಮಾಯಾ ದೃಷ್ಟಾಂತ ಕೂಡುವುದಿಲ್ಲ. ಆದರಿಂದ ಈಶ್ವರನ ಮಾಯೆಯಿಂದ ಸೃಷ್ಟವಾದ ಭೂಮಿ ಪರ್ವತ ಮುಂತಾದುವನ್ನು ಈಶ್ವರನ ದೇಹ ಮನೆ ವಸ್ತ್ರಾಲಂಕಾರಾದಿಗಳನ್ನು ಮಿಥ್ಯೆ ಎಂದು ಹೇಗೆ ಹೇಳಲಾದೀತು.

**ಕಿಂಚ ಮಾಯಾಸರೂಪತ್ವಂ ಎಂಬ ಶ್ಲೋಕದಿಂದ ಆರಂಭಿಸಿ ಕೆಲವು ಶ್ಲೋಕಗಳಿಂದ ಮಾಯಾ ಸೃಷ್ಟಿ ಮತ್ತು ಜಗತ್ ಸೃಷ್ಟಿಗಳಿಗೆ ವ್ಯತ್ಯಾಸವನ್ನು ಬೇರೆ ಪ್ರಕಾರದಿಂದ ತೋರಿಸುತ್ತಾರೆ-**

**ಕಿಂಚ ಮಾಯಾಸರೂಪತ್ವಂ ಕಥಮಸ್ತಿ ವಿಚಾರ್ಯತಾಮ್ ।**
**ಮಾಯಯಾ ಕಲ್ಪಿತಂ ವಸ್ತು ಮಾಯಾಕಾಲೇಽಪಿ ನಾಸ್ತಿ ಹಿ ॥ ೧೨೯ ॥**

**ಅರ್ಥ–** ಕಿಂಚ= ಮತ್ತೂ ಏನೆಂದರೆ, ಮಾಯಾಸರೂಪತ್ವಂ= ಮಾಯಾಸೃಷ್ಟಿ ಸಮಾನತ್ವವು (ಜಗತ್ತಿಗೆ), ಕಥಂ ಅಸ್ತಿ= ಹೇಗೆ ಇರುತ್ತದೆಯೆಂಬುದು, ವಿಚಾರ್ಯತಾಂ= ವಿಮರ್ಶಿಸಲ್ಪಡಲಿ, ಮಾಯಯಾ ಕಲ್ಪಿತಂ ವಸ್ತು= ಮಾಯಾ ಸೃಷ್ಟವಾದ ವಸ್ತುವು, ಮಾಯಾಕಾಲೇ ಅಪಿ= ಇಂದ್ರಜಾಲ ಪ್ರಯೋಗ ಮಾಡುವಾಗಲೂ, ನಾಸ್ತಿ= ಇರುವುದಿಲ್ಲವೆಂದು, ಹಿ= ಪ್ರಸಿದ್ಧವು.

**ಅನುವಾದ -** ಈ ಜಗತ್ತಿಗೆ ಮಾಯಾಸಾಮ್ಯವನ್ನು ಹೇಳಿದರೆ ಇನ್ನೊಂದು ದೋಷ ಇದೆ ಎಂದು ತೋರಿಸುತ್ತಿದ್ದಾರೆ. ಜಗತ್ತಿಗೆ ಮಾಯಾಸಾಮ್ಯವನ್ನು ಹೇಳುವ

ಮಾಯಾವಾದಿಗಳೇ ಸರಿಯಾಗಿ ಆಲೋಚಿಸಿ. ಇಂದ್ರಜಾಲ ಮಾಡುವನಿಂದ ನಿರ್ಮಿತವಾದ ಮಾಯಾವಸ್ತು ಅವನು ಮಾಯಾಪ್ರಯೋಗ ಮಾಡುವ ಕಾಲದಲ್ಲಿಯೂ ಇರುವುದಿಲ್ಲ. ಆದರೆ ಜಗತ್ತು ಹಾಗಲ್ಲ. ಸೃಷ್ಟಿಕಾಲದಲ್ಲಿಯೂ ಇದೆ, ಅನಂತರವೂ ಇದೆ. ಆದ್ದರಿಂದ ಮಾಯಾಸರೂಪತ್ವವು ಕೂಡುವುದಿಲ್ಲ.

**ಭಾವವಿಲಾಸಿನೀ**– ಪ್ರಕಾರಾಂತರೇಣ ಮಾಯಾವೈಸಾದೃಶ್ಯಮಾಹ – ಕಿಂಚೇತಿ ॥೧೨೯॥

ಭ್ರಾಂತ್ಯಾ ಪ್ರತೀಯತೇಽಸ್ತಿತ್ವಂ ತತ್ಕಾರ್ಯಸ್ಯಾಪಿ ವಿಭ್ರಮಃ ।
ಜಲಂ ಚ ಮಿಥ್ಯಾ ಪರಿತಃ ಸ್ಯಂದನಂ ಪಾನಮೇವ ಚ ॥ ೧೩೦ ॥

ಮಿಥ್ಯೈವ ದೃಶ್ಯತೇ ಪಾನಜನಿತಂ ತು ಸುಖಂ ತದಾ ।
ಸಾಕ್ಷಿಣಾ ವೀಕ್ಷ್ಯತೇ ನೈವ ಬಾಧಾತ್ ಪೂರ್ವಂ ಚ ಕಿಂಚನ ॥ ೧೩೧ ॥

**ಅರ್ಥ**– ಅಸ್ತಿತ್ವಂ= ಆ ವಸ್ತುವಿನ ಅಸ್ತಿತ್ವವು, ಭ್ರಾಂತ್ಯಾ= ಭ್ರಾಂತಿಯಿಂದ, ಪ್ರತೀಯತೇ= ತೋರುತ್ತದೆ. ತತ್ಕಾರ್ಯಸ್ಯಾಪಿ= ಆ ಮಾಯಾವಸ್ತುವಿನ ಕಾರ್ಯವೂ, ವಿಭ್ರಮಃ (ಭವತಿ)= ಭ್ರಾಂತಿಯಿಂದ ಕೂಡಿದ್ದಾಗಿರುತ್ತದೆ, ಜಲಂ ಚ= (ಮಾಯಾನಿರ್ಮಿತ) ಜಲವೂ, ಮಿಥ್ಯಾ= ಸುಳ್ಳು, ಪರಿತಃ= ಸುತ್ತಲೂ, ಸ್ಯಂದನಂ= ಹರಿಯುವುದೂ, ಚ= ಮತ್ತು, ಪಾನಮೇವ= ಕುಡಿಯುವಿಕೆಯೂ, ಮಿಥ್ಯೈವ= ಮಿಥ್ಯಾಭೂತವಾದದ್ದೇ, ದೃಶ್ಯತೇ= ಕಾಣುತ್ತದೆ, ತದಾ= ಆಗ, ಬಾಧಾತ್ ಪೂರ್ವಂ ಚ= ಆ ವಸ್ತು ಬಾಧಿತವಾಗುವ ಮೊದಲೂ ಸಹ, ಪಾನಜನಿತಂ= ಜಲಪಾನದಿಂದ ಉತ್ಪನ್ನವಾಗುವ, ಸುಖಂ ತು= ತೃಷಾ ನಿವೃತ್ತಿ ಮತ್ತು ಸುಖವಾದರೋ, (ನೀರಡಿಕೆಯ ಪರಿಹಾರರೂಪ ಫಲವೂ) ಸಾಕ್ಷಿಣಾ= ಸಾಕ್ಷಿಯಿಂದ (ಜೀವನಿಂದ), ನೈವ ವೀಕ್ಷ್ಯತೇ= ತೋರಲ್ಪಡುವುದಿಲ್ಲ (ಮಿಥ್ಯಾಭೂತವಾದದೂ ಕೂಡ ಅನುಭವಕ್ಕೆ ಬರುವುದಿಲ್ಲ).

**ಅನುವಾದ** - ಮಾಯಾಪ್ರಯೋಗಕಾಲದಲ್ಲಿ ತೋರುವ ವಸ್ತು ಆ ಕಾಲದಲ್ಲಿಯೇ ಇಲ್ಲ ಎಂದು ಹೇಳಿದರು. ಅದು ಹೇಗೆಂದರೆ ಭ್ರಾಂತಿಯಿಂದ (ವಸ್ತು ಹೇಗೆ ಇದೆಯೋ ಅದಕ್ಕಿಂತಲೂ ಭಿನ್ನವಾಗಿ ತೋರುವುದು) ವಸ್ತು ಇದೆ ಎಂದು ತೋರುತ್ತದೆ. ಆ ವಸ್ತುವಿನ ಕಾರ್ಯವೂ ಭ್ರಾಂತಿಯಿಂದಲೇ ತೋರುತ್ತದೆ. ಒಬ್ಬ ಇಂದ್ರಜಾಲ ಮಾಡುವವನು ತನ್ನ ಮಾಯಾಶಕ್ತಿಯಿಂದ ನೀರನ್ನು ತೋರಿಸುತ್ತಾನೆ. ಆ ನೀರು ಸುತ್ತಲೂ ಹರಿಯುವುದನ್ನು ಮತ್ತು ನೀರು ಕುಡಿಯುವುದನ್ನೂ ತೋರಿಸುತ್ತಾನೆ. ಆದರೆ ಇದೆಲ್ಲವೂ ಮಿಥ್ಯೆಯೇ ಭ್ರಾಂತಿಯಲ್ಲಿ ಕಾಣುತ್ತದೆ. ಸತ್ಯವಾದ ನೀರನ್ನು ಕುಡಿದಾಗ ತೃಷಾನಿವೃತ್ತಿರೂಪಸುಖದ ಅನುಭವವು ಸಾಕ್ಷೀಂದ್ರಿಯದಿಂದ ಆತ್ಮನಿಗೆ ತೋರುತ್ತದೆ. ಈ ಅನುಭವದಿಂದ ನೀರಿನ

ಅಸ್ತಿತ್ವವನ್ನು ನಿಶ್ಚಯಿಸುತ್ತೇವೆ. ಆದರೆ ಈ ವಿಧವಾದ ಸಾಕ್ಷಿ ಅನುಭವವು ಮಾಯಿಕ ಜಲದ ವಿಷಯದಲ್ಲಿ ಬಾಧಜ್ಞಾನ ಬರುವ ಮೊದಲು (ಇದು ನೀರಲ್ಲ ಎಂಬ ಜ್ಞಾನ ಬರುವ ಮೊದಲು) ಬರುವುದಿಲ್ಲ. ಅಂದರೆ ಆ ನೀರಿನಿಂದ ಮಿಥ್ಯಾಭೂತವಾದ ತೃಷಾನಿವೃತ್ತಿ (ನೀರಡಿಕೆ ಶಾಂತವಾಗುವುದು) ರೂಪ ಸುಖದ ಅನುಭವವು ಕೂಡ ಬರುವುದಿಲ್ಲ.

ಜಗತಃ ತತ್ಸರೂಪತ್ವೇ ಬ್ರಹ್ಮಜ್ಞಾನಾತ್ ಪುರಾ ಜಲಮ್ ।
ಜಲಕಾರ್ಯಂ ಚ ಪಾನಾಂತಂ ಮೃಷಾಽಸ್ತು ಜಲಪಾನತಃ ।
ತನ್ನಿವೃತ್ತಿಃ ಸುಖಂ ಚಾತ್ರ ಸಾಕ್ಷಿಣಾ ವೀಕ್ಷ್ಯತೇ ಕಥಂ ॥ ೧೩೨ ॥

**ಅರ್ಥ–** ಜಗತಃ= ಜಗತ್ತಿಗೆ, ತತ್ಸರೂಪತ್ವೇ= ಮಾಯಾವಸ್ತುವಿನ ಸಾದೃಶ್ಯವಿದ್ದರೆ, ಬ್ರಹ್ಮಜ್ಞಾನಾತ್ ಪುರಾ= ಬ್ರಹ್ಮಜ್ಞಾನಕ್ಕಿಂತ ಮೊದಲು, ಜಲಂ= ಜಲವೂ, ಚ= ಮತ್ತು, ಪಾನಾಂತಂ= ಜಲಪಾನದವರೆಗಿನ, ಜಲಕಾರ್ಯಂ= ನೀರು ಹರಿಯುವುದು ಮುಂತಾದ ಕಾರ್ಯ ಮೃಷಾ ಅಸ್ತು= ಸುಳ್ಳೇ ಆಗಲಿ (ಅಸತ್ಯವೇ ಆಗಲಿ), ಜಲಪಾನತಃ= ಜಲಪಾನದಿಂದ, ತನ್ನಿವೃತ್ತಿಃ= ತೃಷೆಯ ಪರಿಹಾರವು, ಸುಖಂ ಚ= ಸುಖವೂ, ಅತ್ರ= ಜಗತ್ತಿನಲ್ಲಿ (ಬ್ರಹ್ಮಜ್ಞಾನದ ಮೊದಲು ಬಾಧಜ್ಞಾನವುಂಟಾಗುವ ಪೂರ್ವದಲ್ಲಿ), ಸಾಕ್ಷಿಣಾ= ಸಾಕ್ಷಿಯಿಂದ (ಆತ್ಮನಿಂದ) ಕಥಂ ವೀಕ್ಷ್ಯತೇ= ಹೇಗೆ ಅನುಭವಿಸಲ್ಪಡುತ್ತದೆ. (ಮಾಯಾ ನಿರ್ಮಿತಜಲದಂತೆ ಸುಖವಾಗದೇ ಇರಬೇಕಲ್ಲವೇ?)

**ಅನುವಾದ –** ಈ ಜಗತ್ತಿಗೆ ಮಾಯಾಸಾದೃಶ್ಯವನ್ನು ಹೇಳಿದರೆ ಸುಖಾದಿಗಳು ಸಾಕ್ಷಿರೂಪ ಅನುಭವಕ್ಕೆ ವಿಷಯವಾಗದಿರಬೇಕಾದೀತು ಎಂಬ ಆಪತ್ತಿಯನ್ನು ತೋರಿಸುತ್ತಿದ್ದಾರೆ. ಮಾಯಾವಸ್ತುವಿನಿಂದ, ಬಾಧಜ್ಞಾನ ಬರುವ ಮೊದಲು ಸಾಕ್ಷೀಂದ್ರಿಯದಿಂದ ಸುಖಾನುಭವವು ಬರುವುದಿಲ್ಲ. ಅದರಂತೆ ಈ ಜಗತ್ತಿನಲ್ಲಿ ಇರುವ ಜಲ ಮೊದಲಾದ ವಸ್ತುಗಳಿಂದ, ಬ್ರಹ್ಮಜ್ಞಾನದಿಂದ ಜಗದ್ವಿಷಯಕ ಬಾಧಜ್ಞಾನ ಉಂಟಾಗುವ ಮೊದಲು ಸುಖಾನುಭವವು ಬರದಿರಬೇಕಾದೀತು.

**ಭಾವವಿಲಾಸಿನೀ–** ನೈವೇತ್ಯನೇನ ಮಿಥ್ಯಾಭೂತಮಪಿ ತನ್ನಾನುಭೂಯತ ಇತಿ ಸೂಚಯತಿ । ಅತ್ರ ಜಗತಿ ॥ ೧೩೦-೧೩೨ ॥

ಬಾಧದೂರತ್ವಸಾಮೀಪ್ಯಾನ್ನ ವಿಶೇಷೋಽಸ್ತಿ ಕಶ್ಚನ ।
ಬಾಧಾತ್ ಪ್ರಾಗ್ಭ್ರಾಂತಿಕಾಲೇ ಸ್ಯಾನ್ಮಿಥ್ಯಾತ್ವೇ ಸಮತೋಭಯೋಃ ॥ ೧೩೩ ॥

**ಅರ್ಥ–** ಬಾಧದೂರತ್ವ ಸಾಮೀಪ್ಯಾತ್= ಬಾಧಕಾಲದ ದೂರ ಸಾಮೀಪ್ಯಗಳಿಂದ (ಬಾಧವು ಈ ವಸ್ತುವಿಗೆ ಬಹಳ ತಡವಾಗಿ ಬರುತ್ತದೆ, ಅಥವಾ ಬಾಧವು ಈ ವಸ್ತುವಿಗೆ ಬಹಳ

ಬೇಗ ಬರುತ್ತಿದೆ ಎಂದ ಮಾತ್ರಕ್ಕೆ), ಕಶ್ಚನ ವಿಶೇಷಃ= ಕಾಣುವ ವಸ್ತುವಿನ ಸ್ವಭಾವದಲ್ಲಿ ಯಾವುದೊಂದು ವಿಶೇಷವೂ, ನ ಅಸ್ತಿ= ಇರುವುದಿಲ್ಲ (ಏಕೆಂದರೆ), ಬಾಧಾತ್ ಪ್ರಾಕ್= ಬಾಧಜ್ಞಾನಬರುವ ಮೊದಲು (ಎಂದರೆ), ಭ್ರಾಂತಿಕಾಲೇ= ಭ್ರಾಂತಿ ಇರುವ ಕಾಲದಲ್ಲಿ, ಮಿಥ್ಯಾತ್ವೇ= ಮಿಥ್ಯೆಯೆಂಬ ವಿಷಯದಲ್ಲಿ, ಉಭಯೋಃ= ಇಂದ್ರಜಾಲ ಮಾಯೆಗಳೆರಡರಲ್ಲಿಯೂ, ಸಮತಾ ಸ್ಯಾತ್= ಸುಖಾದ್ಯನುಭವವಿಲ್ಲವೆಂಬ ವಿಷಯದಲ್ಲಿ ಸಮತ್ವವು ಬರಬೇಕಾದೀತು.

**ಅನುವಾದ -** ಮಾಯೆಯಂತೆ ಜಗತ್ತೂ ಕೂಡ ಮಿಥ್ಯೆ. ಆದರೂ ಜಗತ್ತಿಗೂ ಮತ್ತು ಮಾಯೆಗೂ ಈ ರೀತಿ ವ್ಯತ್ಯಾಸವಿದೆ. ಜಗತ್ತಿಗೆ ಬಾಧವು ಉಂಟಾಗುವುದು ಬಹಳ ದೂರದಲ್ಲಿ ಇದೆ. ಮಾಯಾವಸ್ತುವಿಗೆ ಬಾಧವುಂಟಾಗುವುದು ಸಮೀಪದಲ್ಲಿ ಇದೆ. ಆದರಿಂದ ಮಾಯೆಯಲ್ಲಿ ಸುಖಾನುಭವವಿಲ್ಲ. ಜಗತ್ತಿನಲ್ಲಿ ಇದೆ ಎಂಬ ವೈಷಮ್ಯ ಕೂಡುತ್ತದೆ ಎಂದು. ಆದರೆ ಬಾಧ ಬೇಗನೆ ಅಥವಾ ತಡವಾಗಿ ಬರುವುದರಿಂದ ಕಲ್ಪಿತವಾದ ವಸ್ತು ಸ್ವಭಾವದಲ್ಲಿ ವೈಲಕ್ಷಣ್ಯ ಬರುವುದಿಲ್ಲ. ಆದರಿಂದ ಮಾಯಿಕ ಜಲಪಾನದಲ್ಲಿ ಹೇಗೋ ಹಾಗೆ ಜಗತ್ತಿನ ಜಲಪಾನದಲ್ಲಿಯೂ ಸುಖವಿರಬಾರದು. ಇದೆ. ಆದರಿಂದ ಮಾಯಾ ಸಾದೃಶ್ಯ ಜಗತ್ತಿಗೆ ಯುಕ್ತವಲ್ಲ.

**ಭಾವವಿಲಾಸಿನೀ–** ಸಮತಾ ಪಾನಜನ್ಯಸುಖಾನುಭವಾಭಾವಸಾಮ್ಯಮ್ । ಏಕತ್ರ ಸುಖಾನುಭವಃ । ಅಪರತ್ರ ಸುಖಾನುಭವಾಭಾವ ಇತಿ ವೈಷಮ್ಯಂ ನ ಸ್ಯಾತ್ । ಅಸ್ತಿ ಚ ವೈಷಮ್ಯಮ್ । ಅತಶ್ಚಮಾಯಾಸರೂಪತ್ವಂ ಜಗತೋ ನ ಯುಕ್ತಮಿತಿ ಭಾವಃ ॥ ೧೩೩ ॥

ಮಿಥ್ಯಾಭೂತವಾದ ಮಾಯಾವಸ್ತುಗಳಿಂದಲೂ ಸುಖವಾಗುವುದು ಕಂಡಿದೆ. ಆದರಿಂದ ಜಗತ್ ವಸ್ತುಮಿಥ್ಯೆಯಾದರೂ ಸುಖವಾಗುವುದು ಕೂಡುತ್ತದೆ ಎಂದು ಆಕ್ಷೇಪಿಸಿದರೆ ಅದಕ್ಕೆ ಉತ್ತರ ಹೀಗಿದೆ-

ಸತ್ಯಜ್ಞಾನೋದ್ಭವಂ ಸೌಖ್ಯಂ ಮಾಯಾಯಾಮಪಿ ದೃಶ್ಯತೇ ।
ಮಿಥ್ಯಾರ್ಥಜನಿತಂ ಸೌಖ್ಯಂ ನೈವ ತತ್ರಾಸ್ತಿ ಕಿಂಚನ ॥ ೧೩೪ ॥

**ಅರ್ಥ–** ಸತ್ಯಜ್ಞಾನೋದ್ಭವಂ= ಸತ್ಯಜ್ಞಾನದಿಂದ ಉಂಟಾದ (ಸತ್ಯವಾದ ಜ್ಞಾನ ಅಂದರೆ ಜ್ಞಾನವು ಸತ್ಯವೇ ಆಗಿರುತ್ತದೆ ಮಿಥ್ಯಾರೂಪವಾದ ಪಶು ಮತ್ತು ಪಕ್ಷಿಗಳೇ ಮೊದಲಾದ ವಿಷಯಕ ಭ್ರಮರೂಪವಾದ ದರ್ಶನ ಸತ್ಯವಾಗಿದೆ) ಸೌಖ್ಯಂ= ಸುಖಾನುಭವವು, ಮಾಯಾಯಾಂ ಅಪಿ= ಮಾಯೆಯಲ್ಲಿಯೂ, ದೃಶ್ಯತೇ= ಕಂಡುಬರುತ್ತದೆ, ಮಿಥ್ಯಾರ್ಥಜನಿತಂ= ಮಿಥ್ಯಾಭೂತವಾದ ರಸವತ್ತಾದ ಬಾಳೆಹಣ್ಣು ಮತ್ತು ನೀರಿನಿಂದ ಉಂಟಾದ, ಸೌಖ್ಯಂ= ಹಸಿವೆ ನೀರಡಿಕೆ ಶಾಂತವಾಗುವಿಕೆಯೇ ಮೊದಲಾದ ಸುಖವು (ಆನಂದಾದಿಗಳು), ತತ್ರ= ಆ ಮಾಯಾ ಸ್ಥಳದಲ್ಲಿ, ಕಿಂಚನ= ಸ್ವಲ್ಪವೂ, ನೈವ ಅಸ್ತಿ= ಇರುವುದೇ ಇಲ್ಲ.

**ಅನುವಾದ** - ಇಂದ್ರಜಾಲ ಮಾಡುವವನು ಮಾಯಾವಸ್ತುಗಳಾದ ಆನೆ ಕುದುರೆ ಮೊದಲಾದ ಪಶುಗಳನ್ನೂ ಮತ್ತು ನವಿಲು, ಗಿಳಿ ಮೊದಲಾದ ಪಕ್ಷಿಗಳನ್ನೂ ಹೂವು ನೀರು ಮೊದಲಾದ ಇಲ್ಲದ ವಸ್ತುಗಳನ್ನು ಇದ್ದಂತೇ ತೋರಿಸುತ್ತಾನೆ. ಅದರಿಂದ ಸುಖ ಉಂಟಾಗುತ್ತದೆ. ಆದರೆ ಆ ಮಾಯೆಯಲ್ಲಿ ವಸ್ತುಗಳು ಸುಳ್ಳಾದರೂ ಅವುಗಳ ಜ್ಞಾನವು ಸತ್ಯವಾಗಿದೆ. ಆದ್ದರಿಂದ ಸತ್ಯಭೂತವಾದ ಜ್ಞಾನದಿಂದಲೇ ಸುಖ ವಾಗುತ್ತದೆ ಹೊರತು ಮಿಥ್ಯಾಭೂತವಸ್ತುಗಳಿಂದಲ್ಲ. ಜಗತ್ತಿನಲ್ಲಿ ಮಿಥ್ಯಾ ಭೂತವಾದ ವಸ್ತುಗಳಿಂದ ಸುಖ ಉಂಟಾಗುವುದು ಹೇಗೆ?

**ಭಾವವಿಲಾಸಿನೀ**– ಸತ್ಯಜ್ಞಾನೋದ್ಭವಂ ಸತ್ಯಂ ಯಜ್ಜ್ಞಾನಂ ಮಿಥ್ಯಾಭೂತ-ಪಶುಪಕ್ಷ್ಯಾದಿವಿಷಯಭ್ರಮರೂಪದರ್ಶನಮ್ । ಅರ್ಥಸ್ಯ ಮಿಥ್ಯಾತ್ವೇಽಪಿ ದರ್ಶನಮಾತ್ರಸ್ಯ ತತ್ರಾಪಿ ಸತ್ಯತ್ವಾತ್ । ಮಿಥ್ಯಾರ್ಥಜನಿತಂ ಮಿಥ್ಯಾಭೂತಕದಲೀಪಕ್ವಜಲಾದಿನಾ ಜನಿತಂ ಸೌಖ್ಯಂ ಕ್ಷುನ್ನಿವೃತ್ತಿತೃಣ್ಣಿವೃತ್ಯಾದಿ ಸೌಖ್ಯಮ್ । ತತ್ರ ಮಾಯಾಸ್ಥಲೇ । ತತ್ರೇತಿ ವದತಾ ಜಗತಿ ತು ಭ್ರಮಕಾಲ ಏವ ತದಸ್ತೀತಿ ಸೂಚಿತಮ್ ॥ ೧೩೪ ॥

**ಅತೋ ಮಾಯಾವಿರೂಪತ್ವಾಜ್ಜಗತ್ ಸತ್ಯಮಭೂದ್ ಬಲಾತ್ ॥ ೧೩೫ ॥**

**ಅರ್ಥ**– ಅತಃ= ಆದ್ದರಿಂದ (ವಿಷಯದಿಂದ ಉಂಟಾದ ಸುಖ ಇರುವುದರಿಂದ) ಮಾಯಾವಿರೂಪತ್ವಾತ್= ಮಾಯಾವಸ್ತುವಿನ ವಿರುದ್ಧ ಸ್ವಭಾವವುಳ್ಳದ್ದಾದ್ದರಿಂದ, ಜಗತ್ಸತ್ಯಂ= ಜಗತ್ತು ಸತ್ಯವೆಂದೇ, ಬಲಾತ್= ಅನ್ಯಮಾರ್ಗವಿಲ್ಲದೇ (ಯುಕ್ತಿಬಲದಿಂದ) ಅಭೂತ್= ಸಿದ್ಧವಾಯಿತು.

**ಅನುವಾದ** - ಜಗತ್ತಿಗೆ ಮಾಯಾಸಾರೂಪ್ಯವು ಯುಕ್ತವಾಗುವುದಿಲ್ಲ. ಏಕೆಂದರೆ ಜಗತ್ತಿನಲ್ಲಿ ವಿಷಯ ಜನ್ಯಸುಖ ಇದೆ. ಮಾಯೆಯಲ್ಲಿ ವಿಷಯಜನ್ಯ ಸುಖವು ಇಲ್ಲದೆ ಇರುವುದರಿಂದ ವೈರೂಪ್ಯವು ಜಗತ್ತಿಗೆ ಸಿದ್ಧವಾಯಿತು. ಇದರಿಂದ ಬೇರೆ ಮಾರ್ಗ ಇಲ್ಲದೆ ಯುಕ್ತಿಯ ಬಲದಿಂದ ಜಗತ್ತಿಗೆ ಸತ್ಯತ್ವವೇ ಸಿದ್ಧವಾಯಿತು.

**ಭಾವವಿಲಾಸಿನೀ**– ಅತಃ ವಿಷಯಜನ್ಯಸುಖಸದ್ಭಾವೇನ ಮಾಯಾವೈರೂಪ್ಯಾತ್ ॥ ೧೩೫ ॥

**ಸತ್ಯಸ್ಯ ಸುಖಹೇತುತ್ವಂ ಮಿಥ್ಯಾಭೂತಸ್ಯ ನೇತಿ ಚ ।**
**ಅನ್ವಯವ್ಯತಿರೇಕಾಭ್ಯಾಂ ಯತಃ ಸಿದ್ಧಮತೋಽಪಿ ಚ ॥ ೧೩೬ ॥**

**ಅರ್ಥ**– ಸತ್ಯಸ್ಯ= ಸತ್ಯ ವಸ್ತುವಿಗೆ, ಸುಖಹೇತುತ್ವಂ= ಸುಖಕಾರಣವಾಗುವಿಕೆಯು, ಮಿಥ್ಯಾಭೂತಸ್ಯ= ಅಸತ್ ಆದ ವಸ್ತುವಿಗೆ, ನೇತಿ ಚ= ಇಲ್ಲವೆಂದೂ (ಸುಖಕಾರಣತ್ವವು ಇಲ್ಲವೆಂದೂ), ಯತಃ ಅನ್ವಯವ್ಯತಿರೇಕಾಭ್ಯಾಂ= ಅನ್ವಯ ವ್ಯತಿರೇಕ ವ್ಯಾಪ್ತಿಗಳಿಂದ, ಸಿದ್ಧಂ= ಸಿದ್ಧವಾಗಿದೆಯೋ, ಅತೋಪಿ ಚ= ಆ ಕಾರಣದಿಂದಲೂ, ಜಗತ್= ಜಗತ್ತು, ಬಲಾತ್= ಯುಕ್ತಿಬಲದಿಂದ, ಸತ್ಯಂ ಅಭೂತ್= ಸತ್ಯವಾಗಿದೆ.

**ಅನುವಾದ** - ಈ ಜಗತ್ತಿನಲ್ಲಿ ಸತ್ಯಭೂತವಾದ ವಸ್ತುವಿಗೆ ಸುಖಹೇತುತ್ವವು ಭ್ರಮ ಸ್ಥಳದಲ್ಲಿಯೂ ಕಂಡಿದೆ. ಯಾವ ವಸ್ತು (ಅಸತ್) ಸುಳ್ಳಾಗಿದೆಯೋ ಆ ವಸ್ತುವಿಗೆ ಸುಖಕಾರಣತ್ವವು ಎಲ್ಲಿಯೂ ಕಂಡಿಲ್ಲ. ಈ ವಿಧವಾದ (ಅನ್ವಯ ವ್ಯತಿರೇಕ) ಯುಕ್ತಿಬಲದಿಂದಲೂ ಈ ಜಗತ್ತು ಸತ್ಯವೆಂದು ಸಿದ್ಧವಾಗಿದೆ. ಈ ಶ್ಲೋಕದಲ್ಲಿ ಇರುವ 'ಅತೋಪಿ ಚ' ಎಂಬ ಪದವು ಹಿಂದಿನ ಶ್ಲೋಕದಲ್ಲಿ ಇರುವ 'ಜಗತ್ ಸತ್ಯಮಭೂತ್ ಬಲಾತ್' ಎಂಬ ವಾಕ್ಯಕ್ಕೆ ಅನ್ವಯಿಸುತ್ತದೆ. ಈ ಎರಡು ಶ್ಲೋಕದಿಂದ ಎರಡು ಯುಕ್ತಿಗಳನ್ನು ತೋರಿಸಿ ಜಗತ್ತಿಗೆ ಸತ್ಯತ್ವವು ಸಿದ್ಧವಾಗುತ್ತದೆಂದು ತೋರಿಸುತ್ತಿದ್ದಾರೆ. ಒಂದು ಮಾಯಾವಿರೂಪತ್ವಾತ್, ಎರಡನೆಯದು ಸುಖಹೇತುತ್ವಾತ್ ಎಂದು.

**ಇತ್ಥಂ ಸತ್ಯಸ್ಯ ಜಗತಃ ಸೃಷ್ಟೇಃ ಮಿಥ್ಯಾತ್ವಮಾಗ್ರಹಾತ್ ।**
**ವಿರುದ್ಧಂ ಕಲ್ಪಿತಂ ಯಸ್ಮಾತ್ ತಸ್ಮಾತ್ ಸೃಷ್ಟಿರ್ವಿಕಲ್ಪಿತಾ ॥ ೧೩೭ ॥**

**ಅರ್ಥ**– ಇತ್ಥಂ= ಹೀಗೆ ಸಿದ್ಧವಾಗಿರುವ (ಮಾಯಾರೂಪತ್ವ ಮತ್ತು ಅನ್ವಯ ವ್ಯತಿರೇಕಾದಿಗಳಿಂದ ಸಿದ್ಧವಾಗಿರುವ) ಸತ್ಯಸ್ಯ ಜಗತಃ= ಸತ್ಯಭೂತವಾದ ಜಗತ್ತಿನ, ಸೃಷ್ಟೇಃ= ಸೃಷ್ಟಿಯ, ಮಿಥ್ಯಾತ್ವಂ= ಮಿಥ್ಯಾತ್ವವು, ಅಗ್ರಹಾತ್= ದುರಾಗ್ರಹದಿಂದ, ಯಸ್ಮಾತ್= ಯಾವ ಕಾರಣದಿಂದ, ವಿರುದ್ಧಂ= ಸತ್ಯಕ್ಕೆ ವಿರುದ್ಧವಾಗಿ, ಕಲ್ಪಿತಂ= ಕಲ್ಪಿತವಾಗಿದೆಯೋ, ತಸ್ಮಾತ್= ಆ ಕಾರಣದಿಂದ, ಸೃಷ್ಟಿರ್ವಿಕಲ್ಪಿತಾ= ಸೃಷ್ಟಿಯು ವಿಕಲ್ಪಿತವಾಗಿದೆ (ಎಂದು ಉಪನಿಷತ್ತು ಹೇಳುತ್ತದೆ).

**ಅನುವಾದ** - ಮಾಂಡೂಕೋಪನಿಷತ್ತಿನ ಪ್ರಥಮ ಖಂಡದ ಕೊನೆಯಲ್ಲಿ ಬರುವ ವಿಭೂತಿ ಎಂಬ ಶ್ಲೋಕದಲ್ಲಿ ಇರುವ ಸೃಷ್ಟಿರನ್ಯೈರ್ವಿಕಲ್ಪಿತಾ ಎಂಬ ಪದದ ವ್ಯಾಖ್ಯಾನವನ್ನು ಈ ಶ್ಲೋಕದಲ್ಲಿ ತೋರಿಸುತ್ತಿದ್ದಾರೆ. ಮಾಯಾವೈರೂಪ್ಯ ಮತ್ತು ಸುಖಹೇತುತ್ವ ಯುಕ್ತಿಗಳಿಂದ ಸಿದ್ಧವಾದ ಈ ಜಗತ್ತಿನ ಸೃಷ್ಟಿಯಲ್ಲಿ ನೀವು (ಮಾಯಾವಾದಿಗಳು) ದುರಾಗ್ರಹದಿಂದ ಸತ್ಯಕ್ಕೆ ವಿರುದ್ಧವಾಗಿ ಮಿಥ್ಯಾತ್ವವನ್ನು ಕಲ್ಪನೆ ಮಾಡುತ್ತಿದ್ದೀರಿ. ಆದ್ದರಿಂದ ಉಪನಿಷತ್ತು ಸೃಷ್ಟಿರನ್ಯೈರ್ವಿಕಲ್ಪಿತಾ ಎಂದು ಹೇಳಿದೆ. ಈ ರೀತಿಯಾಗಿ ಉಪನಿಷತ್ತಿನ ಮಾತಿನಿಂದಲೇ ಮಿಥ್ಯಾತ್ವವು ಶ್ರುತಿಸಮ್ಮತವಲ್ಲವೆಂದು ಖಂಡಿಸುತ್ತಿದ್ದಾರೆ.

**ಅತಃ ಸ್ವೋಕ್ತವಿರುದ್ಧೋಕ್ತ್ಯಾ ನ ಮತ್ಪಕ್ಷೋ ಭವೇದಯಮ್ ।**
**ಅನ್ಯೇಷಾಮೇವ ಪಕ್ಷೋಽಸೌ ನಾಹಂ ವ್ಯಾಹತಭಾಷಿಣೀ ॥ ೧೩೮ ॥**

**ಅರ್ಥ**– ಅತಃ= ಆದ್ದರಿಂದ (ಸುಖಕಾರಣತ್ವ ಇರುವುದರಿಂದ) ಸ್ವೋಕ್ತ ವಿರುದ್ಧೋಕ್ತ್ಯಾ= ಶ್ರುತಿಯು ತನ್ನ ಮಾತಿಗೆ ವಿರುದ್ಧವಾಗಿ ಹೇಳಿರುವುದರಿಂದ (ಸ್ವಪ್ನಮಾಯಾಸ್ವರೂಪ ಎಂದು

ಹೇಳಿ ದೇವಸ್ಯೈಷಸ್ವಭಾವೋಽಯಂ ಮತ್ತು ಇಚ್ಛಾಮಾತ್ರಂ ಪ್ರಭೋಃ ಸೃಷ್ಟಿಃ ಎಂದೂ ಅದಕ್ಕೆ ವಿರುದ್ಧವಾಗಿ ಹೇಳಿರುವುದರಿಂದ), ಅಯಂ= ಈ ಮತವು (ಸರ್ವಮಿಥ್ಯಾತ್ವವು), ಮತ್ಪಕ್ಷಃ= ನನ್ನ ಸಿದ್ಧಾಂತವು, ನ ಭವೇತ್= ಆಗಿರುವುದಿಲ್ಲ, ಅಸೌ= ಇದು, ಅನ್ಯೇಷಾಮೇವ ಪಕ್ಷಃ= ಬೇರೆಯವರ (ಅನ್ಯರ) ಪಕ್ಷವೇ, ಭವೇತ್= ಆಗಿರುತ್ತದೆ, ಅಹಂ= ನಾನು (ಶ್ರುತಿಯು), ವ್ಯಾಹತಭಾಷಿಣೀ= ವಿರುದ್ಧವನ್ನು ಹೇಳುವವಳು, ನ= ಆಗಿಲ್ಲ.

**ಅನುವಾದ -** ಶ್ರುತಿಯು ಹೇಳುತ್ತಿದೆ, ನಾನು ವಿರುದ್ಧವಾದ ಮಾತನ್ನು ಹೇಳುವವಳು ಅಲ್ಲ. ಈ ವಿರುದ್ಧವಾದ ಮಾತನ್ನು ಹೇಳುವ ಪಕ್ಷವೂ ನನ್ನದಲ್ಲ. ಇದು ಬೇರೆಯವರ ಪೆಕ್ಷವೇ ಆಗಿದೆ. ಅಂದರೆ ಶ್ರುತಿಯು 'ಇಚ್ಛಾಮಾತ್ರಂ ಪ್ರಭೋಃ ಸೃಷ್ಟಿಃ' ಎಂದು ಮತ್ತು 'ಸ್ವಪ್ನ ಮಾಯಾಸರೂಪಾ' ಎಂದು ವಿರುದ್ಧವಾಗಿ ಹೇಳಿದ ಹಾಗೆ ತೋರುತ್ತದೆ. ಇದು ಸರಿಯಲ್ಲ ಎಂದು ಈ ಹಿಂದೆ ನಿರೂಪಣೆ ಮಾಡಿಯಾಗಿದೆ. ಆದರೆ ಶ್ರುತಿಯು ಒಂದರಲ್ಲಿ ಸತ್ಯ ಎಂದೂ ಇನ್ನೊಂದರಲ್ಲಿ ಮಿಥ್ಯಾ ಎಂದು ವ್ಯಾಹತವಾಗಿ ಹೇಳುತ್ತಿಲ್ಲ. ಆದ್ದರಿಂದ ಸರ್ವಮಿಥ್ಯಾತ್ವ ಪಕ್ಷವು ನನ್ನದಲ್ಲ.

ತಸ್ಮಾನ್ನಿದರ್ಶನಾಭಾವಾತ್ ಸರ್ವಮಿಥ್ಯಾತ್ವವಾದಿನಃ ।
ದುರದೃಷ್ಟಾನುಸಾರಾಸ್ತೇ ನೈವ ದೃಷ್ಟಾನುಸಾರಿಣಃ ।
ಪದಾನಾಂ ಶೋಧನೇತ್ವೇವಂ ಶ್ರುತೇರ್ಭಾವೋಽವಸೀಯತೇ ॥ ೧೩೯ ॥

**ಅರ್ಥ–** ತಸ್ಮಾತ್= ಆದ್ದರಿಂದ, ನಿದರ್ಶನಾಭಾವಾತ್= ದೃಷ್ಟಾಂತ ಇಲ್ಲದಿರುವುದರಿಂದ, ಸರ್ವಮಿಥ್ಯಾತ್ವವಾದಿನಃ= ಎಲ್ಲವೂ ಮಿಥ್ಯಾ ಎಂದು ವಾದಿಸುವ, ತೇ= ಆ ಮಾಯಾ ವಾದಿಗಳು, ದುರದೃಷ್ಟಾನುಸಾರಾಃ= ದುಷ್ಟವಾದ ಅದೃಷ್ಟವನ್ನು ಅನುಸರಿಸುವವರು, ಪಾಪ ಪ್ರಯುಕ್ತವಾಗಿ ಅಸಂಬದ್ಧವಾಗಿ ಮಾತನಾಡುತ್ತಾರೆ, ನೈವದೃಷ್ಟಾನುಸಾರಿಣಃ= ದೃಷ್ಟವಾದದ್ದನ್ನು (ದೃಷ್ಟಾಂತವನ್ನು) ಅನುಸರಿಸುವವರಲ್ಲ (ಸ್ವಪ್ನಮಾಯಾದಿ ದೃಷ್ಟಾಂತವನ್ನು ಸರಿಯಾಗಿ ವಿವೇಚಿಸುವವರಲ್ಲ), ಪದಾನಾಂ= (ಶ್ರುತಿಯು ಪ್ರಯೋಗಿಸಿರುವ) ಪದಗಳ, ಶೋಧನೇ ತು = ಉಪಕ್ರಮಾದಿಗಳಿಂದ ಅರ್ಥವಿಮರ್ಶಿಸಿದಾಗ, ಶ್ರುತೌ= ಶ್ರುತಿಯಲ್ಲಿ, ಏವಂ ಭಾವಃ= ಈ ವಿಧವಾದ ತಾತ್ಪರ್ಯವು, ಅವಸೀಯತೇ= ನಿಶ್ಚಯವಾಗುತ್ತದೆ (ತಿಳಿದು ಬರುತ್ತದೆ).

**ಅನುವಾದ -** ಯಾರು ಸರ್ವಮಿಥ್ಯಾತ್ವವನ್ನು ಹೇಳುವರೋ ಅವರು ತಮ್ಮ ದುರದೃಷ್ಟವನ್ನು ಅನುಸರಿಸಿ ಹೇಳುತ್ತಿದ್ದಾರೆ. ದೃಷ್ಟಾಂತವನ್ನು ಅನುಸರಿಸಿ ವಿಚಾರಿಸುತ್ತಿಲ್ಲ. ಸ್ವಪ್ನಮಾಯೆಗಳು ಸರ್ವ ಮಿಥ್ಯಾತ್ವವನ್ನು ತೋರಿಸುವ ದೃಷ್ಟಾಂತವು ಅಲ್ಲ ಎಂದರ್ಥ. ಈ ಅರ್ಥವು ಶ್ರುತಿಯಲ್ಲಿ ಇರುವ ಪದಗಳ ಅರ್ಥವನ್ನು ಉಪ ಕ್ರಮಾದಿ ಲಿಂಗಗಳಿಂದ ವಿಚಾರಿಸಿದಾಗ ನಿಶ್ಚಯವಾಗುತ್ತದೆ (ತಿಳಿದುಬರುತ್ತದೆ).

**ಭಾವವಿಲಾಸಿನೀ–** ಸತ್ಯಸ್ಯ ಕೌತುಕದರ್ಶನಸ್ಯ । ಮಿಥ್ಯಾಭೂತಸ್ಯ ಮಾಯಿಕಜಲಾದೇಃ । ಸಿದ್ಧಂ ಮಾಯಿಕಸ್ಯಷ್ಟಾವೇವ ದೃಷ್ಟಮ್ । ಕೌತುಕದರ್ಶನಜನ್ಯಸುಖಂ ಜ್ಞಾನೈಕಕಾರ್ಯತ್ವಾತ್ ಜ್ಞಾನಸ್ಯ ಚ ಸತ್ಯತ್ವಾತ್ತತ್ರಾಪ್ಯಸ್ತಿ । ಜಲಾದ್ಯರ್ಥಕಾರ್ಯಸುಖಂ ತು ಅರ್ಥಸ್ಯ ಮಿಥ್ಯಾತ್ವಾನ್ನಿಯಮೇನ ಭ್ರಮಮಾತ್ರೇ ನಾಸ್ತಿ । ತಸ್ಮಾದನ್ವಯವ್ಯತಿರೇಕಾಭ್ಯಾಂ ಸುಖಹೇತುತ್ವಂ ಸತ್ಯಸ್ಯೈವೇತಿ ಭಾವಃ । ಅತಃಸತ್ಯಸ್ಯೈವ ಸುಖಹೇತುತ್ವಾತ್ ॥ ೧೩೬-೧೩೯ ॥

ಅತಃ ಸರ್ವಂ ಜಗದಿದಂ ಸತ್ಯಸಂಕಲ್ಪತಃ ಪ್ರಭೋಃ ।
ಜಾಯಮಾನಂ ಸದಾ ಸತ್ಯಮಿತ್ಯಾಹೋತ್ತರವಾಗಿಯಮ್ ॥ ೧೪೦ ॥

**ಅರ್ಥ–** ಅತಃ= ಮಾಯಾಸೃಷ್ಟಿ ಮತವು (ವಾದವು), ವ್ಯಾಹತವಾದ್ದರಿಂದ, ಸರ್ವಂ= ಎಲ್ಲ, ಇದಂ ಜಗತ್= ಈ ಜಗತ್ತು, ಪ್ರಭೋಃ= ಸ್ವಾಮಿಯಾದ, ಸತ್ಯಸಂಕಲ್ಪತಃ= ಸತ್ಯವಾದ ಸಂಕಲ್ಪದಿಂದಲೇ (ಇಚ್ಛಾಮಾತ್ರದಿಂದ), ಜಾಯಮಾನಂ= ಹುಟ್ಟುವುದಾಗಿ, ಸದಾ= ಯಾವಾಗಲೂ (ಸರ್ವದಾ), ಸತ್ಯಂ= ಸತ್ಯವೇ, ಇತಿ= ಎಂದು, ಇಯಂ ಉತ್ತರ ವಾಕ್= ಈ ಮುಂದಿನ ಮಾತು (ಇಚ್ಛಾಮಾತ್ರಂ ಪ್ರಭೋಃ ಸೃಷ್ಟಿಃ ಎಂಬ ಮುಂದಿನ ವಾಕ್ಯವು), ಆಹ= ಹೇಳುತ್ತದೆ.

**ಅನುವಾದ** - ಸರ್ವಮಿಥ್ಯಾತ್ವ ವಾದವು ವ್ಯಾಹತವಾದ್ದರಿಂದ ಈ ಎಲ್ಲ ಜಗತ್ತು ಸ್ವಾಮಿಯ ಸತ್ಯ ಸಂಕಲ್ಪದಿಂದ ಹುಟ್ಟುತ್ತ ಸದಾ ಸತ್ಯವೇ ಆಗಿರುತ್ತದೆ ಎಂದು ಮುಂದೆ ಬರುವ ಅಂದರೆ (ಸ್ವಪ್ನ ಮಾಯಾಸರೂಪಾ ಎಂಬ ಶ್ರುತಿಯ ಮುಂದೆ ಇರುವ) ಇಚ್ಛಾಮಾತ್ರಂ ಪ್ರಭೋಃ ಸೃಷ್ಟಿರಿತಿ ಸೃಷ್ಟೌವಿನಿಶ್ಚಿತಾಃ ಶ್ರುತಿಯು ಹೇಳುತ್ತದೆ.

**ಭಾವವಿಲಾಸಿನೀ–** ಉತ್ತರವಾಕ್ ಇಚ್ಛಾಮಾತ್ರಮಿತಿ ವಾಕ್ । ಅತಃ ಮಾಯಾಸೃಷ್ಟಿಮತಸ್ಯ ವ್ಯಾಹತತ್ವಾತ್। ಪ್ರಭೋಃ ಸತ್ಯಸಂಕಲ್ಪತಃ ಜಾಯಮಾನಮಿದಂ ಸರ್ವಂ ಸದಾ ಸತ್ಯಮಿತ್ಯಾಹೇತಿ ಯೋಜನಾ ॥ ೧೪೦॥

ಸ್ವಪ್ನಮಾಯಾಸರೂಪತ್ವೇ ತ್ವೀಷನ್ಮಿಥ್ಯಾ ಜಗದ್ ಭವೇತ್ ।
ಸರ್ವಮಿಥ್ಯಾತ್ವವಾದೋಽಯಂ ನ ಶ್ರೌತೋ ನಾಪಿ ಯೌಕ್ತಿಕಃ ।
ಇತ್ಯಾಹ ಪೂರ್ವವಾಕ್ಯೇ ಸಾ ಶಬ್ದಶಬ್ದಾರ್ಥವೇದಿನಾಂ ॥ ೧೪೧ ॥

**ಅರ್ಥ–** ಜಗತ್= ಜಗತ್ತು, ಸ್ವಪ್ನಮಾಯಾ ಸರೂಪತ್ವೇತು= ಸ್ವಪ್ನಮಾಯಾ ಸದೃಶವಾದಲ್ಲಿ, ಈಷನ್ಮಿಥ್ಯಾ= ಅಲ್ಪಸಾದೃಶ್ಯದಿಂದ ಸ್ವಲ್ಪ ಮಿಥ್ಯಾ (ಒಂದು ಅಂಶದಲ್ಲಿ ಮಿಥ್ಯಾ), ಭವೇತ್= ಆಗಬಹುದು, ಅಯಂ= ಈ, ಸರ್ವಮಿಥ್ಯಾತ್ವವಾದಃ= ಎಲ್ಲವೂ ಮಿಥ್ಯಾ ಎಂಬ ವಾದವು, ಶ್ರೌತೋ ನ= ಶ್ರುತ್ಯುಕ್ತವೂ ಅಲ್ಲ, ಯೌಕ್ತಿಕಃ ಅಪಿ ನ= ಯುಕ್ತಿ ಸಮ್ಮತವೂ ಆಗಿರುವುದಿಲ್ಲ. ಇತಿ= ಹೀಗೆ, ಸಾ ಶ್ರುತಿಯು, ಶಬ್ದಶಬ್ದಾರ್ಥವೇದಿತಾಂ= ಶಬ್ದ

ಮತ್ತು ಶಬ್ದದ ಅರ್ಥವನ್ನು ತಿಳಿದವರಿಗೆ, ಪೂರ್ವವಾಕ್ಯೇ= ಸ್ವಪ್ನಮಾಯಾ ಸರೂಪ ಎಂಬ ಮೊದಲಿನ ವಾಕ್ಯದಲ್ಲಿ, ಆಹ= ಹೇಳಿದೆ.

**ಅನುವಾದ -** ಸ್ವಪ್ನಮಾಯಾಸರೂಪಾ ಎಂಬ ದೃಷ್ಟಾಂತವನ್ನು ಅವಲಂಬಿಸಿ ಈ ಜಗತ್ತಿಗೆ ಸರ್ವಮಿಥ್ಯಾತ್ವವನ್ನು ಹೇಳುವುದು ಸರಿಯಾದುದಲ್ಲ. ದೃಷ್ಟಾಂತಾನು ಸಾರವಾಗಿ ಜಗತ್ತಿನ ಕೆಲವು ಅಂಶಗಳು ಮಿಥ್ಯಾ ಎಂದು ಹೇಳಬಹುದು. ಜಗತ್ತಿನ ಎಲ್ಲ ಅಂಶಗಳೂ ಮಿಥ್ಯಾ ಎಂದು ಹೇಳಲು ಸಾಧ್ಯವಾಗುವುದಿಲ್ಲ. ಆದ್ದರಿಂದ ಈ ಸರ್ವಮಿಥ್ಯಾತ್ವವು ದೃಷ್ಟಾಂತದಿಂದ ಸಿದ್ಧವಾಗುವುದಿಲ್ಲ. ಹೀಗಾಗಿ ಶ್ರುತಿಯಿಂದ ಸಿದ್ಧವಾದುದಲ್ಲ ಮತ್ತು ಯುಕ್ತಿಯಿಂದಲೂ ಸಿದ್ಧವಾದುದಲ್ಲ ಎಂದು ಶ್ರುತಿಯು ಮುಂದಿನ ವಾಕ್ಯದಲ್ಲಿ (ಸ್ವಪ್ನಮಾಯಾಸರೂಪಾ.....ಅನ್ಯೈರ್ವಿಕಲ್ಪಿತಾ ಎಂಬ ವಾಕ್ಯದಲ್ಲಿ) ಶಬ್ದ, ಶಬ್ದಾರ್ಥವನ್ನು ತಿಳಿದವರಿಗೆ ಈ ವಿಷಯವನ್ನು ಸ್ಪಷ್ಟವಾಗಿ ತಿಳಿಸುತ್ತಿದೆ.

**ಭಾವವಿಲಾಸಿನೀ–** ಪೂರ್ವವಾಕ್ಯೇ ಸ್ವಪ್ನಮಾಯಾಸರೂಪೇತಿ ವಾಕ್ಯೇ ॥ ೧೪೧ ॥

ವಾಗೀಶಯೋಗ್ಯಾ ವಾಗೇಷಾ ಯದನೇಕೈರ್ಮುಖೈಃ ಸ್ವಕೈಃ ।
ಪ್ರತಿವಕ್ತಿ ಪರಾನ್ ಸರ್ವಾನ್ ವಕ್ತಿ ವಿಷ್ಣೋರ್ಗುಣಾನಪಿ ॥ ೧೪೨ ॥

**ಅರ್ಥ–** ಏಷಾವಾಕ್= ಈ ಶ್ರುತಿವಾಕ್ಯವು, ವಾಗೀಶಯೋಗ್ಯಾ= ವಾಗಭಿಮಾನಿ ಸರಸ್ವತೀ ಪತಿಯಾದ ಚತುರ್ಮುಖನಿಗೆ ಯೋಗ್ಯವಾದುದು, ಯತ್= ಏಕೆಂದರೆ, ಸ್ವಕೈಃ= ತನ್ನ ಅನೇಕೈಃ ಮುಖೈಃ= ಬಹು ಮುಖಗಳಿಂದ, ಪರಾನ್ ಸರ್ವತಃ= ಅನ್ಯ ಪಕ್ಷಗಳೆಲ್ಲವನ್ನೂ, ಪ್ರತಿವಕ್ತಿ= ನಿರಾಕರಿಸುತ್ತದೆ, ಅಪಿ= ಮತ್ತು, ವಿಷ್ಣೋಃ= ವಿಷ್ಣುವಿನ ಗುಣಾನ್= ಗುಣಗಳನ್ನು, ವಕ್ತಿ= ಹೇಳುತ್ತಿದೆ (ಅನೇಕ ತಾತ್ಪರ್ಯಗಳಿಂದ ಕೂಡಿದ ವೇದಗಳ ಶ್ರುತಿವಚನಗಳ) ಅರ್ಥವನ್ನು ಚತುರ್ಮುಖನೇ ಹೇಳಲು ಶಕ್ತನು. ಬೇರೆಯವರಿಗೆ (ಅನ್ಯರಿಗೆ) ಸಾಮರ್ಥ್ಯವಿಲ್ಲ.

**ಅನುವಾದ -** ವೇದಗಳಿಗೆ ಅನೇಕ ಅರ್ಥವನ್ನು ಅನೇಕ ಮುಖಗಳಿಂದ ಹೇಳುವ ಸರಸ್ವತೀ ಪತಿಯಾದ ಚತುರ್ಮುಖ ಬ್ರಹ್ಮದೇವರಿಗೆ ಈ ಶ್ರುತ್ಯರ್ಥವನ್ನು ಹೇಳುವ ಯೋಗ್ಯತೆ ಇದೆ. ಏಕೆಂದರೆ ಈ ಶ್ರುತಿಯು ಅನೇಕ ಮುಖಗಳಿಂದ ಅನೇಕ ಅರ್ಥವನ್ನು ಹೇಳುತ್ತಾ ಬೇರೆ ಬೇರೆ ಪಕ್ಷಗಳನ್ನು ನಿರಾಕರಿಸುತ್ತದೆ ಮತ್ತು ವಿಷ್ಣುವಿನ ಗುಣಗಳನ್ನು ಹೇಳುತ್ತದೆ.

ಏವಂ ಚ ಸರ್ವಮಿಥ್ಯಾತ್ವವಾದಸ್ತೇ ನೈವ ಶೋಭತೇ ।
ವಿಶ್ವಸತ್ಯತ್ವವಾದೋ ನಃ ಶ್ರುತ್ಯುಕ್ತಃ ಶೋಭತೇತರಾಮ್ ॥ ೧೪೩ ॥

**ಅರ್ಥ–** ಏವಂ ಚ= ಹೀಗೆ, ತೇ= ನಿನಗೆ, ಸರ್ವಮಿಥ್ಯಾತ್ವವಾದಃ= ಎಲ್ಲವೂ ಮಿಥ್ಯಾ ಎಂದು ಹೇಳುವ ವಾದವು, ನೈವಶೋಭತೇ= ಶೋಭಿಸುವುದಿಲ್ಲ (ಅಮಂಗಲಕರವಾಗಿದೆ), ನಃ= ನಮ್ಮ, ವಿಶ್ವಸತ್ಯತ್ವವಾದಃ= ಜಗತ್ತು ಸತ್ಯ ಎಂಬ ವಾದವು, ಶ್ರುತ್ಯುಕ್ತಃ= ಶ್ರುತಿಯಿಂದಲೇ ಪ್ರತಿಪಾದಿತವಾಗಿ, ಶೋಭತೇತರಾಂ= ಅತಿಶಯವಾಗಿ ಶೋಭಿಸುತ್ತದೆ (ಬಹು ಮಂಗಲಪ್ರದವಾಗಿದೆ).

**ಅನುವಾದ** - ಮಾಯಾವಾದಿ ನಿನಗೆ ನೀನು ಹೇಳುವ ಸರ್ವಮಿಥ್ಯಾತ್ವವಾದವು ಶೋಭಿಸುವುದಿಲ್ಲ ಮಂಗಲವನ್ನು ತಂದುಕೊಡುವುದಿಲ್ಲ. ನಾನು ಹೇಳುವ ವಿಶ್ವಸತ್ಯತ್ವವು ಶ್ರುತ್ಯುಕ್ತವಾದುದು, ಮಂಗಲವನ್ನೇ ತಂದುಕೊಡುತ್ತದೆ.

**ಭಾವವಿಲಾಸಿನೀ–** ವಾಗೀಶಯೋಗ್ಯಾ ಚತುರ್ಮುಖಯೋಗ್ಯಾ । ನಾನಾಭಾವಭರಿತ-ಶ್ರುತಿವಚನಾನಾಮರ್ಥಂ ಚತುರ್ಮುಖ ಏವ ವದೇತ್ ನಾಪರ ಇತಿ ಭಾವಃ ॥೧೪೨, ೧೪೩॥

ಸ್ವಪ್ನಮಾಯಾದಿದೃಷ್ಟಾಂತೈರ್ಜಗನ್ಮಿಥ್ಯಾತ್ವಸಾಧನಂ ।
ಉಕ್ತಶ್ರುತ್ಯಾ ಬಾಧಿತತ್ವಾನ್ನೈವ ಶಕ್ಯಂ ಪರಸ್ಯ ತತ್ ॥ ೧೪೪ ॥

**ಅರ್ಥ–** ತತ್= ಮಿಥ್ಯಾತ್ವವು ಶ್ರುತಿಯಲ್ಲಿ ನಿಂದಿತವಾದ್ದರಿಂದ, ಸ್ವಪ್ನಮಾಯಾದಿ ದೃಷ್ಟಾಂತೈಃ= ಸ್ವಪ್ನಮಾಯಾದಿ ದೃಷ್ಟಾಂತಗಳಿಂದ, ಜಗನ್ಮಿಥ್ಯಾತ್ವಸಾಧನಂ= (ಅನುಮಾನದಿಂದ) ಜಗನ್ಮಿಥ್ಯಾತ್ವವನ್ನು ಸಾಧಿಸುವುದು, ಉಕ್ತಶ್ರುತ್ಯಾ ಬಾಧಿತತ್ವಾತ್= ದೇವಸ್ಯೈಷ ಸ್ವಭಾವೋಯಂ, ಇಚ್ಛಾಮಾತ್ರಂ ಪಭೋಃ ಸೃಷ್ಟಿಃ ಇತ್ಯಾದಿ ಶ್ರುತಿಗಳಿಂದ ಬಾಧಿತವಾಗುವುದರಿಂದಲೂ, ಪರಸ್ಯ ಏವ= ಪರನಿಗೆ (ಮಿಥ್ಯಾವಾದಿಗೆ), ನ ಶಕ್ಯಂ= ಶಕ್ಯವಿಲ್ಲ.

**ಅನುವಾದ** - ಸ್ವಪ್ನಮಾಯಾದಿ ದೃಷ್ಟಾಂತವಿಟ್ಟುಕೊಂಡು ಅನುಮಾನದಿಂದ ಜಗನ್ಮಿಥ್ಯಾತ್ವವನ್ನು ಸಾಧಿಸಲು ಹೊರಡುವುದು ಶ್ರುತಿಯಿಂದ ಬಾಧಿತ - ವಾಗುವುದರಿಂದ 'ಇಚ್ಛಾಮಾತ್ರಂ ಪ್ರಭೋಃ ಸೃಷ್ಟಿಃ' ಇತ್ಯಾದಿ ಶ್ರುತಿಗಳು ಈ ಪ್ರಕ್ರಿಯೆಯನ್ನು ಬಾಧಿಸುವುದರಿಂದ ಅದ್ವೈತಿಗೆ ಜಗನ್ಮಿಥ್ಯಾತ್ವವನ್ನು ಅನುಮಾನದಿಂದ ಸಾಧಿಸಲು ಶಕ್ಯವಾಗದು.

**ಭಾವವಿಲಾಸಿನೀ–** ಜಗನ್ಮಿಥ್ಯಾತ್ವಸಾಧನಮನುಮಾನೇನ ಮಿಥ್ಯಾತ್ವಸಾಧನಮಿತ್ಯರ್ಥಃ । ತತ್ ತಸ್ಮಾತ್ ಶ್ರುತೌ ಮಿಥ್ಯಾತ್ವಸ್ಯ ನಿಂದಿತತ್ವಾತ್ ॥ ೧೪೪ ॥

ಶಶ್ವದ್ ಯಥಾರ್ಥತೋ ಹ್ಯರ್ಥಾನ್ ವ್ಯದಧಾತ್ ಪರಿಭೂಃ ಕವಿಃ ।
ಇತ್ಯರ್ಥಾನಾಂ ಯಥಾರ್ಥತ್ವಂ ಶ್ರುತಿರನ್ಯಾ ಜಗಾದ ಹ ॥ ೧೪೫ ॥

**ಅರ್ಥ–** ಕವಿಃ= ಸರ್ವಜ್ಞನಾದ, ಪರಿಭೂಃ= ಸರ್ವವನ್ನು ಪರಾಭವಗೊಳಿಸುವ (ಸರ್ವಜಯೀ ಆದ) ಭಗವಂತನು, ಶಶ್ವತ್= ಸದಾ, ಯಥಾರ್ಥತಃ= ಸತ್ಯವಾದ,

ಅರ್ಥಾನ್= ವಸ್ತುಗಳನ್ನೇ, ವ್ಯದಧಾತ್= ಸೃಷ್ಟಿಸಿದನು (ಸೃಷ್ಟಿಮಾಡುವನು), ಇತಿ= ಎಂದು, ಅರ್ಥಾನಾಂ= ವಸ್ತುಗಳ, ಯಥಾರ್ಥತ್ವಂ= ಸತ್ಯತ್ವವನ್ನು, ಅನ್ಯಾಶ್ರುತಿಃ= (ನಿರವಕಾಶವಾದ) ಬೇರೊಂದು= (ಕವಿರ್ಮನೀಷೀ ಪರಿಭೂಃ ಸ್ವಯಂಭೂರ್ಯಾಥಾತಥ್ಯತೋರ್ಥಾನ್ ವ್ಯದಧಾತ್ ಶಾಶ್ವತೀಭ್ಯಃ ಸಮಾಭ್ಯಃ ಎಂಬ) ಶ್ರುತಿಯು, ಜಗಾದ ಹ= ಹೇಳಿರುತ್ತದೆಂಬುದೂ ಪ್ರಸಿದ್ಧವೇ ಇದೆ.

**ಅನುವಾದ** - ಬೇರೊಂದು ಶ್ರುತಿಯು, 'ಸರ್ವಜ್ಞನೂ ಸರ್ವಶಕ್ತನೂ ಆದ ಭಗವಂತನು, ನಿತ್ಯವೂ ಸತ್ಯವೂ ಆದ ವಸ್ತುಗಳನ್ನೇ ಸರ್ವಕಾಲದಲ್ಲಿ ಸೃಷ್ಟಿ ಮಾಡುವನು; ಎಂದು ಜಗತ್ತಿನ ಸತ್ಯತ್ವವನ್ನೇ ಸಾರುತ್ತದೆ.

**ಭಾವವಿಲಾಸಿನೀ–** ಅನ್ಯಾ । ಕವಿರ್ಮನೀಷೀಪರಿಭೂಃ ಸ್ವಯಂಭೂರ್ಯಾಥಾತಥ್ಯತೋಽರ್ಥಾನ್ ವ್ಯದಧಾಚ್ಛಾಶ್ವತೀಭ್ಯಃ ಸಮಾಭ್ಯ ಇತಿ ನಿರವಕಾಶ ಅಪರಾ ॥ ೧೪೫ ॥

ಅತೋ ಯಥಾರ್ಥಸೃಷ್ಟ್ಯುಕ್ತೇರ್ಭ್ರಮಜತ್ವಕಥಾ ಗತಾ ।
ಶಾಶ್ವತತ್ವೋಕ್ತಿತಶ್ಚಾಸ್ಯ ಬಾಧೋಽಭೂದ್ ಬಾಧಿತಸ್ತವ ॥ ೧೪೬ ॥

ವಿಶ್ವಂ ಸತ್ಯಮಿತಿ ಶ್ರುತ್ಯಾ ಸತ್ಯತ್ವಂ ಸ್ಪಷ್ಟಮುಚ್ಯತೇ ।
ಪ್ರಮಾಣಸಿದ್ಧತಾಂ ಚಾಸ್ಯ ಪ್ರಮಿನಂತೀತಿ ಸಾ ಜಗೌ ॥ ೧೪೭ ॥

ಅತಃ ಪ್ರಮಾಣಸಿದ್ಧತ್ವಾದ್ ಬ್ರಹ್ಮವತ್ ಪರಮಾರ್ಥಸತ್ ।
ಜಗದೇತದಭೂಚ್ಛ್ರೌತಯುಕ್ತ್ಯಾ ಸ್ಪಷ್ಟಶ್ರುತೇರಪಿ ॥ ೧೪೮ ॥

**ಅರ್ಥ–** ಅತಃ= ಆದ್ದರಿಂದ, ಯಥಾರ್ಥಸೃಷ್ಟ್ಯುಕ್ತೇಃ= ಸತ್ಯವಾದ ಸೃಷ್ಟಿಯನ್ನು ಹೇಳಿರುವುದರಿಂದ, ಭ್ರಮಜತ್ವಕಥಾ= ಭ್ರಾಂತಿಜನ್ಯವೆಂಬ ಕಥೆಯು (ನಿರೂಪಣೆಯೂ), ಗತಾ= ಬಿದ್ದು ಹೋಯಿತು; ಅಸ್ಯ= ಜಗತ್ತಿಗೆ, ಶಾಶ್ವತತ್ವೋಕ್ತಿತಃ= ನಿತ್ಯತ್ವವನ್ನು ಹೇಳಿದ್ದರಿಂದ, ತವ= ನಿನ್ನ (ನೀನು ಹೇಳುವ), ಬಾಧಃ= ಬಾಧವು, ಬಾಧಿತಃ= ಬಾಧಿತವು, ಅಭೂತ್= ಆಯಿತು.

ವಿಶ್ವಂ ಸತ್ಯಮಿತಿ ಶ್ರುತ್ಯಾ= ವಿಶ್ವಂ ಸತ್ಯಂ ಮಘವಾನಾ ಯುವೋರಿದಾಪಶ್ಚ ನ ಪ್ರಮಿನಂತಿ ವ್ರತಂ ವಾಂ, ಎಂಬ ಶ್ರುತಿಯಿಂದ, ಸತ್ಯತ್ವಂ=ಜಗತ್ಸತ್ಯವು, ಸ್ಪಷ್ಟಂ= ಸ್ಪಷ್ಟವಾಗಿ, ಉಚ್ಯತೇ= ಹೇಳಲ್ಪಡುತ್ತದೆ; ಅಸ್ಯ= ಈ ಜಗತ್ತಿಗೆ, ಪ್ರಮಾಣಸಿದ್ಧತಾಂ ಚ= ಪ್ರಮಾಣಸಿದ್ಧತ್ವವನ್ನಾದರೂ, ಪ್ರಮಿನಂತಿ ಇತಿ= (ಅಭಿಮಾನಿ ದೇವತೆಗಳು) ತಿಳಿಯುವರೆಂದು, ಸಾ= ಆ ಶ್ರುತಿಯು, ಜಗೌ= ಹೇಳಿರುತ್ತದೆ, ಅತಃ= ಆದ್ದರಿಂದ, ಪ್ರಮಾಣಸಿದ್ಧತ್ವಾತ್= (ಸತ್ಯತ್ವವು) ಪ್ರಮಾಣಸಿದ್ಧವಾದ್ದರಿಂದ, ಬ್ರಹ್ಮವತ್= ಬ್ರಹ್ಮನಂತೆ,

ಪರಮಾರ್ಥಸತ್= ಪರಮಸತ್ಯವೆಂದು, ಏತತ್ ಜಗತ್= ಈ (ಪ್ರತ್ಯಕ್ಷಸಿದ್ಧವಾದ) ಜಗತ್ತು, ಶ್ರೌತಯುಕ್ತ್ಯಾ= ಶುತ್ಯುಕ್ತಯುಕ್ತಿಯಿಂದಲೂ, ಸ್ಪಷ್ಟಶ್ರುತೇಃ ಅಪಿ= (ಸತ್ಯವೆಂದು) ಹೇಳುವ ಸ್ಪಷ್ಟಶ್ರುತಿಯಿಂದಲೂ, ಅಭೂತ್= ಸಿದ್ಧವಾಯಿತು.

**ಅನುವಾದ** - ಆದ್ದರಿಂದ ಸತ್ಯತ್ವವನ್ನು ಹೇಳುವ ಶ್ರುತಿಯಿಂದ, ಜಗತ್ತು ಭ್ರಾಂತಿಕಲ್ಪಿತವೆಂಬ ವಾದವು ಬಿದ್ದುಹೋಯಿತು. ಜಗನ್ಮಿಥ್ಯೆಯೆಂಬುದು ಸುಳ್ಳಾಯಿತು; ಜಗತ್ತಿನ ನಿತ್ಯತ್ವವನ್ನು ಹೇಳಿದ್ದರಿಂದ, ಮಾಯಾವಾದಿಯು ಹೇಳುವಂತೆ, ಕಾಲಾಂತರದಲ್ಲಿ (ಭವಿಷ್ಯದಲ್ಲಿ- ಬ್ರಹ್ಮಜ್ಞಾನದಿಂದ) ಜಗತ್ತು ಬಾಧ್ಯವಾಗುವುದೆಂಬುದೂ, ಬಾಧಿತವಾಯಿತು (ಇಲ್ಲವೆಂದಾಯಿತು). 'ವಿಶ್ವಂ ಸತ್ಯಂ ಮಘವಾನಾ...' ಎಂಬ ಶ್ರುತಿಯಿಂದ, ವಿಶ್ವದ ಸತ್ಯತ್ವವನ್ನು ಯಥಾರ್ಥ ಅನುಭವದಿಂದ ಸಕಲ ತತ್ತ್ವಾಭಿಮಾನಿ ದೇವತೆಗಳೂ (ಜ್ಞಾನಿಶ್ರೇಷ್ಠರೂ) ತಿಳಿದಿರುವರು, ಎಂದೂ ಸಿದ್ಧವಾದ್ದರಿಂದ, ಬ್ರಹ್ಮನಂತೆ ಜಗತ್ತೂ ಸಹ ಪರಮಾರ್ಥ ಸತ್ಯವೆಂದೇ ಶ್ರುತಿಪ್ರೋಕ್ತ ಯುಕ್ತಿಗಳಿಂದಲೂ, ಸ್ಪಷ್ಟ ಶ್ರುತಿಗಳಿಂದಲೂ ಸಿದ್ಧವಾಗುತ್ತದೆ.

**ಭಾವವಿಲಾಸಿನೀ–** ಅಸ್ಯ ವಿಶ್ವಸ್ಯ ॥ ೧೪೬ ॥

**ಸೋಪಪತ್ತಿಕವಾಕ್ಯತ್ವಾದ್ ವಿತ್ವಸತ್ಯತ್ವವಾಗಿಯಮ್ ।**
**ಸ್ವಾರ್ಥೇ ತಾತ್ಪರ್ಯಯುಕ್ತೈವ ಚಾಲ್ಯಾ ನೋಕ್ತಿಶತೈರಪಿ ॥ ೧೪೯ ॥**

**ಅರ್ಥ–** ಸೋಪಪತ್ತಿಕ ವಾಕ್ಯತ್ವಾತ್= ಯುಕ್ತಿಯಿಂದ ಯುಕ್ತವಾಗಿರುವ ವಾಕ್ಯವಾದ್ದರಿಂದ, ಇಯಂ= ಈ, ವಿಶ್ವಸತ್ಯತ್ವವಾಕ್= ವಿಶ್ವಸತ್ಯತ್ವವನ್ನು ಹೇಳುವ ಈ ವಾಕ್ಯವು, ಸ್ವಾರ್ಥೇ= ತನ್ನ ಅರ್ಥವನ್ನು ನಿರೂಪಿಸುವುದರಲ್ಲಿ, ತಾತ್ಪರ್ಯ ಯುಕ್ತಾ ಏವ= ಅಭಿಪ್ರಾಯವುಳ್ಳದ್ದೇ (ಆಗಿದೆ); ಉಕ್ತಿಶತೈಃ ಅಪಿ= ಅನ್ಯ ನೂರಾರು ಮಾತುಗಳಿಂದಲೂ, ಅಚಾಲ್ಯಾ ನ= ಅನ್ಯಾರ್ಥ ಪರವಾಗಿ ಮಾಡಲಾಗದುದು.

**ಅನುವಾದ** - ಈ ಶ್ರುತಿಯು ತಾನು ಹೇಳುವ ಜಗತ್ ಸತ್ಯತ್ವ ವಿಷಯದಲ್ಲಿ ಯುಕ್ತಿಗಳನ್ನು ಹೇಳುವುದರಿಂದ ನೂರು ಆಗಮ ವಾಕ್ಯಗಳಿಂದಲೂ ಬಾಧಿತ-ವಾಗದು.

**ಭಾವವಿಲಾಸಿನೀ–** ''ವಿಶ್ವಂ ಸತ್ಯಮ್'' ಇತಿ ಶ್ರುತ್ಯೈತ್ಯನೇನ ವಿಶ್ವಂ ಸತ್ಯಂ ಮಘವಾನಾ ಯುವೋರಿದಾಪಶ್ಚನ ಪ್ರಮಿನಂತಿ ವ್ರತಂ ವಾಂ ಇತಿ ಶ್ರುತಿಂ ಗೃಹ್ಣಾತಿ । ಹೇ ಮಘವಾನಾ ಮಘವಾನೌ ದ್ರವ್ಯವಂತೌ ಭಗವಂತೌ । ಭಗವತ ಏವ ರೂಪದ್ವಯವಿವಕ್ಷಯಾ ದ್ವಿವಚನಮ್ । ಯುವೋಃ ಯುವಯೋಃ ವಿಶ್ವಂ ಭವತ್ಸಂಬಂಧಿವಿಶ್ವಮಿತ್ಯರ್ಥಃ । ಸಂಬಂಧಶ್ಚ ಕರ್ತೃಕಾರ್ಯಭಾವಃ

ನಿಯಮ್ಯನಿಯಾಮಕಭಾವಶ್ಚೇತ್ಯಾದಿರೂಪಃ । ಭಗವತೋ ವಿಶ್ವಸ್ಯ ಚ ಭೇದಮಪಿ ಸೂಚಯಿತುಮಿಯಮುಕ್ತಿಃ । ಸತ್ಯಂ ತ್ರಿಕಾಲಾಬಾಧ್ಯಮ್ । ಇತ್ ಇತ್ಥಮ್ । ವಾಂ ಯುವಯೋಃ । ವ್ರತಂ ಸತ್ಯವಿಶ್ವಕರ್ತೃತ್ವಾದಿರೂಪಸಂಬಂಧನಿಯಮಮ್ । ಆಪಃ ಅಬಭಿಮಾನಿದೇವತಾಃ ಪ್ರಮಿನಂತಿ ಚ ನ ಪ್ರಮಿನಂತ್ಯೇವ । ನ ತು ಮಾಯಾವಾದ್ಯುಕ್ತರೀತ್ಯಾ ಭ್ರಾಂತ್ಯಾ ಜಾನಂತೀತ್ಯರ್ಥಃ । ಪ್ರಮಿನಂತೀತ್ಯುಕ್ತೈವಾಪ್ಪದೇನ ತದಭಿಮಾನಿದೇವಾನಾಂ ಗ್ರಹಣಮ್ । ಕೇವಲಾನಾಮಪಾಂ ಜಡತ್ವೇನ ಪ್ರಮಾತೃತ್ವಾಯೋಗಾತ್ । ತತ್ತಾಭಿಮಾನಿತಯಾಽತತ್ವಜ್ಞಾನಾಭಾವಸ್ಯ ತತ್ವೇಷು ಚ ಪಾವನೀಭೂತಜಲಾಭಿಮಾನಿತಯಾಽತತ್ವಜ್ಞಾನಕಾರಣದೋಷಾಭಾವಸ್ಯ ಚ ಸೂಚನಾಯಾಭಿಮನ್ಯಮಾನನಾಮ್ನೈವ ತೇಷಾಂ ಗ್ರಹಣಮ್ । ಅಭಿಮನ್ಯಮಾನನಾಮ್ನಿ ಚ ನಿಯತಬಹುವಚನಾಂತಪದೇನೈವೋಪಾದಾನಂ ಜ್ಞಾನಸ್ಯ ಜ್ಞಾನಾಂತರಸಂವಾದಿತ್ವೇನ ಪ್ರಮಿನಂತೀತ್ಯುಕ್ತಪ್ರಾಮಾಣ್ಯದೃಢೀಕರಣಾಯೇತಿ ಜ್ಞಾತವ್ಯಮ್ ।

ವಿಶ್ವಂ ಪ್ರಮನಂತೀತ್ಯೇತಾವದೇವಾನುಕ್ತ್ವಾ ಸತ್ಯವಿಶ್ವಕರ್ತೃತ್ವಾದಿ ಸಂಬಂಧನಿಯಮರೂಪಂ ವ್ರತಂ ಪ್ರಮಿನಂತೀತ್ಯುಕ್ತಿರ್ವಿಶೇಷಣೀಭೂತವಿಶ್ವಸತ್ಯತ್ವಸ್ಯ ವಿಶ್ವಸ್ಯ ಸಂಬಂಧಪದೋದಿತಜಗದ್ಬ್ರಹ್ಮಭೇದಸ್ಯ ಕರ್ತೃತ್ವಾದಿಭಗವದ್ಧರ್ಮಾಣಾಂ ಧರ್ಮಿಭೂತಬ್ರಹ್ಮಣಶ್ಚ ಪ್ರಾಮಾಣಿಕತ್ವೇನ ಸತ್ಯತ್ವಂಸ್ಥಿರೀಕರ್ತುಮ್ । ಅತ ಏವ ಪ್ರಾಗ್ವಿಶ್ವಪದೇನ ಜಗತೋ ಜಗನ್ನಿಷ್ಠಭೇದಸ್ಯ ಚ ಸಾಕ್ಷಾದ್ಗ್ರಹಣಮ್ । ಬ್ರಹ್ಮಧರ್ಮಿಕಭೇದಸ್ಯ ಕರ್ತೃತ್ವಾದಿಬ್ರಹ್ಮಧರ್ಮಾಣಾಂ ಬ್ರಹ್ಮಣ- ಶ್ಚೋಪಲಕ್ಷಣಯಾಽಧ್ಯಾಹಾರೇಣ ವಾ ಸರ್ವೇಷಾಂ ಸತ್ಯತ್ವಂ ಶ್ರುತ್ವಾ ಪ್ರತಿಜ್ಞಾತಮ್ । ಅಥವಾ ಬ್ರಹ್ಮಗುಣಾದೇಶ್ಚ ಮಾಯಿಭಿರ್ವಿಶ್ವಾಂತಃಪಾತಿತಯಾ ಮಿಥ್ಯಾತ್ವಕಥನಾದ್ಧರ್ಮಧರ್ಮಿಭಾವ- ಸಂಬಂಧೇನ ತಮಪಿ ಸಾಕ್ಷಾದೇವ ಜಗ್ರಾಹ । ಬ್ರಹ್ಮ ತು ಉ ಭ ' ಯ ಂ ವಾ ದಿ ಸ ' ಂ ಪ ' ್ರ ತಿ ಪ ' ನ ' ್ನ ತಾ ್ವ ದ ' ಂ ಪ ' ೇ ಕ್ಷ ಿ ತ ' ವ ' ತಿ ೇ । ಅನ್ಯಥೋಪಸಂಹಾರಸ್ಯಾನುಪಕ್ರಾಂತೋಪಸಂಹಾರತ್ವಾಖ್ಯದೋಷಾಪತ್ತೇಃ । ಅತ ಇಯಂ ಶ್ರುತಿರ್ವರ್ಣತೋ ವಾಮನಚರಣ ಇವ ಸೂಕ್ಷ್ಮರೂಪಾಪ್ಯರ್ಥತಸ್ತ್ರಿವಿಕ್ರಮಚರಣ ಇವ ವಿಶ್ವವ್ಯಾಪಿನೀ ಮಾಯಿಮತಾಖ್ಯಖರ್ಪರಂ ನಿರ್ಭಿದ್ಯ ಮಧ್ವಮತಸ್ವರ್ಧುನೀಂ ಪ್ರದ್ಯೋತಯತಿ ॥ ೧೪೭-೧೪೯ ॥

**ವಿವರಣೆ -** 'ವಿಶ್ವಂ ಸತ್ಯಂ ಮಘವಾನಾ ಯುವೋರಿದಾಪಶ್ಚನ ಪ್ರಮಿನಂತಿ ವ್ರತಂ ವಾಂ' 'ವೇದ ಋಷಿಯು ಇಬ್ಬರು ಭಗವದ್ರೂಪರನ್ನು ಸಂಬೋಧಿಸಿ ಹೇಳುತ್ತಾನೆ, ಧನಿಕರೆ, ನೀವು ಸೃಷ್ಟಿಸಿರುವ ಈ ಪ್ರಪಂಚ ತ್ರಿಕಾಲಾಬಾಧ್ಯವಾಗಿದೆ, ಸತ್ಯವಾಗಿದೆ. ನೀವು ಸತ್ಯ ಜಗತ್ತನ್ನು ನಿರ್ಮಾಣ ಮಾಡುವ ವ್ರತ ತೊಟ್ಟಿರುವಿರಿ. ಇದನ್ನು ಜಲಾಭಿಮಾನಿ ದೇವತೆಗಳು ಯಥಾರ್ಥವಾಗಿ ತಿಳಿದಿದ್ದಾರೆ. ಅವರು ಭ್ರಮಿಸಿಲ್ಲ'. ಇಲ್ಲಿ 'ಆಪಃ' ಎಂದರೆ ಬರಿ ನೀರಲ್ಲ. ನೀರು ಏನೂ ತಿಳಿಯುವುದಿಲ್ಲ. ಅದರ ಅಭಿಮಾನಿಗಳು ದೇವತೆಗಳು ಎಂದರ್ಥ. ನೀರು ಪವಿತ್ರ, ದೋಷರಹಿತ. ಅದರ ಅಭಿಮಾನಿಗಳೂ ಹಾಗೇ ದೋಷರಹಿತರಾದ್ದರಿಂದ ಭ್ರಾಂತಿ ಪಡದೆ ಯಥಾರ್ಥವಾಗಿಯೇ ತಿಳಿಯಬಲ್ಲರು. 'ಆಪಃ' ಎಂದು ಬಹುವಚನವೂ ಅರ್ಥಗರ್ಭಿತವಾಗಿದೆ. ಅವರ ಅನೇಕ ರೂಪಗಳಲ್ಲಿ

ಅನೇಕ ಜ್ಞಾನಗಳು ಪರಸ್ಪರವಾಗಿ ಸಮಾನ ವಿಷಯಕ ಸಂವಾದ ರೂಪದಿಂದ ದಾರ್ಢ್ಯಹೇತುಗಳಾಗಿವೆ. ಆದರಿಂದ ದೃಢವಾಗಿ ತಿಳಿದಿದ್ದಾರೆ.

'ಸತ್ಯಜಗತ್ತಿನ ಯಥಾರ್ಥಜ್ಞಾನ ಉಳ್ಳುವರೆಂದರೆ ಸಾಕಾಗಿತ್ತು, ಆದರೂ ಸತ್ಯಜಗತ್ತಿನ ನಿರ್ಮಾಣಪ್ರತದ ಯಥಾರ್ಥಜ್ಞಾನವುಳ್ಳವರೆಂದಿರುವುದರಿಂದ ಜಗತ್ತಿನ ಸತ್ಯತ್ವದಂತೆ, ಅದನ್ನು ನಿರ್ಮಿಸಿದ ಭಗವಂತನಿಗೆ ಅದರಿಂದ ಭೇದ, ಭಗವಂತನ ಕರ್ತೃತ್ವಾದಿ ಮಹಿಮೆಗಳು, ಅವುಗಳಿಗೆ ಆಶ್ರಯನಾದ ಭಗವಂತ ಎಲ್ಲವೂ ಸತ್ಯವಾದ್ದರಿಂದ ಜಗತ್ ಸತ್ಯತ್ವ ದೃಢವಾಯಿತು. 'ವಿಶ್ವಂ' ಎಂದು ಜಗತ್ತನ್ನೂ ಅದರಲ್ಲಿರುವ ಈಶ್ವರಭೇದವನ್ನೂ ಶ್ರುತಿಯು ನೇರವಾಗಿ ಹೇಳಿದೆ. ಈಶ್ವರನಲ್ಲಿರುವ ಜಗದ್ಭೇಧ ಮುಂತಾದುವನ್ನು ಉಪಲಕ್ಷಣವಾಗಿ ಇಟ್ಟುಕೊಂಡಿದೆ ಎಂದು ಸಿದ್ಧವಾಯಿತು. ಈಶ್ವರನಲ್ಲಿರುವ ಮಹಿಮೆಗಳೆಲ್ಲವೂ ಮಾಯಿಕವಾದ ಜಗತ್ತಿನಲ್ಲಿಯೇ ಸೇರುವುದೆಂದು ಮಾಯಿಗಳು ಹೇಳುವುದರಿಂದ 'ಯುವೋಃ ವಿಶ್ವಂ' ಎಂದು ಷಷ್ಠೀ ವಿಭಕ್ತಿಯಿಂದ ಅವುಗಳನ್ನೂ ಪ್ರತ್ಯೇಕ ಹೇಳಿ ಸತ್ಯತ್ವವನ್ನು ಹೇಳಿದೆ. ಭಗವಂತ ಸತ್ಯವೆಂದು ಮಾಯಿಯೂ ಒಪ್ಪುವುದರಿಂದ ಪ್ರತ್ಯೇಕ ಹೇಳಲಿಲ್ಲ.

ಈ ಶ್ರುತಿ ವಾಕ್ಯ ವಾಮನನ ಪುಟ್ಟ ಪಾದದಂತಿದ್ದರೂ ಅದರ ಅರ್ಥ ವಿಚಾರಿಸಿದಾಗ ತ್ರಿವಿಕ್ರಮನ ಪಾದದಂತಾಗಿ ವಿಶ್ವವನ್ನೇ ವ್ಯಾಪಿಸಿ ಬ್ರಹ್ಮಾಂಡ ಖರ್ಪರದಂತೆ ಕಠಿನವಾದ ಮಾಯಿಮತವನ್ನು ಭೇದಿಸಿ ಮಧ್ವಮತ ಭಾಗೀರಥಿಯನ್ನು ಆಸ್ತಿಕರಿಗೆ ತಂದು ನೀಡಿದೆ ಎನ್ನುತ್ತಾರೆ ಸುರೋತ್ತಮತೀರ್ಥರು.

**ವ್ಯಾವಹಾರಿಕತಾವಾಣೀಂ ವಾಣೀಯಂ ಧಿಕ್ಕರೋತಿ ತೇ ।**
**ಕಪೋಲಕಲ್ಪಿತಾ ಯತ್ ಸಾ ಸ್ವಯಂ ಸರ್ವೈರಕಲ್ಪಿತಾ ॥ ೧೫೦ ॥**

**ಅರ್ಥ–** ಯತ್= ಏಕೆಂದರೆ, ಸಾ= ವ್ಯಾವಹಾರಿಕತ್ವವನ್ನು ಹೇಳುವ ವಾಕ್ಯವು, ತೇ ಕಪೋಲಕಲ್ಪಿತಾ= ನಿನ್ನ ಬುದ್ಧಿಯಿಂದ ಕಲ್ಪಿತವಾಗಿದೆ. ಸ್ವಯಂ= ತಾನು ಶ್ರುತಿವಾಕ್ಯವು, ಸರ್ವೈರಕಲ್ಪಿತಾ= ಯಾರಿಂದಲೂ ಕಲ್ಪಿತವಾಗದ ಅಪೌರುಷೇಯ ವಾಕ್ಯವಾಗಿದೆ. ಇಯಂ ವಾಣೀ= ಈ ನುಡಿಯು, ತೇ= ನಿನ್ನ (ಮಾಯಾವಾದಿಯ), ವ್ಯಾವಹಾರಿಕತಾ ವಾಣೀಂ= (ಜಗತ್ತು ವ್ಯಾವಹಾರಿಕ ಸತ್ಯತ್ವವುಳ್ಳದ್ದೆಂದು ಹೇಳುವ) ವ್ಯಾವಹಾರಿಕವೆಂಬ ಮಾತನ್ನು, ಧಿಕ್ಕರೋತಿ= ನಿರಾಕರಿಸುತ್ತದೆ.

**ಅನುವಾದ -** ಜಗತ್ತು ವ್ಯಾವಹಾರಿಕ (ಪಾರಮಾರ್ಥಿಕವಲ್ಲದ) ಸತ್ಯತ್ವವುಳ್ಳದ್ದೆಂಬುದು ನಿನ್ನ ನುಡಿಯು; ನಿನ್ನಿಂದಲೇ ಕಲ್ಪಿತವಾದುದು. ವೇದ ವಾಣಿಯು ಕಲ್ಪಿತವಾಗದಿದ್ದು ಅಪೌರುಷೇಯವಾದ್ದರಿಂದ, ವ್ಯಾವಹಾರಿಕತ್ವವನ್ನು ಹೇಳುವ ಸ್ವಕಪೋಲಕಲ್ಪಿತವಾದ

ನಿನ್ನ ವ್ಯಾವಹಾರಿಕ ವಾಣಿಯನ್ನು ಧಿಕ್ಕರಿಸುತ್ತದೆ. ದುರ್ವಾದಿ ಕಲ್ಪಿಸಿಕೊಂಡಿರುವ ವಾಕ್ಯ ಅಪೌರುಷೇಯಳಾದ ನನ್ನನ್ನು ಇದಿರಿಸಿ ಹೇಗೆ ನಿಲ್ಲಬಲ್ಲದು ಎಂದು ಆಕ್ಷೇಪಿಸುತ್ತದೆ.

**ಭಾವವಿಲಾಸಿನೀ–** ಯತ್ ಯಸ್ಮಾತ್ । ಸಾ ವ್ಯಾವಹಾರಿಕತಾ ವಾಣೀ । ಸ್ವಯಮಪೌರುಷೇಯಶ್ರುತಿರೂಪಾ । ತಸ್ಮಾತ್ ಅಕಲ್ಪಿತಾಯಾ ಮಮಾಗ್ರೇ ಸ್ವಕಪೋಲಕಲ್ಪಿತ-ಕುವಾದಿವಾಕ್ಯಸ್ಯ ಕಥಂ ಸ್ಥಿತಿಃ । ನಹಿ ಶ್ರುತ್ಯುಕ್ತಂ ಜಗತ್‌ಸತ್ಯತ್ವಂ ವ್ಯಾವಹಾರಿಕಮಿತ್ಯಪಿ ಕಾಚಿಚ್ಛ್ರುತಿರಸ್ತೀತಿ ಧಿಕ್ಕರೋತಿ ॥ ೧೫೦ ॥

ದ್ವಿಸಂಬಂಧಿತ್ವಕಥನಾದೇಕಾಜ್ಞಾನೇನ ಕಲ್ಪನಾಮ್ ।
ನಿವಾರಯತಿ ಮಿಥ್ಯಾತ್ವಮಪಿ ತೇನ ನ್ಯವಾರಯತ್ ॥ ೧೫೧ ॥

**ಅರ್ಥ–** ದ್ವಿಸಂಬಂಧಿತ್ವಕಥನಾತ್= (ಯುವೋಃ, ಮಘವಾನಾ, ಎಂದು) ಇಬ್ಬರು (ಪರಮ) ಚೇತನರ ಸಂಬಂಧವನ್ನು (ಜಗತ್ತಿಗೆ) ಹೇಳಿದ್ದರಿಂದ, ಏಕಾಜ್ಞಾನೇನ= ಒಬ್ಬ ಜೀವನ ಅಜ್ಞಾನದಿಂದ, ಕಲ್ಪನಾಂ= ಜಗತ್ತು ಕಲ್ಪಿತವೆಂಬುದನ್ನು, ನಿವಾರಯತಿ= ನಿವಾರಿಸುತ್ತದೆ (ಪರಿಹರಿಸುತ್ತದೆ); ಮಿಥ್ಯಾತ್ವಂ ಅಪಿ= ಜಗನ್ಮಿಥ್ಯಾತ್ವವನ್ನು, ತೇನ= ಅದರಿಂದಲೇ (ದ್ವಿಚೇತನ ಸಂಬಂಧವನ್ನು ಹೇಳಿದ್ದರಿಂದಲೇ), ನ್ಯವಾರಯತ್= ನಿವಾರಿಸಿತು.

**ಅನುವಾದ** - ವಿಶ್ವಂ ಸತ್ಯಂ ಮಘವಾನಾ... ಎಂಬ ವಿಶ್ವಸತ್ಯತ್ವಪ್ರತಿಪಾದಕ ಶ್ರುತಿಯು ಸಯುಕ್ತಿಕವಾಗಿದೆ; ಯುವೋಃ ಮಘವಾನೌ ಎಂಬ ದ್ವಿವಚನವು ಒಂದಕ್ಕಿಂತ ಹೆಚ್ಚಾದ ಚೇತನದಿಂದ ಸಂಬಂಧವುಳ್ಳ ಜಗತ್ತು ಸತ್ಯವೆಂಬುದನ್ನೂ ಒಬ್ಬನ ಅಜ್ಞಾನದಿಂದ ಕಲ್ಪಿತವಲ್ಲವೆಂಬುದನ್ನೂ ಸಾಧಿಸುತ್ತದೆ; ಅದ್ವೈತಿಗಳ ಏಕಜೀವ ವಾದವನ್ನು ನಿರಾಕರಿಸುತ್ತದೆ. ಆದ್ದರಿಂದಲೇ ಜಗತ್ತಿನ ಮಿಥ್ಯಾತ್ವವನ್ನೂ ತಡೆಯುತ್ತದೆ.

ಭ್ರಾಂತೋಽರ್ಥೋ ನ ಬಹೋರೇಕೋ ದೃಶ್ಯೋ ಭವತಿ ತನ್ಮತೇ ।
ಮುಕ್ತೇರಮುಕ್ತಿತಾಪತ್ತ್ಯಾ ಯದ್ ಬಹೋಃ ಸತ್ತದಾತ್ಮವತ್ ॥ ೧೫೨ ॥

**ಅರ್ಥ–** ಭ್ರಾಂತೋರ್ಥಃ= ಭ್ರಮಸ್ವರೂಪವಾದ ಕಲ್ಪಿತ ವಸ್ತುವು; ತನ್ಮತೇ= ಮಾಯಾಮತದಲ್ಲಿ, ಏಕಃ= ಒಂದೇ; ಬಹೋಃ= ಬಹುಜನರಿಗೆ, ದೃಶ್ಯಃ= ಕಾಣಲ್ಪಡುವುದು, ನ ಭವತಿ= ಆಗುವುದಿಲ್ಲ (ಬಹುಚೇತನ ದೃಷ್ಟಿಗೊಚರವಲ್ಲ), ಮುಕ್ತೇಃ= ಮುಕ್ತಿಗೆ, ಅಮುಕ್ತಿತಾಪತ್ತ್ಯಾ= ಅಮುಕ್ತಿಯೆಂದೇ (ಅಮುಕ್ತಿತ್ವವೇ) ಪ್ರಾಪ್ತವಾಗುವುದರಿಂದ, ಯತ್= ಯಾವುದು, ಬಹೋಃ= ಬಹುಚೇತನರಿಗೆ ದೃಷ್ಟವಾಗುವುದೊ, ತತ್= ಅದು, ಸತ್= ಸತ್ಯತ್ವಧರ್ಮವುಳ್ಳದ್ದು, ಆತ್ಮವತ್= ಆತ್ಮನಂತೆ (ಬ್ರಹ್ಮನಂತೆ).

**ಅನುವಾದ** - 'ಭ್ರಾಂತ' ಅಂದರ ಭ್ರಮದಲ್ಲಿ ಕಂಡಿರುವ ವಸ್ತು. ಅದು ಭ್ರಮ ಸ್ವರೂಪವೆಂದು ಅದ್ವೈತಿಗಳು ಒಪ್ಪಿದ್ದಾರೆ. ದೃಷ್ಟಿಸೃಷ್ಟಿಪಕ್ಷದಲ್ಲಿ ಅವರವರಿಗೆ ಭ್ರಾಂತಿಯಲ್ಲಿ ಕಾಣುವುದು ಬೇರೆ ಬೇರೆಯೇ ಎನ್ನುತ್ತಾರೆ. ಅಂಥ ವಸ್ತು ಕಾಣುವುದೆಲ್ಲ ಭ್ರಾಂತಿಯೇ. ಒಂದೇ ವಸ್ತು ಅನೇಕರಿಗೆ ಕಾಣುವುದಿಲ್ಲ, ಕಂಡರೆ ಅದು ಭ್ರಾಂತಿಯಲ್ಲ. ಉದಾ: 'ಆತ್ಮ' ಅನೇಕರಿಗೆ ಕಾಣುತ್ತದೆ, ಸತ್ಯವಾಗಿದೆ. ಅಸತ್ಯ ಅನೇಕರಿಗೆ ಕಾಣುವುದಿಲ್ಲ. ಆದರೆ 'ಯುವೋಃ' ಎಂದು ಇಬ್ಬರಿಗೆ ಸಂಬಂಧಿಸಿದ ದೃ(ಸೃ)ಷ್ಟಿಯನ್ನು ಶ್ರುತಿ ಹೇಳುವುದರಿಂದ ಮಾಯಿಗಳ ದೃಷ್ಟಿ ಸೃಷ್ಟಿ ಪಕ್ಷ ಶ್ರುತಿ ಸಮ್ಮತವಲ್ಲ ಎಂದು ತಿಳಿಯುತ್ತದೆ. ಮಾಯಿಗಳ ಪ್ರಕಾರ ಮುಕ್ತಿಯು ಪ್ರಪಂಚ ಲಯ ರೂಪವಾದುದು. ಒಬ್ಬನಿಗೆ ಬ್ರಹ್ಮಜ್ಞಾನ ಬಂದಾಗ ಪ್ರಪಂಚವು ಲಯ ಹೊಂದಿದರೆ ಬೇರೆಯವರಿಗೆ ಪ್ರಪಂಚ ಕಾಣಿಸದೆ ಹೋದೀತು. ಅದಕ್ಕೆ ಒಬ್ಬೊಬ್ಬನ ಪ್ರಪಂಚ ಬೇರೆ ಬೇರೆಯೇ ಎಂದು ಮಾಯಿಗಳು ಕಲ್ಪಿಸಿ ಅವನ ಪ್ರಪಂಚನಾಶ ಅವನಿಗೆ ಮುಕ್ತಿ ಎಂದು ವ್ಯವಸ್ಥೆ ಮಾಡಿದ್ದಾರೆ. ಅವನಿಗೆ ಅವನದೇ ಆದ ಪ್ರಪಂಚ ಅಜ್ಞಾನದಿಂದ ಸೃಷ್ಟಿಯಾಗಿ ಕಾಣುತ್ತದೆ. ಜ್ಞಾನದಿಂದ ನಾಶವಾಗುತ್ತದೆ.ಅದರಿಂದ ಬಂಧ ಮೋಕ್ಷ ಕೂಡುತ್ತದೆ. ಹೀಗೆ ಅವನ ದೃಷ್ಟಿ ಅವನಿಗೆ ಪ್ರಪಂಚ ಸೃಷ್ಟಿ. ಆದ್ದರಿಂದ 'ಯಾವುದು ಬಹುಜನರಿಗೆ ದೃಷ್ಟವಾದುದೋ ಅದು ಸತ್ಯವೇ-ಬ್ರಹ್ಮನಂತೆ'; ಎಂಬ ಅನುಮಾನವನ್ನು ಈ ಶ್ರುತಿಯು (ದ್ವಿಚೇತನ ಸಂಬಂಧವುಳ್ಳ ಜಗತ್ತು ಸತ್ಯವೆಂದು ಹೇಳಿ) ಸೂಚಿಸುತ್ತದೆ.

**ಭಾವವಿಲಾಸಿನೀ**–ಶ್ರೌತಪದಾಂತರೇಣ ಲಬ್ಧಮರ್ಥಮಾಹ – **ದ್ವಿಸಂಬಂಧಿತ್ವೇತಿ** ॥ ಯುವೋರ್ಯುವಯೋರಿತಿ ಮಘವಾನಾವಿತಿ ಚೋಕ್ತ ಚೇತನದ್ವಯ ಸಂಬಂಧಿತ್ವಕಥನಾತ್ । ತೇನ ದ್ವಿಚೇತನ ಸಂಬಂಧಿತ್ವೇನ । ಏತದೇವೋಪಪಾದಯತಿ ॥ **ಭ್ರಾಂತೋಽರ್ಥ ಇತಿ** ॥ ದೃಷ್ಟಿಸೃಷ್ಟಿಮತೇ ಏಕೈಕದೃಷ್ಟ್ಯಾ ಏಕೈಕ ಜಗತಸ್ಸೃಷ್ಟಿಂ ವದಂತೋ ಮಾಯಾವಾದಿನಃ ಮಿಥ್ಯಾಭೂತಸ್ಯ ದ್ವಿಚೇತನದೃಷ್ಟತಾಂ ನ ಮನ್ಯಂತೇ । ಅತೋ ನ ಕಲ್ಪಿತಸ್ಯ ದ್ವಿಸಂಬಂಧಿತ್ವಮಿತಿ ಭಾವಃ । ದೃಷ್ಟಿಸೃಷ್ಟಿ ಪಕ್ಷಸ್ಯ ತನ್ಮತತ್ವೇ ಜ್ಞಾಪಕಮಾಹ – **ಮುಕ್ತೇರಿತಿ** ॥ ಬಾಧಮಾತ್ರೇಣ ಚರಿತಾರ್ಥತ್ವೇ ಶ್ರೌತಪ್ರಲಯಾಭಾವಪ್ರಸಂಗೇನ ಜಗತೋ ಬ್ರಹ್ಮಜ್ಞಾನವಿನಾಶ್ಯತ್ವಸ್ಯಾಪ್ಯಂಗೀಕಾರಾದೇಕಸ್ಯ ಜ್ಞಾನೇನ ಸರ್ವಜಗತೋಽಪಿ ನಾಶೇ ಪುನರನ್ಯಸ್ಯ ಭ್ರಮಾಯೋಗಾತ್ ತತ್ತಜ್ಞಾನವಿನಾಶ್ಯಸ್ಯ ತತ್ತದ್ಭ್ರಮವಿಷಯಸ್ಯ ಚ ಜಗತೋ ಭಿನ್ನಸ್ಯೈವ ವಕ್ತವ್ಯತ್ವಾದಿತಿ ಭಾವಃ । ತತಃ ಕಿಂ ಲಬ್ಧಮಿತ್ಯತ ಆಹ – **ಯದಿತಿ** ॥ ಯದ್ಬಹೋರಿತಿ ಹೇತುಃ । ಸದಿತಿ ಸಾಧ್ಯಮ್ । ತದಿತಿ ಧರ್ಮೀ । ಆತ್ಮವದಿತಿ ದೃಷ್ಟಾಂತಃ । ಏವಂಚ ಜಗತಸ್ಸತ್ಯತ್ವಂ ಮಿಥ್ಯಾತ್ವಾಭಾವೋ ವಾ ಅನೇನ ಸಿದ್ಧ ಇತಿ ಭಾವಃ । ಏಕಚರಣೇನೈವ ಸವಿಸ್ತಾರಾನುಮಾನಸಂಗ್ರಹಾದತಿಚಮತ್ಕಾರೋಽಯಮ್ ॥ ೧೫೧-೧೫೨ ॥

**ಯತಶ್ಚ ತನ್ಮತೇ ಸುಪ್ತೌ ಲೀನಂ ದೇಹಾದಿಕಂ ತದಾ ।**
**ದ್ರಷ್ಟುರ್ದ್ರಷ್ಟುರ್ದೃಷ್ಟಿತೋಽನ್ಯಃ ಕಲ್ಪ್ಯಃ ಕಲ್ಪ್ಯಃ ಕ್ಷಣೇ ಕ್ಷಣೇ ॥ ೧೫೩ ॥**

**ಅರ್ಥ–** ಯತಃ= ದೃಷ್ಟಿ ಸೃಷ್ಟಿ ಪಕ್ಷಮಾಯಿಗಳಿಗೆ ಇಷ್ಟ, ಏಕೆಂದರೆ, ತನ್ಮತೇ=ಮಾಯಾವಾದಿಯ ಮತದಲ್ಲಿ, ಸುಪ್ತೌ= ನಿದ್ರೆಯಲ್ಲಿ, ದೇಹಾದಿಕಂ= ದೇಹಾದಿಗಳು, ಲೀನಂ= ಲಯ ಹೊಂದುವುವೋ, ತದಾ= ಆಗ, ದ್ರಷ್ಟುಃ ದ್ರಷ್ಟುಃ= ಪ್ರತಿಯೊಬ್ಬ ಜೀವನ, ದೃಷ್ಟಿತಃ= ದೃಷ್ಟಿಯಿಂದ, ಅನ್ಯಃ= ಅನ್ಯವು (ಬೇರೆ ಬೇರೆ ದೇಹಾದಿಯು), ಕ್ಷಣೇಕ್ಷಣೇ= ಪ್ರತಿಕ್ಷಣದಲ್ಲಿಯೂ, ಕಲ್ಪ್ಯಃ ಕಲ್ಪ್ಯಃ= ಪುನಃ ಪುನಃ ಕಲ್ಪಿಸಲ್ಪಡಬೇಕಾಗುತ್ತದೆ.

**ಅನುವಾದ** - ಮತ್ತೇನೆಂದರೆ, ಮಾಯಾಮತದಂತೆ, ನಿದ್ರೆಯಲ್ಲಿ ಚೇತನನಿರುವಾಗ, ದೇಹಾದಿಗಳು ಲಯ ಹೊಂದುತ್ತವೆ; ಆದರೆ ಸುಪ್ತಜೀವನನ್ನು ನೋಡುತ್ತಿರುವ ಪ್ರತಿಯೊಬ್ಬ ಅನ್ಯಚೇತನನ ದೃಷ್ಟಿಯಿಂದ, ಲೀನವಾದ ದೇಹಾದಿಯು, ಪ್ರತಿಕ್ಷಣದಲ್ಲಿ ಪುನಃ ಕಲ್ಪಿಸಲ್ಪಡುತ್ತದೆಂದು ತಿಳಿಯ ಬೇಕಾಗುತ್ತದೆ; ಸುಪ್ತನಿಗೆ ಲೀನವಾದ ದೇಹಾದಿಯು, ಅನ್ಯರಿಂದ ಪುನಃಕಲ್ಪಿತವಾಗದಿದ್ದರೆ ಅನ್ಯರಿಗೆ ಕಾಣುವುದು ಹೇಗೆ? ಹೀಗೆ, ಒಬ್ಬ ಬ್ರಹ್ಮಜ್ಞಾನಿಯ ಜ್ಞಾನದಿಂದ ಲಯ ಹೊಂದಿದ ಜಗತ್ತು, ಬೇರೆಯವರಿಗೆ ಪ್ರತಿಕ್ಷಣದಲ್ಲಿ ಕಲ್ಪಿತವಾಗಿ ತೋರಬೇಕೆಂದು ಹೇಳಬೇಕಾಗುತ್ತದೆ; ಇದೇ ಮಾಯಿಗಳ ದೃಷ್ಟಿ ಸೃಷ್ಟಿ ಪಕ್ಷ.

**ಭಾವವಿಲಾಸಿನೀ**–ದೃಷ್ಟಿಸೃಷ್ಟಿಪಕ್ಷಸ್ಯ ತನ್ಮತತ್ವೇ ಪುನರಪಿ ಜ್ಞಾಪಕಾಂತರಮಾಹ– **ಯತಶ್ಚೇತಿ** ॥ ಅತೋಽಪಿ ದೃಷ್ಟಿಸೃಷ್ಟಿಪಕ್ಷೋ ಮಾಯಿನಾಂ ಪಕ್ಷ ಇತಿ ಯೋಜನೀಯಮ್ । ಏವಂ ಚ ವಿಮತಂ ಜಗನ್ನ ಮಿಥ್ಯಾ । ದ್ವಿಚೇತನಸಂಬಂಧಿತ್ವಾತ್ । ಬಹುಚೇತನ ದೃಷ್ಟತ್ವಾದ್ವಾ । ಬ್ರಹ್ಮವದ್ಯತಿರೇಕೇಣ ಶುಕ್ತಿರೂಪವದ್ವಾ । ನಚ ಹೇತುರಸಿದ್ಧಃ । ಯುವೋರಿತಿ ಪ್ರಮಿನಂತೀತಿ ದ್ವಯೋರಪಿ ಶ್ರೌತತ್ವಾದಿತ್ಯನುಮಾನದ್ವಯಂ ಸಿದ್ಧಮಿತಿ ಭಾವಃ ॥ ೧೫೩ ॥

**ವಿವರಣೆ** - ವಿಮತಂ ಜಗನ್ನ ಮಿಥ್ಯಾ, ದ್ವಿಚೇತನಸಂಬಂಧಿತ್ವಾತ್ - ಬಹುಚೇತನ ದೃಷ್ಟತ್ವಾತ್ ಬ್ರಹ್ಮವತ್, ವ್ಯತಿರೇಕೇಣ ಶುಕ್ತಿರೂಪ್ಯಾದಿವದ್ವಾ ಎಂಬ ಅನುಮಾನಗಳು ಸಿದ್ಧವಾಗುತ್ತವೆ. ಇಲ್ಲಿ ಹೇತ್ವಸಿದ್ಧಿ ಇಲ್ಲ, ಯುವೋಃ ಎಂದು ದ್ವಿಚೇತನ ಸಂಬಂಧಿತ್ವ ಉಕ್ತವಾಗಿದೆ ಪ್ರಮಿನಂತಿ ಎಂಬುದರಿಂದ ಬಹುಚೇತನ ದೃಷ್ಟತ್ವ ಎಂಬ ಹೇತು ಸಿದ್ಧವಾಗಿದೆ. ಆದ್ದರಿಂದ ಜಗನ್ಮಿಥ್ಯಾತ್ವ ನಿರಾಕರಣೆಗೆ ಶ್ರುತ್ಯುಕ್ತವಾದ ಎರಡು ಅನುಮಾನಗಳು ಸಿದ್ಧವಾದವು ಎಂದು ಭಾವ.

**ಸದಾ ಯದ್ ಯಸ್ಯ ತತ್ ತಸ್ಯ ವ್ರತಮಿತ್ಯುಚ್ಯತೇ ಬುಧೈಃ ।**
**ಏವಂ ಚ ಸತ್ಯಜಗತಃ ಕರ್ತೃತಾ ನಿಯತಾಽಭವತ್ ॥ ೧೫೪ ॥**

**ಸದಾ ಯಾವದ್ಬ್ರಹ್ಮಭಾವಿತ್ವಾಚ್ಚ ತತ್ಸುಖವಜ್ಜಗತ್ ।**
**ಪರಮಾರ್ಥಸದೇವಾಸೀತ್ ಸರ್ವಂ ಚಾನುಮಯಾಽಮುಯಾ ॥ ೧೫೫ ॥**

**ಅರ್ಥ–** ಸದಾ= ಸರ್ವದಾ, ಯತ್= ಯಾವುದು, ಯಸ್ಯ= ಯಾರಿಗೆ ಸಂಬಂಧಿಸಿರುವುದೋ, ವ್ರತಂ= ನಿಯಮವೋ, ತತ್ತಸ್ಯ= ಅದು ಅವನಿಗೆ ಸ್ವಾಭಾವಿಕವೆಂದು, ಬುಧೈಃ= ವಿವೇಕಿಗಳಿಂದ, ಉಚ್ಯತೇ= ಹೇಳಲಾಗುತ್ತದೆ; ಅತಃ= ಆದ್ದರಿಂದ, ಯಾವದ್ಬ್ರಹ್ಮಭಾವಿತ್ವಾತ್= ಬ್ರಹ್ಮನಿರುವಷ್ಟು ಕಾಲವೂ ಇರುವುದರಿಂದ, ಸರ್ವಂ ಜಗತ್= ಸಮಸ್ತ ಜಗತ್ತು ಅಂದರೆ ಸಮಸ್ತ ಜಗನ್ನಿಯಾಮಕತ್ವವು, ತತ್ಸುಖವತ್= ಬ್ರಹ್ಮನ ಸುಖದಂತೆ, ಅಮುಯಾ= ಈ ಪೂರ್ವೋಕ್ತ, ಅನುಮಯಾ= ಅನುಮಾನದಿಂದ (ತರ್ಕದಿಂದ), ಪರಮಾರ್ಥಸತ್ ಏವ= ಪರಮಾರ್ಥಸತ್ಯವೇ, ಆಸೀತ್= ಆಯಿತು (ಎಂದೇ ಸಿದ್ಧವಾಯಿತು).

**ಅನುವಾದ - ಸೃಷ್ಟಿಯು, ಸತ್ಯವೆಂಬ ಈ ಶ್ರುತಿಯು, ಅದನ್ನು ಅದರ ಸೃಷ್ಟ್ಯಾದಿಕಾರ್ಯವನ್ನು ಬ್ರಹ್ಮನ ವ್ರತವೆಂದು ಹೇಳುತ್ತದೆ; ಯಾವ ಚೇತನನಿಗೆ ಯಾವುದು ತಪ್ಪಿಸಲಾಗದ ನಿಯಮವೋ ಅದೇ ಅವನ ವ್ರತವೆಂದು ವಿವೇಕಿಗಳು, ತಿಳಿಯುತ್ತಾರೆ; ಬ್ರಹ್ಮನ ಈ ನಿಯಮವೂ ಪ್ರತಿಕ್ಷಣ ಸೃಷ್ಟಿಯನ್ನು ವಿರೋಧಿಸುತ್ತದೆ; ಬ್ರಹ್ಮನಿರುವವರೆಗೂ ಪ್ರವಾಹ ರೂಪದಿಂದ ಇರುವುದೆಂಬ ಈ ಜಗತ್ತು, ಅದರ ನಿಯಾಮಕತ್ವವು ಬ್ರಹ್ಮಸುಖದಂತೆ, ಪರಮಾರ್ಥ ಸತ್ಯವೆಂದು ಏರ್ಪಡುತ್ತದೆ; ಭಗವದ್ಧರ್ಮಗಳೂ (ಕರ್ತೃತ್ವ ನಿಯಾಮಕತ್ವಗಳು), ಅವುಗಳ ಕಾರ್ಯವಾದ ನಿಯಮ್ಯ ಜಗತ್ತು, ಅವನ ಆನಂದದಂತೆ ಸತ್ಯವೆಂದೇ ಸಿದ್ಧವಾಗುತ್ತದೆ. ಬ್ರಹ್ಮನ ಆನಂದ ಪರಮಾರ್ಥಸತ್ಯವೆಂದು ಅದ್ವೈತಿ ಒಪ್ಪಿದ್ದಾನೆ.**

**ಭಾವವಿಲಾಸಿನೀ–**ಶ್ರೌತಪದಾಂತರಲಬ್ಧಮಪ್ಯನುಮಾನಂ ದರ್ಶಯತಿ ॥ ಸದೇತಿ ॥ ಅತ ಶ್ರೌತಪದಮಹಿಮ್ನಾ ಜಗತೋಽಪಿ ಯಾವದ್ಬ್ರಹ್ಮಭಾವಿತ್ವಲಾಭಾತ್ । ತತ್ಸುಖವತ್ ಬ್ರಹ್ಮಸುಖವತ್ । ಸರ್ವಂ ಜಗತಿದಿತಿ ಸಂಬಂಧಃ ॥ ೧೫೪-೧೫ ॥

**ಆಪ ಇತ್ಯುಕ್ತಿತೋ ಲೋಕಪಾವನೀಭೂತದೇವತಾಃ ।**
**ಅದುಷ್ಟಕರಣೋಪೇತಾ ನ ಭ್ರಾಮ್ಯಂತೀತ್ಯಸೂಚಯತ್ ॥ ೧೫೬ ॥**

**ಅರ್ಥ–** ಆಪ ಇತ್ಯುಕ್ತಿತಃ= ಆಪ ಎಂಬುದರಿಂದ (ಅಪ್ಪು ಲೋಕಪಾವನವೆಂದು ಪ್ರಸಿದ್ಧ. ಲೋಕಪಾವನ ಅಪ್ಪಿನ ಅಭಿಮಾನಿಗಳಾದ ದೇವತೆಗಳನ್ನು ಹೇಳಿದ್ದರಿಂದ), ಲೋಕಾಪಾವನೀಭೂತದೇವತಾಃ= ಜಗತ್ತನ್ನೇ ಪಾವನಗೊಳಿಸುವ ದೇವತೆಗಳೂ, ಅದುಷ್ಟಕರಣೋಪೇತಾಃ= ದೋಷರಹಿತ (ನಿರ್ದುಷ್ಟ) ಇಂದ್ರಿಯಗಳುಳ್ಳವರಾಗಿದ್ದು, ನ ಭ್ರಾಮ್ಯಂತಿ= (ಜಗತ್ಸತ್ಯತ್ವ ವಿಷಯದಲ್ಲಿ) ಭ್ರಾಂತರಾಗುವುದಿಲ್ಲ, ಇತಿ= ಎಂಬ ಅನುಮಾನವನ್ನು, ಅಸೂಚಯತ್= (ಶ್ರುತಿಯೇ) ಸೂಚಿಸಿರುತ್ತದೆ;

**ಅನುವಾದ** - ನಿರ್ದುಷ್ಟೇಂದ್ರಿಯ ಗೋಚರವಾದುದು ಸತ್ಯವೆಂಬ ಅನುಮಾನವನ್ನು ಈ ಶ್ರುತಿಯೇ ಸೂಚಿಸಿರುತ್ತದೆ; ಆಪಃ= ಅಬಭಿಮಾನಿಗಳಾದ ಸಕಲ ತತ್ತ್ವದೇವತೆಗಳು ಜಗತ್ಸತ್ಯತ್ವವನ್ನು ತಿಳಿಯುವರೆಂದು ಹೇಳಿ, ದೋಷರಹಿತವಾದ ಇಂದ್ರಿಯಗಳುಳ್ಳ, ಲೋಕವನ್ನೇ ಪವಿತ್ರಗೊಳಿಸುವ ಜ್ಞಾನಿಶ್ರೇಷ್ಠರಾದ ದೇವತೆಗಳಿಗೂ, ಸತ್ಯವಾದ ಈ ಜಗತ್ತು ಎಂದಿಗೂ ಭ್ರಮಾತ್ಮಕವಾಗುವು ದಿಲ್ಲವೆಂಬುದನ್ನು ಸಾಧಿಸಿರುತ್ತದೆ.

ತಸ್ಮಾದದುಷ್ಟಕರಣಜನ್ಯತ್ವಾತ್ ತದ್ದೃಶಿಃ ಪ್ರಮಾ ।
ಅಂತ್ಯಪ್ರಮಾವದಿತ್ಯುಕ್ತಂ ಸಾಧಕಂ ಚಾಪ್ಯಶೋಧಯತ್ ॥ ೧೫೭ ॥

ಪ್ರಮಿನಂತೀತ್ಯುಕ್ತಿರೇವ ವ್ಯಾವಹಾರಿಕತಾಪ್ರಥಾಮ್ ।
ನ್ಯವಾರಯದ್ ಯತೋ ಬಾಧಶೂನ್ಯಾರ್ಥಾನುಭವಃ ಪ್ರಮಾ ॥ ೧೫೮ ॥

**ಅರ್ಥ–** ತಸ್ಮಾತ್= ಆದ್ದರಿಂದ, ಅದುಷ್ಟಕರಣಜನ್ಯತ್ವಾತ್=ದೋಷರಹಿತ ಇಂದ್ರಿಯದಿಂದ ಹುಟ್ಟುವುದರಿಂದ, ತದ್ದೃಶಿಃ= ಜಗತ್ತಿನ ಪ್ರತ್ಯಕ್ಷವು, ಪ್ರಮಾ= ಯಥಾರ್ಥವೆ ಆಗಿದೆ, ಅಂತ್ಯಪ್ರಮಾವತ್= ಅದ್ವೈತಿಯು ಒಪ್ಪಿರುವ ಚರಮ ವೃತ್ತಿಯು, ಇತ್ಯುಕ್ತಂ= ಹೀಗೆ ಪೂರ್ವಾಚಾರ್ಯರು ಹೇಳಿದ, ಸಾಧಕಂ ಚ ಅಪಿ= ಸಾಧಕವಾದ ಹೇತುವನ್ನೂ ಸಹ, ಅಶೋಧಯತ್= ಶುದ್ಧಿಗೊಳಿಸಿತು; ಯತಃ= ಯಾವ ಕಾರಣದಿಂದ, ಬಾಧಶೂನ್ಯಾರ್ಥಾನುಭವಃ= ಬಾಧರಹಿತವಾದ ಅರ್ಥದ ಅನುಭವವೇ, ಪ್ರಮಾ= ಪ್ರಮೆ ಎನಿಸುವುದೋ (ಆದ್ದರಿಂದ), ಪ್ರಮಿನಂತಿ ಇತ್ಯುಕ್ತಿರೇವ= ಪ್ರಮಿನಂತಿ ಎಂಬ ಪದವೇ, ವ್ಯಾವಹಾರಿಕತಾಪ್ರಥಾಂ= (ಜಗತ್ತು) ವ್ಯಾವಹಾರಿಕಸತ್ಯತ್ವವುಳ್ಳದ್ದೆಂಬ (ನಿನ್ನ) ಪ್ರಸಿದ್ಧಿಯನ್ನು, ನ್ಯವಾರಯತ್= ನಿವಾರಿಸಿತು.

**ಅನುವಾದ** - ಆದ್ದರಿಂದ ಅದುಷ್ಟೇಂದ್ರಿಯಜನ್ಯ ಜ್ಞಾನವೇ ಪ್ರಮೆಯು, ಧ್ಯಾನದಿಂದ ಪರಿಪಕ್ವವಾಗಿ ದೋಷ ರಹಿತವಾದ ಮನಸ್ಸಿನಲ್ಲಿ ಚರಮ ಸಾಕ್ಷಾತ್ಕಾರ ಉಂಟಾದಾಗ ಅವಿದ್ಯಾನಿವೃತ್ತಿ ಎಂದು ಅದ್ವೈತಿ ಹೇಳುವಂತೆ ಅಂತ್ಯ ಪ್ರಮೆಯು ಯಥಾರ್ಥ ಎಂಬುದು ಅವನಿಗೆ ಮತವಾಗಿದೆ. ಆ ದೃಷ್ಟಾಂತದಿಂದ ಜಲಾಭಿಮಾನಿ ದೇವತೆಗಳ ಜ್ಞಾನವೂ ದೋಷ ರಹಿತ ಇಂದ್ರಿಯ ಜನ್ಯವಾಗಿದ್ದು ಯಥಾರ್ಥವೇ ಆಗಿರುತ್ತದೆ. ಜಲಾಭಿಮಾನಿ ದೇವತೆಗಳು ಲೋಕಪಾವನರೆಂದ ಮೇಲೆ ಅವರ ಇಂದ್ರಿಯಗಳು ದೋಷರಹಿತವೆಂದು ಬೇರೆ ಹೇಳಬೇಕಾಗಿಲ್ಲ. ಅದರಿಂದ ಅವರು 'ಪ್ರಮಿನಂತಿ' ಯಥಾರ್ಥ ಜ್ಞಾನವನ್ನೇ ಸಂಪಾದಿಸುತ್ತಾರೆ ಎಂದು ಶ್ರುತಿಯು ಹೇಳುತ್ತಿದೆ. ಹೀಗಾಗಿ ಪ್ರಮಿನಂತಿ ಎಂಬ ಪದಪ್ರಯೋಗದಿಂದ, ಶ್ರುತಿಯು ಪೂರ್ವಾಚಾರ್ಯರ ಉಕ್ತಿಯನ್ನು, ಸಯುಕ್ತಿಕವೆಂದೂ ಸಾಧಿಸಿತು;

**ಮಾಯಾಮತವು ಪ್ರಸಿದ್ಧಗೊಳಿಸಲಿಚ್ಛಿಸುವ ಜಗತ್ತಿನ ವ್ಯಾವಹಾರಿಕ ಸತ್ಯತ್ವವನ್ನು ನಿವಾರಿಸಿತು; ಏಕೆಂದರೆ, ವ್ಯಾವಹಾರಿಕ ಸತ್ಯವಾದ ವಸ್ತು ಬ್ರಹ್ಮ ಜ್ಞಾನದಿಂದ ಬಾಧಿತವಾಗುತ್ತದೆ ಎನ್ನುತ್ತಾರೆ. ಆದರೆ ಬಾಧರಹಿತ ಅರ್ಥಾನುಭವವೇ ಪ್ರಮೆಯು; ಜಗತ್ತನ್ನು ಸತ್ಯವೆಂದು ಪ್ರಮಿನಂತಿ ಎಂದು ಹೇಳಿ, ಶ್ರುತಿಯು ಬಾಧರಹಿತ ಅನುಭವವನ್ನು ಸೂಚಿಸಿರುತ್ತದೆ.**

**ಭಾವವಿಲಾಸಿನೀ– ಅನುಮಾನಾಂತರಂ ಚ ಶ್ರುತ್ಯೈವ ಸೂಚಿತಮಿತ್ಯಾಹ – ಆಹ ಇತಿ ॥ ತದ್ವಶಿಃ ಜಗದ್ವಶಿಃ । ಉಕ್ತಂ ಪೂರ್ವಾಚಾರ್ಯೈರುಕ್ತಮ್ । ಸಾಧಕಮ್ ಅದೃಷ್ಟಕರಣಜನ್ಯತ್ವಾದಿತಿ ಹೇತುಮಶೋಧಯತ್ । ದ್ರಷ್ಟೄಣಾಂ ನಿರ್ಮಲತ್ವೋಕ್ತ್ಯಾಽಸಿದ್ಧ್ಯಾಖ್ಯದೋಷರಹಿತಮಕರೋತ್ ॥೧೫೬-೧೫೮ ॥**

**ಏವಂ ಚ ಬಾಧಶೂನ್ಯತ್ವಾಜ್ಜಗಚ್ಚ ಬ್ರಹ್ಮವತ್ ಸದಾ ।**
**ಅವ್ಯಾವಹಾರಿಕಂ ಚಾಸೀದಾರ್ಥಿಕ್ಯಾಽನುಮಯಾಽಮುಯಾ ॥ ೧೫೯ ॥**

**ಅರ್ಥ–** ಏವಂ ಚ= ಹೀಗೆಯೇ, ಜಗತ್= ಜಗತ್ತು, ಬ್ರಹ್ಮವತ್= ಬ್ರಹ್ಮನಂತೆ, ಸದಾ= ಸರ್ವದಾ, ಬಾಧಶೂನ್ಯತ್ವಾತ್= ಬಾಧರಹಿತವಾದ್ದರಿಂದ, ಅಮುಯಾ ಆರ್ಥಿಕ್ಯಾ-ನುಮಯಾ = ಅರ್ಥಾತ್ ಸಿದ್ಧವಾಗುವ ಈ ಅನುಮಾನದಿಂದ (ತರ್ಕದಿಂದ), ಅವ್ಯಾವಹಾರಿಕಂ ಚ= ವ್ಯಾವಹಾರಿಕ ಮಾತ್ರವಲ್ಲೆಂದೂ (ವ್ಯವಹಾರಕ್ಕೆ ಮಾತ್ರ ಇದೆ- ಹೇಳಲಿಕ್ಕೆ ಮಾತ್ರ ಇದೆ, ವಸ್ತುತಃ ಇಲ್ಲವೆಂಬುದು ಸರಿಯಲ್ಲವೆಂದೂ), ಆಸೀತ್= ಸಿದ್ಧವಾಯಿತು.

**ಅನುವಾದ - ಜಗತ್ತು, ಬಾಧರಹಿತವಾದ್ದರಿಂದ, ಸದಾ ಬಾಧರಹಿತನಾದ ಬ್ರಹ್ಮನಂತೆ, ಪಾರಮಾರ್ಥಿಕ ಸತ್ಯತ್ವವುಳ್ಳದ್ದು; ಕೇವಲ ವ್ಯಾವಹಾರಿಕ ಮಾತ್ರವೆಂದಲ್ಲ (ವ್ಯಾವಹಾರಿಕವಲ್ಲವೆಂದು ಮಾತ್ರವಲ್ಲ); ಬಾಧರಹಿತತ್ವವೆಂಬುವ ಹೇತುವಿನಿಂದ (ಇದೇ ಅನುಮಾನದಿಂದ) ಅವ್ಯಾವಹಾರಿಕತ್ವವೇ ಅರ್ಥಾತ್ ಪಾರಮಾರ್ಥಿಕತ್ವವೇ ಸಿದ್ಧವಾಗುತ್ತದೆ.**

**ಭಾವವಿಲಾಸಿನೀ–ಆರ್ಥಿಕ್ಯಾ ಅರ್ಥಾತ್‌ಸಿದ್ಧಯಾ । ಅನುಮಯಾ ಬಾಧಶೂನ್ಯತ್ವಾದಿತ್ಯ-ನುಮಯಾ ॥ ೧೫೯ ॥**

**ಯಥಾ ಘಟಪಟದ್ವಿತ್ವಂ ನೈವಂ ಬ್ರಹ್ಮಸ್ವರೂಪಯೋಃ ।**
**ದ್ವಿತ್ವೇತ್ಯಪಿ ಯುವೋರಿತ್ಯಾದ್ಯುಕ್ತಿವ್ಯತ್ಯಾಸತೋ ಜಗೌ ॥ ೧೬೦ ॥**

**ಅರ್ಥ–** ಯಥಾ=ಹೇಗೆ, ಘಟಪಟದ್ವಿತ್ವಂ= ಘಟಪಟಗಳ ದ್ವಿತ್ವವೋ (ಹಾಗೆ), ಬ್ರಹ್ಮಸ್ವರೂಪಯೋಃ= ಭಗವತ್ಸ್ವರೂಪಗಳಲ್ಲಿ (ದ್ವಿತ್ವವು ಭೇದ ಸೂಚಕವು) ಏವಂ ನ= ಅಲ್ಲವೇ ಅಲ್ಲ; ದ್ವಿತ್ವೇತ್ಯಪಿ= ದ್ವಿತ್ವವೆಂದರೂ (ದ್ವಿತ್ವವು ಹೇಳಲ್ಪಟ್ಟಿದೆ ಎಂದರೂ), ಯುವೋಃ

ಇತ್ಯಾದ್ಯುಕ್ತಿ ವ್ಯತ್ಯಾಸತಃ= ಯುವೋಃ ಮೊದಲಾದ ಪದ ವ್ಯತ್ಯಾಸದಿಂದ, ಜಗೌ= ಹೇಳಿತು (ಅಭೇದವನ್ನೇ ಹೇಳಿರುತ್ತದೆ).

**ಅನುವಾದ** - 'ವಿಶ್ವಂ ಸತ್ಯಂ ಮಘವಾನಾ...' ಇತ್ಯಾದಿ ಶ್ರುತಿವಾಕ್ಯದಲ್ಲಿ ಭಗವದ್ರೂಪಗಳ ವಿಷಯದಲ್ಲಿ ದ್ವಿವಚನ ಪ್ರಯೋಗವಿದ್ದರೂ, ಆ ರೂಪಗಳು ಭಿನ್ನಗಳೆಂದು ಸಿದ್ಧವಾಗುವುದಿಲ್ಲ. 'ಯುವಯೋಃ' ಎಂಬುವ ಬದಲು 'ಯುವೋಃ' ಎಂದೂ ಪದವ್ಯತ್ಯಾಸದಿಂದ, ಘಟಪಟದ್ವಿತ್ವದಂತೆ ಇಲ್ಲಿನ ದ್ವಿವಚನ ಪ್ರಯೋಗವಲ್ಲ; ಭಗವದ್ರೂಪಗಳಲ್ಲಿ ದ್ವಿತ್ವವು ಭೇದರಹಿತವಾಗಿದೆ ಎಂದು ಸೂಚಿಸಲು 'ಯುವಯೋಃ' ಎಂಬುದನ್ನು 'ಯುವೋಃ' ಎಂದು 'ಯೋಃ' ಎಂಬ ಅಕ್ಷರ ರಹಿತವಾಗಿ ಶ್ರುತಿಯು ಪ್ರಯೋಗ ಮಾಡಿದೆ. ಭೇದವಿಲ್ಲ ಕಿಂತು ವಿಶೇಷವಿದೆ, ಎಂದು ಸೂಚಿಸಿ ಭಗವದ್ರೂಪಗಳ ಅಭೇದವನ್ನು ಸಾಧಿಸುತ್ತದೆ. ಇತ್ಯಾದಿ 'ಉಕ್ತಿ ವ್ಯತ್ಯಾಸ' ಎಂದರೆ, ಮಘವಾನೌ ಎಂಬಲ್ಲಿ ಔಕಾರ ಲೋಪ ಮಾಡಿ 'ಮಘವಾನಾ' ಎಂದುದೂ ರೂಪಭೇದವಿಲ್ಲ ಎನ್ನಲು ಜ್ಞಾಪಕ.

**ಭಾವವಿಲಾಸಿನೀ**–ದ್ವಿವಚನಪ್ರಯೋಗಾತ್ ಭಗವದ್ರೂಪಯೋರೇವ ಭೇದಮಾಶಂಕ್ಯ ಪರಿಹರತಿ॥ **ಯಥೇತಿ** ॥ ಆದಿಪದೇನ ಮಘವಾನಾ ಇತಿ ಪದಂ ಗೃಹ್ಯತೇ । ಯುವಯೋರಿತಿ ವಕ್ತವ್ಯೇ ಯುವೋರಿತ್ಯೇವ ಕಥನಾತ್ ಮಘವಾನಾವಿತಿ ವಕ್ತವ್ಯೇ ಮಘವಾನೇತ್ಯೇವ ಕಥನಾಚ್ಚ ನ ಭೇದ ಘಟಿತಂ ಮುಖ್ಯದ್ವಿತ್ವಮಿದಂ ಕಿಂತು ವಿಶೇಷ ಘಟಿತಮೇವೇತ್ಯಸೂಚಯತ್ । ಪದವ್ಯತ್ಯಾಸಸ್ಯಾರ್ಥವ್ಯತ್ಯಾಸಸೂಚಕತ್ವಾದಿತಿ ಭಾವಃ । ಇದಂ ಚ ಭಗವದ್ರೂಪದ್ವಯವಿಷಯತ್ವೇನ ಸ್ವರೂಪಭೇದಾಭಾವಸ್ಯ ನಿರ್ಣೀತತ್ವಾತ್ ಅಸ್ಪಷ್ಟಪ್ರಯೋಗ ಪರಿಗ್ರಹರೂಪತಯಾ ಜ್ಞಾಪಕಮಾತ್ರಮುದಿತಮ್ । ವಸ್ತುತಸ್ತು ಛಂದಸಿ ವ್ಯತ್ಯಯಸ್ಯಾಕಾರಾದೇಶಸ್ಯ ಚ ವಿಹಿತತ್ವೇನ ಮುಖ್ಯಪ್ರಯೋಗತ್ವಾತ್ ಮುಖ್ಯಸ್ಯ ಚ ಬಾಧಕಾಭಾವೇ ಮುಖ್ಯಾರ್ಥ ಪ್ರಾಪಕತ್ವನಿಯಮೇನ ಯಾದೃಶತಾದೃಶಾಃ ಶ್ರೌತದ್ವಿವಚನಬಹುವಚನಾಂತಪ್ರಯೋಗಾಃ ಸ್ವರೂಪಭೇದಸ್ಯೈವ ಪ್ರಾಪಕಾಃ । ಬಾಧಕೇ ಸತಿ ತು ಯಥಾ ಯೋಗ್ಯಂ ನೀಯಂತೇ । ಸ್ಪಷ್ಟಸ್ವರೂಪಭೇದ-ಜ್ಞಾಪಕಸದ್ಭಾವೇ ತು ಸುತರಾಂ ಸ್ವರೂಪಭೇದಸ್ಯೈವ ಸಾಧಕಾಃ । ಅತ ಏವ ಹಿ "ದ್ವಾಸುಪರ್ಣಾ" ಇತಿ ಪ್ರಯೋಗಬಲಾಜ್ಜೀವೇಶಯೋರ್ಭೇದಸಾಧನಂ ಬಾಧಕಾಭಾವಾತ್ । ಅಶನಾನಶನಾಖ್ಯ-ವಿರುದ್ಧಧರ್ಮಸ್ಯ ತಯೋರಿತಿ ಸ್ಪಷ್ಟದ್ವಿವಚನಾಂತರಸ್ಯ ಭೇದವಾಚಕಾನ್ಯಪದಸ್ಯ ಸಮಾಖ್ಯಸ್ಯೈತೌ ಸುಪರ್ಣಾವೇತಾವಿತಿ ತತ್ರೈವ ಸ್ಪಷ್ಟದ್ವಿವಚನಸ್ಯ ಚ ಸಾಧಕಸ್ಯ ಸದ್ಭಾವಾತ್ ॥ ೧೬೦ ॥

**ವಿವರಣೆ** - ಯುವಯೋಃ ಎಂದು ಹೇಳುವ ಬದಲು ಯುವೋಃ ಎಂದು ಹೇಳಿರುವುದೂ ಮಘವಾನೌ ಎಂಬುದರ ಬದಲು ಮಘವಾನಾ ಎಂದು ಹೇಳಿರುವುದೂ, ಇಲ್ಲಿ ಹೇಳಿರುವ ದ್ವಿತ್ವವು ಭೇದಘಟಿತವಾದ ಮುಖ್ಯ ದ್ವಿತ್ವವಲ್ಲ-ವಿಶೇಷ ಘಟಿತವಾದುದೆಂಬುದನ್ನು ಸೂಚಿಸುತ್ತದೆ; ಪದ ವ್ಯತ್ಯಾಸವು ಅರ್ಥ ವ್ಯತ್ಯಾಸವನ್ನೂ ಸೂಚಿಸುತ್ತದೆಂಬ ನಿಯಮವೂ ಇದೆ; ಇದು ಭಗವದ್ರೂಪಗಳಲ್ಲಿ ಭೇದವಿಲ್ಲವೆಂದು

ನಿರ್ಣಯಿಸಲಾಗಿರುವುದರ ಜ್ಞಾಪಕ ಮಾತ್ರವು; ವಸ್ತುತಃ ಶ್ರುತಿಯಲ್ಲಿ ಕಾಣುವ ದ್ವಿವಚನ, ಬಹುವಚನ ಪ್ರಯೋಗವು, ಬೇರಾವ ಬಾಧಕವೂ ಇಲ್ಲದಿದ್ದಲ್ಲಿ ಸ್ವರೂಪ ಭೇದಸಾಧಕವೇ ಆಗುತ್ತದೆ; ವೇದ ಶಬ್ದಗಳಲ್ಲಿ ವ್ಯತ್ಯಾಸವು ವೈದಿಕ ವ್ಯಾಕರಣ ಸಮ್ಮತವೇ ಆಗಿರುವುದರಿಂದ ಶಬ್ದ ವ್ಯತ್ಯಾಸ ಮುಖ್ಯವೇ ಆಗಿದ್ದು ಮುಖ್ಯಾರ್ಥವನ್ನೇ ಹೇಳುತ್ತದೆ. ಆದರೆ ಮುಖ್ಯಾರ್ಥದಲ್ಲಿ ಬಾಧಕವಿದ್ದಾಗ ಶಬ್ದ ವ್ಯತ್ಯಾಸವು ಗೌಣಾರ್ಥ ಸೂಚಕವಾಗುತ್ತದೆ. ಬಾಧವಿಲ್ಲದಿದ್ದಲ್ಲಿ ಅಲ್ಲ. ಹೀಗಾಗಿ ದ್ವಾಸುಪರ್ಣಾ ಶ್ರುತಿಯಲ್ಲಿರುವ ದ್ವಿವಚನವು ಜೀವೇಶ್ವರರ ಸ್ವರೂಪ ಭೇದಸಾಧಕವೇ ಆಗಿದೆ; ಅಶನ-ಅನಶನಾದಿ ವಿರುದ್ಧ ಧರ್ಮ ನಿರೂಪಣವೆಂಬ ಸಾಧಕಗಳಿರುವುದರಿಂದ, ಅಲ್ಲಿ ಅಭೇದವನ್ನು ತಿಳಿಯಲು ಬರುವುದೇ ಇಲ್ಲವೆಂಬುದು ಸ್ಪಷ್ಟವಿದೆ; ಸಮಾಖ್ಯಾಸ್ಮೃತಿಗಳೂ, ಅನ್ಯಸ್ಪಷ್ಟಶ್ರುತಿಗಳೂ ಸಾಧಕವಾಗಿವೆ; ಪ್ರಕೃತ 'ವಿಶ್ವಂ ಸತ್ಯಂ ಮಘವಾನಾ' ಎಂಬ ಶ್ರುತಿಯಲ್ಲಿ ಮಘವಾನೌ-ಇತ್ಯಾದಿ ದ್ವಿವಚನವು, ಭಗವದ್ರೂಪಗಳಲ್ಲಿ ಭೇದಕ್ಕೆ ಬಾಧಕವಿರುವುದರಿಂದ ಭೇದವನ್ನು ಹೇಳುತ್ತದೆಂದು ತಿಳಿಯಲು ಬರುವುದೇ ಇಲ್ಲ.

**ಚನೇತಿ ವೈದಿಕಪದಾನ್ನಾನ್ಯಥಾತ್ವಂ ಕಥಂಚನ ।**
**ಇತ್ಯವಧಾರಯತ್ ಸ್ವಾರ್ಥಮನೇಕಾರ್ಥಂ ಯದವ್ಯಯಮ್ ॥ ೧೬೧ ॥**

**ಅರ್ಥ–** ಚನೇತಿ ವೈದಿಕಪದಾತ್- ಚನ ಎಂಬ ಶ್ರುತಿಯಲ್ಲಿರುವ ಪದದಿಂದ, (ಆಪಶ್ಚನ ಪ್ರಮಿನಂತಿ ಎಂಬಲ್ಲಿನ ಚನ ಪದದಿಂದ), ಕಥಂಚನ= ಹೇಗೂ (ಯಾವ ದೃಷ್ಟಿಯಿಂದಲೂ), ನ ಅನ್ಯಥಾತ್ವಂ= ಅನ್ಯಥಾತ್ವವಿಲ್ಲ ಎಂದು ಸ್ವಾರ್ಥಂ= ತಾನು ಹೇಳಿದ್ದನ್ನು ಅವಧಾರಯತ್= ಸ್ಥಿರಪಡಿಸಿತು. ಯತ್= ಯಾವ ಕಾರಣದಿಂದ, ಅವ್ಯಯಂ= ಅವ್ಯಯವು, ಅನೇಕಾರ್ಥಂ= ಅನೇಕ ಅರ್ಥಗಳುಳ್ಳದ್ದಾಗಿರುವುದೋ (ಆದ್ದರಿಂದ).

**ಅನುವಾದ -** 'ಆಪಶ್ಚನ ಪ್ರಮಿನಂತಿ' ಎಂಬಲ್ಲಿ ಈ ಶ್ರುತಿಯು ಉಪಯೋಗಿಸಿರುವ 'ಚನ' ಎಂಬ ಪದವು ಉಕ್ತವಿಷಯದಲ್ಲಿ ಸರ್ವಥಾ ಅನ್ಯಥಾತ್ವವಿಲ್ಲ ಎಂಬ ಅವಧಾರಣವನ್ನು ಹೇಳುತ್ತದೆ. 'ಚನ' ವೈದಿಕ ಪದವು ಅವ್ಯಯವು; ಅವ್ಯಯವು ಅನೇಕಾರ್ಥವುಳ್ಳದ್ದೆಂಬ ನಿಯಮವೂ ಇದೆ; ಆದರಿಂದ ಪ್ರಕೃತದಲ್ಲಿ ಈ ಅವ್ಯಯವು ತನ್ನಿಂದ ಉಕ್ತವಾದುದನ್ನೇ, ಜಗತ್ತಿನ ಸತ್ಯತ್ವವನ್ನೇ ದೃಢಪಡಿಸುವ ಅವಧಾರಣಾರ್ಥವುಳ್ಳದ್ದು ಎಂದು ವಿವಕ್ಷೆ ಮಾಡುವುದು ಅಯುಕ್ತವಾಗುವುದಿಲ್ಲ.

**ಭಾವವಿಲಾಸಿನೀ–**ಚನ ಪದಸ್ಯಾರ್ಥಮಾಹ – **ಚನೇತಿ** ॥ ಅವಧಾರಯತ್ । ಪ್ರಮಿನಂತ್ಯೇವೇತ್ಯವಧಾರಿತವತೀ । ಕಥಂಚನ ಅನ್ಯಥಾತ್ವಂ ನೇತ್ಯೇವಕಾರಾರ್ಥಕಥನಮ್ । ಚನಪದಸ್ಯ ಏವೇತ್ಯರ್ಥಃ ಕಥಮಿತ್ಯತ ಆಹ – **ಅನೇಕಾರ್ಥಮಿತಿ** ॥ ಯತ್ ಯಸ್ಮಾತ್ । ಕಿಂಚ

ವೈದಿಕಮರ್ಯಾದಯಾ ಚ ನೇತ್ಯೇವಪದಮ್ । ತಸ್ಯ ಚಾಪ್ರಸಿದ್ಧಪದದ್ವಾದ್ಯಥಾಯೋಗ್ಯಮರ್ಥೋ ವಕ್ತವ್ಯಃ । ಸ ಚ ಭಗವತ್ಕೃತ ವಿಶ್ವಸ್ಯ ಸತ್ಯತ್ವೋಕ್ತ್ಯಾ ತಂ ಸ್ತೋತುಕಾಮಾಯಾಃ ಶ್ರುತೇಃ ಸ್ವೋಕ್ತಸತ್ಯತ್ವಸ್ಥಿರೀಕರಣಾಯೋಕ್ತ ಏವೇತಿ ಭಾವಃ ॥ ೧೬೧ ॥

**ವಿವರಣೆ** - ಆಪಶ್ಚನ ಎಂಬಲ್ಲಿ ಚನ ಎಂಬುದು ಒಂದು ಅವ್ಯಯ. ಅವ್ಯಯಕ್ಕೆ ಅನೇಕಾರ್ಥಗಳಿರುತ್ತವೆ. ಪ್ರಕೃತದಲ್ಲಿ ಯೋಗ್ಯವಾದ ಒಂದು ಅರ್ಥವಿಟ್ಟುಕೊಳ್ಳಬೇಕು. ಪ್ರಕೃತದಲ್ಲಿ ಶ್ರುತಿಯಾದರೂ ಭಗವನ್ನಿರ್ಮಿತ ವಿಶ್ವಕ್ಕೆ ಸತ್ಯತ್ವವನ್ನು ಅಬಭಿಮಾನಿಗಳು ಯಥಾರ್ಥವಾಗಿ ತಿಳಿಯುತ್ತಾರೆ ಎಂದು ಹೇಳುತ್ತಿದೆ. ಅದನ್ನು ದೃಢೀಕರಿಸಲು 'ಚನ' ಎಂಬುದು ಅವಧಾರಣಾರ್ಥಕ ಎಂದೇ ಹೇಳಬೇಕು.

ಸಾರ್ವಜ್ಞಶಸ್ತಚಿತ್ತತ್ವಪರಾಭಾವನಶಕ್ತಿಭಿಃ ।
ಸ್ವಾತಂತ್ರ್ಯೇಣ ಚ ಪೂರ್ವಾ ವಾಕ್ ಕರ್ತ್ರಜ್ಞಾನಂ ಚಕರ್ತ ಹಿ ॥ ೧೬೨ ॥

**ಅರ್ಥ–** ಸಾರ್ವಜ್ಞಶಸ್ತಚಿತ್ತತ್ವಪರಾಭಾವನಶಕ್ತಿಭಿಃ= ಕವಿಪದದಿಂದ ಸರ್ವಜ್ಞನೂ, ಮನೀಷೀ ಪದದಿಂದ ಪ್ರಶಸ್ತವಾದ ಚಿತ್ತವುಳ್ಳವನೂ, ಪರಿಭೂಪದದಿಂದ ಸರ್ವರನ್ನು ಪರಾಭವಗೊಳಿಸುವ ಸಾಮರ್ಥ್ಯವುಳ್ಳವನೂ, ಆಗಿರುವನೆಂದು ಹೇಳಿರುವುದರಿಂದಲೂ ಸ್ವಾತಂತ್ರ್ಯೇಣ ಚ= ಸ್ವಯಂಭು ಪದದಿಂದ ಸ್ವಾತಂತ್ರ್ಯದಿಂದಲೂ, ಕರ್ತ್ರಜ್ಞಾನಂ= 'ವ್ಯದಧಾತ್' ಪದಬೋಧ್ಯಕರ್ತನಾದ ಶ್ರೀ ನಾರಾಯಣನ ಅಜ್ಞಾನವನ್ನು, ಪೂರ್ವಾವಾಕ್= ಮೊದಲವಾಕ್ಯವು, ಚಕರ್ತ ಹಿ= ಖಂಡಿಸಿತು ಯಾಥಾತಥ್ಯತಃ ಎಂಬ ವಾಕ್ಯಕ್ಕಿಂತ ಮೊದಲು ಉದಹರಿಸಿದ 'ಕವಿರ್ಮನೀಷೀ' ಇತ್ಯಾದಿ ವಾಕ್ಯವು, ಜಗತ್ಕರ್ತನಾದ ಶ್ರೀ ನಾರಾಯಣನ ಅಜ್ಞಾನಾದಿ ದೋಷಗಳನ್ನು ಖಂಡಿಸಿ, ನಿರ್ದೋಷತ್ವವನ್ನು ಸಾಧಿಸಿದೆ.

**ಅನುವಾದ** - ಸರ್ವಜ್ಞತ್ವ, ಪ್ರಶಸ್ತಚಿತ್ತತ್ವ, ಸರ್ವಪರಾಭವಶಕ್ತಿತ್ವಗಳಿಂದ (ಇವು ಶ್ರುತಿಗತವಾದ ಕವಿ, ಮನೀಷೀ, ಪರಿಭೂ, ಶಬ್ದಗಳಿಂದ ಹೇಳಲಾದ ಧರ್ಮಗಳು), 'ಸ್ವಯಂಭೂ' ಪದದಿಂದ ಸ್ವತಂತ್ರನೆಂಬ ಗುಣದಿಂದಲೂ, ಯುಕ್ತನಾದ ಜಗತ್ಕರ್ತನಾದ ಭಗವಂತನಿಗೆ ಅಜ್ಞಾನಾದಿ ದೋಷಗಳಿರುವುದು ಅಸಂಭವವಾದ್ದರಿಂದ ಅವನಲ್ಲಿ ಅಜ್ಞಾನಾದಿ ದೋಷಗಳನ್ನು 'ಕವಿರ್ಮನೀಷೀ' ಇತ್ಯಾದಿ ಶ್ರುತಿಯು ಪರಿಹರಿಸಿದೆ. ದೋಷರಾಹಿತ್ಯವನ್ನು ಸಾಧಿಸಿದೆ.

**ಭಾವವಿಲಾಸಿನೀ–**ಪುನಃ ಸಿಂಹಾವಲೋಕನನ್ಯಾಯೇನ ಕವಿರ್ಮನೀಷೀತಿ ಶ್ರುತೇಃ ಪದಶೋಧನಂ ಕರೋತಿ ॥ ಸರ್ವಜ್ಞೇತಿ ॥ ಕವಿಪದೇನ ಸಾರ್ವಜ್ಞಂ ಮತುಪಃ ಪ್ರಾಶಸ್ತ್ಯಾರ್ಥತ್ವಾತ್ ಮನೀಷಾ ಅಸ್ಯ ವರ್ತತ ಇತಿ ಮನೀಷಿಪದೇನ ಶಸ್ತಚಿತ್ತತ್ವಮ್ । ಪರಿಭವತಿ ಪರಿಭಾವಯತಿ ವಾ ಸರ್ವಮಿತಿ ವ್ಯುತ್ಪತ್ತ್ಯಾ ಪರಿಭೂಪದೇನ ಪರಾಭಾವನ ಶಕ್ತಿಃ । ಸ್ವಯಮೇವ ಭವತಿ । ನತ್ವನ್ಯಪ್ರೇರಿತ ಇತಿ ಸ್ವಯಂಭೂಪದೇನ ಸ್ವಾತಂತ್ರ್ಯಮ್ । ಕರ್ತುರ್ವ್ಯದಧಾದಿತಿ

ಪದೋಕ್ತಜಗತ್ಕರ್ತುರ್ನಾರಾಯಣಸ್ಯಾಜ್ಞಾನವತ್ । ಸಾರ್ವಜ್ಞಾದಿ ಗುಣಭರಿತ-ಸ್ಯಾಜ್ಞಾನಾಯೋಗಾದಿತಿ ಭಾವಃ ॥ ೧೬೨ ॥

**ವಿವರಣೆ** - ಮನೀಷೀ ಎಂಬ ಪದವು ಪ್ರಶಸ್ತಚಿತ್ತವುಳ್ಳವನೆಂಬ ಅರ್ಥದಲ್ಲಿ ಹೊರಟದೆ. ಮನೀಷಾ ಅಸ್ಯವರ್ತತ ಇತಿ ಮನೀಷೀ ಎಂದು ವ್ಯುತ್ಪತ್ತಿ. ಮತುಪ್ ಪ್ರತ್ಯಯಾಂತ ಶಬ್ದವಿದು. ಮತುಪ್ ಪ್ರತ್ಯಯವು 'ಪ್ರಾಶಸ್ತ್ಯ' ಎಂಬ ಅರ್ಥವುಳ್ಳದ್ದು.

**ತೇನಾಜ್ಞಾನಾಮೂಲವಸ್ತುತ್ವಾಚ್ಚಾರ್ಥಾ ಬ್ರಹ್ಮವತ್ ಸದಾ ।**
**ಪರಮಾರ್ಥಾ ಇತಿ ಸ್ವೋಕ್ತೇ ಯುಕ್ತಿಂ ಚ ಪ್ರತ್ಯಪೀಪದತ್ ॥ ೧೬೩ ॥**

**ಅರ್ಥ**- ತೇನ= ಆದರಿಂದ (ಅಜ್ಞಾನದ ನಿರಾಕರಣೆಯಿಂದ), ಅಜ್ಞಾನಾಮೂಲ ವಸ್ತುತ್ವಾತ್= (ಜಗತ್ತು) ಅಜ್ಞಾನಮೂಲವಲ್ಲದ (ಅಜ್ಞಾನ ಪರಿಣಾಮವಲ್ಲದ), ಅರ್ಥಾಃ= ವಸ್ತುವಾದ ಸೃಷ್ಟಿಯು, ಬ್ರಹ್ಮವತ್= ಬ್ರಹ್ಮನಂತೆ, ಸದಾ= ಯಾವಾಗಲೂ, ಪರಮಾರ್ಥಾ= ಸತ್ಯವಾದುವು, ಇತಿ ಸ್ವೋಕ್ತೇಃ= ಎಂದು ಹೇಳಿದ ತನ್ನ ಮಾತಿನ ಸತ್ಯತೆಗೆ, ಯುಕ್ತಿಂ ಚ= ಬ್ರಹ್ಮನಿಗೆ ಅಜ್ಞಾನವಿಲ್ಲ ಎಂಬ ಯುಕ್ತಿಯನ್ನು ಸಹ, ಪ್ರತ್ಯಪೀಪದತ್= ಪ್ರತಿಪಾದಿಸಿರುತ್ತದೆ.

**ಅನುವಾದ** - ಜಗತ್ತು ಮಿಥ್ಯೆ ಏಕೆಂದರೆ ಅದು ಅಜ್ಞಾನ ಪರಿಣಾಮ ರೂಪವಾದುದೆಂದು ಮಾಯಿಮತ. ಆದರೆ ಶ್ರುತಿಯು ಬ್ರಹ್ಮನಲ್ಲಿ ಅಜ್ಞಾನವಿಲ್ಲ ಎನ್ನುತ್ತಿದೆ. ಆದರಿಂದ ಅವನ ಸೃಷ್ಟಿ ಅಜ್ಞಾನ ಕಾರ್ಯವಲ್ಲ ಎಂದು ತಿಳಿಯುತ್ತದೆ. ಅಜ್ಞಾನರಾಹಿತ್ಯವನ್ನು ಸಾಧಿಸುವುದರಿಂದ, ಸೃಷ್ಟಿಯು ಬ್ರಹ್ಮನಂತೆ ಸದಾ ಪರಮಾರ್ಥ ಸತ್ಯತ್ವವುಳ್ಳದ್ದೆಂಬ ತನ್ನ ಮಾತನ್ನು ಸ್ಥಾಪಿಸುವ, ಯುಕ್ತಿಯನ್ನೂ, ಈ ಶ್ರುತಿಯು, ಪ್ರತಿಪಾದಿಸಿರುತ್ತದೆ.

ಭಾವವಿಲಾಸಿನೀ–ತೇನ ಅಜ್ಞಾನನಿರಾಕರಣೇನ ॥ ೧೬೩ ॥

**ಕಿಂಚಾಧಿಷ್ಠಾನಯಾಥಾತ್ಮ್ಯದ್ರಷ್ಟೃದೃಶ್ಯತ್ವತಶ್ಚ ಸತ್ ।**
**ಜಗದ್ ಬ್ರಹ್ಮವದೇವೇತಿ ಯುಕ್ತಿಂ ವಕ್ತಿ ಕವೇರ್ಗುಣಃ ॥ ೧೬೪ ॥**

**ಅರ್ಥ**– ಕಿಂಚ= ಮತ್ತೂ ಏನೆಂದರೆ, ಅಧಿಷ್ಠಾನಯಾಥಾತ್ಮ್ಯದ್ರಷ್ಟೃದೃಶ್ಯತ್ವತಃ ಅಧಿಷ್ಠಾನದ (ಜಗತ್ತಿನ ಅಧಿಷ್ಠಾನದ) ಸತ್ಯಸ್ವರೂಪವನ್ನು ಕಂಡವನು ಜಗತ್ತನ್ನು ನೋಡುವುದರಿಂದ, ಜಗತ್= ಜಗತ್ತು, ಬ್ರಹ್ಮವತ್ ಏವ ಸತ್= ಬ್ರಹ್ಮನಂತೆಯೇ ಸತ್ಯವೇ, ಇತಿ ಯುಕ್ತಿಂ= ಎಂಬ ಯುಕ್ತಿಯನ್ನು ಕವೇಃ ಗುಣಃ= ಸರ್ವಜ್ಞನೆಂಬ ಗುಣವು, ವಕ್ತಿ= ಹೇಳುತ್ತದೆ (ತಿಳಿಸಿಕೊಡುತ್ತದೆ).

**ಅನುವಾದ** - ರಜತಾರೋಪಕ್ಕೆ ಶುಕ್ತಿ ಹೇಗೆ ಅಧಿಷ್ಠಾನವೋ ಹಾಗೆ ಜಗದಾರೋಪಕ್ಕೆ ಬ್ರಹ್ಮ ಅಧಿಷ್ಠಾನ ಎಂದು ಮಾಯಿಮತ. ಸರ್ವಜ್ಞ ಎಂದರೆ ಅವನು ಅಧಿಷ್ಠಾನ

ಯಾಥಾತ್ಮ್ಯಜ್ಞಾನ ಉಳ್ಳವನೆಂದಂತಾಯಿತು. ಅಧಿಷ್ಠಾನ ಯಾಥಾತ್ಮ್ಯ-ಜ್ಞಾನವಿಲ್ಲದಿದ್ದಾಗ ಭ್ರಮ ಬರುತ್ತದೆ. ಇರುವಾಗ ಭ್ರಮ ಬರುವುದಿಲ್ಲ. ಕವಿಪದದಿಂದ ಜಗತ್ಕರ್ತೃತ್ವವನ್ನು ಸರ್ವಜ್ಞವೆಂದು ಶ್ರುತಿಯು ಹೇಳುವ ಮೂಲಕ ಅವನಿಗೆ ಅಧಿಷ್ಠಾನ ಯಾಥಾತ್ಮ್ಯಜ್ಞಾನವಿದೆ ಅದರಿಂದ ಸೃಷ್ಟಿ ಅಜ್ಞಾನ ದಿಂದಾದುದಲ್ಲ. ಅಜ್ಞಾನದಿಂದಾಗದಿರುವ ಬ್ರಹ್ಮನಂತೆಯೇ ಸೃಷ್ಟಿ ಪಾರಮಾರ್ಥಿಕ ಸತ್ಯ ಎಂದು ಶ್ರುತಿ ಹೇಳುತ್ತಿದೆ. ಹೀಗೆ ಜಗತ್ತು ಆರೋಪಿತವಾದ ಮಿಥ್ಯಾ ವಸ್ತುವಲ್ಲ, ಕಿಂತು, ಬ್ರಹ್ಮನಂತೆ ಸತ್ಯವೆಂಬ, ಯುಕ್ತಿಯನ್ನೂ ಸೂಚಿಸುತ್ತದೆ.

**ಭಾವವಿಲಾಸಿನೀ–** ಕವೇರ್ಗುಣಃ ಸಾರ್ವಜ್ಞಮ್ । ಸರ್ವಮಪರೋಕ್ಷೀಕೃತ್ಯ ಪಶ್ಯತಃ ಪರಮಾತ್ಮನಃ ಅಧಿಷ್ಠಾನಯಾಥಾತ್ಮ್ಯದರ್ಶನಂ ಜಗದ್ದರ್ಶನಂ ಚಾವಶ್ಯಕಮಿತ್ಯುಕ್ತ ಯುಕ್ತಿರಪ್ಯರ್ಥಾಲ್ಲಬ್ಧೇತಿ ಭಾವಃ ॥ ೧೬೪ ॥

ಅನೀದೃಗ್ಜಗತೋ ಬ್ರಹ್ಮಭೇದಂ ಸರ್ವೇಶತಾಂ ಗುಣಾನ್ ।
ದೋಷೋದ್ಧೂನನಶಕ್ತಿಂ ಚ ವಕ್ತಿ ಸರ್ವಪದಾವಲೀ ॥ ೧೬೫ ॥

**ಅರ್ಥ–** ಅನೀದೃಕ್ ಜಗತಃ= ಸಾರ್ವಜ್ಞಾದಿಗುಣರಹಿತವಾದ ಜಗತ್ತಿನ ದೆಶೆಯಿಂದ, ಬ್ರಹ್ಮಭೇದಂ= ಬ್ರಹ್ಮನ ಭೇದವನ್ನೂ, ಸರ್ವೇಶತಾಂ= ಸರ್ವೇಶ್ವರತ್ವಾದಿ (ಜಗದ್ಭಿನ್ನತ್ವ ಸರ್ವೇಶತ್ವ ನಿರ್ದೋಷತ್ವಗಳೆಂಬ ಮೂರು) ಗುಣಗಳೊಂದಿಗೆ, ಗುಣಾನ್= ಸಾರ್ವಜ್ಞಾದಿ ಗುಣಗಳನ್ನು, ದೋಷೋದ್ಧೂನನಶಕ್ತಿಂ= ದೋಷಗಳನ್ನು ಮೂಲತಃ ಕಿತ್ತಿ ಓಡಿಸುವ ಸಾಮರ್ಥ್ಯವನ್ನು, ಸರ್ವಪದಾವಲೀ ಚ= ಈ ಶ್ರುತಿಯಲ್ಲಿರುವ ಪದಸಮೂಹವೇ, ವಕ್ತಿ= ಹೇಳುತ್ತದೆ.

**ಅನುವಾದ** - ಶ್ರುತಿಗತ ಪದಸಮೂಹವು, ಸರ್ವಜ್ಞತ್ವಾದಿ ಗುಣರಹಿತವಾದ ಜಗತ್ತಿನಿಂದ ಸರ್ವಜ್ಞತ್ವಾದಿ ಗುಣವುಳ್ಳ ಬ್ರಹ್ಮನ ಭೇದವನ್ನೂ ನಿರೂಪಿಸುವುದರೊಂದಿಗೆ, ಸರ್ವೇಶ್ವರತ್ವವನ್ನೂ ಸರ್ವಜ್ಞತ್ವಾದಿ ಗುಣಗಳನ್ನೂ, ಸಕಲ ದೋಷವನ್ನು ತಡೆದು ಓಡಿಸುವ ಸಾಮರ್ಥ್ಯವನ್ನೂ ಹೇಳುತ್ತದೆ.

**ಭಾವವಿಲಾಸಿನೀ–**ಅನೀದೃಗ್ಜಗತಃ ಸಾರ್ವಜ್ಞಾದಿಗುಣರಹಿತಜಗತಃ ಸಾಕಾಶಾತ್ । ಗುಣಾನ್ ಸಾರ್ವಜ್ಞಾದಿಗುಣಾನ್ । ಸೂಚನಯಾ ಸಾಕ್ಷಾತ್ ಜಗತ್ ಸತ್ಯತ್ವಂ ಹರೇಃ ಸಕಲಜಗದ್ಭಿನ್ನತ್ವ-ಸರ್ವೇಶ್ವರತ್ವನಿರ್ದೋಷತ್ವಾಖ್ಯಪ್ರಮೇಯತ್ರಯಂ ಚೇಯಮೇವ ಶ್ರುತಿರ್ಯುಕ್ತಿಮುಖೇನ ಶ್ರುತಿಮುಖೇನ ಚ ಸಾಧಯಂತೀ ಮನೋಹರಪದಚುತುಷ್ಟಯಾ ಕಾಮಧೇನುರಿವ ಸೌರಭಚತುಷ್ಟಯಾರ್ಥಮಪಿ ಸ್ಪಷ್ಟೀಚಕಾರೇತಿ ಭಾವಃ ॥ ೧೬೫ ॥

**ವಿವರಣೆ** - ಈ ಶ್ರುತಿಯಲ್ಲಿನ ಕವಿ ಮೊದಲಾದ ನಾಲ್ಕು ಪದಗಳು ನಾಲ್ಕುಕಾಲಿನ ಕಾಮಧೇನುವಿನಂತಿವೆ. ಶ್ರುತ್ಯುಕ್ತ (ಸೂಚಿತ) ಯುಕ್ತಿಗಳಿಂದಲೂ, ಶ್ರುತಿಪದಗಳಿಂದಲೂ

ಈ ಶ್ರುತಿಯು ಶ್ರೀಹರಿಗೆ, ಸರ್ವಜ್ಞತ್ವಾದಿಗುಣ ಸಕಲ ಜಗದ್ಭಿನ್ನತ್ವ ಸರ್ವೇಶ್ವರತ್ವ ನಿರ್ದೋಷತ್ವ ಜಗತ್‌ಸತ್ಯತ್ವ ಪ್ರಮೇಯಗಳನ್ನು, ನಾಲ್ಕು ಸೌರಭಗಳ ಅರ್ಥವನ್ನು ಸ್ಪಷ್ಟಪಡಿಸಿದೆ. ಕವಿ ಪದದಿಂದ ಸರ್ವಜ್ಞತ್ವಾದಿ ಗುಣಗಳನ್ನು ಸೂಚಿಸಿದೆ. ಇದು ಗುಣ ಸೌರಭಾರ್ಥ. ಸರ್ವಜ್ಞತ್ವಾದಿ ಗುಣರಹಿತವಾದ ಜಗತ್ತಿಗಿಂತ ಭೇದವನ್ನು ಹೇಳುವುದರಿಂದ ಭೇದ ಸೌರಭಾರ್ಥ ಉಕ್ತವಾಯಿತು. ಜಗತ್‌ಸತ್ಯತ್ವವನ್ನು ಹೇಳುವ ಮೂಲಕ ವಿಶ್ವಸೌರಭಾರ್ಥ ಉಕ್ತವಾಯಿತು. ಸರ್ವೇಶ್ವರತ್ವ ನಿರ್ದೋಷತ್ವಗಳನ್ನು ಹೇಳುವ ಮೂಲಕ ಶುದ್ಧಿ ಸೌರಭಾರ್ಥ ಉಕ್ತವಾಯಿತು.

ಅಲ್ಪಜ್ಞತ್ವವಿಹೀನತ್ವಾತ್ ಸಾವದ್ಯಧಿಷಣೋಜ್ಝಿತೇಃ ।
ಅಪೂರ್ಣಯತ್ನಶೂನ್ಯತ್ವಾದನ್ಯಾಧೀನೇಚ್ಛತಾಚ್ಯುತೇಃ ॥ ೧೬೬ ॥

ಜೀವಾಭಿನ್ನೋ ನಿರ್ಗುಣಶ್ಚ ಭಾವಾಜ್ಞಾನಸಮಾವೃತಃ ।
ಅಲ್ಪೇಶ್ವರಶ್ಚ ಘಟವದ್ ಯಸ್ಮಾನ್ನಾಸೀನ್ಮಹಾಪ್ರಭುಃ ॥ ೧೬೭ ॥

ತಸ್ಮಾಚ್ಛ್ರುತಿದ್ವಯಂ ಯುಕ್ತಿವ್ರಾತಮಂಡನಮಂಡಿತಮ್ ।
ಅಲಂಕರೋತಿ ವಾಙ್ನಾರೀವದನಂ ಬುಧಸಂಸದಿ ॥ ೧೬೮ ॥

**ಅರ್ಥ–** ಜೀವಾಭಿನ್ನಃ= (ಶ್ರೀಹರಿಯು) ಜೀವಾಭಿನ್ನನು (ಜೀವನಿಂದ ಅಭಿನ್ನನು), ನಿರ್ಗುಣಶ್ಚ= ನಿರ್ಗುಣನೂ, ಭಾವಾಜ್ಞಾನ ಸಮಾವೃತಃ= ಭಾವರೂಪ ಅಜ್ಞಾನದಿಂದ ಆವೃತನೂ (ತಿರೋಧಾನ ಹೊಂದಿದ ಸ್ವರೂಪವುಳ್ಳವನೂ), ಅಲ್ಪೇಶ್ವರಶ್ಚ= ಅಲ್ಪನಾದ ಈಶ್ವರತ್ವವುಳ್ಳವನೂ (ಅಲ್ಪನಿಯಾಮಕತ್ವವು ಸರ್ವ ಜೀವರಲ್ಲಿ ಕಂಡಿದೆ), ಮಹಾಪ್ರಭುಃ= ಮಹಾಸ್ವಾಮಿಯಾದ ಶ್ರೀಹರಿಯು, ಯಸ್ಮಾತ್= ಯಾವ ಕಾರಣದಿಂದ (ಹೇತುವಿನಿಂದ), ನ ಆಸೀತ್= ಆಗಿರುವುದಿಲ್ಲವೋ (ಇದಕ್ಕೆ ಹೇತುಗಳು ಯಾವುವೆಂದರೆ), ಅಲ್ಪಜ್ಞತ್ವ ವಿಹೀನತ್ವಾತ್= ಅಲ್ಪಜ್ಞತ್ವವಿಲ್ಲದವನಾದ್ದರಿಂದ, ಸಾವದ್ಯಧಿಷಣೋಜ್ಝಿತೇಃ= ದೋಷಯುಕ್ತ ಬುದ್ಧಿರಹಿತನಾದ್ದರಿಂದ, ಅಪೂರ್ಣಯತ್ನಶೂನ್ಯತ್ವಾತ್= ಪೂರ್ಣವಾಗದ ಯಾವ ಯತ್ನವೂ ಇಲ್ಲದವನಾದ್ದರಿಂದ (ಸರ್ವ ಯತ್ನಗಳೂ ಸಫಲಗಳೇ ಆದ್ದರಿಂದ), ಅನ್ಯಾಧೀನೇಚ್ಛತಾಚ್ಯುತೇಃ= ಅನ್ಯಾಧೀನವಾದ ಇಚ್ಛಾಶೂನ್ಯನಾದ್ದರಿಂದ (ಬ್ರಹ್ಮನು ಜೀವನಿಂದ ಅಭಿನ್ನನಲ್ಲ); ಘಟವತ್= ಘಟದಂತೆ (ಎಂದು ಅನುಮಾನಗಳನ್ನು ತಿಳಿಯಬೇಕು); ತಸ್ಮಾತ್= ಆದ್ದರಿಂದ, ಶ್ರುತಿದ್ವಯಂ= ಕವಿರ್ಮನೀಷೀ ಮತ್ತು ವಿಶ್ವಂ ಸತ್ಯಂ ಮಘವಾನಾ, ಎಂಬ ಎರಡು ಶ್ರುತಿಗಳು, ಯುಕ್ತಿವ್ರಾತಮಂಡನ ಮಂಡಿತಂ= ಯುಕ್ತಿ ಸಮೂಹಗಳೆಂಬ ಭೂಷಣಗಳಿಂದ ಅಲಂಕೃತವಾಗಿ, ಬುಧಸಂಸದಿ= ವಿದ್ವತ್ಸಭೆಯಲ್ಲಿ ವಾಙ್‌ನಾರೀವದನಂ= ವಾಣಿಯೆಂಬ ಸ್ತ್ರೀಯ ಮುಖವನ್ನು ಅಲಂಕರೋತಿ= ಅಲಂಕರಿಸುತ್ತದೆ.

**ಅನುವಾದ** - ಅಲ್ಪಜ್ಞತ್ವರಹಿತನು, ದೋಷಯುಕ್ತ ಬುದ್ಧಿರಹಿತನು, ಪೂರ್ಣವಾಗದ ಪ್ರಯತ್ನವಿಲ್ಲದವನು, ಅನ್ಯಾಧೀನವಾದ ಇಚ್ಛಾಶೂನ್ಯನು, ಎಂಬ ಹೇತುಗಳಿಂದ, ಬ್ರಹ್ಮನು ಜೀವಾಭಿನ್ನನೂ, ನಿರ್ಗುಣನೂ, ಭಾವರೂಪದ ಅಜ್ಞಾನದಿಂದ ಆವೃತನೂ, ಅಲ್ಪವಾದ ಈಶ್ವರತ್ವವುಳ್ಳವನೂ, ಎಂಬುವ ಪರಮತ ಪ್ರಮೇಯಗಳು ತಿರಸ್ಕರಿಸಲ್ಪಡುತ್ತವೆ; ಚೇತನತ್ವವಿರುತ್ತಿರಲು, ಜೀವಾಭಿನ್ನತ್ವವು ಘಟದಲ್ಲಿ ಇಲ್ಲದಿರುವಂತೆ, ಎಂಬ ವ್ಯತಿರೇಕೀ ಅನುಮಾನದಿಂದ, ಮಹಾಪ್ರಭುವಾದ ಬ್ರಹ್ಮನು, ಜೀವಾಭಿನ್ನನಲ್ಲವೆಂದೂ, ಜೀವಧರ್ಮಗಳಾದ ಅಲ್ಪಜ್ಞತ್ವ ದೋಷಬುದ್ಧಿಯುಕ್ತತ್ವ ಅಪೂರ್ಣಯತ್ನತ್ವ ಅನ್ಯಾಧೀನವಾದ ಇಚ್ಛಾರಾಹಿತ್ಯ ಗಳೆಂಬುವು, ಲೇಶಮಾತ್ರವೂ ಬ್ರಹ್ಮನಲ್ಲಿ ಸಂಭಾವ್ಯಗಳೇ ಅಲ್ಲವೆಂದೂ, 'ಕವಿರ್ಮನೀಷೀ' ಮತ್ತು 'ವಿಶ್ವಂ ಸತ್ಯಂ ಮಘವಾನಾ' ಎಂಬ ಈ ಎರಡು ಶ್ರುತಿಗಳೂ ಪರನ ವಾದಗಳನ್ನು ನಿರಾಕರಿಸುವ ಯುಕ್ತಿ ಸಮೂಹಗಳನ್ನೇ ಪ್ರತಿಪಾದಿಸುತ್ತವೆ; ಹೀಗೆ ಯುಕ್ತಿ ಸಮೂಹಗಳೆಂಬ ಭೂಷಣಗಳಿಂದ ಅಲಂಕೃತವಾದ ಈ ಶ್ರುತಿವಾಕ್ಯಗಳು, ವಿದ್ವತ್ಸಭೆಗಳಲ್ಲಿ, ವಾದಗಳಲ್ಲಿ ತೊಡಗಿರುವ ಪಂಡಿತ ಸಭೆಯಲ್ಲಿ ವಾಗ್ ದೇವತೆಯ ಮುಖವನ್ನು, ಅಲಂಕರಿಸುತ್ತವೆ ವಾಗ್ದೇವತೆಯ ಮುಖದಲ್ಲಿ ಈ ಎರಡು ಶ್ರುತಿಗಳು ಎರಡು ಕಿವಿಗಳು. ಯುಕ್ತಿಗಳೆಂಬ ಅಲಂಕಾರದಿಂದ ಶೋಭಿಸುವ ಎರಡು ಕಿವಿಗಳಿಂದ ದೇವಿಯ ಮುಖ ಅಲಂಕೃತವಾಗಿದೆ.

**ಭಾವವಿಲಾಸಿನೀ**–ಅನಯೈವ ಶ್ರುತ್ಯಾ ಪರಮತಖಂಡನ ಪ್ರಕಾರಂ ಚಾಹ – **ಅಲ್ಪಜ್ಞತ್ವೇತಿ** ॥ ನಞಃ ವಿಶೇಷಣ ಚತುಷ್ಟಯೇನಾಪಿ ಪ್ರತ್ಯೇಕಂ ಸಂಬಂಧಃ । ತತಶ್ಚ ಹರಿರ್ಜೀವಾಭಿನ್ನೋ ನೇತಿ ಸಾಧ್ಯೇಽಪಿ ಅಲ್ಪಜ್ಞತ್ವವಿಹೀನತ್ವಾದಿತ್ಯಾದಿ ಹೇತುಚತುಷ್ಟಯಸ್ಯಾಪಿ ಸಂಬಂಧಃ । ಘಟ ಏವ ಸರ್ವತ್ರ ದೃಷ್ಟಾಂತಃ । ಏವಮುತ್ತರತ್ರೋಕ್ತೇ ನಿರ್ಗುಣೋನೇತ್ಯಾದಿ ಸಾಧ್ಯತ್ರಯೇಽಪಿ ಹೇತುಚತುಷ್ಟಯಸ್ಯ ಸಂಬಂಧಃ । ತಥಾ ಚ ಹರಿರ್ಜೀವಾಭಿನ್ನೋ ನ ಭವತಿ ಅಲ್ಪಜ್ಞತ್ವ ವಿಹೀನತ್ವಾತ್ । ಸಾವದ್ಯ- ಬುದ್ಧಿವಿಧುರತ್ವಾತ್ । ಅಪೂರ್ಣಯತ್ನಶೂನ್ಯತ್ವಾತ್ । ಅನ್ಯಾಧೀನೇಚ್ಛಾಶೂನ್ಯತ್ವಾತ್ । ಘಟವದಿತ್ಯಾದ್ಯಾಕಾರೇಣ ಸಾಧ್ಯಚತುಷ್ಟಯೇ ಷೋಡಶಾನುಮಾನಾನಿ ಜಾತಾನಿ । ಪ್ರಾಗುಕ್ತಯೋಜನನಿಕಾಯಂ ಚ ವಿಶ್ವಸತ್ಯತ್ವೇಽನುಮಾನದ್ವಯಮ್ । ಹರೇರ್ಜಗದ್ವೈಲಕ್ಷಣ್ಯೇ ಬ್ರಹ್ಮಜಗತೀ ಭಿನ್ನೇ ವಿರುದ್ಧಧರ್ಮಾಕ್ರಾಂತತ್ವಾತ್। ದಹನತುಹಿನವದಿತ್ಯೇಕಮನುಮಾನಮ್ । ಜೀವಾದ್ಭೇದಸಾಧನೇ ತು ಪೂರ್ವಪಕ್ಷನಿರಾಸಾಯೋಕ್ತಮ್ । ಅಲ್ಪಜ್ಞತ್ವವಿಹೀನತ್ವಾದಿತ್ಯಾದಿ ಹೇತುಚತುಷ್ಟಯಮಪಿ ಗ್ರಾಹ್ಯಮ್। ಘಟಾದಿಕಮೇವ ತದಾ ದೃಷ್ಟಾಂತಃ । ಅಸತಿ ಭೇದಾಭಾವಮತೇ ವಸ್ತುತ್ವೇ ಸತೀತಿ ವಿಶೇಷಣಂ ಯೋಜನೀಯಮ್ । ವೈಲಕ್ಷಣ್ಯಮೇವ ವಾ ಭೇದೋ ವಕ್ತವ್ಯಃ ।

ಸರ್ವೇಶ್ವರತ್ವೇ ಪೂರ್ಣಗುಣತ್ವೇ ನಿರ್ದೋಷತ್ವೇ ಚ ಸರ್ವಜ್ಞತ್ವಾತ್ । ನಿರವದ್ಯಬುದ್ಧಿತ್ವಾತ್ । ಸಕಲಜೇತೃತ್ವಾತ್ ಸ್ವತಂತ್ರತ್ವಾಚ್ಚ । ವ್ಯತಿರೇಕೇಣ ಘಟವದಿತ್ಯೇಕೈಕಸ್ಮಿನ್ಸಾಧ್ಯೇ ವ್ಯತಿರೇಕ್ಯನುಮಾನಂ ಚತುಷ್ಟಯಂ ಚತುಷ್ಟಯಮಿತಿ ಸಾಧ್ಯತ್ರಯೇ ದ್ವಾದಶಾನುಮಾನಾನಿ । ಪೂರ್ವೋಕ್ತೇ ಜಗದ್ವೈಲಕ್ಷಣ್ಯಸಾಧ್ಯೇಽಪಿ ಸರ್ವೇಶತ್ವಾದಾವಿವ ಸರ್ವಜ್ಞತ್ವಾದಿತ್ಯಾದಿ ವ್ಯತಿರೇಕಿ ಹೇತುಚತುಷ್ಟಯಂ ದ್ರಷ್ಟವ್ಯಮ್ । ಶಾಶ್ವತೀಭ್ಯಃ ಸಮಾಭ್ಯೋ ವ್ಯದಧಾದಿತಿ ವಾಕ್ಯಶೇಷಬಲೇನ ವಿಮತಂ ಜಗತ್ ಪರಮಾರ್ಥಸತ್ ಅವಸಾನಶೂನ್ಯತ್ವಾದ್ಬ್ರಹ್ಮವದಿತಿ ಜಗತ್ಸತ್ಯತ್ವೇ ಪುನರನುಮಾನಾಂತರಂ ಚ ಸೂಚಿತಮ್ । ಮಿಲಿತ್ವಾ ಚತ್ವಾರಿಂಶದನುಮಾನಾನಿ । ಸ್ವಪಕ್ಷಸಾಧನೇಽತಿಭಾರವತ್ತ್ವಾದನುಮಾನ ಬಾಹುಲ್ಯಮ್ । ಏವಂಚ ಜ್ಞಾನ ಯಜ್ಞೋಪಯುಕ್ತಬಹುತರಪ್ರಾಮಾಣಾಖ್ಯದುಗ್ಧಾನಂದೋಗ್ರ್ಯೀಯಂ ವಾಕ್ ಮಾಧ್ವೀ ಸ್ಪರ್ಧೇನುರೇವೇತಿ ಗ್ರಂಥಕೃತೋ ಹೃದಯಮ್ । ತಸ್ಮಾದುಕ್ತರೀತ್ಯಾ ಶ್ರುತಿದ್ವಯಸ್ಯಾಪಿ ಬಹುಯುಕ್ತಿಭರಿತತ್ವಾತ್ ॥ ೧೬೬-೧೬೮ ॥

**ವಿವರಣೆ - 'ಅಭೇದನಿಷೇಧಕ ಅನುಮಾನಗಳು'**

೧. ಹರಿಃ ಜೀವಾಭಿನ್ನೋ ನ ಭವತಿ ಅಲ್ಪಜ್ಞತ್ವವಿಹೀನತ್ವಾತ್ ಘಟವತ್

೨. ಹರಿಃ ಜೀವಾಭಿನ್ನೋ ನ ಭವತಿ ಸಾವದ್ಯಬುದ್ಧಿವಿಧುರತ್ವಾತ್ ಘಟವತ್

೩. ಹರಿಃ ಜೀವಾಭಿನ್ನೋ ನ ಭವತಿ ಅಪೂರ್ಣಯತ್ನಶೂನ್ಯತ್ವಾತ್ ಘಟವತ್

೪. ಹರಿಃ ಜೀವಾಭಿನ್ನೋ ನ ಭವತಿ ಅನ್ಯಾಧೀನೇಚ್ಛಾಶೂನ್ಯತ್ವಾತ್ ಘಟವತ್

೫. ಹರಿಃ ನಿರ್ಗುಣೋ ನ ಭವತಿ ಅಲ್ಪಜ್ಞತ್ವವಿಹೀನತ್ವಾತ್ ಘಟವತ್

೬. ಹರಿಃ ನಿರ್ಗುಣೋ ನ ಭವತಿ ಸಾವದ್ಯಬುದ್ಧಿವಿಧುರತ್ವಾತ್ ಘಟವತ್

೭. ಹರಿಃ ನಿರ್ಗುಣೋ ನ ಭವತಿ ಅಪೂರ್ಣಯತ್ನಶೂನ್ಯತ್ವಾತ್ ಘಟವತ್

೮. ಹರಿಃ ನಿರ್ಗುಣೋ ನ ಭವತಿ ಅನ್ಯಾಧೀನೇಚ್ಛಾಶೂನ್ಯತ್ವಾತ್ ಘಟವತ್

೯. ಹರಿಃ ಭಾವಾಜ್ಞಾನಸಮಾವೃತೋ ನ ಭವತಿ ಅಲ್ಪಜ್ಞತ್ವವಿಹೀನತ್ವಾತ್ ಘಟವತ್

೧೦. ಹರಿಃ ಭಾವಾಜ್ಞಾನಸಮಾವೃತೋ ನ ಭವತಿ ಸಾವದ್ಯಬುದ್ಧಿವಿಧುರತ್ವಾತ್ ಘಟವತ್

೧೧. ಹರಿಃ ಭಾವಾಜ್ಞಾನಸಮಾವೃತೋ ನ ಭವತಿ ಅಪೂರ್ಣಯತ್ನಶೂನ್ಯತ್ವಾತ್ ಘಟವತ್

೧೨. ಹರಿಃ ಭಾವಾಜ್ಞಾನಸಮಾವೃತೋ ನ ಭವತಿತ್ವಾತ್ ಘಟವತ್

೧೩. ಹರಿಃ ಅಲ್ಪೇಶ್ವರಃ ನ ಭವತಿ ಅಲ್ಪಜ್ಞಾನವಿಹೀವತ್ವಾತ್ ಘಟವತ್

೧೪. ಹರಿಃ ಅಲ್ಪೇಶ್ವರಃ ನ ಭವತಿ ಸಾವದ್ಯಬುದ್ಧಿವಿಧುರತ್ವಾತ್ ಘಟವತ್

೧೫. ಹರಿಃ ಅಲ್ಪೇಶ್ವರಃ ನ ಭವತಿ ಅಪೂರ್ಣಯತ್ನಶೂನ್ಯತ್ವಾತ್ ಘಟವತ್

೧೬. ಹರಿಃ ಅಲ್ಪೇಶ್ವರಃ ನ ಭವತಿ ಅನ್ಯಾಧೀನೇಚ್ಛಾಶೂನ್ಯತ್ವಾತ್ ಘಟವತ್

**ಮಿಥ್ಯಾನಿಷೇಧಕ ಅನುಮಾನಗಳು:-**

೧೭. ವಿಮತಂ ಜಗತ್ ನ ಮಿಥ್ಯಾ ದ್ವಿಚೇತನಸಂಬಂಧಿತ್ವಾತ್ ಬ್ರಹ್ಮವತ್

೧೮. ವಿಮತಂ ಜಗತ್ ನ ಮಿಥ್ಯಾ ಬಹುಚೇತನದೃಷ್ಟತ್ವಾತ್ ವ್ಯತಿರೇಕೇಣ ಶುಕ್ತಿರೂಪ್ಯವತ್

**ಹರಿಯು ಜಗದ್ವಿಲಕ್ಷಣ ಎನ್ನಲು ಅನುಮಾನ**

೧೯. ಬ್ರಹ್ಮಜಗತೀ ಭಿನ್ನೇ ವಿರುದ್ಧಧರ್ಮಾಕ್ರಾಂತತ್ವಾತ್ ದಹನತುಹಿನವತ್

**'ಜೀವಭೇದಸಾಧಕ ಅನುಮಾನಗಳು'**

೨೦. ಹರಿಃ ಜೀವಾದ್ಭಿನ್ನೋಭವಿತುಮರ್ಹತಿ ಅಲ್ಪಜ್ಞತ್ವವಿಹೀನತ್ವಾತ್ ಘಟವತ್

೨೧. ಹರಿಃ ಜೀವಾದ್ಭಿನ್ನೋಭವಿತುಮರ್ಹತಿ ಸಾವದ್ಯಬುದ್ಧಿವಿಧುರತ್ವಾತ್ ಘಟವತ್

೨೨. ಹರಿಃ ಜೀವಾದ್ಭಿನ್ನೋಭವಿತುಮರ್ಹತಿ ಅಪೂರ್ಣಯತ್ನಶೂನ್ಯತ್ವಾತ್ ಘಟವತ್

೨೩. ಹರಿಃ ಜೀವಾದ್ಭಿನ್ನೋಭವಿತುಮರ್ಹತಿ ಅನ್ಯಾಧೀನೇಚ್ಛಾಶೂನ್ಯತ್ವಾತ್ ಘಟವತ್

**'ಸರ್ವೇಶ್ವರತ್ವಾದಿಸಾಧಕ ಅನುಮಾನಗಳು'**

೨೪. ಹರಿಃ ಸರ್ವೇಶ್ವರಃ ಸರ್ವಜ್ಞತ್ವಾತ್ ವ್ಯತಿರೇಕೇಣ ಘಟವತ್

೨೫. ಹರಿಃ ಸರ್ವೇಶ್ವರಃ ನಿರವದ್ಯಬುದ್ಧಿತ್ವಾತ್ ವ್ಯತಿರೇಕೇಣ ಘಟವತ್

೨೬. ಹರಿಃ ಸರ್ವೇಶ್ವರಃ ಸಕಲಜೇತೃತ್ವಾತ್ ವ್ಯತಿರೇಕೇಣ ಘಟವತ್

೨೭. ಹರಿಃ ಸರ್ವೇಶ್ವರಃ ಸ್ವತಂತ್ರತ್ವಾತ್ ವ್ಯತಿರೇಕೇಣ ಘಟವತ್

೨೮. ಹರಿಃ ಪೂರ್ಣಗುಣಃ ಸರ್ವಜ್ಞತ್ವಾತ್ ವ್ಯತಿರೇಕೇಣ ಘಟವತ್

೨೯. ಹರಿಃ ಪೂರ್ಣಗುಣಃ ನಿರವದ್ಯಬುದ್ಧಿತ್ವಾತ್ ವ್ಯತಿರೇಕೇಣ ಘಟವತ್

೩೦. ಹರಿಃ ಪೂರ್ಣಗುಣಃ ಸಕಲಜೇತೃತ್ವಾತ್ ವ್ಯತಿರೇಕೇಣ ಘಟವತ್

೩೧. ಹರಿಃ ಪೂರ್ಣಗುಣಃ ಸ್ವತಂತ್ರತ್ವಾತ್ ವ್ಯತಿರೇಕೇಣ ಘಟವತ್

೩೨. ಹರಿಃ ನಿರ್ದೋಷಃ ಸರ್ವಜ್ಞತ್ವಾತ್ ವ್ಯತಿರೇಕೇಣ ಘಟವತ್

೩೩. ಹರಿಃ ನಿರ್ದೋಷಃ ನಿರವದ್ಯಬುದ್ಧಿತ್ವಾತ್ ವ್ಯತಿರೇಕೇಣ ಘಟವತ್

೩೪. ಹರಿಃ ನಿರ್ದೋಷಃ ಸಕಲಜೇತೃತ್ವಾತ್ ವ್ಯತಿರೇಕೇಣ ಘಟವತ್

೩೫. ಹರಿಃ ನಿರ್ದೋಷಃ ಸ್ವತಂತ್ರತ್ವಾತ್ ವ್ಯತಿರೇಕೇಣ ಘಟವತ್

'ಜಗದ್ವೈಲಕ್ಷಣ್ಯಸಾಧಕ ಅನುಮಾನಗಳು'

೩೬. ಹರಿಃ ಜಗದ್ವಿಲಕ್ಷಣಃ ಸರ್ವಜ್ಞತ್ವಾತ್ ವ್ಯತಿರೇಕೇಣ ಘಟವತ್

೩೭. ಹರಿಃ ಜಗದ್ವಿಲಕ್ಷಣಃ ನಿರವದ್ಯಬುದ್ಧಿತ್ವಾತ್ ವ್ಯತಿರೇಕೇಣ ಘಟವತ್

೩೮. ಹರಿಃ ಜಗದ್ವಿಲಕ್ಷಣಃ ಸಕಲಜೇತೃತ್ವಾತ್ ವ್ಯತಿರೇಕೇಣ ಘಟವತ್

೩೯. ಹರಿಃ ಜಗದ್ವಿಲಕ್ಷಣಃ ಸ್ವತಂತ್ರತ್ವಾತ್ ವ್ಯತಿರೇಕೇಣ ಘಟವತ್

**ಜಗತ್ಸತ್ಯತ್ವ ಸಾಧಕಾನುಮಾನ**

೪೦. ವಿಮತಂ ಜಗತ್ ಪರಮಾರ್ಥಸತ್ ಅವಸಾನಶೂನ್ಯತ್ವಾತ್ ಬ್ರಹ್ಮವತ್

ಯಚ್ಚಿಕೇತೇತಿ ವಾಕ್ ಚಾಹ ಸತ್ಯಮೇತಜ್ಜಗತ್ತ್ರಯಂ ॥ ೧೬೯ ॥

**ಅರ್ಥ–** ಯಚ್ಚಿಕೇತೇತಿ ವಾಕ್= 'ಯಚ್ಚಿಕೇತ ಸತ್ಯಮಿತ್ ತನ್ನಮೋಘಂ ವಸುಸ್ಪಾರ್ಹಮುತ ಜೇತೋತದಾತಾ' ಎಂಬ ಶ್ರುತಿಯು, ಏತತ್‌ಜಗತ್ತ್ರಯಂ= ಮೂರು ಲೋಕಗಳೂ (ವಿಶ್ವವು-ಜಗತ್ತು) ಸತ್ಯಂ ಚ ಆಹ= ಸತ್ಯವೆಂದೇ ಹೇಳಿರುತ್ತದೆ.

**ಅನುವಾದ** - 'ಯಚ್ಚಿಕೇತ ಸತ್ಯಮಿತ್ ತನ್ನ ಮೋಘಂ ವಸು ಸ್ಪಾರ್ಹಮುತ ಜೇತೋತ ದಾತಾ' ಎಂಬ ಶ್ರುತಿಯೂ ಜಗತ್ತ್ರಯದ (ಭೂ ಮತ್ತು ಮೇಲೆ, ಕೆಳಗಿನ ಲೋಕಗಳೆಂಬ ಸಮಗ್ರವಿಶ್ವದ) ಸತ್ಯತ್ವವನ್ನೇ ಘೋಷಿಸುತ್ತದೆ; ಈ ಸ್ಪಷ್ಟ ಶ್ರುತಿಯಿಂದಲೂ, ಜಗತ್ಸತ್ಯತ್ವವು ಸಿದ್ಧವಾಗುತ್ತದೆ.

ಅಮೋಘತ್ವೋಕ್ತಿತಶ್ಚಾರ್ಥಕ್ರಿಯಾಕಾರಿತ್ವಯುಕ್ತಿತಃ ।
ಬ್ರಹ್ಮವತ್ ಸತ್ಯತಾ ಸರ್ವಸ್ಯಾಪಿ ಸಾಧ್ಯೇತ್ಯಸೂಚಯತ್ ॥ ೧೭೦ ॥

**ಅರ್ಥ–** ಅಮೋಘತ್ವೋಕ್ತಿತಃ= ವ್ಯರ್ಥವಲ್ಲದ್ದೆಂದು ಹೇಳಿರುವುದರಿಂದ, ತಿಳಿದುಬರುವ ಅರ್ಥಕ್ರಿಯಾಕಾರಿತ್ವಯುಕ್ತಿತಃ= ಅರ್ಥಕ್ರಿಯಾಕಾರಿತ್ವವುಳ್ಳದ್ದೆಂಬ ಯುಕ್ತಿಯಿಂದ, ಸರ್ವಸ್ಯ ಅಪಿ= ಸಮಸ್ತ ಜಗತ್ತಿಗೂ, ಬ್ರಹ್ಮವತ್= ಬ್ರಹ್ಮನಂತೆ, ಸತ್ಯತಾ= ಸತ್ಯತ್ವವು, ಸಾಧ್ಯಾ= ಸಾಧಿಸಲ್ಪಡಬೇಕೆಂದೂ, ಅಸೂಚಯತ್= ಸೂಚಿಸಿರುತ್ತದೆ.

**ಅನುವಾದ** - ತನ್ನ ಮೋಘಂ ಎಂದು ಅರ್ಥಕ್ರಿಯಾಕಾರಿತ್ವವನ್ನು ಜಗತ್ತಿಗೆ ಹೇಳಿರುವುದರಿಂದ, ಜಗತ್ತಿಗೆ ಬ್ರಹ್ಮನಂತೆ, ಪಾರಮಾರ್ಥಿಕ ಸತ್ಯತ್ವವನ್ನೇ ಹೇಳಬೇಕೆಂದೂ, ಸೂಚಿಸುತ್ತದೆ.

**ಭಾವವಿಲಾಸಿನೀ–** ಯಚ್ಚಿಕೇತೇತ್ಯನೇನ ''ಯಚ್ಚಿಕೇತ ಸತ್ಯಮಿತ್ತನ್ನ ಮೋಘಂ ವಸುಸ್ಪಾರ್ಹಮುತ ಜೇತೋತ ದಾತಾ'' ಇತಿ ಶ್ರುತಿಂ ಗೃಹ್ಣಾತಿ । ಅಸ್ಯಾ ಅರ್ಥಃ । ಭಗವಾನ್ । ಯದ್ವಸುಸದಾನಿವಸನಶೀಲಂ । ಅನಾದ್ಯನಂತಾಜಗದಿತ್ಯರ್ಥಃ । ಚಿಕೇತ ಚಕಾರ । ಧಾತೂನಾಮನೇಕಾರ್ಥತ್ವೇನ ಚಿಕೇತೇತ್ಯಸ್ಯ ಚಕಾರೇತ್ಯರ್ಥೇಽಪಿ ವರ್ತನಾತ್ । ಚಕಾರೇತ್ಯೇವಾನುಕ್ತಿಸ್ತು 'ಕಿತ ನಿವಾಸೇ ರೋಗಾಪನಯೇ ಚ' ಇತಿ ಕಿತಿಧಾತೋಃ ಪ್ರಸಿದ್ಧನಿವಾಸರೋಗಾಪನಯಾರ್ಥಾಭ್ಯಾಂ ಸದಾ ನಿವಸನೇನ ಜಗತೋ ಬಾಧಾಖ್ಯರೋಗಾಪಹಾರಂ ಚ ಸೂಚಯಿತುಮ್ । ಅತ ಏವ ವಸ್ವಿತ್ಯೇವ ವಿಶೇಷ್ಯಪದಂ ನಿರದಿಕ್ಷತ್ । ಸತ್ಯಮಿತಿ ಸತ್ಯತಾಂ ಚ ವ್ಯಧತ್ತ । ತತ್ ಸತ್ಯಮಿತ್ ಸತ್ಯಮೇವ । ಮೋಘಂ ವ್ಯರ್ಥಂ ನ । ಅರ್ಥಕ್ರಿಯಾಕಾರೀತ್ಯರ್ಥಃ । ಸ್ಪಾರ್ಹಂ ಸ್ಪೃಹಾಯೋಗ್ಯಮ್ । ಯಚ್ಚ ವಸು ಸ್ವಸೃಷ್ಟ್ಯನಂತರಂ ಜೇತಾ । ಮಹಾಬಲಿರಾವಣಹಿರಣ್ಯಕಶಿಪುಪ್ರಭೃತೀನ್‌ಜಿತ್ವಾ ಆನೇತಾ । ಉತ ತಥಾ ಯಥಾ ಆನೀತಂ ತಥೈವೇತ್ಯರ್ಥಃ । ದಾತಾ ಇಂದ್ರಾದೀನಾಂ ದಾತಾ । ಅನೇನ ಸ್ಪೃಹಾವಿಷಯತ್ವಮಪಿ ಇಂದ್ರಾದಿ-ಜೀವಾನಾಮೇವ । ನ ಪೂರ್ಣಸ್ಯ ಸ್ವಸ್ಯ । ವಾಮನಾವತಾರೇ ತ್ರಿಪದವ್ಯಾಜೇನಾನೀತಸ್ಯ ಸರ್ವಸ್ಯಾಪಿ ಜಗತಃ ಇಂದ್ರಾಯೈವ ಪ್ರದಾನಾದಿತಿ ಸೂಚಯತಿ ॥ ಅಮೋಘತ್ವೋಕ್ತಿತಃ ಪ್ರಾಪ್ತಾಯಾಃ । ಸರ್ವಸ್ಯ ಜಗತಃ । ಸರ್ವಂ ಜಗತ್‌ಪರಮಾರ್ಥಸತ್ ಅರ್ಥಾಕ್ರಿಯಾಕಾರಿತ್ವಾತ್ । ಬ್ರಹ್ಮವತ್ । ನಚ ದೃಷ್ಟಾಂತೇ ಹೇತೋರಸಿದ್ಧಿಃ । ಚಿಕೇತ ಜೇತಾ ದಾತೇತಿ ಪದತ್ರಯೇಣಾಸ್ಯಾಮೇವ ಶ್ರುತೌ ಬ್ರಹ್ಮಣೋಽರ್ಥಕ್ರಿಯಾಕಾರಿತ್ವ ಸಮರ್ಥನಾದಿತ್ಯರ್ಥಃ ॥ ೧೯–೧೨೦ ॥

**ವಿವರಣೆ -** 'ಯುಚ್ಚಿಕೇತ ಸತ್ಯಮಿತ್ತನ್ನ ಮೋಘಂ ವಸು ಸ್ಪಾರ್ಹಮುತ ಜೇತೋತ ದಾತಾ' ಶ್ರೀಹರಿ ಸೃಷ್ಟಿ ಮಾಡಿದ ಈ ಜಗತ್ತು ಸತ್ಯವೆ. ಅದು ವ್ಯರ್ಥವೂ ಅಲ್ಲ. ಇಂದ್ರನಿಗೆ ಅವನಿಗಿಷ್ಟವಾದ ಮೂರ್ಲೋಕದ ಸಂಪತ್ತನ್ನು ಬಲಿಯಿಂದ ಗೆದ್ದು ಕೊಟ್ಟವನು ಆ ಶ್ರೀಹರಿ.

ಸ್ಪೃಹಾವಿಶೇಷ್ಯತೋಕ್ತ್ಯಾ ಚ ಸತ್ಯತ್ವಂ ಪ್ರತ್ಯಬೋಧಯತ್ ।
ಸ್ಪೃಹಣೀಯಂ ಯತೋ ಮೋಕ್ಷಸುಖಂ ಸತ್ಯಂ ಪರಸ್ಯ ಚ ॥ ೧೨೧ ॥

**ಅರ್ಥ–** ಸ್ಪೃಹಾವಿಶೇಷ್ಯತೋಕ್ತ್ಯಾ ಚ= ಇಚ್ಛಾ ವಿಶೇಷ್ಯತ್ವವನ್ನು ಹೇಳಿರುವುದರಿಂದಲೇ, ಸತ್ಯತ್ವಂ= ಜಗತ್ಸತ್ಯತ್ವವನ್ನು, ಪ್ರತ್ಯಬೋಧಯತ್= ತಿಳಿಸಿಕೊಟ್ಟಿತು; ಯತಃ= ಏಕೆಂದರೆ, ಪರಸ್ಯ ಚ= ಪರಮತದಲ್ಲಿಯೂ ಕೂಡ, ಮೋಕ್ಷಸುಖಂ= ಮೋಕ್ಷಸುಖವು, ಸ್ಪೃಹಣೀಯಂ= ಅಕಾಂಕ್ಷಿತವೇ ಆಗಿರುತ್ತದೆ, ಸತ್ಯಂ ಚ= ಸತ್ಯವೂ ಆಗಿದೆ.

**ಅನುವಾದ -** ಜಗತ್ತು ಸ್ಪೃಹಾ ವಿಷಯವಾದದ್ದೆಂದೂ, ಸತ್ಯತ್ವ ಸಮರ್ಥನೆಗಾಗಿಯೇ ಪ್ರಸಕ್ತ ಶ್ರುತಿಯು ಹೇಳಿರುತ್ತದೆ; ಮೋಕ್ಷಸುಖವೂ ಸ್ಪೃಹಣೀಯವೇ ಆಗಿದೆ. ಬ್ರಹ್ಮನಂತೆ ಪರಮಾರ್ಥ ಸತ್ಯವೂ ಆಗಿದೆ; ಬ್ರಹ್ಮನು ನಿತ್ಯನೂ ಸತ್ಯನೂ ಅಲ್ಲವೆಂದರೆ,

**ಅದ್ವೈತಿಗೆ ಅಪಸಿದ್ಧಾಂತವೇ ಪ್ರಾಪ್ತವಾಗುತ್ತದೆ; ಮೋಕ್ಷವೂ ಸತ್ಯವಲ್ಲದಿದ್ದರೆ, ಸರ್ವಾಪೇಕ್ಷಿತವಾಗದಿರಬೇಕು, ಇತ್ಯಾದಿ ಯುಕ್ತಿಗಳನ್ನೂ ಸೂಚಿಸಲಾಗಿದೆ.**

**ಭಾವವಿಲಾಸಿನೀ–**ಭ್ರಾಂತಿದಶಾಯಾಂ ರಜತಸ್ಯಾಪಿ ಬಾಧಪರ್ಯಂತಮಿಚ್ಛಾವಿಷಯತ್ವದರ್ಶನಾತ್ ಸ್ಪೃಹಾವಿಶೇಷ್ಯತೋಕ್ತೇತ್ಯುಕ್ತಮ್। ತದಾಪಿ ವಿಶೇಷ್ಯತ್ವಂ ಶುಕ್ತೇರೇವ ನ ರಜತಸ್ಯ। ಅತೋ ನ ವ್ಯಭಿಚಾರ ಇತಿ ಭಾವಃ । ಅನೇನ ಜಗತ್ಪರಮಾರ್ಥಸತ್ । ಇಚ್ಛಾವಿಶೇಷ್ಯತ್ವಾತ್ ಸುಖಮೇವ ಮೇ ಸ್ಯಾದಿತ್ಯಾಕಾಂಕ್ಷ್ಯಮಾಣಮೌಕ್ತಸುಖವದಿತ್ಯನುಮಾನಂ ಸೂಚಯತಿ ॥ ೧೭೧ ॥

**ವಿವರಣೆ** - 'ಸುಖಮೇವ ಮೇ ಸ್ಯಾತ್' ಎಂಬಲ್ಲಿ ಮೋಕ್ಷ ಸುಖವು ಇಚ್ಛಾ ವಿಶೇಷ್ಯವಾಗಿರುತ್ತದೆ; 'ಸುಖಮೇವ ಮೇ ಸ್ಯಾತ್ ಇತಿ ಆಕಾಂಕ್ಷ್ಯಮಾಣ ಮೌಕ್ತಸುಖವತ್' ಎಂಬ ಅನುಮಾನವು ಸೂಚಿತವಾಗಿದೆ; ಶುಕ್ತರಜತದ ಇಚ್ಛೆಯಲ್ಲಿ ಶುಕ್ತಿಯು ವಿಶೇಷ್ಯವು; ಅದು ಸತ್ಯವಾಗಿದೆ. ಆದರಿಂದ ಹೇತುವಿಗೆ ವ್ಯಭಿಚಾರ ದೋಷವಿಲ್ಲ. ಜಗತ್ತಿನ ಸತ್ಯತ್ವದಂತೆ, ಮೋಕ್ಷಸುಖವೂ ಅದ್ವೈತಮತದಲ್ಲಿ ಸತ್ಯವೇ. ಅದರಂತೆ ಜಗತ್ತೂ ಸತ್ಯವಾಗಿದೆ. ಪರಮತದಲ್ಲಿ ಮಾಯಾವಿಶಿಷ್ಟ ಬ್ರಹ್ಮನಿಗೇ ಜಗತ್ಕರ್ತೃತ್ವವು- ಶುದ್ಧ ಬ್ರಹ್ಮನಿಗೆ ಕರ್ತೃತ್ವವಿಲ್ಲ; ಆದ್ದರಿಂದ ದೃಷ್ಟಾಂತದಲ್ಲಿ, ಅರ್ಥಕ್ರಿಯಾಕಾರಿತ್ವವೆಂಬ ಹೇತುವಿಲ್ಲದಂತಾಗುವುದೆಂಬ ಶಂಕೆಯನ್ನು ಪರಿಹರಿಸುತ್ತಾರೆ.

**ವಿಶಿಷ್ಟಕರ್ತೃತಾಯಾಂ ಚ ಕರ್ತೃತ್ವಂ ಚಿತ ಏವ ಹಿ ।**
**ಕಿಂ ಕುಂಭಕಾರೌ ಮೃದ್ದಂಡೌ ಯದ್ವಿಶಿಷ್ಟಃ ಕರೋತ್ಯಸೌ ।**
**ಅತೋ ನಿರುಪಮಾ ಬ್ರಹ್ಮೋಪಮಾ ಸತ್ಯತ್ವವಾದಿನಾಂ ॥ ೧೭೨ ॥**

**ಜೇತಾ ದಾತಾ ಚಿಕೇತೇತಿ ಬ್ರಹ್ಮಣೋಽರ್ಥಕ್ರಿಯಾಕೃತಿಃ ।**
**ತ್ರಿಧಾಽಪಿ ಬೋಧಿತಾ ಯಸ್ಮಾತ್ ತಸ್ಮಾತ್ ಬ್ರಹ್ಮೋಪಮಾ ಮಮ ॥೧೭೩॥**

**ಅರ್ಥ–** ವಿಶಿಷ್ಟಕರ್ತೃತಾಯಾಂ= ಮಾಯಾವಿಶಿಷ್ಟ ಬ್ರಹ್ಮನಿಗೆ ಕರ್ತೃತ್ವವೆಂಬ ಪಕ್ಷದಲ್ಲಿ, ಕರ್ತೃತ್ವಂ= ಕರ್ತೃತ್ವವು, ಚಿತಃ ಏವ= ಚೇತನನಿಗೆ ಮಾತ್ರವೇ ಸಿದ್ಧವು; ಯತ್= ಯಾವ ಕಾರಣದಿಂದ, ಅಸೌ= ಕುಂಭಕಾರನು, ಯದ್ ವಿಶಿಷ್ಟಃ= ಯಾವ ಮಣ್ಣು ಮತ್ತು ದಂಡಗಳಿಂದ ವಿಶಿಷ್ಟನಾಗಿ ಕುಂಭಕಾರಃ= ಕುಲಾಲನು, ಕರೋತಿ ಕಿಂ= ಕುಂಭವನ್ನು ನಿರ್ಮಾಣಮಾಡುತ್ತಾನೆಯೋ, ತೌ ಮೃದ್ದಂಡೌ= ಆ ಮಣ್ಣು ದಂಡಗಳು, ಕುಂಭಕರೌ ಕಿಂ= ಕುಂಬಾರ ಎನಿಸುವುವೇನು? ಅತಃ= ಆದ್ದರಿಂದ, ಸತ್ಯತ್ವವಾದಿನಾಂ= ಜಗತ್ಸತ್ಯತ್ವವಾದಿಗಳಿಗೆ, ಬ್ರಹ್ಮೋಪಮಾ= ಬ್ರಹ್ಮದೃಷ್ಟಾಂತವು, ನಿರುಪಮಾ ಅಸದೃಶವಾದುದು, ಜೇತಾ= ಗೆದ್ದವನು, ದಾತಾ= ಕೊಟ್ಟವನು, ಚಿಕೇತ ಇತಿ= ಸತ್ಯಜಗತ್ತನ್ನೇ ನಿರ್ಮಿಸಿದನು, ಎಂದೂ ಯಸ್ಮಾತ್=

ಯಾವ ಕಾರಣದಿಂದ, ಬ್ರಹ್ಮಣಃ= ಬ್ರಹ್ಮನಿಗೆ, ಅರ್ಥಕ್ರಿಯಾಕೃತಿಃ= ಅರ್ಥಕ್ರಿಯಾಕಾರಿತ್ವವು, ತ್ರಿಧಾಪಿ= ಮೂರು ಪ್ರಕಾರದಿಂದಲೂ, (ಜೇತಾ, ದಾತಾ, ಚಿಕೇತ ಎಂಬ ಮೂರು ರೀತಿಯಿಂದಲೂ), ಬೋಧಿತಾ= (ಶ್ರುತಿಯಿಂದ) ತಿಳಿಸಲ್ಪಟ್ಟಿತೋ, ತಸ್ಮಾತ್= ಆದ್ದರಿಂದ, ಮಮ= ನನಗೆ (ತತ್ವವಾದಿಗೆ), ಬ್ರಹ್ಮೋಪಮಾ= ಬ್ರಹ್ಮದೃಷ್ಟಾಂತವು (ಯುಕ್ತವಾಗುತ್ತದೆ).

**ಅನುವಾದ** - ಮಾಯಾವಿಶಿಷ್ಟನಾದ ಬ್ರಹ್ಮನೇ ಜಗತ್ಕರ್ತನಾದ್ದರಿಂದ, ಅದ್ವೈತದ ಶುದ್ಧ ಬ್ರಹ್ಮನಿಗೆ ಕರ್ತೃತ್ವವಿಲ್ಲೆಂಬ ವಾದವೂ ಯುಕ್ತವಲ್ಲ; ಕುಲಾಲನು (ಕುಂಬಾರನು) ಮಣ್ಣು ದಂಡ (ಕೋಲು) ಗಳನ್ನು ಉಪಯೋಗಿಸಿಕೊಂಡೇ ಗಡಿಗೆಯನ್ನು ಸೃಷ್ಟಿ ಮಾಡಿದರೂ, ಕುಲಾಲನೇ ಕರ್ತನಷ್ಟೆ- ಮೃದ್ದಂಡಗಳಲ್ಲ; ಅವುಗಳನ್ನು ಕುಂಬಾರರು ಎನ್ನುವುದುಂಟೆ ಅದರಂತೆ ಮಾಯಾ ವಿಶಿಷ್ಟನು ಜಗತ್ಕರ್ತನೆಂದರೂ, ಬ್ರಹ್ಮನೇ (ಚೇತನನೇ) ಕರ್ತನು; ಅದರಿಂದ, ಜಗತ್ಸತ್ಯತ್ವವಾದಿಗಳಿಗೆ ಅನುಮಾನದಲ್ಲಿ ಬ್ರಹ್ಮನಂತೆ ಜಗತ್ತೂ ಪರಮಾರ್ಥವೆಂದು ನಿರೂಪಿಸುವ ದೃಷ್ಟಾಂತವು ಅಸದೃಶವು (ಅನ್ವರ್ಥವಾಗುತ್ತದೆ); ಈ ಶ್ರುತಿಯು ಜೇತಾ, ದಾತಾ, ಚಿಕೇತ, ಎಂದು ಮೂರು ಪ್ರಕಾರದಿಂದ ಜಗತ್ತಿಗೆ ಅರ್ಥಕ್ರಿಯಾಕಾರಿ ಎಂಬುದನ್ನು ಸಾಧಿಸಿದೆ; ಸ್ಪೃಹಾ ಯೋಗ್ಯವಾದ ಜಗತ್ತನ್ನು ಗೆದ್ದು, ಇಂದ್ರಾದಿಗಳಿಗೆ ದಾನಮಾಡಿ, ಸ್ವಾರ್ಥರಾಹಿತ್ಯವನ್ನು ತೋರಿಸಿರುವನು; ಇಂಥ ಸತ್ಯ ಜಗತ್ತನ್ನೂ ಸೃಷ್ಟಿಸಿದನೆಂದು ಹೇಳಲಾಗುವ ಬ್ರಹ್ಮನು, ಸತ್ಯತ್ವವನ್ನು ಸಾಧಿಸುವ ತತ್ತ್ವವಾದಿಗೆ ಅತ್ಯಂತ ಯೋಗ್ಯವಾದ ದೃಷ್ಟಾಂತನಾಗುತ್ತಾನೆ.

**ಭಾವವಿಲಾಸಿನೀ**–ಪರಮತೇ ಮಾಯಾವಿಶಿಷ್ಟಸ್ಯೈವ ಜಗತ್ಕರ್ತೃತ್ವಾತ್ ಶುದ್ಧ ಬ್ರಹ್ಮಣಿ ಕರ್ತೃತ್ವಾಭಾವೇನಾರ್ಥಕ್ರಿಯಾಕಾರಿತ್ವಹೇತೌ ದೃಷ್ಟಾಂತಸ್ಯ ಸಾಧನವೈಕಲ್ಯ ಮಾಶಂಕ್ಯಪರಿಹರತಿ ॥ **ವಿಶಿಷ್ಟೇತಿ** ॥ ಜಗದುಪಾದಾನರೂಪಮಾಯಾವಿಶಿಷ್ಟ ಚಿತ್ಕರ್ತೃತಾಯಾಮಿತ್ಯರ್ಥಃ । ಯದ್ವಿಶಿಷ್ಟಃ ಮೃದ್ದಂಡವಿಶಿಷ್ಟಃ । ಕರೋತಿ ಕುಂಭಂ ಕರೋತಿ । ಅಸೌ ಕುಂಭಕಾರಃ । ಯಥಾ ದಂಡ ಮೃತ್ಪಿಂಡ ವಿಶಿಷ್ಟಕುಂಭಕಾರಸ್ಯ ಕರ್ತೃತ್ವೇಽಪಿ ವಿಶೇಷ್ಯಭೂತಕುಂಭಕಾರಸ್ಯೈವ ಕರ್ತೃತ್ವಂ ನ ವಿಶೇಷಣೀಭೂತದಂಡಮೃತ್ಪಿಂಡಯೋಃ । ತಯೋರಪಿ ಕರ್ತೃತ್ವೇ ಕರ್ತ್ರರ್ಥಕ ಕುಂಭಕಾರಪದಸ್ಯ ತತ್ರಾಪಿ ಪ್ರಯೋಗ ಪ್ರಸಂಗಾತ್ । ಏವಂ ಜಗದುಪಾದಾನ'ಮಾಯಾವಿಶಿಷ್ಟಚಿತಃ ಕರ್ತೃತ್ವೇಽಪಿ ಕರ್ತೃತ್ವಂ ಚಿತ ಏವ । ಅತಃ ಕುಲಾಲದೃಷ್ಟಾಂತೇನ ವಿಶಿಷ್ಟಕರ್ತೃತಾಯಾಮಪಿ ಚಿತ ಏವ ಕರ್ತೃತ್ವಾತ್ । ನಿರುಪಮಾ ಅಸದೃಶೀ । ಬ್ರಹ್ಮೋಪಮಾ ಅರ್ಥಕ್ರಿಯಾಕಾರಿತ್ವಹೇತೌ ಬ್ರಹ್ಮದೃಷ್ಟಾಂತಃ ॥ ೧೭೨-೧೭೩ ॥

ಮೋಘತ್ವೋಕ್ತೇರಯುಕ್ತೇಶ್ಚ ಜಗತ್ಯರ್ಥಕ್ರಿಯಾಕೃತಿ ।
ಅನುಕ್ತೇಶ್ಚಾಖಿಲೈರ್ಮೋಘಪದಮೇವ ನಞಃ ಪದಂ ॥ ೧೭೪ ॥

**ಅರ್ಥ—** ಅರ್ಥಕ್ರಿಯಾಕೃತಿ= ಅರ್ಥಕ್ರಿಯಾಕಾರಿಯಾದ, ಜಗತಿ= ಜಗತ್ತಿನ ವಿಷಯದಲ್ಲಿ, ಮೋಘತ್ವೋಕ್ತೇಃ= ಮೋಘವೆಂದೂ ಅರ್ಥ ಕ್ರಿಯಾಕಾರಿಯಲ್ಲ ಎಂದು ಹೇಳುವುದಕ್ಕೆ, ಅಯುಕ್ತೇಃ= ಕೂಡುವುದಿಲ್ಲವಾದ್ದರಿಂದ, ಮತ್ತು ಅಖಿಲೈಃ ಅನುಕ್ತೇಃ= ಅನ್ನ ಪಾನಗಳಿಂದ ಬದುಕುವವರೆಲ್ಲರೂ ಮೋಘವೆನ್ನದಿರುವುದರಿಂದ, ಮೋಘಪದಂ ಏವ= ಮೋಘ ಎಂಬ ಪದವೇ, ನಞಃ ಪದಂ= ನಞ್ ಎಂಬುದಕ್ಕೆ ಅನ್ವಯಸ್ಥಾನ.

**ಅನುವಾದ** - ಅನ್ನಪಾನಾದಿಗಳನ್ನು ಕೊಡುವುದರಿಂದ ಜಗತ್ತು ಮೋಘ (ವ್ಯರ್ಥವೆಂಬುದು) ಕೂಡುವುದಿಲ್ಲ; ಆವಿಪಾಲಗೋಪಾಲಾದಿ ಸಮಸ್ತರು ಯಾರೂ ಮೋಘ ಎನ್ನುವುದಿಲ್ಲ. ಆದ್ದರಿಂದ, 'ನ ಮೋಘಂ' ಎಂದೇ ನಕಾರಕ್ಕೆ ಅನ್ವಯ ಹೊರತು 'ಸತ್ಯಂ ನ' ಎಂದಲ್ಲ.

**ಭಾವವಿಲಾಸಿನೀ—** ಮೋಘಂ ನೇತ್ಯೆವ ನಞೋ ಯೋಗಃ ಕರ್ತವ್ಯೋ ನಾನ್ಯಥೇತ್ಯಾಹ – **ಮೋಘತ್ವೋಕ್ತೇರಿತಿ** ॥ ಅರ್ಥಕ್ರಿಯಾಕೃತಿ ಜಗತೀತಿ ಸಂಬಂಧಃ । ಸಸ್ಯ ದಾಹೋಪಶಮಾದ್ಯರ್ಥ-ಕ್ರಿಯಾಕಾರಿಣಿ ಪೃಥಿವ್ಯಾದಿಜಗತಿ ಮೋಘತ್ವೋಕ್ತೇರಯುಕ್ತೇಃ । ಆವಿಪಾಲಗೋಪಾಲಮ್ ಅನ್ನಪಾನೋಪಜೀವಿಭಿರಖಿಲೈರ್ಜನೈರ್ಜಗತಿ ಮೋಘತ್ವಾನುಕ್ತೇಶ್ಚ ಮೋಘಂ ನೇತ್ಯೇವ ಪದಯೋಗಃ ಕರ್ತವ್ಯೋ ನಾನ್ಯಥೇತಿ ಭಾವಃ । ನಞಃ ಪದಂ ನಞಃ ಸ್ಥಾನಮ್ ॥ ೧೭೪ ॥

ಸುಶೋಭಿಪದವಿನ್ಯಾಸವ್ಯತ್ಯಾಸಂ ಶ್ರುತಿಸುಂದರೀ ।
ಕದಧ್ವನಿ ಸಹೇತಾಪಿ ನ ಸಹೇತ ಸದಧ್ವನಿ ॥ ೧೭೫ ॥

**ಅರ್ಥ—** ಶ್ರುತಿಸುಂದರೀ= ಶ್ರುತಿರೂಪದ ಸುಂದರಸ್ತ್ರೀಯು, ಕದಧ್ವನಿ= ಯಥಾಸ್ಥಿತಾನ್ವಯಕ್ಕೆ ಬಾಧಪಿರುವ ಮಾರ್ಗದಲ್ಲಿ, ಸುಶೋಭಿಪದವಿನ್ಯಾಸವ್ಯತ್ಯಾಸಂ= ಮಂಗಲಕರವಾದ ತನ್ನ ಪಾದವಿನ್ಯಾಸದ ಪದಾನ್ವಯದ ವ್ಯತ್ಯಾಸವನ್ನು, ಸಹೇತಾಪಿ= ಸಹನೆ ಮಾಡಿದರೂ, ಸದಧ್ವನಿ= ಬಾಧರಹಿತವಾದ ಯೋಗ್ಯಾರ್ಥವು ಸಿದ್ಧವಿರುವ ಒಳ್ಳೆಯ ಮಾರ್ಗದಲ್ಲಿ, ವಿನ್ಯಾಸ ವ್ಯತ್ಯಾಸಂ= ಪದಗಳ ಯೋಜನೆಯ ವ್ಯತ್ಯಾಸವನ್ನು ಬೇರೆ ಕಡೆ ಹೆಜ್ಜೆ ಇಡುವುದನ್ನು, ಸಹೇತ ನ= ಸಹಿಸುವುದಿಲ್ಲ.

**ಅನುವಾದ** - ಯಥಾಸ್ಥಿತವಾದ ಪದದಿಂದ ಯೋಗ್ಯವಾದ ಅರ್ಥವು ಅಬಾಧಿತವಾಗಿ ಸಿದ್ಧವಾಗುತ್ತಿರುವಾಗ ಅದನ್ನು (ಪದವಿನ್ಯಾಸವನ್ನು) ಬದಲಿಸಿ, ಬೇರೆ ಅನ್ವಯ ಅರ್ಥವನ್ನು ಹೇಳುವುದನ್ನು ಶ್ರುತಿಯು ಸಹಿಸುವುದಿಲ್ಲ; ಕಂಟಕವಿರುವ (ಮುಳ್ಳಿರುವ) ಮಾರ್ಗದಲ್ಲಿ ಅನಿರ್ವಾಹವಾಗಿ ಪಾದವಿನ್ಯಾಸವನ್ನು ಬದಲಿಸಬಹುದಾದರೂ-ಶ್ರುತಿ ಶಬ್ದಗಳನ್ನು (ಪದಗಳ ಅನ್ವಯವನ್ನು) ವ್ಯತ್ಯಾಸ ಮಾಡಿಕೊಳ್ಳಬಹುದಾದರೂ, ಒಳ್ಳೆಯ ಸರಳ ಮಾರ್ಗದಲ್ಲಿ ಪಾದವ್ಯತ್ಯಾಸವನ್ನು

ಸಹಿಸದಿರುವಂತೆ (ಹಾರಿ ನಡೆಯುವುದನ್ನು ಎಂಬಂತೆ) ಯೋಗ್ಯಾನ್ವಯವು ದೊರೆಯುತ್ತಿರಲು, ಶ್ರುತಿಯು ವಾಮಮಾರ್ಗವನ್ನು ಸಹಿಸುವುದಿಲ್ಲ.

**ಭಾವವಿಲಾಸಿನೀ–**ಯಥಾಸ್ಥಿಪದವಿನ್ಯಾಸೇನೈವಾರ್ಥಸಂಭವೇ ತತೋ ವ್ಯತ್ಯಾಸಂ ಕೃತ್ವಾ ವ್ಯವಹಿತ-ಪದಾಂತರೇಣ ತದ್ಯೋಗಕರಣಂ ಚಾಯುಕ್ತಮಿತಿ ಸಾಹಿತ್ಯಮುದ್ರಯಾऽऽಹ–ಸುಶೋಭೀತಿ ॥ ಸುಂದರೀವಿಷಯೇ ಪಾದವಿಕ್ಷೇಪಃ ಪದವಿನ್ಯಾಸಃ । ಕದಧ್ವನಿ ಯಥಾಸ್ಥಿತಾರ್ಥೇ ಬಾಧಕ ಸಹಿತ ವಾಕ್ಯರೂಪಾಧ್ವನಿ । ಸುಂದರೀವಿಷಯೇ ಕಂಟಕಸಹಿತಾಧ್ವನೀರಿತ್ಯರ್ಥಃ ॥ ೧೭೫ ॥

ನ ಚೇತ್ ಸ್ವಾರ್ಹತ್ವವಾಕ್ ಕುಪ್ಯೇದಪ್ಯೇತಿ ಚ ಮತಂ ತವ ।
ಸ್ತುತಿಶ್ರುತಿರಿಯಂ ಕುಪ್ಯೇತ್ ತೃಪ್ಯೇದ್ ಭುಕ್ತ್ಯಾ ಕಥಂ ಭವಾನ್ ॥ ೧೭೬ ॥

**ಅರ್ಥ–** ನ ಚೇತ್= ನ ಮೋಘಂ ಎಂಬುದು ಪದವಾದರೆ, ಸ್ವಾರ್ಹತ್ವವಾಕ್= (ವ್ಯರ್ಥವಾದುದರ ಅಪೇಕ್ಷೆಯ ಕೂಡುವುದಿಲ್ಲವಾದ್ದರಿಂದ) ಸ್ವಾರ್ಹವೆಂಬ ಪದವು, ಕುಪ್ಯೇತ್= ಸಿಟ್ಟಾಗುತ್ತದೆ, ಚ= ಮತ್ತು, ತವ ಮತಂ= ನಿನ್ನ ಮತವು, ಅಪ್ಯೇತಿ= ನಷ್ಟವಾಗುತ್ತದೆ, ಇಯಂ= ಈ, ಸ್ತುತಿಶ್ರುತಿಃ= ಸ್ತುತಿಪರವಾದ ಶ್ರುತಿಯು, ಕುಪ್ಯೇತ್= ಸಿಟ್ಟಾಗುತ್ತದೆ; ಭವಾನ್= ನೀನಾದರೂ, ಭುಕ್ತ್ಯಾ-ಮಿಥ್ಯಾ= ವಸ್ತುಗಳ ಭೋಜನದಿಂದ, ಕಥಂ ತೃಪ್ಯೇತ್= ಹೇಗೆ ತೃಪ್ತನಾಗುವಿ?

**ಅನುವಾದ** - 'ನ ಸತ್ಯಂ' ಎಂಬ ಅನ್ವಯವನ್ನು ಅಪಹಾಸ ಮಾಡಲಾಗಿದೆ; 'ನ' ಕಾರವನ್ನು ಸತ್ಯಶಬ್ದದೊಡನೆ ಸೇರಿಸಿದರೆ, ಸ್ಪೃಹಾ ಶಬ್ದವು ಈ ಅರ್ಥವನ್ನು ಸಹಿಸುವುದಿಲ್ಲ; ವ್ಯರ್ಥವಾದುದನ್ನು ಯಾರೂ ಆಶಿಸುವುದಿಲ್ಲವಷ್ಟೆ; ಜಗತ್ತು ಮಾತ್ರವೇ ಅರ್ಥಕ್ರಿಯಾಕಾರಿ ಎಂಬ ನಿನ್ನ (ಅದ್ವೈತಿಯ) ಮತವು ನಷ್ಟ ಹೊಂದುತ್ತದೆ. ಜಗತ್ಸತ್ಯತ್ವವನ್ನು ಪ್ರಶಂಸಿಸಲುದ್ಯುಕ್ತವಾದ ಈ ಶ್ರುತಿಯೂ ಕುಪಿತವಾಗುತ್ತದೆ; ಮೋಘಂ ಎಂದೇ, ಮಿಥ್ಯೆಯೆಂದೇ ಆದರೆ, ಮಿಥ್ಯಾ-ಭೋಜನದಿಂದ ನೀನಾದರೂ ಹೇಗೆ ತೃಪ್ತನಾಗುವಿ? ಆದ್ದರಿಂದ 'ನಮೋಘಂ' ಎಂದೇ ಅನ್ವಯ. ಜಗತ್ತು ಅರ್ಥಕ್ರಿಯಾಕಾರಿಯಾದ ಪರಮಸತ್ಯತ್ವವುಳ್ಳದ್ದೇ ಆಗಿದೆ.

ಪ್ರಾಗುಕ್ತಶ್ರುತಿಯುಗ್ಮಾರ್ಥತಿಗ್ಮಭಾನೂ ಚ ಕುಪ್ಯತಃ ।
ಅತೋ ನಞೋऽಪಕರ್ಷೇ ಸ್ಯಾದಪಕರ್ಷೋ ಮಹಾಂಸ್ತವ ॥ ೧೭೭ ॥

**ಅರ್ಥ–** ಪ್ರಾಗುಕ್ತಶ್ರುತಿಯುಗ್ಮಾರ್ಥತಿಗ್ಮಭಾನೂ ಚ = ಹಿಂದೆ ಹೇಳಲಾದ 'ಕವಿರ್ಮನೀಷೀ' ಮತ್ತು 'ವಿಶ್ವಂ ಸತ್ಯಂ' ಎಂಬ ಎರಡೂ ಶ್ರುತ್ಯರ್ಥಗಳೆಂಬ ಪ್ರಖರಸೂರ್ಯರೂ, ಕುಪ್ಯತಃ= ಕೋಪಗೊಳ್ಳುತ್ತಾರೆ. ಈ ಅರ್ಥವನ್ನು ಸಹಿಸುವುದಿಲ್ಲ. ಅತಃ= ಆದ್ದರಿಂದ, ನಞಃ= ನಕಾರದ, ಅಪಕರ್ಷೇ= ಇತ್ ತತ್ ಎಂದು ಎರಡು ಶಬ್ದಗಳನ್ನೂ

ದಾಟಿ ಹಿಂದಕ್ಕೆ ಎಳೆದು ತರಲು ಅಪಕರ್ಷ ಮಾಡುತ್ತಿರಲು, ತವ= ನಿನಗೆ, ಮಹಾನ್= ದೊಡ್ಡದಾದ, ಅಪಕರ್ಷಃ ಸ್ಯಾತ್= ನಿಂದೆಯೇ ಆಗುತ್ತದೆ.

**ಅನುವಾದ** - 'ಕವಿರ್ಮನೀಷೀ' ಮತ್ತು 'ವಿಶ್ವಂ ಸತ್ಯಂ' ವಿಶ್ವಸತ್ಯತ್ವವನ್ನು ಸಾರುವ ಶ್ರುತಿಗಳೂ ಸಿಟ್ಟಾಗುತ್ತವೆ (ಅವುಗಳ ವಿರೋಧವು ತಪ್ಪುವುದಿಲ್ಲ); ಆ ಎರಡು ಶ್ರುತಿಗಳೂ, ಪ್ರಖರ ಸೂರ್ಯಪ್ರಕಾಶದಂತೆ, ಸರ್ವ ಸಂಶಯ ನಿವಾರಣಪೂರ್ವಕ ಸತ್ಯತ್ವವನ್ನು ಘೋಷಿಸುತ್ತವೆ; ಈ ಅರ್ಥವನ್ನು ಅವು, ಎಂದಿಗೂ ಸಹಿಸುವುದಿಲ್ಲ; 'ನ ಮೋಘಂ' ಎಂಬಲ್ಲಿರುವ ನ ಕಾರವನ್ನು ನಡುವೆ ಇರುವ 'ಇತ್ ತತ್' ಶಬ್ದಗಳನ್ನು ದಾಟಿ ಹಿಂದಕ್ಕೆ ಸತ್ಯಂ ಎಂಬಲ್ಲಿಗೆ ತಂದು ಸೇರಿಸುವುದು ಅಪಕರ್ಷ. ನಿನ್ನ ಅಜ್ಞಾನವನ್ನು (ಆಗ್ರಹವನ್ನೂ) ಹೇಳುವುದರಿಂದ ನಿನಗೆ ಅಪಕರ್ಷ ಉಂಟುಮಾಡುತ್ತದೆ.

ಏಕಸ್ಯಾಮುಪಪತ್ತೌ ಚ ವಾಕ್ಯಂ ತಾತ್ಪರ್ಯವತ್ ಕಿಲ ।
ಬಹೂಪಪತ್ತಿಯುಕ್ತೇಷು ಮಹಾತಾತ್ಪರ್ಯಮೇಷು ತತ್ ॥ ೧೭೮ ॥

**ಅರ್ಥ**— ಏಕಸ್ಯಾಂ= ಒಂದು, ಉಪಪತ್ತೌ= ಉಪಪತ್ತಿ ಎಂಬ ತಾತ್ಪರ್ಯ ಲಿಂಗವಿರುವಾಗಲೂ, ವಾಕ್ಯಂ= ಶ್ರುತಿವಾಕ್ಯವು, ತಾತ್ಪರ್ಯವತ್ ಕಿಲ= ತಾತ್ಪರ್ಯವುಳ್ಳದಷ್ಟೆ; ಬಹೂಪಪತ್ತಿಯುಕ್ತೇಷು= ಬಹು ಉಪಪತ್ತಿಗಳಿಂದ ಕೂಡಿರುವ, ಏಷು= ಈ (ಉಕ್ತ) ವಾಕ್ಯಗಳಲ್ಲಿ, ತತ್= ಈ ಕಾರಣದಿಂದ, ಮಹಾತಾತ್ಪರ್ಯಂ= ಮಹಾತಾತ್ಪರ್ಯವೇ ಸಿದ್ಧವಾಗುತ್ತದೆ.

**ಅನುವಾದ** - ಶ್ರುತಿತಾತ್ಪರ್ಯವನ್ನು ತಿಳಿಯಲು ಉಪಕ್ರಮಾದಿಷಡ್ವಿಧ ಲಿಂಗಗಳಿವೆ. ಅವುಗಳಲ್ಲಿ ಒಂದು ಉಪಪತ್ತಿ. ಶ್ರುತಿಯೇ ಯುಕ್ತಿಯನ್ನು ಹೇಳುವುದುಂಟು. ಒಂದು ಯುಕ್ತಿಯನ್ನು ಹೇಳಿದರೂ ಸಾಕು ತಾತ್ಪರ್ಯವಿದೆ ಎಂದು ನಿಶ್ಚಯವಾಗುತ್ತದೆ. ಅನೇಕ ಯುಕ್ತಿಗಳನ್ನು ಹೇಳಿದರೆ ಇನ್ನೇನು? ಅದರಿಂದ ಮಹಾತಾತ್ಪರ್ಯವೇ ಸಿದ್ಧವಾಗುವುದು. ಅನೇಕ ಯುಕ್ತಿಗಳಿಂದ ಸಮರ್ಥಿಸಲ್ಪಡುವ ಶ್ರುತ್ಯರ್ಥವೇ ಅದರ ಮಹಾತಾತ್ಪರ್ಯ ವಿಷಯವಾದುದು (ಗ್ರಾಹ್ಯವೇ ಸರಿ).

**ಭಾವವಿಲಾಸಿನೀ**— ನಚೇತ್ ನ ಮೋಘಮಿತ್ಯೇವ ಪದಯೋಗೋ ನಚೇತ್ । ಮೋಘ ಮಿತ್ಯೇವ ಪದಂ ಚೇದಿತ್ಯರ್ಥಃ । ವ್ಯರ್ಥಸ್ಯ ಸ್ಪೃಹಣೀಯತ್ವಾ ಯೋಗಾತ್ಸಾರ್ಥಪದಂ ಕುರ್ಪ್ಯೇತ್ । ತತ್ಸಿದ್ಧಾಂತೇಽಪಿ ಜಗತ್ಯೇವಾರ್ಥಕ್ರಿಯಾಕಾರಿತ್ವಾತ್ತವ ಮತಂ ಚಾಪ್ಯೇತಿ ನಶ್ಯತೀತ್ಯರ್ಥಃ । ಸ್ತುತಿ ಶ್ರುತಿಃ ಸ್ತುತಿರೂಪಾ ಶ್ರುತಿಃ । ಭಗವತ್ಸ್ತುತ್ಯರ್ಥಂ ಪ್ರವೃತ್ತಾ ಶ್ರುತಿಃ ತತ್ಕೃತಜಗತೋ ಮೋಘತ್ವಂ ಕಥಂ ವರ್ಣಯೇತ್ । ಭುಕ್ತ್ಯಾನ್ನಭೋಜನೇನ । ಜಗತೋ ವ್ಯರ್ಥತ್ವೇ ಭುಕ್ತ್ಯಾ ತವ ತೃಪ್ತಿಶ್ಚ ಕಥಂ ಸ್ಯಾತ್ । ಪ್ರಾಗುಕ್ತಶ್ರುತೀ ಕವಿರ್ಮನೀಷೀ ವಿಶ್ವಂ ಸತ್ಯಮಿತಿ ಶ್ರುತೀ । ನಞೋಪಕರ್ಷಂ

ಕೃತ್ವಾ ಪದದ್ವಯವ್ಯವಹಿತೇನ ಸತ್ಯಮಿತ್ಯನೇನ ಯೋಗೇ ಕೃತೇ ನಿರವಕಾಶಸತ್ಯತ್ವಪ್ರತಿಪಾದಕ ಪ್ರಾಗುಕ್ತಶ್ರುತಿದ್ವಯವಿರೋಧಶ್ಚ ಸ್ಯಾತ್ । ಅತೋಽಷ್ಟದೂಷಣದೂಷಿತತ್ವಾತ್ ನಞೋಪಕರ್ಷೇ ವಿದುಷಾಂ ಸದಸಿ ತವಾಪಿ ಮಹಾನಪಕರ್ಷಃ ಸ್ಯಾದಿತಿ ಭಾವಃ । ಉಪಲಕ್ಷಣಂ ಚೈತತ್ । ನಿವಸನ ಶೀಲಾರ್ಥಕವಸುಪದಸೂಚಿತಾತ್ ಜಗತ್ಪರಮಾರ್ಥಸತ್ ಬ್ರಹ್ಮ-ಚರಮಸಾಕ್ಷಾತ್ಕಾರೋತ್ತರಕಾಲೇಽಪಿ ವಿದ್ಯಮಾನತ್ವಾತ್ ಬ್ರಹ್ಮವದಿತ್ಯನುಮಾನಾದಪಿ ವಿಶ್ವಸತ್ಯತ್ವಸಿದ್ಧಿಃ । ನಚ ಹೇತೋರಸಿದ್ಧಿಃ । ಅಪರೋಕ್ಷಜ್ಞಾನಿನಾಮಪಿ ಶುಕನಾರದಾದೀನಾಂ ಜಗತ್ಯೇವ ಸಂಚಾರಾತ್ । ಜಗದ್ಗುರೋರ್ಮಹಾಜ್ಞಾನಿನೋ ಬ್ರಹ್ಮಣ ಏವ ಜಗತ್ಸರ್ಜನಾದಿ ವ್ಯಾಪಾರಾಚ್ಚ । ಚಿಕೇತೇತ್ಯಾದಿ ಪದತ್ರಯ ಸೂಚಿತಾತ್ ಸೃಷ್ಟತ್ವಾತ್ ಆನಯನಯೋಗ್ಯತ್ವಾತ್ ದಾನಯೋಗ್ಯತ್ವಾಚ್ಚ ವ್ಯತಿರೇಕೇಣ ಶುಕ್ತಿರೂಪ್ಯವತ್ ಜಗತ್ಸತ್ಯತ್ವಸಿದ್ಧಿಃ । ರಜತಾವಯವಾದೇವ ರಜತ ದೃಷ್ಟಿದರ್ಶನೇನಾವಿದ್ಯಯಾ ತತ್ ಸೃಷ್ಟಿರಸೃಷ್ಟಿರೇವೇತ್ಯಾದಿಯುಕ್ತ್ಯಾ ವಿಶ್ವಸತ್ಯತ್ವಸಿದ್ಧೇಶ್ಚ ನ ನಞೋಪಕರ್ಷ ಇತ್ಯಪಿ ದ್ರಷ್ಟವ್ಯಮ್ ॥ ಏಷು ಉಕ್ತವಾಕ್ಯೇಷು । ತತ್ತಸ್ಮಾತ್ ॥೧೭೬-೧೭೮॥

**ವಿವರಣೆ** - 'ಯಚ್ಚಿಕೇತ ಸತ್ಯಮಿತ್ ತನ್ನಮೋಘಂ' ಎನ್ನುವ ಶ್ರುತಿವಾಕ್ಯಕ್ಕೆ ಸತ್ಯಶಬ್ದದೊಡನೆ ನಞ್‌ಗೆ ಅನ್ವಯವನ್ನು ಅದ್ವೈತಿಗಳು ಮಾಡುತ್ತಾರೆ. ಈ ಜಗತ್ತು 'ನ ಸತ್ಯಂ' ಸತ್ಯವಲ್ಲ ಎಂದು. ಈ ರೀತಿಯಾಗಿ ಹೇಳಿದರೆ ಹಿಂದೆ ಹೇಳಿದ ಸತ್ಯತ್ವ ಪ್ರತಿಪಾದಕವಾದ 'ಕವಿರ್ಮನೀಷಿ', 'ವಿಶ್ವಂ ಸತ್ಯಂ' ಎಂಬ ನಿರವಕಾಶ ಶ್ರುತಿಗಳ ವಿರೋಧವು ಬರುತ್ತದೆ. ಆದ್ದರಿಂದ ಜಗನ್ಮಿಥ್ಯಾತ್ವಪ್ರತಿಪಾದಕವಾದ ನಿನ್ನ ಮಾತಿಗೆ ಅಷ್ಟದೋಷಗಳು ಇರುವುದರಿಂದ ಮುಂದೆ ಇರುವ ನಞ್‌ನ್ನು ಸತ್ಯಶಬ್ದದ ಜೊತೆಗೆ ಅಪಕರ್ಷ ಮಾಡಿದರೆ ವಿದ್ವಾಂಸರ ಸಭೆಯಲ್ಲಿ ನಿನಗೂ ದೊಡ್ಡ ಮಾನಾಪಕರ್ಷವಾಗುತ್ತದೆ ಎಂದು ಭಾವ. ಇದು ಉಪಲಕ್ಷಣ. ಶ್ರುತಿಯಲ್ಲಿನ ವಸುಪದವು ವಿಶ್ವಸತ್ಯತ್ವವನ್ನು ಅನುಮಾನದಿಂದ ಸಾಧಿಸುತ್ತಿದೆ. ಜಗತ್ ಪರಮಾರ್ಥಸತ್ ಬ್ರಹ್ಮಚರಮ ಸಾಕ್ಷಾತ್ಕಾರೋತ್ತರಕಾಲೇಽಪಿ ವಿದ್ಯಮಾನತ್ವಾತ್ ಬ್ರಹ್ಮವತ್ ಎಂಬ ಈ ಅನುಮಾನ ದಿಂದಲೂ ವಿಶ್ವಸತ್ಯತ್ವವು ಸಿದ್ಧಿಸುತ್ತದೆ. ಇಲ್ಲಿ ಹೇತ್ವಸಿದ್ಧಿಯನ್ನು ಹೇಳಲಾಗದು. ಅಪರೋಕ್ಷ ಜ್ಞಾನಿಗಳಾದ ಶುಕ, ನಾರದಾದಿಗಳು ಜಗತ್ತಿನಲ್ಲಿ ಸಂಚರಿಸುವುದರಿಂದ ಹೇತ್ವಸಿದ್ಧಿಯನ್ನು ಹೇಳಲಾಗದು. ಇಷ್ಟೇ ಅಲ್ಲದೆ, ಮಹಾಜ್ಞಾನಿಯಾದ, ಜಗದ್ಗುರುವಾದ ಚತುರ್ಮುಖ ಬ್ರಹ್ಮನೂ ಕೂಡ ಜಗತ್ಸ್ರಷ್ಟ್ಯಾದಿ ವ್ಯಾಪಾರಗಳಲ್ಲಿ ನಿರತನಾಗಿರುವು ದರಿಂದ ಹೇತ್ವಸಿದ್ಧಿ ಇಲ್ಲ. ಇಷ್ಟೇ ಅಲ್ಲದೆ, ಚಿಕೇತ ಮುಂತಾದ ಮೂರು ಪದಗಳಿಂದ ಸೂಚಿತಗಳಾದ ಸೃಷ್ಟತ್ವ ಆನಯನಯೋಗ್ಯತ್ವ ದಾನಯೋಗ್ಯತ್ವ ಹೇತುಗಳಿಂದಲೂ ಜಗತ್ಸತ್ಯತ್ವವು ಸಿದ್ಧಿಸುತ್ತದೆ. ವ್ಯತಿರೇಕೇಣ ಶುಕ್ತಿರೂಪ್ಯವತ್ ಎಂಬುದು ಈ ಅನುಮಾನಕ್ಕೆ ದೃಷ್ಟಾಂತ.

ಅತಃ ಶ್ರುತಿಮಹಾತಾತ್ಪರ್ಯಸ್ಯ ಗೋಚರಭಾವತಃ ।
ಬ್ರಹ್ಮವಜ್ಜಗದೇತಚ್ಚ ಪರಮಾರ್ಥಸದೇವ ಹಿ ॥ ೧೭೯ ॥

**ಅರ್ಥ–** ಅತಃ = ಆದ್ದರಿಂದ, ಶ್ರುತಿ ಮಹಾತಾತ್ಪರ್ಯಸ್ಯ= ಶ್ರುತಿಯ ಮುಖ್ಯ ತಾತ್ಪರ್ಯದ, ಗೋಚರಭಾವತಃ= ವಿಷಯವಾದ್ದರಿಂದ, ಏತತ್ ಜಗತ್ ಚ= ಈ ಜಗತ್ತು ಸಹ, ಬ್ರಹ್ಮವತ್= ಬ್ರಹ್ಮನಂತೆ, ಪರಮಾರ್ಥ ಸತ್ ಏವ= ಪರಮಾರ್ಥ ಸತ್ಯತ್ವವುಳ್ಳದ್ದೇ, ಆಗುತ್ತದೆ.

**ಅನುವಾದ - ಆದ್ದರಿಂದ, ಈ ವಿಧದ ಶ್ರುತಿಮಹಾತಾತ್ಪರ್ಯವಿಷಯವಾದ್ದರಿಂದ, ಈ ಜಗತ್ತು, ಬ್ರಹ್ಮನಂತೆ ಪರಮಾರ್ಥ ಸತ್ಯವೇ ಆಗಿ ಅತ್ಯಂತ ಗ್ರಾಹ್ಯವೇ ಆಗಿದೆ.**

**ಯುಕ್ತೀಃ ಪಶ್ಯ ಶ್ರುತೀಃ ಪಶ್ಯ ಮಿಥ್ಯಾದೃಷ್ಟಿಂ ಪರಿತ್ಯಜ ।**
**ಸತ್ಯಂ ವದ ಜಗತ್ ಸರ್ವಂ ಭುಕ್ತಿಂ ಮುಕ್ತಿಂ ಯದೀಚ್ಛಸಿ ॥ ೧೮೦ ॥**

**ಅರ್ಥ–** ಯುಕ್ತೀಃ ಪಶ್ಯ= ಯುಕ್ತಿಗಳನ್ನು ನೋಡು, ಶ್ರುತೀಃ= ಶ್ರುತಿಗಳನ್ನು, ಪಶ್ಯ= ತಿಳಿ; ಮಿಥ್ಯಾದೃಷ್ಟಿಂ= ಜಗನ್ಮಿಥ್ಯೆಯೆಂಬ ಭಾವವನ್ನು, ಪರಿತ್ಯಜ= ಪೂರ್ಣವಾಗಿ ತ್ಯಜಿಸು, ಯದಿಭುಕ್ತಿಂ ಮುಕ್ತಿಂ= ಭುಕ್ತಿಯನ್ನು, ಮುಕ್ತಿಯನ್ನು ಇಚ್ಛಸಿ= ಇಚ್ಛಿಸುವೆಯಾದರೆ, ಸರ್ವಂ ಜಗತ್= ಎಲ್ಲ ಜಗತ್ತನ್ನೂ, ಸತ್ಯಂ ವದ = ಸತ್ಯವೆಂದು ಹೇಳು.

**ಅನುವಾದ - ಶ್ರುತಿಯುಕ್ತಿಗಳ ತಾತ್ಪರ್ಯವನ್ನು ಗ್ರಹಿಸಿ ಜಗನ್ಮಿಥ್ಯಾತ್ವ ಭಾವನೆಯನ್ನು ಪರಿತ್ಯಜಿಸು; ಇಹಪರಗಳ ಸುಖಗಳನ್ನು ಇಚ್ಛಿಸುವೆಯಾದರೆ, ಜಗತ್ಸತ್ಯತ್ವವನ್ನು ಹೇಳು. ಜಗತ್ತು ಸತ್ಯವೆಂಬ ನಿಶ್ಚಯಜ್ಞಾನವನ್ನು ಹೊಂದುವುದೇ ಬುಭುಕ್ಷುವಿಗೂ ಮುಮುಕ್ಷುವಿಗೂ ಅತ್ಯವಶ್ಯಕವು.**

**ಭಾವವಿಲಾಸಿನೀ–** ಅತಃ ಸೋಪಪತ್ತಿಕಶ್ರುತಿಪ್ರತಿಪಾದಿತತ್ವಾತ್ । ಗೋಚರಭಾವತಃ ಗೋಚರತ್ವಾತ್ । ಅನಯೈವ ಶ್ರುತ್ಯಾ ಬ್ರಹ್ಮ ಜಗದಭಿನ್ನಂ ನ ಜಗತ್‌ಸ್ರಷ್ಟೃತ್ವಾತ್ । ಯೋ ಯತ್‌ಸ್ರಷ್ಟಾ ನ ಸ ತದಭಿನ್ನಃ ಯಥಾ ಪಾಚಕಃ ಪಕ್ವಾನ್ನೇನ । ಬ್ರಹ್ಮಬಲ್ಯಾದಿರಾಕ್ಷಸಾಭಿನ್ನಂ ನ । ತಜ್ಜೇತೃತ್ವಾತ್ । ಯೋ ಯಜ್ಜೇತಾ ನ ಸ ತದಭಿನ್ನಃ । ಯಥಾ ಪನ್ನಗಾರಿಃ ಪನ್ನಗೇನ । ಬ್ರಹ್ಮ ಇಂದ್ರಾದ್ಯಭಿನ್ನಂ ನ ಇಂದ್ರಾದೀನಾಮೈಶ್ವರ್ಯಪ್ರದಾತೃತ್ವಾತ್ । ಯೋ ಯದೈಶ್ವರ್ಯದಾತಾ ನ ಸ ತದಭಿನ್ನಃ । ಯಥಾ ರಾಜಾ ರಾಜಪುರುಷೇಣೇತಿ ಹೇತೂನಾಂ ಶ್ರುತಿಮೂಲತ್ವೇನಾಸಿದ್ಧ್ಯಾದಿದೋಷರಹಿತಂ ಚೇತನಜಡಾತ್ಮಕ ಪ್ರಪಂಚಭೇದಸಾಧಕ ಮನುಮಾನತ್ರಯಂ ಚ ಸೂಚಿತಮ್ । ಶ್ರುತ್ಯರ್ಥಕಥನಮುಪಸಂಹರತಿ ॥ **ಯುಕ್ತೀರಿತಿ** ॥ ೧೭೯-೧೮೦ ॥

**ವಿವರಣೆ** - ಯಚ್ಚಿಕೇತ ಎನ್ನುವ ಶ್ರುತಿಯು ಯುಕ್ತಿಬದ್ಧವಾಗಿ ಜಗತ್ಸತ್ಯತ್ವದ ಜೊತೆಗೆ ಬ್ರಹ್ಮನಿಗೂ, ಜಗತ್ತಿಗೂ ಅಭೇದವಿಲ್ಲ. ಬ್ರಹ್ಮನು ಜಯಶೀಲನು ಎಂದು ಸಾಧಿಸುತ್ತಿದೆ. ಬ್ರಹ್ಮನು ಜಗತ್ತನ್ನು ಸೃಷ್ಟಿಸುವುದರಿಂದ ಸೃಷ್ಟವಾದ ಜಗತ್ತಿಗಿಂತ ಭಿನ್ನನೇ ಆಗಿದ್ದಾನೆ ಎಂದು ತಿಳಿಯುತ್ತದೆ. ಯಾರು ಯಾವ ವಸ್ತುವನ್ನು ಸೃಷ್ಟಿಸುತ್ತಾನೋ ಅವನು ಆ ವಸ್ತುವಿನಿಂದ

ಅಭಿನ್ನನಾಗಲು ಸಾಧ್ಯವಿಲ್ಲ. ಪಾಚಕನು ಪಕ್ವಾನ್ನವನ್ನು ತಯಾರಿಸುತ್ತಾನೆ. ಅನ್ನದಿಂದ ಅವನಿಗೆ ಅಭೇದವು ಇಲ್ಲ. ರಾಕ್ಷಸರಿಗೆ ಬ್ರಹ್ಮಬಲಿಯನ್ನು ಹಾಕುತ್ತೇವೆ. ರಾಕ್ಷಸನು ಬ್ರಹ್ಮಬಲಿಯಿಂದ ಅಭಿನ್ನನಲ್ಲ. ಯಾರು ಯಾರನ್ನು ಜಯಿಸುತ್ತಾನೋ, ಜಯಿಸುವವನು ಸೋಲುವವನಿಂದ ಅಭಿನ್ನನಲ್ಲ. ಗರುಡನು ಹಾವನ್ನು ಭಕ್ಷಿಸುತ್ತಾನೆ, ಹಾವಿನಿಂದ ಅಭೇದವು ಗರುಡನಿಗಿಲ್ಲ. ಗುಣಪರಿಪೂರ್ಣನಾದ ಪರಬ್ರಹ್ಮನು ಇಂದ್ರಾದಿಗಳಿಗೆ ಐಶ್ವರ್ಯಪ್ರದಾತೃವಾಗಿದ್ದಾನೆ. ದಾನಶೀಲನಾದ ವ್ಯಕ್ತಿಯು ದಾನಸ್ವೀಕರಿಸುವ ವ್ಯಕ್ತಿಯಿಂದ ಅಭಿನ್ನನಲ್ಲ. ರಾಜಪುರುಷನು ಭೃತ್ಯರಿಗೆ ಐಶ್ವರ್ಯವನ್ನು ನೀಡುತ್ತಾನೆ. ಭೃತ್ಯರಿಂದ ರಾಜನು ಅಭಿನ್ನನಲ್ಲ. ಈ ರೀತಿಯಾಗಿ ಅಸಿದ್ಧ್ಯಾದಿ ದೋಷಗಳಿಂದ ರಹಿತವಾದ ಚೇತನ ಜಡಾತ್ಮಕ ಪ್ರಪಂಚ ಭೇದಸಾಧಕಗಳಾದ ಅನುಮಾನಗಳು 'ಯಚ್ಚಿಕೇತ' ಎಂಬ ಶ್ರುತಿಯಿಂದ ಸೂಚಿತಗಳಾಗಿವೆ.

ಸದ್ಯುಕ್ತಿಹಸ್ತಿರಥ್ಯಶ್ವಪತ್ತ್ಯುತ್ಪತ್ತ್ಯೋತ್ತರೋತ್ತರಾ ।
ಇಯಂ ವಾಣೀ ಮೃಡಾನೀ ಕ್ವ ಕ್ವಾಽಽನೀತಾಽನೀಕಿನೀ ತವ ॥ ೧೮೧ ॥

**ಅರ್ಥ–** ಸದ್ಯುಕ್ತಿಹಸ್ತಿರಥ್ಯಶ್ವಪತ್ತ್ಯುತ್ಪತ್ತ್ಯಾ= ಸದ್ಯುಕ್ತಿಗಳೆಂಬ ಗಜ, ರಥ, ಅಶ್ವಾರೋಹಿಗಳ ಮತ್ತು ಕಾಲಾಳುದಳಗಳ ಉತ್ಪತ್ತಿಯಿಂದ, ಉತ್ತರೋತ್ತರಾ= ಒಂದಕ್ಕಿಂತ ಒಂದು ಉತ್ಕೃಷ್ಟವಾದ, ಇಯಂ= ಈ, ವಾಣೀ ಮೃಡಾನೀ= ಶ್ರುತಿರೂಪದ ದುರ್ಗಾದೇವಿಯು, ಕ್ವ=ಎಲ್ಲಿ, ತವ=ನಿನ್ನ, ಅನೀತಾ=ಬಲಾತ್ಕಾರದಿಂದ ತಂದ, ಅನೀಕಿನೀ=ಸೇನೆಯು, ಕ್ವ=ಎಲ್ಲಿ?

**ಅನುವಾದ** - ಶ್ರುತಿರೂಪದ ದುರ್ಗಾದೇವಿಯು, ಕ್ಷಣಕ್ಷಣಕ್ಕೆ ಉತ್ಪನ್ನವಾಗುವ ಸದ್ಯುಕ್ತಿಗಳೆಂಬ ಚತುರಂಗವುಳ್ಳದ್ದಾಗಿರುವಾಗ (ಗಜ, ರಥ, ಅಶ್ವ, ಪತ್ತಿಗಳೆಂಬ ಚತುರಂಗದಿಂದ ಪೂರ್ಣವಾಗಿರುವಾಗ), ಉತ್ತರೋತ್ತರಾ= ಅತ್ಯಂತ ಉತ್ಕೃಷ್ಟಳಾಗಿರುವಾಗ ಅದ್ವೈತಿಯು ಬಲಾತ್ಕಾರಿಂದತಂದೊಡ್ಡುವ, ಪ್ರತ್ಯಕ್ಷಾದಿ ಬಾಧಿತ ಯುಕ್ತಿಶ್ರುತಿಗಳೆಂಬ ಸೇನೆಯು (ದುರ್ಗಾಸೇನೆಯನ್ನು ಎದುರಿಸಿ ನಿಲ್ಲಲು), ಸಮರ್ಥವಾಗಬಲ್ಲದೇ? ಶಕ್ಯವಿಲ್ಲ. ಶ್ರುತಿಯು ತಾನೇ ಯುಕ್ತಿಗಳನ್ನು ಕ್ಷಣಕ್ಷಣಕ್ಕೆ ಸಿದ್ಧಮಾಡಿಕೊಡುತ್ತದೆ. ಅದ್ವೈತಿ ಹೊರಗಿಂದ ದುರ್ಬಲ ಯುಕ್ತಿಗಳನ್ನೇ ತರುತ್ತಾನೆ. ದುರ್ಗೆ ತಾನೇ ಸೈನ್ಯವನ್ನು ಉತ್ಪಾದಿಸುವಾಗ ಅಸುರರು ಹೊರಗಿಂದ ತರುವ ದುರ್ಬಲ ಸೈನ್ಯ ಏನು ಹೋರಾಡೀತು?

**ಭಾವವಿಲಾಸಿನೀ**–ಸಾಹಿತ್ಯಮುದ್ರಯಾ ಬಹುಯುಕ್ತಿಭರಿತನಿರವಕಾಶಾಸ್ಮಚ್ಛ್ರುತೀನಾಮಗ್ರೇ ಸಾವಕಾಶಯುಕ್ತಿಬಾಧಿತಪರಶ್ರುತಿನಾಂ ನ ಪ್ರತ್ಯವಸ್ಥಾನಮಿತ್ಯಾಹ – **ಸದ್ಯುಕ್ತೀತಿ** ॥ ಸದ್ಯುಕ್ತ್ಯಾಖ್ಯಹಸ್ತಿರಥ್ಯಶ್ವಪತ್ತೀನಾಮ್ ಉತ್ಪತ್ತ್ಯಾ । ಶ್ರೌತಪದಪರ್ಯಾಲೋಚನಾಯಾಂ ಕ್ಷಣೇ ಉತ್ಪತ್ತ್ಯಾ ಯುಕ್ತೀನಾಂ ವಿಚಿತ್ರಾಕಾರತ್ವಾತ್ ಚತುರಂಗತಯಾ ವರ್ಣನಮ್ । ಉತ್ತರೋತ್ತರಾ

ಅತಿಶಯೇನೋತ್ಕೃಷ್ಟಾ । ವಾಣ್ಯೇವ ಮೃಡಾನೀ ದುರ್ಗಾ । ದುರ್ಗಾಪಿ ಕ್ಷಣೇ ಕ್ಷಣೇ ನವನವಸೇನಾಮುತ್ಪಾದಯಿತುಂ ಸಮರ್ಥಾ । ಶ್ರುತಿರಪಿ ತಥೇತಿ ಭಾವಃ । ಅನೀತಾ ಬಲಾದಾನೀತಾ। ಅನೀಕಿನೀ ಪ್ರತ್ಯಕ್ಷಾದಿಬಾಧಿತಯುಕ್ತಿಶ್ರುತ್ಯಾಖ್ಯಸೇನಾ ॥ ೧೮೧ ॥

**ವಿವರಣೆ** - ಮತ್ತು ಒಂದು ಶ್ರುತಿಯಿಂದ ಮತ್ತೊಂದು ಶ್ರುತಿಗೆ ವಿರೋಧವನ್ನು ಹೇಳುವುದಾದರೆ ಸಮಬಲವಿರಬೇಕು. ಆದರೆ ನಮ್ಮ ಶ್ರುತಿಗೆ ಜಗತ್ತು ಸತ್ಯ ಎಂಬರ್ಥವನ್ನು ಬಿಟ್ಟು ಬೇರೇ ಅರ್ಥವನ್ನು ಹೇಳಲು ಬರುವುದಿಲ್ಲವಾದ್ದರಿಂದ ನಿರವಕಾಶವಾಗಿದೆ ಮತ್ತು ಹಿಂದಿನ ಶ್ಲೋಕದಲ್ಲಿ ಹೇಳಿದ (ಯೋ ಯತ್ಸ್ರಷ್ಟಾ ನ ಸಃ ತದಭಿನ್ನಃ) ಮುಂತಾದ ಬಹಳ ಯುಕ್ತಿಗಳಿಂದ ಕೂಡಿದೆ. ಆದ್ದರಿಂದ ಪ್ರಬಲವಾಗಿದೆ. ಆದರೆ ನೀವು ಹೇಳಿರುವ ಮಾಯಾಮಾತ್ರಂ ಎಂಬ ವೇದಕ್ಕೆ ಬೇರೆ ಅರ್ಥವನ್ನು ಹೇಳಲು ಬರುವುದರಿಂದ ಸಾವಕಾಶವಾಗಿದೆ. ಮತ್ತು ಸತ್ಯತ್ವವನ್ನು ಗ್ರಹಿಸುವ ಪ್ರತ್ಯಕ್ಷಾದಿ ಪ್ರಮಾಣಗಳಿಂದ ಬಾಧಿತವೂ ಆಗಿದೆ. ಹೀಗೆ ದುರ್ಬಲವಾದ ನಿಮ್ಮ ವೇದವು ಪ್ರಬಲವಾದ ನಮ್ಮ ವೇದಕ್ಕೆ ಹೇಗೆ ವಿರೋಧವನ್ನು ಒಡ್ಡಿ ನಿಲ್ಲುತ್ತದೆ? ಸಾಧ್ಯವೇ ಇಲ್ಲ ಎಂಬುದನ್ನು ಹೇಳಿದ್ದಾರೆ.

ಆದಿಸೃಷ್ಟೌ ತತಃ ಕುರ್ಯಾತ್ ಕಲ್ಪೇ ಕಲ್ಪೇ ಮಹಾಪ್ರಭುಃ ।
ಸತ್ಯಂ ಪ್ರಕೃತ್ಯುಪಾದಾನಂ ಸರ್ವಂ ಜಗದಿತಿ ಸ್ಥಿತಮ್ ॥ ೧೮೨ ॥

**ಅರ್ಥ**—ತತಃ= ಆದ್ದರಿಂದ, ಯಚ್ಚಿಕೇತ ಇತ್ಯಾದಿ ಶ್ರುತಿ ಇರುವುದರಿಂದ, ಮಹಾಪ್ರಭುಃ= ಸಮರ್ಥನಾದ ಪರಮಾತ್ಮನು, ಆದಿಸೃಷ್ಟೌ= ಜಗತ್ತಿನ ಮೊದಲಿನ ಸೃಷ್ಟಿಯಲ್ಲಿ (ಚ= ಮತ್ತು) ಕಲ್ಪೇ ಕಲ್ಪೇ= ದೈನಂದಿನ ಸೃಷ್ಟಿಯಲ್ಲಿ ಪ್ರಕೃತ್ಯುಪಾದಾನಂ= ಪ್ರಕೃತಿಯೇ ಉಪಾದಾನವಾಗಿವುಳ್ಳ (ಆದ್ದರಿಂದಲೆ) ಸತ್ಯಂ= ಸತ್ಯವಾದ ಸರ್ವಂ= ಸಮಗ್ರವಾದ, ಜಗತ್= ಜಗತ್ತನ್ನು, ಕುರ್ಯಾತ್= ಸೃಷ್ಟಿ ಮಾಡುತ್ತಾನೆ, ಇತಿ= ಎಂಬುದಾಗಿ, ಸ್ಥಿತಂ= ಸಿದ್ಧವಾಯಿತು.

**ಅನುವಾದ** - 'ಯಚ್ಚಿಕೇತ ಸತ್ಯಮಿತ್' ಎಂಬ ಶ್ರುತಿಯಿಂದ ಪರಮಾತ್ಮನಿಂದ ನಿರ್ಮಿತವಾದದ್ದೆಲ್ಲವೂ ಸತ್ಯವಾದದ್ದು ಎಂಬುದಾಗಿ ಸಿದ್ಧವಾಗಿದೆ. ಆದ್ದರಿಂದ ಪರಮಾತ್ಮನು ಆದಿಸೃಷ್ಟಿಯಲ್ಲಿ ಪ್ರಪಂಚವನ್ನು ನಿರ್ಮಿಸುವಾಗಲೂ ಮತ್ತು ದೈನಂದಿನ ಸೃಷ್ಟಿಯಲ್ಲಿ ನಿರ್ಮಿಸುವಾಗಲೂ ಪ್ರಕೃತಿಯನ್ನೇ ಉಪಾದಾನ ಕಾರಣವನ್ನಾಗಿ (ಮಡಿಕೆ ಮಾಡಲು ಮಣ್ಣನ್ನು ಉಪಯೋಗಿಸಿಕೊಳ್ಳುವಂತೆ) ಉಪಯೋಗಿಸಿಕೊಳ್ಳುತ್ತಾನೆ. ಆದ್ದರಿಂದ ಸತ್ಯವಾಗಿದೆ ಎಂದು ಸಿದ್ಧವಾಗಿದೆ.

**ಭಾವವಿಲಾಸಿನೀ**– ತತಃ ಯಚ್ಚಿಕೇತೇತಿ ಶ್ರುತೌ ಯಚ್ಚಿಕೇತ ತತ್ ಸತ್ಯಮಿತಿ ವ್ಯಾಪ್ತ್ಯಾ ಸರ್ವತ್ರ ಭಗವತಃ ಸತ್ಯಜಗತ್ಕರ್ತೃತ್ವಸ್ಯ ಶ್ರೂಯಮಾಣತ್ವಾತ್ । ಕಲ್ಪೇ ಕಲ್ಪೇ ದೈನಂದಿನ ಸೃಷ್ಟೌ ಚೇತ್ಯರ್ಥಃ॥೧೮೨॥

**ವಿವರಣೆ** - ಕಪ್ಪೆಚಿಪ್ಪಿನಲ್ಲಿ ಕಾಣುವ ಬೆಳ್ಳಿಗೆ ಅಜ್ಞಾನವೇ ಉಪಾದಾನ ಕಾರಣವಾಗಿರುವಂತೆ ಈ ಜಗತ್ತಿಗೆ ಅಜ್ಞಾನವೇ ಉಪಾದಾನ ಕಾರಣವಾದ್ದರಿಂದ 'ಜಗತ್ತು ಮಿಥ್ಯೆ' ಎಂಬುದು ಅದ್ವೈತಿಗಳ ವಾದ. ಆದರೆ ಜಗತ್ತಿಗೆ ಪ್ರಕೃತಿಯು ಉಪಾದಾನ ಹೊರತು ಅಜ್ಞಾನವಲ್ಲವಾದ್ದರಿಂದ ಜಗತ್ತು ಸತ್ಯವಾಗಿದೆ ಎಂಬುದು ವಾದಿರಾಜರ ಸಮರ್ಥನೆ.

ಏವಂ ಮೃದಾದ್ಯುಪಾದಾನೈರ್ನಿಮಿತ್ತೈರ್ದಂಡಪೂರ್ವಕೈಃ ।
ಕುಂಭಕಾರಕುವಿಂದಾದ್ಯಾಃ ಕುರ್ಯುರ್ಘಟಪಟಾದಿಕಮ್ ॥ ೧೮೩ ॥

**ಅರ್ಥ**– ಏವಂ = ಇದೇ ರೀತಿ ಮೃದಾದ್ಯುಪಾದಾನೈಃ= ಮಣ್ಣು ನೂಲು ಮೊದಲಾದ ಉಪಾದಾನ ಕಾರಣಗಳಿಂದ (ಚ= ಮತ್ತು) ದಂಡಪೂರ್ವಕೈಃ= ದಂಡ, ಚಕ್ರ ಮೊದಲಾದ ನಿಮಿತ್ತ ಕಾರಣಗಳಿಂದ, ಕುಂಭಕಾರಕುವಿಂದಾದ್ಯಾಃ= ಕುಂಬಾರ, ನೇಕಾರ ಮೊದಲಾದವರು, ಘಟಪಟಾದಿಕಂ= ಮಡಿಕೆ, ಬಟ್ಟೆ ಮೊದಲಾದವನ್ನು, ಕುರ್ಯುಃ= ಸೃಷ್ಟಿ ಮಾಡುತ್ತಾರೆ.

**ಅನುವಾದ** - ಲೋಕದಲ್ಲಿ ಕುಂಭಕಾರ ನೇಕಾರ ಇವರೆಲ್ಲರೂ ಮಡಿಕೆ ಬಟ್ಟೆ ಮೊದಲಾದವುಗಳನ್ನು ಸೃಷ್ಟಿ ಮಾಡುವಾಗ ಮಣ್ಣು ನೂಲುಗಳನ್ನು ಉಪಾದಾನವನ್ನಾಗಿ ದಂಡ, ಚಕ್ರಗಳನ್ನು ನಿಮಿತ್ತಕಾರಣವನ್ನಾಗಿ ಉಪಯೋಗಿಸಿಕೊಳ್ಳುತ್ತಾರೆ. ಅದರಂತೆ ಪರಮಾತ್ಮನು ಈ ಜಗತ್ತಿನ ಆದಿಸೃಷ್ಟಿಯಲ್ಲಾಗಲೀ ದೈನಂದಿನ ಸೃಷ್ಟಿಯಲ್ಲಾಗಲೀ ಪ್ರಕೃತಿಯನ್ನು ಉಪಾದಾನ ಕಾರಣವನ್ನಾಗಿ ಕಾಲ, ಕರ್ಮ ಮೊದಲಾದವುಗಳನ್ನು ನಿಮಿತ್ತ ಕಾರಣಗಳನ್ನಾಗಿ ಉಪಯೋಗಿಸಿಕೊಂಡು ಜಗತ್ತನ್ನು ಸೃಷ್ಟಿ ಮಾಡುತ್ತಾನೆ. ಆದ್ದರಿಂದ ಜಗತ್ತು ಸತ್ಯವೇ ಆಗಿದೆ.

**ಭಾವವಿಲಾಸಿನೀ**–ಅಜ್ಞಾನೋಪಾದನಕತ್ವೇನ ಜಗತೋ ಮಿಥ್ಯಾತ್ವಂ ಪರಕೀಯಭಾಷ್ಯೇ ಪ್ರತಿಪಾದಿತಮ್ । ತತ್ರಾಜ್ಞಾನೋಪಾದನಕತ್ವಮನುಭವವಿರುದ್ಧಂ ಯುಕ್ತಿ ವಿರುದ್ಧಂ ಚೇತ್ಯಾಹ – ಏವಮಿತಿ ॥ ಏವಮಾದಿಸೃಷ್ಟಿವತ್ । ದೈನಂದಿನ ಸೃಷ್ಟಿವಚ್ಚ । ದೃಷ್ಟವದ-ದೃಷ್ಟಸ್ಯಾಪ್ಯುನ್ನೇಯತ್ವೇನಾದಿಸೃಷ್ಟೇರಪೀದೃಶತ್ವ ನಿರ್ಣೀತೇಸ್ಸ್ವೈವ ದೃಷ್ಟಾಂತೀ ಕೃತಾ ॥ ೧೮೩ ॥

**ವಿವರಣೆ** - 'ದೃಷ್ಟವತ್ ಅದೃಷ್ಟಮಪಿ ಉನ್ನೇಯಂ' ಎಂಬ ನಿಯಮವಿದೆ. ಲೋಕದಲ್ಲಿ ಕಂಡದ್ದನ್ನು ನೋಡಿ ಕಾಣದ್ದನ್ನೂ ಊಹಿಸಬೇಕು ಎಂದು ಅದರರ್ಥ. ಲೋಕದಲ್ಲಿ ಕಂಡದ್ದು ಕುಂಭಕಾರನ ಸೃಷ್ಟಿ, ಕಾಣದ್ದು ಪರಮಾತ್ಮನ ಸೃಷ್ಟಿ. ಕುಂಭಕಾರನು ಸೃಷ್ಟಿಸುವಾಗ ಮಣ್ಣನ್ನು ಉಪಾದಾನವನ್ನಾಗಿ ದಂಡವನ್ನು ನಿಮಿತ್ತವನ್ನಾಗಿ ಉಪಯೋಗಿಸಿ ಕೊಳ್ಳುವಂತೆ ಪರಮಾತ್ಮನು ಜಗತ್ತಿನ ಸೃಷ್ಟಿಗೆ ಪ್ರಕೃತಿಯನ್ನು ಉಪಾದಾನವನ್ನಾಗಿ, ಕಾಲಕರ್ಮಾದಿಗಳನ್ನು ನಿಮಿತ್ತವನ್ನಾಗಿ ಉಪಯೋಗಿಸಿಕೊಳ್ಳುತ್ತಾನೆಯೇ ಹೊರತು ಅಜ್ಞಾನವನ್ನಲ್ಲ ಎಂದು ತಿಳಿಯಬೇಕು ಎಂದು ವ್ಯಾಖ್ಯಾನದಲ್ಲಿ ತಿಳಿಸಲಾಗಿದೆ.

**ಯದ್ಯಜ್ಞಾನಮುಪಾದಾನಂ ಮೃದಾನಯನಯತ್ನವತ್ ।**
**ತದರ್ಥಮಪಿ ಕಿಂ ಕೋऽಪಿ ಯತ್ನಂ ಕುರ್ಯಾನ್ನ ಕುತ್ರಚಿತ್ ॥ ೧೮೪ ॥**

**ಅರ್ಥ–** ಯದಿ= ಒಂದು ವೇಳೆ, ಅಜ್ಞಾನಂ= ಅಜ್ಞಾನವು, ಉಪಾದಾನಂ= ಉಪಾದಾನ ಕಾರಣವಾಗುತ್ತದೆಯಾದರೆ, ಮೃದಾನಯನಯತ್ನವತ್= ಮಣ್ಣನ್ನು ತರುವ ಪ್ರಯತ್ನದಂತೆ, ತದರ್ಥಮಪಿ= ಅಜ್ಞಾನ ಸಂಪಾದನೆಗಾಗಿಯೂ, ಕೋऽಪಿ= ಯಾರೂ, ಕುತ್ರಚಿತ್= ಎಲ್ಲಿಯೂ, ಯತ್ನಂ= ಪ್ರಯತ್ನವನ್ನು, ಕಿಂ= ಏತಕ್ಕಾಗಿ, ನ ಕುರ್ಯಾತ್= ಮಾಡುವುದಿಲ್ಲ?

**ಅನುವಾದ -** ಮಡಿಕೆಗೆ ಮಣ್ಣು ಉಪಾದಾನ ಕಾರಣ. ಆದ್ದರಿಂದ ದೂರ ಪ್ರದೇಶಗಳಿಂದ ಮಣ್ಣನ್ನು ತರಲು ಪ್ರಯತ್ನಿಸುತ್ತಾರೆ. ಜಗತ್ತಿಗೆ ಅಜ್ಞಾನ ಉಪಾದಾನ ಕಾರಣವಾಗುವುದಾದರೆ ಅಜ್ಞಾನವನ್ನು ತಂದುಕೊಳ್ಳುವ ಪ್ರಯತ್ನವನ್ನು ಮಾಡಬೇಕು. ಆದರೆ ಲೋಕದಲ್ಲಿ ಯಾರೂ ಎಲ್ಲಿಯೂ ಅಜ್ಞಾನವನ್ನು ತಂದುಕೊಳ್ಳುವ ಪ್ರಯತ್ನವನ್ನೇ ಮಾಡುತ್ತಿಲ್ಲವಲ್ಲ! ಆದ್ದರಿಂದ ಅಜ್ಞಾನವು ಉಪಾದಾನವಲ್ಲವೆಂದಾಯಿತು. ನಿಮ್ಮ ವಾದ ಅನುಭವ ವಿರುದ್ಧವಾದದ್ದು ಎಂದು ರಾಜರು ಅಪಹಾಸ್ಯವನ್ನು ಮಾಡುತ್ತಿದ್ದಾರೆ.

**ಭಾವವಿಲಾಸಿನೀ–**ತದರ್ಥಮ್ ಅಜ್ಞಾನಾರ್ಥಮ್ । ಘಟಪಟಸ್ತಂಭಕುಡ್ಯಾದಿ ನಾನಾಕಾರ್ಯ ಕರ್ತೃಭಿರ್ಲೋಕೈಸ್ತತ್ತದುಪಾದಾನೇಷು ಕ್ರಿಯಮಾಣಯತ್ನವತ್ ಅಜ್ಞಾನ-ಸಂಪಾದನವಾರ್ತಾಯಾ ಅಪಿ ಕೇನಾಪ್ಯಕರಣಾತ್ ಸರ್ವಾನುಭವವಿರುದ್ಧಮ-ಜ್ಞಾನೋಪಾದಾನಕತ್ವಮ್ । ದೃಷ್ಟಾನುಸಾರೇಣೈವಾದೃಷ್ಟಸ್ಯಾಪಿ ಕಲ್ಪ್ಯತ್ವಾತ್ ಮೃದಾದಿ-ಪರಂಪರಾಯಾಃ ಮೂಲೋಪಾದಾನಭೂತ ಪೃಥಿವೀತ್ವಾದಿಜಾತ್ಯಾಕ್ರಾಂತ ಮೂಲ ಪ್ರಕೃತ್ಯಂಶಾ ಏವ ಜಗದುಪಾದಾನಂ ನಾವಿದ್ಯೇತಿ ಭಾವಃ ॥ ೧೮೪ ॥

**ವಿವರಣೆ -** ಘಟಕ್ಕೆ ಮಣ್ಣು ಉಪಾದಾನವಾಗಿರುವುದು ಕಂಡಿದೆ. ಮಣ್ಣಿಗೆ ಮಣ್ಣಿನ ಕಣಗಳು. ಹೀಗೆ ವಿಚಾರ ಮಾಡುತ್ತಾ ಹೋಗುವಾಗ ಪಂಚಭೂತಾತ್ಮಕವಾದ ಪ್ರಪಂಚಕ್ಕೆ ಪಂಚಭೂತಾತ್ಮಕವಾದ ಸೂಕ್ಷ್ಮಮೂಲ ಪ್ರಕೃತ್ಯಂಶಗಳೇ ಉಪಾದಾನವಾಗಿದೆಯೆಂದೇ ಹೇಳಬೇಕು. ಆದ್ದರಿಂದ ಅಜ್ಞಾನವು ಉಪಾದಾನವೆಂಬುದು ಅನುಭವವಿರುದ್ಧವಾದದ್ದು.

**ಅನ್ವಯವ್ಯತಿರೇಕಾಭ್ಯಾಂ ಕಾರ್ಯಕಾರಣತೇಯತೇ ।**
**ಅನ್ಯಥಾ ರಾಸಭಸ್ಯಾಪಿ ಕಾರಣತ್ವಂ ಕಥಂ ನ ತೇ ॥ ೧೮೫ ॥**

**ಅರ್ಥ–** ಅನ್ವಯವ್ಯತಿರೇಕಾಭ್ಯಾಂ= ಅನ್ವಯ ಮತ್ತು ವ್ಯತಿರೇಕಗಳಿಂದ, ಕಾರ್ಯಕಾರಣತಾ= ಕಾರ್ಯಕಾರಣಭಾವವು, ಈಯತೇ= ನಿರ್ಧರಿಸಲ್ಪಡುತ್ತದೆ, ಅನ್ಯಥಾ= ಇಲ್ಲವಾದರೆ (ಅನ್ವಯ, ವ್ಯತಿರೇಕಗಳು ಇಲ್ಲದಿದ್ದರೂ ಕಾರಣತ್ವವನ್ನು

ಹೇಳುವುದಾದರೆ) ರಾಸಭಸ್ಯಾಪಿ= ಕತ್ತೆಗೂ, ಕಾರಣತ್ವಂ= ಕಾರತ್ವವನ್ನು, ತೇ= ನಿನ್ನ ಮತದಲ್ಲಿ ಕಥಂ ನ= ಏಕೆ ಒಪ್ಪುವುದಿಲ್ಲ?

**ಅನುವಾದ -** ಒಂದು ವಸ್ತುವು ಕಾರಣವೆಂದು ಆಗಬೇಕಾದರೆ ಕಾರ್ಯಹುಟ್ಟುವುದಕ್ಕಿಂತ ಮೊದಲು ಇದ್ದರೆ ಸಾಲದು ಅನ್ವಯ ವ್ಯತಿರೇಕಗಳಿರಬೇಕು. ಅಂದರೆ ಅದು ಇದ್ದಾಗ ಕಾರ್ಯವು ಹುಟ್ಟಿ ಅದು ಇಲ್ಲವಾದರೆ ಕಾರ್ಯವು ಹುಟ್ಟರಬಾರದು ಎಂದರ್ಥ. ಉದಾಹರಣೆಗೆ ದಂಡವಿದ್ದಾಗ ಮಾತ್ರ ಮಡಿಕೆ ಹುಟ್ಟುತ್ತದೆ. ದಂಡವಿಲ್ಲವಾದರೆ ಮಡಿಕೆ ಹುಟ್ಟಲಾರದು. ಆದ್ದರಿಂದ ಮಡಿಕೆಗೆ ದಂಡವು ಕಾರಣವೆಂದು ನಿರ್ಧರಿಸುತ್ತಾರೆ. ಕಾರ್ಯವು ಹುಟ್ಟುವುದಕ್ಕೆ ಮೊದಲು ಇರುವುದೆಲ್ಲ ಕಾರಣವಾಗುವುದಾದರೆ ಒಂದು ಕಡೆಯಲ್ಲಿ ಮಡಿಕೆಯಾಗುವುದಕ್ಕಿಂತ ಮೊದಲು ಕತ್ತೆಯಿದ್ದಾಗ ಮಡಿಕೆಗೆ ಕತ್ತೆಯೂ ಕಾರಣವಾಗಬೇಕಾಗುತ್ತದೆ. ಆದರೆ ನೀನು ಕತ್ತೆಯನ್ನು ಕಾರಣವೆಂದು ಒಪ್ಪುವುದಿಲ್ಲ. ಏಕೆಂದರೆ ಅನ್ವಯ, ವ್ಯತಿರೇಕಗಳು ಇಲ್ಲದಿರುವುದರಿಂದ. ಅಂದರೆ ಕತ್ತೆ ಇದ್ದರೆ ಮಾತ್ರ ಮಡಿಕೆ, ಕತ್ತೆ ಇಲ್ಲದಿದ್ದರೆ ಮಡಿಕೆಯಿಲ್ಲ ಎಂದು ಯಾರೂ ಹೇಳುವುದಿಲ್ಲ. ಏಕೆಂದರೆ ಕತ್ತೆ ಇಲ್ಲದಿದ್ದರೂ ಮಡಿಕೆ ಹುಟ್ಟುವುದು ಕಂಡಿದೆ.

**ವಿವರಣೆ -** ಅಜ್ಞಾನವು ಜಗತ್ತಿಗೆ ಕಾರಣವೆಂಬುದು ಅದ್ವೈತಿಗಳ ವಾದ. ಅಜ್ಞಾನವನ್ನು ಕಾರಣವೆಂದು ಹೇಳಬೇಕಾದರೆ ಇದಕ್ಕೂ ಅನ್ವಯ ವ್ಯತಿರೇಕಗಳು ಇರಬೇಕು. ಆದರೆ ಅಜ್ಞಾನವಿದ್ದರೆ ಮಡಿಕೆ ಬಟ್ಟೆ ಮೊದಲಾದವುಗಳು ಹುಟ್ಟುತ್ತವೆ. ಅಜ್ಞಾನವಿಲ್ಲವಾದರೆ ಮಡಿಕೆ, ಬಟ್ಟೆ ಮೊದಲಾದವುಗಳು ಹುಟ್ಟುವುದಿಲ್ಲ ಎಂದು ಹೇಳಲು ಬರುವುದಿಲ್ಲ. ಏಕೆಂದರೆ ಅಜ್ಞಾನವಿಲ್ಲದಿದ್ದರೂ ಮಣ್ಣು, ನೂಲು ಮುಂತಾದವುಗಳು ಇರುವುದರಿಂದಲೇ ಮಡಿಕೆ, ಬಟ್ಟೆ ಮುಂತಾದವುಗಳು ಹುಟ್ಟುತ್ತವೆ. ಆದ್ದರಿಂದ ಅನ್ವಯ ವ್ಯತಿರೇಕಗಳು ಇಲ್ಲದಿರುವುದರಿಂದ ಹೇಗೆ ಕತ್ತೆಯನ್ನು ಮಡಿಕೆಗೆ ಕಾರಣವೆಂದು ಹೇಳಲು ಬರುವುದಿಲ್ಲವೋ ಅದರಂತೆ ಮಡಿಕೆ ಮೊದಲಾದ ಪ್ರಪಂಚಕ್ಕೂ ಅಜ್ಞಾನವನ್ನು ಕಾರಣವೆಂದು ಅಂಗೀಕರಿಸಲು ಸಾಧ್ಯವಿಲ್ಲ.

**ಅಜ್ಞಾನೋಪಾದಾನಕತ್ವಂ ತದಸಿದ್ಧಂ ಘಟಾದಿಷು ।**
**ಕಥಂ ಮಿಥ್ಯಾತ್ವಸಿದ್ಧ್ಯೈ ಸ್ಯಾನ್ನ ಹ್ಯಸಿದ್ಧಸ್ಯ ಹೇತುತಾ ॥ ೧೮೬ ॥**

**ಅರ್ಥ–** ಘಟಾದಿಷು= ಮಡಿಕೆ, ಬಟ್ಟೆ ಮೊದಲಾದವುಗಳಲ್ಲಿ, ಅಸಿದ್ಧಂ= ಸಿದ್ಧವಾಗದಿರುವ, ತತ್= ಆಯಾವ ಅಜ್ಞಾನೋಪಾದಾಕತ್ವಂ= ಅಜ್ಞಾನೋಪಾದಕತ್ವ ಎಂಬ (ಅಜ್ಞಾನವನ್ನೇ ಉಪಾದಾನವನ್ನಾಗಿ ಹೊಂದಿರುವಿಕೆ) ಹೇತುವು ಮಿಥ್ಯಾತ್ವಸಿದ್ಧ್ಯೈ= ಜಗತ್ತನ್ನು

ಮಿಥ್ಯೆ ಎಂದು ಸಾಧಿಸುವುದಕ್ಕಾಗಿ, ಕಥಂ= ಹೇಗೆ, ಸ್ಯಾತ್= ಸಮರ್ಥವಾದೀತು. ಅಸಿದ್ಧಸ್ಯ= (ಪಕ್ಷದಲ್ಲಿ) ಸಿದ್ಧವಾಗದೆ ಇರುವುದಕ್ಕೆ, ಹೇತುತಾ= ಸಾಧನತ್ವವು, ನ ಹಿ= ಇಲ್ಲವಷ್ಟೇ!

**ಅನುವಾದ** - ಮಡಿಕೆ ಬಟ್ಟೆ ಮುಂತಾದ ಪ್ರಪಂಚಕ್ಕೆ ಅಜ್ಞಾನವು ಉಪಾದಾನ ಕಾರಣವಲ್ಲ, ಹೊರತು ಮಣ್ಣು, ನೂಲು ಮುಂತಾದವುಗಳೇ ಎಂದು ಹಿಂದೆ ಸಾಧಿಸಲಾಗಿದೆ. ಪ್ರಪಂಚವು ಅಜ್ಞಾನವನ್ನು ಉಪಾದಾನಕಾರಣವನ್ನಾಗಿ ಹೊಂದಿಲ್ಲವಾದ್ದರಿಂದ ಅಜ್ಞಾನೋಪಾದಾನಕತ್ವವು ಇಲ್ಲವೆಂದಾಯಿತು. ಆದ್ದರಿಂದ ಅಜ್ಞಾನೋಪಾದಾನಕತ್ವ ಎಂಬ ಹೇತುವಿನಿಂದ ಜಗತ್ತನ್ನು ಮಿಥ್ಯೆ ಎಂದು ಸಾಧಿಸಲಾಗದು. ಏಕೆಂದರೆ ಪಕ್ಷದಲ್ಲಿ ಇಲ್ಲದಿರುವುದನ್ನು ಯಾರೂ ಸಾಧಕವೆಂದು ಹೇಳುವುದಿಲ್ಲ, ಪ್ರಕೃತ ಪ್ರಪಂಚದಲ್ಲಿ ಇಲ್ಲದಿರುವ ಅಜ್ಞಾನೋಪಾದಾನಕತ್ವವನ್ನು ಸಾಧಕವೆಂದು ಹೇಳಲಾಗುವುದಿಲ್ಲ.

**ಭಾವವಿಲಾಸಿನೀ** – ಈಯತೇ ಜ್ಞಾಯತೇ । ಅನ್ಯಥಾ ಅನ್ವಯ ವ್ಯತಿರೇಕಾಭಾವೇऽಪಿ ಕಾರಣತ್ವೇ ॥ ೧೮೫-೧೮೬ ॥

**ವಿವರಣೆ** - ಅಡುಗೆ ಮನೆಯಲ್ಲಿ ಹೊಗೆ ಇದ್ದರೆ ಬೆಂಕಿಯನ್ನು ಸಾಧಿಸಿಕೊಡುತ್ತದೆ. ಇಲ್ಲದಿರುವ ಹೊಗೆ ಬೆಂಕಿಯನ್ನು ಸಾಧಿಸಿಕೊಡುವುದಿಲ್ಲ. ಅದರಂತೆ 'ಜಗತ್ ಮಿಥ್ಯಾ ಅಜ್ಞಾನೋಪಾದಾನಕತ್ವಾತ್' ಎಂದು ಅನುಮಾನ ಪ್ರಯೋಗಿಸಿದಾಗ ಅಜ್ಞಾನೋಪಾದನಕತ್ವವು ಜಗತ್ತಿನಲ್ಲಿರಬೇಕು. ಆದರೆ ಅದು ಇಲ್ಲ ಎಂದಮೇಲೆ ಹೇಗೆ ತಾನೆ 'ಜಗತ್ತು ಮಿಥ್ಯೆ' ಎಂದು ಸಾಧಿಸಿಕೊಡುತ್ತದೆ. ಆದ್ದರಿಂದ ಜಗತ್ತು ಮಿಥ್ಯೆ ಎಂದು ಸಿದ್ಧಿಯಾಗದು.

ಅಧಿಕಾರ್ಯಾದ್ಯಭಾವಸ್ಯ ಪರಿಹಾರಾಯ ಸೂತ್ರಿತಮ್ ।
ಯತ್ಸೂತ್ರಂ ತತ್ರ ಸರ್ವಸ್ಯಾಭಾವೇ ಭಾವಃ ಕಥಂ ವದ ॥ ೧೮೭ ॥

**ಅರ್ಥ**– ಅಧಿಕಾರ್ಯಾದ್ಯಭಾವಸ್ಯ= ಅಧಿಕಾರಿ, ವಿಷಯ, ಪ್ರಯೋಜನ ಸಂಬಂಧಗಳು ಇಲ್ಲವೆಂಬುದರ ಪರಿಹಾರಾಯ= ಪರಿಹಾರ ಮಾಡುವುದಕ್ಕಾಗಿ (ಅಧಿಕಾರಿ ಮೊದಲಾದವುಗಳು ಇವೆ ಎಂದು ಸಮರ್ಥಿಸುವುದಕ್ಕಾಗಿ) ಯತ್= ಯಾವ, ಸೂತ್ರಂ= ಓಂ ಓಂ ಅಥಾತೋ ಬ್ರಹ್ಮಜಿಜ್ಞಾಸಾ ಓಂ ಎಂಬ ಸೂತ್ರವು, ಸೂತ್ರಿತಂ=ರಚಿಸಲ್ಪಟ್ಟಿದೆಯೋ, ತತ್ರ= ಆ ಸೂತ್ರದಲ್ಲಿ, ಸರ್ವಸ್ಯ= ಸಮಸ್ತ ಪ್ರಪಂಚದ (ಪ್ರಪಂಚವನ್ನು), ಅಭಾವೇ= ಮಿಥ್ಯೆ ಎಂದು ಸಾಧಿಸುವುದಾದಲ್ಲಿ, ಭಾವಃ= ಸೂತ್ರದ ಅಭಿಪ್ರಾಯವು, ಕಥಂ= ಹೇಗೆ ಹೊಂದುತ್ತದೆ, ವದ= ಹೇಳು.

**ಅನುವಾದ** - ಅಧಿಕಾರಿ ವಿಷಯ, ಪ್ರಯೋಜನ ಸಂಬಂಧಗಳಿಲ್ಲವಾದ್ದರಿಂದ ಬ್ರಹ್ಮಜಿಜ್ಞಾಸೆಯನ್ನು ಮಾಡುವ ಆವಶ್ಯಕತೆ ಇಲ್ಲ ಎಂದು ಪೂರ್ವಪಕ್ಷ ಬಂದಾಗ

ಅದನ್ನು ಖಂಡಿಸುವುದಕ್ಕಾಗಿ ಅಂದರೆ ಅಧಿಕಾರಿ ವಿಷಯ, ಪ್ರಯೋಜನ ಸಂಬಂಧಗಳು ಇವೆ ಎಂದು ಸಮರ್ಥಿಸುವುದಕ್ಕಾಗಿ 'ಓಂ ಓಂ ಅಥಾತೋ ಬ್ರಹ್ಮಜಿಜ್ಞಾಸಾ ಓಂ' ಎಂಬ ಸೂತ್ರವು ಪ್ರವೃತ್ತವಾಗಿದೆ. ಅದೇ ಸೂತ್ರದಲ್ಲಿ ಜಗತ್ತನ್ನು ಮಿಥ್ಯೆ ಎಂದು ನೀವು ಸಾಧಿಸುವುದಾದರೆ ಅಧಿಕಾರಿ ವಿಷಯ ಪ್ರಯೋಜನಗಳು ಇಲ್ಲವೆಂದು ಸೂತ್ರರಚನೆಯೆ ಅಯುಕ್ತವೆಂದು ನೀವೇ ಸಮರ್ಥಿಸಿದಂತಾಗುತ್ತದೆ. ಆದ್ದರಿಂದ ಸೂತ್ರಕ್ಕೆ ಭಾಷ್ಯ ರಚಿಸಬೇಕೆನ್ನುವ ನಿಮ್ಮ ಅಭಿಪ್ರಾಯವು ಸ್ವವ್ಯಾಹತವಾಗುತ್ತದೆ.

**ಭಾವವಿಲಾಸಿನೀ**–ಅಧ್ಯಯನವೈರಾಗ್ಯಮೋಕ್ಷೇಚ್ಛಾದಿಸಾಧನಸಂಪನ್ನಸ್ಯ ಗುರುಶಿಷ್ಯದೇಶಕಾಲ ಪುಸ್ತಕಾದಿ ಸಂಪತ್ತಿಮತಶ್ಚಾಧಿಕಾರಿಣೋಽಭಾವಾತ್ ಪರಮತೇ ವೇದಾಂತವಾಕ್ಯಂ ಹಿ ವಿಷಯಃ ತದಭಾವಾತ್ ವಿಚಾರಸಾಧ್ಯತತ್ವಜ್ಞಾನಾದಿ ಪ್ರಯೋಜನಾಭಾವಾಚ್ಚ ನ ಬ್ರಹ್ಮಜಿಜ್ಞಾಸೇತಿ ಪೂರ್ವಪಕ್ಷಿತೇ ತಸ್ಯ ಸರ್ವಸ್ಯ ಸದ್ಭಾವಂ ಪ್ರತಿಪಾದಯಿತುಂ ಪ್ರವೃತ್ತಸ್ಯಾಥಾತೋ ಬ್ರಹ್ಮ ಜಿಜ್ಞಾಸೇತ್ಯಾದಿಮಸೂತ್ರಸ್ಯ ಜಗನ್ ಮಿಥ್ಯಾತ್ವಂ ನಾಭಿಮತಮಿತ್ಯಾಹ – **ಅಧಿಕಾರೀತಿ** ॥ ತತ್ರ ಸೂತ್ರೇ । ಅಭಾವಃ ಮಿಥ್ಯಾತ್ವಮ್ । ಭಾವ ಅಭಿಪ್ರಾಯಃ। ಅತಃ ಸೂತ್ರಭಾಷ್ಯೇ ಪ್ರವೃತ್ತಸ್ಯ ಮಿಥ್ಯಾತ್ವಕಥನಮಸಂಗತಮೇವೇತಿ ಭಾವಃ ॥ ೧೮೭ ॥

ಅಥ ಬಂಧನಿವೃತ್ತಿರ್ಹಿ ಪ್ರಯೋಜನಮಿಹೋದಿತಮ್ ।
ಬಂಧಸ್ಯ ಜ್ಞಾನತೋ ನಾಶಃ ಶ್ರುತ್ಯಾ ಸೂತ್ರೇಣ ಚೋಚ್ಯತೇ ॥ ೧೮೮ ॥

ತಚ್ಚಾಸಂಭವಿ ಯದ್ ಜ್ಞಾನಮಜ್ಞಾನಸ್ಯೈವ ನಾಶಕಮ್ ।
ಇತಿ ವ್ಯಾಪ್ತಿಸ್ತದಜ್ಞಾನೋಪಾದಾನತ್ವಮಪೀಷ್ಯತೇ ॥ ೧೮೯ ॥

ಇದಮೇವ ಚ ಮಿಥ್ಯಾತ್ವಮತಸ್ತಚ್ಛ್ರುತಿಸೂತ್ರಯೋಃ ।
ಯದ್ಯಾರ್ಥಿಕಮಿತಿ ಬ್ರೂಷೇ ತರ್ಹಿ ದೋಷೇಷು ಮಜ್ಜಸಿ ॥ ೧೯೦ ॥

**ಅರ್ಥ**– ಅಥ= ಇದು ಪ್ರಶ್ನೆ, ಇಹ= ಈ ಮೊದಲನೆಯ ಸೂತ್ರದಲ್ಲಿ, ಬಂಧನಿವೃತ್ತಿಃ= ಸಂಸಾರನಾಶವು, ಪ್ರಯೋಜನಂ= ಪ್ರಯೋಜನವೆಂಬುದಾಗಿ, ಉದಿತಂ ಹಿ= ಹೇಳಲ್ಪಟ್ಟಿದೆಯಷ್ಟೇ! ಜ್ಞಾನತಃ= ಜ್ಞಾನದಿಂದ, ಬಂಧಸ್ಯ= ಸಂಸಾರದ, ನಾಶಃ= ನಾಶವು ಎಂಬುದಾಗಿ, ಶ್ರುತ್ಯಾ= ವೇದದಿಂದ, ಚ= ಮತ್ತು, ಸೂತ್ರೇಣ= ಬ್ರಹ್ಮಸೂತ್ರದಿಂದ, ಉಚ್ಯತೇ= ಹೇಳಲ್ಪಡುತ್ತದೆ, ತತ್ ಚ= ಜ್ಞಾನದಿಂದ ಸಂಸಾರದ ನಾಶವಾದರೂ, ಅಸಂಭವಿ= ಆಗಲು ಸಾಧ್ಯವಿಲ್ಲ, ಯತ್= ಯಾವ ಕಾರಣದಿಂದ, ಜ್ಞಾನಂ= ಜ್ಞಾನವು ಅಜ್ಞಾನಸ್ಯ ಏವ= ಅಜ್ಞಾನಕ್ಕೆ ಮಾತ್ರ, ನಾಶಕಂ= ನಾಶಕವಾಗಿದೆ, ಇತಿ= ಎಂಬುದಾಗಿ, ವ್ಯಾಪ್ತಿಃ (ಅಸ್ತಿ)= ವ್ಯಾಪ್ತಿಯು ಇದೆ. ತತ್= ಆದ್ದರಿಂದ, ಅಜ್ಞಾನೋಪಾದಾನತ್ವಮಪಿ= ಜಗತ್ತಿಗೆ ಅಜ್ಞಾನೋಪಾದಾನತ್ವವೂ, ಇಷ್ಯತೇ= ಅಂಗೀಕರಿಸಲ್ಪಡುತ್ತದೆ. ಇದಮೇವ= ಈ

ಅಜ್ಞಾನೋಪಾದಾನಕತ್ವವೇ, ಮಿಥ್ಯಾತ್ವಂ= ಮಿಥ್ಯಾತ್ವರೂಪವಾದದ್ದು, ಅತಃ= ಆದ್ದರಿಂದ, ತತ್ ಚ= ಅಜ್ಞಾನೋಪಾದಾನಕತ್ವರೂಪವಾದ ಮಿಥ್ಯಾತ್ವವಾದರೂ, ಶ್ರುತಿಸೂತ್ರಯೋಃ= ವೇದ ಮತ್ತು ಸೂತ್ರಗಳಲ್ಲಿ, ಆರ್ಥಿಕಂ= ಅರ್ಥಾತ್ ಪ್ರಾಪ್ತವಾದದ್ದು, ಇತಿ= ಎಂದು, ಯದಿ= ಒಂದು ವೇಳೆ, ಬ್ರೂಷೇ= ಹೇಳುವಿಯಾದರೆ, ತರ್ಹಿ= ಆವಾಗ, ದೋಷೇಷು= ದೋಷಗಳಲ್ಲಿ, ಮಜ್ಜಸಿ= ಮುಳುಗುವಿ.

**ಅನುವಾದ** - ಜಗತ್ತು ಮಿಥ್ಯೆ ಎಂಬ ನಮ್ಮ ವಾದವು ಸೂತ್ರಸಮ್ಮತ ಯಾಕೆ ಅಲ್ಲ ಎಂದು ಪ್ರಶ್ನೆ ಮಾಡುತ್ತಿದ್ದಾರೆ. ಅಥಾತೋ ಬ್ರಹ್ಮಜಿಜ್ಞಾಸಾ ಎಂಬ ಸೂತ್ರವು ಬಂಧ ನಿವೃತ್ತಿಯೇ ಅಂದರೆ ಸಂಸಾರದ ನಾಶವೇ ಜ್ಞಾನಕ್ಕೆ ಪ್ರಯೋಜನವೆಂದು ಹೇಳುತ್ತಿದೆ. ಈ ಸಂಸಾರದ ನಾಶವು ಜ್ಞಾನದಿಂದಲೇ ಆಗುತ್ತದೆ ಎಂಬುದನ್ನು 'ದೃಷ್ಟ್ವೈವ ತಂ ಮುಚ್ಯತೇ ನಾಪರೇಣ' ಎಂಬ ವೇದ ಮತ್ತು 'ಅಥಾತೋ...' ಎಂಬ ಸೂತ್ರವೂ ಹೇಳುತ್ತಿವೆ. ಆದರೆ ಸಂಸಾರದ ನಾಶ ಜ್ಞಾನದಿಂದ ಆಗಲು ಸಾಧ್ಯವಿಲ್ಲ. ಜ್ಞಾನವು ಅಜ್ಞಾನವನ್ನು ಅಥವಾ ಅಜ್ಞಾನ ಉಪಾದಾನಕವನ್ನು ಮಾತ್ರ ನಾಶಪಡಿಸುತ್ತದೆ ಎಂಬ ವ್ಯಾಪ್ತಿಯಿದೆ. ಸಂಸಾರವು ಅಜ್ಞಾನವೂ ಅಲ್ಲ ಅಜ್ಞಾನೋಪಾದನಕವೂ ಅಲ್ಲವಾದ್ದರಿಂದ ಅದು ಜ್ಞಾನದಿಂದ ನಾಶವಾಗುವುದಿಲ್ಲ ವೆಂದಾಯಿತು. ಹಾಗಾದರೆ ಸಂಸಾರನಾಶವೇ ಆಗದಿದ್ದಾಗ ಸಂಸಾರನಾಶವೆಂಬ ಪ್ರಯೋಜನವಿದೆ ಎಂದು ಸೂತ್ರದಲ್ಲಿ ಹೇಳಿದ್ದು ಅಸಂಗತವಾಗಿ ಬಿಡುತ್ತದೆ. ಅದನ್ನು ಕೂಡಿಸಬೇಕಾದರೆ ಸಂಸಾರವನ್ನು (ಜಗತ್ತನ್ನು) ಅಜ್ಞಾನೋಪಾದಾನಕ ವೆಂದು (ಅಜ್ಞಾನವನ್ನೇ ಉಪಾದಾನ ಕಾರಣವನ್ನಾಗಿ ಹೊಂದಿದೆ ಎಂದು) ಹೇಳಬೇಕಾಗುತ್ತದೆ. ಆಗ ಜ್ಞಾನದಿಂದ ಅಜ್ಞಾನನಾಶ. ಅಜ್ಞಾನನಾಶವಾದರೆ ಅಜ್ಞಾನೋಪಾದಾನಕವಾದ ಜಗತ್ತು (ಬಂಧ) ನಾಶವಾಗುತ್ತದೆ ಎಂದು ಹೇಳಬಹುದು. ಆಗ ಸಂಸಾರ ನಾಶವೆಂಬ ಪ್ರಯೋಜನವಿದೆ ಎಂದು ಸೂತ್ರವು ಹೇಳುವುದು ಸಂಗತವಾಗುತ್ತದೆ.

ಹಾಗಾದರೆ ಪ್ರಯೋಜನವನ್ನು ಕೂಡಿಸುವುದಕ್ಕಾಗಿ ಜಗತ್ತನ್ನು ಅಜ್ಞಾನೋಪಾದನಕ ಎಂದು ಹೇಳಲೇಬೇಕಾಯಿತು. ಅಜ್ಞಾನೋಪಾದಾನಕ-ವಾಗಿದೆ ಎಂದರೆ ಮಿಥ್ಯೆ ಆಗಿದೆ ಎಂದೇ ಅರ್ಥ. ಬಂಧನಿವೃತ್ತಿಯು (ಸಂಸಾರದ ನಾಶವು) ಪ್ರಯೋಜನವೆಂದು ಹೇಳಿದ ಸೂತ್ರವೇ ಬಂಧವನ್ನು (ಸಂಸಾರವನ್ನು - ಜಗತ್ತನ್ನು) ಮಿಥ್ಯೆ ಎಂದೇ ಹೇಳಿದಂತಾಯಿತು. ಆದ್ದರಿಂದ ಸೂತ್ರವು ನೇರವಾಗಿ ಜಗತ್ತನ್ನು ಮಿಥ್ಯೆ ಎಂದು ಹೇಳದಿದ್ದರೂ ಆರ್ಥಿಕವಾಗಿ (ತಾನು ಹೇಳಿದ ಪ್ರಯೋಜನವನ್ನು ಕೂಡಿಸುವುದಕ್ಕಾಗಿ) ಹೇಳುತ್ತಿದೆ ಎಂದು ಒಪ್ಪಲೇ ಬೇಕು ಎಂದು 'ಜಗತ್ತು ಮಿಥ್ಯೆ' ಎಂಬ ವಾದವು ಸೂತ್ರ ಸಮ್ಮತ ಎಂದು ಹೇಳುವಿಯಾದರೆ ನಿನಗೆ ಅನೇಕ ದೋಷಗಳು ಬರುತ್ತವೆ.

**ಭಾವವಿಲಾಸಿನೀ–ಜಗನ್‌ಮಿಥ್ಯಾತ್ವಸ್ಯ ಪರೋದೀರಿತಸೂತ್ರಸಂಗತಿಂ ದೂಷಯಿತುಂ ತತ್ ಪ್ರಕ್ರಿಯಾಮನುವದತಿ ॥ ಅಥೇತಿ ॥ ಶ್ರುತ್ಯಾ । ''ದೃಷ್ಟ್ವೈವ ತಂ ಮುಚ್ಯತ'' ಇತ್ಯಾದಿಶ್ರುತ್ಯಾ । ಸೂತ್ರೇಣ ಆದಿಸೂತ್ರೇಣ ॥ ೧೮೮ ॥**

ತತ್ ಜ್ಞಾನೇನೈವ ಬಂಧನಿವರ್ತನಮ್ । ಯತ್‌ಯಸ್ಮಾತ್ ತತ್ ತಸ್ಮಾತ್ ಸಾಕ್ಷಾತ್ ಜ್ಞಾನೇನ ಬಂಧನಿವೃತ್ತ್ಯಯೋಗಾತ್ । ಇಷ್ಯತೇ । ಬಂಧಸ್ಯ ಜ್ಞಾನನಿವರ್ತ್ಯತ್ವಘಟನಾಯ ಅಂಗೀ-ಕ್ರಿಯತೇ । ಬಂಧಸ್ಯಾಜ್ಞಾನೋಪಾದಾನಕತ್ವೇ ಹಿ ಜ್ಞಾನೇನಾಜ್ಞಾನನಿವೃತ್ತೌ ತದುಪಾದಾನಕಬಂಧಸ್ಯಾಪಿ ಉಪಾದಾನನಿವೃತ್ತ್ಯಾ ನಿವೃತ್ತಿರ್ವಕ್ತುಂ ಶಕ್ಯಾ । ಅನ್ಯಥಾ ಶ್ರುತ್ಯುಕ್ತಾಪಿ ಜ್ಞಾನೇನ ಬಂಧನಿವೃತ್ತಿರ್ಜ್ಞಾನವಮಜ್ಞಾನಸ್ಯೈವ ನಿವರ್ತಕಮಿತಿ ವ್ಯಾಪ್ತಿವಿರೋಧಾದಯುಕ್ತಾ ಸ್ಯಾತ್ । ಅತೋ ಬಂಧಸ್ಯಾಜ್ಞಾನೋಪಾದನಕತ್ವಮುಪ್ಯಾರ್ಥಲ್ಲಭ್ಯತ ಇತಿ ಭಾವಃ ॥ ೧೮೯ ॥

ಇದಮಜ್ಞಾನೋಪಾದನಕತ್ವಮ್ । ತದಜ್ಞಾನೋಪಾದನಕತ್ವರೂಪ- ಮಿಥ್ಯಾತ್ವಮ್ । ದೂಷಯತಿ ॥ **ತರ್ಹೀತಿ** ॥ ೧೯೦ ॥

**ವಿವರಣೆ -** ಜ್ಞಾನದಿಂದಲೇ ಸಂಸಾರದ ನಾಶವಾಗುತ್ತದೆ ಎಂದು ವೇದ ಮತ್ತು ಸೂತ್ರಗಳಲ್ಲಿ ಹೇಳಲಾಗಿದೆ. ಹೇಗೆಂದರೆ 'ದೃಷ್ಟ್ವೈವ ತಂ ಮುಚ್ಯತೇ ನಾಪರೇಣ' ತಂ - ಆ ಪರಮಾತ್ಮನನ್ನು, ದೃಷ್ಟ್ವೈವ - ನೋಡೋಣದರಿಂದಲೇ ಮುಚ್ಯತೇ - ಸಂಸಾರ ಬಂಧನದಿಂದ ಮುಕ್ತನಾಗುತ್ತಾನೆ ಎಂದರ್ಥ. ಅಂದರೆ ಪರಮಾತ್ಮನ ಅಪರೋಕ್ಷ ಜ್ಞಾನದಿಂದಲೇ ಸಂಸಾರದ ನಾಶ ಎಂದು ಹೇಳಿದಂತಾಯಿತು. ಹಾಗೆಯೇ ಓಂ ಓಂ ಅಥಾತೋ ಬ್ರಹ್ಮಜಿಜ್ಞಾಸಾ ಓಂ ಎಂಬುದು ಸೂತ್ರ. ಇಲ್ಲಿ ಅತಃ - ಬಂಧನಿವೃತ್ತಿರೂಪ ಪ್ರಯೋಜನಸದ್ಭಾವಾತ್ ಎಂದು ಅರ್ಥವನ್ನು ಹೇಳಿದ್ದಾರೆ. ಅಂದರೆ ಬ್ರಹ್ಮನ ಜ್ಞಾನದಿಂದಲೇ ಸಂಸಾರದ ನಾಶವಾಗುವುದರಿಂದ ಬ್ರಹ್ಮಜಿಜ್ಞಾಸೆಯನ್ನು ಮಾಡಬೇಕು ಎಂದರ್ಥ. ಆದ್ದರಿಂದ ಜ್ಞಾನದಿಂದಲೇ ಸಂಸಾರದ ನಾಶವನ್ನು ವೇದ ಸೂತ್ರಗಳು ಹೇಳುತ್ತಿವೆ ಎಂಬುದು ಅದ್ವೈತಿಗಳ ಅಭಿಪ್ರಾಯ.

ಆರ್ಥಿಕಂ : ಅಧ್ಯಾಸಭಾಷ್ಯವನ್ನು ಸಮರ್ಥಿಸುವುದಕ್ಕಾಗಿ ಅದ್ವೈತಿಗಳು ಹೀಗೆ ಹೇಳುತ್ತಾರೆ- ಸೂತ್ರದ ಅರ್ಥ ಎರಡು ವಿಧವಾಗಿದೆ. (1) ಶ್ರೌತಾರ್ಥ ಎಂದರೆ ಶಬ್ದಶಕ್ತಿಯಿಂದ ಲಭ್ಯವಾಗುವ ಅರ್ಥ ಮತ್ತು (2) ಆರ್ಥಿಕ ಅರ್ಥ ಎಂದರೆ ಅರ್ಥಾಪತ್ತಿಯಿಂದ ಲಭ್ಯವಾಗುವ ಅರ್ಥ. ಮೊದಲನೆಯ ಸೂತ್ರದ ಶ್ರೌತಾರ್ಥವು ಹೀಗಿದೆ - ಅಥ - ನಿತ್ಯಾನಿತ್ಯ ವಿವೇಕ, ವಿಷಯ ವೈರಾಗ್ಯ, ಶಮದಮಾದಿಗಳು ಪ್ರಾಪ್ತವಾದನಂತರ ಅತಃ - ಬ್ರಹ್ಮಜ್ಞಾನದಿಂದ ಸಂಸಾರ ನಿವೃತ್ತಿಗಾಗಿ ಬ್ರಹ್ಮಜಿಜ್ಞಾಸಾ (ಕರ್ತವ್ಯಾ) - ಬ್ರಹ್ಮವಿಚಾರವನ್ನು ಮಾಡಬೇಕು ಎಂದು. ಇನ್ನು ಅರ್ಥಾಪತ್ತಿ ಎಂದರೆ - ಅನುಪಪನ್ನವಾದ ವಿಷಯವನ್ನು ಕೇಳಿದಾಗ ಅದನ್ನು ಕೂಡಿಸುವುದಕ್ಕಾಗಿ ಉಪಪತ್ತಿಯನ್ನು ಕಂಡುಕೊಳ್ಳುವುದು. ಉದಾ : 'ದೇವದತ್ತನು ಹಗಲು ಊಟ

ಅಜ್ಞಾನೋಪಾದಾನಕತ್ವವೇ, ಮಿಥ್ಯಾತ್ವಂ= ಮಿಥ್ಯಾತ್ವರೂಪವಾದದ್ದು, ಅತಃ= ಆದ್ದರಿಂದ, ತತ್ ಚ= ಅಜ್ಞಾನೋಪಾದಾನಕತ್ವರೂಪವಾದ ಮಿಥ್ಯಾತ್ವವಾದರೂ, ಶ್ರುತಿಸೂತ್ರಯೋಃ= ವೇದ ಮತ್ತು ಸೂತ್ರಗಳಲ್ಲಿ, ಆರ್ಥಿಕಂ= ಅರ್ಥಾತ್ ಪ್ರಾಪ್ತವಾದದ್ದು, ಇತಿ= ಎಂದು, ಯದಿ= ಒಂದು ವೇಳೆ, ಬ್ರೂಷೇ= ಹೇಳುವಿಯಾದರೆ, ತರ್ಹಿ= ಆವಾಗ, ದೋಷೇಷು= ದೋಷಗಳಲ್ಲಿ, ಮಜ್ಜಸಿ= ಮುಳುಗುವಿ.

**ಅನುವಾದ** - ಜಗತ್ತು ಮಿಥ್ಯೆ ಎಂಬ ನಮ್ಮ ವಾದವು ಸೂತ್ರಸಮ್ಮತ ಯಾಕೆ ಅಲ್ಲ ಎಂದು ಪ್ರಶ್ನೆ ಮಾಡುತ್ತಿದ್ದಾರೆ. ಅಥಾತೋ ಬ್ರಹ್ಮಜಿಜ್ಞಾಸಾ ಎಂಬ ಸೂತ್ರವು ಬಂಧ ನಿವೃತ್ತಿಯೇ ಅಂದರೆ ಸಂಸಾರದ ನಾಶವೇ ಜ್ಞಾನಕ್ಕೆ ಪ್ರಯೋಜನವೆಂದು ಹೇಳುತ್ತಿದೆ. ಈ ಸಂಸಾರದ ನಾಶವು ಜ್ಞಾನದಿಂದಲೇ ಆಗುತ್ತದೆ ಎಂಬುದನ್ನು 'ದೃಷ್ಟ್ವೈವ ತಂ ಮುಚ್ಯತೇ ನಾಪರೇಣ' ಎಂಬ ವೇದ ಮತ್ತು 'ಅಥಾತೋ...' ಎಂಬ ಸೂತ್ರವೂ ಹೇಳುತ್ತಿವೆ. ಆದರೆ ಸಂಸಾರದ ನಾಶ ಜ್ಞಾನದಿಂದ ಆಗಲು ಸಾಧ್ಯವಿಲ್ಲ. ಜ್ಞಾನವು ಅಜ್ಞಾನವನ್ನು ಅಥವಾ ಅಜ್ಞಾನ ಉಪಾದಾನಕವನ್ನು ಮಾತ್ರ ನಾಶಪಡಿಸುತ್ತದೆ ಎಂಬ ವ್ಯಾಪ್ತಿಯಿದೆ. ಸಂಸಾರವು ಅಜ್ಞಾನವೂ ಅಲ್ಲ ಅಜ್ಞಾನೋಪಾದನಕವೂ ಅಲ್ಲವಾದ್ದರಿಂದ ಅದು ಜ್ಞಾನದಿಂದ ನಾಶವಾಗುವುದಿಲ್ಲ ವೆಂದಾಯಿತು. ಹಾಗಾದರೆ ಸಂಸಾರನಾಶವೇ ಆಗದಿದ್ದಾಗ ಸಂಸಾರನಾಶವೆಂಬ ಪ್ರಯೋಜನವಿದೆ ಎಂದು ಸೂತ್ರದಲ್ಲಿ ಹೇಳಿದ್ದು ಅಸಂಗತವಾಗಿ ಬಿಡುತ್ತದೆ. ಅದನ್ನು ಕೂಡಿಸಬೇಕಾದರೆ ಸಂಸಾರವನ್ನು (ಜಗತ್ತನ್ನು) ಅಜ್ಞಾನೋಪಾದಾನಕ ವೆಂದು (ಅಜ್ಞಾನವನ್ನೇ ಉಪಾದಾನ ಕಾರಣವನ್ನಾಗಿ ಹೊಂದಿದೆ ಎಂದು) ಹೇಳಬೇಕಾಗುತ್ತದೆ. ಆಗ ಜ್ಞಾನದಿಂದ ಅಜ್ಞಾನನಾಶ. ಅಜ್ಞಾನನಾಶವಾದರೆ ಅಜ್ಞಾನೋಪಾದಾನಕವಾದ ಜಗತ್ತು (ಬಂಧ) ನಾಶವಾಗುತ್ತದೆ ಎಂದು ಹೇಳಬಹುದು. ಆಗ ಸಂಸಾರ ನಾಶವೆಂಬ ಪ್ರಯೋಜನವಿದೆ ಎಂದು ಸೂತ್ರವು ಹೇಳುವುದು ಸಂಗತವಾಗುತ್ತದೆ.

ಹಾಗಾದರೆ ಪ್ರಯೋಜನವನ್ನು ಕೂಡಿಸುವುದಕ್ಕಾಗಿ ಜಗತ್ತನ್ನು ಅಜ್ಞಾನೋಪಾದನಕ ಎಂದು ಹೇಳಲೇಬೇಕಾಯಿತು. ಅಜ್ಞಾನೋಪಾದಾನಕ-ವಾಗಿದೆ ಎಂದರೆ ಮಿಥ್ಯೆ ಆಗಿದೆ ಎಂದೇ ಅರ್ಥ. ಬಂಧನಿವೃತ್ತಿಯು (ಸಂಸಾರದ ನಾಶವು) ಪ್ರಯೋಜನವೆಂದು ಹೇಳಿದ ಸೂತ್ರವೇ ಬಂಧವನ್ನು (ಸಂಸಾರವನ್ನು - ಜಗತ್ತನ್ನು) ಮಿಥ್ಯೆ ಎಂದೇ ಹೇಳಿದಂತಾಯಿತು. ಆದ್ದರಿಂದ ಸೂತ್ರವು ನೇರವಾಗಿ ಜಗತ್ತನ್ನು ಮಿಥ್ಯೆ ಎಂದು ಹೇಳದಿದ್ದರೂ ಆರ್ಥಿಕವಾಗಿ (ತಾನು ಹೇಳಿದ ಪ್ರಯೋಜನವನ್ನು ಕೂಡಿಸುವುದಕ್ಕಾಗಿ) ಹೇಳುತ್ತಿದೆ ಎಂದು ಒಪ್ಪಲೇ ಬೇಕು ಎಂದು 'ಜಗತ್ತು ಮಿಥ್ಯೆ' ಎಂಬ ವಾದವು ಸೂತ್ರ ಸಮ್ಮತ ಎಂದು ಹೇಳುವಿಯಾದರೆ ನಿನಗೆ ಅನೇಕ ದೋಷಗಳು ಬರುತ್ತವೆ.

**ಭಾವವಿಲಾಸಿನೀ**–ಜಗನ್ಮಿಥ್ಯಾತ್ವಸ್ಯ ಪರೋದೀರಿತಸೂತ್ರಸಂಗತಿಂ ದೂಷಯಿತುಂ ತತ್ ಪ್ರಕ್ರಿಯಾಮನುವದತಿ ॥ **ಅಥೇತಿ** ॥ **ಶ್ರುತ್ಯಾ** । ''**ದೃಷ್ಟ್ವೈವ ತಂ ಮುಚ್ಯತ**'' ಇತ್ಯಾದಿಶ್ರುತ್ಯಾ । **ಸೂತ್ರೇಣ** ಆದಿಸೂತ್ರೇಣ ॥ ೧೮೮ ॥

ತತ್ ಜ್ಞಾನೇನೈವ ಬಂಧನಿವರ್ತನಮ್ । ಯತ್‌ಯಸ್ಮಾತ್ ತತ್ ತಸ್ಮಾತ್ ಸಾಕ್ಷಾತ್ ಜ್ಞಾನೇನ ಬಂಧನಿವೃತ್ತ್ಯಯೋಗಾತ್ । ಇಷ್ಯತೇ । ಬಂಧಸ್ಯ ಜ್ಞಾನನಿವರ್ತ್ಯತ್ವಘಟನಾಯ ಅಂಗೀಕ್ರಿಯತೇ । ಬಂಧಸ್ಯಾಜ್ಞಾನೋಪಾದಾನಕತ್ವೇ ಹಿ ಜ್ಞಾನೇನಾಜ್ಞಾನನಿವೃತ್ತೌ ತದುಪಾದಾನಕಬಂಧಸ್ಯಾಪಿ ಉಪಾದಾನನಿವೃತ್ತ್ಯಾ ನಿವೃತ್ತಿರ್ವಕ್ತುಂ ಶಕ್ಯಾ । ಅನ್ಯಥಾ ಶ್ರುತ್ಯುಕ್ತಾಪಿ ಜ್ಞಾನೇನ ಬಂಧನಿವೃತ್ತಿರ್ಜ್ಞಾನಮಜ್ಞಾನಸ್ಯೈವ ನಿವರ್ತಕಮಿತಿ ವ್ಯಾಪ್ತಿವಿರೋಧಾದಯುಕ್ತಾ ಸ್ಯಾತ್ । ಅತೋ ಬಂಧಸ್ಯಾಜ್ಞಾನೋಪಾದನಕತ್ವಮುಪ್ಯಾರ್ಥಲ್ಲಭ್ಯತ ಇತಿ ಭಾವಃ ॥ ೧೮೯ ॥

ಇದಮಜ್ಞಾನೋಪಾದನಕತ್ವಮ್ । ತದಜ್ಞಾನೋಪಾದನಕತ್ವರೂಪ- ಮಿಥ್ಯಾತ್ವಮ್ । ದೂಷಯತಿ ॥ **ತರ್ಹೀತಿ** ॥ ೧೯೦ ॥

**ವಿವರಣೆ** - ಜ್ಞಾನದಿಂದಲೇ ಸಂಸಾರದ ನಾಶವಾಗುತ್ತದೆ ಎಂದು ವೇದ ಮತ್ತು ಸೂತ್ರಗಳಲ್ಲಿ ಹೇಳಲಾಗಿದೆ. ಹೇಗೆಂದರೆ 'ದೃಷ್ಟ್ವೈವ ತಂ ಮುಚ್ಯತೇ ನಾಪರೇಣ' ತಂ - ಆ ಪರಮಾತ್ಮನನ್ನು, ದೃಷ್ಟ್ವೈವ - ನೋಡೋಣದರಿಂದಲೇ ಮುಚ್ಯತೇ - ಸಂಸಾರ ಬಂಧನದಿಂದ ಮುಕ್ತನಾಗುತ್ತಾನೆ ಎಂದರ್ಥ. ಅಂದರೆ ಪರಮಾತ್ಮನ ಅಪರೋಕ್ಷ ಜ್ಞಾನದಿಂದಲೇ ಸಂಸಾರದ ನಾಶ ಎಂದು ಹೇಳಿದಂತಾಯಿತು. ಹಾಗೆಯೇ ಓಂ ಓಂ ಅಥಾತೋ ಬ್ರಹ್ಮಜಿಜ್ಞಾಸಾ ಓಂ ಎಂಬುದು ಸೂತ್ರ. ಇಲ್ಲಿ ಅತಃ - ಬಂಧನಿವೃತ್ತಿರೂಪ ಪ್ರಯೋಜನಸದ್ಭಾವಾತ್ ಎಂದು ಅರ್ಥವನ್ನು ಹೇಳಿದ್ದಾರೆ. ಅಂದರೆ ಬ್ರಹ್ಮನ ಜ್ಞಾನದಿಂದಲೇ ಸಂಸಾರದ ನಾಶವಾಗುವುದರಿಂದ ಬ್ರಹ್ಮಜಿಜ್ಞಾಸೆಯನ್ನು ಮಾಡಬೇಕು ಎಂದರ್ಥ. ಆದ್ದರಿಂದ ಜ್ಞಾನದಿಂದಲೇ ಸಂಸಾರದ ನಾಶವನ್ನು ವೇದ ಸೂತ್ರಗಳು ಹೇಳುತ್ತಿವೆ ಎಂಬುದು ಅದ್ವೈತಿಗಳ ಅಭಿಪ್ರಾಯ.

ಆರ್ಥಿಕಂ : ಅಧ್ಯಾಸಭಾಷ್ಯವನ್ನು ಸಮರ್ಥಿಸುವುದಕ್ಕಾಗಿ ಅದ್ವೈತಿಗಳು ಹೀಗೆ ಹೇಳುತ್ತಾರೆ- ಸೂತ್ರದ ಅರ್ಥ ಎರಡು ವಿಧವಾಗಿದೆ. (1) ಶ್ರೌತಾರ್ಥ ಎಂದರೆ ಶಬ್ದಶಕ್ತಿಯಿಂದ ಲಭ್ಯವಾಗುವ ಅರ್ಥ ಮತ್ತು (2) ಆರ್ಥಿಕ ಅರ್ಥ ಎಂದರೆ ಅರ್ಥಾಪತ್ತಿಯಿಂದ ಲಭ್ಯವಾಗುವ ಅರ್ಥ. ಮೊದಲನೆಯ ಸೂತ್ರದ ಶ್ರೌತಾರ್ಥವು ಹೀಗಿದೆ - ಅಥ - ನಿತ್ಯಾನಿತ್ಯ ವಿವೇಕ, ವಿಷಯ ವೈರಾಗ್ಯ, ಶಮದಮಾದಿಗಳು ಪ್ರಾಪ್ತವಾದನಂತರ ಅತಃ - ಬ್ರಹ್ಮಜ್ಞಾನದಿಂದ ಸಂಸಾರ ನಿವೃತ್ತಿಗಾಗಿ ಬ್ರಹ್ಮಜಿಜ್ಞಾಸಾ (ಕರ್ತವ್ಯಾ) - ಬ್ರಹ್ಮವಿಚಾರವನ್ನು ಮಾಡಬೇಕು ಎಂದು. ಇನ್ನು ಅರ್ಥಾಪತ್ತಿ ಎಂದರೆ - ಅನುಪಪನ್ನವಾದ ವಿಷಯವನ್ನು ಕೇಳಿದಾಗ ಅದನ್ನು ಕೂಡಿಸುವುದಕ್ಕಾಗಿ ಉಪಪತ್ತಿಯನ್ನು ಕಂಡುಕೊಳ್ಳುವುದು. ಉದಾ : 'ದೇವದತ್ತನು ಹಗಲು ಊಟ

ಮಾಡುವುದಿಲ್ಲ. ಪುಷ್ಟನಾಗಿದ್ದಾನೆ' ಎಂದು ಕೇಳಿದಾಗ ಇದು ಅನುಪಪನ್ನವಾಗಿದೆ ಎಂದು ಅನಿಸುತ್ತದೆ. ಇದನ್ನು ಕೂಡಿಸುವುದಕ್ಕಾಗಿ 'ರಾತ್ರಿ ಭೋಜನವನ್ನು ಮಾಡುತ್ತಾನೆ' ಎಂದು ಉಪಪಾದಕವನ್ನು ಕಲ್ಪಿಸಬೇಕಾಗುತ್ತದೆ. ಇದೇ ಅರ್ಥಾಪತ್ತಿ. ಪ್ರಕೃತ ಸೂತ್ರದಲ್ಲಿ ಹೇಳಿದ ಪ್ರಯೋಜನ ಬ್ರಹ್ಮ ಜ್ಞಾನದಿಂದ ಸಂಸಾರ ನಾಶವಾಗುತ್ತದೆ ಎಂದು. ಇಲ್ಲಿ ಸಂಸಾರ ಸತ್ಯವಾದರೆ ಪ್ರಯೋಜನವು ಅನುಪಪನ್ನವಾಗುತ್ತದೆ. ಅದನ್ನು ಕೂಡಿಸುವುದಕ್ಕಾಗಿ ಸಂಸಾರವನ್ನು ಅಜ್ಞಾನ ಕಾರ್ಯವೆಂದು (ಮಿಥ್ಯೆ) ಕಲ್ಪಿಸಬೇಕಾಗುತ್ತದೆ.

ಸೂತ್ರದಲ್ಲಿ ಹೇಳಿದ ಪ್ರಯೋಜನವನ್ನು ಕೂಡಿಸುವುದಕ್ಕಾಗಿ ಏನೆಲ್ಲ ಉಪಪಾದಕವಿದೆಯೋ ಅದೆಲ್ಲವೂ ಸೂತ್ರದ ಅರ್ಥವೇ ಆಗುತ್ತದೆ ಎಂಬುದು ಅದ್ವೈತಿಗಳ ಅಭಿಪ್ರಾಯ.

ಅನಾದಿಃ ಕಿಲ ಸಂಸಾರಸ್ತವಾಪಿ ಚ ಮಮಾಪಿ ಚ ।
ಯದನಾದಿ ನ ತತ್ ಕಾರ್ಯಮಿತಿ ವ್ಯಾಪ್ತಿರ್ಬಲೀಯಸೀ ॥ ೧೯೧ ॥

**ಅರ್ಥ–** ಸಂಸಾರಃ= ಸಂಸಾರವು, ಅನಾದಿಃ= ಅನಾದಿಯಾದದ್ದು, ಇತಿ= ಎಂಬುದು, ತವ= ನಿನಗೂ (ನಿನ್ನ ಸಿದ್ಧಾಂತದಲ್ಲಿಯೂ) ಮಮ= ನನಗೂ (ನನ್ನ ಸಿದ್ಧಾಂತದಲ್ಲಿಯೂ) ಸಿದ್ಧಃ= ಸಿದ್ಧವಾಗಿದೆ. ಯತ್= ಯಾವುದು, ಅನಾದಿ= ಅನಾದಿಯಾಗಿದೆಯೋ, ತತ್= ಅದು, ಕಾರ್ಯಂ ನ= ಕಾರ್ಯವಲ್ಲ ಎಂಬ, ವ್ಯಾಪ್ತಿಃ= ವ್ಯಾಪ್ತಿಯು, ಬಲೀಯಸೀ= ಪ್ರಬಲವಾಗಿದೆ.

**ಅನುವಾದ -** ಸಂಸಾರದ ನಾಶವೇ ಬ್ರಹ್ಮಜಿಜ್ಞಾಸೆಗೆ ಪ್ರಯೋಜನವೆಂದು ಹೇಳಲಾಗಿದೆ. ಆದರೆ ಸಂಸಾರವು ಅನಾದಿಯೆಂದು ನಿನ್ನ ಸಿದ್ಧಾಂತದಲ್ಲಿ ಮತ್ತು ನನ್ನ ಸಿದ್ಧಾಂತದಲ್ಲಿಯೂ ಅಂಗೀಕರಿಸಲಾಗಿದೆ. 'ಯಾವುದು ಅನಾದಿಯೋ ಅದು ಕಾರ್ಯವಲ್ಲ, ಅಂದರೆ ಅದಕ್ಕೆ ಉಪಾದಾನ ಕಾರಣ ಇಲ್ಲ. ಈ ವ್ಯಾಪ್ತಿಯನ್ನು ನಾವಿಬ್ಬರೂ ಒಪ್ಪಿದ್ದೇವೆ. ಅದು ಪ್ರಬಲವಾಗಿದೆ. ನಾಶವೂ ಇಲ್ಲ, ಆದ್ದರಿಂದ ಬ್ರಹ್ಮಜ್ಞಾನದಿಂದ ಅಜ್ಞಾನ ಕಾರ್ಯವಾದ, ಅಜ್ಞಾನೋಪಾದಾನಕವಾದ ಸಂಸಾರವು ನಾಶವಾಗುತ್ತದೆ ಎಂಬ ನಿಮ್ಮ ವಾದವು ಸರಿಯಲ್ಲ.

**ವಿವರಣೆ -** 'ಯತ್ ಅನಾದಿ ನ ತತ್ ಕಾರ್ಯಂ ಯಥಾ ಬ್ರಹ್ಮ' ಎಂಬ ವ್ಯಾಪ್ತಿಯು 'ಜ್ಞಾನಂ ಅಜ್ಞಾನಸ್ಯೈವ ನಿವರ್ತಕಂ' ಎಂಬ ವ್ಯಾಪ್ತಿಗಿಂತ ಪ್ರಬಲವಾಗಿದೆ. ಏಕೆಂದರೆ, ಮೊದಲನೆಯ ವ್ಯಾಪ್ತಿಯನ್ನು ಎಲ್ಲರೂ ಅಂಗೀಕರಿಸುತ್ತಾರೆ. ಎರಡನೇ ವ್ಯಾಪ್ತಿಯನ್ನು ಅದ್ವೈತಿಗಳು ಮಾತ್ರ ಒಪ್ಪುತ್ತಾರೆ. ಯಾವ ವಾದಿಗಳೂ ಜ್ಞಾನವು ಅಜ್ಞಾನಕ್ಕೆ ನಾಶಕವೆಂದು ಒಪ್ಪುವುದಿಲ್ಲ, ಹೊರತು, ಜ್ಞಾನವು ಅಜ್ಞಾನಾಭಾವ ಸ್ವರೂಪವೆಂದು ಒಪ್ಪುತ್ತಾರೆ. ಅಭಾವದ

ಅಭಾವವು ಭಾವಸ್ವರೂಪವೆಂಬುದು ಸರ್ವಸಮ್ಮತವಾದದ್ದು. ಆದ್ದರಿಂದ **'ಯತ್ ಅನಾದಿ ನ ತತ್ ಕಾರ್ಯಂ'** ಎಂಬ ವ್ಯಾಪ್ತಿಯು ಅದ್ವೈತಿಗಳ ವ್ಯಾಪ್ತಿಗಿಂತ ಪ್ರಬಲವೇ ಆಗಿದೆ.

ಹಾಗಾಗಿ ಅದ್ವೈತಿಗಳು 'ಜ್ಞಾನವು ಅಜ್ಞಾನವನ್ನು ಮಾತ್ರ ನಾಶಪಡಿಸುತ್ತದೆ' ಎಂಬ ದುರ್ಬಲವಾದ ವ್ಯಾಪ್ತಿಯನ್ನು ಆಧರಿಸಿ ಸಂಸಾರವನ್ನು ಅಜ್ಞಾನದ ಕಾರ್ಯವೆಂದು ಹೇಳಿ ಸಂಸಾರವು ಮಿಥ್ಯೆ ಎಂಬುದು ಸೂತ್ರದ ಆರ್ಥಿಕವಾದ ಅರ್ಥ ಎಂದು ಹೇಳುವುದು ಅಸಂಗತವಾಗುತ್ತದೆ.

ತವಾರ್ಥಿಕಾರ್ಥಮತ್ಯರ್ಥಮನರ್ಥೀಕುರುತೇ ನ ಕಿಮ್ ।
ಇದಂ ತು ಭಾಷ್ಯಕಾರಸ್ಯ ಮಹದಾಸೀದಕೌಶಲಂ ॥ ೧೯೨ ॥

**ಅರ್ಥ-** ಆರ್ಥಿಕಾರ್ಥಾಂ= ಅರ್ಥಾಪತ್ತಿಯಿಂದ ಸಿದ್ಧವಾಗುವ ಸಂಸಾರದ ಮಿಥ್ಯಾತ್ವವನ್ನು, ತವ= ನಿನಗೆ, ಅತ್ಯರ್ಥಂ= ಬಹಳವಾಗಿ ನ ಅನರ್ಥಿಕುರುತೇ ಕಿಂ= ನಿರರ್ಥಕವಾಗಿ ಮಾಡುವುದಿಲ್ಲವೇನು? ಇದಂ ತು= ಈ ಸಂಸಾರದ ಮಿಥ್ಯಾತ್ವದ ವರ್ಣನೆಯಾದರೂ ಭಾಷ್ಯಕಾರಸ್ಯ= ಭಾಷ್ಯಕಾರರ ಮಹತ್= ಬಹಳವಾದ, ಅಕೌಶಲಂ= ಅಕೌಶಲವೇ, ಆಸೀತ್= ಆಗಿದೆ.

**ಅನುವಾದ** - ಅನಾದಿಯು ಕಾರ್ಯವೆನಿಸುವುದಿಲ್ಲ ಎಂಬ ವ್ಯಾಪ್ತಿ ಪ್ರಬಲವಾಗಿರುವುದರಿಂದ ಮೊದಲನೆಯ ಸೂತ್ರದಲ್ಲಿ ಜ್ಞಾನವು ಅಜ್ಞಾನಕ್ಕೇ ನಿವರ್ತಕ ಎಂದು ನಿರ್ಮೂಲವಾದ ವ್ಯಾಪ್ತಿಯನ್ನಿಟ್ಟುಕೊಂಡು ಅರ್ಥಾಪತ್ತಿಯಿಂದ ಸೂತ್ರದಲ್ಲಿ ಸಂಸಾರದ ಮಿಥ್ಯಾತ್ವವು ಪ್ರತಿಪಾದಿತವಾಗುತ್ತದೆ ಎಂದು ಭಾಷ್ಯದಲ್ಲಿ ಸಾಧಿಸುವುದು ಅನರ್ಥಕ, ವ್ಯರ್ಥ ಪ್ರಯತ್ನವೆನಿಸುತ್ತದೆ. ನಿಮ್ಮ ಭಾಷ್ಯಕಾರರ ಅಕುಶಲತೆಯನ್ನು ಅಂದರೆ ಭಾಷ್ಯ ಬರೆಯುವ ಸಾಮರ್ಥ್ಯವಿಲ್ಲ ವೆಂಬುದನ್ನು ಸಾಬೀತು ಪಡಿಸುತ್ತದೆ.

**ಭಾವವಿಲಾಸಿನೀ**–ಯದನಾದಿ ನ ತತ್ಕಾರ್ಯಂ ಯಥಾ ಬ್ರಹ್ಮೇತಿ ವ್ಯಾಪ್ತಿರ್ಬಲೀಯಸೀ ಅತಿಶಯೇನ ಬಲವತೀ । ಅಸ್ಯಾವ್ಯಾಪ್ತೇಃ ಸರ್ವೈರ್ವಾದಿಭಿರಂಗೀಕಾರಾತ್ । ಜ್ಞಾನಮಜ್ಞಾನಸ್ಯೈವ ನಿವರ್ತಕಮಿತಿ ವ್ಯಾಪ್ತಿಸ್ತು ತ್ವಯ್ಯೈವಾಂಗೀಕ್ರಿಯತೇ । ಪರಸ್ತು ಜ್ಞಾನಾಭಾವರೂಪಾಜ್ಞಾನವಾದೀ ಜ್ಞಾನಮಜ್ಞಾನನಿವೃತ್ತಿರೂಪಮೇವ ವಕ್ತಿ । ನತು ನಿವರ್ತಕಮ್ । ಅಭಾವಾಭಾವಸ್ಯ ಭಾವರೂಪತಾಯಾಃ ಸರ್ವೈರಂಗೀಕಾರಾತ್ । ಅತಃ ಪರಕೀಯವ್ಯಾಪ್ತಿರೇವಾಯುಕ್ತೇತಿ ಸೂಚನಾಯ ಬಲೀಯಸೀತ್ಯುಕ್ತಮ್ । ಆರ್ಥಿಕಾರ್ಥಮ್ ಅನಾದೇರ್ಬಂಧಸ್ಯಾಜ್ಞಾನೋಪಾದಾನಕತ್ವಂ ಅಜ್ಞಾನಕಾರ್ಯತ್ವಮಿತಿ ಯಾವತ್ । ಇದಂ ಪ್ರಶಿಥಿಲ ಮೂಲವ್ಯಾಪ್ತ್ಯಾ ಸ್ವರೀತ್ಯೈವಾನಾದೇಃ ಕಾರ್ಯತ್ವಕಥನಮ್ ॥ ೧೯೧-೧೯೨ ॥

**ಅನಾದೃತ್ಯ ಶ್ರುತಿಂ ವ್ಯಾಪ್ತಿಮಸತೀಮನುಸೃತ್ಯ ಚ ।**
**ಮನೋರಥಸುತಃ ಸ್ವಸ್ಯ ಯತೋ ಗರ್ಭಸ್ರುತೋಽಪತತ್ ॥ ೧೯೩ ॥**

**ಅರ್ಥ–** ಶ್ರುತಿಂ= ವೇದವನ್ನು, ಅನಾದೃತ್ಯ= ಆದರಿಸದೇ, ಚ= ಮತ್ತು, ಅಸತೀಂ= ದುಷ್ಟವಾದ, ವ್ಯಾಪ್ತಿಂ= ವ್ಯಾಪ್ತಿಯನ್ನು, ಅನುಸೃತ್ಯ= ಅನುಸರಿಸಿ, ಸ್ವಸ್ಯ= ಭಾಷ್ಯಕಾರನ ಮನೋರಥಸುತಃ= ಮನೋಽಭಿಲಾಷೆಯೆಂಬ ಕೂಸು, ಗರ್ಭಸ್ರುತಃ= ಗರ್ಭಸ್ರಾವದಿಂದಲೇ, ಅಪತತ್= ಮೃತವಾಗಿ ಬಿದ್ದಿದೆ.

**ಅನುವಾದ -** 'ದೃಷ್ಟ್ವೈವ ತಂ ಮುಚ್ಯತೇ ನಾಪರೇಣ' ಎಂಬ ವೇದವು 'ಜ್ಞಾನದಿಂದಲೇ ಸಂಸಾರವು ನಿವೃತ್ತವಾಗುತ್ತದೆ' ಎಂದು ಹೇಳುತ್ತಿದೆ. ಆದರೆ ಈ ವೇದವನ್ನು ಲೆಕ್ಕಿಸದೆ, 'ಜ್ಞಾನಂ ಅಜ್ಞಾನಸ್ಯೈವ ನಿವರ್ತಕಂ' ಎಂಬ ದುಷ್ಟವಾದ ವ್ಯಾಪ್ತಿಯನ್ನು ಅನುಸರಿಸುತ್ತಿದ್ದೀರಿ. ಆದ್ದರಿಂದ ನಿಮ್ಮ ಮನೋಽಭೀಷ್ಟವೆಂಬ ಕೂಸು ಗರ್ಭಸ್ರಾವದಿಂದಲೇ, ಸತ್ತು ಬಿದ್ದಿದೆ. ಸಂಸಾರವು ಅಜ್ಞಾನದ ಕಾರ್ಯ ಮಿಥ್ಯವಾಗಿದೆ ಎಂಬುದೇ ಭಾಷ್ಯಕಾರರ ಮನೋಽಭಿಲಾಷೆ. ಈ ಮನೋಽಭಿಲಾಷೆಯೆಂಬ ಕೂಸು ಗರ್ಭಸ್ರಾವದಿಂದಲೇ ಸತ್ತು ಬಿದ್ದಿದೆ. ಏಕೆಂದರೆ ಸಂಸಾರವು ಅನಾದಿಯೆಂಬುದು ಸಿದ್ಧವಾದ ವಿಷಯ. ಯಾವುದು ಅನಾದಿಯೋ ಅದು ಕಾರ್ಯವಲ್ಲ.

**ಭಾವವಿಲಾಸಿನೀ–** ಏತದೇವ ವಿಶದಯತಿ ॥ **ಅನಾದೃತ್ಯೇತಿ** ॥ ಅಸತೀಂ ದೃಷ್ಟಾಂತಾಭಾವೇನ ಪ್ರಶಿಥಿಲಮೂಲಾಮ್ । ಮನೋರಥಸುತಃ ಮನ ಏವ ರಥೋ ಯಸ್ಯ ಸಃ ಮನೋರಥಃ । ಮನಸಿ ನಿಹಿತೋ ಬಂಧಸ್ಯಾಜ್ಞಾನೋಪಾದಾನಕತ್ವರೂಪಾಭಿಪ್ರಾಯ ಇತ್ಯರ್ಥಃ । ಸ ಏವ ಸುತಃ । ವಚನದ್ವಾರಾ ಬಹಿರ್ನಿಸ್ಸಾರಿತತ್ವಾತ್ ಗರ್ಭಸ್ರುತಃ ಗರ್ಭೇ ಮನಸಾ ಸಂಕಲ್ಪ ಏವ ಸ್ರುತಃ । ಅನಾದೇಃ ಕಾರ್ಯತ್ವಾಯೋಗೇನ ಮೃತಃ ॥ ೧೯೩ ॥

**ಅಜ್ಞಾನೋಪಾದಾನಕತ್ವಂ ಮಿಥ್ಯಾತ್ವಂ ಭವಬಂಧನೇ ।**
**ಆನೇತುಂ ಕಿಲ ತದ್ಯತ್ನಃ ಸೋಽನಾದಿಃ ಸಹತೇ ನ ತತ್ ।**
**ತದ್ರೀತ್ಯೈವ ನ ಮದ್ರೀತ್ಯಾ ಚಿತ್ರಾ ಭಾಷ್ಯಸ್ಯ ಸಂಗತಿಃ ॥ ೧೯೪ ॥**

**ಅರ್ಥ–** ಅಜ್ಞಾನೋಪಾದಾನಕತ್ವಂ= ಅಜ್ಞಾನವೇ ಉಪಾದಾನ ಕಾರಣವಾಗಿವುಳ್ಳದ್ದು ಎಂಬ ಮಿಥ್ಯಾತ್ವಂ= ಮಿಥ್ಯಾತ್ವವನ್ನು, ಭವಬಂಧನೇ - ಸಂಸಾರ ಬಂಧನದಲ್ಲಿ, ಆನೇತುಂ= ಬಲಾತ್ಕಾರವಾಗಿ, ಸಾಧಿಸಲು ತದ್ಯತ್ನಃ ಕಿಲ= ಅದ್ವೈತಿಯ ಪ್ರಯತ್ನವು ನಡೆಯುತ್ತಿದೆಯಷ್ಟೇ!, ಅನಾದಿಃ= ಅನಾದಿಯಾದ, ಸಃ= ಸಂಸಾರಬಂಧವು, ತತ್= ಆ ಅಜ್ಞಾನೋಪಾದಾನಕತ್ವವೆಂಬ, ಮಿಥ್ಯಾತ್ವವನ್ನು ನ ಸಹತೇ= ಸಹಿಸುವುದಿಲ್ಲ (ಆದ್ದರಿಂದ) ಮದ್ರೀತ್ಯಾ ನ=

ನಮ್ಮ (ದ್ವೈತ) ಸಿದ್ಧಾಂತದಂತೆ ಅಲ್ಲ. ತದ್ರೀತ್ಯಾ ಏವ= ಅದ್ವೈತ ಸಿದ್ಧಾಂತದಂತೆಯೇ, ಭಾಷ್ಯಸ್ಯ= ಅದ್ವೈತ ಭಾಷ್ಯಕ್ಕೆ ಸಂಗತಿಃ= ಸಂಗತಿಯು ಚಿತ್ರಾ= ವಿಚಿತ್ರವಾಗಿದೆ.

**ಅನುವಾದ** - ಸಂಸಾರ ಬಂಧನಕ್ಕೆ ಹೇಗಾದರೂ ಮಾಡಿ ಅಜ್ಞಾನೋಪಾದಾನಕತ್ವವೆಂಬ ಮಿಥ್ಯಾತ್ವವನ್ನು ಸಾಧನೆ ಮಾಡಲು ಅದ್ವೈತಿಗಳು ತುಂಬಾ ಪ್ರಯತ್ನಿಸುತ್ತಿದ್ದಾರೆ. ಆದರೆ ಸಂಸಾರ ಬಂಧನವು ಅನಾದಿಯೆಂದು ಅವರ ಸಿದ್ಧಾಂತವೇ ಹೇಳುತ್ತದೆ. ಕಾರ್ಯವು ಅಜ್ಞಾನೋಪಾದಾನಕವಾಗಬಹುದು. (ಅಜ್ಞಾನವೆಂಬ ಉಪಾದಾನಕಾರಣದಿಂದ ಹುಟ್ಟಬಹುದು). ಆದರೆ ಅನಾದಿಯಾದದ್ದು ಅಜ್ಞಾನೋಪಾದಾನಕವೇ ಅಲ್ಲ. ಮಿಥ್ಯೆಯಾಗಲು ಸಾಧ್ಯವೇ ಇಲ್ಲ. ಆದ್ದರಿಂದ ಸಂಸಾರಬಂಧನಕ್ಕೆ ಮಿಥ್ಯಾತ್ವವನ್ನು ಪ್ರತಿಪಾದಿಸುವ ನಿಮ್ಮ ಭಾಷ್ಯದ ಸಂಗತಿಯು ನಮ್ಮ ಸಿದ್ಧಾಂತದಂತೆಯಲ್ಲ. ನಿಮ್ಮ ಸಿದ್ಧಾಂತದಂತೆಯೂ ಸರಿಹೊಂದುವುದಿಲ್ಲ. ವಿಚಿತ್ರವೇ ಆಗಿದೆ.

**ಭಾವವಿಲಾಸಿನೀ**–ಗರ್ಭಸ್ರಾವಪ್ರಕಾರಮೇವ ದರ್ಶಯತಿ ॥ **ಅಜ್ಞಾನೇತಿ** ॥ ತದ್ಯತ್ನಃ ಮಾಯಾವಾದಿ ಪ್ರಯತ್ನಃ ಸ ಬಂಧಃ । ತತ್ ಅಜ್ಞಾನೋಪಾದಾನಕತ್ವಮ್ ॥೧೯೪॥

**ಯುಕ್ತಿಃ ಶ್ರುತಿಂ ಜಯತಿ ಚೇದ್ ವಿರುದ್ಧೈಕ್ಯಮತಂ ಗತಮ್ ।**
**ಯುಕ್ತಿಂ ಶ್ರುತಿರ್ಜಯತಿ ಚೇದ್ ಬಂಧಂ ಛಿಂದ್ಯಾದ್ ದೃಶಿಃ ಸ್ವಯಮ್ ॥ ೧೯೫ ॥**

**ಅರ್ಥ**– ಯುಕ್ತಿಃ= ಜ್ಞಾನಂ ಅಜ್ಞಾನಸ್ಯೈವ ನಿವರ್ತಕಂ ಎಂಬ ಯುಕ್ತಿಯು, ಶ್ರುತಿಂ= ದೃಷ್ಟ್ವೈವ ತಂ ಮುಚ್ಯತೇ ನಾಪರೇಣ ಎಂಬ ಶ್ರುತಿಯನ್ನು, ಜಯತಿ ಚೇತ್= ಗೆಲ್ಲುತ್ತದೆ ಎಂದಾದರೆ (ಯುಕ್ತಿಯ ವಿರೋಧವಿರುವುದರಿಂದ ಅರ್ಥಾಂತರವನ್ನು ಹೇಳುವುದಾದರೆ) ವಿರುದ್ಧೈಕ್ಯಮತಂ= ಯುಕ್ತಿವಿರುದ್ಧವಾದ ಐಕ್ಯಸಿದ್ಧಾಂತವು, ಗತಂ= ಬಿದ್ದು ಹೋಯಿತು, ಶ್ರುತಿಃ= ವೇದವು, ಯುಕ್ತಿಂ= ಯುಕ್ತಿಯನ್ನು, ಜಯತಿಚೇತ್= ಗೆಲ್ಲುತ್ತದೆ ಎಂದಾದರೆ, ದೃಶಿಃ= ಅಪರೋಕ್ಷಜ್ಞಾನವು, ಸ್ವಯಂ= ತಾನಾಗಿಯೇ, ಬಂಧಂ= ಸಂಸಾರಬಂಧನವನ್ನು, ಛಿಂದ್ಯಾತ್= ನಾಶಪಡಿಸುತ್ತದೆ.

**ಅನುವಾದ** - 'ಜ್ಞಾನಂ ಅಜ್ಞಾನಸ್ಯೈವ ನಿವರ್ತಕಂ' ಎಂಬ ಯುಕ್ತಿಯನ್ನು ಅದ್ವೈತಿಗಳು ಹೇಳಿದ್ದಾರೆ. ಈ ಯುಕ್ತಿಯು 'ದೃಷ್ಟ್ವೈವ ತಂ ಮುಚ್ಯತೇ' ಎಂಬ ಶ್ರುತಿಗಿಂತ ಪ್ರಬಲವಾದರೆ ಶ್ರುತಿಗೆ ಬೇರೆ ಅರ್ಥವನ್ನು ಮಾಡಬೇಕು. ಅದರಂತೆಯೇ 'ವಿರುದ್ಧ ಧರ್ಮಗಳು ಇದ್ದಲ್ಲಿ ಐಕ್ಯವು ಕೂಡುವುದಿಲ್ಲ' ಎಂಬ ಯುಕ್ತಿಯು 'ತತ್ತ್ವಮಸಿ' ಎಂಬ ಐಕ್ಯವನ್ನು ಹೇಳುವ ಶ್ರುತಿಗಿಂತಲೂ ಪ್ರಬಲವೆಂದಾಯಿತು. ಆಗ ಜೀವನಿಗೆ ಬ್ರಹ್ಮನ ಅಭೇದವನ್ನು ಹೇಳುವ 'ತತ್ತ್ವಮಸಿ' ಎಂಬ ವಾಕ್ಯಕ್ಕೆ ಬ್ರಹ್ಮನ ಸಾದೃಶ್ಯವನ್ನು

ಹೇಳುತ್ತದೆ ಎಂದು ಅರ್ಥಾಂತರವನ್ನು ಹೇಳಬೇಕಾಗುತ್ತದೆ. ಆಗ ಜೀವಬ್ರಹ್ಮರಿಗೆ ಐಕ್ಯವೇ ಇಲ್ಲವೆಂದಾಗುತ್ತದೆ. ಆದ್ದರಿಂದ ನಿಮ್ಮ ಸಿದ್ಧಾಂತವು ಬಿದ್ದು ಹೋಗುತ್ತದೆ. ಅಥವಾ ಶ್ರುತಿಯು ಯುಕ್ತಿಯನ್ನು ಗೆಲ್ಲುತ್ತದೆ ಎಂದಾದರೆ (ಯುಕ್ತಿಗಿಂತ ಶ್ರುತಿಯು ಪ್ರಬಲ ಎಂದಾದರೆ) 'ದೃಷ್ಟ್ವೈವ ತಂ ಮುಚ್ಯತೇ ನಾಪರೇಣ' ಎಂಬ ಶ್ರುತಿಯು ಹೇಳುವಂತೆ ಅಪರೋಕ್ಷಜ್ಞಾನವು ನೇರವಾಗಿ ಬಂಧನವನ್ನು ನಾಶಪಡಿಸುತ್ತದೆ. ಬಂಧವು ಸತ್ಯವೋ ಮಿಥ್ಯೆಯೋ ಎಂದು ವಿಚಾರ ಮಾಡುವುದಿಲ್ಲ. ಸತ್ಯವಾದರೂ ಬಂಧವು ಅಪರೋಕ್ಷ ಜ್ಞಾನದಿಂದ ನಾಶವಾಗಬೇಕಾಗುತ್ತದೆ. ಆದ್ದರಿಂದ ಬಂಧವು ಮಿಥ್ಯ ಎಂಬ ಮತಕ್ಕೆ ಭಂಗ ಬರುತ್ತದೆ.

**ಭಾವವಿಲಾಸಿನೀ**–ಪ್ರಕಾರಾಂತರೇಣ ಪರಸ್ಯೋಭಯತಃ ಪಾಶಾಂ ರಜ್ಜುಮಾಹ–**ಯುಕ್ತಿರಿತಿ** ॥ ಯುಕ್ತಿಃ ಜ್ಞಾನಮಜ್ಞಾನಸ್ಯೈವ ನಿವರ್ತಕಮಿತ್ಯಾದಿಯುಕ್ತಿಃ । ಜಯತಿ । ಅನ್ಯಥೀಕರೋತಿ ಚೇತ್ । ವಿರುದ್ಧೈಕ್ಯಮತಂ ವಿರುದ್ಧಯೋಃ ಸರ್ವಜ್ಞಾಲ್ಪಜ್ಞತ್ವಾದಿನಾ ವಿಲಕ್ಷಣಯೋರ್ಜೀವ-ಬ್ರಹ್ಮಣೋರೈಕ್ಯಮತಮ್ । ಭೇದಸಾಧಕವಿರುದ್ಧಧರ್ಮಾಕ್ರಾಂತತ್ವಾಖ್ಯಯುಕ್ತಿಭಯೇನ ಸ್ವರೂಪೈಕ್ಯಮತಂ ತ್ಯಕ್ತ್ವಾ ಸಿಂಹೋ ದೇವದತ್ತ ಇತ್ಯಾದಾವಿವ ತವೈಕ್ಯ ವಾಕ್ಯಂ ಸಾದೃಶ್ಯೈಕ್ಯಪರಮೇವ ಕುರ್ವಿತ್ಯರ್ಥಃ । ಶ್ರುತಿಃ 'ದೃಷ್ಟ್ವೈವ ತಂ ಮುಚ್ಯತೇ' ಇತ್ಯಾದಿ ಶ್ರುತಿಃ । ಛಿಂದ್ಯಾತ್ ಸಾಕ್ಷಾತ್- ಬಂಧನಿವರ್ತಕತಯಾ ಸ್ವೇನೋತಜ್ಞಾನೇನೈವ ನಾಶಯೇದಿತ್ಯರ್ಥಃ । ಏವಂಚ ಯುಕ್ತೇಃ ಸತ್ತ್ವೇಽಪಿ ತವೈವ ಮತಂ ಗತಮ್ । ಯುಕ್ತೇರಸತ್ತ್ವೇಽಪಿ ತವೈವ ಮತಂ ಗತಮ್ । ಅತೋಽಪಿ ತವ ಪ್ರಕ್ರಿಯಾ ವಿಕ್ರಿಯೈವೇತಿ ಭಾವಃ॥೧೯೫॥

**ವಿವರಣೆ** - ಉಭಯತಃ ಕುಣಿಕೆಯನ್ನು ಹೀಗೆ ತಿಳಿಯಬೇಕು. ಯುಕ್ತಿಯೇ ಪ್ರಬಲವೆಂದರೆ 'ವಿರುದ್ಧ ಧರ್ಮಗಳು ಇದ್ದಲ್ಲಿ ಐಕ್ಯ ಕೂಡುವುದಿಲ್ಲ' ಎಂಬ ಯುಕ್ತಿಯು ಪ್ರಬಲವಾಗಿ 'ತತ್ತ್ವಮಸಿ' ಎಂಬ ಶ್ರುತಿಯು ಐಕ್ಯವನ್ನು ಹೇಳುತ್ತಿಲ್ಲ. ಸಾದೃಶ್ಯವನ್ನು ಹೇಳುತ್ತದೆ ಎಂದು ಐಕ್ಯವನ್ನು ಬಿಡಬೇಕಾಗುತ್ತದೆ ನಿನ್ನ ಮತ ಬಿದ್ದುಹೋಗುತ್ತದೆ ಅಥವಾ ಯುಕ್ತಿಗಿಂತ ಶ್ರುತಿಯು ಪ್ರಬಲವಾದರೆ 'ದೃಷ್ಟ್ವೈವ...' ಎಂಬ ಶ್ರುತಿಯೇ ಪ್ರಬಲವಾಗಿ ಅಪರೋಕ್ಷಜ್ಞಾನವು ಬಂಧವನ್ನು ನಾಶಪಡಿಸುತ್ತದೆ ಎಂದಾಗುತ್ತದೆ. ಆಗ ಬಂಧವು ಮಿಥ್ಯೆಯೇ ಆಗಬೇಕಾಗಿಲ್ಲ. ಸತ್ಯವಾದರೂ ನಾಶವಾಗುತ್ತದೆ. ಹಾಗಾಗಿ ಬಂಧವು ಮಿಥ್ಯ ಎಂಬ ಸಿದ್ಧಾಂತವನ್ನು ಬಿಡಬೇಕಾಗುತ್ತದೆ. ನಿನ್ನ ಮತ ಬಿದ್ದುಹೋಗುತ್ತದೆ ಅಂತೂ ಒಂದೋ ಐಕ್ಯವನ್ನಾದರೂ ಬಿಡಬೇಕು. ಇಲ್ಲವಾದರೆ 'ಬಂಧವು ಮಿಥ್ಯೆ' ಎಂಬುದನ್ನಾದರೂ ಬಿಡಬೇಕು ಎಂದಾಗುತ್ತದೆ.

ಯದಿ ಶ್ರುತಿರಪೇಕ್ಷ್ಯಾ ತೇ ಭಾವೋನಾದಿರ್ವಿನಶ್ಯತು ।
ಯದಿ ಶ್ರುತಿರುಪೇಕ್ಷ್ಯಾ ತೇ ಭಾವೋಽನಾದಿರ್ನ ನಂಕ್ಷ್ಯತಿ ॥ ೧೯೬ ॥

**ಅರ್ಥ–** ಯದಿ= ಒಂದು ವೇಳೆ, ತೇ= ನಿನಗೆ, ಶ್ರುತಿಃ= ವೇದವು, ಅಪೇಕ್ಷ್ಯಾ= ಅಪೇಕ್ಷಿತವಾಗಿದ್ದರೆ (ಯುಕ್ತಿಯನ್ನು ಕಡೆಗಣಿಸಿ ಶ್ರುತಿಯನ್ನು ರಕ್ಷಿಸಬೇಕು ಎಂದಿದ್ದರೆ), ಅನಾದಿಃ= ಅನಾದಿಯಾದ, ಭಾವಃ= ಭಾವರೂಪವಾದ ಸಂಸಾರವು, ವಿನಶ್ಯತು= ನಾಶವಾಗಲಿ, ಯದಿ= ಒಂದು ವೇಳೆ, ತೇ= ನಿನಗೆ, ಶ್ರುತಿಃ= ವೇದವು ಉಪೇಕ್ಷಿಸಲು, ಯೋಗ್ಯವಾದರೇ, ಅನಾದಿಃ= ಅನಾದಿಯಾದ, ಭಾವಃ= ಭಾವರೂಪವಾದ ಸಂಸಾರವು ನ ನಂಕ್ಷ್ಯತಿ= ನಾಶವಾಗುವುದಿಲ್ಲ.

**ಅನುವಾದ -** ಯುಕ್ತಿಯನ್ನು ಕಡೆಗಣಿಸಿ ಶ್ರುತಿಯನ್ನು ಪ್ರಬಲ ಎಂದು ಅಂಗೀಕರಿಸುತ್ತಿ ಎಂದಾದರೆ ಆಗ 'ಯತ್ ಅನಾದಿ ಭಾವರೂಪಂ ತತ್ ನ ನಿವರ್ತತೇ ಬ್ರಹ್ಮವತ್' ಎಂಬ ಯುಕ್ತಿಗೆ ಸಂಕೋಚವನ್ನು ಹೇಳಬೇಕಾಗುತ್ತದೆ. ಆವಾಗ ಸಂಸಾರವನ್ನು ಮಿಥ್ಯೆ ಎಂದು ಕಲ್ಪಿಸಿದ್ದು ವ್ಯರ್ಥವಾಗುತ್ತದೆ. ಅಥವಾ ಶ್ರುತಿಯನ್ನು ಕಡೆಗಣಿಸಿ ಯುಕ್ತಿಯನ್ನೇ ಪ್ರಬಲವೆಂದು ಅಂಗೀಕರಿಸುತ್ತಿ ಎಂದಾದರೆ 'ಬಂಧವು ನಿವೃತ್ತವಾಗುತ್ತದೆ' ಎಂದು ಶ್ರುತಿಯಲ್ಲಿ ಹೇಳಿದ್ದರೂ ಸಂಸಾರವು ಅನಾದಿಯಾದ ಭಾವರೂಪವಾದ್ದರಿಂದ ನಿವೃತ್ತಿಯೇ ಆಗಲಿಕ್ಕಿಲ್ಲ ಎಂದಾಗುತ್ತದೆ.

**ಭಾವವಿಲಾಸಿನೀ–**ಪುನರಪಿ ಪ್ರಕಾರಾಂತರೇಣೋಭಯತಃ ಪಾಶಾಂ ರಜ್ಜುಮಾಹ **–ಯದೀತಿ ॥ ಅಪೇಕ್ಷ್ಯಾ ।** ಯುಕ್ತಿಮುಪೇಕ್ಷ್ಯಾಪಿ ಶ್ರುತಿರೇವ ರಕ್ಷಣೀಯೇತ್ಯರ್ಥಃ । ತರ್ಹಿ ಅನಾದಿರ್ಭವಃ ಸಂಸಾರಃ ವಿನಶ್ಯತು । ಯದನಾದಿಭಾವರೂಪಂ ನ ತನ್ನಿವರ್ತತೇ ಬ್ರಹ್ಮವದಿತಿ ವ್ಯಾಪ್ತೇಃ ಸಂಕೋಚಂ ಕೃತ್ವಾ ಶ್ರುತಿಬಲಾದನಾದಿಭಾವಸ್ಯಾಪಿ ಭವಸ್ಯ ನಿವೃತ್ತಿರಸ್ತ್ವಿತ್ಯರ್ಥಃ । ಉಪೇಕ್ಷ್ಯಾ ಯುಕ್ತಿಮೇವ ಪ್ರಬಲೀಕೃತ್ಯ ಯುಕ್ತಿವಿರೋಧೇ ಸತ್ಯನ್ಯಥೈವ ಯೋಜ್ಯೇತ್ಯರ್ಥಃ । ತರ್ಹ್ಯನಾದಿಭಾವಃ ಅನಾದಿಭಾವರೂಪಃ । ಭವಃ ನ ನಂಕ್ಷ್ಯತಿ । ಶ್ರುತೇರುಪೇಕ್ಷಣೀಯತ್ವೇ ಯುಕ್ತೇರೇವಾಪೇಕ್ಷಣೀಯತ್ವೇ ಚ ಯದನಾದಿಭಾವರೂಪಂ ನ ತನ್ನಿವರ್ತತ ಇತಿ ಪ್ರಾಗುಕ್ತಯುಕ್ತಿಬಲೇನ ಶ್ರೌತೋಽಪಿ ಬಂಧವಿನಾಶೋ ನ ಸ್ಯಾದಿತಿ ಭಾವಃ ॥ ೧೯೬ ॥

**ಉಪಾದಾನಮುಪಾದೇಯಸಮಾನಾಶ್ರಯಮೇವ ಯತ್ ।**
**ಅನಾದಿಬಂಧಸ್ಯಾಧಾರೋ ಜೀವ ಏವ ತತಸ್ತವ ।**
**ಅಜ್ಞಾನಾಧಾರತಾಂ ಪ್ರಾಪ್ತ ಇತ್ಯಪ್ಯಾಸೀದ್ಧಿ ಸಂಕಟಮ್ ॥ ೧೯೭ ॥**

**ಅರ್ಥ–** ಯತ್= ಯಾವ ಕಾರಣದಿಂದ, ಉಪಾದಾನಂ= ಉಪಾದಾನವು, ಉಪಾದೇಯಸಮಾನಾಶ್ರಯಂಏವ= ಉಪಾದೇಯದ ಆಶ್ರಯವನ್ನೇ ಆಶ್ರಯಿಸಿ ಕೊಂಡಿರುವುದು, ಕಂಡಿದೆಯೋ (ಉಪಾದೇಯವಿದ್ದಲ್ಲೇ ಇರುತ್ತದೆಯೋ) ತತಃ ಏವ= ಆದ್ದರಿಂದಲೇ ಅನಾದಿಬಂಧಸ್ಯ= ಅನಾದಿಯಾದ ಸಂಸಾರಕ್ಕೆ, ಜೀವಃ ಏವ= ಜೀವನೇ ಆಧಾರಃ ಇತಿ= ಆಶ್ರಯನಾಗಿದ್ದಾನೆ ಎಂಬ ಕಾರಣದಿಂದ (ಜೀವಃ ಏವ= ಜೀವನೇ)

ಅಜ್ಞಾನಾಧಾರತಾಂ= ಅಜ್ಞಾನದ ಆಶ್ರಯತ್ವವನ್ನು ಪ್ರಾಪ್ತಃ ಇತಿ= ಹೊಂದುವನು ಎಂಬುದಾಗಿ ತವ= ನಿನಗೆ, ಮಹತ್= ದೊಡ್ಡದಾದ, ಸಂಕಟಂ= ಕಷ್ಟವು, ಆಸೀತ್= ಉಂಟಾಯಿತಷ್ಟೇ.

**ಅನುವಾದ -** ಉಪಾದೇಯವು ಎಲ್ಲಿರುವುದೋ ಅಲ್ಲಿಯೇ ಉಪಾದಾನವಿರುವುದು ಕಂಡಿದೆ. ಅಜ್ಞಾನವು ಉಪಾದಾನ. ಅನಾದಿಯಾದ ಬಂಧವು ಉಪಾದೇಯವಾಗಿದೆ. ಉಪಾದೇಯವಾದ ಸಂಸಾರಬಂಧಕ್ಕೆ ಜೀವನು ಆಶ್ರಯನಾದ್ದರಿಂದ ಉಪಾದಾನವಾದ ಅಜ್ಞಾನಕ್ಕೂ ಅವನೇ ಆಶ್ರಯನಾಗಬೇಕು. ಹೀಗಾಗಿ 'ಅಜ್ಞಾನವು ಬ್ರಹ್ಮಾಶ್ರಿತವಾಗಿದೆ' ಎಂಬ ನಿನ್ನ ಸಿದ್ಧಂತಕ್ಕೆ ಭಂಗ ಬರುತ್ತದೆ. ಹೀಗೆ ನಿನಗೆ ಬಹಳ ದೊಡ್ಡ ಕಷ್ಟವೇ ಬಂದೊದಗಿತು.

'ಆಶ್ರಯತ್ವ ವಿಷಯತ್ವಭಾಗಿನೀ ನಿರ್ವಿಶೇಷ ಚಿತಿರೇವ ಕೇವಲಾ । ಪೂರ್ವಸಿದ್ಧ ತಮಸೋ ಹಿ ಪಶ್ಚಿಮೋ ನಾಶ್ರಯೋ ಭವತಿ ನಾಪಿ ಗೋಚರಃ ॥ ಎಂಬುದಾಗಿ ಅದ್ವೈತಿಗಳು ಅಜ್ಞಾನಕ್ಕೆ ಆಶ್ರಯನು ಜೀವನಲ್ಲ ಹೊರತು ಶುದ್ಧ ಬ್ರಹ್ಮನೇ ಆಗಿದ್ದಾನೆ' ಎಂದು ಅಂಗೀಕರಿಸಿದ್ದಾರೆ.

**ಭಾವವಿಲಾಸಿನೀ–**ಬಂಧಸ್ಯಾಜ್ಞಾನೋಪಾದಾನತ್ವಾಂಗೀಕಾರೇಪರಸ್ಯಾನಿಷ್ಟಾಂತರಮಪ್ಯಾಹ – **ಉಪಾದಾನಮಿತಿ ।** ಯದ್ಯಸ್ಮಾತ್ ಉಪಾದಾನಮುಪಾದೇಯಸಮಾನಾಶ್ರಯಮ್ । ಯತ್ರ ಕುಲಾಲಶಾಲಾಯಾಮ್ ಉಪಾದೇಯೋ ಘಟಸ್ತಿಷ್ಠತಿ ತತ್ರೈವ ಮೃತ್ಪಿಂಡಸ್ಯಾಪಿ ಸ್ಥಿತಿರ್ದೃಷ್ಟಾ । ನತೂಪಾದೇಯ ಘಟಾಶ್ರಯಭೂತಲಾದನ್ಯತ್ರ ತದುಪಾದಾನಮೃತ್ಪಿಂಡಸ್ಯ ಸ್ಥಿತಿ ದೃಷ್ಟೇ-ತ್ಯರ್ಥಃ । ತತಃ ಉಪಾದಾನೋಪಾದೇಯಯೋಃ ಸಾಮಾನಾಧಿಕರಣ್ಯನಿಯಮಾತ್ । ಇತಿಹೇತೋಃ ಸಂಕಟಂ ಬ್ರಹ್ಮಾಶ್ರಿತಾಜ್ಞಾನಪ್ರತಿಕ್ಷೇಪಃ ॥ ೧೯೭ ॥

ಕುಂಭಕಾರಸ್ಯ ಶಾಲೈವ ಕಪಾಲಸ್ಯ ಘಟಸ್ಯ ಚ ।
ಆಧಾರೋ ದೃಶ್ಯತೇ ಸ್ಥಾನಭೇದೋ ನ ಹ್ಯನಯೋಃ ಕ್ವಚಿತ್ ॥ ೧೯೮ ॥

**ಅರ್ಥ–** ಕುಂಭಕಾರಸ್ಯ= ಕುಂಬಾರನ, ಶಾಲಾ ಏವ= ಮನೆಯೇ, ಘಟಸ್ಯ= ಮಡಿಕೆಗೆ, ಕಪಾಲಸ್ಯ ಚ= ಕಪಾಲಕ್ಕೂ, ಆಧಾರಃ= ಆಶ್ರಯವಾಗಿ, ದೃಶ್ಯತೇ= ಕಾಣಲ್ಪಡುತ್ತದೆ, ಅನಯೋಃ= ಘಟ ಮತ್ತು ಕಪಾಲಗಳಿಗೆ, ಸ್ಥಾನಭೇದಃ= ಆಶ್ರಯಗಳಲ್ಲಿ ಭೇದವು, ಕ್ವಚಿತ್= ಎಲ್ಲಿಯೂ, ನ ದೃಶ್ಯತೇ= ಕಾಣಲ್ಪಡುವುದಿಲ್ಲ.

**ಅನುವಾದ -** ಕಪಾಲವು ಉಪಾದಾನ, ಘಟವು ಉಪಾದೇಯ. ಇವೆರಡಕ್ಕೂ ಕುಂಬಾರನ ಮನೆಯೇ ಆಶ್ರಯವಾದದ್ದು ಕಂಡಿದೆ. ಘಟವು ಒಂದು ಕಡೆಯಲ್ಲಿದ್ದು ಕಪಾಲವು ಮತ್ತೊಂದು ಕಡೆಯಲ್ಲಿರುವುದು ಎಲ್ಲಿಯೂ ಕಾಣಲಿಲ್ಲ. ಆದರಂತೆ

ಉಪದೇಯವಾದ ಬಂಧಕ್ಕೆ ಆಶ್ರಯನಾದ ಜೀವನೇ ಉಪಾದಾನವಾದ ಅಜ್ಞಾನಕ್ಕೂ ಆಶ್ರಯನಾಗಬೇಕೇ ಹೊರತು ಬ್ರಹ್ಮನಲ್ಲ.

**ಭಾವವಿಲಾಸಿನೀ–ಏತದೇವೋಪಪಾದಯತಿ ॥ ಕುಂಭಕಾರಸ್ಯೇತಿ ॥೧೯೮॥**

ಯಸ್ಮಾದನಾದಿ ತೇಽಜ್ಞಾನಂ ಸ್ವೋಪಾದಾನೇ ನ ತಿಷ್ಠತಿ ।
ತಸ್ಮಾಚ್ಛಾಲಾವದುಭಯೋರಪ್ಯಾಧಾರಃ ಸ ಏವ ಹಿ ॥೧೯೯॥

**ಅರ್ಥ–** ಯಸ್ಮಾತ್= ಯಾವ ಕಾರಣದಿಂದ, ತೇ= ನಿನ್ನ ಮತದಲ್ಲಿ, ಅನಾದಿ= ಅನಾದಿಯಾದ, ಅಜ್ಞಾನಂ= ಅಜ್ಞಾನವು, ಸ್ವೋಪಾದಾನೇ= ತನ್ನ ಉಪಾದಾನ ಕಾರಣದಲ್ಲಿ ನ ತಿಷ್ಠತಿ= ಇರುವುದಿಲ್ಲವೋ, ತಸ್ಮಾತ್= ಆ ಕಾರಣದಿಂದ, ಶಾಲಾವತ್= ಕುಂಬಾರನ ಮನೆಯಂತೆ, ಉಭಯೋಃ ಅಪಿ= ಸಂಸಾರ ಬಂಧಕ್ಕೂ, ಅಜ್ಞಾನಕ್ಕೂ, ಸಃ ಏವ= ಆ ಜೀವನೇ, ಆಧಾರಃ ಹಿ= ಆಶ್ರಯನಾಗಬೇಕಷ್ಟೇ!

**ಅನುವಾದ** - ಯಾವುದು ಜನ್ಯವೋ ಅದು ತನ್ನ ಉಪಾದಾನದಲ್ಲಿರುತ್ತದೆ. ಜನ್ಯವಾದ ಘಟ ಉಪಾದಾನವಾದ ಕಪಾಲದಲ್ಲಿ ಇರುತ್ತದೆ. ಕಪಾಲದ್ವಾರಾ ಕುಂಬಾರನ ಮನೆಯಲ್ಲಿಯೂ ಇರುತ್ತದೆ. ಆದ್ದರಿಂದ ಘಟಕ್ಕೆ ಕಪಾಲವೂ ಕುಂಬಾರನ ಮನೆಯೂ ಆಶ್ರಯ. ಆದರೆ ನಿಮ್ಮ ಮತದಲ್ಲಿ ಅಜ್ಞಾನವನ್ನು ಅನಾದಿಯೆಂದು ಒಪ್ಪಿರುವುದರಿಂದ ಅದಕ್ಕೆ ಉಪಾದಾನವೇ ಇರುವುದಿಲ್ಲ. ಆದ್ದರಿಂದ ಅದು ಉಪಾದಾನದಲ್ಲಿ ಇರಲು ಸಾಧ್ಯವೇ ಇಲ್ಲ. ಉಪಾದಾನ ದ್ವಾರಾ ಬ್ರಹ್ಮನಲ್ಲಿ ಇರಲೂ ಸಾಧ್ಯವಿಲ್ಲ. ಇರುವುದಾದರೆ ಜೀವನಲ್ಲಿರುವ ಬಂಧವೆಂಬ ಉಪಾದೇಯವು ಅಜ್ಞಾನರೂಪ ಉಪಾದಾನದ್ವಾರಾ ಜೀವನಲ್ಲಿ ಬರಬೇಕಾಗುವುದರಿಂದ ಅಜ್ಞಾನವು ಜೀವನಲ್ಲಿಯೇ ಇರಬೇಕು. ಘಟಕ್ಕೂ ಕಪಾಲಕ್ಕೂ ಕುಲಾಲನ ಮನೆ ಹೇಗೆ ಆಶ್ರಯವೋ ಹಾಗೆ ಸಂಸಾರ ಬಂಧ, ಅಜ್ಞಾನ ಇವೆರಡಕ್ಕೂ ಜೀವನೇ ಆಶ್ರಯನಾಗಬೇಕು.

**ಭಾವವಿಲಾಸಿನೀ–**ಘಟಸ್ಯ ಕಪಾಲೋಽಪ್ಯಾಧಾರಃ ಕುಲಾಲಶಾಲಾ ಚ । ಅಜ್ಞಾನಸ್ಯ ತ್ವನಾದಿತ್ವೇನೋಪಾದಾನಾಂತರಾಭಾವಾತ್ ಕುಲಾಲಶಾಲಾವದುಭಯೋರಪಿ ಜೀವ ಏವಾಧಾರ ಇತ್ಯಾಹ – **ಯಸ್ಮಾದಿತಿ** ॥ ಸ ಏವ ಜೀವ ಏವ ॥ ೧೯೯ ॥

ಅನಾದಿಭಾವರೂಪಂ ತೇ ಯದಜ್ಞಾನಮಭೀಪ್ಸಿತಂ ।
ಅನಾದಿಭಾವರೂಪಂ ಚ ವಸ್ತು ನೈವ ನಿವರ್ತತೇ ॥ ೨೦೦ ॥

ಇತಿ ವ್ಯಾಪ್ತಿಶ್ಚ ತಜ್ಞಾನಮಜ್ಞಾನಂ ನಾಶಯೇತ್ ಕಥಂ ।
ಉಪಸರ್ಪಸಿ ಸರ್ಪಸ್ಯ ಬಿಲಂ ವೃಶ್ಚಿಕಭೀತಿತಃ ॥ ೨೦೧ ॥

**ಅರ್ಥ–** ಅನಾದಿಭಾವರೂಪಂ= ಅನಾದಿಯಾದ ಮತ್ತು ಭಾವರೂಪವಾದ, ವಸ್ತು= ವಸ್ತುವಾದರೂ, ನ ನಿವರ್ತತೇ ಏವ= ನಾಶಹೊಂದುವುದೇ ಇಲ್ಲ, ಇತಿ= ಎಂಬ ವ್ಯಾಪ್ತಿಶ್ಚ = ವ್ಯಾಪ್ತಿಯಿರುವುದರಿಂದ, ತೇ= ನಿನ್ನ ಮತದಲ್ಲಿ ಅನಾದಿಭಾವರೂಪಂ= ಅನಾದಿಯಾದ ಮತ್ತು ಭಾವರೂಪವೂ ಆದದ್ದು ಎಂದು, ಯತ್= ಯಾವ ಅಜ್ಞಾನವು, ಅಭೀಪ್ಸಿತಂ= ಅಭಿಲಷಿತವಾಗಿದೆಯೋ, ತತ್= ಆ ಅಜ್ಞಾನವನ್ನು, ಜ್ಞಾನಂ= ಜ್ಞಾನವು, ಕಥಂ= ಹೇಗೆ ತಾನೆ, ನಾಶಯೇತ್= ನಾಶಪಡಿಸೀತು? ವೃಶ್ಚಿಕ ಭೀತಿತಃ= ಚೇಳಿನ ಹೆದರಿಕೆಯಿಂದ, ಸರ್ಪಸ್ಯ= ಹಾವಿನ, ಬಿಲಂ= ಹುತ್ತವನ್ನು, ಉಪಸರ್ಪಸಿ= ಹೊಕ್ಕುತ್ತಿರುವಿ.

**ಅನುವಾದ** - 'ಯಾವುದು ಅನಾದಿ ಭಾವರೂಪವಾದ ವಸ್ತುವೋ ಅದು ನಾಶವಾಗುವುದೇ ಇಲ್ಲ' ಎಂದು ವ್ಯಾಪ್ತಿಯಿದೆ. ಆದರೆ ನಿನ್ನ ಮತದಲ್ಲಿ ಅಜ್ಞಾನವು ಅನಾದಿ ಭಾವರೂಪವಾಗಿದೆ ಎಂದು ಅಂಗೀಕರಿಸಲಾಗಿದೆ. ಇಂತಹ ಅಜ್ಞಾನವು ಜ್ಞಾನದಿಂದ ಹೇಗೆ ತಾನೆ 'ನಾಶಹೊಂದೀತು? ಚೇಳಿಗೆ ಹೆದರಿದವನು ಹಾವಿನ ಹುತ್ತವನ್ನು ಹೊಕ್ಕುವಂತಿದೆ ನಿನ್ನ ಪರಿಸ್ಥಿತಿ!'

**ಭಾವವಿಲಾಸಿನೀ–**ಅಧುನಾ ಯದನಾದಿಭಾವರೂಪಂ ನ ತನ್ನಿವರ್ತತ ಇತಿ ಪ್ರಾಗುಕ್ತವ್ಯಾಪ್ತಿಂ। ಶ್ರುತ್ಯುಪೇಕ್ಷಕಮತೇ ಪ್ರಬಲೀಕೃತ್ಯ ತದಭಿಪ್ರೇತಂ ಜಗತೋ ಜ್ಞಾನವಿನಾಶ್ಯತ್ವಂ ಖಂಡಯತಿ ॥ **ಅನಾದಿಭಾವರೂಪಮಿತಿ** ॥ ತತ್ತಸ್ಮಾತ್ । ಜ್ಞಾನೇನ ಬಂಧನಿವೃತ್ತೌ ಯುಕ್ತಿತೋ ಭೀತೇನ ಪರೇಣಾಂಗೀಕ್ರಿಯಮಾಣಾಯಾಃ ಜ್ಞಾನಾದಜ್ಞಾನನಿವೃತ್ತೇರತಿಪ್ರಬಲಯುಕ್ತಿವಿರುದ್ಧತ್ವಾತ್ ವೃಶ್ಚಿಕಭೀತಿತಃ ಸರ್ಪಸ್ಯ ಬಿಲಮುಪಸರ್ಪಸೀತ್ಯುಕ್ತಮ್ ॥ ೨೦೧ ॥

**ವಿವರಣೆ** - 'ದೃಷ್ಟ್ವೈವ ತಂ ಮುಚ್ಯತೇ' ಮೊದಲಾದ ಶ್ರುತಿಗಳು ಜ್ಞಾನದಿಂದ ಸಾಕ್ಷಾತ್ತಾಗಿ ಬಂಧ ನಿವೃತ್ತಿಯಾಗುತ್ತದೆ ಎಂದು ಹೇಳುತ್ತಿವೆ. ಇದನ್ನು ಕೂಡಿಸುವುದಕ್ಕಾಗಿ ಬಂಧವನ್ನು ಅಜ್ಞಾನಕಲ್ಪಿತವೆಂದು ಒಪ್ಪಿ ಜ್ಞಾನದಿಂದ ಅಜ್ಞಾನ ನಿವೃತ್ತಿಯಾದಾಗ ಅಜ್ಞಾನ ಕಲ್ಪಿತವಾದ ಬಂಧವೂ ನಿವೃತ್ತಿಯಾಗುತ್ತದೆ ಎಂದು ಹೇಳುತ್ತಾ ಅಜ್ಞಾನವನ್ನು ಅನಾದಿ ಭಾವರೂಪವೆಂದು ಅಂಗೀಕರಿಸಿರುವಿ. ಆದರೆ 'ಯತ್ ಅನಾದಿಭಾವರೂಪಂ ತತ್ ನ ನಿವರ್ತತೇ ಬ್ರಹ್ಮವತ್' ಎಂಬ ವ್ಯಾಪ್ತಿಯಿರುವುದರಿಂದ ಅನಾದಿ ಭಾವರೂಪವಾದ ಅಜ್ಞಾನವು ಜ್ಞಾನದಿಂದ ನಿವೃತ್ತಿಯೇ ಆಗುವುದಿಲ್ಲ ಎಂಬ ಪ್ರಸಂಗ ಬಂದೊದಗಿದೆ. ಚೇಳಿಗೆ ಹೆದರಿ ಹಾವಿನ ಹುತ್ತವನ್ನು ಪ್ರವೇಶಿಸಿದಂತಾಯಿತು. ಚೇಳು - ಜ್ಞಾನದಿಂದ ನೇರ ಬಂಧ ನಿವೃತ್ತಿಯಾಗುತ್ತದೆ ಎಂಬುದು. ಇದಕ್ಕೆ ಹೆದರಿ ಹಾವಿನ ಹುತ್ತ ಪ್ರವೇಶಿಸಿದಂತೆ ಆಯಿತು. ಹಾವಿನ ಹುತ್ತ - ಅಜ್ಞಾನವು ಜ್ಞಾನದಿಂದ ನಿವೃತ್ತಿಯಾಗುವುದೇ ಇಲ್ಲವೆಂಬುದು.

**ಅನಾದೇರಪಿ ಬಂಧಸ್ಯ ನಾಶಃ ಸ್ಯಾದ್ಧಿ ಶ್ರುತೇರ್ಬಲಾತ್ ॥೨೦೨ ॥**

**ಅರ್ಥ**– ಅನಾದೇಃ= ಅನಾದಿಯಾದ, ಬಂಧಸ್ಯ= ಬಂಧಕ್ಕೆ, ನಾಶಃ ಅಪಿ= ನಾಶವಾದರೂ, ಶ್ರುತೇಃ= ವೇದದ ಬಲಾತ್= ಸಾಮರ್ಥ್ಯದಿಂದ, ಸ್ಯಾತ್= ಉಂಟಾಗುತ್ತದೆ.

**ಅನುವಾದ** - ಬಂಧವು ಅನಾದಿಭಾವರೂಪವಾಗಿದ್ದರೂ ವೇದದ ಬಲದಿಂದಲೇ ಅದರ ನಾಶವು ಉಂಟಾಗುತ್ತದೆ.

**ಭಾವವಿಲಾಸಿನೀ**– ತರ್ಹಿ ಭವತಾಂ ಮತೇಽಪಿ ಕಥಮನಾದಿಭಾವರೂಪ ಬಂಧನಿವೃತ್ತಿರಿತ್ಯತ ಆಹ – **ಅನಾದೇರಿತಿ** ॥ ಶ್ರುತೌ ಕೃತರತೀನಾಮಸ್ಮಾಕಂ ಶ್ರುತಿಬಲಾದನಾದಿಭಾವಸ್ಯಾಪಿ ಬಂಧಸ್ಯ ನಿವೃತ್ತಿಃ ಸ್ಯಾತ್। ಯುಕ್ತಿಬಲಾಚ್ಛ್ರುತಿಮೇವಾನ್ಯಥೀಕುರ್ವತಸ್ತವ ಕಥಂ ಯುಕ್ತಿವಿರುದ್ಧೋಽಯಂ ನಾಶಃ ಸ್ಯಾದಿತಿ ಭಾವಃ॥೨೦೨॥

**ವಿವರಣೆ** - ನಾವು ವೇದವನ್ನು ಪರಮಪ್ರಮಾಣವೆಂದು ಒಪ್ಪಿರುವುದರಿಂದ ವೇದವು ಹೇಳುವುದರಿಂದಲೇ ಅನಾದಿಭಾವರೂಪವಾದ ಬಂಧವು ಜ್ಞಾನದಿಂದ ನಾಶವಾಗುತ್ತದೆ ಎಂದು ಒಪ್ಪುತ್ತೇವೆ. ಆದರೆ ನೀವು ಯುಕ್ತಿಯ ವಿರೋಧವಿದೆ ಎಂದು ವೇದಕ್ಕೇ ಅರ್ಥಾಂತರವನ್ನು ಮಾಡುವವರು. ಅಂತಹ ಯುಕ್ತಿಯ ವಿರೋಧವು ಬಂದಾಗ ಜ್ಞಾನದಿಂದ ಅಜ್ಞಾನದ ನಾಶವನ್ನು ಹೇಗೆ ಒಪ್ಪುತ್ತೀರಿ? ಆದ್ದರಿಂದ ನಿಮ್ಮ ಮತದಲ್ಲಿ ಅಜ್ಞಾನದ ನಾಶವನ್ನು ಹೇಳಲಾಗುವುದಿಲ್ಲ.

**ಅಯಂ ತು ಯೌಕ್ತಿತೋ ನಾಶಃ ಪ್ರತಿಯುಕ್ತಿಹತೋ ಯತಃ ।**
**ಅತೋ ವ್ಯಾಪ್ತಿದ್ವಯಬಲಾದಭಾವಾಜ್ಞಾನಮಸ್ತು ತತ್ ॥ ೨೦೩ ॥**

**ಅರ್ಥ**– ಅಯಂ= ಈ ಯಾವ, ಯೌಕ್ತಿಕಃ= ಯುಕ್ತಿಯಿಂದ ಸಿದ್ಧವಾದ, ನಾಶಃ ತು= ಅಜ್ಞಾನದ ನಾಶವಾದರೂ, ಯತಃ= ಯಾವ ಕಾರಣದಿಂದ, ಪ್ರತಿಯುಕ್ತಿಹತಃ= ಎದುರು ಯುಕ್ತಿಯಿಂದ ಬಾಧಿಸಲ್ಪಟ್ಟಿತೋ, ಅತಃ= ಈ ಕಾರಣದಿಂದ, ವ್ಯಾಪ್ತಿದ್ವಯ ಬಲಾತ್= ಎರಡು ವ್ಯಾಪ್ತಿಗಳ ಸಾಮರ್ಥ್ಯದಿಂದ, ತತ್=- ಜ್ಞಾನದಿಂದ ನಾಶಹೊಂದುವ ಆ ಯಾವ ಅಜ್ಞಾನವು, ಅಭಾವಾಜ್ಞಾನಂ= ಅಭಾವರೂಪವಾದ ಅಜ್ಞಾನವೇ, ಅಸ್ತು= ಆಗಲಿ.

**ಅನುವಾದ** - 'ಜ್ಞಾನವು ಅಜ್ಞಾನವನ್ನು ಮಾತ್ರ ನಾಶಪಡಿಸುತ್ತದೆ' ಎಂಬ ಯುಕ್ತಿಯಿಂದ ಸಿದ್ಧವಾದ ಅಜ್ಞಾನದ ನಾಶವು 'ಅನಾದಿಭಾವರೂಪವಾದ ವಸ್ತುವು ನಾಶವಾಗುವುದಿಲ್ಲ' ಎಂಬ ಯುಕ್ತಿಯಿಂದ ಬಾಧಿತವಾಯಿತು. ಆದ್ದರಿಂದ 'ಜ್ಞಾನಂ ಅಜ್ಞಾನಸ್ಯೈವ ನಿವರ್ತಕಮ್'', 'ಅನಾದಿಭಾವಃ ನ ನಿವರ್ತತೇ' ಎಂಬ ಎರಡು ವ್ಯಾಪ್ತಿಗಳಿರುವುದರಿಂದ ಜ್ಞಾನದಿಂದ ನಾಶವಾಗಬೇಕಾದ ಅಜ್ಞಾನವನ್ನು ಅಭಾವ ರೂಪವೆಂದೇ ಅಂಗೀಕರಿಸಬೇಕಾಗುತ್ತದೆ.

**ಭಾವವಿಲಾಸಿನೀ–** ವ್ಯಾಪ್ತಿದ್ವಯಬಲಾತ್ ಜ್ಞಾನಮಜ್ಞಾನಸ್ಯೈವ ನಿವರ್ತಕಮ್ ಅನಾದಿಭಾವೋ ನ ನಿವರ್ತ್ಯ ಇತಿ ವ್ಯಾಪ್ತಿದ್ವಯಬಲಾತ್ । ತತ್ ವಿನಾಶ್ಯಮಜ್ಞಾನಮ್ ॥ ೨೦೩ ॥

**ಅನಾದಿಭಾವೋ ಬ್ರಹ್ಮೈವ ನೈವ ನಾಶ್ಯೋ ಯತೋ ಧ್ರುವಮ್ ।**
**ಅತೋ ವಿನಶ್ಯದಜ್ಞಾನಮಭಾವಾಜ್ಞಾನಮೇವ ಹಿ ॥೨೦೪ ॥**

**ಅರ್ಥ–** ಯತಃ= ಯಾವ ಕಾರಣದಿಂದ, ಅನಾದಿಭಾವಃ= ಅನಾದಿಭಾವರೂಪನಾದ, ಬ್ರಹ್ಮ ಏವ= ಬ್ರಹ್ಮನೇ, ಧ್ರುವಂ= ನಿಶ್ಚಯವಾಗಿ, ನೈವ ನಾಶ್ಯಃ= ನಾಶ ಹೊಂದಲು ಯೋಗ್ಯವಲ್ಲವೋ ಅತಃ= ಆಕಾರಣದಿಂದ, ವಿನಶ್ಯತ್= ನಾಶ ಹೊಂದುವ, ಅಜ್ಞಾನಂ= ಅಜ್ಞಾನವು, ಅಭಾವಾಜ್ಞಾನಂ ಏವ ಹಿ= ಅಭಾವರೂಪವಾದ ಅಜ್ಞಾನವೇ ಆಗಬೇಕಷ್ಟೇ!

**ಅನುವಾದ -** ಅನಾದಿ ಭಾವರೂಪನಾದ ಬ್ರಹ್ಮನು ನಾಶಹೊಂದುವುದೇ ಇಲ್ಲ. ಆದ್ದರಿಂದ ಅನಾದಿಭಾವರೂಪವಾದ ವಸ್ತು ನಾಶ ಹೊಂದುವುದೇ ಇಲ್ಲ ಎಂದು ನಿಶ್ಚಯವಾಯಿತು. ಅಜ್ಞಾನವು ಜ್ಞಾನದಿಂದ ನಾಶ ಹೊಂದುತ್ತದೆ ಎಂದಮೇಲೆ ಅದನ್ನು ಅಭಾವರೂಪವೆಂದೇ ಒಪ್ಪಬೇಕು.

**ಭಾವವಿಲಾಸಿನೀ–** ಸ್ವೋಕ್ತವ್ಯಾಪ್ತೇರ್ದೃಷ್ಟಾಂತಂ ದರ್ಶಯನ್ನುಕ್ತಮರ್ಥಂ ದೃಢೀಕರೋತಿ ॥ ಅನಾದೀತಿ॥ ಅತಃ ಅನಾದಿಭಾವಸ್ಯ ವಿನಾಶಾಯೋಗಾತ್ ॥ ೨೦೪ ॥

**ಉಪಾದಾನಂ ತು ನಾಭಾವಸ್ತತಸ್ತನ್ನಾಶನೇಽಪಿ ತೇ ।**
**ಸಂಸಾರನಾಶೋ ನೈವೇತಿ ವ್ಯರ್ಥಾಽರ್ಥಾಪತ್ತಿರಾಪತೇತ್ ॥ ೨೦೫ ॥**

**ಅರ್ಥ–** ಅಭಾವಃ ತು= ಅಭಾವರೂಪ ಅಜ್ಞಾನವಾದರೂ, ಉಪಾದಾನಂ ನ= ಉಪಾದಾನವಾಗಲು ಸಾಧ್ಯವಿಲ್ಲ, ತತಃ= ಆದ್ದರಿಂದ, ತನ್ನಾಶನೇ ಅಪಿ= ಅಂತಹ ಅಜ್ಞಾನ ನಾಶವಾದರೂ, ತೇ= ಉಪಾದಾನ ನಾಶವಾದ್ದರಿಂದ ಉಪಾದೇಯವಾದ ಬಂಧ ನಾಶವಾಗುತ್ತದೆ ಎಂದು ಅಂಗೀಕರಿಸಿದ ನಿನ್ನ ಮತದಲ್ಲಿ, ಸಂಸಾರನಾಶಃ ನ ಏವ= ಸಂಸಾರದ ನಾಶವೇ ಆಗುವುದಿಲ್ಲ, ಇತಿ= ಎಂದು, ಅರ್ಥಾಪತ್ತಿಃ= ಜ್ಞಾನದಿಂದ ಬಂಧನಾಶವಾಗುತ್ತದೆ ಎಂಬುದನ್ನು ಕೂಡಿಸುವುದಕ್ಕಾಗಿ ಅಜ್ಞಾನವನ್ನು ಒಪ್ಪಿಕೊಂಡಿರುವುದು, ವ್ಯರ್ಥಾ= ವ್ಯರ್ಥವು, ಆಪತೇತ್= ಆಗುತ್ತದೆ (ಆದೀತು).

**ಅನುವಾದ -** ಅಭಾವವು ಉಪಾದಾನಕಾರಣವಾಗಿರುವುದು ಎಲ್ಲಿಯೂ ಕಂಡಿಲ್ಲ. ಆದ್ದರಿಂದ ಸಂಸಾರಕ್ಕೆ ಅಭಾವರೂಪವಾದ ಅಜ್ಞಾನವು ಉಪಾದಾನ ಕಾರಣವಾಗಲು ಸಾಧ್ಯವಿಲ್ಲ. ಅಂತಹ ಅಜ್ಞಾನವು ನಾಶವಾದರೂ ಸಂಸಾರನಾಶವಾಗುವುದಿಲ್ಲ. ಆದ್ದರಿಂದ ನಿನ್ನ ಅರ್ಥಾಪತ್ತಿಯು ವ್ಯರ್ಥವೇ ಆಗುತ್ತದೆ.

**ಭಾವವಿಲಾಸಿನೀ–** ಅಸ್ತ್ವಭಾವಜ್ಞಾನಂ ಪ್ರಕೃತೇ ಕಿಮಿತ್ಯತ ಆಹ – **ಉಪಾದಾನಮಿತಿ** ॥ ತನ್ನಾಶನೇ ಅಜ್ಞಾನನಾಶನೇ । ತೇ ಉಪಾದಾನನಾಶದ್ವಾರಾ ಬಂಧನಾಶ ಇತಿ ವದತಸ್ತವ ಮತೇ । ಅರ್ಥಾಪತ್ತಿಃ ಜ್ಞಾನಸ್ಯ ಬಂಧನಿವರ್ತಕತ್ವಾನ್ಯಥಾನುಪಪತ್ಯಾಽರ್ಥಾತ್ ಮಧ್ಯೇ ಅಜ್ಞಾನಸ್ಯಾಪತ್ತಿಃ । ಅಜ್ಞಾನಕಲ್ಪನೇಽಪ್ಯುಕ್ತವಿಧಯಾ ತಸ್ಯಾಽನಿರ್ವಾಹಾತ್ ವ್ಯರ್ಥಾ ॥ ೨೦೫ ॥

**ವಿವರಣೆ** - ಅರ್ಥಾಪತ್ತಿ ಎಂದರೆ ಅರ್ಥಾತ್ ಆಪತ್ತಿ ಎಂದರೆ ಅನುಪಪನ್ನವಾದದ್ದನ್ನು ಕೂಡಿಸುವುದಕ್ಕಾಗಿ ಮಧ್ಯದಲ್ಲಿ ಉಪಪಾದಕವನ್ನು ಕಲ್ಪಿಸುವುದು ಎಂದರ್ಥ. ಜ್ಞಾನದಿಂದ ಬಂಧದ ನಾಶವನ್ನು ಶ್ರುತಿಯು ಹೇಳುತ್ತದೆ. ಅಜ್ಞಾನವು ಮಾತ್ರ ಜ್ಞಾನದಿಂದ ನಾಶವಾಗುವುದರಿಂದ ಬಂಧದ ನಾಶವು ಅನುಪಪನ್ನವಾಗಿದೆ. ಇದನ್ನು ಕೂಡಿಸುವುದಕ್ಕಾಗಿ ಬಂಧವು ಅಜ್ಞಾನಕಲ್ಪಿತವೆಂದು ಮಧ್ಯದಲ್ಲಿ ಅಜ್ಞಾನವನ್ನು ಕಲ್ಪಿಸಲಾಗಿದೆ. ಇದು ವ್ಯರ್ಥವಾಗುತ್ತದೆ. ಏಕೆಂದರೆ ಅಭಾವರೂಪವಾದ ಅಜ್ಞಾನವು ಬಂಧಕ್ಕೆ ಉಪಾದಾನ ಕಾರಣವಲ್ಲ. ಉಪಾದಾನವಾಗಿದ್ದರೆ ಉಪಾದಾನವಾದ ಅಜ್ಞಾನದ ನಾಶವಾದಾಗ ಉಪಾದೇಯವಾದ ಸಂಸಾರವು ನಾಶವಾಗುತ್ತಿತ್ತು. ಹಾಗಾಗಿ ಸಂಸಾರದ ನಾಶಕ್ಕಾಗಿ ಕಲ್ಪಿಸಲಾದ ಅಜ್ಞಾನದ ನಾಶವಾದರೂ ಸಂಸಾರದ ನಾಶವಾಗುವುದಿಲ್ಲ ಆದ್ದರಿಂದ ಅರ್ಥಾಪತ್ತಿಯು ವ್ಯರ್ಥವೇ ಆಗುತ್ತದೆ.

ಯದ್ಯಾಗ್ರಹಸ್ತೇ ಭಾವತ್ವೇ ನಾಶಸ್ಯಾಶಾಂ ತದಾ ತ್ಯಜ ।
ಅನಷ್ಟಾಜ್ಞಾನತೋಽಪಿ ಸ್ಯಾನ್ಮೋಕ್ಷಃ ಪಾಶಾತ್ಪಶೋರಿವ ॥ ೨೦೬ ॥

**ಅರ್ಥ–** ಯದಿ= ಒಂದು ವೇಳೆ, ತೇ= ನಿನಗೆ, ಭಾವತ್ವೇ= ಭಾವಾಜ್ಞಾನತ್ವದಲ್ಲಿ, ಆಗ್ರಹಃ= ಆಗ್ರಹವೋ, ತದಾ= ಆವಾಗ, ನಾಶಸ್ಯ= ಅಜ್ಞಾನನಾಶದ, ಆಶಾಂ= ಆಸೆಯನ್ನು, ತ್ಯಜ= ಬಿಡು. ಅನುಷ್ಟಾಜ್ಞಾನತೋಽಪಿ= ನಾಶವಾಗದ ಅಜ್ಞಾನದಿಂದಲೂ, ಮೋಕ್ಷಃ ಸ್ಯಾತ್= ಮೋಕ್ಷವಾಗುವುದಾದರೆ, ಪಶೋಃ= ಪಶುವಿಗೆ, ಪಾಶಾತ್= ಹಗ್ಗದಿಂದಲೂ, ಮೋಕ್ಷಃ ಸ್ಯಾತ್= ಮೋಕ್ಷವಾಗಬೇಕಾದೀತು.

**ಅನುವಾದ** - ಅನಾದಿಯಾದ ಭಾವರೂಪ ಅಜ್ಞಾನವನ್ನು ಅಂಗೀಕರಿಸಿದ ಆಗ್ರಹಿಯಾದ ನೀನು ಭಾವರೂಪಜ್ಞಾನ ಆದ್ದರಿಂದ ನಾಶವಿಲ್ಲವೆಂಬ ವ್ಯಾಪ್ತಿಯನ್ನು ಅನುಸರಿಸಿ ಅಜ್ಞಾನನಾಶದ ಆಶೆಯನ್ನು ಬಿಡಬೇಕಾಗುತ್ತದೆ. ಅಜ್ಞಾನನಾಶವಾಗದೆ ಮೋಕ್ಷವಾಗುವುದಾದರೆ ಪಶುವಿಗೆ ಪಾಶದಿಂದಲೂ ಮೋಕ್ಷವಾಗಬೇಕಾಗುತ್ತದೆ.

ಏವಂ ಚ ಜ್ಞಾನನಾಶ್ಯತ್ವಂ ಗತಂ ತ್ರಿಜಗತೋ ಮಮ ।
ಯತೋ ಜಗದುಪಾದಾನಮಜ್ಞಾನಂ ಚ ನ ನಶ್ಯತಿ ॥ ೨೦೭ ॥

**ಅರ್ಥ–** ಯತಃ= ಯಾವ ಕಾರಣದಿಂದ, ಜಗದುಪಾದಾನಂ= ಜಗತ್ತಿಗೆ ಉಪಾದಾನ ವಾದ, ಅಜ್ಞಾನಂ ಚ= ಅಜ್ಞಾನವಾದರೂ, ನ ನಶ್ಯತಿ= ನಾಶವಾಗುವುದಿಲ್ಲವೋ, ಏವಂ ಚ=

ಆದ್ದರಿಂದ (ಜಗತ್ತಿಗೆ ಉಪಾದಾನವಾದ ಅಜ್ಞಾನವು ನಾಶವಾಗುವುದಿಲ್ಲವಾದ್ದರಿಂದ), ಮಮ= ನನ್ನ ತ್ರಿಜಗತಃ= ಮೂರು ಪ್ರಪಂಚಕ್ಕೆ, ಜ್ಞಾನನಾಶ್ಯತ್ವಂ= ಜ್ಞಾನದಿಂದ ನಾಶವಾಗುವಿಕೆಯು, ಗತಂ= ಬಿದ್ದು ಹೋಯಿತು.

**ಅನುವಾದ** - ಯಾವುದು ಭಾವವೋ ಅದು ನಾಶವಾಗುವುದಿಲ್ಲವೆಂಬ ವ್ಯಾಪ್ತಿ ಇರುವುದರಿಂದ ಭಾವರೂಪವಾದ ಅಜ್ಞಾನವು ನಾಶವಾಗುವುದಿಲ್ಲವೆಂದಾಯಿತು. ಉಪಾದಾನವಾದ ಅಜ್ಞಾನವು ನಾಶವಾಗುವುದಿಲ್ಲವಾದ್ದರಿಂದ ಜ್ಞಾನದಿಂದ ಪ್ರಪಂಚವು ನಾಶವಾಗುವುದು ಎಂಬ ಸಿದ್ಧಾಂತವು ಬಿದ್ದು ಹೋಯಿತು.

**ಭಾವವಿಲಾಸಿನೀ**– ಭಾವತ್ವೇ ಭಾವಜ್ಞಾನತ್ವೇ । ನಾಶಸ್ಯ ಅಜ್ಞಾನನಾಶಸ್ಯ । ಅನಾದಿಭಾವೋ ನ ನಿವರ್ತತ ಇತಿ ವ್ಯಾಪ್ತಿಂ ಪುರಸ್ಕೃತ್ಯಾऽಜ್ಞಾನನಾಶೋ ನಾಂಗೀಕಾರ್ಯ ಇತ್ಯರ್ಥಃ । ತರ್ಹಿ ಮೋಕ್ಷಃ ಕಥಮಿತ್ಯತಸ್ತತ್ರೋಪಾಯಮಾಹ – **ಅನಷ್ಟೇತಿ** ॥ ಕಾಂಚಿದಾಶಾ ದತ್ವಾಪರೇಣಾಪ್ಯ ಜ್ಞಾನನಾಶಾಭಾವಮಂಗೀಕಾರಯಿತುಮಿದಮುಕ್ತಮ್ । ವಸ್ತುತಸ್ತು ಪಶುಪಾಶ ಸಂಯೋಗ-ಸ್ಯೇವಾಜ್ಞಾನಸಂಯೋಗಸ್ಯಾಪ್ಯನಾದಿಭಾವತಯಾ ವಿನಾಶಾಯೋಗೇನ ಮೋಕ್ಷಾನುಪಪತ್ತೇ-ರಪರಿಹಾರ ಏವೇತಿ ಜ್ಞಾತವ್ಯಮ್ ॥ ೨೦೬ ॥ ಏವಂ ಜಗದುಪಾದಾನ-ಭೂತಾಜ್ಞಾನನಾಶಾಭಾವೇ॥೨೦೭॥

ಬಂಧನಾಶಸ್ತು ವಿಜ್ಞಾನಾದಜ್ಞಾನಾಪಸೃತೇಃ ಪರಂ ।
ವಾಚ್ಯಸ್ತ್ವಯಾ ಯತೋऽನಾದಿರ್ಭಾವಾರ್ಥೋ ನ ನಿವರ್ತತೇ ॥ ೨೦೮ ॥

**ಅರ್ಥ**– ಯತಃ= ಯಾವ ಕಾರಣದಿಂದ, ಅನಾದಿಃ= ಅನಾದಿಯಾದ, ಭಾವಾರ್ಥಃ= ಭಾವರೂಪವಾದ ವಸ್ತುವು, ನ ನಿವರ್ತತೇ= ನಿವೃತ್ತಿಯಾಗುವುದಿಲ್ಲವೋ, ತತಃ= ಆದ್ದರಿಂದ, ವಿಜ್ಞಾನಾತ್= ಅಪರೋಕ್ಷಜ್ಞಾನದಿಂದ, ಅಜ್ಞಾನಾಪಸೃತೇಃ= ಅಜ್ಞಾನದ ಅಪಸರಣದ, ಪರಂತು= ಅನಂತರದಲ್ಲಿಯಾದರೂ, ಬಂಧನಾಶಃ= ಬಂಧದ ನಾಶವು, ವಾಚ್ಯಃ= ಹೇಳಲ್ಪಡಬೇಕು.

**ಅನುವಾದ** - ಅನಾದಿಯಾದ ಭಾವವಸ್ತುವು ನಿವೃತ್ತಿಯಾಗುವುದಿಲ್ಲವಾದ್ದರಿಂದ ಅಜ್ಞಾನದ ನಾಶವನ್ನು ಒಪ್ಪಲು ಸಾಧ್ಯವೇ ಇಲ್ಲ. ಹಾಗಾದರೆ ಬಂಧದ ನಾಶ ಹೇಗೆ ಎಂದರೆ, ಅಪರೋಕ್ಷಜ್ಞಾನದಿಂದ ಅಜ್ಞಾನದ ಅಪಸರಣವಾದ ಅನಂತರದಲ್ಲಿ ಬಂಧದ ನಾಶವೆಂದೇ ಹೇಳಬೇಕು.

**ಭಾವವಿಲಾಸಿನೀ**– ತತೋ ವಾಚ್ಯ ಇತಿ ಪೂರ್ವೇಣಾನ್ವಯಃ ॥ ೨೦೮ ॥

ಕಿಂಚಾಜ್ಞಾನಾಪಸರಣಂ ತತ್ಸಂಯೋಗವಿನಾಶನಮ್ ।
ಬಂಧಶ್ಚಾಜ್ಞಾನಸಂಯೋಗ ಇತಿ ವಾಚ್ಯಂ ಖಲು ತ್ವಯಾ ।
ಸ ಚಾನಾದಿಸ್ತತೋऽಪ್ಯಾಸೀತ್ ಪ್ರಕ್ರಿಯಾ ವಿಕ್ರಿಯೈವ ತೇ ॥ ೨೦೯ ॥

**ಅರ್ಥ–** ಕಿಂಚ= ಮತ್ತು, ಅಜ್ಞಾನಾಪಸರಣಂ= ಅಜ್ಞಾನದ ಅಪಸರಣವೆಂದರೆ ತತ್ಸಂಯೋಗ ವಿನಾಶನಂ= ಅಜ್ಞಾನದ ಸಂಬಂಧವನ್ನು ನಾಶಗೊಳಿಸುವುದು, ಚ= ಮತ್ತು, ಬಂಧಃ= ಬಂಧವು, ಅಜ್ಞಾನಸಂಯೋಗಃ= ಅಜ್ಞಾನದ ಸಂಬಂಧವು ಇತಿ= ಎಂದು, ತ್ವಯಾ – ನಿನ್ನಿಂದ, ವಾಚ್ಯಃ= ಹೇಳಲ್ಪಡಬೇಕು, ಸ ಚ= ಆ ಅಜ್ಞಾನದ ಸಂಬಂಧವಾದರೂ, ಅನಾದಿಃ= ಅನಾದಿಯಾದದ್ದು, ತತಃ ಅಪಿ= ಆದ್ದರಿಂದಲೂ, ತೇ= ನಿನ್ನ, ಪ್ರಕ್ರಿಯಾ= ಪ್ರಕ್ರಿಯೆಯು, ವಿಕ್ರಿಯಾ ಏವ= ಯುಕ್ತಿ ವಿರುದ್ಧವೇ ಆಗಿದೆ.

**ಅನುವಾದ** - ಅಜ್ಞಾನದ ಅಪಸರಣವೆಂದರೆ ಅಜ್ಞಾನದ ಸಂಬಂಧದ ನಾಶ. ಬಂಧವೆಂದರೆ ಅಜ್ಞಾನದ ಸಂಬಂಧವೆಂದು ನೀನು ಹೇಳಬೇಕಾಗುತ್ತದೆ. ಆದರೆ ಈ ಪ್ರಕ್ರಿಯೆಯೂ ಸರಿಯಲ್ಲ, ಏಕೆಂದರೆ ಅಜ್ಞಾನದ ಸಂಬಂಧವೂ ಅನಾದಿಯಾಗಿದೆ ಮತ್ತು ಭಾವರೂಪವಾಗಿದೆ. ಆದ್ದರಿಂದ ಅದರ ನಾಶವನ್ನೂ ಹೇಳಲಾಗುವುದಿಲ್ಲ.

**ಭಾವವಿಲಾಸಿನೀ–** ಪ್ರಾಗುಪೇಕ್ಷಿತಂ ಚ ದೂಷಣಮಿದಾನೀಂ ಸ್ಪಷ್ಟಮಾಹ **–ಕಿಂಚೇತಿ** ॥ ೨೦೯ ॥

ಪಕ್ಷದ್ವಯೇಽಪ್ಯನಿಷ್ಟಂ ತೇ ರೂಕ್ಷಮಾಸೀದ್ ವಿಚಾರಯ ।
ವಿಚಾರ್ಯಮಾಣೇಽನಾದಿತ್ವಂ ಭಾವತ್ವಂ ಚ ದ್ವಯೋಶ್ಚ ಯತ್ ॥ ೨೧೦ ॥

**ಅರ್ಥ–** ಯತ್= ಯಾವ ಕಾರಣದಿಂದ, ವಿಚಾರ್ಯಮಾಣೇ= ವಿಚಾರ ಮಾಡಲ್ಪಡುತ್ತಿರಲು, ದ್ವಯೋಃ ಚ= ಅಜ್ಞಾನಕ್ಕೂ, ಅಜ್ಞಾನಸಂಯೋಗಕ್ಕೂ, ಅನಾದಿತ್ವಂ= ಅನಾದಿತ್ವವು, ಭಾವತ್ವಂ ಚ= ಭಾವತ್ವವೂ (ಸಿದ್ಧಂ= ಸಿದ್ಧವಾಗಿದೆಯೋ), ತತ್= ಆದ್ದರಿಂದ, ಪಕ್ಷದ್ವಯೇ ಅಪಿ= ಅಜ್ಞಾನವನ್ನೋ, ಅಜ್ಞಾನಸಂಯೋಗವನ್ನೋ ಸಂಸಾರವೆಂದು ಅಂಗೀಕರಿಸಿದ ಎರಡು ಪಕ್ಷಗಳಲ್ಲಿಯೂ, ತೇ= ನಿನಗೆ, ರೂಕ್ಷಂ= ಉಗ್ರವಾದ, ಅನಿಷ್ಟಂ=ಅನಿಷ್ಟವುಂಟಾಗುತ್ತದೆ, ವಿಚಾರಯ= ಆಲೋಚಿಸು.

**ಅನುವಾದ** - ಅಜ್ಞಾನವನ್ನೋ ಅಜ್ಞಾನಸಂಯೋಗವನ್ನೋ ಸಂಸಾರವೆಂದು ಅಂಗೀಕರಿಸಿದರೂ ಅವುಗಳೂ ಅನಾದಿಭಾವವಸ್ತುಗಳಾಗಿರುವುದರಿಂದ ಅನಿಷ್ಟವಿದ್ದೇ ಇದೆ. ಸ್ವಲ್ಪ ಆಲೋಚಿಸು. ಏಕೆಂದರೆ ಅನಾದಿಭಾವವು ನಿವೃತ್ತಿಯಾಗುವುದಿಲ್ಲ. ಆದ್ದರಿಂದ ಬಂಧವು ನಿವೃತ್ತಿಯಾಗುವುದಿಲ್ಲ ಎಂಬ ಉಗ್ರವಾದ ಅನಿಷ್ಟವು ನಿನಗೆ ಪ್ರಾಪ್ತವಾಗುತ್ತದೆ.

**ಭಾವವಿಲಾಸಿನೀ–** ಪಕ್ಷದ್ವಯೇ ಅಜ್ಞಾನಸ್ಯ ತತ್ ಸಂಯೋಗಸ್ಯ ಚ ಸಂಸಾರತ್ವಪಕ್ಷೇ । ಯತ್ ಯಸ್ಮಾತ್ ॥ ೨೧೦ ॥

ವ್ಯಾಪ್ತ್ಯೇಕಶರಣೋಽಸಿ ತ್ವಂ ವ್ಯಾಪ್ತಿಶ್ಚಾತ್ರ ಬಲೀಯಸೀ ।
ಶ್ರುತೇಃ ಪಾದಾನುಸರಣೇ ಹತಾ ತೇ ವ್ಯಾಪ್ತಿಸುಂದರೀ ॥ ೨೧೧ ॥

**ಅರ್ಥ–** ತ್ವಂ= ನೀನು ವ್ಯಾಪ್ತ್ಯೇಕಶರಣಃ= ವ್ಯಾಪ್ತಿಯೊಂದನ್ನೇ, ಆಶ್ರಯವನ್ನಾಗಿ ಹೊಂದಿದವನು, ಅಸಿ= ಆಗಿರುವಿ, ಅತ್ರ= ಈ ಅಜ್ಞಾನದ ವಿಷಯದಲ್ಲಿ, ವ್ಯಾಪ್ತಿಃ= ವ್ಯಾಪ್ತಿಯು, ಬಲೀಯಸೀ ಚ= ಪ್ರಬಲವಾಗಿದ್ದರೂ, ಶ್ರುತೇಃ= ವೇದದ, ಪಾದಾನುಸರಣೇ= ಪಾದವನ್ನು ಆಶ್ರಯಿಸಿದರೆ, ತೇ= ನಿನ್ನ ವ್ಯಾಪ್ತಿಸುಂದರೀ= ವ್ಯಾಪ್ತಿಯೆಂಬ ಸುಂದರಿಯು, ಹತಾ= ವೇದದಿಂದಲೇ ನಿರಾಕರಿಸಲ್ಪಡುತ್ತಾಳೆ.

**ಅನುವಾದ** - ನೀನು ವ್ಯಾಪ್ತಿಯೊಂದನ್ನೇ ಆಶ್ರಯಿಸುವವನು (ಜ್ಞಾನಂ ಅಜ್ಞಾನಸ್ಯೈವ ನಿವರ್ತಕಂ) ಜ್ಞಾನವು ಅಜ್ಞಾನವನ್ನು ಮಾತ್ರ ನಾಶಪಡಿಸುತ್ತದೆ ಎಂಬ ವ್ಯಾಪ್ತಿಯೂ ಪ್ರಬಲವಾದದ್ದು. ಅನಾದಿ ಭಾವರೂಪವಾದ ಅಜ್ಞಾನದ ನಿವೃತ್ತಿಗಾಗಿ ವೇದವನ್ನು ಆಶ್ರಯಿಸುತ್ತೀ ಎಂದಾದರೆ ನಿನ್ನ ವ್ಯಾಪ್ತಿ ಸುಂದರಿಯು ವೇದದಿಂದಲೇ ನಿರಾಕೃತವಾಗುತ್ತದೆ.

**ಭಾವವಿಲಾಸಿನೀ–** ಶ್ರುತೇಃ ಪಾದಾನುಸರಣೇ ಶ್ರುತಿಬಲೇನ ವ್ಯಾಪ್ತಿಮುಪೇಕ್ಷ್ಯಾನಾದಿಭಾವಸ್ಯ ವಿನಾಶಾಂಗೀಕಾರ ಇತ್ಯರ್ಥಃ । ತೇ ವ್ಯಾಪ್ತಿಸುಂದರೀ ಜ್ಞಾನಮಜ್ಞಾನಸ್ಯೈವ ನಿವರ್ತಕಮಿತಿ ವ್ಯಾಪ್ತಿಸುಂದರೀ । ಹತಾ ಶ್ರುತ್ಯೈವ ನಿರಾಕೃತಾ ॥ ೨೧೧ ॥

**ವಿವರಣೆ** - 'ಜ್ಞಾನಂ ಅಜ್ಞಾನಸ್ಯೈವ ನಿವರ್ತಕಂ' ಎಂಬ ವ್ಯಾಪ್ತಿಯು ವಸ್ತುತಃ ಕುರೂಪಿ. ವ್ಯಾಪ್ತಿಗೆ ದೃಷ್ಟಾಂತವೇ ಸೌಂದರ್ಯ. ಅದೇ ಇಲ್ಲ. ಏಕೆಂದರೆ ಸೇತುದರ್ಶನವು ಬ್ರಹ್ಮಹತ್ಯಾಪಾಪಕ್ಕೆ ನಿವರ್ತಕ ಎಂದು ಮುಂತಾಗಿ ಎಲ್ಲೆಡೆ ವ್ಯಭಿಚಾರವಿದೆ. ದೃಷ್ಟಾಂತವಿಲ್ಲ. ಆದರೂ ಅಪಹಾಸ್ಯವನ್ನು ಮಾಡುವುದಕ್ಕಾಗಿ ರಾಜರು ವ್ಯಾಪ್ತಿಯನ್ನು ವಿಪರೀತ ಲಕ್ಷಣಾದಿಂದ ಸುಂದರಿಯೆಂದು ಹೇಳುತ್ತಿದ್ದಾರೆ ಎಂದು ತಿಳಿಯಬೇಕು. ಅಥವಾ ದುರ್ಮಂತ್ರಕ್ಕೆ ಮಧ್ಯರಾತ್ರಿಯಲ್ಲಿ ಬರುವ ಒಬ್ಬ ತಾಮಸಯೋಗಿನಿಯ ಹೆಸರು 'ಸುಂದರಿ' ಎಂದು. ನಿನಗೆ ಒಲಿದು ಬಂದಿರುವ ಈ ವ್ಯಾಪ್ತಿ ಸುಂದರಿಯನ್ನು ಸಾತ್ವಿಕವಾದ ವೇದಮಂತ್ರ ನಾಶಪಡಿಸುತ್ತದೆ ಎನ್ನುತ್ತಿದ್ದಾರೆ. ವ್ಯಾಪ್ತಿ ಶಬ್ದ ಸ್ತ್ರೀಲಿಂಗದಲ್ಲಿದೆ.

ಮಮತ್ವನಾದೇರ್ಬಂಧಸ್ಯಾಪಿ ಸ್ಯಾನ್ನಾಶಃ ಶ್ರುತೇರ್ಬಲಾತ್ ।
ತತೋ ನಾತ್ಯೈವ ಸಾ ವ್ಯಾಪ್ತಿರಿತಿ ಸಿದ್ಧ್ಯೇನ್ಮನೋರಥಃ ॥ ೨೧೨ ॥

**ಅರ್ಥ–** ಮಮ, ತು= ನನ್ನ ಸಿದ್ಧಾಂತದಲ್ಲಿಯಾದರೂ, ಅನಾದೇಃ= ಅನಾದಿಯಾದ ಬಂಧಸ್ಯ, ಅಪಿ= ಬಂಧಕ್ಕೂ ನಾಶಃ= ನಾಶವು, ಶ್ರುತೇಃ= ಶ್ರುತಿಯ, ಬಲಾತ್= ಸಾಮರ್ಥ್ಯದಿಂದ, ಸ್ಯಾತ್= ಆಗುತ್ತದೆ.

**ಅನುವಾದ** - ನನಗಾದರೂ ಶ್ರುತಿಯ ಬಲದಿಂದಲೇ ಅನಾದಿಯಾದ ಅಜ್ಞಾನಕ್ಕೂ ನಾಶವುಂಟಾಗುತ್ತದೆ. ಆದ್ದರಿಂದ ಇಲ್ಲಿಯೇ ವ್ಯಾಪ್ತಿಯು ಭಗ್ನವಾದ್ದರಿಂದ ನನ್ನ ಮನೋರಥವು ಸಿದ್ಧಿಸುತ್ತದೆ.

ಯೇ ತು ಶ್ರುತಿಮನಾದೃತ್ಯ ವ್ಯಾಪ್ತೇಃ ಪೃಷ್ಠಮುಪಾಸತೇ ।
ತೇಭ್ಯೋ ಮದುಕ್ತಯುಕ್ತೀನಾಂ ಪೃಷ್ಠಂ ಕಸ್ಮಾನ್ನ ರೋಚತೇ ॥ ೨೧೩ ॥

**ಅರ್ಥ**– ಯೇ ತು= ಯಾವ ಅದ್ವೈತಿಗಳಾದರೂ, ಶ್ರುತಿಂ= ವೇದವನ್ನು, ಅನಾದೃತ್ಯ= ಆದರಿಸದೇ, ವ್ಯಾಪ್ತೇಃ= ವ್ಯಾಪ್ತಿಯ, ಪೃಷ್ಠಂ= ಬೆನ್ನನ್ನು, ಉಪಾಸತೇ= ಆಶ್ರಯಿಸುತ್ತಾರೋ, ತೇಭ್ಯಃ= ಅವರಿಗೆ, ಮದುಕ್ತಯುಕ್ತೀನಾಂ= ನಮ್ಮಿಂದ (ದ್ವೈತಿಗಳಿಂದ) ಹೇಳಲ್ಪಡುವ ಯುಕ್ತಿಗಳ, ಪೃಷ್ಠಂ= ಬೆನ್ನು, ಕಸ್ಮಾತ್= ಏತಕ್ಕಾಗಿ, ನ ರೋಚತೇ= ಇಷ್ಟವಾಗುವುದಿಲ್ಲ?

**ಅನುವಾದ** - ಅದ್ವೈತಿಗಳು 'ದೃಷ್ಟ್ವೈವ ತಂ ಮುಚ್ಯತೇ' ಎಂಬ ವೇದವನ್ನು ಆದರಿಸದೇ 'ಜ್ಞಾನಂ ಅಜ್ಞಾನಸ್ಯೈವ ನಿವರ್ತಕಂ' ಎಂಬ ವ್ಯಾಪ್ತಿಯ ಬೆನ್ನನ್ನು ಹಿಡಿಯುತ್ತಾರೆ. ಆದರೆ ದ್ವೈತಿಗಳು ಹೇಳಿದ 'ಅನಾದಿಭಾವೋ ನ ನಿರ್ವತೇ' ಎಂಬ ವ್ಯಾಪ್ತಿಯ ಬೆನ್ನನ್ನು ಮಾತ್ರ ಹಿಡಿಯುವುದಿಲ್ಲ. ವ್ಯಾಪ್ತಿಯನ್ನೇ ಆಶ್ರಯಿಸುತ್ತಾರೆ ಎಂದ ಮೇಲೆ ನಾವು ಹೇಳಿದ ವ್ಯಾಪ್ತಿಯನ್ನು ಆಶ್ರಯಿಸಬೇಕಲ್ಲವೇ! ಆದರೆ ಅನಾದಿಭಾವ ರೂಪವಾದರೂ ಅಜ್ಞಾನವು ನಿವೃತ್ತಿಯಾಗುತ್ತದೆ ಎಂದೇ ಹೇಳುತ್ತಾರೆ.

**ಭಾವವಿಲಾಸಿನೀ**– ನಾತ್ರೈವ ಅತ್ರೈವ ನ । ಏತದತಿರಿಕ್ತಸ್ಥಲೇ । ಅನಾದಿಭಾವೋ ನ ನಿವರ್ತತ ಇತಿ ವ್ಯಾಪ್ತೇಃ ಸಂಕೋಚ ಇತಿ ಭಾವಃ ॥ ೨೧೨-೨೧೩ ॥

ಅನಾದಿಭಾವನಾಶೋಽಯಂ ಯದ್ಯದೃಷ್ಟಸ್ತ್ವಯೇಷ್ಯತೇ ।
ಜ್ಞಾನಾದ್ ಬಂಧಸ್ಯೈವ ನಾಶಸ್ತರ್ಹ್ಯದೃಷ್ಟಃ ಕುತೋ ನ ತೇ ॥ ೨೧೪ ॥

**ಅರ್ಥ**– ಯದಿ= ಒಂದು ವೇಳೆ, ಅದೃಷ್ಟಃ= ಬೇರೆ ಎಲ್ಲಿಯೂ ಕಾಣದಿರುವ, ಅಯಂ= ಈ ಯಾವ, ಅನಾದಿಭಾವ ನಾಶಃ= ಅನಾದಿಭಾವರೂಪವಾದ ಅಜ್ಞಾನದ ನಾಶವು, ತ್ವಯಾ= ನಿನ್ನಿಂದ, ಇಷ್ಯತೇ= ಅಂಗೀಕರಿಸಲ್ಪಡುತ್ತದೆಯೆಂದಾದರೆ, ತರ್ಹಿ= ಆಗ, ಅದೃಷ್ಟಃ= ಬೇರೆ ಎಲ್ಲಿಯೂ ಕಾಣದಿರುವ, ಜ್ಞಾನಾದ್= ಜ್ಞಾನದಿಂದ, ಬಂಧಸ್ಯ= ಬಂಧದ, ನಾಶಃ ಏವ= ನಾಶವೇ, ತೇ= ನಿನಗೆ (ನಿನ್ನಿಂದ), ಕುತೋ ನ= ಅಂಗೀಕರಿಸಲ್ಪಡುವುದಿಲ್ಲ?

**ಅನುವಾದ** - ಅನಾದಿ ಭಾವರೂಪದ ವಸ್ತು ನಾಶವಾಗುವುದು ಎಲ್ಲಿಯೂ ಕಂಡಿಲ್ಲ. ಆದರೂ ಅನಾದಿಭಾವರೂಪವಾದ ಅಜ್ಞಾನದ ನಾಶವನ್ನು ಅಂಗೀಕರಿಸುತ್ತಿ. ಅದರಂತೆ ಎಲ್ಲಿಯೂ ಕಾಣದ ಜ್ಞಾನದಿಂದ ಬಂಧದ ನಾಶವನ್ನು ಏಕೆ

ಅಂಗೀಕರಿಸುವುದಿಲ್ಲ? ಜ್ಞಾನದಿಂದ ಬಂಧದ ನಾಶವು ಎಲ್ಲಿಯೂ ಕಂಡಿಲ್ಲವೆಂದು ಅದನ್ನು ಕೂಡಿಸುವುದಕ್ಕಾಗಿ ಬಂಧವನ್ನು ಅಜ್ಞಾನ ಕಲ್ಪಿತವೆಂದು ಏಕೆ ಹೇಳುವಿ?

**ಭಾವವಿಲಾಸಿನೀ–** ಅದೃಷ್ಟಃ ಅನ್ಯತ್ರಾದೃಷ್ಟಃ ॥ ೨೧೪ ॥

ತಪೋಽತಪ್ಯತ ಕಿಂ ಕಿಂಚಿದ್ ಭವತೋಽದೃಷ್ಟಕಲ್ಪನಾ ।
ಸೌಮಂಗಲ್ಯಮಿಯಂ ಧತ್ತೇ ಶ್ರುತಿಸೂತ್ರಾರ್ಥಪೋಷಣಾತ್ ॥ ೨೧೫ ॥

**ಅರ್ಥ–** ಭವತಃ= ನಿನ್ನ ಅದೃಷ್ಟಕಲ್ಪನಾ= ಎಲ್ಲಿಯೂ ಕಂಡರಿಯದ ಅನಾದಿಭಾವ ರೂಪವಾದ ಅಜ್ಞಾನವು ನಾಶವಾಗುತ್ತದೆ ಎಂಬ ಕಲ್ಪನೆಯು, ಕಿಂಚಿತ್= ಯಾವುದಾದರೂ, ತಪಃ= ತಪಸ್ಸನ್ನು, ಅತಪ್ಯತ ಕಿಂ= ಮಾಡಿತ್ತೇನು? ಇಯಂ= ಈ ಯಾವ ಜ್ಞಾನವೇ ಬಂಧವನ್ನು ನಾಶಪಡಿಸುತ್ತದೆ ಎಂಬ ನಮ್ಮ ಕಲ್ಪನೆಯು, ಶ್ರುತಿಸೂತ್ರಾರ್ಥ ಪೋಷಣಾತ್= ಶ್ರುತಿ ಮತ್ತು ಸೂತ್ರಗಳ ಅರ್ಥದ ರಕ್ಷಣೆ ಮಾಡುವುದರಿಂದ, ಸೌಮಂಗಲ್ಯಂ= ಮುತ್ತೈದೆತನವನ್ನು, ಧತ್ತೇ= ಹೊಂದುತ್ತದೆ.

**ಅನುವಾದ -** ಲೋಕದಲ್ಲಿ ಎಲ್ಲಿಯೂ ಕಾಣದ ಅನಾದಿಭಾವರೂಪವಾದ ಅಜ್ಞಾನವು ಜ್ಞಾನದಿಂದ ನಾಶವಾಗುತ್ತದೆ ಎಂದು ವ್ಯಾಪ್ತಿಕಲ್ಪನೆಯನ್ನು ಮಾಡುತ್ತಿರುವಿ. ಅದೇನಾದರೂ ತಪಸ್ಸನ್ನು ಮಾಡಿತ್ತೇನು? ಯಾವ ಕಾರಣವೂ ಇಲ್ಲದೆ ಈ ಕಲ್ಪನೆಯನ್ನು ಮಾಡುತ್ತಿರುವಿ. ಜ್ಞಾನವೇ ಬಂಧವನ್ನು ನಾಶಮಾಡುತ್ತದೆ ಎಂಬ ನಮ್ಮ ಮಾತು ಶ್ರುತಿ ಮತ್ತು ಬ್ರಹ್ಮಸೂತ್ರಕ್ಕೆ ಪೂರಕವಾಗಿರುವುದರಿಂದ ಮುತ್ತೈದೆತನವನ್ನೇ ಹೊಂದಿದೆ. ನಿನ್ನ ವ್ಯಾಪ್ತಿಯಾದರೋ ದೃಷ್ಟಾಂತರೂಪವಾದ ಪತಿ ಇಲ್ಲದೆ, ಬಂಧದಲ್ಲಿಯೇ ವ್ಯಭಿಚಾರ ಮಾಡುತ್ತಲೂ ಇದೆ. ಅಂಥವಳನ್ನು ನೀನು ಕಟ್ಟಿಕೊಂಡಿರುವೆ. ಅವಳೇನು ಪುಣ್ಯಮಾಡಿದಳೊ! ಎಂದು ವ್ಯಂಗ್ಯ.

**ಭಾವವಿಲಾಸಿನೀ–** ಭವತಃ ಅದೃಷ್ಟಕಲ್ಪನಾ ಅನಾದಿಭಾವನಾಶಕಲ್ಪನಾ । ಅನ್ಯತ್ರಾದೃಷ್ಟಂ ಜ್ಞಾನಸ್ಯ ಬಂಧನಿವರ್ತಕತ್ವಂ ನಾಂಗೀಕ್ರಿಯತೇ 'ಅನಾದಿಭಾವನಿವರ್ತನಂ ತು ಅದೃಷ್ಟಮಪ್ಯಂಗೀಕ್ರಿಯತ ಇತಿ ವಿಶೇಷಕಲ್ಪನಾಯಾಂ ನ ಕಿಂಚಿತ್ಕಾರಣಮಿತಿ ಭಾವಃ । ಇಯಂ ಅಸ್ಮದುಕ್ತಾಜ್ಞಾನಸ್ಯೈವ ಬಂಧನಿವರ್ತಕತ್ವರೂಪಾ । ಸೌಮಾಂಗಲ್ಯಂ ಸುವಾಸಿನೀತ್ವಮ್ । ಶ್ರುತಿಸೂತ್ರಾರ್ಥ-ಪೋಷಣಾತ್ 'ದೃಷ್ಟ್ವೈವ ತಂ ಮುಚ್ಯತೇ' ಇತಿ ಶ್ರುತೇಃ 'ಅಥಾತೋ ಬ್ರಹ್ಮಜಿಜ್ಞಾಸಾ' ಇತಿ ಸೂತ್ರಸ್ಯ ಚಾರ್ಥಪೋಷಣಾತ್ । ಯಥಾಶ್ರುತಶ್ರುತಿಸೂತ್ರಾರ್ಥ ರಕ್ಷಣಾದಿತ್ಯರ್ಥಃ । ಸುವಾಸಿನ್ಯಪಿ ಶ್ರುತ್ಯರ್ಥಂ ಕರ್ಣಭೂಷಣಂ ಸೂತ್ರಾರ್ಥಂ ಕಂಠಲಗ್ನ ಸೂತ್ರಾನುಸ್ಯೂತನೀಲಮಣಿಂ ಚ ಪೋಷಯತಿ । ಅತ ಉಭಯೋಃ ಸಾದೃಶ್ಯಮ್ । ಶ್ರುತಿಸೂತ್ರೋಪೇಕ್ಷಕಸ್ಯತವಾನ್ಯತ್ರಾದೃಷ್ಟಾ ಅನಾದಿಭಾವನಾಶಕಲ್ಪನಾ ಶ್ರುತಿ ಸೂತ್ರಾರ್ಥಪೋಷಣಯಾ ಅನುಕ್ತತ್ವಾತ್ ಪ್ರತ್ಯುತೋಕ್ತವ್ಯಾಪ್ತಿ-

ರಕ್ಷಣಾಯೈವೋಕ್ತತ್ವಾತ್ ತವ ರಂಡಾ । ಅಸ್ಮಾಕಂ ತು ಸಾಪಿ ಶ್ರುತಿಸೂತ್ರಸಂಗತ್ಯರ್ಥಮೇವ ಕಥನಾತ್ ಸುವಾಸಿನೀ ॥ ೨೧೫ ॥

**ವಿವರಣೆ** - 'ಜ್ಞಾನವು ಬಂಧವನ್ನು ನಾಶಪಡಿಸುತ್ತದೆ' ಎಂಬುದನ್ನು ಲೋಕದಲ್ಲಿ ಎಲ್ಲೂ ಕಂಡಿಲ್ಲ ಎಂಬ ಕಾರಣಕ್ಕೆ ಒಪ್ಪುವುದಿಲ್ಲ. ಆದರೆ ಅನಾದಿಭಾವರೂಪವಾದ ವಸ್ತುವು ನಾಶವಾಗುವುದು ಲೋಕದಲ್ಲಿ ಎಲ್ಲಿಯೂ ಕಾಣದಿದ್ದರೂ ಯಾವ ಕಾರಣವೂ ಇಲ್ಲದೆ ಅಂಗೀಕರಿಸುತ್ತಿರುವಿ. ಆದ್ದರಿಂದ ಅದೇನಾದರೂ ತಪಸ್ಸನ್ನು ಮಾಡಿತ್ತೇನು? ಎಂದು ಅಪಹಾಸ್ಯ ಮಾಡುತ್ತಿದ್ದಾರೆ.

ಹಾಗೆಯೇ ಈ ಶ್ಲೋಕದಲ್ಲಿ ಹೇಳಿದ ಶ್ರುತಿ ಮತ್ತು ಸೂತ್ರ ಶಬ್ದಗಳಿಗೆ ಎರಡರ್ಥಗಳಿವೆ. ವೇದ ಮತ್ತು ಕಿವಿ ಎಂಬುದು ಶ್ರುತಿ ಶಬ್ದದ ಅರ್ಥವಾದರೆ ಬ್ರಹ್ಮಸೂತ್ರ ಮತ್ತು ಕರಿಮಣಿಯನ್ನು ಪೋಣಿಸುವ ದಾರ ಎಂಬುದು ಸೂತ್ರದ ಶಬ್ದದ ಅರ್ಥ. ಈ ಹಿನ್ನೆಲೆಯಲ್ಲಿ ಚಮತ್ಕಾರ ಪೂರ್ಣವಾಗಿ ವರ್ಣಿಸುತ್ತಿದ್ದಾರೆ. ಮುತ್ತೈದೆ ತನ್ನ ಮುತ್ತೈದೆತನದ ದ್ಯೋತನೆಗಾಗಿ ಕಿವಿಗಳಲ್ಲಿ (ಶ್ರುತಿ) ಓಲೆಯನ್ನು ಕೊರಳಲ್ಲಿ ಕರಿಮಣಿಗಳನ್ನು ಪೋಣಿಸುವ ದಾರವನ್ನು (ಸೂತ್ರ) ಪೋಷಿಸುತ್ತಾಳೆ. ಅದರಂತೆ ಜ್ಞಾನವು ಬಂಧವನ್ನು ನಾಶಪಡಿಸುತ್ತದೆ ಎಂಬ ನಮ್ಮ ಕಲ್ಪನೆಯು 'ದೃಷ್ಟ್ವೈವ ತಂ ಮುಚ್ಯತೇ ನಾಪರೇಣ' ಎಂಬ ಶ್ರುತಿಯ ಮತ್ತು ಅಥಾತೋ ಬ್ರಹ್ಮಜಿಜ್ಞಾಸಾ ಎಂಬ ಸೂತ್ರದ ಅರ್ಥಪೋಷಣೆಗಾಗಿ ಇರುವುದರಿಂದ ಮುತ್ತೈದೆತನವನ್ನೇ ಹೊಂದಿದೆ. ಆದರೆ ಶ್ರುತಿಯನ್ನು ಕಡೆಗಣಿಸಿ ಯುಕ್ತಿಯ ರಕ್ಷಣೆಗಾಗಿ ಮಾಡಲಾದ ನಿನ್ನ ಅನಾದಿಭಾವರೂಪ ಅಜ್ಞಾನದ ನಾಶದ ಕಲ್ಪನೆಯು ವಿಧವೆಯೇ ಆಗಿದೆ. ನಮ್ಮ ಕಲ್ಪನೆಯು ಶ್ರುತಿ ಸೂತ್ರಗಳ ಸಂಗತಿಗಾಗಿ ಇರುವುದರಿಂದ ಮುತ್ತೈದೆಯೇ ಸರಿ.

ತತ್ರೈವ ಚೇಯಂ ದೃಷ್ಟಾರ್ಥಾ ನಾಭೂಚ್ಚಾದೃಷ್ಟಕಲ್ಪನಾ ।
ಭವತಃ ಕಲ್ಪನಾಮೂಲಂ ನ ಚಾಕ್ಷಂ ನಾಗಮೋಽನುಮಾ ॥ ೨೧೬ ॥

**ಅರ್ಥ–** ಇಯಂ= ಈ ಯಾವ ಜ್ಞಾನದಿಂದಲೇ ಬಂಧವು ನಾಶವಾಗುತ್ತದೆ ಎಂಬ ಕಲ್ಪನೆಯು, ತತ್ರ ಏವ ಚ= ವೇದ ಮತ್ತು ಬ್ರಹ್ಮಸೂತ್ರಗಳಲ್ಲಿಯೇ, ದೃಷ್ಟಾರ್ಥಾ= ಕಾಣಲ್ಪಟ್ಟ ಅರ್ಥವುಳ್ಳದ್ದಾಗಿದೆ. (ಅತಃ= ಆದ್ದರಿಂದ), ಅದೃಷ್ಟಕಲ್ಪನಾ= ಕಾಣದ್ದನ್ನು ಕಲ್ಪಿಸುವುದು, ನ ಅಭೂತ್= ಆಗಲಿಲ್ಲ, ಭವತಃ= ನಿನ್ನ, ಕಲ್ಪನಾಮೂಲಂ= ಕಲ್ಪನೆಗೆ ಮೂಲವು, ಅಕ್ಷಂ= ಪ್ರತ್ಯಕ್ಷವೂ, ನ= ಅಲ್ಲ, ಅನುಮಾ= ಅನುಮಾನವೂ, ನ= ಅಲ್ಲ, ಆಗಮಃ ಚ= ಆಗಮವೂ ಕೂಡ, ನ= ಅಲ್ಲ

**ಅನುವಾದ** - ಜ್ಞಾನದಿಂದಲೇ ಬಂಧನಾಶವಾಗುತ್ತದೆ ಎಂಬ ಕಲ್ಪನೆಯು 'ದೃಷ್ಟ್ವೈವ ತಂ ಮುಚ್ಯತೇ' ಎಂಬ ಶ್ರುತಿಯಲ್ಲಿ ಮತ್ತು 'ಅಥಾತೋ ಬ್ರಹ್ಮಜಿಜ್ಞಾಸಾ' ಎಂಬ

ಸೂತ್ರದಲ್ಲಿಯೂ ಕಂಡಿದೆ. ಆದ್ದರಿಂದ ನಮ್ಮದು ಅದೃಷ್ಟ ಕಲ್ಪನೆಯಲ್ಲ. ಅನಾದಿಭಾವರೂಪವಾದ ಅಜ್ಞಾನವು ನಾಶವಾಗುತ್ತದೆ ಎಂಬ ನಿಮ್ಮ ಕಲ್ಪನೆಗೆ ಪ್ರತ್ಯಕ್ಷವೂ ಆಧಾರವಲ್ಲ. ಅನುಮಾನವೂ ಅಲ್ಲ. ಆಗಮವೂ ಅಲ್ಲ. ಆದ್ದರಿಂದ ನಿಮ್ಮ ಕಲ್ಪನೆಯು ಮಾತ್ರ ಅದೃಷ್ಟಕಲ್ಪನೆಯಾಗಿದೆ.

**ಭಾವವಿಲಾಸಿನೀ–**ಅಂಗೀಕೃತ್ಯೇದಮುದಿತಮ್ । ವಸ್ತುತೋಽಸ್ಮಾಕಮುಭಯತ್ರಾಪಿ ನಾದೃಷ್ಟಕಲ್ಪನೇತ್ಯಾಹ **– ತತ್ರೇತಿ ॥** ತತ್ರ ಶ್ರುತಿಸೂತ್ರಯೋಃ । ನನು ತರ್ಹಿ ಮಮಾಪಿ ವ್ಯಾಪ್ತಿರೇವ ಕಲ್ಪನಾಮೂಲಂ ಭವಿಷ್ಯತೀತಿ ಚೇತ್ ನ । ಕಲ್ಪನಾಘಾತಕವ್ಯಾಪ್ತೇರಪ್ಯುಕ್ತತ್ವೇನ ತುಲ್ಯಾಯ ವ್ಯಯತ್ವಾತ್। ಕಲ್ಪನಾಮೂಲತ್ವಾದ್ವ್ಯಾಪ್ತೇರ್ನಿರ್ಮೂಲತ್ವಾಚ್ಚ ನೋಕ್ತಕಲ್ಪನಾಮೂಲತ್ವಮಿತ್ಯಾಹ – **ಭವತ ಇತಿ ॥** ಕಲ್ಪನಾಯಾ ಅದೃಷ್ಟಕಲ್ಪನಾಮೂಲ ವ್ಯಾಪ್ತಿಕಲ್ಪನಾಯಾಃ ॥ ೨೧೬ ॥

**ವಿವರಣೆ** - ಜ್ಞಾನವು ಬಂಧನಾಶಕವೆನಿಸುವುದು ಶ್ರುತಿ ಸೂತ್ರ ಮೂಲಕವಾಗಿದೆ ಎಂದು ಹೇಳುವುದಾದರೆ, ಅದ್ವೈತಿ ಹೇಳುತ್ತಾನೆ, ಜ್ಞಾನವು ಅಜ್ಞಾನನಾಶಕವೆನಿಸುವುದೂ ವ್ಯಾಪ್ತಿ ಮೂಲಕವಾಗಿದೆ ಎನ್ನುತ್ತೇನೆ ಎಂದು. ಆದರೆ ಅನಾದಿಭಾವಕ್ಕೆ ನಾಶವಿಲ್ಲ ಎಂಬ ವ್ಯಾಪ್ತಿಯನ್ನು ನಾವು ಹೇಳಿದ್ದೇವೆ. ಅದು ಜ್ಞಾನವು ಅಜ್ಞಾನಕ್ಕೆ ನಾಶಕವೆಂಬ ನಿನ್ನ ಕಲ್ಪನೆಗೆ ಘಾತಕವಾಗಿದೆ. ಹೀಗಾಗಿ ವ್ಯಾಪ್ತಿ 'ಸಮಾಯವ್ಯಯ' ನಿನ್ನ ಕಲ್ಪನೆಗೆ ಅನುಕೂಲವಾದ ವ್ಯಾಪ್ತಿಯಂತೆ ಘಾತಕವಾದ ವ್ಯಾಪ್ತಿಯಿದೆ. ಅದರಿಂದ ನನ್ನ ಕಲ್ಪನೆಗೆ ವ್ಯಾಪ್ತಿಯು ಮೂಲ ಎನ್ನಬೇಡ. ಹೀಗಾಗಿ ನಿನ್ನ ಕಲ್ಪನೆ ನಿರ್ಮೂಲ ಎನ್ನುತ್ತೇವೆ.

ಜ್ಞಾನಾಭಾವಸ್ಯ ತು ಜ್ಞಾನಂ ನಾಶಕಂ ನಾಶ ಏವ ವಾ ।
ಭಾವರೂಪಂ ತವಾಜ್ಞಾನಂ ಜ್ಞಾನಾನ್ನಶ್ಯತ್ ಕ್ವ ದೃಶ್ಯತೇ ॥ ೨೧೭ ॥

**ಅರ್ಥ–** ಜ್ಞಾನಾಭಾವಸ್ಯ= ಜ್ಞಾನಭಾವರೂಪವಾದ ಅಜ್ಞಾನಕ್ಕೆ, ಜ್ಞಾನಂ= ಜ್ಞಾನವು, ಅಂದರೆ ಜ್ಞಾನೋತ್ಪತ್ತಿ ಕ್ಷಣವು, ನಾಶಕಂ= ನಾಶಕವಾಗಿದೆ, ವಾ= ಅಥವಾ, ನಾಶಃ ಏವ= ನಾಶರೂಪವೇ ಆಗಿದೆ. ತವ= ನಿನ್ನ, ಭಾವರೂಪಂ= ಭಾವರೂಪವಾದ, ಅಜ್ಞಾನಂ= ಅಜ್ಞಾನವು, ಜ್ಞಾನಾತ್= ಜ್ಞಾನದಿಂದ, ನಶ್ಯತ್= ನಾಶವಾಗುವುದು, ಕ್ವ ದೃಶ್ಯತೇ= ಎಲ್ಲಿ ಕಾಣಲ್ಪಡುತ್ತದೆ?

**ಅನುವಾದ** - ಜ್ಞಾನಾಭಾವರೂಪವಾದ ಅಜ್ಞಾನವನ್ನು ಜ್ಞಾನವು ನಾಶಗೊಳಿಸುವುದು ಅಥವಾ ತಾನೇ ಅದರ ನಾಶರೂಪವಾಗಿರುವುದು ಲೋಕದಲ್ಲಿ ಕಂಡಿದೆ. ಆದರೆ ನೀನು ಕಲ್ಪಿಸಿದ ಭಾವರೂಪ ಅಜ್ಞಾನದ ನಾಶವು ಎಲ್ಲಿ ಕಂಡಿದೆ? ಆದ್ದರಿಂದ ನಿನ್ನ ಕಲ್ಪನೆಗೆ ಪ್ರತ್ಯಕ್ಷವು ಮೂಲವಲ್ಲವೆಂದು ಸಿದ್ಧವಾಯಿತು.

**ಭಾವವಿಲಾಸಿನೀ–** ಅಕ್ಷಾಭಾವಮೇವೋಪಪಾದಯತಿ ॥ **ಜ್ಞಾನಾಭಾವಸ್ಯೇತಿ** ॥ ಜ್ಞಾನಾಭಾವರೂಪಾಜ್ಞಾನಸ್ಯ ಜ್ಞಾನಂ ನಾಶಕಂ ವಾ ತನ್ನಾಶರೂಪಂ ವಾ ಸರ್ವತ್ರದೃಷ್ಟಮ್ । ಭಾವರೂಪಾಜ್ಞಾನಸ್ಯ ತು ಜ್ಞಾನಂ ನಾಶಕಂ ವಾ ತನ್ನಾಶರೂಪಂ ವಾ ನ ಕ್ವಾಪಿ ದೃಷ್ಟಮ್ । ಅತಸ್ತದ್ವ್ಯಾಪ್ತೇಃ ಪ್ರತ್ಯಕ್ಷಂ ನ ಮೂಲಮಿತಿ ಭಾವಃ ॥ ೨೧೭ ॥

ಶಬ್ದಸಾಮ್ಯೇನ ತು ವ್ಯಾಪ್ತಿಃ ಸ್ವರ್ಗಶೃಂಗಿತ್ವಸಾಧಿಕಾ ।
ಶಬ್ದಸಾಮ್ಯಂ ಚ ನಾಸ್ತ್ಯತ್ರ ಯತ್ತೇಽಜ್ಞಾನಂ ಪರಸ್ಯ ನ ॥ ೨೧೮ ॥

**ಅರ್ಥ–** ಶಬ್ದಸಾಮ್ಯೇನ= ಶಬ್ದಸಮಾನತೆಯಿರುವುದರಿಂದ, ವ್ಯಾಪ್ತಿಃ ತು= ವ್ಯಾಪ್ತಿಯಾದರೂ, ಸ್ವರ್ಗಶೃಂಗಿತ್ವಸಾಧಿಕಾ= ಸ್ವರ್ಗಕ್ಕೆ ಶೃಂಗಿತ್ವವನ್ನು ಸಾಧಿಸಬೇಕಾದೀತು!, ಯತ್= ಯಾವಕಾರಣದಿಂದ, ತೇ= ನಿನಗೆ, ಅಜ್ಞಾನಂ= ಅಜ್ಞಾನವು ಭಾವರೂಪ ವಾದದ್ದೋ, ಪರಸ್ಯ= ಪ್ರತಿವಾದಿಗಳಾದ, ತಾರ್ಕಿಕ ಮುಂತಾದವರಿಗೆ, ನ= ಭಾವರೂಪ ವಾದದ್ದಲ್ಲವೋ, ತತ್= ಆ ಕಾರಣದಿಂದ, ಅತ್ರ= ಈ ಅಜ್ಞಾನದ ವಿಷಯದಲ್ಲಿ, ಶಬ್ದಸಾಮ್ಯಂ ಚ= ಶಬ್ದದ ಸಮಾನತೆಯೂ, ನಾಸ್ತಿ= ಇರುವುದಿಲ್ಲ.

**ಅನುವಾದ -** ಶಬ್ದಸಾಮ್ಯವಿರುವುದರಿಂದ ವ್ಯಾಪ್ತಿಯು ಭಾವರೂಪ ಅಜ್ಞಾನಕ್ಕೆ ನಾಶವನ್ನು ಸಾಧನೆ ಮಾಡುತ್ತದೆ ಎಂದಾದರೆ ಸ್ವರ್ಗಕ್ಕೂ ಕೋಡಿದೆ ಎಂದೂ ಸಾಧನೆ ಮಾಡಬೇಕಾಗುತ್ತದೆ. ಮತ್ತು ಇಲ್ಲಿ ಶಬ್ದ ಸಾಮ್ಯವೂ ಇಲ್ಲ. ಏಕೆಂದರೆ ನಿನ್ನ ಮತದಲ್ಲಿ ಅಜ್ಞಾನವೆಂದರೆ ಭಾವರೂಪವಾದದ್ದು. ಪ್ರತಿವಾದಿಗಳಾದ ತಾರ್ಕಿಕರ ಮತದಲ್ಲಿ ಅಜ್ಞಾನವು ಭಾವರೂಪವಾದದ್ದಲ್ಲ. ಅಭಾವರೂಪವಾದದ್ದೇ. ಹೀಗಾಗಿ ಭಾವರೂಪವಾದ ಅಜ್ಞಾನ ಎಂಬುದು ಶಶವಿಷಾಣದಂತೆ ಅಪ್ರಾಮಾಣಿಕ ವಾದ್ದರಿಂದ ಪ್ರತಿವಾದಿಗಳು ಯಾರೂ ಅದನ್ನು 'ಅಜ್ಞಾನ' ಎಂಬ ಶಬ್ದದಿಂದ ಹೇಳುವುದಿಲ್ಲ. ಅಭಾವರೂಪ ಅಜ್ಞಾನವನ್ನೇ ಅಜ್ಞಾನ ಶಬ್ದದಿಂದ ಹೇಳುತ್ತಾರೆ. ಹೀಗಾಗಿ ಶಬ್ದಸಾಮ್ಯವಿಲ್ಲ.

**ಭಾವವಿಲಾಸಿನೀ–** ನನು ಜ್ಞಾನಭಾವಸ್ಯ ಜ್ಞಾನವಿನಾಶ್ಯತ್ವೇ ಶಬ್ದಸಾಮ್ಯದ್ಭಾವರೂಪಾಜ್ಞಾನಸ್ಯಾಪಿ ಜ್ಞಾನನಾಶ್ಯತ್ವಸಿದ್ಧಿರಿತ್ಯತ ಆಹ – **ಶಬ್ದಸಾಮ್ಯೇನೇತಿ** ॥ ಗೋಶಬ್ದವಾಚ್ಯತ್ವೇನ(ಗೃ)ಘೃಷ್ಟಿವತ್ ಸ್ವರ್ಗಸ್ಯಾಪಿ ಶೃಂಗಿತ್ವಪ್ರಸಂಗಾತ್ ಶಬ್ದಸಾಮ್ಯೇನ ನ ವ್ಯಾಪ್ತಿರ್ವಾಚ್ಯೇತಿ ಭಾವಃ । ದೋಷಾಂತರಂ ಚಾಹ – **ಶಬ್ದಸಾಮ್ಯಮಿತಿ** ॥ ಯತ್ ಯಸ್ಮಾತ್ । ಅಜ್ಞಾನಂ ಭಾವರೂಪಾಜ್ಞಾನಮ್ । ಪರಸ್ಯ ತಾರ್ಕಿಕಾದೇಃ ಪ್ರತಿವಾದಿನಃ । ಜ್ಞಾನಮಜ್ಞಾನಸ್ಯೈವ ನಾಶಕಮಿತ್ಯಾಕಾರಕವಾಕ್ಯಾ-ದರ್ಶನೇನ ಸೇತುದರ್ಶನಾತ್ ಪಾಪ ನಿವೃತ್ತಿದರ್ಶನೇನ ಚ ಆಗಮಾನುಮಾನಾಭಾವಃ ಸ್ಪಷ್ಟತ್ವಾನ್ನೋಕ್ತಃ ॥ ೨೧೮ ॥

**ವಿವರಣೆ** - ಜ್ಞಾನಭಾವಕ್ಕೂ ಭಾವರೂಪ ಅಜ್ಞಾನಕ್ಕೂ ಅಜ್ಞಾನವೆಂಬ ಶಬ್ದಸಾಮ್ಯವಿದೆ ಯಾದ್ದರಿಂದ ಭಾವರೂಪ ಅಜ್ಞಾನಕ್ಕೂ ನಾಶವಿದೆಯೆಂದು ವ್ಯಾಪ್ತಿಯಿಂದ ಸಿದ್ಧವಾಗುತ್ತದೆ ಎಂಬುದು ಅದ್ವೈತಿಗಳ ವಾದ. ಇದಕ್ಕೆ ವಾದಿರಾಜರ ಉತ್ತರ. ಶಬ್ದಸಾಮ್ಯದಿಂದ ಏನನ್ನೂ ಸಾಧಿಸಲಾಗದು. ಗೋಶಬ್ದವನ್ನು ಹಸುವಿನಲ್ಲೂ ಸ್ವರ್ಗದಲ್ಲೂ ಪ್ರಯೋಗಿಸುತ್ತಾರೆ. ಹಸುವಿಗೆ ಶೃಂಗಿತ್ವ (ಕೋಡು) ವಿರುವುದರಿಂದ ಸ್ವರ್ಗಕ್ಕೂ ಶೃಂಗಿತ್ವವಿದೆಯೆಂದು ಸಾಧಿಸಲಾದೀತೇ? ಆದ್ದರಿಂದ ಶಬ್ದಸಾಮ್ಯದಿಂದ ಭಾವರೂಪ ಅಜ್ಞಾನಕ್ಕೆ ನಾಶವನ್ನು ಸಾಧಿಸಲು ಸಾಧ್ಯವಿಲ್ಲ.

ಹಿಂದಿನ ಶ್ಲೋಕದಲ್ಲಿ ಅದ್ವೈತಿಗಳ ಕಲ್ಪನೆಗೆ ಪ್ರತ್ಯಕ್ಷವು ಪ್ರಮಾಣವಲ್ಲವೆಂದು ಸಮರ್ಥಿಸಿದ ವಾದಿರಾಜರು. ಆಗಮ ಮತ್ತು ಅನುಮಾನ ಪ್ರಮಾಣಗಳು ಇಲ್ಲವೆಂದು ಪ್ರತ್ಯೇಕವಾಗಿ ಸಮರ್ಥಿಸಲಿಲ್ಲ. ಏಕೆಂದರೆ 'ಜ್ಞಾನಂ ಅಜ್ಞಾನಸ್ಯೈವ ವಿನಾಶಕಂ' ಎಂಬ ಆಗಮ ವಾಕ್ಯ ಎಲ್ಲಿಯೂ ಕಂಡಿಲ್ಲ. ಅಪ್ಪುಮಾತ್ರವಲ್ಲದೆ ಸೇತುದರ್ಶನದಿಂದ (ಅಪರೋಕ್ಷ ಜ್ಞಾನದಿಂದ) ಪಾಪನಿವೃತ್ತಿಯಾದದ್ದು ಕಂಡಿದೆಯಾದ್ದರಿಂದ ವ್ಯಾಪ್ತಿಗೆ ಭಂಗವೂ ಇರುವುದರಿಂದ ಅನುಮಾನವು ಪ್ರಮಾಣವಲ್ಲವೆಂಬುದು ಸ್ಪಷ್ಟವಾಗಿರುವುದರಿಂದ ಪ್ರತ್ಯೇಕವಾಗಿ ಹೇಳಲಿಲ್ಲ.

**ಯತಃ ಸಾಧಕಮಾನಾಖ್ಯಪತಿರ್ವ್ಯಾಪ್ತೇರ್ಮೃತೋಽಭವತ್ ।**
**ಅತಸ್ತೇ ವಿಧವಾಸಂಗಾನ್ಮಹಾನ್ ದೋಷೋ ಭವಿಷ್ಯತಿ ॥ ೨೧೯ ॥**

**ಅರ್ಥ**– ಯತಃ= ಯಾವ ಕಾರಣದಿಂದ, ವ್ಯಾಪ್ತೇಃ= ವ್ಯಾಪ್ತಿಯ ಸಾಧಕಮಾನಾಖ್ಯಪತಿಃ= ಸಾಧಕಪ್ರಮಾಣವೆಂಬ ಗಂಡನು ಮೃತಃ= ಮೃತನಾಗಿದ್ದಾನೋ, ಅತಃ= ಆದ್ದರಿಂದ, ತೇ= ನಿನಗೆ, ವಿಧವಾಸಂಗಾತ್ = ವಿಧವೆಯ ಸಂಪರ್ಕದಿಂದ, ಮಹಾನ್= ದೊಡ್ಡದಾದ, ದೋಷಃ= ದೋಷವು, ಭವಿಷ್ಯತಿ= ಆಗುತ್ತದೆ.

**ಅನುವಾದ** - ವ್ಯಾಪ್ತಿಗೆ ಯಾವುದಾದರೊಂದು ಪ್ರಮಾಣದ ಆಧಾರವಿರಲೇಬೇಕು. ವ್ಯಾಪ್ತಿಯೆಂಬ ಸ್ತ್ರೀಗೆ ಪ್ರಮಾಣವು ಪತಿಯಿದ್ದಂತೆ. ಆದರೆ 'ಜ್ಞಾನಂ ಅಜ್ಞಾನಸ್ಯೈವ ನಾಶಕಂ' ಎಂಬ ವ್ಯಾಪ್ತಿಗೆ ಯಾವುದೇ ಪ್ರಮಾಣವಿಲ್ಲದ್ದರಿಂದ ಗಂಡನನ್ನು ಕಳೆದುಕೊಂಡ ಸ್ತ್ರೀಯಂತಾಗಿದೆ. ಅಂತಹ ವ್ಯಾಪ್ತಿಯನ್ನು ಆಶ್ರಯಿಸಿದ್ದರಿಂದ ವಿಧವೆಯ ಸಂಪರ್ಕದಿಂದ ಉಂಟಾದ ದೋಷವು ನಿನಗೆ ಬರುತ್ತದೆಯೆಂದು ಅಪಹಾಸ ಮಾಡುತ್ತಿದ್ದಾರೆ.

**ಭಾವವಿಲಾಸಿನೀ**– ಪ್ರಮಾಣಮೂಲವ್ಯಾಪ್ತಿಮಂಗೀಕುರ್ವಂತಂ ಪರಂ ಸಾಹಿತ್ಯ-ಮುದ್ರಯಾಽಪಹಸತಿ ॥ ಯತ ಇತಿ ॥ ೨೧೯ ॥

ವ್ಯಾಪ್ತಿಭಂಗಾಜ್ಜಗದ್ಭಂಗಂ ದೋಷಂ ಮನ್ಯೇ ಮಹತ್ತರಮ್ ॥ ೨೨೦ ॥

**ಅರ್ಥ–** ವ್ಯಾಪ್ತಿಭಂಗಾತ್= ವ್ಯಾಪ್ತಿಭಂಗಕ್ಕಿಂತಲೂ, ಜಗದ್ಭಂಗಂ= ಜಗತ್ತಿನ ನಾಶವನ್ನು ಮಹತ್ತರಂ ದೋಷಂ= ದೊಡ್ಡ ದೋಷವನ್ನಾಗಿ, ಮನ್ಯೇ= ತಿಳಿಯುತ್ತೇನೆ.

**ಅನುವಾದ** - 'ಜ್ಞಾನಂ ಅಜ್ಞಾನಸ್ಯೈವ ನಿವರ್ತಕಂ' ಎಂಬ ವ್ಯಾಪ್ತಿಗೆ ಭಂಗ ಬರಬಾರದೆಂದು ಬೇರೆ ಉಪಾಯಗಳಿಂದ ರಕ್ಷಿಸಲು ಹೊರಟರೆ ಜಗತ್ತು ಅಜ್ಞಾನ ಕಲ್ಪಿತಮಿಥ್ಯೆಯಾಗಬೇಕಾಗುತ್ತದೆ. ಸತ್ಯವಾದ ಜಗತ್ತನ್ನು ಮಿಥ್ಯೆಯೆಂದು ಹೇಳಿ ಜಗತ್ತಿಗೆ ಹಾನಿ ಮಾಡುವುದು ದೊಡ್ಡ ದೋಷವಾಗುತ್ತದೆ. ಆದಕ್ಕಿಂತ ವ್ಯಾಪ್ತಿಗೆ ಭಂಗ ತರುವುದೇ ಲೇಸು.

**ಭಾವವಿಲಾಸಿನೀ–** ಕಿಂಚ ಜಗದ್ಭಂಜಕವ್ಯಾಪ್ತಿಭಂಗಕರಣಮೇವ ನ್ಯಾಯ್ಯಮಿತ್ಯಾಹ - **ವ್ಯಾಪ್ತಿಭಂಗಾದಿತಿ** ॥ ೨೨೦ ॥

ನಿತ್ಯಂ ಸ್ವರೂಪವಿಜ್ಞಾನಂ ಸ್ವಕಾರ್ಯೈಃ ಸಹ ವರ್ತತೇ ।
ಇತಿ ತೇಽಭಿಮತಂ ತಸ್ಮಾತ್ ತತ್ರಾವರಣವಾಗ್ ವೃಥಾ ॥ ೨೨೧ ॥

**ಅರ್ಥ–** 'ಸ್ವರೂಪವಿಜ್ಞಾನಂ= ಜೀವಸ್ವರೂಪವಾದ ವಿಜ್ಞಾನವು ನಿತ್ಯಂ= ಯಾವಾಗಲೂ, ಸ್ವಕಾರ್ಯೈಃ= ತನ್ನ ಕಾರ್ಯಗಳಾದ ವಿಷಯವನ್ನು ವಿಷಯೀಕರಿಸುವಿಕೆ ಮುಂತಾದವು ಗಳಿಂದ, ಸಹ= ಕೂಡಿಕೊಂಡು, ವರ್ತತೇ= ಇರುತ್ತದೆ, ಇತಿ= ಎಂಬುದಾಗಿ, ತೇ= ನಿನ್ನ, ಅಭಿಮತಂ= ಅಭಿಪ್ರಾಯವಾಗಿದೆ, ತಸ್ಮಾತ್= ಆದ್ದರಿಂದ, ತತ್ರ= ಅಜ್ಞಾನದಲ್ಲಿ ಆವರಣವಾಕ್= ಆವರಕವೆಂಬ ಮಾತು, ವೃಥಾ= ವ್ಯರ್ಥವಾದದ್ದು.

**ಅನುವಾದ** - ಜೀವನ ಸ್ವರೂಪಭೂತವಾದ ಜ್ಞಾನವು ವಿಷಯನಾದ ಆತ್ಮನನ್ನು ವಿಷಯೀಕರಿಸುತ್ತಾ ಯಾವಾಗಲೂ ಇರುತ್ತದೆ ಎಂಬುದು ಮಾಯಾವಾದಿಗಳ ಅಭಿಪ್ರಾಯ. ಅಂಥ ಜ್ಞಾನಕ್ಕೆ ಅಜ್ಞಾನವು ಯಾವುದಕ್ಕೂ ಆವರಕವಲ್ಲದ್ದರಿಂದ ಅದನ್ನು ಆವರಕವೆಂದು ಹೇಳುವುದೇ ವ್ಯರ್ಥವಾಗುತ್ತದೆ.

**ಭಾವವಿಲಾಸಿನೀ– ಅನ್ಯೋನ್ಯಾಶ್ರಯಾಚ್ಚ ನೇಯಂ ವ್ಯಾಪ್ತಿರ್ವಕ್ತುಂ ಶಕ್ಯೇತ್ಯಾಹ –ನಿತ್ಯಮಿತಿ** ॥ ಸ್ವರೂಪವಿಜ್ಞಾನಂ ಜೀವಸ್ವರೂಪವಿಜ್ಞಾನಂ ಸ್ವಕಾರ್ಯೈಃ ಸ್ವವಿಷಯವಿಷಯೀಕರಣಾದ್ಯೈಃ । ಸ್ವರೂಪಜ್ಞಾನಸ್ಯ ನಿತ್ಯತ್ವಾತ್ ಜ್ಞಾನಂ ಜ್ಞಾನಕಾರ್ಯಂ ಚ ಸರ್ವದಾ ವರ್ತತ ಇತಿ ಮಾಯಾವಾದಿನಾಂ ಮತಮ್ । ತಸ್ಮಾತ್ಸ್ವರೂಪಜ್ಞಾನೇ ಆವ್ರಿಯಮಾಣಸ್ಯಾಭಾವೇನಾವರಣ-ಕೃತ್ಯಾಭಾವಾತ್ ॥ ೨೨೧ ॥

ಆವೃಣೀತೇ ಮನೋವೃತ್ತಿಜ್ಞಾನಮಿತ್ಯೇವ ತತ್ ತ್ವಯಾ ।
ವಾಚ್ಯಮಾವರಣಂ ತಸ್ಮಾತ್ ಕಥಂ ನಾನ್ಯೋನ್ಯಸಂಶ್ರಯಃ ॥ ೨೨೨ ॥

**ಅರ್ಥ–** ತತ್= ಅಜ್ಞಾನವು ಮನೋವೃತ್ತಿಜ್ಞಾನಂ ಏವ= ಅಂತಃಕರಣ ಪರಿಣಾಮರೂಪವಾದ ಜ್ಞಾನವನ್ನೇ, ಆವೃಣೀತೇ= ಆವರಿಸುತ್ತದೆ, ಇತಿ ಏವ= ಎಂಬುದಾಗಿಯೇ, ತತ್= ಆ ಅಜ್ಞಾನವು, ಆವರಣಂ= ಆವರಕವಾಗಿ, ತ್ವಯಾ= ನಿನ್ನಿಂದ, ವಾಚ್ಯಂ= ಹೇಳಲ್ಪಡಬೇಕು. ತಸ್ಮಾತ್= ಆದ್ದರಿಂದ, ಕಥಂ= ಹೇಗೆ ತಾನೆ, ನ ಅನ್ಯೋನ್ಯಾಶ್ರಯಃ =ಅನ್ಯೋನ್ಯಾಶ್ರಯ ದೋಷವು ಬರುವುದಿಲ್ಲ?

**ಅನುವಾದ -** ಅಜ್ಞಾನವು ಅಂತಃಕರಣಪರಿಣಾಮರೂಪವಾದ ಜ್ಞಾನವನ್ನು ಆವರಿಸುತ್ತದೆ ಎಂದೇ ಅಜ್ಞಾನವನ್ನು ಆವರಕವೆಂದು ಹೇಳಬೇಕು. ಆಗ ಅನ್ಯೋನ್ಯಾಶ್ರಯ ದೋಷವು ಬಂದೇ ಬರುತ್ತದೆ.

**ಭಾವವಿಲಾಸಿನೀ–** ತತ್ ಅಜ್ಞಾನಮ್ ॥ ೨೨೨ ॥

**ವಿವರಣೆ -** ಜ್ಞಾನವು ಎರಡು ವಿಧ. ಒಂದು ಸ್ವರೂಪ ಜ್ಞಾನ. ಮತ್ತೊಂದು ಅಂತಃಕರಣ ಪರಿಣಾಮ ಜ್ಞಾನ ಎಂದು. ಸ್ವರೂಪಜ್ಞಾನ ನಿತ್ಯವಾದದ್ದು. ಯಾವಾಗಲೂ ಇದ್ದೇ ಇರುತ್ತದೆ. ಅದಕ್ಕೆ ಅಜ್ಞಾನವು ಆವರಕವೆಂದು ಹೇಳಲಾಗುವುದಿಲ್ಲ. ಅಂತಃಕರಣ ಪರಿಣಾಮ ಜ್ಞಾನಕ್ಕೇ ಆವರಕವೆಂದು ಹೇಳಲೇಬೇಕು. ಆಗ ಅನ್ಯೋನ್ಯಾಶ್ರಯವಿದ್ದೇ ಇದೆ ಎಂದು ಹೇಳುತ್ತಿದ್ದಾರೆ.

**ಯದಾವರಣನಾಶೇ ಸ್ಯಾದಪರೋಕ್ಷಪ್ರಮಾ ತವ ।**
**ತಯೈವ ತಸ್ಯ ನಾಶೇ ಚ ಕಥಂ ನಾನ್ಯೋನ್ಯಸಂಶ್ರಯಃ ॥ ೨೨೩ ॥**

**ಅರ್ಥ–** ಯತ್= ಏಕೆಂದರೆ, ಆವರಣನಾಶೇ= ಆವರಕವಾದ ಅಂದರೆ ಪ್ರತಿಬಂಧಕವಾದ ಅಜ್ಞಾನವು ನಾಶವಾಗುತ್ತಿರಲು, ತದಾ= ಆಗ, ತವ= ನಿನಗೆ ಅಪರೋಕ್ಷಪ್ರಮಾ= ಅಪರೋಕ್ಷ ಜ್ಞಾನವು, ಸ್ಯಾತ್= ಉಂಟಾಗುತ್ತದೆ, ತಯಾ ಏವ= ಅಪರೋಕ್ಷಜ್ಞಾನದಿಂದಲೇ, ತಸ್ಯ= ಆವರಣದ, ನಾಶೇ= ನಾಶವನ್ನು ಒಪ್ಪಿಕೊಂಡಲ್ಲಿ, ಕಥಂ ಚ= ಹೇಗೆ ತಾನೆ, ನ ಅನ್ಯೋನ್ಯಾಶ್ರಯಃ= ಅನ್ಯೋನ್ಯಾಶ್ರಯವು ಬರುವುದಿಲ್ಲ?

**ಅನುವಾದ -** ಪ್ರತಿಬಂಧಕವಾದ ಅಜ್ಞಾನವು ನಾಶವಾದ ಮೇಲೆಯೇ ಅಪರೋಕ್ಷಜ್ಞಾನವು ಬರುತ್ತದೆ. ಅಪರೋಕ್ಷಜ್ಞಾನವು ಬಂದಮೇಲೆ ಪ್ರತಿಬಂಧಕ ಅಜ್ಞಾನವು ನಾಶವಾಗುತ್ತದೆ ಎಂದು ಒಪ್ಪಿಕೊಂಡರೆ ಅಪರೋಕ್ಷ ಜ್ಞಾನವು ಬರದೆ ಅಜ್ಞಾನನಾಶವಾಗುವುದಿಲ್ಲ, ಅಜ್ಞಾನನಾಶವಾಗದೆ ಅಪರೋಕ್ಷಜ್ಞಾನ ಬರುವುದಿಲ್ಲವಾದ್ದರಿಂದ ಅನ್ಯೋನ್ಯಾಶ್ರಯ ದೋಷವು ಬಂದೇ ಬರುತ್ತದೆ.

**ಭಾವವಿಲಾಸಿನೀ–** ಯತ್ ಯಸ್ಮಾತ್ । ತಯಾ ಅಪರೋಕ್ಷಪ್ರಮಯಾ । ತಸ್ಯಾಜ್ಞಾನಸ್ಯ ॥ ೨೨೩ ॥

**ಸತ್ಯೇವಾವರಣೇ ದೃಷ್ಟಿರಪೂರ್ವೇತಿ ಮತಿರ್ಮಮ ।**
**ಯತಃ ಕುಡ್ಯಾವೃತಘಟೇ ನ ಕಸ್ಯಾಪ್ಯಪರೋಕ್ಷಧೀಃ ।**
**ಅನ್ಯೇನಾವರಣಚ್ಛೇದೇ ಪಶ್ಚಾದೇವ ಹಿ ತಸ್ಯ ದೃಕ್ ॥ ೨೨೪ ॥**

**ಅರ್ಥ–** ಆವರಣೇ= ಆವರಕವು, ಸತ್ಯೇವ= ಇರುವಾಗಲೇ, ದೃಷ್ಟಿಃ= ವಸ್ತುವಿನ ಅಪರೋಕ್ಷ ಜ್ಞಾನವು ಬರುವುದು, ಅಪೂರ್ವಾ= ಹಿಂದೆಲ್ಲೂ ಕಂಡಿಲ್ಲ, ಇತಿ= ಎಂದು, ಮೇ= ನನ್ನ ಮತಿಃ= ಅಭಿಪ್ರಾಯವು, ಯತಃ= ಯಾವ ಕಾರಣದಿಂದ, ಕುಡ್ಯಾವೃತಘಟೇ= ಗೋಡೆಯಿಂದ ಮರೆಮಾಡಲ್ಪಟ್ಟ ಘಟದ ವಿಷಯದಲ್ಲಿ ಕಸ್ಯಾಪಿ= ಯಾರಿಗೂ ಕೂಡ, ಅಪರೋಕ್ಷಧೀಃ= ಪ್ರತ್ಯಕ್ಷಜ್ಞಾನವು, ನ= ಬರುವುದಿಲ್ಲ, ಅನ್ಯೇನ= ಬೇರೆಯವರಿಂದ, ಆವರಣಾಪಚ್ಛೇದೇ= ಆವರಣವು ನಾಶವಾಗುತ್ತಿರಲು, ಪಶ್ಚಾತ್ ಏವ= ಆನಂತರದಲ್ಲಿಯೇ, ತಸ್ಯ= ಆ ಘಟದ, ದೃಕ್ ಹಿ= ಪ್ರತ್ಯಕ್ಷಜ್ಞಾನವು ಬರುತ್ತದೆಯಷ್ಟೇ!

**ಅನುವಾದ -** ವಸ್ತುವಿಗೆ ಆವರಕವಿರುವಾಗ ಅದರ ಅಪರೋಕ್ಷಜ್ಞಾನವು ಯಾರಿಗೂ ಬರುವುದಿಲ್ಲವೆಂಬುದು ನನ್ನ ಅಭಿಪ್ರಾಯ. ಏಕೆಂದರೆ ಗೋಡೆಯ ತಡೆಯಿರುವಾಗ ಆಚೆ ಬದಿಯಲ್ಲಿರುವ ಘಟದ ಅಪರೋಕ್ಷಜ್ಞಾನವು ಯಾರಿಗೂ ಬರುವುದಿಲ್ಲ, ಆವರಕವು ಕಳೆದ ಮೇಲೆ ಮಾತ್ರ ಘಟದ ಜ್ಞಾನವು ಬರುವುದು ಕಂಡಿದೆ.

**ಭಾವವಿಲಾಸಿನೀ–** ತಸ್ಯ ಕುಡ್ಯಾವೃತಘಟಸ್ಯ ॥ ೨೨೪॥

**ಅದೃಷ್ಟಕಲ್ಪನಾ ಚೇತ್ ಸ್ಯಾದ್ ಗತಾ ವ್ಯಾಪ್ತಿರ್ದಿಗಂತರಮ್ ।**
**ಅಕಲ್ಪಿತಂ ಜಗದಭೂತ್ ಸೂತ್ರಮಾಸೀನ್ನಿರಾಕುಲಮ್ ॥ ೨೨೫ ॥**

**ಬ್ರಹ್ಮಣ್ಯಖಂಡೇ ತಚ್ಛಬ್ದೈಸ್ತೇऽಸ್ತ್ಯಥಾಪ್ಯಪರೋಕ್ಷಧೀಃ ।**
**ಅಜ್ಞಾನಸ್ಯ ನಿವೃತ್ತಿರ್ನ ಕಥಂ ತತ್ ತಸ್ಯ ನಾಶಕಮ್ ॥ ೨೨೬ ॥**

**ಅರ್ಥ–** ಅಖಂಡೇ= ಶುದ್ಧನಾದ, ಬ್ರಹ್ಮಣಿ= ಬ್ರಹ್ಮನಲ್ಲಿ, ತಚ್ಛಬ್ದೈಃ= ಬ್ರಹ್ಮನನ್ನು ಪ್ರತಿಪಾದನೆ ಮಾಡುವ ಶಬ್ದಗಳಿಂದ, ತೇ= ನಿನಗೆ, ಅಪರೋಕ್ಷಧೀಃ= ಅಪರೋಕ್ಷ ಜ್ಞಾನವು (ಭವತಿ= ಆಗುತ್ತದೆ), ತಥಾಪಿ= ಹಾಗಿದ್ದರೂ, ಅಜ್ಞಾನಸ್ಯ= ಅಜ್ಞಾನದ, ನಿವೃತ್ತಿಃ= ನಾಶವು, ನ= ಆಗುವುದಿಲ್ಲವೆಂದ ಮೇಲೆ, ತತ್= ಆ ಜ್ಞಾನವು, ತಸ್ಯ= ಅಜ್ಞಾನಕ್ಕೆ, ನಾಶಕಂ= ನಾಶಕವು, ಕಥಂ= ಹೇಗಾಗುತ್ತದೆ?

**ಅನುವಾದ -** ಬ್ರಹ್ಮನನ್ನು ಪ್ರತಿಪಾದನೆ ಮಾಡುವ ಶಬ್ದಗಳನ್ನು ಪ್ರಯೋಗಿಸಿದಾಗ ನಿನ್ನ ಮತದಲ್ಲಿ ಅಪರೋಕ್ಷಜ್ಞಾನವು ಬರುತ್ತದೆ. ಆದರೆ ಅಜ್ಞಾನ ನಿವೃತ್ತಿಯಾಗುವುದಿಲ್ಲ. ಅಪರೋಕ್ಷಜ್ಞಾನವಿದ್ದಾಗಲೂ ಅಜ್ಞಾನ ನಾಶವಾಗಲಿಲ್ಲವಾದ್ದರಿಂದ ನಿಮ್ಮ ವ್ಯಾಪ್ತಿಯು ಸರಿಯಲ್ಲ.

ಭಾವವಿಲಾಸಿನೀ– ವ್ಯಾಪ್ತಿಃ ಜ್ಞಾನಮಜ್ಞಾನಸ್ಯೈವ ನಿವರ್ತಕಮಿತಿ ವ್ಯಾಪ್ತಿಃ । ಅನ್ಯತ್ರಾದೃಷ್ಟಸ್ಯ ಬಂಧನಾಶಕತ್ವಸ್ಯೈವ ಜ್ಞಾನೇ ವಕ್ತುಂ ಶಕ್ಯತ್ವಾದಿತಿ ಭಾವಃ ॥ ೨೨೫ ॥

ಪ್ರಕಾರಾಂತರೇಣಾಪಿ ಜ್ಞಾನಸ್ಯಾಜ್ಞಾನನಾಶಕತ್ವಂ ನ ಘಟತ ಇತ್ಯಾಹ – ಬ್ರಹ್ಮಣೇತಿ ॥ ತಚ್ಛಬ್ದೈಃ ಅಖಂಡಬ್ರಹ್ಮಪ್ರತಿಪಾದಕಶಬ್ದೈಃ । ಅಪರೋಕ್ಷಧೀಃ ಬ್ರಹ್ಮಾಪರೋಕ್ಷಧೀಃ । ಬ್ರಹ್ಮಣಿ ಯದಾ ಯದಾ ತತ್ಪ್ರತಿಪಾದಕಶಬ್ದಪ್ರಯೋಗಃ ತದಾ ತದಾ ಬ್ರಹ್ಮಾಪರೋಕ್ಷಧೀರಸ್ತಿ । ಅಜ್ಞಾನನಿವೃತ್ತಿಶ್ಚ ನಾಸ್ತೀತಿ ಮಾಯಿನೋ ಮತಮ್ । ಅತಶ್ಚರಮಜ್ಞಾನಾದಪಿ ನಾಜ್ಞಾನನಿವೃತ್ತಿರಿತಿ ಭಾವಃ ॥೨೨೬॥

**ವಿವರಣೆ** - ಅಖಂಡ ಬ್ರಹ್ಮನನ್ನು ಪ್ರತಿಪಾದನೆ ಮಾಡುವ 'ತತ್ತ್ವಮಸಿ' ಮುಂತಾದ ಶಬ್ದಗಳನ್ನು ಪ್ರಯೋಗಿಸಿದಾಗ ಅಪರೋಕ್ಷಜ್ಞಾನ ಬರುತ್ತದೆ. ಆದರೆ ಅಜ್ಞಾನವು ನಾಶವಾಗುವುದಿಲ್ಲ ಎಂಬುದು ಅದ್ವೈತಿಗಳದ್ದೇ ಸಿದ್ಧಾಂತ. ಇದನ್ನು ಇಟ್ಟುಕೊಂಡು ಜ್ಞಾನವು ಅಜ್ಞಾನಕ್ಕೆ ನಾಶಕವೆಂದು ಹೇಗೆ ಹೇಳುವಿರಿ ಎಂದು ಅದ್ವೈತಿಗಳನ್ನು ಆಕ್ಷೇಪ ಮಾಡುತ್ತಿದ್ದಾರೆ.

**ಗುರೂಪಸತ್ತಿವೇದಾಂತಶ್ರವಣಾದ್ಯೈರುಪಸ್ಕೃತಮ್ ।**
**ನಾಶಕಂ ಚೇತ್ ತರ್ಹಿ ಘಟೇ ಕಥಂ ವೃತ್ತ್ಯೈವ ತತ್ಕ್ಷಯಃ ॥ ೨೨೭ ॥**

**ಅರ್ಥ**– ಗುರೂಪಸತ್ತಿ ವೇದಾಂತ ಶ್ರವಣಾದ್ಯೈಃ= ಗುರು ಶುಶ್ರೂಷೆ, ವೇದಾಂತ ವಾಕ್ಯಗಳ ಶ್ರವಣ ಮುಂತಾದವುಗಳಿಂದ, ಉಪಸ್ಕೃತಂ= ಸಹಿತವಾದ ಅಪರೋಕ್ಷಜ್ಞಾನವು, ನಾಶಕಂ ಚೇತ್= ಅಜ್ಞಾನವನ್ನು ನಾಶಪಡಿಸುತ್ತದೆ ಎಂದಾದರೆ, ತರ್ಹಿ= ಆಗ, ಘಟೇ= ಘಟದಲ್ಲಿ, ವೃತ್ತ್ಯಾ ಏವ= ಕೇವಲ ಅಂತಃಕರಣ ಪರಿಣಾಮರೂಪವಾದ ಜ್ಞಾನದಿಂದಲೇ, ತತ್ಕ್ಷಯಃ= ಆ ಅಜ್ಞಾನದ ನಾಶವು, ಕಥಂ= ಹೇಗಾಗುತ್ತದೆ?

**ಅನುವಾದ** - ಅದಕ್ಕೆ ಅದ್ವೈತಿಗಳು ಆಕ್ಷೇಪ ಮಾಡುತ್ತಾರೆ - ಕೇವಲ ಅಪರೋಕ್ಷ ಜ್ಞಾನವು ಅಜ್ಞಾನ ನಾಶಕವೆಂದು ಹೇಳುವುದಿಲ್ಲ. ಹೊರತು ಗುರುಶುಶ್ರೂಷೆ, ವೇದಾಂತ ವಾಕ್ಯಗಳ ಶ್ರವಣ ಮೊದಲಾದವುಗಳಿಂದ ಸೇರಿದಾಗ ಮಾತ್ರ ಅಜ್ಞಾನ ನಾಶಕವಾಗುತ್ತದೆ. ಆದ್ದರಿಂದ ಶಬ್ದದಿಂದ ಅಪರೋಕ್ಷಜ್ಞಾನಬಂದರೂ ಅಜ್ಞಾನನಾಶವಾಗುವುದಿಲ್ಲವೆಂದು. ಅದಕ್ಕೆ ದ್ವೈತಿಗಳ ಉತ್ತರ - ಗುರು ಶುಶ್ರೂಷೆ ಮೊದಲಾದವುಗಳಿಂದ ಕೂಡಿದ ಅಪರೋಕ್ಷ ಜ್ಞಾನವೇ ಅಜ್ಞಾನವನ್ನು ನಾಶಪಡಿಸುತ್ತದೆ ಎಂದಾದರೆ ಘಟದ ಅಪರೋಕ್ಷಜ್ಞಾನದಿಂದ ಅಜ್ಞಾನ ನಾಶವಾಗುತ್ತದೆ. ಆದರೆ ಈ ಅಪರೋಕ್ಷಜ್ಞಾನ ಗುರುಶುಶ್ರೂಷೆ ಮುಂತಾದವುಗಳಿಂದ ಸಹಿತವಾಗಿಲ್ಲ, ಆದರೂ ಅಜ್ಞಾನವು ನಾಶವಾಗಿರುವುದರಿಂದ ನಿಮ್ಮ ನಿಯಮವು ಸರಿಯಲ್ಲ.

ಭಾವವಿಲಾಸಿನೀ– ಶಂಕತೇ ॥ ಗುರ್ವಿತಿ ॥ ಉತ್ತರಮಾಹ – ತರ್ಹೀತಿ ॥ ತತ್ಕ್ಷಯಃ ಘಟಾಧಿಷ್ಠಾನಚೈತನ್ಯಾವರಕಾಜ್ಞಾನಕ್ಷಯಃ ॥ ೨೨೭ ॥

**ಶ್ರುತೇರ್ಬಲಾದಿಹೈವಂ ಚೇತ್ ತರ್ಹ್ಯಧ್ವನಿ ಸಮಾಗತಮ್ ॥ ೨೨೮ ॥**

**ಅರ್ಥ–** ಶ್ರುತೇಃ= ವೇದದ, ಬಲಾತ್= ಸಾಮರ್ಥ್ಯದಿಂದ, ಇಹ= ಶಾಬ್ದ ಅಪರೋಕ್ಷ ಸ್ಥಳದಲ್ಲಿ, ಏವಂ ಚೇತ್= ಗುರುಶುಶ್ರೂಷೆ ಮುಂತಾದವುಗಳಿಂದ ಸಹಿತವಾಗಿರಬೇಕೆಂದು ಹೇಳುತ್ತೇವೆ ಎಂದರೆ, ತರ್ಹಿ= ಆವಾಗ, ಅಧ್ವನಿ= ನಮ್ಮ ದಾರಿಯಲ್ಲಿ, ಸಮಾಗತಂ= ಬರಲ್ಪಟ್ಟಿತು.

**ಅನುವಾದ** - ಎಲ್ಲ ಅಪರೋಕ್ಷಜ್ಞಾನಗಳಲ್ಲಿ ಹೀಗೆ ಗುರುಶುಶ್ರೂಷೆ ಮುಂತಾದವುಗಳು ಇರಬೇಕೆಂದು ಹೇಳುವುದಿಲ್ಲ, ವೇದವು ಹೇಳುತ್ತಿದೆ ಎಂಬ ಕಾರಣದಿಂದ ಈ ಶಾಬ್ದ ಅಪರೋಕ್ಷ ಸ್ಥಳದಲ್ಲಿ ಮಾತ್ರ ಒಪ್ಪುತ್ತೇವೆ ಎಂದು ಹೇಳಿದರೆ ಅದಕ್ಕೆ ರಾಜರು ಹೇಳುತ್ತಾರೆ - ಹಾಗಾದರೆ ನೀವು ನಮ್ಮ ದಾರಿಗೆ ಬಂದಿದ್ದೀರಿ. ನಾವು ವೇದವು ಹೇಳುತ್ತಿದೆ ಎಂಬ ಕಾರಣದಿಂದಲೇ ಜ್ಞಾನದಿಂದ ಬಂಧವು ನಿವೃತ್ತಿಯಾಗುತ್ತದೆ ಎಂದು ಹೇಳುತ್ತಿದ್ದೇವೆ.

**ಭಾವವಿಲಾಸಿನೀ –** ಇಹ ಚರಮಾಪರೋಕ್ಷಜ್ಞಾನೇ ॥ ೨೨೮ ॥

**ದೃಷ್ಟ್ವೈವ ಮುಚ್ಯತ ಇತಿ ಶ್ರುತಿರ್ಬಲವತೀ ಹಿ ನಃ ।**
**ಅತೋ ಜ್ಞಾನಾದೇವ ಬಂಧನಾಶೋಽಪ್ಯಸ್ತು ಶ್ರುತೇರ್ಬಲಾತ್ ॥ ೨೨೯ ॥**

**ಅರ್ಥ–** 'ದೃಷ್ಟ್ವೈವ ಮುಚ್ಯತೇ' ಇತಿ= 'ದೃಷ್ಟ್ವೈವ ಮುಚ್ಯತೇ' ಎಂಬ ವೇದವು, ನಃ= ನಮಗೆ, ಬಲವತೀ ಹಿ= ಬಲಿಷ್ಠವಾಗಿದೆಯಷ್ಟೇ!, ಅತಃ= ಆದ್ದರಿಂದ, ಜ್ಞಾನಾತ್ ಏವ= ಅಪರೋಕ್ಷ ಜ್ಞಾನದಿಂದಲೇ, ಬಂಧನಾಶಃ ಅಪಿ= ಸಂಸಾರದ ನಾಶವೂ, ಶ್ರುತೇಃ= ವೇದದ, ಬಲಾತ್= ಸಾಮರ್ಥ್ಯದಿಂದ, ಅಸ್ತು= ಆಗಲಿ.

**ಅನುವಾದ** - 'ದೃಷ್ಟ್ವೈವ ತಂ ಮುಚ್ಯತೇ' ಎಂಬ ಶ್ರುತಿಯು ಬಲಿಷ್ಠವಾಗಿದೆ. ಆದ್ದರಿಂದ ಈ ವೇದದ ಬಲದಿಂದ ಜ್ಞಾನದಿಂದಲೇ ಸತ್ಯವಾದ ಸಂಸಾರದ ನಾಶವೂ ಆಗುತ್ತದೆ.

**ಭಾವವಿಲಾಸಿನೀ–** ಬಲವತೀ । ಸಾವಧಾರಣತ್ವಾದಿತಿಭಾವಃ (ಅ. ಪಾಠಃ) ॥ ೨೨೯ ॥

**ವಿವರಣೆ** - 'ದೃಷ್ಟ್ವೈವ ಮುಚ್ಯತೇ' ಎಂಬ ಶ್ರುತಿಯು ಬಲಿಷ್ಠವಾಗಿದೆ. ಏಕೆಂದರೆ ಅವಧಾರಣ ಎಂಬ ಅರ್ಥವನ್ನು ಕೊಡುವ ಏವಕಾರವಿದೆ. ಎಂದರೆ ಅಪರೋಕ್ಷ ಜ್ಞಾನದಿಂದಲೇ ಸತ್ಯವಾದ ಬಂಧವು ನಾಶವಾಗುತ್ತದೆ. ಬೇರೆಯದರಿಂದಲ್ಲ ಎಂಬ ಅರ್ಥವನ್ನು ಪ್ರತಿಪಾದಿಸುತ್ತದೆ. ಹೀಗೆ ನಿರವಕಾಶತ್ವದಿಂದ ಪ್ರಬಲವಾಗಿದೆ.

**ವಿಲಕ್ಷಣಾ ಹಿ ಸಾಮಗ್ರೀ ಕಾರ್ಯಂ ಕುರ್ಯಾದ್ ವಿಲಕ್ಷಣಂ ।**
**ತಸ್ಮಾದ್ ವಿಲಕ್ಷಣಾರ್ಥತ್ವಾದ್ ಬಂಧೋ ಜ್ಞಾನೇನ ನಶ್ಯತು ॥ ೨೩೦ ॥**

**ಅರ್ಥ–** ವಿಲಕ್ಷಣಾ= ವಿಲಕ್ಷಣವಾದ, ಸಾಮಗ್ರೀ ಹಿ= ಕಾರಣವಾದರೂ, ವಿಲಕ್ಷಣಂ= ವಿಲಕ್ಷಣವಾದ, ಕಾರ್ಯಂ= ಕಾರ್ಯವನ್ನು, ಕುರ್ಯಾತ್= ಮಾಡಬೇಕು, ತಸ್ಮಾತ್= ಆದ್ದರಿಂದ, ವಿಲಕ್ಷಣಾರ್ಥತ್ವಾತ್= ಅಜ್ಞಾನಕ್ಕಿಂತ ವಿಲಕ್ಷಣವಾದ ವಸ್ತುವಾದ್ದರಿಂದ, ಬಂಧಃ= ಬಂಧವು, ಜ್ಞಾನೇನ= ಚರಮ ಅಪರೋಕ್ಷಜ್ಞಾನದಿಂದ, ನಶ್ಯತು= ನಾಶವಾಗಲಿ.

**ಅನುವಾದ -** ವಿಲಕ್ಷಣವಾದ ಕಾರಣವು ವಿಲಕ್ಷಣವಾದ ಕಾರ್ಯವನ್ನು ಹುಟ್ಟಿಸುವುದು ಕಂಡಿದೆ. ದಂಡಕ್ಕಿಂತ ವಿಲಕ್ಷಣವಾದ ತಂತುವು ಪಟವನ್ನು ಹುಟ್ಟಿಸುವುದು ಕಂಡಿದೆ. ಅದರಂತೆ ಘಟದ ಅಜ್ಞಾನವನ್ನು ನಾಶಪಡಿಸುವ ಅಪರೋಕ್ಷಜ್ಞಾನಕ್ಕಿಂತ ಚರಮಜ್ಞಾನವು ವಿಲಕ್ಷಣವಾಗಿದೆ. ಏಕೆಂದರೆ ಈ ಚರಮಜ್ಞಾನವು ಗುರೂಪಸತ್ತಿ, ಶ್ರವಣಾದಿಗಳಿಂದ ಕೂಡಿದೆ. ಆದ್ದರಿಂದ ಇದೂ ಅಜ್ಞಾನವನ್ನೇ ನಾಶಪಡಿಸಿದರೆ ವಿಲಕ್ಷಣ ಕಾರ್ಯವನ್ನು ಮಾಡಿದಂತಾಗುವುದಿಲ್ಲ, ಹಾಗಾಗಿ ಅಜ್ಞಾನಕ್ಕಿಂತಲೂ ವಿಲಕ್ಷಣವಾದ ಬಂಧವನ್ನೇ ನಾಶಪಡಿಸಬೇಕು. ಆಗಲೇ ವಿಲಕ್ಷಣಕಾರ್ಯವನ್ನು ಮಾಡಿದಂತಾಗುತ್ತದೆ.

**ಭಾವವಿಲಾಸಿನೀ –** ವಿಲಕ್ಷಣಾ ಶ್ರವಣಾದಿಜನ್ಯತ್ವೇನನಾಜ್ಞಾನನಿವರ್ತಕ ಘಟವೃತ್ತಿತೋ ವಿಲಕ್ಷಣಾ । ವಿಲಕ್ಷಣಾರ್ಥತ್ವಾತ್ ಅಜ್ಞಾನತೋ ವಿಲಕ್ಷಣಾರ್ಥತ್ವಾತ್ ॥ ೨೩೦ ॥

ದೃಷ್ಟಾನುಸರಣತ್ಯಾಗೋ ಯಥಾ ತತ್ರ ತಥಾತ್ರ ಚ ।
ಗುಣ ಏವಾಸ್ತು ದೋಷಸ್ತೇ ಮಿಥ್ಯಾತ್ವಸ್ಯೈವ ಕಲ್ಪನಂ ॥ ೨೩೧ ॥

**ಅರ್ಥ–** ದೃಷ್ಟಾನುಸರಣತ್ಯಾಗಃ= ಕಂಡದ್ದನ್ನು ಅನುಸರಿಸದಿರುವುದು, ಯಥಾ= ಹೇಗೆ, ತತ್ರ= ಚರಮ ಅಪರೋಕ್ಷಜ್ಞಾನವು ಅಜ್ಞಾನವನ್ನು ನಾಶಪಡಿಸುವುದರಲ್ಲಿ ಅಂಗೀಕೃತವಾಗಿದೆಯೋ, ತಥಾ= ಹಾಗೆಯೇ, ಅತ್ರ ಚ= ಚರಮ ಅಪರೋಕ್ಷಜ್ಞಾನವು ಬಂಧವನ್ನು ನಾಶಪಡಿಸುವ ವಿಷಯದಲ್ಲಿ ಅಂಗೀಕಾರವೂ, ಗುಣಃ ಏವ ಅಸ್ತು= ಗುಣವೇ ಆಗಲಿ, ತೇ= ನಿನಗೆ ಮಿಥ್ಯಾತ್ವಸ್ಯ= ಬಂಧಮಿಥ್ಯಾತ್ವದ, ಕಲ್ಪನಂ ಏವ= ಕಲ್ಪಿಸುವಿಕೆಯೇ ದೋಷಃ= ದೋಷವಾಗುತ್ತದೆ.

**ಅನುವಾದ -** ಲೋಕದಲ್ಲಿ ಕೇವಲ ಜ್ಞಾನದಿಂದ ಅಜ್ಞಾನವು ನಾಶವಾಗುವುದು ಕಂಡಿದೆ. ಆದರೆ ಚರಮಅಪರೋಕ್ಷಜ್ಞಾನವು ಅಜ್ಞಾನವನ್ನು ನಾಶಪಡಿಸುವಾಗ ಮಾತ್ರ ಶ್ರವಣಾದಿ ಗಳಿಂದ ಸಹಿತವಾಗಿರಬೇಕೆಂದು ಒಪ್ಪಿ ಲೋಕದಲ್ಲಿ ಕಂಡದ್ದನ್ನು ಬಿಟ್ಟು ಕಾಣದ್ದನ್ನು ಅಂಗೀಕರಿಸಿರುವಿ. ಹೀಗೆ ಈ ಲೋಕದಲ್ಲಿ ಕಾಣದ ಶ್ರವಣಾದಿಗಳಿಂದ ಕೂಡಿರುವಿಕೆಯನ್ನು ಒಪ್ಪುವ ನೀನು ಲೋಕದಲ್ಲಿ ಕಾಣದ ಬಂಧನಿವೃತ್ತಿಯು ಚರಮ ಅಪರೋಕ್ಷದಿಂದಲೇ ಆಗುತ್ತದೆ ಎಂಬುದನ್ನು ಅಂಗೀಕರಿಸು ಅದೂ ಶ್ರುತ್ಯುಕ್ತವಾದ್ದರಿಂದ ಗುಣವೇ ಆಗುತ್ತದೆ. ಹೊರತು

ಬಂಧವನ್ನು ಮಿಥ್ಯೆಯೆಂದು ಅಂಗೀಕರಿಸಬೇಡ. ಅದು ಶ್ರುತಿಯಲ್ಲಿಲ್ಲದ್ದರಿಂದ ದೋಷವೇ ಆಗುತ್ತದೆ.

**ಭಾವವಿಲಾಸಿನೀ–** ತತ್ರ ಚರಮಾಪರೋಕ್ಷಜ್ಞಾನಸ್ಯಾಜ್ಞಾನನಿವರ್ತಕತ್ವೇ । ಅತ್ರ ತಸ್ಯೈವ ಜ್ಞಾನಸ್ಯ ಬಂಧನಿವರ್ತಕತ್ವೇ । ಯಥಾ ಅಜ್ಞಾನನಿವರ್ತಕಬ್ರಹ್ಮಜ್ಞಾನೇ ಘಟವೃತ್ತ್ಯಾದಾವದೃಷ್ಟಂ ಶ್ರವಣಾದಿಜನ್ಯತ್ವಂ ತ್ವಯಾ ಅಂಗೀಕ್ರಿಯತೇ ತಥಾऽನ್ಯತ್ರಾದೃಷ್ಟಂ ಸಾಕ್ಷಾದ್ಬಂಧನಿವರ್ತಕತ್ವಮೇವ ಕುತೋ ನಾಂಗೀಕ್ರಿಯತ ಇತಿ ಭಾವಃ ॥ ೨೩೧ ॥

ಮಿಥ್ಯಾತ್ವವನ್ನು ಅಂಗೀಕರಿಸುವುದು ಅಸಂಗತ ಅಯುಕ್ತ ಮಾತ್ರವಲ್ಲ, ವ್ಯರ್ಥವೂ ಆಗಿದೆ ಎಂಬುದನ್ನು ಹೇಳುತ್ತಿದ್ದಾರೆ -

ಯಸ್ಮಾದಸಂಗತಂ ಹ್ಯೇತದಯುಕ್ತಂ ಚೋಕ್ತವರ್ತ್ಮನಾ ।
ಅನಾದಿಭೇದಮಿಥ್ಯಾತ್ವಾಪ್ರಾಪ್ತ್ಯಾ ವ್ಯರ್ಥಂ ಚ ತೇऽಂತತಃ ॥ ೨೩೨ ॥

**ಅರ್ಥ–** ಯಸ್ಮಾತ್= ಯಾವ ಕಾರಣದಿಂದ, ಏತತ್= ಈ ಅಜ್ಞಾನೋಪಾದನಕತ್ವ ಎಂಬ ಮಿಥ್ಯಾತ್ವವು ಉಕ್ತವರ್ತ್ಮನಾ= ಹಿಂದೆ ಹೇಳಿದ ರೀತಿಯಿಂದ, ಅಸಂಗತಂ= ಅಸಂಗತವಾಗಿದೆಯೋ, ಚ= ಮತ್ತು, ಅಯುಕ್ತಂ= ಅಯುಕ್ತವಾಗಿದೆಯೋ, ತೇ= ನಿನಗೆ, ಅಂತತಃ= ಕೊನೆಯಲ್ಲಿ, ಅನಾದಿಭೇದಮಿಥ್ಯಾತ್ವಾಪ್ರಾಪ್ತ್ಯಾ= ಅನಾದಿಯಾದ ಭೇದವು ಮಿಥ್ಯೆಯೆಂದು ಸಿದ್ಧವಾಗದೇ ಇರುವುದರಿಂದ, ಜೀವಬ್ರಹ್ಮೈಕ್ಯವು ಸಿದ್ಧಿಯಾಗದೆ, ವ್ಯರ್ಥಂ ಚ= ವ್ಯರ್ಥವೂ ಆಗಿದೆ.

**ಅನುವಾದ -** ಅನಾದಿಯಾದ ಬಂಧವನ್ನು ಮಿಥ್ಯೆಯೆಂದು ಸಾಧಿಸಲು ನೀನು ಅಜ್ಞಾನೋಪಾದಾನಕತ್ವವೆಂಬ ಮಿಥ್ಯಾತ್ವವನ್ನು ಸಂಸಾರಕ್ಕೆ ಅಂಗೀಕರಿಸಿರುವಿ. ಆದರೆ ಅನಾದಿಬಂಧಕ್ಕೆ ಉಪಾದಾನವನ್ನು ಹೇಳುವುದು ಅಸಂಗತವೂ ಆಗಿದೆ ಮತ್ತು ಜ್ಞಾನವು ತನ್ನ ಪ್ರತಿಬಂಧಕವನ್ನು ತಾನೇ ಕಳೆಯುತ್ತದೆ ಎನ್ನುವುದು ಅಯುಕ್ತವೂ ಆಗಿದೆ. ಅಷ್ಟು ಮಾತ್ರವಲ್ಲ, ಇದರಿಂದ ಭೇದಮಿಥ್ಯಾತ್ವ ಸಿದ್ಧವಾಗಿಲ್ಲವಾದ್ದರಿಂದ ಐಕ್ಯ ಸಿದ್ಧಿಯಾಗದಿರುವುದರಿಂದ ವ್ಯರ್ಥವೂ ಹೌದು.

**ಭಾವವಿಲಾಸಿನೀ–** ಏತತ್ ಅಜ್ಞಾನೋಪಾದಾನಕತ್ವರೂಪಮಿಥ್ಯಾತ್ವಮ್ । ದೋಷಾಂತರಂ ಚಾಹ – ಅನಾದೀತಿ ॥ ೨೩೨ ॥

ಐಕ್ಯಸ್ಯ ಸಿದ್ಧಯೇ ಭೇದಮಿಥ್ಯಾತ್ವೇ ತೇ ಮಹಾನ್ ಭರಃ ।
ತಸ್ಯೈತೇನಾಪ್ಯಸಿದ್ಧಿಶ್ಚೇಜ್ಜಗನ್ಮಿಥ್ಯಾತ್ವತೋऽಪಿ ಕಿಂ ॥೨೩೩॥

**ಅರ್ಥ–** ಐಕ್ಯಸ್ಯ= ಜೀವ ಬ್ರಹ್ಮರ ಐಕ್ಯದ, ಸಿದ್ಧಯೇ= ಸಿದ್ಧಿಗಾಗಿ, ಭೇದಮಿಥ್ಯಾತ್ವೇ= ಭೇದವನ್ನು ಮಿಥ್ಯೆಯೆಂದು ಸಾಧನೆ ಮಾಡುವ ವಿಷಯದಲ್ಲಿ, ತೇ= ನಿನಗೆ, ಮಹಾನ್=

ಬಹಳವಾದ, ಭರಃ= ನಂಬಿಕೆಯು ಇದ್ದಿತು. ಏತೇನ ಅಪಿ= ಮಧ್ಯದಲ್ಲಿ ಅಜ್ಞಾನವನ್ನು ಕಲ್ಪಿಸುವುದರಿಂದಲೂ, ತಸ್ಯ= ಭೇದವು ಮಿಥ್ಯೆ ಎಂಬುದರ, ಅಸಿದ್ಧಿಃ ಚೇತ್= ಸಿದ್ಧಿಯು ಆಗುವುದಿಲ್ಲವೆಂದರೆ, ಜಗನ್ಮಿಥ್ಯಾತ್ವತಃ ಅಪಿ= ಜಗತ್ತನ್ನು ಮಿಥ್ಯೆಯೆಂದು ಅಂಗೀಕರಿಸುವುದರಿಂದಲೂ, ಕಿಂ= ಏನು ಪ್ರಯೋಜನ?

**ಅನುವಾದ** - ಭೇದವನ್ನು ಮಿಥ್ಯೆಯೆಂದು ಸಾಧಿಸಿದಾಗ ಜೀವಬ್ರಹ್ಮರಿಗೆ ಐಕ್ಯವು ಸಿದ್ಧಿಯಾಗುತ್ತದೆ ಎಂದು ನಿನಗೆ ತುಂಬಾ ನಂಬಿಕೆಯಿತ್ತು. ಈಗ ಮಧ್ಯದಲ್ಲಿ ಅಜ್ಞಾನವನ್ನು ಅಂಗೀಕರಿಸಿದರೂ ಭೇದವು ಮಿಥ್ಯೆಯೆಂದು ಸಿದ್ಧವಾಗಿಲ್ಲ ಎಂದಮೇಲೆ ಜಗತ್ತನ್ನು ಮಿಥ್ಯೆ ಎಂದು ಅಂಗೀಕರಿಸುವುದು ವ್ಯರ್ಥವೇ ಆಗಿದೆ.

**ಭಾವವಿಲಾಸಿನೀ–** ತಸ್ಯ ಭೇದಮಿಥ್ಯಾತ್ವಸ್ಯ । ಏತೇನ ಮಧ್ಯೇ ಅಜ್ಞಾನಕಲ್ಪನೇನ ॥ ೨೩೩ ॥

**ಅತಃ ಸೂತ್ರಾರ್ಥಕಥನಾನ್ನಿವರ್ತಸ್ವ ಸುಖೀ ಭವ ।**
**ಯದ್ವಾ ಸೂತ್ರಾರ್ಥಕುಶಲಾನುಪಾಸ್ವ ನೃಹರೇರ್ಭಟಾನ್ ॥ ೨೩೪ ॥**

**ಅರ್ಥ–** ಅತಃ= ಜಗತ್ತನ್ನು ಮಿಥ್ಯೆ ಎಂದು ಕಲ್ಪಿಸುವುದು ಸೂತ್ರಕ್ಕೆ ಅಸಂಗತವಾಗುವುದರಿಂದ, ಸೂತ್ರಾರ್ಥಕಥನಾತ್= ಸೂತ್ರಕ್ಕೆ ಅರ್ಥವನ್ನು ಹೇಳುವುದರಿಂದ, ನಿವರ್ತಸ್ವ= ಹಿಂದಿರುಗು, ಸುಖೀ ಭವ= ಸುಖವಾಗಿರು, ಯದ್ವಾ= ಅಥವಾ, ಸೂತ್ರಾರ್ಥ ಕುಶಲಾನ್= ಸೂತ್ರಗಳ ಅರ್ಥವನ್ನು ಹೇಳುವುದರಲ್ಲಿ ನಿಪುಣರಾದ, ನೃಹರೇಃ= ನರಸಿಂಹನ, ಭಟಾನ್= ಭಕ್ತರಾದ ಮಾಧ್ವರನ್ನು, ಉಪಾಸ್ವ= ಆಶ್ರಯಿಸು.

**ಅನುವಾದ** - ಜಗತ್ತನ್ನು ಮಿಥ್ಯೆಯೆಂದು ಹೇಳುವುದು ಬ್ರಹ್ಮಸೂತ್ರಕ್ಕೆ ಅಸಂಗತ ಆಗುವುದರಿಂದ ಬ್ರಹ್ಮಸೂತ್ರಗಳಿಗೆ ಅರ್ಥವನ್ನು ಹೇಳುವುದು ಬಿಟ್ಟು ಸುಖವಾಗಿರು. ಇಲ್ಲವಾದರೆ ಸೂತ್ರಗಳಿಗೆ ಅರ್ಥವನ್ನು ಹೇಳುವುದರಲ್ಲಿ ನಿಪುಣರಾದವರು ನರಸಿಂಹನ ಭಕ್ತರಾದ ಮಾಧ್ವರು. ಅವರನ್ನಾದರೂ ಆಶ್ರಯಿಸಿ ಪಾಠವನ್ನಾದರೂ ಕಲಿ.

**ಭಾವವಿಲಾಸಿನೀ–** ಅತಃ ಜಗನ್ಮಿಥ್ಯಾತ್ವಸ್ಯ ಸೂತ್ರಾಸಂಗತತ್ವಾದಿದೋಷಾತ್ ॥೨೩೪॥

**ವಿವರಣೆ** - ಶ್ರುತಿ ಹಾಗೂ ಬ್ರಹ್ಮಸೂತ್ರಗಳ ವಿಮರ್ಶೆಯಿಂದ ಅಜ್ಞಾನಕ್ಕಿಂತ ಬೇರೆಯಾದ ಪಾಪಾದಿ ಕರ್ಮಗಳು ಮಾತ್ರ ಜ್ಞಾನದಿಂದ ನೇರವಾಗಿ ನಾಶವಾಗುತ್ತದೆ ಎಂದು ಸಿದ್ಧವಾಗುವುದರಿಂದ ಜ್ಞಾನವು ಅಜ್ಞಾನವನ್ನು ಮಾತ್ರ ನಾಶಗೊಳಿಸುವುದು ಎಂಬ ನೀವು ತಿಳಿಸುವ ನಿಯಮವು (ವ್ಯಾಪ್ತಿಯು) ಅಸಿದ್ಧವಾಗಿದೆ ಹಾಗೂ ಶ್ರುತಿಸೂತ್ರಗಳಿಗೆ ವಿರುದ್ಧವೂ ಆಗಿದೆಯೆಂಬ ಅಂಶವನ್ನು ಕಿಂಚ ಇತ್ಯಾದಿ ಶ್ಲೋಕದಿಂದ ತಿಳಿಸುತ್ತಿದ್ದಾರೆ.

**ಕಿಂಚ ಜ್ಞಾನೇನ ದುಷ್ಕರ್ಮನಾಶಃ ಸಾಕ್ಷಾಚ್ಛ್ರುತೌ ಶ್ರುತಃ ।**
**ತದಾ ವಿದ್ವಾನ್ ಪುಣ್ಯಪಾಪೇ ವಿಧೂಯೇತಿ ನ ಕಿಂ ಶ್ರುತಿಃ ॥ ೨೩೫ ॥**

**ಅರ್ಥ–** ಕಿಂಚ = ಅಷ್ಟೇ ಅಲ್ಲದೆ, ಜ್ಞಾನೇನ = ಅಪರೋಕ್ಷಜ್ಞಾನದಿಂದ, ಸಾಕ್ಷಾತ್ = ನೇರವಾಗಿ, ದುಷ್ಕರ್ಮನಾಶಃ = ಕೆಟ್ಟಕರ್ಮಗಳ (ಪಾಪದ) ನಾಶವು, ಶ್ರುತೌ = ಶ್ರುತಿಯಲ್ಲಿ, ಶ್ರುತಃ = ಹೇಳಲ್ಪಟ್ಟಿದೆ, ತದಾ ವಿದ್ವಾನ್ ಪುಣ್ಯಪಾಪೇ ವಿಧೂಯ ಇತಿ = ತದಾ ವಿದ್ವಾನ್ ಪುಣ್ಯಪಾಪೇ ವಿಧೂಯ ಎಂಬುದಾಗಿ, ಶ್ರುತಿಃ= ಶ್ರುತಿಯು, ನ ಕಿಂ= ಇಲ್ಲವೇನು?

**ಅನುವಾದ -** ಜ್ಞಾನವು ಅಜ್ಞಾನವನ್ನು ಮಾತ್ರ ನಾಶಗೊಳಿಸಬಲ್ಲದು ಎಂದು ಪರರು ಒಪ್ಪಿಕೊಂಡ ನಿಯಮ. ಆದರೆ ಆ ನಿಯಮವೇ ಸರಿ ಇಲ್ಲ ಎಂದು ರಾಜರು ಇಲ್ಲಿ ತಿಳಿಸುತ್ತಿದ್ದಾರೆ.

ಇಲ್ಲಿ ತದಾ ವಿದ್ವಾನ್ ಪುಣ್ಯಪಾಪೇ ವಿಧೂಯ ಎಂಬ ವಾಕ್ಯದಿಂದ ಯದಾ ಪಶ್ಯಃ ಪಶ್ಯತೇ ರುಗ್ಮವರ್ಣಂ ಕರ್ತಾರಮೀಶಂ ಪುರುಷಂ ಬ್ರಹ್ಮಯೋನಿಂ । ತದಾ ವಿದ್ವಾನ್ ಪುಣ್ಯಪಾಪೇ ವಿಧೂಯ ನಿರಂಜನಃ ಪರಮಂ ಸಾಮ್ಯಮುಪೈತಿ ॥ ಎಂಬ ಆಥರ್ವಣೋಪನಿಷತ್ತಿನ ಶ್ರುತಿಯನ್ನು ಹೇಳುತ್ತಿದ್ದಾರೆ. ಯಾವಾಗ ನೋಡುಗನಾದ ಜೀವನು ಸಕಲಸದ್ಗುಣಪೂರ್ಣನಾದ ಸಕಲಜಗತ್ಕಾರಣನಾದ, ಎಲ್ಲರಿಗೂ ಸ್ವಾಮಿಯಾದ, ಎಲ್ಲಾ ಜೀವಜಡಗಳಲ್ಲಿ ನೆಲೆಸಿರುವ, ಲಕ್ಷ್ಮೀಪತಿಯಾದ, ಆದ್ದರಿಂದಲೇ ಜೀವೋತ್ತಮರಾದ ಚತುರ್ಮುಖಬ್ರಹ್ಮದೇವರ ತಂದೆಯಾದ ಭಗವಂತನನ್ನು ನೋಡುವನೋ ಆಗ ಅನಿಷ್ಟ (ದುಃಖಮಿಶ್ರವಾದ ಸ್ವರ್ಗಾದಿಫಲಗಳನ್ನು ನೀಡುವ) ಪುಣ್ಯವನ್ನೂ, ಪಾಪವನ್ನೂ ಝಾಡಿಸಿ, ಪ್ರಕೃತಿಬಂಧನವನ್ನು (ಅಜ್ಞಾನವನ್ನು) ಕಳೆದುಕೊಂಡು ಭಗವಂತನಂತೆ ತನ್ನ ಯೋಗ್ಯತೆಗೆ ಸರಿಯಾದ ಆನಂದಾದಿಗಳನ್ನು ಪಡೆಯುತ್ತಾನೆ ಎಂದು ಈ ಮಂತ್ರಕ್ಕೆ ಅರ್ಥ. ಹೀಗೆ ಈ ಶ್ರುತಿಯಲ್ಲಿ ಅಪರೋಕ್ಷಜ್ಞಾನವು ಪುಣ್ಯಪಾಪಗಳ ನಾಶಕ್ಕೆ ನೇರವಾಗಿ ಕಾರಣ ಎಂದು ವರ್ಣಿತವಾಗಿದೆ. ಹೀಗಿರುವಾಗ ಈ ಶ್ರುತಿಯನ್ನು ಸರಿಯಾಗಿ ನೋಡದೆ ಜ್ಞಾನವು ಅಜ್ಞಾನವನ್ನು ಮಾತ್ರ ನಾಶಗೊಳಿಸುವುದು ಎಂಬ ನಿಯಮವನ್ನು ನೀವು ಒಪ್ಪಿದ್ದೀರಿ. ಇದು ಸರಿಯಲ್ಲ, ಈ ಅಂಶವನ್ನು ಶ್ರುತಿಃ ನ ಕಿಂ? ಎಂಬ ಕಾಕುಸ್ವರದಿಂದ ರಾಜರು ಸೂಚಿಸಿದ್ದಾರೆ.

**ಭಾವವಿಲಾಸಿನೀ–** ಶ್ರುತಿಸೂತ್ರಬಲಾತ್ ಅಜ್ಞಾನಾತಿರಿಕ್ತಕರ್ಮಣ ಏವ ಸಾಕ್ಷಾದ್‌ಜ್ಞಾನನಾಶ್ಯತ್ವಸಿದ್ಧೇಃ ॥ ೨೩೫ ॥

**ಇಯಂ ವಿಧೂಯೇತಿ ಪೂರ್ವ(ಂ)ಕರ್ಮನಾಶಮುದೀರ್ಯ ಹಿ ।**
**ಪಶ್ಚಾನ್ನಿರಂಜನ ಇತಿ ವಕ್ತ್ಯಜ್ಞಾನಸ್ಯ ನಾಶನಂ ॥ ೨೩೬ ॥**

**ಅರ್ಥ–** ಇಯಂ = ಈ ಶ್ರುತಿಯು, ವಿಧೂಯ ಇತಿ = ವಿಧೂಯ ಎಂಬುದಾಗಿ, ಪೂರ್ವಕರ್ಮನಾಶಂ = ಅಪರೋಕ್ಷಜ್ಞಾನಕ್ಕಿಂತ ಮೊದಲಿನ ಕರ್ಮಗಳ ನಾಶವನ್ನು, (ಪೂರ್ವಂ = ಮೊದಲು, ಕರ್ಮನಾಶಂ =ಕರ್ಮಗಳ ನಾಶವನ್ನು) ಉದೀರ್ಯ = ಹೇಳಿ, ಪಶ್ಚಾತ್ = ಅನಂತರ, ನಿರಂಜನಃ ಇತಿ = ನಿರಂಜನ ಎಂಬ ಪದದಿಂದ, ಅಜ್ಞಾನಸ್ಯ = ಅಜ್ಞಾನದ, ನಾಶಂ = ನಾಶವನ್ನು, ವಕ್ತಿ ಹಿ = ಹೇಳುವುದಷ್ಟೇ!

**ಅನುವಾದ** - ತದಾ ವಿದ್ವಾನ್ ಪುಣ್ಯಪಾಪೇ ವಿಧೂಯ ಎಂಬ ಶ್ರುತಿಯು ಮೊದಲು ಪುಣ್ಯಪಾಪೇ ವಿಧೂಯ ಎಂದು ಪುಣ್ಯಪಾಪಗಳ (ಕರ್ಮದ) ನಾಶವನ್ನು ಹೇಳಿ ಅನಂತರ ನಿರಂಜನಃ ಎಂಬ ಪದದಿಂದ ಅಜ್ಞಾನದ ನಾಶವನ್ನು ಹೇಳುತ್ತಿದೆ. ಹೀಗೆ ಕರ್ಮವು (ಅನಿಷ್ಟಪುಣ್ಯ ಹಾಗೂ ಪಾಪವು) ಜ್ಞಾನದಿಂದಲೇ ನೇರವಾಗಿ ನಾಶವಾಗುತ್ತದೆ ಎಂಬುದು ಶ್ರುತಿಯ ಅಭಿಪ್ರಾಯವಾಗಿದೆ. ಹಿ ಎಂಬ ಶಬ್ದದಿಂದ ಇದಕ್ಕೆ ಶಾಸ್ತ್ರಪ್ರಸಿದ್ಧಿಯನ್ನು ಸೂಚಿಸಿದ್ದಾರೆ.

ವಿಧೂಯ ಎಂಬಲ್ಲಿ ಲ್ಯಪ್‌ಪ್ರತ್ಯಯವು ಸಮಾಸೇನಙ್ ಪೂರ್ವೇ ಕ್ತ್ವೋಲ್ಯಪ್ (೭-೧-೩೭) ಎಂಬ ಸೂತ್ರದಂತೆ ಬಂದಿದ್ದು ಇಲ್ಲಿ ಧೂಞ್ ಕಂಪನೇ ಎಂಬ ಧಾತುವಿಗೆ ವಿ ಎಂಬ ಉಪಸರ್ಗವು (ಅವ್ಯಯವು) ಪೂರ್ವಪದವಾಗಿದ್ದು ಕ್ತ್ವಾ ಪ್ರತ್ಯಯದ ಸ್ಥಾನಕ್ಕೆ ಲ್ಯಪ್ ಪ್ರತ್ಯಯವು ಎಂದಿದೆ. ಕ್ತ್ವಾ ಪ್ರತ್ಯಯವು ಸಮಾನಕರ್ತೃಕಯೋಃ ಪೂರ್ವಕಾಲೇ (೩-೪-೨೧) ಎಂಬ ಸೂತ್ರದಿಂದ ಒಬ್ಬನೇ ಕರ್ತೃವಿನಿಂದ ಬೇರೆ ಬೇರೆ ಕಾಲಗಳಲ್ಲಿ ಎರಡು ಕ್ರಿಯೆಗಳು ಘಟಿಸುವ ಸಂಭವವಿದ್ದಲ್ಲಿ ಆ ಎರಡು ಕ್ರಿಯೆಗಳಲ್ಲಿ ಮೊದಲನೆ ಕ್ರಿಯೆಗೆ ವಿಹಿತವಾಗಿದೆ. ಹೀಗೆ ಬಂದ ಕ್ತ್ವಾ ಪ್ರತ್ಯಯವು ಈ ಎರಡು ಕ್ರಿಯೆಗಳಲ್ಲಿ ಕಾಲವ್ಯತ್ಯಾಸವನ್ನು ತಿಳಿಸುತ್ತದೆ. ಹೀಗೆ ವಿಧೂಯ ಎಂಬಲ್ಲಿನ ಕ್ತ್ವಾ (ಲ್ಯಪ್) ಪ್ರತ್ಯಯವು ಈ ಪುಣ್ಯಪಾಪಗಳ ನಾಶವು ಮೊದಲು ಆಗಿ ನಂತರವಷ್ಟೇ ಅಜ್ಞಾನದ ನಾಶವಾಗುವುದು ಎಂಬ ಅಂಶವನ್ನು ಸ್ಪಷ್ಟವಾಗಿ ತಿಳಿಸುವುದು. ವ್ಯಾಕರಣಶಾಸ್ತ್ರಬಲ್ಲವರಿಗೆ ಈ ಅಂಶವು ಪ್ರಸಿದ್ಧವಾಗಿದೆ ಎಂಬುದನ್ನು ರಾಜರು ಹಿ ಎಂಬ ಪದದಿಂದ ಸೂಚಿಸಿದ್ದಾರೆ.

**ಭಾವವಿಲಾಸಿನೀ–** ಜ್ಞಾನಮಜ್ಞಾನಸ್ಯೈವ ನಿವರ್ತಕಮಿತಿ ವ್ಯಾಪ್ತಿರಸಿದ್ಧಾ ಶ್ರುತಿಸೂತ್ರವಿರುದ್ಧಾಚೇತ್ಯಾಹ – ಕಿಂಚೇತಿ ॥೨೩೬॥

ಅತಸ್ಸಾಕ್ಷಾಜ್‌ಜ್ಞಾನನಾಶ್ಯಂ ಕರ್ಮ ನಾಸೀತ್ ಕಥಂ ವದ ।
ಸೂತ್ರಕೃಚ್ಚೋತ್ತರಾಘಸ್ಯ ಜ್ಞಾನೇನಾಶ್ಲೇಷಮಂಜಸಾ ॥ ೨೩೭ ॥

ಪೂರ್ವಾಘಸ್ಯ ವಿನಾಶಂ ಚ ಸ್ವಯಮೇವ ವದಿಷ್ಯತಿ ।
ಅತೋಽರ್ಥೋಽಯಮನರ್ಥಸ್ತೇ ಶ್ರುತಿಸೂತ್ರವಿರೋಧತಃ ॥ ೨೩೮ ॥

**ಅರ್ಥ–** ಅತಃ = ಆದ್ದರಿಂದ, ಕರ್ಮ = ಕರ್ಮವು, ಸಾಕ್ಷಾತ್ = ನೇರವಾಗಿ, ಜ್ಞಾನ-ನಾಶ್ಯಂ = ಜ್ಞಾನದಿಂದ ನಾಶವಾಗುವಂತಹದು, ನ ಆಸೀತ್ = ಆಗಲಿಲ್ಲವೆಂಬುದು, ಕಥಂ = ಹೇಗೆಂಬುದಾಗಿ, ವದ = ಹೇಳು. ಚ = ಅಷ್ಟೇ ಅಲ್ಲದೆ, ಸೂತ್ರಕೃತ್ = ಸೂತ್ರಕಾರರಾದ ವೇದವ್ಯಾಸರು, ಸ್ವಯಮೇವ = ತಾವೇ, ಜ್ಞಾನೇನ = ಅಪರೋಕ್ಷಜ್ಞಾನದಿಂದ, ಉತ್ತರಾಘಸ್ಯ = ಮುಂದೆ ಮಾಡಲಿರುವ ಅನಿಷ್ಟಕರ್ಮಗಳ, ಅಶ್ಲೇಷಂ = ಲೇಪವಿಲ್ಲದಿರುವಿಕೆಯನ್ನು, ಚ = ಮತ್ತು, ಪೂರ್ವಾಘಸ್ಯ = ಹಿಂದೆ ಮಾಡಿರುವ ಅನಿಷ್ಟಕರ್ಮಗಳ, ವಿನಾಶಂ = ನಾಶವನ್ನು, ಅಂಜಸಾ = ಚೆನ್ನಾಗಿ, ವದಿಷ್ಯತಿ = ಹೇಳಲಿದ್ದಾರೆ. ಅತಃ = ಆದ್ದರಿಂದ, ಶ್ರುತಿಸೂತ್ರವಿರೋಧತಃ = ಶ್ರುತಿ ಹಾಗೂ ಬ್ರಹ್ಮಸೂತ್ರಗಳಿಂದ ವಿರೋಧವಿರುವ ಪ್ರಯುಕ್ತ, ತೇ = ನಿನಗೆ, ಅಯಂ = ಈ, ಅರ್ಥಃ = ಜ್ಞಾನವು ಅಜ್ಞಾನವನ್ನು ಮಾತ್ರ ನಾಶಗೊಳಿಸುತ್ತದೆ ಎಂಬ ಅರ್ಥವು, ಅನರ್ಥಃ = ಅನಿಷ್ಟಕರವಾಗಿದೆ.

**ಅನುವಾದ** - ಹಿಂದೆ ಹೇಳಿದಂತೆ ಶ್ರುತಿಯನ್ನು ಸರಿಯಾಗಿ ವಿಮರ್ಶಿಸಿದಾಗ ಪಾಪ ಹಾಗೂ ಅನಿಷ್ಟಪುಣ್ಯರೂಪವಾದ ಕರ್ಮಗಳು ನೇರವಾಗಿಯೇ ಜ್ಞಾನದಿಂದ ನಾಶವಾಗುತ್ತವೆ. ಅಲ್ಲದೆ ವೇದವ್ಯಾಸರು ತದಧಿಗಮ ಉತ್ತರಪೂರ್ವಾಘಯೋ-ರಶ್ಲೇಷವಿನಾಶೌ ತದ್ವ್ಯಪದೇಶಾತ್ ಎಂಬ ಬ್ರಹ್ಮಸೂತ್ರದಲ್ಲಿ ಭಗವಂತನ ಅಪರೋಕ್ಷಜ್ಞಾನವಾದರೆ ಮುಂದೆ ಮಾಡಲಿರುವ ಕರ್ಮಗಳ ಲೇಪವಾಗುವುದಿಲ್ಲ, ಹಾಗೆಯೇ ಹಿಂದೆ ಮಾಡಿದ ಕರ್ಮಗಳೆಲ್ಲವೂ ನಾಶವಾಗುತ್ತವೆ ಎಂಬುದನ್ನು ಶ್ರುತಿಗಳೇ ಸಾರುತ್ತಿವೆ ಎಂದು ನಿರ್ಣಯಮಾಡಿದ್ದಾರೆ. ಹೀಗೆ ಶ್ರುತಿಯ ವಿಮರ್ಶೆಯಿಂದ ಮತ್ತು ಸೂತ್ರದ ಪರಾಮರ್ಶೆಯಿಂದ ಜ್ಞಾನವು ನೇರವಾಗಿಯೇ ಅಜ್ಞಾನಕ್ಕಿಂತ ಬೇರೆಯಾದ ಅನಿಷ್ಟಕರ್ಮಗಳನ್ನು ನಾಶಮಾಡುತ್ತದೆಯೆಂಬುದು ನಿಶ್ಚಯವಾಗುವುದರಿಂದ ಜ್ಞಾನವು ಅಜ್ಞಾನವನ್ನು ಮಾತ್ರ ನಾಶಮಾಡುವುದು ಎಂಬ ನೀವು ಒಪ್ಪಿದ ನಿಯಮವು ಸರಿಯಲ್ಲ. ಇದು ನಿಮಗೆ ಅನರ್ಥಕಾರಕವೂ ಆಗಬಹುದು.

**ಭಾವವಿಲಾಸಿನೀ–** ವದಿಷ್ಯತಿ 'ತದಧಿಗಮ ಉತ್ತರಪೂರ್ವಾಘಯೋರಶ್ಲೇಷವಿನಾಶಾವಿತಿ' ಸೂತ್ರೇ ವದಿಷ್ಯತಿ ॥ ೨೩೮ ॥

ಕಿಂಚ ಜ್ಞಾನೇನ... ಇತ್ಯಾದಿಯಾಗಿ ನಾಲ್ಕು ಶ್ಲೋಕಗಳಿಂದ ವಿವರಿಸಿದ ಪ್ರಮೇಯವನ್ನು ಸಂಗ್ರಹವಾಗಿ, ಆಲಂಕಾರಿಕವಾಗಿ, ರಾಜರು ಬಣ್ಣಿಸಿದ್ದಾರೆ-

**ವ್ಯಾಪ್ತಿಃ ಕನ್ಯೈವ ಯಚ್ಚಾಜ್ಞಾ ಕರ್ಮಣಾ ಖಂಡಿತವ್ರತಾ ।**
**ತದುದ್ವಾಹಪ್ರಯತ್ನಸ್ತೇ ಕಥಂ ದೋಷಾಯ ನೇಷ್ಯತೇ ॥ ೨೩೯ ॥**

**ಅರ್ಥ–** ವ್ಯಾಪ್ತಿಃ = ಜ್ಞಾನಮಜ್ಞಾನಸ್ಯೈವ ನಿವರ್ತಕಂ ಎಂಬ ವ್ಯಾಪ್ತಿಯು, ಕನ್ಯಾ ಏವ = ಕನ್ಯಾವಸ್ಥೆಯಲ್ಲಿರುವಾಗಲೇ, ಯತ್ = ಯಾವ ಕಾರಣದಿಂದ, ಕರ್ಮಣಾ =

ಪುಣ್ಯಾಪಾಪರೂಪವಾದ ಕರ್ಮದಿಂದ (ಮದುವೆಗೆ ಮೊದಲೇ ಪುರುಷಸಂಪರ್ಕರೂಪವಾದ ಕರ್ಮದಿಂದ) ಖಂಡಿತವ್ರತಾ = ನಿಯಮಭಂಗವನ್ನು ತಂದುಕೊಂಡಿರುವಂಥದ್ದು, ಜಾತಾ =ಆಗಿದೆ. ತೇ = ನಿನ್ನ, ತದುದ್ವಾಹಪ್ರಯತ್ನಃ = ಬ್ರಹ್ಮಜ್ಞಾನದೊಂದಿದೆ (ಬ್ರಹ್ಮ-ಜ್ಞಾನಿಯೊಂದಿಗೆ) ಸೇರಿಸುವ ಪ್ರಯತ್ನವು, ದೋಷಾಯ = ಅವಿವೇಕಿತ್ವರೂಪ-ದೋಷಕ್ಕೋಸ್ಕರ, ಕಥಂ = ಹೇಗೆ, ನ ಇಷ್ಯತೇ = ಆಗಲಾರದು? (ಆಗಿಯೋ ಆಗುತ್ತದೆ.)

**ಅನುವಾದ** - ಜ್ಞಾನಮಜ್ಞಾನಸ್ಯೈವ ನಿವರ್ತಕಂ ಎಂಬ ಪರರು ಒಪ್ಪಿಕೊಂಡ ವ್ಯಾಪ್ತಿಯನ್ನು ಇಲ್ಲಿ ಕನ್ಯೆಗೆ ಹೋಲಿಸಿದ್ದಾರೆ. ಬ್ರಹ್ಮಜ್ಞಾನಿಗೆ ಒಪ್ಪಿಸಿಕೊಳ್ಳಬೇಕಾದ ಕನ್ಯೆಯೊಬ್ಬಳು ಪರಪುರುಷಸಂಪರ್ಕದಿಂದ ದುಷ್ಟಳಾಗಿದ್ದರೆ, ಅದನ್ನು ತಿಳಿದೂ ಅವಳನ್ನು ಬ್ರಹ್ಮಜ್ಞಾನಿಯೊಬ್ಬನಿಗೆ ವಿವಾಹ ಮಾಡಿಕೊಡಲು ತಂದೆ ತಾಯಿಗಳು ಪ್ರಯತ್ನಿಸಿದರೆ ಹೇಗೆ ದೋಷವೋ ಹಾಗೆಯೇ ನೀವು ಒಪ್ಪಿಕೊಂಡ ವ್ಯಾಪ್ತಿಯು ಪುಣ್ಯಾಪಾಪರೂಪವಾದ ಕರ್ಮದಲ್ಲಿ ವ್ಯಭಿಚರಿತವಾಗಿದೆ. ಅಂದರೆ ಅಜ್ಞಾನವನ್ನು ಮಾತ್ರ ನಾಶಮಾಡಬೇಕಾಗಿದ್ದ ಬ್ರಹ್ಮಜ್ಞಾನವು ಕರ್ಮವನ್ನು ನಾಶಮಾಡುತ್ತದೆ. ಹೀಗಿರುವಾಗ ಜ್ಞಾನಮಜ್ಞಾನಸ್ಯೈವ ನಿವರ್ತಕಂ ಎಂಬ ವ್ಯಾಪ್ತಿಯನ್ನು ನೀವು ಬ್ರಹ್ಮಜ್ಞಾನದೊಂದಿಗೆ ಹೊಂದಿಸಲು ಪ್ರಯತ್ನಿಸುವುದು ಅವಿವೇಕರೂಪ ದೋಷದಿಂದಲೇ ತಾನೆ?

**ಭಾವವಿಲಾಸಿನೀ**– ಸ್ವೋಕ್ತದೋಷಂ ಸಾಹಿತ್ಯಮುದ್ರಯಾಽಲಂಕರೋತಿ ॥ **ವ್ಯಾಪ್ತಿರಿತಿ** ॥ **ಕನ್ಯೈವ** ವಿದುಷಾಂಕರೇ ಪ್ರದಾನಾತ್ಪೂರ್ವಂ ವಿದ್ಯಮಾನೈವ । **ಯತ್** ಯಸ್ಮಾತ್ । **ಖಂಡಿತವ್ರತಾ** ಖಂಡಿತನಿಯಮಾ । ಅಜ್ಞಾನಸ್ಯೈವ ನಿವರ್ತಕಮಿತಿ ನಿಯಮಸ್ಯ ಉಕ್ತವಿಧಯಾ ಕರ್ಮಣ್ಯೈವ ತ್ಯಾಜಿತತ್ವಾತ್ । **ಕರ್ಮಣಾ** ಕನ್ಯಾದಿಶಾಯಾಮೇವ ಪುರುಷಪರಿಗ್ರಹಾಖ್ಯ ಕರ್ಮಣಾ । ಖಂಡಿತವ್ರತಾ ಖಂಡಿತಾಚಾರೇತಿ ಧ್ವನಿಃ । **ಉದ್ವಾಹಪ್ರಯತ್ನಃ** ತಸ್ಯಾಃ ವ್ಯಾಪ್ತೇಃ ಊರ್ಧ್ವಂ ಬ್ರಹ್ಮಜ್ಞಾನೇ ಪ್ರಾಪಣಪ್ರಯತ್ನಃ । ವಿದ್ವತ್ಕರೇ ಪ್ರದಾನಪ್ರಯತ್ನೋ ವಾ । ವಿವಾಹಪ್ರಯತ್ನ ಇತಿ ಧ್ವನಿಃ । **ದೋಷಾಯ** ಅವಿವೇಕಿತ್ವಾಖ್ಯದೋಷಾಯ । ಪಾಪಾಯೇತಿ ಧ್ವನಿಃ ॥ ೨೫ ॥

**ವಿವರಣೆ** - ಇಲ್ಲಿ ಕನ್ಯಾವಸ್ಥೆಯಲ್ಲಿರುವಾಗಲೇ ಎಂದರೆ ವಿದ್ವಾಂಸರ ಕೈಯನ್ನು ಹಿಡಿಯುವ ಮೊದಲೇ ಎಂದು ಅರ್ಥ. ಕರ್ಮದಿಂದ ಎಂದರೆ ವ್ಯಾಪ್ತಿಯ ವಿಷಯದಲ್ಲಿ ನೋಡುವಾಗ, ಅಜ್ಞಾನಕ್ಕೆ ಮಾತ್ರ ನಿವರ್ತಕ ಎಂಬ ನಿಯಮವು ಹಿಂದೆ ಹೇಳಿದಂತೆ ಕರ್ಮದಿಂದಲೇ ಭಗ್ನವಾಗಿದೆ (ಅಂದರೆ ಕರ್ಮಕ್ಕೂ ನಿವರ್ತಕವಾಗಿದೆ). ಇದು ವ್ಯಭಿಚಾರ. ತದುದ್ವಾಹಪ್ರಯತ್ನಃ ಎಂಬ ಪದವು ಆ ವ್ಯಾಪ್ತಿಯನ್ನು ಮೇಲ್ಪಟ್ಟದ ಬ್ರಹ್ಮಜ್ಞಾನದೊಂದಿಗೆ ಸೇರಿಸುವ ಪ್ರಯತ್ನ ಎಂದು ತಿಳಿಸುತ್ತದೆ. ಅಥವಾ ವಿದ್ವಾಂಸರ ಕೈಯಲ್ಲಿಡುವ ಪ್ರಯತ್ನ ಎಂಬ ಅರ್ಥವನ್ನು ತಿಳಿಸುತ್ತದೆ. ದೋಷಾಯ (ಎಂಬ ಪದವು ಅವಿವೇಕಿತ್ವರೂಪವಾದ ದೋಷವುಳ್ಳದ್ದು ಎಂದೂ ತಿಳಿಸುತ್ತದೆ.) ಕನ್ಯೆಯ ವಿಷಯದಲ್ಲಿ

ನೋಡುವಾಗ ಕರ್ಮದಿಂದ ಎಂದರೆ ಕನ್ಯೆಯಾಗಿರುವಾಗಲೇ ವ್ಯಭಿಚಾರರೂಪವಾದ ಕರ್ಮದಿಂದ ಎಂದು ಅರ್ಥ. ಖಂಡಿತವ್ರತಾ ಎಂಬ ಪದದಿಂದ ದುಷ್ಟಾಚಾರವುಳ್ಳವಳು ಎಂದು ಧ್ವನಿತವಾಗುತ್ತದೆ ತದುದ್ವಾಹಪ್ರಯತ್ನ ಎಂಬ ಪದವು ಅವಳನ್ನು ವಿದ್ವಾಂಸರ ಕೈಯಲ್ಲಿಡುವ ಪ್ರಯತ್ನ, ಎಂದರೆ ಅವಳಿಗೆ ವಿವಾಹಮಾಡುವ ಪ್ರಯತ್ನ ಎಂದೂ ತಿಳಿಸುತ್ತಿದೆ. ದೋಷಾಯ ಎಂಬ ಪದವು ಇದು ಪಾಪಕರ್ಮ ಎಂದು ಧ್ವನಿಸುತ್ತದೆ.

**ಕೇವಲ ವ್ಯಾಪ್ತಿಯನ್ನೇ ಒಪ್ಪಿಕೊಂಡು ವಿಷಯವನ್ನು ನಿರ್ಣಯಿಸುವವರಿಗೆ ಇನ್ನೊಂದು ದೋಷವನ್ನು ಹೇಳುತ್ತಿದ್ದಾರೆ-**

**ಯಜ್‌ಜ್ಞಾನಂ ತದನಿತ್ಯಂ ಚ ಯತ್ ಸುಖಂ ತದ್ವಿನಾಶವತ್ ।**
**ನ ಚೇದೇತಾದೃಶವ್ಯಾಪ್ತ್ಯಾ ನಿತ್ಯೇ ಜ್ಞಾನಸುಖೇ ತ್ಯಜ ॥ ೨೪೦ ॥**

**ಅರ್ಥ–** ನ ಚೇತ್ = ವ್ಯಾಪ್ತಿಗೆ ಶ್ರುತಿಯ ಬಲವಿಲ್ಲದೇ ಹೋದರೆ, ಯತ್ = ಯಾವುದು, ಜ್ಞಾನಂ = ಜ್ಞಾನವೋ, ತತ್ = ಅದು, ಅನಿತ್ಯಂ = ಅನಿತ್ಯವಾದುದು. ಚ = ಮತ್ತು, ಯತ್ = ಯಾವುದು, ಸುಖಂ = ಸುಖವೋ, ತದ್ = ಅದು, ವಿನಾಶವತ್ = ವಿನಾಶವುಳ್ಳದ್ದಾಗಿದೆ. ಏತಾದೃಶವ್ಯಾಪ್ತ್ಯಾ = ಈ ರೀತಿಯಾದ ವ್ಯಾಪ್ತಿಯಿಂದ, ನಿತ್ಯೇ = ನಿತ್ಯವಾದ, ಜ್ಞಾನಸುಖೇ = ಜ್ಞಾನಸುಖಗಳನ್ನು, ತ್ಯಜ = ಬಿಡು.

**ಅನುವಾದ - ಯಾವುದೇ ವ್ಯಾಪ್ತಿಗೆ ಶ್ರುತಿಯ ಬೆಂಬಲ ಅಗತ್ಯ. ಶ್ರುತಿಯ ಬೆಂಬಲವಿಲ್ಲದೇ ಹೋದರೆ ಲೋಕದಲ್ಲಿ ಕಂಡ ಸಾಮಾನ್ಯಸಾಹಚರ್ಯದ ಬಲದಿಂದ ಶಾಸ್ತ್ರಪ್ರಮೇಯಗಳನ್ನು ಸುಳ್ಳೆಂದು ಹೇಳಬೇಕಾಗುತ್ತದೆ. ಅದು ಹೇಗೆಂದರೆ ಲೋಕದಲ್ಲಿ ಜ್ಞಾನವು ಅನಿತ್ಯವಾಗಿರುವುದು ಕಂಡಿದೆ. ಯಾವುದೆಲ್ಲ ಜ್ಞಾನವೋ ಅದೆಲ್ಲ ಅನಿತ್ಯವಾಗಿಯೇ ಲೋಕದಲ್ಲಿ ಕಂಡಿದೆಯೆಂಬ ಕಾರಣದಿಂದ ನಿತ್ಯವಾದ ಜ್ಞಾನವೇ ಇಲ್ಲ ಎಂದು ವಾದಿಸಬೇಕಾದೀತು. ಹಾಗೆಯೇ ಲೋಕದಲ್ಲಿ ಸುಖವೆಲ್ಲವೂ ಅನಿತ್ಯವಾಗಿಯೇ ಕಂಡಿರುವುದರಿಂದ ನಿತ್ಯವಾದ ಸುಖವೇ ಇಲ್ಲ ಎಂದೂ ವಾದಿಸಬೇಕಾಗುತ್ತದೆ.**

**ವಿವರಣೆ -** ನ ಚೇತ್ ಎಂಬ ಪದಕ್ಕೆ ಶ್ರುತಿಯ ಪುರಸ್ಕಾರವಿಲ್ಲದೇ ಹೋದರೆ ಎಂದು ಅರ್ಥ.

**ಯದಿ ವ್ಯಾಪ್ತಿವಿರೋಧೇಽಪಿ ಶ್ರುತತ್ವಾತ್ ತದಪೇಕ್ಷಿತಂ ।**
**ತದಾ ಜ್ಞಾನಾದ್ ಬಂಧನಾಶಃ ಶ್ರುತಃ ಕಸ್ಮಾದುಪೇಕ್ಷ್ಯತೇ ॥ ೨೪೧ ॥**

**ಅರ್ಥ–** ಯದಿ = ಒಂದು ವೇಳೆ, ವ್ಯಾಪ್ತಿವಿರೋಧೇ ಅಪಿ = ಲೌಕಿಕವ್ಯಾಪ್ತಿಯ ವಿರೋಧವಿದ್ದರೂ, ಶ್ರುತತ್ವಾತ್ = ಶ್ರುತಿಯು ತಿಳಿಸುವುದರಿಂದ, ತತ್ = ನಿತ್ಯವಾದ

ಜ್ಞಾನಸುಖಗಳು ಇವೆಯೆಂಬ ಪ್ರಮೇಯವು, ಅಪೇಕ್ಷಿತಂ = ನಿನಗೆ ಇಷ್ಟವಾಗುವುದಾದರೆ, ತದಾ = ಆ ಪಕ್ಷದಲ್ಲಿ, ಶ್ರುತಃ = ಶ್ರುತಿಯು ತಿಳಿಸುವ, ಜ್ಞಾನಾತ್ = ಬ್ರಹ್ಮಜ್ಞಾನದಿಂದ, ಬಂಧನಾಶಃ = ಅನಿಷ್ಟಕರ್ಮರೂಪವಾದ ಬಂಧದ ನಾಶವು, ಕಸ್ಮಾತ್ = ಏತಕ್ಕಾಗಿ, ಉಪೇಕ್ಷ್ಯತೇ? = ನಿನ್ನಿಂದ ತಿರಸ್ಕರಿಸಲ್ಪಡುತ್ತದೆ?

**ಅನುವಾದ** - ಯಾವುದು ಜ್ಞಾನವೋ ಅದು ಅನಿತ್ಯ. ಹಾಗೆಯೇ ಯಾವುದು ಸುಖವೋ ಅದು ಅನಿತ್ಯ. ಈ ವಿಷಯವು ಲೋಕದಲ್ಲಿ ನಿಯತವಾಗಿ ಕಂಡಿದೆ. ಹಾಗಾಗಿ ಜ್ಞಾನಸುಖಗಳಿಗೂ ಅನಿತ್ಯತ್ವಕ್ಕೂ ವ್ಯಾಪ್ತಿ ಇದೆ. ಹಾಗಿದ್ದರೂ ವೇದವೇ ನಿತ್ಯಜ್ಞಾನವನ್ನೂ ನಿತ್ಯಸುಖವನ್ನೂ ತಿಳಿಸುತ್ತಿದೆ. ಈ ಕಾರಣದಿಂದ ಲೌಕಿಕವ್ಯಾಪ್ತಿಯ ವಿರೋಧವಿದ್ದರೂ ವೇದಕ್ಕೆ ಅನುಸಾರಿಯಾಗಿ ನಿತ್ಯಜ್ಞಾನವನ್ನೂ ನಿತ್ಯಸುಖವನ್ನು ಒಪ್ಪಬಹುದು ಎಂದು ನೀನು ವಾದಿಸುವಿಯಾದರೆ ಅದೇ ವೇದವು ಬ್ರಹ್ಮಜ್ಞಾನದಿಂದ ಅಜ್ಞಾನಕ್ಕಿಂತ ಅತಿರಿಕ್ತವಾದ ಬಂಧದ (ಅನಿಷ್ಟಕರ್ಮದ) ನಾಶವನ್ನೂ ಸ್ಪಷ್ಟವಾಗಿಯೇ ತಿಳಿಸುತ್ತಿದೆ. ಹಾಗಾಗಿ ಜ್ಞಾನಸುಖಗಳ ನಿತ್ಯತ್ವದ ವಿಷಯದಲ್ಲಿ ವ್ಯಾಪ್ತಿಯ ವಿರೋಧವಿದ್ದರೂ ನೀನು ವೇದವನ್ನು ಪುರಸ್ಕರಿಸುವಂತೆ ಬ್ರಹ್ಮಜ್ಞಾನದಿಂದ ಕರ್ಮನಾಶವಾಗುವ ವಿಷಯದಲ್ಲೂ ವೇದವನ್ನೇ ಪುರಸ್ಕರಿಸಬೇಕು, ಹೊರತು ತಿರಸ್ಕರಿಸಬಾರದು.

**ಭಾವವಿಲಾಸಿನೀ– ವ್ಯಾಪ್ತ್ಯೇಕಶರಣಸ್ಯ ದೋಷಾಂತರಮಪ್ಯಾಹ – ಯದ್‌ಜ್ಞಾನಮಿತಿ ॥ ನಚೇತ್ ಶ್ರುತಿಪುರಸ್ಕಾರೀ ನಚೇತ್ ॥ ೨೪೦-೨೪೧ ॥**

ಯಜ್ಞ ಹಾಗೂ ಸ್ವರ್ಗಗಳ ಮಧ್ಯದಲ್ಲಿ ಹೇಗೆ ಅದೃಷ್ಟವನ್ನು (ಪುಣ್ಯವನ್ನು) ಕಲ್ಪಿಸಲಾಗುತ್ತದೋ ಹಾಗೆಯೇ ಜ್ಞಾನ ಹಾಗೂ ಬಂಧಧ್ವಂಸಗಳ ಮಧ್ಯದಲ್ಲಿ ಶ್ರುತಿಯಲ್ಲಿ ಹೇಳದೇ ಹೋದರೂ ಅಜ್ಞಾನಧ್ವಂಸವನ್ನು ಕಲ್ಪಿಸುತ್ತೇವೆಂದು ಪರರು ತಮ್ಮ ಗ್ರಂಥಗಳಲ್ಲಿ ಪ್ರತಿಪಾದಿಸಿದ್ದಾರೆ. ಈ ವಿಷಯದಲ್ಲಿ ದೃಷ್ಟಾಂತ ಹಾಗೂ ದಾರ್ಷ್ಟಾಂತಿಕಗಳಿಗೆ ಸಾಮ್ಯವಿಲ್ಲ ಎಂದು ತ್ರಿಕ್ಷಣ.. ಇತ್ಯಾದಿ ಶ್ಲೋಕಗಳಿಂದ ತೋರಿಸುತ್ತಿದ್ದಾರೆ-

ತ್ರಿಕ್ಷಣಸ್ಥಾಯಿ ಯತ್ ಕರ್ಮ ತಸ್ಯ ಕಾಲಾಂತರೇ ಭವನ್ ।
ಸ್ವರ್ಗಸ್ತದೈವ ಸಾಧ್ಯಃ ಸ್ಯಾತ್ ಮಧ್ಯೇಽನ್ಯದ್ ಯದಿ ನ ವಿದ್ಯತೇ ॥೨೪೨॥

ಅಸತಃ ಕಾರಣತ್ವಂ ತು ಶ್ರುತೇಃ ಸೂತ್ರಕೃತೋಽಪಿ ನ ।
ಅಸತಸ್ಸತ್ ಕಥಂ ಜಾಯೇತೇತಿ ವೇದೋದಿತಂ ಸ್ಮರ ।
ಅಂತರಾನುಪಪತ್ತ್ಯೈವ ತತಸ್ತತ್ರಾನ್ಯಕಲ್ಪನಾ ॥ ೨೪೩ ॥

**ಅರ್ಥ**– ಯತ್ = ಯಾವ ಕಾರಣದಿಂದ, ಕರ್ಮ = ಯಜ್ಞಾದಿಕರ್ಮವು, ತ್ರಿಕ್ಷಣಸ್ಥಾಯಿ = ಮೂರುಕ್ಷಣಮಾತ್ರವಿರುವುದೋ (ಅಲ್ಪಕಾಲ ಅಸ್ತಿತ್ವವುಳ್ಳದ್ದೋ) ತಸ್ಯ =

ಆ ಕರ್ಮದಿಂದ, ಸಾಧ್ಯಃ = ಸಾಧ್ಯವಾದ (ಆ ಕರ್ಮದಿಂದ ಪಡೆಯಬಹುದಾದ) ಕಾಲಾಂತರೇ = ಬೇರೊಂದು ಕಾಲದಲ್ಲಿ, ಭವನ್ = ಉಂಟಾಗುವ, ಸ್ವರ್ಗಃ = ಸ್ವರ್ಗವು, ಮಧ್ಯೇ = ಸ್ವರ್ಗಃ ಮತ್ತು ಕರ್ಮಗಳ ಮಧ್ಯದಲ್ಲಿ, ಅನ್ಯತ್ = ಇವುಗಳಿಗೆ ಸಂಬಂಧವನ್ನು ಕಲ್ಪಿಸುವ ಬೇರೊಂದು, (ಪುಣ್ಯರೂಪವಾದ ಅಪೂರ್ವವು) ಯದಿ ನ = ಅಭಿಮತವಾದದ್ದು ಇಲ್ಲದಿದ್ದರೆ, ತದಾ ಏವ = ಕರ್ಮಕಾಲದಲ್ಲಿಯೇ, ಸ್ಯಾತ್ = ಆಗಬೇಕಾಗುತ್ತದೆ.

ಶ್ರುತೇಃ = ಶ್ರುತಿಗೆ, ಸೂತ್ರಕೃತಃ ಅಪಿ = ಸೂತ್ರಕಾರರಿಗೂ ಕೂಡ, ಅಸತಃ = ಅಸತ್ ಆದ ವಸ್ತುವಿಗೆ, (ಅಸ್ತಿತ್ವವಿಲ್ಲದ ವಸ್ತುವಿಗೆ) ಕಾರಣತ್ವಂ ತು = ಕಾರಣತ್ವವಾದರೂ, ನ = ಅಭಿಮತವಾಗಿಲ್ಲ, ಅಸತಃ = ಅಸತ್ ವಸ್ತುವಿನಿಂದ, ಸತ್ = ಸತ್ ವಸ್ತುವು, ಕಥಂ = ಹೇಗೆ ತಾನೆ, ಜಾಯೇತ? = ಹುಟ್ಟೀತು? ಇತಿ = ಎಂಬುದಾಗಿ, ವೇದೋದಿತಂ = ಶ್ರುತಿಯಲ್ಲಿ ಹೇಳಿರುವುದನ್ನು, ಸ್ಮರ = ನೆನಪಿಸಿಕೋ. ತತಃ = ಆದ್ದರಿಂದ, ತತ್ರ = ಯಾಗ ಮತ್ತು ಸ್ವರ್ಗಗಳ ಮಧ್ಯದಲ್ಲಿ, ಅಂತರಾನುಪಪತ್ತ್ಯಾ ಏವ = ಬಹಳಷ್ಟು ಅಂತರವಿರುವುದು ಶ್ರುತಿಗೆ ಹೊಂದದಿರುವುದರಿಂದಲೇ, ವ್ಯವಧಾನವು ಕೂಡದಿರುವುದರಿಂದಲೇ, ಅನ್ಯಕಲ್ಪನಾ = ಬೇರೊಂದು ವಸ್ತುವನ್ನು (ಪುಣ್ಯವನ್ನು) ಕಲ್ಪಿಸಬೇಕಾಗುತ್ತದೆ.

**ಅನುವಾದ** - ಯಜ್ಞದಿಂದ ಸ್ವರ್ಗಪ್ರಾಪ್ತಿಯಾಗುವುದೆಂದು ಶ್ರುತಿ ಹೇಳುತ್ತಿದೆ. ಯಜ್ಞ ಒಂದು ಕರ್ಮ. ಕರ್ಮವು ಮೂರೇ ಕ್ಷಣ ಇರಬಹುದು. ಅಂದರೆ ಕರ್ಮವು ಹೆಚ್ಚುಕಾಲ ಇರುವುದಿಲ್ಲ, ಆದರೆ ಆ ಯಜ್ಞರೂಪಕರ್ಮದಿಂದ ಸಿಗುವ ಸ್ವರ್ಗವು ಬಹುಕಾಲದ ಅನಂತರವಷ್ಟೇ ಸಿಗುತ್ತದೆ. ಕಾರ್ಯಕಾರಣಗಳು ಸಮಾನ ಕಾಲದಲ್ಲಿರಬೇಕೆಂಬುದು ಸಾಮಾನ್ಯ ನಿಯಮ. ಹಾಗಾಗಿ ಶ್ರುತಿಯಲ್ಲಿ ಸ್ವರ್ಗ ಯಜ್ಞಗಳಿಗೆ ಹೇಳಿದ ಕಾರ್ಯಕಾರಣಭಾವವನ್ನು ಹೊಂದಿಸುವುದಕ್ಕಾಗಿ ಮಧ್ಯದಲ್ಲಿ ಪುಣ್ಯ ಎಂಬ ಪೂರ್ವವಸ್ತುವನ್ನು ಒಪ್ಪಲಾಗುತ್ತದೆ. ಇದು ಯಜ್ಞಕಾಲದಲ್ಲಿ ಯಜ್ಞದಿಂದ ಉತ್ಪನ್ನವಾಗಿ ಸ್ವರ್ಗಪ್ರಾಪ್ತಿಯ ತನಕವೂ ಇರುತ್ತದೆ. ಹೀಗೆ ಸ್ವರ್ಗಪ್ರಾಪ್ತಿಗೆ ನೇರವಾಗಿ (ಸಮಕಾಲದಲ್ಲಿದ್ದು) ಕಾರಣವಾಗುವ ಪುಣ್ಯವು ಯಜ್ಞದಿಂದ ಮಾತ್ರ ಸಿಗುವುದರಿಂದ ಯಜ್ಞವೇ ಸ್ವರ್ಗಕ್ಕೆ ಕಾರಣ ಎಂದು ಶ್ರುತಿಯು ಹೇಳುತ್ತದೆ ಎಂದು ಶ್ರುತಿಯು ಹೇಳಿದ ಪ್ರಮೇಯವನ್ನು ಸಮರ್ಥಿಸುವುದಕ್ಕಾಗಿ ಮಧ್ಯದಲ್ಲಿ ಪುಣ್ಯವನ್ನು ಅನಿವಾರ್ಯವಾಗಿ ಒಪ್ಪಬೇಕಾಗುತ್ತದೆ. ಒಂದು ವೇಳೆ ಯಜ್ಞಕರ್ಮ ಮತ್ತು ಸ್ವರ್ಗಗಳ ಮಧ್ಯೆ ಪುಣ್ಯವನ್ನು ಒಪ್ಪದೇ ಹೋದರೆ ಯಜ್ಞವು ಸ್ವರ್ಗಕ್ಕೆ ಕಾರಣವಾದುದರಿಂದ ಯಜ್ಞಮಾಡಿದ ಕೂಡಲೇ ಸ್ವರ್ಗವು ಸಿಗಬೇಕಾದೀತು. ಹಾಗೆ ಸಿಗುವುದಿಲ್ಲ ಎಂಬುದು ನಿಶ್ಚಿತವಾದುದರಿಂದ ಶ್ರುತಿಯು ಹೇಳಿದ ಕಾರ್ಯಕಾರಣಭಾವವನ್ನು ಬಿಡಬೇಕಾದೀತು. ಆದರೆ ಈ ಎರಡೂ ಅನಿಷ್ಟವೇ. ಆದುದರಿಂದ ಎಲ್ಲ ದಾರ್ಶನಿಕರೂ ಪುಣ್ಯ ಎಂಬ ಅಪೂರ್ವವನ್ನು ಮಧ್ಯದಲ್ಲಿ ಒಪ್ಪಿದ್ದಾರೆ.

ಶ್ರುತಿಯಾಗಲೀ ಸೂತ್ರಕಾರರಾಗಲೀ ಅಸತ್ ವಸ್ತುವಿಗೆ ಕಾರಣತ್ವವನ್ನು ಹೇಳುವುದಿಲ್ಲ. (ಅಸ್ತಿತ್ವವಿಲ್ಲದ ವಸ್ತುವನ್ನೇ ಅಸತ್ ಎನ್ನುತ್ತಾರೆ) ಏಕೆಂದರೆ ಅಸತ್‌ನಿಂದ ಸತ್ ಹೇಗೆ ತಾನೆ ಹುಟ್ಟಲು ಸಾಧ್ಯ? ಎಂದೂ ವೇದವೇ ಹೇಳುತ್ತಿದೆ. ಎಂದರೆ ಅಸತ್ ಆದ ವಸ್ತುವಿನಿಂದ ಸತ್ ಆದ ವಸ್ತುವು ಹುಟ್ಟಲಾರದು ಎಂದೇ ವೇದಕ್ಕೆ ಅಭಿಮತವಾಗಿದೆ. ಹಾಗಿದ್ದೂ ವೇದವು ಯಜ್ಞಸ್ವರ್ಗಗಳಿಗೆ ಕಾರ್ಯಕಾರಣಭಾವವನ್ನು ಹೇಳುತ್ತಿದೆ. ಆದರೆ ಕರ್ಮವು ಆಶುವಿನಾಶಿ (ಬೇಗನೆ ನಾಶವಾಗುವ ವಸ್ತು) ಆಗಿರುವುದರಿಂದ ಸ್ವರ್ಗಪ್ರಾಪ್ತಿಯ ಕಾಲದಲ್ಲಿ ಕರ್ಮವಿರಲು ಸಾಧ್ಯವಿಲ್ಲ. ಸ್ವರ್ಗಪ್ರಾಪ್ತಿಯ ಕಾಲದಲ್ಲಿ ಇಲ್ಲದ (ಅಂದರೆ ಅಸತ್ ಆದ) ಯಜ್ಞದಿಂದ ಸ್ವರ್ಗವು ಸಿಗುತ್ತದೆ ಎಂದು ವೇದವು ಹೇಳಲು ಸಾಧ್ಯವೇ? ಈ ಎಲ್ಲ ಗೋಜಲುಗಳನ್ನು ಪರಿಹರಿಸುವುದಕ್ಕಾಗಿ ಯಜ್ಞ ಹಾಗೂ ಸ್ವರ್ಗದ ನಡುವೆ ಪುಣ್ಯವನ್ನು ಒಪ್ಪಬೇಕಾಗುತ್ತದೆ.

ಆದರೆ ಜ್ಞಾನ ಹಾಗೂ ಬಂಧಧ್ವಂಸಗಳ ನಡುವೆ ಹೀಗೆ ಅನುಪಪತ್ತಿ ಇಲ್ಲ. ಜ್ಞಾನವು ಅಜ್ಞಾನವನ್ನು ಮಾತ್ರನಾಶಗೊಳಿಸುವುದು ಎಂಬ ನಿಯಮಕ್ಕೆ ಅನುಸಾರಿಯಾಗಿ ಜ್ಞಾನವು ಕರ್ಮವನ್ನು ನಾಶಗೊಳಿಸಲಾರದು ಎಂಬ ವಾದವೂ ಸರಿಯಲ್ಲ. ಏಕೆಂದರೆ ಸತ್ಯವಾದುದನ್ನು ಜ್ಞಾನವು ನಾಶಗೊಳಿಸುವುದಾದರೆ ಯಾವುದೇ ಬಾಧಕವಿಲ್ಲ. ಹೀಗೆ ದೃಷ್ಟಾಂತವಾದ ಯಜ್ಞಸ್ವರ್ಗಗಳ ನಡುವೆ ಬಾಧಕವಿರುವ ಪ್ರಯುಕ್ತ ಪುಣ್ಯವನ್ನು ಒಪ್ಪಬೇಕಾದ ಅನಿವಾರ್ಯತೆ ಇದ್ದರೂ ಜ್ಞಾನ ಮತ್ತು ಕರ್ಮಧ್ವಂಸಗಳ ನಡುವೆ ಇನ್ನೊಂದನ್ನು ಒಪ್ಪಬೇಕಾದ ಅನಿವಾರ್ಯತೆ ಇಲ್ಲದಿರುವುದರಿಂದ ದೃಷ್ಟಾಂತ-ದಾರ್ಷ್ಟಾಂತಿಕಗಳ ನಡುವೆ ಸಾಮ್ಯ ಇಲ್ಲ.

**ಭಾವವಿಲಾಸಿನೀ–** ಯಥಾ ಯಜ್ಞಸ್ವರ್ಗಯೋರ್ಮಧ್ಯೇಽದೃಷ್ಟಂ ಕಲ್ಪ್ಯತೇ ತಥಾಜ್ಞಾನಬಂಧಧ್ವಂಸಯೋರ್ಮಧ್ಯೇಽಶ್ರುತಸ್ಯಾಪ್ಯಜ್ಞಾನಧ್ವಂಸಸ್ಯ ಕಲ್ಪನಮಿತಿ ಪರೇಣ ಸ್ವಗ್ರಂಥೇ ಲಿಖಿತಮ್ । ತತ್ರ ದೃಷ್ಟಾಂತ ದಾರ್ಷ್ಟಾಂತಿಕಯೋರ್ವೈಷಮ್ಯಂ ದರ್ಶಯತಿ ॥ **ತ್ರಿಕ್ಷಣೇತಿ** ॥ ಕರ್ಮಯಾಗರೂಪಮ್ ॥ ೨೪೨ ॥

ಅತಸ್ತವೈಷ ದೃಷ್ಟಾಂತೋ ದೃಷ್ಟಾಂತಸ್ತ್ವದಕೌಶಲೇ ।
ಯದ್ ಬಾಹ್ಯವ್ಯಾಪ್ತಿವೈರೇಣ ಶ್ರುತ್ಯುಕ್ತಂ ತ್ವಂ ಜಿಹಾಸಸಿ ॥ ೨೪೪ ॥

**ಅರ್ಥ–** ಅತಃ = ಆದುದರಿಂದ, ತವ = ನಿನ್ನ, ಏಷಃ = ಈ, ದೃಷ್ಟಾಂತಃ = ದೃಷ್ಟಾಂತವು, ತ್ವದಕೌಶಲೇ = ನಿನ್ನ ಮಂದಬುದ್ಧಿಯನ್ನು ತೋರಿಸುವುದಕ್ಕೆ, ದೃಷ್ಟಾಂತಃ = ನಿದರ್ಶನವಾಗಿದೆ. ಯತ್ = ಏಕೆಂದರೆ, ತ್ವಂ = ನೀನು, ಬಾಹ್ಯವ್ಯಾಪ್ತಿವೈರೇಣ = ಬಾಹ್ಯವ್ಯಾಪ್ತಿಗೆ ವಿರೋಧಬರುವುದೆಂಬ ಕಾರಣದಿಂದ, ಶ್ರುತ್ಯುಕ್ತಂ = ಶ್ರುತಿಯು ಹೇಳಿದ ವಿಷಯವನ್ನು, ಜಿಹಾಸಸಿ = ಬಿಡಲು ಇಚ್ಛಿಸುತ್ತಿರುವಿ.

**ಅನುವಾದ -** ಜ್ಞಾನವು ಅಜ್ಞಾನವನ್ನು ಮಾತ್ರ ನಾಶಗೊಳಿಸುತ್ತದೆ ಎಂಬುದು ಲೋಕದಲ್ಲಿ ನಿಯತವಾಗಿರಬಹುದು. ಆದರೆ ಇದಕ್ಕೆ ಶ್ರುತಿಯ ಬೆಂಬಲವಿಲ್ಲ. ಆದ್ದರಿಂದ ಇದು ಬಾಹ್ಯವ್ಯಾಪ್ತಿ. ಈ ಬಾಹ್ಯವ್ಯಾಪ್ತಿಯ ವಿರೋಧಬರುವುದೆಂಬ ಕಾರಣದಿಂದ ಶ್ರುತಿಯು ಹೇಳಿದ ಜ್ಞಾನದಿಂದ ಕರ್ಮನಾಶವಾಗುವುದೆಂಬ ವಿಷಯವನ್ನು ನಿರಾಕರಿಸಲು ಬಯಸುತ್ತಿರುವಿ. ಯಜ್ಞಸ್ವರ್ಗಗಳ ನಡುವೆ ಪುಣ್ಯವನ್ನು ಒಪ್ಪದಿದ್ದರೆ ಶ್ರುತ್ಯುಕ್ತವಾದ ಕಾರ್ಯಕಾರಣಭಾವವೇ ಕೂಡುವುದಿಲ್ಲ ಎಂಬ ಬಾಧಕವಿರುವುದರಿಂದ ಶ್ರುತಿಯು ಹೇಳಿದ ಕಾರ್ಯಕಾರಣಭಾವನ್ನು ಹೊಂದಿಸುವುದಕ್ಕಾಗಿ ದೃಷ್ಟಾಂತದಲ್ಲಿ ಮಧ್ಯದಲ್ಲಿ ಇನ್ನೊಂದರ ಕಲ್ಪನೆ ನಡೆದಿದ್ದರೆ, ದಾರ್ಷ್ಟಾಂತಿಕದಲ್ಲಿ ಲೌಕಿಕವಾದ ವ್ಯಾಪ್ತಿಯ ವಿರೋಧಬರುವುದೆಂಬ ಕಾರಣದಿಂದ ಶ್ರುತಿಯು ಹೇಳಿದುದನ್ನೇ ಬಿಟ್ಟು ಮಧ್ಯದಲ್ಲಿ ಇನ್ನೊಂದರ (ಅಜ್ಞಾನ ಧ್ವಂಸ) ಕಲ್ಪನೆಯನ್ನು ಮಾಡಲು ಹೊರಟಿದ್ದೀಯೇ. ಇದು ನಿನ್ನ ಮಂದಮತಿಗೇ ದೃಷ್ಟಾಂತವೇ ಹೊರತು ಪ್ರಮೇಯಕ್ಕೆ ಸರಿಯಾದ ದೃಷ್ಟಾಂತವಲ್ಲ.

**ಭಾವವಿಲಾಸಿನೀ–** ನ ಅಭಿಮತಂ ನ । ತತ್ರ ಯಾಗಸ್ವರ್ಗಯೋರ್ಮಧ್ಯೇ ॥ ೨೪೩-೨೪೪ ॥

ಯೇಯಂ ಬಾಹ್ಯಾ ಚ ಸಂದಿಗ್ಧಾ ಸ್ಖಲದ್ವ್ಯಾಪ್ತಿಸಹೋದರೀ ।
ಶ್ರುತಿಸೂತ್ರಾಮತಾ ತಾಂ ತು ಜರದ್ವಾರಾಂಗನಾಂ ತ್ಯಜ ॥ ೨೪೫ ॥

**ಅರ್ಥ–** ಯಾ = ನೀನು ಹೇಳುವ ಯಾವ, ಇಯಂ = (ಜ್ಞಾನವು ಅಜ್ಞಾನವನ್ನು ಮಾತ್ರನಾಶಗೊಳಿಸುವುದು ಎಂಬ) ವ್ಯಾಪ್ತಿಯು, ಬಾಹ್ಯಾ = ಕೇವಲ ಲೌಕಿಕವಾದುದೋ. ಚ = ಮತ್ತು, ಸಂದಿಗ್ಧಾ = ಸಂದೇಹಾಸ್ಪದವಾದುದೋ. ಸ್ಖಲದ್ವ್ಯಾಪ್ತಿಸಹೋದರೀ = (ಯಾವುದು ಜ್ಞಾನವೋ ಅದು ಅನಿತ್ಯ ಮತ್ತು ಯಾವುದು ಸುಖವೋ ಅದು ಅನಿತ್ಯ ಎಂಬ) ಬಿದ್ದು ಹೋಗುವ ವ್ಯಾಪ್ತಿಗಳ ಜೊತೆಗೇ ಹುಟ್ಟಿರುವುದೋ, ತಾಂ = ಅಂತಹ, ಶ್ರುತಿಸೂತ್ರಾಮತಾಂ = ಶ್ರುತಿ ಹಾಗೂ ಸೂತ್ರಗಳಿಗೆ ಒಪ್ಪಿಗೆ ಇಲ್ಲದ, ಜರದ್ವಾರಾಂಗನಾಂ ತು = ವಯಸ್ಸಾದ ವೇಶ್ಯೆಯಂತಿರುವ ವ್ಯಾಪ್ತಿಯನ್ನು, ತ್ಯಜ = ಬಿಡು.

**ಅನುವಾದ -** ಹಿಂದೆ ಹೇಳಿದಂತೆ ನೀವು ಹೇಳುವ ವ್ಯಾಪ್ತಿಯು ಶ್ರುತಿಯ ಬೆಂಬಲವಿಲ್ಲದೆ ಕೇವಲ ಲೌಕಿಕವಾಗಿ ಬಾಹ್ಯವಾಗಿದೆ. ಅಲ್ಲದೆ ಈ ವ್ಯಾಪ್ತಿಯ ಪ್ರಾಮಾಣಿಕತೆಯನ್ನು ತೋರಿಸಲು ಸರಿಯಾದ ದೃಷ್ಟಾಂತಸ್ಥಳವೂ ಇಲ್ಲದಿರುವುದರಿಂದ ಇದು ಸಂದೇಹಾಸ್ಪದವೂ ಆಗಿದೆ. ಅಷ್ಟುಮಾತ್ರವಲ್ಲ, ೨೪೦ನೇ ಶ್ಲೋಕದಲ್ಲಿ ತೋರಿಸಿರುವ ಎರಡು ವ್ಯಾಪ್ತಿಗಳಂತೆ ಇದೂ ಬಿದ್ದುಹೋಗುವ ವ್ಯಾಪ್ತಿಯೇ ಆಗಿದೆ. ಇಂತಹ ಶ್ರುತಿ ಮತ್ತು ಸೂತ್ರಗಳಿಗೆ ವಿರುದ್ಧವಾದ ವ್ಯಾಪ್ತಿಯನ್ನು, ಹೊರಗೇ ತಿರುಗಾಡುವ, ಸಂದೇಹಾಸ್ಪದವಾದ ನಡವಳಿಕೆಯುಳ್ಳ ವೇಶ್ಯೆಯರ

**ಸಹೋದರಿಯಂತಿರುವ, ಕೆಟ್ಟವಳೆಂದು ಜನರಿಂದ ಆಡಿಸಿಕೊಂಡು ಮಂಗಳಸೂತ್ರಕ್ಕೆ ಅನರ್ಹಳಾದ, ವೃದ್ಧಳಾದ ವೇಶ್ಯಾ ಸ್ತ್ರೀಯನ್ನು ಕುಲೀನರು ಬಿಡುವಂತೆ ಬಿಟ್ಟು ಬಿಡು.**

ಭಾವವಿಲಾಸಿನೀ– ಯಾ ಇಯಂ ವ್ಯಾಪ್ತಿಃ । ಬಾಹ್ಯಾ ಶ್ರೌತಾರ್ಥಾನುಪಪತ್ತ್ಯಾಽಪ್ರಾಪ್ತಾ ಕಿಂತು ಶ್ರುತಿಬಹಿರ್ಭೂತೇತ್ಯರ್ಥಃ । ಸ ಪಕ್ಷಾಭಾವಾತ್ ಸಂದಿಗ್ಧಾ । ಸ್ಖಲದ್ವ್ಯಾಪ್ತೀ ಯಜ್ಜ್ಞಾನಂ ತದನಿತ್ಯಂ ಯತ್ಸುಖಂ ತದನಿತ್ಯಮಿತಿ ವ್ಯಾಪ್ತೀ । ತಯೋಃಸಹೋದರೀ । ತೇ ಯಥಾ ಸ್ವಕಪೋಲಕಲ್ಪಿತೇ ತಥಾ ಇಯಮಪಿ ಸ್ವಕಪೋಲಕಲ್ಪಿತೇತ್ಯರ್ಥಃ । ತತ್ಕುಲಪರಂಪರಾಪ್ರಾಪ್ತತ್ವಾತ್ ಖಂಡಿತವ್ರತತ್ವಾಚ್ಚ ಜರದ್ವಾರಾಂಗನಾಮಿತ್ಯುಕ್ತಮ್ ॥ ೨೪೫ ॥

**ವಿವರಣೆ** - ಯಾ ಇಯಂ ಎಂಬ ಪದವು ಹಿಂದೆ ಹೇಳಿದ ವ್ಯಾಪ್ತಿಯನ್ನು ತಿಳಿಸುತ್ತದೆ. ಬಾಹ್ಯಾ ಎಂಬ ಪದಕ್ಕೆ ಶ್ರುತಿಯ ಅರ್ಥವನ್ನು ಹೊಂದಿಸಲೋಸುಗ ಈ ವ್ಯಾಪ್ತಿಯು ಹೊರಟಿಲ್ಲ, ಹೊರತು ಶ್ರುತಿಗೆ ವಿರುದ್ಧವೂ ಆಗಿದೆ ಎಂದು ಅರ್ಥ. ಸಂದಿಗ್ಧಾ ಎಂಬ ಪದವು ಈ ವ್ಯಾಪ್ತಿಯನ್ನು ತೋರಿಸಲು ಸರಿಯಾದ ದೃಷ್ಟಾಂತಸ್ಥಳವಿಲ್ಲ ಎಂದು ತೋರಿಸುತ್ತದೆ. ಸ್ಖಲದ್ವ್ಯಾಪ್ತಿಸಹೋದರೀ ಎಂಬಲ್ಲಿ ಸ್ಖಲದ್ವ್ಯಾಪ್ತಿ ಎಂಬ ಪದವು ಯತ್ ಜ್ಞಾನಂ ತದನಿತ್ಯಂ, ಯತ್ ಸುಖಂ ತದ್ ವಿನಾಶವತ್ ಎಂಬ ಎರಡು ವ್ಯಾಪ್ತಿಗಳಂತೆ ಇದೂ ಬಿದ್ದುಹೋಗುವುದೆಂದು ತಿಳಿಸುತ್ತದೆ. ಸಹೋದರೀ ಎಂಬ ಪದವು ಈ ಎರಡು ವ್ಯಾಪ್ತಿಗಳು ಹೇಗೆ ಕಪೋಲಕಲ್ಪಿತಗಳೋ ಹಾಗೆಯೇ ಸ್ವಕಪೋಲಕಲ್ಪಿತವಾಗಿದೆ ಎಂದೂ ಧ್ವನಿಸುತ್ತದೆ. ಹೀಗೆ ವಿದ್ವಾಂಸರ ಪಡೆಯಲ್ಲಾಗಲೀ, ವಿದ್ವತ್ ಪರಂಪರೆಯಲ್ಲಾಗಲೀ ಬಂದಿರದ (ಅವರ ಒಪ್ಪಿಗೆ ಇಲ್ಲದಿರುವ) ಕರ್ಮದಲ್ಲಿಯೇ ನಿಯಮಕ್ಕೆ ಭಂಗ ತಂದುಕೊಂಡಿರುವ ವಸ್ತು ಈ ವ್ಯಾಪ್ತಿಯಾಗಿದೆ ಎಂಬುದನ್ನು ತಿಳಿಸಲು ಜರದ್ವಾರಾಂಗನಾಂ ಎಂಬ ಪದವನ್ನು ಬಳಸಿದ್ದಾರೆ. ಹೇಗೆ ಮುದಿಯಾದ ವೇಶ್ಯೆ ಸಂಪರ್ಕವು ಅತ್ತ ಸುಖಕ್ಕೂ ಆಗದೆ, ಇತ್ತ ಆಚಾರಕ್ಕೂ ಆಗದೆ ಕೇವಲ ಅಧಃಪತನಕ್ಕೆ ಕಾರಣವಾಗುವುದೋ ಹಾಗೆಯೇ ನಿನ್ನ ವ್ಯಾಪ್ತಿಯನ್ನು ನೆಚ್ಚಿಕೊಂಡರೆ ಅಧಃಪತನವೇ ಹೊರತು ಬೇರೇನೂ ಪ್ರಯೋಜನವಿಲ್ಲ ಎಂಬ ಅಂಶವನ್ನು ಇಲ್ಲಿ ಸೂಚಿಸಿದ್ದಾರೆ.

ಜ್ಞಾನಾದ್ದ್ವಯೋಶ್ಚ ನಾಶೋಽಸ್ತು ವ್ಯಾಘ್ರಾದ್ಗೋಮೃಗಯೋರಿವ ॥ ೨೪೬ ॥

**ಅರ್ಥ–** ಜ್ಞಾನಾತ್ = ಅಪರೋಕ್ಷಜ್ಞಾನದಿಂದ, ದ್ವಯೋಃ ಚ = ಅಜ್ಞಾನ ಹಾಗೂ ಬಂಧ ಈ ಎರಡಕ್ಕೂ, ನಾಶಃ = ನಾಶವು, ವ್ಯಾಘ್ರಾತ್ = ಹುಲಿಯಿಂದ, ಗೋಮೃಗಯೋಃ ಇವ = ಹಸು ಹಾಗೂ ಜಿಂಕೆಗಳಿಗಿರುವಂತೆ, ಅಸ್ತು = ಆಗಲಿ.

**ಅನುವಾದ - ಹೇಗೆ ಹುಲಿಯು ಹಸು ಹಾಗೂ ಜಿಂಕೆ ಈ ಎರಡೂ ಜೊತೆಯಾಗಿ ಸಿಕ್ಕಿದರೂ ಒಂದೇ ಬಾರಿಗೆ ಎರಡನ್ನು ನಾಶಗೊಳಿಸಬಲ್ಲದೋ, ಹಾಗೆಯೇ**

ಅಪರೋಕ್ಷಜ್ಞಾನವು ಬಂಧವನ್ನೂ, ಅಜ್ಞಾನವನ್ನೂ ಜೊತೆಯಾಗಿಯೇ ನಾಶಗೊಳಿಸಬಲ್ಲದು. ಹಿಂದೆ ಹೇಳಿದಂತೆ ಜ್ಞಾನವು ಅಜ್ಞಾನಮಾತ್ರನಾಶಕ ಎಂಬ ವ್ಯಾಪ್ತಿಯು ಶ್ರುತಿಸೂತ್ರಗಳಿಗೆ ಸಂವಾದಿಯಲ್ಲದೇ ಇರುವುದರಿಂದ, ಅಜ್ಞಾನನಾಶಕ ಎಂಬ ಅಂಶವನ್ನು ಒಪ್ಪಿ ಅಷ್ಟೇ ಅಲ್ಲದೇ ಬಂಧಕ್ಕೂ ನಾಶಕವಾಗಿದೆ ಎಂಬುದನ್ನು ಒಪ್ಪಿಕೊಳ್ಳುವುದೇ ಶ್ರೇಯಸ್ಕರವಾಗಿದೆ.

**ಭಾವವಿಲಾಸಿನೀ–** ಕಿಂಚ ಜ್ಞಾನಮಜ್ಞಾನಸ್ಯೈವ ನಾಶಕಮಿತಿ ನಿಯಮಸೂಕ್ತವಿಧಯಾ ಕರ್ಮಣೈವ ಖಂಡಿತಃ। ಅಜ್ಞಾನನಾಶಕತ್ವಮಾತ್ರಸ್ಯ ದರ್ಶನೇಽಪಿ ನಾಸ್ಮಾಕಮನಿಷ್ಟಮಿತ್ಯಾಹ–**ಜ್ಞಾನಾದಿತಿ**॥ ದ್ವಯೋಃ ಅಜ್ಞಾನಬಂಧಯೋಃ ॥ ೨೪೬॥

ಅಭಾವಾಜ್ಞಾನನಾಶಾತ್ಮ ನ ಜ್ಞಾನಂ ತಸ್ಯ ನಾಶಕಂ ।
ಕಿಂ ಘಟಪ್ರಾಗಭಾವಸ್ಯ ಘಟ ಏವ ವಿನಾಶಕಃ ॥ ೨೪೭ ॥

**ಅರ್ಥ–** ಅಭಾವಾಜ್ಞಾನನಾಶಾತ್ಮ = ಅಭಾವರೂಪವಾದ ಅಜ್ಞಾನದ ನಾಶಸ್ವರೂಪವುಳ್ಳದ್ದು, ಜ್ಞಾನಂ = ಜ್ಞಾನವು, ತಸ್ಯ = ಆ ಅಜ್ಞಾನಕ್ಕೆ, ನಾಶಕಂ = ನಾಶಕವಾದುದು, ನ = ಅಲ್ಲ, ಘಟಪ್ರಾಗಭಾವಸ್ಯ = ಘಟದ ಪ್ರಾಗಭಾವಕ್ಕೆ, ಘಟಃ ಏವ = ಘಟವೇ, ವಿನಾಶಕಃ ಕಿಂ = ವಿನಾಶಕವಾಗುತ್ತದೇನು? (ಇಲ್ಲ)

**ಅನುವಾದ -** ಘಟ ಪ್ರಾಗಭಾವ ಎಂದರೆ ಘಟಕ್ಕಿಂತ (ಪ್ರಾಕ್) ಮೊದಲು ಇರುವ ಘಟಾಭಾವ. ಘಟ ಬಂದಾಗ ಘಟ ಪ್ರಾಗಭಾವವಿರುವುದಿಲ್ಲ. ಅದರ ನಾಶವಾಗಿರುತ್ತದೆ. ಘಟವು ಆ ನಾಶಸ್ವರೂಪವಾಗಿರುತ್ತದೆ. ನಾಶಸ್ವರೂಪವಾದ ಘಟವು ನಾಶಕಾರಣವಾಗಲಾರದು. ಯಾವುದೂ ತನಗೆ ತಾನು ಕಾರಣವಾಗದು. ಇದೇ ರೀತಿ ಅಭಾವಾಜ್ಞಾನವು ಜ್ಞಾನಕ್ಕಿಂತ ಮೊದಲು ಇರುವ ಜ್ಞಾನಾಭಾವ. ಜ್ಞಾನ ಬಂದಾಗ ಈ ಜ್ಞಾನ ಪ್ರಾಗಭಾವವಿರುವುದಿಲ್ಲ. ಅದರ ನಾಶವಾಗಿರುತ್ತದೆ. ಜ್ಞಾನವು ಜ್ಞಾನಪ್ರಾಗಭಾವ ನಾಶಸ್ವರೂಪವಾಗಿರುತ್ತದೆ. ನಾಶಸ್ವರೂಪವಾದ ಜ್ಞಾನವು ಜ್ಞಾನ ಪ್ರಾಗಭಾವನಾಶಕ್ಕೆ ಕಾರಣವಾಗದು. ತನಗೆ ತಾನು ಕಾರಣವಾಗದು.

**ಭಾವವಿಲಾಸಿನೀ–** ಅಧುನಾಽಜ್ಞಾನನಾಶಕತ್ವಮಾತ್ರಮಪಿ ನಾಸ್ತೀತ್ಯಾಹ – **ಅಭಾವೇತಿ** ॥ ಅಭಾವರೂಪಾಜ್ಞಾನಮಭಾವಾಜ್ಞಾನಮ್ । ತಸ್ಯ ಅಭಾವಾಜ್ಞಾನಸ್ಯ ॥೨೪೭॥

**ವಿವರಣೆ -** ಅಭಾವಾಜ್ಞಾನನಾಶಾತ್ಮ ಎಂಬಲ್ಲಿ ಅಭಾವಾಜ್ಞಾನ ಎಂದರೆ ಅಭಾವ ರೂಪವಾದ ಅಜ್ಞಾನ ಎಂದು ಅರ್ಥ. ತಸ್ಯ ಎಂಬ ಪದಕ್ಕೆ ಈ ಅಭಾವರೂಪವಾದ ಅಜ್ಞಾನಕ್ಕೆ ಎಂದು ಅರ್ಥ.

ಸುರೋತ್ತಮತೀರ್ಥರ ಈ ವಿವರಣೆಯಂತೆ 'ಅಭಾವಾಜ್ಞಾನಾತ್ಮ' ಎಂಬುದು ಸಮಸ್ತ ಪದ. ಸಮಾಸಾಂತರ್ಗತವಾದ 'ಅಭಾವಾಜ್ಞಾನ' ಶಬ್ದಾರ್ಥವೇ 'ಅಭಾವರೂಪಾಜ್ಞಾನಂ' ಎಂದು ಉಕ್ತವಾಗಿದೆ.

ಮನ್ಯತೇ ನಾನ್ಯದಜ್ಞಾನಂ ಪ್ರತಿವಾದೀ ತತಸ್ತವ ।
ಅಜ್ಞಾನನಾಶಕತ್ವಂ ಚ ಜ್ಞಾನೇ ಕ್ವಾಪಿ ನ ದೃಶ್ಯತೇ ॥ ೨೪೮ ॥

**ಅರ್ಥ–** ತವ= ನಿನ್ನ, ಪ್ರತಿವಾದೀ = ಪ್ರತಿವಾದಿಯಾದ ತಾರ್ಕಿಕನು, ಅನ್ಯತ್ = ಜ್ಞಾನಾಭಾವರೂಪವಾದ ಅಜ್ಞಾನಕ್ಕಿಂತ ಬೇರೆಯಾದ, ಅಜ್ಞಾನಂ = ಭಾವರೂಪವಾದ ಅಜ್ಞಾನವನ್ನು, ನ ಮನ್ಯತೇ = ಒಪ್ಪಿಕೊಳ್ಳುವುದಿಲ್ಲ, ತತಃ = ಆದ್ದರಿಂದ, ಜ್ಞಾನೇ = ಅಜ್ಞಾನ ನಾಶಸ್ವರೂಪವೇ ಆಗಿರುವ ಜ್ಞಾನದಲ್ಲಿ, ಅಜ್ಞಾನನಾಶಕತ್ವಂ = ಅಜ್ಞಾನವನ್ನು ನಾಶಗೊಳಿಸುವ ಗುಣವು, ಕ್ವ ಅಪಿ = ಎಲ್ಲಿಯೂ ಕೂಡ, ನ ಚ ದೃಶ್ಯತೇ = ಕಾಣಸಿಗುವುದಿಲ್ಲ.

**ಅನುವಾದ -** ಪ್ರತಿವಾದಿಗಳಾದ ತಾರ್ಕಿಕರು ಜ್ಞಾನಾಭಾವಕ್ಕಿಂತ ಬೇರೆಯಾದ ಅಜ್ಞಾನವನ್ನು ಒಪ್ಪುವುದಿಲ್ಲ. ಹಾಗಾಗಿ ಹಿಂದೆ ಹೇಳಿದಂತೆ ಅಜ್ಞಾನ ನಾಶಸ್ವರೂಪವಾಗಿರುವ ಜ್ಞಾನಕ್ಕೆ ಅಜ್ಞಾನನಾಶಕತ್ವವನ್ನು ಮಂಡಿಸುವುದು ಸಾಧ್ಯವಾಗದ ಮಾತು. ಆದ್ದರಿಂದ ಎಲ್ಲಿಯೂ ಜ್ಞಾನವು ಅಜ್ಞಾನವನ್ನು ನಾಶಗೊಳಿಸುವುದು ಎಂಬುದನ್ನು ಸಮರ್ಥಿಸಲು ಸಾಧ್ಯವಿಲ್ಲ.

**ಭಾವವಿಲಾಸಿನೀ–** ಅನ್ಯತ್ ಜ್ಞಾನಾಭಾವವ್ಯತಿರಿಕ್ತಮ್ । ತತಃ ಅಭಾವಾಜ್ಞಾನಾತಿರಿಕ್ತಾ-ಜ್ಞಾನಾಭಾವಾತ್ ತಸ್ಯ ಜ್ಞಾನವಿನಾಶ್ಯತ್ವಾಭಾವಾಚ್ಚ ॥ ೨೪೮ ॥

ತಸ್ಯೈವ ನಾಶಕತ್ವಂ ತು ಕುತ್ರ ವಾ ದೃಶ್ಯತೇ ವದ ।
ಅಸ್ಯಾಃ ಪ್ರಸಾಧನಂ ತಸ್ಮಾದಯಶ್ಚಣಕಚರ್ವಣಮ್ ॥ ೨೪೯ ॥

**ಅರ್ಥ–** ಕುತ್ರ = ಎಲ್ಲಿಯಾದರೂ, ತಸ್ಯ ಏವ = ಅಜ್ಞಾನಕ್ಕೆ ಮಾತ್ರವೇ, ನಾಶಕತ್ವಂ ತು= ಜ್ಞಾನವು ನಾಶಕವಾಗುವುದು ಎಂಬುದು, ದೃಶ್ಯತೇ = ನೋಡೋಣವಾಗುತ್ತದೆಯೋ ಎಂಬುದಾಗಿ, ವದ = ಹೇಳು. ತಸ್ಮಾತ್ = ಆದ್ದರಿಂದ, ಅಸ್ಯಾಃ = ಈ ವ್ಯಾಪ್ತಿಯ, ಪ್ರಸಾಧನಂ = ಸಾಧನೆಯು, ಅಯಶ್ಚಣಕಚರ್ವಣಂ = ಕಬ್ಬಿಣದ ಕಡಲೆಯನ್ನು ಮೆದ್ದಂತೆ ಆಗುತ್ತದೆ.

**ಅನುವಾದ -** ಹಿಂದಿನ ಶ್ಲೋಕದಲ್ಲಿ ಹೇಳಿದಂತೆ ಅಜ್ಞಾನನಾಶಸ್ವರೂಪವಾದ ಜ್ಞಾನವು ಅಜ್ಞಾನವನ್ನು ನಾಶಗೊಳಿಸುವುದು ಎಂಬ ವಿಷಯವನ್ನೇ ಸರಿಯಾಗಿ ನಿರೂಪಿಸಲು ಬರುವುದಿಲ್ಲ, ನಾಶವು ನಾಶಕ್ಕೆ ಕಾರಣವಾಗುವುದು ಎಂಬ ವಿಷಯವನ್ನು ಎಲ್ಲಿಯಾದರೂ ದೃಷ್ಟಾಂತದಲ್ಲಿ ನೀನು ತೋರಿಸಬಲ್ಲೆಯಾ? (ಸುತರಾಂ

ಸಾಧ್ಯವಿಲ್ಲ.) ಘಟವು ಘಟಕ್ಕೆ ಕಾರಣವಾಗುವುದು ಎಲ್ಲಿ ಕಂಡಿದೆ? ಹಾಗಾಗಿ ಕಬ್ಬಿಣದ ಕಡಲೆಯನ್ನು ಹೇಗೆ ಮೆಲ್ಲಲು ಸಾಧ್ಯವಿಲ್ಲವೋ ಹಾಗೆ ಜ್ಞಾನವು ಅಜ್ಞಾನನಾಶಕ ಎಂದು ನೀನು ಒಪ್ಪಿರುವ ವ್ಯಾಪ್ತಿಯನ್ನು ಸರಿಯಾಗಿ ಸಾಧಿಸಿ ತೋರಿಸಲು ನಿನಗೆ ಸಾಧ್ಯವೇ ಇಲ್ಲ.

ಅಭಾವಸ್ಯ ವಿನಾಶಸ್ತು ಪ್ರತಿಯೋಗೀತಿ ಯನ್ಮತಮ್ ।
ತತ್ ತವಾಪಿ ಮತಂ ಸರ್ವವಾದಿನಾಮಪಿ ಸಮ್ಮತಮ್ ॥ ೨೫೦ ॥

**ಅರ್ಥ–** ಅಭಾವಸ್ಯ = ಅಭಾವದ, ವಿನಾಶಃ ತು = ವಿನಾಶವಾದರೂ, ಪ್ರತಿಯೋಗೀ = ಪ್ರತಿಯೋಗಿಯೇ ಆಗಿದೆ. ಇತಿ = ಎಂಬುದಾಗಿ, ಯತ್ = ಯಾವ, ಮತಂ = ತಾರ್ಕಿಕ ಮತವಿದೆಯೋ, ತತ್ = ಆ ಅಭಿಪ್ರಾಯವು, ತವ ಅಪಿ = ನಿನಗೂ ಕೂಡ, ಮತಂ = ಒಪ್ಪಿಗೆಯಾದದ್ದು. ಅಪಿ = ಅಷ್ಟೇ ಅಲ್ಲದೆ, ಸರ್ವವಾದಿನಾಂ = ಎಲ್ಲ ವಾದಿಗಳಿಗೂ, ಸಮ್ಮತಂ = ಸಮ್ಮತವಾಗಿದೆ.

**ಅನುವಾದ -** ಅಭಾವದ ನಾಶ ಎಂದರೆ ಪ್ರತಿಯೋಗಿಯೇ (ಯಾವುದರ ಅಭಾವವನ್ನು ಹೇಳುತ್ತೇವೆಯೋ ಅದು ಪ್ರತಿಯೋಗಿ) ಮಡಕೆ ಇದೆ ಎಂದರೂ ಮಡಕೆಯ ಅಭಾವವಿಲ್ಲ ಎಂದರೂ ಒಂದೇ. ಇದು ನಿನಗೂ ಸಂಮತವಾಗಿದೆ. ಅಷ್ಟೇ ಅಲ್ಲ, ಇದು ಎಲ್ಲರಿಗೂ ಸಮ್ಮತವೇ ಆಗಿದೆ. ಆದ್ದರಿಂದ ಜ್ಞಾನವು ಅಜ್ಞಾನಕ್ಕೆ ನಾಶಕ (ನಿವರ್ತಕ) ಎಂಬ ಅಂಶವೇ ಸರಿಯಲ್ಲ. ಜ್ಞಾನವು ಅಜ್ಞಾನಕ್ಕೆ ಮಾತ್ರವೇ ನಾಶಕವೆನ್ನುವುದು ಸರ್ವಥಾ ಅಸಂಗತ.

**ಭಾವವಿಲಾಸಿನೀ–** ತಸ್ಯೈವ ಅಜ್ಞಾನಸ್ಯೈವ ಅಜ್ಞಾನನಾಶಕತ್ವಮೇವ ಜ್ಞಾನೇನ ದೃಶ್ಯತೇ । ಅಜ್ಞಾನಸ್ಯೈವ ನಾಶಕತ್ವಂ ತು ಸುತರಾಂ ನೇತಿ ಭಾವಃ । ಅಸ್ಯಾಃ ವ್ಯಾಪ್ತೇಃ । ತಸ್ಮಾದುಕ್ತದೋಷೈರಶಕ್ಯತ್ವಾತ್ ॥ ೨೪೯-೨೫೦ ॥

ತನ್ನಿದರ್ಶನಶೂನ್ಯತ್ವಾದನ್ಯೋನ್ಯಾಶ್ರಯತಶ್ಚ ತೇ ।
ವ್ಯಾಪ್ತಿಃ ಪ್ರಸಾಧ್ಯಾಂಗಿಕಾಽಪಿ ನಾಭೂದ್ ಗರ್ಭಸ್ರುತಾಽಭವತ್ ॥೨೫೧॥

**ಅರ್ಥ–** ತತ್ = ಆದುದರಿಂದ, ನಿದರ್ಶನಶೂನ್ಯತ್ವಾತ್ = ದೃಷ್ಟಾಂತವೇ ಇಲ್ಲದಿರುವುದರಿಂದ, ಚ = ಮತ್ತು, ಅನ್ಯೋನ್ಯಾಶ್ರಯತಶ್ಚ = ಅನ್ಯೋನ್ಯಾಶ್ರಯರೂಪವಾದ ದೋಷವಿರುವುದರಿಂದಲೂ, ತೇ = ನಿನಗೆ ಅಭಿಮತವಾದ, ವ್ಯಾಪ್ತಿಃ = ವ್ಯಾಪ್ತಿಯು, ಪ್ರಸಾಧ್ಯಾಂಗಿಕಾ ಅಪಿ= ಸಾಧಿಸಲು ಯೋಗ್ಯವಾದದ್ದು ಕೂಡ, ನ ಅಭೂತ್ = ಆಗಲಿಲ್ಲ (ಏಕೆಂದರೆ,) ಗರ್ಭಸ್ರುತಾ = ಗರ್ಭದಲ್ಲೇ ನಾಶವುಳ್ಳದ್ದು, ಅಭವತ್ = ಆಯಿತು.

**ಅನುವಾದ -** ಜ್ಞಾನವು ಅಜ್ಞಾನವನ್ನು ನಾಶಗೊಳಿಸುವುದು ಎಂಬ ವ್ಯಾಪ್ತಿಯನ್ನು ಸಾಧಿಸಬೇಕು. ಎಂದರೆ ಉಭಯವಾದಿಗಳಿಗೆ ಸಮ್ಮತವಾದ ದೃಷ್ಟಾಂತದಲ್ಲಿ ತೋರಿಸಬೇಕು. ಆದರೆ ಅಂತಹ ದೃಷ್ಟಾಂತವೇ ಸಿಗಲಾರದು. ಏಕೆಂದರೆ ಜ್ಞಾನವು ಅಜ್ಞಾನವನ್ನು ನಾಶಗೊಳಿಸುವುದು ಎಂಬ ವಿಷಯವೇ ಹಿಂದೆ ಹೇಳಿದಂತೆ ಸರಿಯಲ್ಲ. ಇನ್ನು ಹಿಂದೆ ೨೨೩ನೇ ಶ್ಲೋಕದಲ್ಲಿ ಹೇಳಿದಂತೆ ಅನ್ಯೋನ್ಯಾಶ್ರಯದೋಷವೂ ಇದ್ದೇ ಇದೆ. ಈ ಎರಡೂ ರೀತಿಯ ದೋಷಗಳಿಂದ ವ್ಯಾಪ್ತಿಯ ಶರೀರವೇ ಸಿದ್ಧವಾಗದೇ ಇರುವುದರಿಂದ ಸಂತಾನದ ಅಪೇಕ್ಷೆಯುಳ್ಳವರಿಗೆ ಹೇಗೆ ಗರ್ಭಾವಸ್ಥೆಯಲ್ಲಿಯೇ ಸ್ರಾವವು ಉಂಟಾದರೆ ಸಂತಾನವನ್ನು ರಕ್ಷಿಸಿಕೊಳ್ಳಲಾಗದೋ, ಹಾಗೆಯೇ ವ್ಯಾಪ್ತಿಯನ್ನು ಸಾಧಿಸಿ ತೋರಿಸಬೇಕೆಂಬ ಅಪೇಕ್ಷೆಯುಳ್ಳ ನಿನಗೆ ವ್ಯಾಪ್ತಿಯು ಮೊದಲೇ ನಷ್ಟವಾಯಿತು.

**ಭಾವವಿಲಾಸಿನೀ–** ತತ್ ತಸ್ಮಾತ್ ॥ ೨೫೧ ॥

ಕಿಂಚ ಸರ್ವಸ್ಯ ಕಾರ್ಯಸ್ಯ ಜನ್ಮಸ್ಥಿತಿವಿನಷ್ಟಿಷು ।
ನಿಮಿತ್ತಮೀಶ್ವರಜ್ಞಾನಮಸ್ತೀತ್ಯಖಿಲಸಮ್ಮತಮ್ ॥ ೨೫೨ ॥

**ಅರ್ಥ–** ಕಿಂಚ = ಅಷ್ಟೇ ಅಲ್ಲದೆ, ಸರ್ವಸ್ಯ = ಎಲ್ಲಾ ರೀತಿಯ, ಕಾರ್ಯಸ್ಯ = ಉತ್ಪನ್ನವಾದ ವಸ್ತುವಿನ, ಜನ್ಮಸ್ಥಿತಿವಿನಷ್ಟಿಷು = ಉತ್ಪತ್ತಿ, ಸ್ಥಿತಿ, ಸಂಹಾರಗಳಲ್ಲಿ, ಈಶ್ವರಜ್ಞಾನಂ = ಈಶ್ವರನ ಜ್ಞಾನವು, ನಿಮಿತ್ತಂ = ನಿಮಿತ್ತಕಾರಣವಾಗಿ, ಅಸ್ತಿ ಇತಿ = ಇದೆ ಎಂಬುದಾಗಿ, ಅಖಿಲಸಮ್ಮತಂ = ಎಲ್ಲರಿಗೂ ಒಪ್ಪಿಗೆಯಾಗಿದೆ.

ಅನುವಾದ- ಮತ್ತು ಎಲ್ಲಾ ಕಾರ್ಯಗಳ ಉತ್ಪತ್ತಿ, ಸ್ಥಿತಿ ಮತ್ತು ವಿನಾಶಗಳಿಗೆ ಈಶ್ವರ ಜ್ಞಾನವು ನಿಮಿತ್ತಕಾರಣವೆಂದು ಎಲ್ಲರಿಗೂ ಸಮ್ಮತವಾದುದು.

**ಭಾವವಿಲಾಸಿನೀ–** ಅಪಿ ಚ ಸರ್ವೋತ್ಪತ್ತಿಮನ್ನಿಮಿತ್ತಕಾರಣಮೀಶ್ವರಜ್ಞಾನಂ ದೈನಂದಿನ ತ್ರೈಲೋಕ್ಯನಾಶಸ್ಯಾಪಿ ಕಾರಣಮಿತಿ ತವಾಪಿ ಮತಮ್ । ಅಜ್ಞಾನನಿವೃತ್ತೇರತ್ರ ಪ್ರಸಂಗೋಽಪಿ ನ । ಅತೋಽಪಿ ಜ್ಞಾನಮಜ್ಞಾನಸ್ಯೈವ ನಿವರ್ತಕಮಿತಿ ವ್ಯಾಪ್ತಿರನುಪಪನ್ನೇತ್ಯಾಹ – ಕಿಂಚೇತಿ ॥ ೨೫೨-೨೫೪ ॥

**ವಿವರಣೆ -** ಉತ್ಪತ್ತಿಯುಳ್ಳ ಎಲ್ಲ ವಸ್ತುಗಳಿಗೆ ನಿಮಿತ್ತಕಾರಣವಾದ ಈಶ್ವರಜ್ಞಾನವು ದೈನಂದಿನ ಪ್ರಳಯ (ಬ್ರಹ್ಮದೇವರ ಒಂದು ದಿನಮುಗಿದಾಗ ಆಗುವ ಪ್ರಳಯ) ಕ್ಕೂ ನಿಮಿತ್ತಕಾರಣವಾಗಿದೆ ಎಂಬುದು ನಿನಗೂ ಸಂಮತವೇ ಆಗಿದೆ. ಆ ಸಂದರ್ಭದಲ್ಲಿ ಅಜ್ಞಾನನಿವೃತ್ತಿಯ ಪ್ರಸಂಗ ಒದಗಲಾರದು. ಈ ಕಾರಣದಿಂದಲೂ ಜ್ಞಾನವು ಅಜ್ಞಾನಮಾತ್ರನಾಶಕ ಎಂಬ ನಿನಗೆ ಅಭಿಮತವಾದ ವ್ಯಾಪ್ತಿಯು ಸರಿಯಲ್ಲ ಎಂದು ಈ ಶ್ಲೋಕದಲ್ಲಿ ತಿಳಿಸುತ್ತಿದ್ದಾರೆ.

ದೈನಂದಿನೇ ಚ ಪ್ರಲಯೇ ನಾಜ್ಞಾನಸ್ಯ ವಿನಾಶನಂ ।
ತಸ್ಮಾತ್ ಸಾಕ್ಷಾದೇವ ಜಗನ್ನಾಶಕಂ ಜಗದೀಶಿತುಃ ॥ ೨೫೩ ॥

ಜ್ಞಾನಮಾಸೀದತೋ ಜ್ಞಾನಮಜ್ಞಾನಸ್ಯೈವ ನಾಶಕಂ ।
ಇತಿ ವ್ಯಾಪ್ತಿರ್ಮಹಾಲೋಕಮಧ್ಯೇಽಭೂದ್ ವ್ಯಭಿಚಾರಿಣೀ ॥ ೨೫೪ ॥

**ಅರ್ಥ–** ದೈನಂದಿನೇ = (ಬ್ರಹ್ಮದೇವರ) ಪ್ರತಿದಿನದಲ್ಲಿ ಆಗುವ, ಪ್ರಲಯೇ ಚ = ಪ್ರಳಯದಲ್ಲಿಯಾದರೂ, ಅಜ್ಞಾನಸ್ಯ = ಅಜ್ಞಾನಕ್ಕೆ, ವಿನಾಶನಂ = ವಿನಾಶವು, ನ = ಆಗುವುದಿಲ್ಲ, ತಸ್ಮಾತ್ = ಆದ್ದರಿಂದ, ಜಗದೀಶಿತುಃ = ಜಗತ್ತುಗಳ ಸ್ವಾಮಿಯಾದ ಭಗವಂತನ, ಜ್ಞಾನಂ = ಜ್ಞಾನವು, ಸಾಕ್ಷಾತ್ ಏವ = ನೇರವಾಗಿಯೇ, ಜಗನ್ನಾಶಕಂ = ಜಗತ್ತನ್ನು ನಾಶಮಾಡುವಂತಹದು, ಆಸೀತ್ = ಆಯಿತು. ಅತಃ = ಆದ್ದರಿಂದ, ಜ್ಞಾನಂ = ಜ್ಞಾನವು ಅಜ್ಞಾನಸ್ಯ ಏವ = ಕೇವಲ ಅಜ್ಞಾನಕ್ಕೆ, ನಾಶಕಂ = ನಾಶಕವಾಗಿದೆ, ಇತಿ = ಹೀಗೆಂಬ, ವ್ಯಾಪ್ತಿಃ = ವ್ಯಾಪ್ತಿಯು, ಮಹಾಲೋಕಮಧ್ಯೇ = ಮಹಾಲೋಕಗಳ ಮಧ್ಯದಲ್ಲಿಯೇ, ವ್ಯಭಿಚಾರಿಣೀ = ವ್ಯಭಿಚಾರರೂಪದೋಷವುಳ್ಳದ್ದು ಅಭೂತ್ = ಆಯಿತು.

**ಅನುವಾದ** - ದೈನಂದಿನ ಪ್ರಳಯದಲ್ಲಿ ತ್ರಿಲೋಕಗಳು ನಾಶವಾದರೂ ಅಜ್ಞಾನನಾಶವಾಗದು. ಹೀಗೆ ಭಗವಂತನ ಜ್ಞಾನದಿಂದ ಅಜ್ಞಾನಕ್ಕಿಂತ ಬೇರೆಯಾದ ತ್ರಿಲೋಕಗಳು ನಾಶವಾಗುತ್ತವೆ ಎಂದು ನಿಶ್ಚಿತವಾದರೂ ಅಜ್ಞಾನ ನಾಶವಾಗದೇ ಇರುವುದರಿಂದ ಜ್ಞಾನವು ಅಜ್ಞಾನವನ್ನು ಮಾತ್ರ ನಾಶಗೊಳಿಸುವುದು ಎಂಬ ವ್ಯಾಪ್ತಿಗೆ ಅಂತರಂಗದ ಭಾವನಾಲೋಕದಲ್ಲಿ ಮಾತ್ರವಲ್ಲದೆ, ಹೊರಗಿನ ಮೂರು ಮಹಾಲೋಕದಲ್ಲಿಯೇ ವ್ಯಭಿಚಾರ ಕಂಡುಬರುತ್ತಿದೆ.

ಕಿಂ ಚ ಸಾಕ್ಷಾತ್ ಜ್ಞಾನನಾಶ್ಯಂ ಭವತ್ವಜ್ಞಾನಮೇವ ತೇ ।
ಪಾರಂಪರ್ಯೇಣ ತನ್ನಾಶ್ಯಂ ತತೋಽನ್ಯಚ್ಚ ಭವೇತ್ ಕಿಲ ॥ ೨೫೫ ॥

**ಅರ್ಥ–** ಕಿಂಚ = ಅಷ್ಟೇ ಅಲ್ಲದೆ, ತೇ = ನಿನ್ನ ಮತದಂತೆ, ಅಜ್ಞಾನಂ ಏವ = ಅಜ್ಞಾನವೇ, ಸಾಕ್ಷಾತ್ = ನೇರವಾಗಿ, ಜ್ಞಾನನಾಶ್ಯಂ = ಜ್ಞಾನದಿಂದ ನಾಶವಾಗುವಂಥಾದ್ದು ಭವತು = ಆಗಲಿ. ಪಾರಂಪರ್ಯೇಣ = ಪರಂಪರೆಯಿಂದ, ತನ್ನಾಶ್ಯಂ = ಜ್ಞಾನದಿಂದ ನಾಶವಾಗುವಂಥಾದ್ದು ತತಃ = ಆ ಅಜ್ಞಾನಕ್ಕಿಂತ, ಅನ್ಯತ್ = ಬೇರೆಯಾದದ್ದೂ ಕೂಡ, ಭವೇತ್ ಕಿಲ = ಇರಬೇಕುತಾನೆ?

**ಅನುವಾದ** - ಮತ್ತು ನಿನ್ನ ರೀತಿಯಲ್ಲೇ ಜ್ಞಾನವು ಅಜ್ಞಾನಕ್ಕೆ ಸಾಕ್ಷಾತ್ತಾಗಿ ನಾಶವಾಗಲಿ. ಬೇರೆ ವಸ್ತುವು ಪರಂಪರಯಾ ಜ್ಞಾನದಿಂದ ನಾಶವನ್ನು ಹೊಂದಬಹುದಷ್ಟೆ?

**ವಿವರಣೆ** - ನೀನು ಹೇಳುವ ವ್ಯಾಪ್ತಿಯಂತೆ ಜ್ಞಾನವು ಕೇವಲ ಅಜ್ಞಾನವನ್ನು ಮಾತ್ರ ನೇರವಾಗಿ ನಾಶಮಾಡುತ್ತದೆ ಎಂದು ಒಪ್ಪೋಣ. ಆದರೂ ಪರಂಪರೆಯಿಂದ ಜ್ಞಾನವು ಅಜ್ಞಾನಕ್ಕಿಂತ ಬೇರೆಯಾದುದದನ್ನು ನಾಶಮಾಡುವುದೆಂದು ಅಂಗೀಕರಿಸಲೇಬೇಕು.

**ನ ಚೇದ್ ಜ್ಞಾನವಿನಾಶ್ಯತ್ವಂ ಕಥ್ಯತೇ ಜಗತಃ ಕಥಂ ।**
**ಪರಂಪರಾನಾಶಕಂ ಚ ದ್ವಿವಿಧಂ ಭುವಿ ದೃಶ್ಯತೇ ॥ ೨೫೬ ॥**

**ಕಿಂಚಿದ್ ವಿನಾಶ್ಯೈವ ಕಿಂಚಿತ್ ತತೋಽನ್ಯಸ್ಯ ವಿನಾಶಕಂ ।**
**ಕಿಂಚಿಚ್ಚ ಕಿಂಚಿತ್ ಕೃತ್ವೈವ ಪಶ್ಚಾದನ್ಯಸ್ಯ ನಾಶಕಂ ॥ ೨೫೭ ॥**

**ಅರ್ಥ**— ನ ಚೇತ್ = ಪರಂಪರೆಯಿಂದ ಅನ್ಯನಾಶಕತ್ವವನ್ನು ಜ್ಞಾನಕ್ಕೆ ಅಂಗೀಕರಿಸದಿದ್ದರೆ, ಜಗತಃ = ಜಗತ್ತಿಗೆ, ಜ್ಞಾನವಿನಾಶ್ಯತ್ವಂ = ಜ್ಞಾನದಿಂದ ನಾಶವನ್ನು, ಕಥಂ = ಹೇಗೆ ತಾನೆ, ಕಥ್ಯತೇ = ಹೇಳಲ್ಪಡುತ್ತದೆ? ಭುವಿ = ಈ ಲೋಕದಲ್ಲಿ, ಪರಂಪರಾನಾಶಕಂ ಚ = ಪರಂಪರೆಯಿಂದ ಇನ್ನೊಂದನ್ನು ನಾಶಮಾಡುವಂತಹ ವಸ್ತುವು, ದ್ವಿವಿಧಂ = ಎರಡು ರೀತಿಯಿಂದ, ದೃಶ್ಯತೇ = ನೋಡಲ್ಪಡುತ್ತದೆ. ಕಿಂಚಿತ್ = ಕೆಲವೊಂದು ನಾಶಕವಾದ ವಸ್ತುವು, ಕಿಂಚಿತ್ = ಯಾವುದಾದರೊಂದು ವಸ್ತುವನ್ನು, ವಿನಾಶ್ಯ ಏವ = ನಾಶಮಾಡುವ ಮೂಲಕವೇ, ತತಃ = ಅದಕ್ಕಿಂತ, ಅನ್ಯಸ್ಯ = ಬೇರೊಂದು ವಸ್ತುವಿನ, ವಿನಾಶಕಂ = ನಾಶಕ್ಕೆ ಕಾರಣವಾಗುತ್ತದೆ. ಕಿಂಚಿತ್ ಚ = ಕೆಲವೊಂದು ವಸ್ತುವಾದರೂ, ಕಿಂಚಿತ್ = ಯಾವುದಾದರೊಂದು ವಸ್ತುವನ್ನು, ಕೃತ್ವಾ ಏವ = ಉಂಟುಮಾಡಿಯೇ, ಪಶ್ಚಾತ್ =ಅನಂತರ, ಅನ್ಯಸ್ಯ = ಅದಕ್ಕಿಂತ ಬೇರೆಯಾದ ಇನ್ನೊಂದು ವಸ್ತುವಿನ, ನಾಶಕಂ = ನಾಶಕ್ಕೆ ಕಾರಣವಾಗುತ್ತದೆ.

**ಅನುವಾದ - ಬ್ರಹ್ಮಜ್ಞಾನದಿಂದ ಅಜ್ಞಾನವು ನಾಶವಾದಾಗ ಆ ಅಜ್ಞಾನದಿಂದಲೇ ಉಂಟಾದ ಈ ಜಗತ್ತಿಗೆ ನಾಶವನ್ನು ನೀನು ಹೇಳುವವನು. ಆದ್ದರಿಂದ ಪರಂಪರೆಯಿಂದ ಬೇರೊಂದರ ನಾಶವನ್ನು ಜ್ಞಾನವು ಮಾಡುತ್ತದೆ ಎಂದು ನೀನು ಅಂಗೀಕರಿಸದಿದ್ದರೆ ಜ್ಞಾನದಿಂದ ಜಗತ್ತಿನ ನಾಶವನ್ನು ಹೇಳಲು ಸಾಧ್ಯವಿಲ್ಲ. ಏಕೆಂದರೆ ಜ್ಞಾನದಿಂದ ಅಜ್ಞಾನದ ನಾಶ, ಅಜ್ಞಾನವು ನಾಶವಾದುದರಿಂದಲೇ ಜಗತ್ತಿನ ನಾಶ ಎಂದು ನೀನು ಅಂಗೀಕರಿಸುತ್ತೀಯಷ್ಟೆ?**

**ಈ ಲೋಕದಲ್ಲಿ ಪರಂಪರೆಯಿಂದ ಇನ್ನೊಂದು ವಸ್ತುವಿಗೆ ನಾಶವನ್ನುಂಟುಮಾಡುವ ವಸ್ತುಗಳೆಲ್ಲ ಎರಡು ಬಗೆ. ಯಾವುದಾದರೊಂದು ವಸ್ತುವನ್ನು ನಾಶಮಾಡಿ ತನ್ಮೂಲಕ ಇನ್ನೊಂದು ವಸ್ತುವನ್ನು ನಾಶಮಾಡುವುದು ಒಂದು ಬಗೆಯಾದರೆ, ಯಾವುದಾದರೊಂದು ವಸ್ತುವನ್ನು ಉತ್ಪಾದಿಸಿ ಅದರಿಂದ ಇನ್ನೊಂದು ವಸ್ತುವನ್ನು**

ನಾಶಮಾಡುವುದು ಎರಡನೇ ಬಗೆ. ಈ ಎರಡೂ ರೀತಿಗೆ ದೃಷ್ಟಾಂತವನ್ನು ಮುಂದಿನ ಶ್ಲೋಕದಲ್ಲಿ ಹೇಳುತ್ತಾರೆ.

**ಭಾವವಿಲಾಸಿನೀ–** ಅಸ್ತು ವಾ ತ್ವದುಕ್ತವ್ಯಾಪ್ತಿಬಲಾತ್ ಜ್ಞಾನಮಜ್ಞಾನಸ್ಯೈವ ಸಾಕ್ಷಾದ್ವಿನಾಶಕಂ ತಥಾಪಿ । ಜಗತೋ ಜ್ಞಾನವಿನಾಶ್ಯತ್ವಂ ವದತಾ ತ್ವಯಾಪಿ ಪರಂಪರಯಾ ಜ್ಞಾನಸ್ಯಾನ್ಯವಿನಾಶಕತ್ವಮಪ್ಯಂಗೀಕೃತಮ್ । ಪರಂಪರಯಾ ನಾಶಕಂ ಚ ದ್ವಿವಿಧಂ ಸಾಕ್ಷಾತ್ ಕಿಂಚಿದ್ವಿನಾಶ್ಯ ಕಿಂಚಿದುತ್ಪಾದ್ಯ ವಾ । ತತ್ರ ದ್ವಿತೀಯಪಕ್ಷರೀತ್ಯಾ ಜ್ಞಾನೇನ ಬಂಧವಿನಾಶಸ್ಯ ಶ್ರುತಿಸೂತ್ರಯೋರಭಿಪ್ರೇತತ್ವೇ ತ್ವದಭಿಲಷಿತಾ ಜ್ಞಾನೋಪಾದಾನಕತ್ವರೂಪಮಿಥ್ಯಾತ್ವಸ್ಯ ಸರ್ವಥಾಽಸಂಗತಿರೇವೇತ್ಯಾಹ–**ಕಿಂಚ ಸಾಕ್ಷಾದಿತಿ** ॥ ೨೫೫-೨೫೭ ॥

ಯೋಽಯಂ ತಂತುವಿಭಾಗೇನ ತತ್ಸಂಯೋಗಸ್ಯ ನಾಶನೇ ।
ಪಟಸ್ಯ ನಾಶೋ ಭವತಿ ತದಾದ್ಯಸ್ಯ ನಿದರ್ಶನಂ ॥ ೨೫೮ ॥

**ಅರ್ಥ–** ತಂತುವಿಭಾಗೇನ = ತಂತುಗಳ ವಿಭಾಗದಿಂದ, ತತ್ ಸಂಯೋಗಸ್ಯ = ಆ ತಂತುಗಳ ಸಂಯೋಗಕ್ಕೆ, ನಾಶನೇ = ನಾಶವು ಉಂಟಾಗುವುದರಿಂದ, ಯಃ ಅಯಂ = ಯಾವ ಈ, ಪಟಸ್ಯ = ವಸ್ತ್ರದ, ನಾಶಃ = ನಾಶವು, ಭವತಿ = ಆಗುತ್ತದೆ ಎಂಬ, ತತ್ = ಕ್ರಮವು, ಆದ್ಯಸ್ಯ = ಮೊದಲನೆಯ ರೀತಿಗೆ, ನಿದರ್ಶನಂ = ದೃಷ್ಟಾಂತವಾಗಿದೆ.

**ಅನುವಾದ -** ಯಾವುದಾದರೊಂದು ವಸ್ತುವನ್ನು ನಾಶಮಾಡಿ ತನ್ಮೂಲಕ ಇನ್ನೊಂದು ವಸ್ತುವನ್ನು ನಾಶಮಾಡುವುದು ಮೊದಲನೆಯ ರೀತಿ. ಇದಕ್ಕೆ ವಸ್ತ್ರದ ನಾಶವು ದೃಷ್ಟಾಂತವಾಗಿದೆ. ಬೇರೆ ಬೇರೆ ನೂಲುಗಳು ಉದ್ದವಾಗಿ ಹಾಗೂ ಅಡ್ಡಲಾಗಿ ಸಂಯೋಗವನ್ನು ಪಡೆದಿರುವುದೇ (ಜೋಡಣೆಯಾಗಿರುವುದೇ) ವಸ್ತ್ರ ತಾನೆ? ಈ ನೂಲುಗಳಿಗೆ ಪರಸ್ಪರ ವಿಭಾಗವು ಉಂಟಾದರೆ (ನೂಲುಗಳು ಬೇರೆ ಬೇರೆಯಾದರೆ) ಈ ವಿಭಾಗದಿಂದ ನೂಲುಗಳ ಸಂಯೋಗವು ಮೊದಲು ನಾಶವಾಗುತ್ತದೆ. ಈ ಸಂಯೋಗನಾಶದಿಂದ ವಸ್ತ್ರವು ನಾಶವಾಗುತ್ತದೆ. ಹೀಗೆ ತಂತು ವಿಭಾಗವು ವಸ್ತ್ರದ ನಾಶಕ್ಕೆ ಕಾರಣವಾಗಿದ್ದರೂ ತಂತುಸಂಯೋಗನಾಶಕ್ಕೆ ಕಾರಣವಾಗಿ ತನ್ಮೂಲಕ ವಸ್ತ್ರನಾಶಕ್ಕೆ ಕಾರಣವಾಗಿದೆ. ಹೀಗೆ ಪರಂಪರಯಾ ತಂತುವಿಭಾಗವು ವಸ್ತ್ರನಾಶಕವಾಗಿದೆ.

**ಭಾವವಿಲಾಸಿನೀ–** ತತ್ ತಂತುವಿಭಾಗಾಖ್ಯಂ ನಾಶಕಮ್ ॥ ೨೫೮ ॥

ಯತ್ತು ಪರ್ಣತೃಣಾರಣ್ಯಾದ್ಯುತ್ಪಾದ್ಯಾಗ್ನಿಶಿಖಾಂ ಪುರಾ ।
ತಯಾ ತಮೋ ನಾಶಯತಿ ತದ್ ದ್ವಿತೀಯನಿದರ್ಶನಂ ॥ ೨೫೯ ॥

**ಅರ್ಥ–** ಯತ್ = ಯಾವಕಾರಣದಿಂದ, ಪರ್ಣತೃಣಾರಣ್ಯಾದಿ ತು = ಎಲೆ, ಹುಲ್ಲು, ಅರಣಿ ಮೊದಲಾದ ವಸ್ತುವು, ಪುರಾ = ಮೊದಲು, ಅಗ್ನಿಶಿಖಾಂ = ಬೆಂಕಿಯ ಜ್ವಾಲೆಯನ್ನು

ಉತ್ಪಾದ್ಯ = ಉಂಟುಮಾಡಿ, ತಯಾ = ಆ ಜ್ವಾಲೆಯಿಂದ, ತಮಃ = ಕತ್ತಲೆಯನ್ನು, ನಾಶಯತಿ = ನಾಶಗೊಳಿಸುತ್ತದೆ. ತತ್ = ಆ ಕ್ರಮವು, ದ್ವಿತೀಯಂ ನಿದರ್ಶನಂ = ಎರಡನೇ ರೀತಿಗೆ ದೃಷ್ಟಾಂತವಾಗಿದೆ.

**ಅನುವಾದ -** ಯಾವುದಾದರೂ ಒಂದು ವಸ್ತುವನ್ನು ಉತ್ಪತ್ತಿಮಾಡಿ ತನ್ಮೂಲಕ ವಸ್ತುವನ್ನು ನಾಶಮಾಡುವುದು ಎರಡನೆಯ ರೀತಿ. ಇದಕ್ಕೆ ಕಟ್ಟಿಗೆ ಅಥವಾ ಅರಣಿಯು ಕತ್ತಲನ್ನು ನಾಶಮಾಡುವುದು ದೃಷ್ಟಾಂತ. ಅರಣಿಯು ಮಥನದಿಂದ ಅಗ್ನಿಜ್ವಾಲೆಯನ್ನು ಉಂಟುಮಾಡಿ ತನ್ಮೂಲಕ ಕತ್ತಲನ್ನು ಹೋಗಲಾಡಿಸುವುದು. ತರಗಲೆ ಅಥವಾ ಒಣಹುಲ್ಲು ಸಣ್ಣ ಕಿಡಿಯನ್ನು ಜೋರಾಗಿ ಮಾಡಿ ಅದರಿಂದ ಕತ್ತಲನ್ನು ಹೋಗಲಾಡಿಸುವುದು. ಹೀಗೆ ಅರಣಿಯಾಗಲೀ, ಎಲೆಕಡ್ಡಿಗಳಾಗಲೀ ಕತ್ತಲನ್ನು ನಿವಾರಿಸುವುದು ನಿಜವಾಗಿದ್ದರೂ ಅಗ್ನಿಜ್ವಾಲೆಯನ್ನು ಉಂಟುಮಾಡುವ ಮೂಲಕವೇ ಕತ್ತಲಿನ ನಾಶಕ್ಕೆ ಕಾರಣವಾಗಿದೆ. ಹೀಗೆ ಪರಂಪರಯಾ ಅರಣಿಯು ಕತ್ತಲಿನ ನಾಶಕ್ಕೆ ಕಾರಣವಾಗಿದೆ.

**ಭಾವವಿಲಾಸಿನೀ–** ಪರ್ಣತೃಣಾರಣ್ಯಾದಿ ಪರ್ಣತೃಣಾರಣಿಪ್ರಭೃತೀತ್ಯರ್ಥಃ ॥ ೨೫೯ ॥

ಏವಂ ಚ ಬ್ರಹ್ಮಣೋ ಜ್ಞಾನಂ ವಿನಾಶ್ಯೈವ ವಿನಾಶಕಂ ।
ಯದಿ ಸ್ಯಾತ್ ತರ್ಹಿ ತೇ ವ್ಯಾಪ್ತಿಃ ಪ್ರತಿರೋಧಂ ಕರೋತು ವಾ ॥೨೬೦॥

**ಅರ್ಥ–** ಏವಂ ಚ = ಹೀಗಿರುವಾಗ, ಬ್ರಹ್ಮಣಃ = ಬ್ರಹ್ಮನ, ಜ್ಞಾನಂ = ಅಪರೋಕ್ಷಜ್ಞಾನವು, ಯದಿ = ಒಂದು ವೇಳೆ, ವಿನಾಶ್ಯ ಏವ = ಅಜ್ಞಾನವನ್ನು ನಾಶಮಾಡಿಯೇ, ವಿನಾಶಕಂ = ಬಂಧವನ್ನು ನಾಶಮಾಡುವಂತಹದ್ದು. ಸ್ಯಾತ್ = ಆಗುವುದಾದರೆ, ತರ್ಹಿ = ಆ ಪಕ್ಷದಲ್ಲಿ, ಪ್ರತಿರೋಧಂ = ಬಂಧಸತ್ಯತ್ವಕ್ಕೆ ತಡೆಯನ್ನು, ಕರೋತು ವಾ = ಉಂಟುಮಾಡಿದರೂ ಮಾಡೀತು.

**ಅನುವಾದ -** ಜ್ಞಾನವು ಪರಂಪರಯಾ ಬಂಧನಾಶಕವಾಗುವಲ್ಲಿ ಮೊದಲನೆಯ ರೀತಿಯಲ್ಲಿ ನೋಡುವುದಾದರೆ ಜ್ಞಾನವು ಅಜ್ಞಾನವನ್ನೇ ನಾಶಮಾಡುವುದು. ತನ್ಮೂಲಕ ಬಂಧವನ್ನು ನಾಶಮಾಡುತ್ತದೆ ಎಂದು ಹೇಳಬೇಕು. ಈ ಪಕ್ಷವನ್ನು ಆಶ್ರಯಿಸಿದಾಗ ಜಗತ್ತು ಅಜ್ಞಾನದಿಂದ ಉಂಟಾಗಿದೆ ಎಂದು ಹೇಳಬೇಕಾಗುವುದರಿಂದ ಬಂಧವು ಸತ್ಯ ಎಂಬ ಅಂಶಕ್ಕೆ ತಡೆಯನ್ನುಂಟುಮಾಡಬಹುದು. ಆದರೂ ಬಂಧವು ಸತ್ಯ ಎಂದು ಈ ಪಕ್ಷದಲ್ಲಿ ಒಪ್ಪಿಕೊಳ್ಳಲೇಬೇಕಾಗುತ್ತದೆ ಎಂಬುದನ್ನು ವಾ ಎಂಬ ಶಬ್ದದಿಂದ ಸೂಚಿಸಿದ್ದಾರೆ.

ಯದಿ ತದ್ಭಗವದ್ಭಕ್ತಿಮುತ್ಪಾದ್ಯ ದೃಢಯಾ ತಯಾ ।
ಬಂಧಂ ವಿನಾಶಯೇತ್ ತರ್ಹಿ ವ್ಯಾಪ್ತೇಃ ಕ್ವಾವಸರೋ ವದ ॥ ೨೬೧ ॥

**ಅರ್ಥ–** ಯದಿ = ಒಂದು ವೇಳೆ, ತತ್ = ಆ ಅಪರೋಕ್ಷಜ್ಞಾನವು, ಭಗವದ್ಭಕ್ತಿಂ = ಭಗವಂತನಲ್ಲಿಭಕ್ತಿಯನ್ನು, ಉತ್ಪಾದ್ಯ = ಉಂಟುಮಾಡಿ, ದೃಢಯಾ = ಗಟ್ಟಿಯಾದ, ತಯಾ = ಆ ಭಕ್ತಿಯಿಂದ, ಬಂಧಂ = ಬಂಧವನ್ನು, ವಿನಾಶಯೇತ್ = ನಾಶಮಾಡುತ್ತದೆಯಾದರೆ, ತರ್ಹಿ = ಆ ಪಕ್ಷದಲ್ಲಿ, ವ್ಯಾಪ್ತೇಃ= ಜ್ಞಾನವು ಕೇವಲ ಅಜ್ಞಾನದ ನಾಶವನ್ನು ಉಂಟುಮಾಡುವುದು ಎಂಬ ವ್ಯಾಪ್ತಿಗೆ, ಕ್ವ = ಎಲ್ಲಿ, ಅವಸರಃ = ಪ್ರಸಕ್ತಿಯು ಬಂದೀತು?

**ಅನುವಾದ** - ಪರಂಪರಯಾ ನಾಶಕ ಎಂಬ ಎರಡನೆಯ ರೀತಿಯಿಂದಲೂ ಜ್ಞಾನವು ಭಗವಂತನಲ್ಲಿ ಭಕ್ತಿಯನ್ನು ಉಂಟುಮಾಡುತ್ತದೆ. ಆ ಭಕ್ತಿಯು ದೃಢವಾದಾಗ, ದೃಢವಾದ ಭಕ್ತಿಯಿಂದ ಬಂಧನಾಶ. ಹೀಗೆ ಹೇಳಿದಾಗ ಜ್ಞಾನವು ಭಕ್ತಿಗೆ ಮಾತ್ರ ಉತ್ಪಾದಕವಾದ್ದರಿಂದ ಜ್ಞಾನವು ಅಜ್ಞಾನಕ್ಕೆ ಮಾತ್ರ ನಾಶಕ ಎಂಬ ವ್ಯಾಪ್ತಿಗೆ ಅವಕಾಶವೇ ಇಲ್ಲದಾಗುತ್ತದೆ.

**ಭಾವವಿಲಾಸಿನೀ–** ತತ್ ಬ್ರಹ್ಮಪರೋಕ್ಷಜ್ಞಾನಮ್ ತಯಾ ಭಕ್ತ್ಯಾ । ಕ್ವಾವಸರಃ । ನ ಕ್ವಾಪಿ । ಭಕ್ತಿಮುತ್ಪಾದ್ಯ ಬಂಧಂ ನಾಶಯತೋ ಜ್ಞಾನಸ್ಯಾಜ್ಞಾನಾತಿರಿಕ್ತಪದಾರ್ಥ ಸಾಕ್ಷಾನ್ನಾಶಕತ್ವಾದರ್ಶನೇನ ತ್ವದ್ವ್ಯಾಪ್ತೇರತ್ರಾನವ(ತಾ)ಸರಾದಿತ್ಯರ್ಥಃ ।। ೨೬೦।।

ಜ್ಞಾನಾನ್ನಾಶ್ಯೇ ತು ನಿಯಮಸ್ತಜ್ಜನ್ಯೇ ತು ತವಾಪಿ ನ ।
ಯತ್ಪ್ರವೃತ್ತಿನಿವೃತ್ತ್ಯರ್ಥಾಲಾಪಾರ್ತಿಪ್ರೀತಿಕೃದ್ಧಿ ತತ್ ।। ೨೬೨ ।।

**ಅರ್ಥ–** ತವ ಅಪಿ = ನಿನ್ನ ಮತದಂತೆಯೂ, ಜ್ಞಾನಾತ್ = ಜ್ಞಾನದಿಂದ, ನಾಶ್ಯೇ ತು = ನಾಶವಾಗುವ ವಸ್ತುವಿನಲ್ಲಿ, ನಿಯಮಃ = ಅಜ್ಞಾನವನ್ನು ಮಾತ್ರ ನಾಶಮಾಡುತ್ತದೆ ಎಂಬ ನಿಯಮವಿದೆ. ತಜ್ಜನ್ಯೇ = ಆ ಜ್ಞಾನದಿಂದ ಉಂಟಾಗುವ ವಸ್ತುವಿನಲ್ಲಿ, ನ = ಇಂತಹದ್ದನ್ನೇ ಹುಟ್ಟಿಸುತ್ತದೆ ಎಂಬ ನಿಯಮವಿಲ್ಲ, ಯತ್ = ಏಕೆಂದರೆ, ತತ್ = ಆ ಜ್ಞಾನವು, ಪ್ರವೃತ್ತಿನಿವೃತ್ತ್ಯರ್ಥಾಲಾಪಾರ್ತಿಪ್ರೀತಿಕೃತ್ ಹಿ = ಪ್ರವೃತ್ತಿಯನ್ನೂ, ನಿವೃತ್ತಿಯನ್ನೂ, ವಾಚಕ ಶಬ್ದವ್ಯವಹಾರವನ್ನೂ ಅನಿಷ್ಟಶ್ರವಣದಿಂದ ದುಃಖವನ್ನೂ, ಇಷ್ಟಶ್ರವಣದಿಂದ ಸಂತೋಷವನ್ನೂ ಉಂಟುಮಾಡುವುದು ತಾನೆ?

**ಅನುವಾದ** - ಒಂದು ವಸ್ತುವನ್ನು ಉತ್ಪಾದಿಸಿ ಅದರಿಂದ ಇನ್ನೊಂದು ವಸ್ತುವನ್ನು ನಾಶಮಾಡುವ ಎರಡನೆಯ ರೀತಿಯಿಂದ ಜ್ಞಾನವು ಭಕ್ತಿಯನ್ನು ಉತ್ಪಾದಿಸಿ ತನ್ಮೂಲಕ ಬಂಧನಾಶಕವಾಗುವುದು ಎಂದು ಒಪ್ಪಿಕೊಳ್ಳುವಾಗ ಭಕ್ತಿಯ ಜೊತೆಗೆ ಬೇರೆ ವಸ್ತುವಿನ ಉತ್ಪಾದನೆಯನ್ನು ಒಪ್ಪಿಕೊಳ್ಳಬಹುದು. ಏಕೆಂದರೆ ಜ್ಞಾನದಿಂದ ನಾಶವಾಗುವುದು ಅಜ್ಞಾನಮಾತ್ರ, ಎಂಬುದಾಗಿ ನಾಶದಲ್ಲಿ ಮಾತ್ರ ನಿಯಮವನ್ನು ನೀನು ಒಪ್ಪಿರುವಿ. ಜ್ಞಾನದಿಂದ ಉತ್ಪಾದನೆಯಾಗುವ ವಿಷಯದಲ್ಲಿ ಈ ರೀತಿಯ ನಿಯಮವನ್ನು ನೀನೂ ಒಪ್ಪಿಕೊಂಡಿಲ್ಲ. ಏಕೆಂದರೆ ಜ್ಞಾನವು ಅನೇಕವಸ್ತುಗಳನ್ನು

ಉತ್ಪಾದಿಸಬಲ್ಲದು. ಉದಾಹರಣೆಗೆ ಜ್ಞೇಯವಸ್ತುವು ಇಷ್ಟವಾಗಿದ್ದರೆ ಅದರ ಜ್ಞಾನದಿಂದ ಪ್ರವೃತ್ತಿಯನ್ನು, ಅನಿಷ್ಟವಸ್ತುವಿನ ಜ್ಞಾನದಿಂದ ನಿವೃತ್ತಿಯನ್ನೂ, ವಾಚಕ ಶಬ್ದವ್ಯವಹಾರವನ್ನೂ ಅನಿಷ್ಟವಿಷಯದ ಶ್ರವಣದಿಂದ ದುಃಖವನ್ನೂ, ಇಷ್ಟವಿಷಯದ ಶ್ರವಣದಿಂದ ಸಂತೋಷವನ್ನೂ ಹೀಗೆ ಅನೇಕ ವಸ್ತುಗಳ ಉತ್ಪತ್ತಿಯನ್ನು ನೀನೂ ಒಪ್ಪಿರುವಿ ತಾನೆ? ಜ್ಞಾನದಿಂದ ಉತ್ಪಾದನೆಯಲ್ಲಿ ಇಲ್ಲದ ನಿಯಮವನ್ನು ವಿನಾಶದಲ್ಲಿ ಏಕೆ ಒಪ್ಪಿರುವಿ? ಅದು ಕೇವಲ ಆಗ್ರಹವೇ ತಾನೆ?

**ಭಾವವಿಲಾಸಿನೀ–** ತಜ್ಜನ್ಯೇ ಜ್ಞಾನಜನ್ಯೇ । ಯತ್ ಯಸ್ಮಾತ್ । ಪಿತೃಮರಣಶ್ರವಣೇ ಸತಿ ಆರ್ತಿದರ್ಶನಾತ್ ಪುತ್ರೋತ್ಪತ್ತಿಶ್ರವಣೇ ಸತಿ ಪ್ರೀತಿದರ್ಶನಾತ್ ಆರ್ತಿಪ್ರೀತಿಕೃದಿತ್ಯುಕ್ತಮ್ । ಅನ್ಯತ್ ಸ್ಪಷ್ಟಮ್ । ತತ್ ಜ್ಞಾನಮ್ । ತಸ್ಮಾದಿತಿ ಪೂರ್ವೇಣಾನ್ವಯಃ । ಅತೋ ಜ್ಞಾನಮೇಕಸ್ಯೈವ ಜನಕಂ ನಾಪರಸ್ಯೇತಿ ನಿಯಮೋ ನಾಸ್ತೀತಿ ಭಾವಃ ॥ ೨೬೨ ॥

ಭಕ್ತಿಶ್ಚ ಭಗವತ್ಸ್ನೇಹಃ ಸಾ ಚ ತದ್ದರ್ಶನಾದ್ ಭವೇತ್ ।
ಯತೋ ರಾಗಸ್ಯ ಜನಕಂ ಪ್ರಾಹುರ್ವಿಷಯದರ್ಶನಂ ॥ ೨೬೩ ॥

**ಅರ್ಥ–** ಭಕ್ತಿಃ ಚ = ಭಕ್ತಿಯಾದರೂ, ಭಗವತ್‌ಸ್ನೇಹಃ = ಭಗವಂತನಲ್ಲಿ ಸ್ನೇಹಭಾವವೇ ಆಗಿದೆ. ಸಾ ಚ= ಆ ಭಕ್ತಿಯಾದರೂ, ತದ್ದರ್ಶನಾತ್= ಆ ಭಗವಂತನ ಅಪರೋಕ್ಷಜ್ಞಾನದಿಂದಲೇ, ಭವತಿ = ಆಗುತ್ತದೆ. ಯತಃ = ಏಕೆಂದರೆ, ವಿಷಯದರ್ಶನಂ= ವಿಷಯದ ದರ್ಶನವನ್ನು, ರಾಗಸ್ಯ= ಅತಿಶಯವಾದ ಪ್ರೀತಿಗೆ, ಜನಕಂ= ಕಾರಣವಾದದ್ದನ್ನಾಗಿ, ಪ್ರಾಹುಃ = ತಿಳಿದವರು ಹೇಳುತ್ತಾರೆ.

**ಅನುವಾದ -** ಭಗವಂತನಲ್ಲಿ ಅತಿಶಯವಾದ ಪ್ರೇಮವೇ ಭಕ್ತಿ. ಅಂತಹ ಭಕ್ತಿಯು ಉಂಟಾಗಬೇಕಾದರೆ ಭಗವಂತನ ಜ್ಞಾನವು ಉಂಟಾಗಲೇಬೇಕು. ಏಕೆಂದರೆ ಲೋಕರೂಢಿಯಲ್ಲಾಗಲೀ, ಶಾಸ್ತ್ರದಲ್ಲಾಗಲೀ ರಾಗ (ವಿಷಯಭೋಗಗಳಲ್ಲಿ ಅತಿಶಯವಾದ ಆಸಕ್ತಿ/ಪ್ರೀತಿ) ಉಂಟಾಗಬೇಕಾದರೆ ವಿಷಯದ ಜ್ಞಾನ ಉಂಟಾಗಲೇಬೇಕು. 'ಧ್ಯಾಯತೋ ವಿಷಯಾನ್ ಪುಂಸಃ ಸಂಗಸ್ತೇಷೂಪಜಾಯತೇ' ಇತ್ಯಾದಿಯಾಗಿ ಗೀತೆಯಲ್ಲೂ ಇದನ್ನು ತಿಳಿಸಿದ್ದಾರೆ.

ಭಕ್ತ್ಯಾ ಚ ಬಂಧವಿಚ್ಛೇದಃ ಶ್ರೂಯತೇ ಯೌಕ್ತಿಕಶ್ಚ ಸಃ ।
ಯತಃ ಪ್ರಿಯಸ್ಯ ನಿಗಡಬಂಧಂ ಛಿಂದಂತಿ ಮಾನವಾಃ ॥ ೨೬೪ ॥

**ಅರ್ಥ–** ಬಂಧವಿಚ್ಛೇದಃ = ಬಂಧದ ನಿವಾರಣೆಯು, ಭಕ್ತ್ಯಾ ಚ = ಭಕ್ತಿಯಿಂದಲೇ ಎಂಬುದಾಗಿ, ಶ್ರೂಯತೇ = ಶ್ರುತಿಯಿಂದ ಹೇಳಲ್ಪಟ್ಟಿದೆ. ಸಃ = ಭಕ್ತಿಯಿಂದಲೇ ಬಂಧನಾಶ ಎಂಬ ವಿಷಯವು, ಯೌಕ್ತಿಕಶ್ಚ = ಯುಕ್ತಿಗೆ ಅನುಗುಣವಾಗಿಯೇ ಇದೆ. ಯತಃ =

ಏಕೆಂದರೆ, ಮಾನವಾಃ = ರಾಜರುಗಳು, ಪ್ರಿಯಸ್ಯ = ಪ್ರೀತಿಪಾತ್ರನಾದವನ, ನಿಗಡಬಂಧಂ = ಕೋಳ ಮೊದಲಾದ ಬಂಧನವನ್ನು, ಛಿಂದಂತಿ = ಬಿಡುಗಡೆಗೊಳಿಸುತ್ತಾರೆ.

**ಅನುವಾದ** - ಕರ್ಮಾದಿಬಂಧಗಳ ನಾಶವು ಭಕ್ತಿಯಿಂದಲೇ ಸಾಧ್ಯ ಎಂದು ಶ್ರುತಿಯು ಹೇಳುತ್ತಿದೆ. ಭಾಷ್ಯದಲ್ಲಿ ಉದಾಹೃತವಾದ ಭಕ್ತಿರೇವೈನಂ ನಯತಿ ಎಂಬ ಶ್ರುತಿಯು ಇದನ್ನೇ ಹೇಳುತ್ತದೆ ತಾನೆ? ಅದಲ್ಲದೇ ಲೋಕದಲ್ಲಿ ಬಂಧನಕ್ಕೊಳಗಾದ ವ್ಯಕ್ತಿಯು ರಾಜರ ಬಗ್ಗೆ ವಿಶೇಷ ಆದರವುಳ್ಳವನಾಗಿ ರಾಜರ ಪ್ರೀತಿಗೆ ಪಾತ್ರನಾದರೆ ಆಗ ರಾಜರುಗಳು ಆ ವ್ಯಕ್ತಿಯನ್ನು ಬಂಧನದಿಂದ ಬಿಡುಗಡೆಗೊಳಿಸುವುದೂ ಕಂಡಿದೆ. ಹೀಗೆ ಶ್ರುತಿಯಿಂದಲೂ, ಯುಕ್ತಿಯಿಂದಲೂ ಭಕ್ತಿಯೇ ಬಂಧನಾಶಕ ಎಂದು ಸಿದ್ಧವಾಗುತ್ತದೆ.

ಭಾವವಿಲಾಸಿನೀ– ಜ್ಞಾನಸ್ಯ ಭಕ್ತಿಜನಕತ್ವಂ ಭಕ್ತೇಶ್ಚ ಬಂಧನಾಶಕತ್ವಂ ಸುಪ್ರಸಿದ್ಧಮಿತ್ಯಾಹ – ಭಕ್ತಿಶ್ಚೇತಿ ॥ ೨೬೩-೨೬೪ ॥

ನ ಸಾ ಜ್ಞಾನಂ ಸೈವ ಬಂಧಂ ಛಿಂದ್ಯಾಚ್ಚೇತ್ ಕಿಂ ಗತಂ ತವ ।
ತತ್ಸರ್ವವಿಪ್ಲವಾಯೋಕ್ತಾ ಪ್ರಕ್ರಿಯಾ ವಿಕ್ರಿಯೈವ ತೇ ।
ಅತೋऽಪ್ಯಸಂಗತೈವಾಭೂನ್ಮಿಥ್ಯಾತ್ವಪ್ರಸ್ತುತಿಸ್ತವ ॥ ೨೬೫ ॥

**ಅರ್ಥ**– ಸಾ = ಆ ಭಕ್ತಿಯು, ನ ಜ್ಞಾನಂ = ಜ್ಞಾನವಲ್ಲ, ಸಾ ಏವ = ಅದೇ ಭಕ್ತಿಯೇ, ಬಂಧಂ = ಸಂಸಾರವನ್ನು, ಛಿಂದ್ಯಾತ್ ಚೇತ್ = ಬಿಡಿಸುವುದಾದರೆ, ತವ = ನಿನಗೆ, ಕಿಂ ಗತಂ? = ಏನು ಹೋಯಿತು? (ಏನು ತೊಂದರೆ?) ತತ್ = ಆದ್ದರಿಂದ, ತೇ =ನಿನ್ನ, ಪ್ರಕ್ರಿಯಾ = ಮಾಯಾವಾದ ಪ್ರಕ್ರಿಯೆಯು, ಸರ್ವವಿಪ್ಲವಾಯ = ಸರ್ವನಾಶಕ್ಕೋಸ್ಕರ, ಉಕ್ತಾ = ಹೇಳಲ್ಪಟ್ಟ, ವಿಕ್ರಿಯಾ ಏವ = ಅಪಚಾರವೇ ಆಗಿದೆ. ಅತಃ ಅಪಿ = ಈ ಕಾರಣದಿಂದಲೂ, ತವ = ನಿನ್ನ, ಮಿಥ್ಯಾತ್ವಪ್ರಸ್ತುತಿಃ = ಪ್ರಪಂಚಮಿಥ್ಯಾತ್ವವಾದವು, ಅಸಂಗತಾ ಏವ = ಸೂತ್ರಕ್ಕೆ ಅನನುಗುಣವಾಗಿಯೇ, ಅಭೂತ್ =ಆಗಿದೆ.

**ಅನುವಾದ** - ಜ್ಞಾನದಿಂದ ಭಕ್ತಿಯುಂಟಾಗಿ ತನ್ಮೂಲಕ ಭಗವತ್ಪ್ರಸಾದದಿಂದ ಬಂಧನಾಶ ಎಂಬ ಅಂಶವನ್ನು ಒಪ್ಪಿಕೊಂಡಾಗ, ಭಕ್ತಿಯು ಬಂಧನಾಶಕವೆಂದು ಒಪ್ಪಿಕೊಂಡಂತಾಯಿತು. ಆ ಭಕ್ತಿಯು ಸ್ನೇಹರೂಪವಾಗಿರುವುದರಿಂದ ಜ್ಞಾನವಲ್ಲ ತಾನೆ? ಜ್ಞಾನವು ಅಜ್ಞಾನಮಾತ್ರನಾಶಕ ಎಂದು ವ್ಯಾಪ್ತಿ ಇದ್ದರೂ ಜ್ಞಾನವಲ್ಲದ ಭಕ್ತಿಯು ಬಂಧನಾಶಮಾಡಿರುವದರಿಂದ ಆ ವ್ಯಾಪ್ತಿಯ ಸಂಬಂಧವೇ ಇಲ್ಲಿ ಬರಲಾರದು. ಅಜ್ಞಾನಮಾತ್ರನಾಶಕವಾದ ಜ್ಞಾನದಿಂದ ಬಂಧವು ನಾಶವಾಗುವುದಿದ್ದರೆ, ಬಂಧವು ಅಜ್ಞಾನಕಲ್ಪಿತ (ಮಿಥ್ಯಾ) ಎಂಬ ನಿನ್ನ ವಾದಕ್ಕೆ ಪುಷ್ಟಿ ಬರುತ್ತಿತ್ತೋ ಏನೋ? ಆದರೆ ಇಲ್ಲಿ ಹಾಗಿಲ್ಲ, ಹಾಗಾಗಿ ನೀನು ಹೇಳುವ

ಪ್ರಪಂಚಮಿಥ್ಯಾತ್ವವಾದವು ಸೂತ್ರಕಾರರಿಗೆ ಸಮ್ಮತವಾಗದ ಒಂದು ವಿಚಿತ್ರ ಕಲ್ಪನೆಯೇ ಹೊರತು ಅದೊಂದು ಶಾಸ್ತ್ರಪ್ರಕ್ರಿಯೆಯೇ ಇಲ್ಲ.

**ಭಾವವಿಲಾಸಿನೀ–** ಸಾ ಭಕ್ತಿಃ । ಸೈವ ಭಕ್ತಿರೇವ । ತತ್ ತಸ್ಮಾತ್ । ಅಸಂಗತಾ ಸೂತ್ರಾಸಂಗತಾ ॥ ೨೬೫ ॥

ಅಥ ಜ್ಞಾನೇನ ಸತ್ಯಸ್ಯ ನಾಶೇ ಬ್ರಹ್ಮಾಪಿ ನಂಕ್ಷ್ಯತಿ ।
ತೇನ ನಾಶ್ಯತ್ವಘಟಕಂ ಮಿಥ್ಯಾತ್ವಂ ಯದಿ ಕಥ್ಯತೇ ॥ ೨೬೬ ॥

ತರ್ಹಿ ಮಿಥ್ಯಾರ್ಥನಾಶೇ ಸ್ಯಾಚ್ಛಶಶೃಂಗಸ್ಯ ನಾಶನಮ್ ।
ತೇನ ನಾಶ್ಯತ್ವಘಟಿಕಾಂ ಬ್ರೂಮೋ ಬಂಧಸ್ಯ ಸತ್ಯತಾಮ್ ॥ ೨೬೭ ॥

**ಅರ್ಥ–** ಅಥ = ಬೇರೊಂದು ರೀತಿಯಿಂದ, ಜ್ಞಾನೇನ = ಜ್ಞಾನದಿಂದ, ಸತ್ಯಸ್ಯ = ಸತ್ಯವಾದ ವಸ್ತುವಿನ, ನಾಶೇ = ನಾಶವಾಗುವುದಾದರೆ, ಬ್ರಹ್ಮ ಅಪಿ = ಬ್ರಹ್ಮನೂ ಕೂಡ, ನಂಕ್ಷ್ಯತಿ = ನಾಶವಾಗಬೇಕಾಗುತ್ತದೆ. ತೇನ = ಈ ಪ್ರಸಂಗವಿರುವುದರಿಂದ, ನಾಶ್ಯತ್ವಘಟಕಂ = ನಾಶ್ಯತ್ವಕ್ಕೆ ಪ್ರಯೋಜಕವಾಗಿ, ಮಿಥ್ಯಾತ್ವಂ = ಮಿಥ್ಯಾತ್ವವನ್ನು, ಕಥ್ಯತೇ ಯದಿ = ಹೇಳುವುದಾದರೆ, ತರ್ಹಿ = ಆ ಪಕ್ಷದಲ್ಲಿ, ಮಿಥ್ಯಾರ್ಥನಾಶೇ = ಮಿಥ್ಯಾಭೂತವಾದ ವಸ್ತುವು ನಾಶವಾಗುವುದಾದರೆ, ಶಶಶೃಂಗಸ್ಯ = ಮಿಥ್ಯಾಭೂತವಾದ ಮೊಲದ ಕೊಂಬಿಗೆ, ನಾಶನಂ = ನಾಶವು, ಸ್ಯಾತ್ = ಆದೀತು. ತೇನ = ಈ ಅನಿಷ್ಟಪ್ರಸಂಗವಿರುವುದರಿಂದ, ನಾಶ್ಯತ್ವಘಟಿಕಾಂ = ನಾಶ್ಯತ್ವಕ್ಕೆ ಪ್ರಯೋಜಕವಾಗಿ, ಬಂಧಸ್ಯ = ಬಂಧಕ್ಕೆ, ಸತ್ಯತಾಂ = ಸತ್ಯತ್ವವನ್ನು, ಬ್ರೂಮಃ = ಹೇಳುತ್ತೇವೆ.

**ಅನುವಾದ** - ಇಲ್ಲಿ ಮಾಯಾವಾದಿಗಳ ಇನ್ನೊಂದು ಸಮಾಧಾನವನ್ನು ನಿರಾಕರಿಸುತ್ತಿದ್ದಾರೆ. ಮಾಯಾವಾದಿಗಳಾದ ನೀವು ಜ್ಞಾನದಿಂದ ಸತ್ಯವಾದ ವಸ್ತುವೂ ನಾಶವಾಗಬಹುದಾದರೆ ಸತ್ಯನಾದ ಬ್ರಹ್ಮನೂ ನಾಶವಾಗಬೇಕಾದೀತು. ಆದರೆ ನಿತ್ಯನಾದ ಅವನು ನಾಶನಾಗಲಾರ. ಹಾಗಾಗಿ ಈ ಅನಿಷ್ಟಾಪತ್ತಿಯಿಂದ ತಪ್ಪಿಸಿಕೊಳ್ಳುವುದಕ್ಕಾಗಿ ಜ್ಞಾನದಿಂದ ನಾಶವಾಗಬಹುದಾದ ಎಲ್ಲವೂ ಮಿಥ್ಯಾ ಆಗಿರಬೇಕು. ಹಾಗಾಗಿ ಬ್ರಹ್ಮನು ಸತ್ಯನಾದ್ದರಿಂದ ಅವನು ನಾಶವಾಗುವ ಪ್ರಸಕ್ತಿಯೂ ಬರಲಾರದು ಎಂದು ಹೇಳುವಿರಾದರೆ,

ಜ್ಞಾನದಿಂದ ಮಿಥ್ಯಾಭೂತವಾದ ವಸ್ತುವು ನಾಶವಾಗುವುದಾದರೆ ಮಿಥ್ಯಾಭೂತವಾದ ಮೊಲದಕೊಂಬೂ ಕೂಡ ನಾಶವಾಗಲಿ ಎಂಬ ಆಪತ್ತಿ ಬರಬೇಕಾದೀತು. ಆದರೆ ಮೊಲಕ್ಕೆ ಕೊಂಬು ಯಾವತ್ತೂ ಇರಲಾರದು, ಅಂತಹ ವಸ್ತುವಿಗೆ ನಾಶವನ್ನು ಹೇಗೆ ಹೇಳವುದು? ಎಂಬ ಅನಿಷ್ಟಾಪತ್ತಿ ಬರುವುದರಿಂದ

ಸತ್ಯವಾದ (ಇರುವ) ವಸ್ತುವಿಗೇ ನಾಶವನ್ನು ಹೇಳಬೇಕು. ಹೀಗೆ ನಾಶವಾಗುವ ವಸ್ತುಗಳ ಪಟ್ಟಿಯಲ್ಲಿ ಸೇರಿದ ಬಂಧವೂ ಸತ್ಯವೇ ಆಗಿರಬೇಕು ಎಂದೂ ಸಮಾನನ್ಯಾಯದಿಂದ ನಾವೂ (ತತ್ತ್ವವಾದಿಗಳು) ಹೇಳಬೇಕಾಗುತ್ತದೆ.

ತ್ರೈಕಾಲಿಕನಿಷೇಧಾಖ್ಯಬಾಧಾಯೋಗ್ಯಸ್ಯ ಸತ್ಯತಾ ।
ತದ್ಯೋಗ್ಯಸ್ಯ ಚ ಮಿಥ್ಯಾತ್ವಮಿತಿ ಸರ್ವಸ್ಯ ಸಂಮತಮ್ ॥ ೨೬೮ ॥

**ಅರ್ಥ–** ಸರ್ವಸ್ಯ = ವಾದಿಪ್ರತಿವಾದಿಗಳಿಬ್ಬರಿಗೂ, ತ್ರೈಕಾಲಿಕನಿಷೇಧಾಖ್ಯ ಬಾಧಾಯೋಗ್ಯಸ್ಯ = ಮೂರುಕಾಲದಲ್ಲಿಯೂ ಇಲ್ಲ ಎಂಬ ಅರ್ಥವುಳ್ಳ ಬಾಧಕ್ಕೆ ಅಯೋಗ್ಯವಾದ ವಸ್ತುವಿಗೆ, ಸತ್ಯತಾ = ಸತ್ಯತ್ವವೂ, ಚ = ಮತ್ತು, ತದ್ಯೋಗ್ಯಸ್ಯ = ಬಾಧಕ್ಕೆ ಯೋಗ್ಯವಾದ ವಸ್ತುವಿಗೆ, ಮಿಥ್ಯಾತ್ವಂ = ಮಿಥ್ಯಾತ್ವವೂ ಇದೆ. ಇತಿ = ಎಂಬುದಾಗಿ, ಸಮ್ಮತಂ = ಒಪ್ಪಿಗೆಯಾದ ವಿಷಯವಾಗಿದೆ.

**ಅನುವಾದ -** ಮಾಯಾವಾದಿಗಳಾದ ನೀವು ಹಾಗೂ ತತ್ತ್ವವಾದಿಗಳಾದ ನಾವು ಹೀಗೆ ಇಬ್ಬರೂ ಕೂಡ ಸತ್ಯವಾದ ವಸ್ತು ಎಂದರೆ ಯಾವ ವಸ್ತುವನ್ನು ಮೂರುಕಾಲದಲ್ಲಿಯೂ (ಹಿಂದೆ - ಇಂದು - ಮುಂದೆಯೂ) ಇಲ್ಲ ಎಂದು ಹೇಳಬರುವುದಿಲ್ಲವೋ ಅದು ಸತ್ಯ. ಯಾವ ವಸ್ತುವನ್ನು ಮೂರು ಕಾಲದಲ್ಲಿಯೂ ಇಲ್ಲ ಎಂದು ಹೇಳಬಹುದೋ ಅದು ಮಿಥ್ಯಾ ಎಂದೂ ಒಪ್ಪಿದ್ದೇವೆ.

ಬಾಧ ಎಂದರೆ ಮೂರುಕಾಲದಲ್ಲಿಯೂ ಇಲ್ಲದಿರುವುದು ಎಂದು ಅರ್ಥ. ಎಂದರೆ ಮೂರುಕಾಲದಲ್ಲಿಯೂ ಇಲ್ಲ ಎನ್ನುವುದಕ್ಕೆ ಬದಲಾಗಿ ಬಾಧ ಇದೆ ಎಂಬ ವ್ಯವಹಾರವನ್ನು ಶಾಸ್ತ್ರದಲ್ಲಿ ಮಾಡುತ್ತಾರೆ. ಇಲ್ಲಿ ಮಡಕೆ ಇಲ್ಲ ಎಂಬುದಕ್ಕಾಗಿ ಪರ್ಯಾಯವಾಗಿ ಇಲ್ಲಿ ಮಡಿಕೆಯ ಅಭಾವ ಇದೆ ಎಂದಂತೆ.

ಮಿಥ್ಯಾ ಎಂದರೆ ಸದಸದ್‌ವಿಲಕ್ಷಣ ಎಂದು ಅರ್ಥ. ಈ ಮಿಥ್ಯಾತ್ವವು ಬಂಧದಲ್ಲಿದೆ, ಆದರೆ ಶಶಶೃಂಗ(ಮೊಲದ ಕೊಂಬು) ದಲ್ಲಿ ಇಲ್ಲ, ಆದು ಅಸತ್ ಆದ್ದರಿಂದ ಅಸದ್‌ವಿಲಕ್ಷಣ ಎಂಬ ಅಂಶವು ಅಲ್ಲಿ ಬರಲಾರದು, ಹಾಗಾಗಿ ಶಶಶೃಂಗವು ನಾಶವಾಗಬೇಕಾದೀತು ಎಂಬ ಆಪತ್ತಿಯೇ ಬರಲಾರದು ಎಂಬ ಮಾಯಾವಾದಿಗಳ ಶಂಕೆಯನ್ನು ಮುಂದಿನ ಶ್ಲೋಕಗಳಿಂದ ನಿರಾಕರಿಸುತ್ತಾರೆ.

ಪಾರಿಭಾಷಿಕಮಿಥ್ಯಾತ್ವಂ ಶಶಶೃಂಗೇ ನ ಚೇತ್ ತವ ।
ಜಡತ್ವೇ ಸತ್ಯಬಾಧ್ಯತ್ವಂ ಸತ್ಯತ್ವಂ ಬ್ರಹ್ಮಣೋ ನ ಮೇ ॥ ೨೬೯ ॥

**ಅರ್ಥ–** ಯದಿ = ಒಂದು ವೇಳೆ, ತವ = ನಿನ್ನ ಮತದಂತೆ, ಶಶಶೃಂಗೇ = ಮೊಲದ ಕೊಂಬಿನಲ್ಲಿ, ಪಾರಿಭಾಷಿಕಮಿಥ್ಯಾತ್ವಂ = ನಿನ್ನ ಮತದ ಪರಿಭಾಷೆಯಂತೆ ಕಲ್ಪಿತವಾದ

ಮಿಥ್ಯಾತ್ವವು, ನ ಚೇತ್ = ಇಲ್ಲವೆಂದಾದರೆ, ಮೇ= ನನ್ನ ಮತದಂತೆ, ಬ್ರಹ್ಮಣಃ = ಬ್ರಹ್ಮನಿಗೆ, ಜಡತ್ವೇ ಸತಿ = ಜಡವೂ ಆಗಿದ್ದು, ಅಬಾಧ್ಯತ್ವಂ = ಬಾಧ್ಯವೂ ಆಗಿಲ್ಲದಿರುವುದು ಎಂಬ, ಸತ್ಯತ್ವಂ = ಸತ್ಯತ್ವವು, ನ = ಇರುವುದಿಲ್ಲ.

**ಅನುವಾದ -** ನಮ್ಮಿಬ್ಬರ ಮತದಂತೆ ಯಾವುದು ಬಾಧವುಳ್ಳದ್ದೋ ಅದು ಮಿಥ್ಯಾ, ಯಾವುದು ಬಾಧವಿಲ್ಲದ್ದೋ ಅದು ಸತ್ಯ ಎಂಬ ವಿಷಯವು ಸರಿಯಾಗಿದ್ದರೂ ಶಶಶೃಂಗವು ನಾಶವಾಗಬೇಕಾದೀತು ಎಂಬ ಆಪತ್ತಿಯನ್ನು ನಿವಾರಿಸುವುದಕ್ಕೋಸ್ಕರ ಶಶಶೃಂಗ ಹಾಗೂ ಬಂಧ ಈ ಎರಡೂ ಮಿಥ್ಯಾವೇ ಆಗಿದ್ದರೂ ಜ್ಞಾನದಿಂದ ನಾಶವಾಗುವ ಬಂಧದಲ್ಲಿ ಸದಸದ್‌ವಿಲಕ್ಷಣತ್ವರೂಪವಾದ ಮಿಥ್ಯಾತ್ವವು ಇದೆ. ಶಶಶೃಂಗದಲ್ಲಿ ಈ ರೀತಿಯ ಮಿಥ್ಯಾತ್ವವಿಲ್ಲ ಎಂದು ನಿನ್ನ ಮತದ ಪರಿಭಾಷೆಯನ್ನು ಆಧರಿಸಿ ನೀನು ಪರಿಹಾರವನ್ನು ಹೇಳುವುದಾದರೆ ನಾವೂ ಕೂಡ ಬ್ರಹ್ಮನೂ ಸತ್ಯ, ಬಂಧವೂ ಸತ್ಯವೇ, ಆದರೆ ನಾಶಕ್ಕೆ ಪ್ರಯೋಜಕವಾದ ಸತ್ಯತ್ವವೆಂದರೆ ಜಡತ್ವೇ ಸತಿ ಅಬಾಧ್ಯತ್ವಂ. ಈರೀತಿಯ ಸತ್ಯತ್ವವು ಬ್ರಹ್ಮನಲ್ಲಿ ಇಲ್ಲ. ಬ್ರಹ್ಮನು ಚೇತನನಾಗಿದ್ದುದರಿಂದ, ಜಡತ್ವೇ ಸತ್ಯಬಾಧ್ಯತ್ವಂ ಎಂಬ ನಾಶಪ್ರಯೋಜಕವಾದ ಸತ್ಯತ್ವವು ಅವನಲ್ಲಿ ಇಲ್ಲದಿರುವುದರಿಂದ ಬ್ರಹ್ಮನು ನಾಶಹೊಂದಬೇಕಾದೀತು ಎಂಬ ಅನಿಷ್ಟಾಪತ್ತಿಗೆ ಆಸ್ಪದವಿಲ್ಲ.

**ಭಾವವಿಲಾಸಿನೀ–** ಪ್ರಕಾರಾಂತರೇಣ ಸಂಗತಿಮಾಶಂಕತೇ ।। **ಅಥೇತಿ** ।। ಉತ್ತರಮಾಹ – **ತರ್ಹೀತಿ**। ನನು ಸದಸದ್ವೈಲಕ್ಷಣ್ಯಮೇವ ಮಿಥ್ಯಾತ್ವಂ ತಚ್ಚ ಶಶಶೃಂಗೇ ನಾಸ್ತಿ । ಅತೋ ನಾತಿಪ್ರಸಂಗ ಇತಿ ಶಂಕಾಂ ಪ್ರತಿಬಂಧ್ಯಾ ಪರಿಹರತಿ ।। **ತ್ರೈಕಾಲಿಕೇತಿ** ।। ತಸ್ಮಾತ್ ಮಿಥ್ಯಾಭೂತಸ್ಯ ನಾಶೇಽಪ್ಯತಿಪ್ರಸಂಗಸಾಮ್ಯಾತ್।।೨೬೬-೨೬೯।।

ಅತೋ ನಾತಿಪ್ರಸಂಗೋಽಸ್ತಿ ತವಾಪಿ ಚ ಮಮಾಪಿ ಚ ।
ತಸ್ಮಾದನಾಶೇ ನಾಶೇ ಚ ಸತ್ಯತ್ವಾದೇರ್ನ ಸಂಗತಿಃ ।। ೨೭೦ ।।

**ಅರ್ಥ–** ಅತಃ= ಆದ್ದರಿಂದ, ತವ ಅಪಿ= ನಿನಗೂ, ಚ= ಮತ್ತು, ಮಮ ಅಪಿ= ನನಗೂ, ಅತಿಪ್ರಸಂಗಃ= ಅನಿಷ್ಟಾಪತ್ತಿಯು, ನ ಚ= ಇಲ್ಲವೇ ಇಲ್ಲ, ತಸ್ಮಾತ್ = ಆದ ಕಾರಣ, ಅನಾಶೇ= ನಾಶವಾಗದಿರಲು, ಚ= ಅಥವಾ, ನಾಶೇ= ನಾಶವಾಗಲು, ಸತ್ಯತ್ವಾದೇಃ= ಸತ್ಯತ್ವಮೊದಲಾದ ವಿಷಯಗಳ, ಸಂಗತಿಃ= ಸಂಬಂಧವು, ನ= ಪ್ರಯೋಜಕವಾಗಿ ಇರುವುದಿಲ್ಲ.

**ಅನುವಾದ -** ಈ ಹಿಂದಿನ ಶ್ಲೋಕಗಳಲ್ಲಿ ಹೇಳಿದಂತೆ ಪರಿಭಾಷೆಯ ಪರಿಷ್ಕಾರದಿಂದ ಇಬ್ಬರ ಪಕ್ಷದಲ್ಲೂ ಅತಿಪ್ರಸಂಗವನ್ನು ನಿವಾರಿಸಬಹುದಾದ್ದರಿಂದ ಒಂದು ವಸ್ತುವು ನಾಶವಾಗಲು ಮಿಥ್ಯಾತ್ವವಾಗಲೀ ಜಡತ್ವವಾಗಲೀ ಪ್ರಯೋಜಕವಾಗದು, ಹಾಗೆಯೇ ನಾಶವಾಗದಿರಲು ಸತ್ಯತ್ವವಾಗಲೀ ಚೇತನತ್ವವಾಗಲೀ

ಪ್ರಯೋಜಕವಲ್ಲ. ಅದಕ್ಕೆ ಪ್ರಯೋಜಕವಾದ (ಸಂಬಂಧವುಳ್ಳ)ದ್ದು ಬೇರೆಯೇ ಇದೆ.

ಕಾರ್ಯತಾऽಕಾರ್ಯತೇ ಏವ ನಾಶಾನಾಶಪ್ರಯೋಜಿಕೇ ।
ಕ್ವಚಿನ್ನಾಶಕಸಾಮಗ್ರೀ ನಾಶ್ಯತಾಯಾಃ ಪ್ರಯೋಜಿಕಾ ॥ ೨೭೧ ॥

**ಅರ್ಥ–** ಕಾರ್ಯತಾಕಾರ್ಯತೇ ಏವ = ಕಾರ್ಯತ್ವ ಮತ್ತು ಅಕಾರ್ಯತ್ವಗಳೇ, ನಾಶಾನಾಶಪ್ರಯೋಜಿಕೇ = ನಾಶಕ್ಕೂ, ನಾಶವಾಗದೇ ಇರುವುದಕ್ಕೂ ಕಾರಣವಾಗಿವೆ. ಕ್ವಚಿತ್ = ಕೆಲವು ಸ್ಥಳಗಳಲ್ಲಿ, ನಾಶಕಸಾಮಗ್ರೀ = ನಾಶಕವಸ್ತುಘಟಿತ ವಿಶೇಷಸಾಮಗ್ರಿಯು, ನಾಶ್ಯತಾಯಾಃ = ವಸ್ತುವು ನಾಶವಾಗುವುದಕ್ಕೆ, ಪ್ರಯೋಜಿಕಾ = ಕಾರಣವಾಗಿದೆ.

**ಅನುವಾದ** - ಯಾವುದೇ ವಸ್ತುವು ನಾಶವಾಗಬೇಕಾದರೆ ಅಲ್ಲಿ ಕಾರ್ಯತ್ವವು ಇರಬೇಕು. ಕಾರ್ಯತ್ವವೆಂದರೆ ಯಾವುದಾದರೂ ಕಾರಣದಿಂದ ಹುಟ್ಟಿದ ವಸ್ತುವಿನ ಗುಣ. ಅಂದರೆ ಯಾವುದು ಹುಟ್ಟಿದ ವಸ್ತುವೋ ಅದು ನಾಶವಾದೀತು. ಅನಾದಿಯಾದ ಅಂದರೆ ಅಕಾರ್ಯತ್ವವುಳ್ಳ ವಸ್ತುವು ನಾಶವಾಗದು. ಸಾಮಾನ್ಯವಾಗಿ ಇದೇ ನಿಯಮವು ಅನ್ವಯವಾಗುವುದು. ಉದಾಹರಣೆಗೆ ಮಣ್ಣಿನಿಂದ ಕುಂಬಾರನ ಮೂಲಕ ಹುಟ್ಟಿದ ಮಡಕೆಯು ನಾಶವಾಗುತ್ತದೆ. ಹುಟ್ಟದ ಅಂದರೆ ಅನಾದಿಯಾದ ಆಕಾಶವು ನಾಶವಾಗುವುದಿಲ್ಲ. ಆದರೆ ಕೆಲವೊಂದು ಅಕಾರ್ಯ (ಹುಟ್ಟದೇ ಇರುವ) ವಸ್ತುವೂ ನಾಶವಾದೀತು. ಅಲ್ಲಿ ವಿಶೇಷ ಸಾಮಗ್ರಿಯೇ ಕಾರಣವಾಗುತ್ತದೆ. ಆದರೆ ಈ ವಿಶೇಷಸಾಮಗ್ರಿಯನ್ನು ಸರಿಯಾದ ಪ್ರಮಾಣಗಳಿಂದ ಮಾತ್ರ ಒಪ್ಪಿಕೊಳ್ಳಬೇಕು.

ಇತಿ ವಾಚ್ಯಂ ಯತೋऽನಾದಿರ್ಬಂಧೋ ಜ್ಞಾನಾದ್ ವಿನಾಶವಾನ್ ।
ತತ್ಸತ್ಯಬಂಧನಾಶೇऽಪಿ ಬ್ರಹ್ಮನಾಶಃ ಕುತೋ ವದ ॥ ೨೭೨ ॥

**ಅರ್ಥ–** ಇತಿ = ಈ ಹಿಂದಿನ ಶ್ಲೋಕದಲ್ಲಿ ಹೇಳಿದಂತೆ, ವಾಚ್ಯಂ = ಯಾವುದೇ ವಸ್ತುವಿನ ನಾಶಕ್ಕೆ ಕಾರಣವನ್ನು ಹೇಳಬೇಕು. ಯತಃ= ಏಕೆಂದರೆ, ಅನಾದಿಃ= ಉತ್ಪತ್ತಿಯಿಲ್ಲದ, ಬಂಧಃ= ಬಂಧವು, ವಿನಾಶವಾನ್= ವಿನಾಶವುಳ್ಳದ್ದಾಗಿದೆ. ತತ್= ಆದ್ದರಿಂದ (ಬಂಧನಾಶಕಪ್ರಯೋಜಕವಾದ ವಿಶೇಷಸಾಮಗ್ರಿ ಇರುವುದರಿಂದ), ಸತ್ಯಬಂಧನಾಶೇ ಅಪಿ = ಸತ್ಯವಾದ ಬಂಧವು ನಾಶವಾದರೂ, ಕುತಃ = ಹೇಗೆ ತಾನೇ, ಬ್ರಹ್ಮನಾಶಃ = ಬ್ರಹ್ಮನು ನಾಶನಾದಾನು? ವದ = ಹೇಳು.

**ಅನುವಾದ** - ನಾಶವಾಗುವುದಕ್ಕೆ ಸತ್ಯತ್ವಮಿಥ್ಯಾತ್ವಗಳು ಪ್ರಯೋಜಕಗಳಲ್ಲ. ಕಾರ್ಯತ್ವವೇ ಪ್ರಯೋಜಕ. ಕೆಲವೊಮ್ಮೆ ಕಾರ್ಯತ್ವವಿಲ್ಲದೆಯೂ ನಾಶಕ

ಸಾಮಗ್ರಿಯಿಂದಲೇ ವಸ್ತುನಾಶವು ಆಗಬಹುದು. ಹೀಗೆ ಒಪ್ಪಿಕೊಂಡಾಗ ತದಾ ವಿದ್ವಾನ್ ಪುಣ್ಯಪಾಪೇ ವಿಧೂಯ, ಜ್ಞಾನಾಗ್ನಿಃ ಸರ್ವಕರ್ಮಾಣಿ ಭಸ್ಮಸಾತ್ ಕುರುತೇ ಇತ್ಯಾದಿಗಳಿಂದ ಜ್ಞಾನದಿಂದ ಬಂಧನಾಶವು ಪ್ರಮಿತವಾಗಿರುವುದರಿಂದ ಬಂಧವನ್ನು ನಾಶಗೊಳಿಸುವ ವಿಶೇಷಶಕ್ತಿಯು ಜ್ಞಾನದಲ್ಲಿದೆ ಎಂದೇ ಸಿದ್ಧವಾಗುತ್ತದೆ. ಇಂತಹ ವಿಶೇಷಸಾಮಗ್ರಿ ಇಲ್ಲದಿರುವುದರಿಂದಲೇ ಬ್ರಹ್ಮನು ನಾಶವಾಗಲಾರ,ಹೀಗೆ ಶ್ರುತಿಸ್ಮೃತಿಗಳ ಬಲದಿಂದಲೇ ಸತ್ಯಬಂಧನಾಶವನ್ನು ಒಪ್ಪಿಕೊಳ್ಳುವುದರಿಂದ ಸತ್ಯನಾದ ಬ್ರಹ್ಮನಾಶವನ್ನು ಹೇಗೆ ಹೇಳುವುದು? ಅಂತಹ ಯಾವುದೇ ಪ್ರಮಾಣ ಇಲ್ಲದೇ ಈ ಆಪತ್ತಿಯನ್ನಾದರೂ ಹೇಗೆ ತಾನೆ ಮಾಡಲಾದೀತು? ನೀನೇ ಹೇಳು.

**ಭಾವವಿಲಾಸಿನೀ–** ಕಾರ್ಯತ್ವಮನಿತ್ಯತ್ವೇ ಪ್ರಯೋಜಕಮಿತಿ ಸಾರ್ವತ್ರಿಕೀ ಸ್ಥಿತಿಃ । ಕ್ವಚಿದಪವಾದೋಽಪ್ಯಸ್ತೀತ್ಯಾಹ – **ಕ್ವಚಿದಿತಿ** ॥ ತತ್ ತಸ್ಮಾತ್ ಕಾರ್ಯತ್ವಸ್ಯ ನಾಶಕಸಾಮಗ್ರ್ಯಾ ವಾ ನಾಶ್ಯತ್ವಪ್ರಯೋಜಕತ್ವಾತ್ ॥ ೨೭೧-೨೭೨ ॥

**ವಿವರಣೆ** - ಜ್ಞಾನವು ಸತ್ಯವಾದ ಬಂಧವನ್ನು ನಾಶಗೊಳಿಸುವುದು ಎಂಬ ವಿಷಯವನ್ನು ನೀವು ದೃಷ್ಟಬಲದಿಂದ ಸಮರ್ಥಿಸುವಿರೋ, ಶ್ರುತಿಬಲದಿಂದಲೋ ಎಂದು ಮಾಯಾವಾದಿಯು ವಿಕಲ್ಪಮಾಡಿಕೊಂಡು, ದೃಷ್ಟಬಲ ಎಂಬ ಪಕ್ಷದಲ್ಲಿ ದೋಷವನ್ನು ಹೇಳುವ ಕ್ರಮವನ್ನು ಯಚ್ಚ ಇತ್ಯಾದಿ ಶ್ಲೋಕಗಳಿಂದ ಅನುವಾದಿಸಿ ನಿರಾಕರಿಸುತ್ತಿದ್ದಾರೆ. (ಶ್ರುತಿಯ ಬಲದಿಂದ ಎಂಬ ಪಕ್ಷಕ್ಕೆ ಶ್ಲೋಕ 285 ರಲ್ಲಿ ವಿವರಣೆ ಇದೆ.)

ಯಚ್ಚ ದೃಷ್ಟಬಲಾದ್ ಜ್ಞಾನಂ ಸತ್ಯಬಂಧನಿವರ್ತಕಂ ।
ಇತ್ಯುಕ್ತೇ ನೀಲವಿಜ್ಞಾನಾನ್ನೈಲ್ಯಾದೇರ್ನ ನಿವರ್ತನಂ ॥ ೨೭೩ ॥

ದೃಷ್ಟಂ ತತೋ ದೃಷ್ಟಬಲಂ ಕಥಂ ಸ್ಯಾದಿತಿ ಚೋದಿತಂ ।
ತಚ್ಚ ಜಾತ್ಯುತ್ತರಂ ಮನ್ಯೇ ನೈವ ಜಾತಿಮದುತ್ತರಂ ॥ ೨೭೪ ॥

**ಅರ್ಥ–** ದೃಷ್ಟಬಲಾತ್ = ಬೇರೆಕಡೆ ಕಂಡಿದೆ ಎಂಬುದರ ಬಲದಿಂದ, ಜ್ಞಾನಂ = ಜ್ಞಾನವು, ಸತ್ಯಬಂಧನಿವರ್ತಕಂ = ಸತ್ಯವಾದ ಬಂಧವನ್ನು ನಾಶಗೊಳಿಸುತ್ತದೆ. ಇತಿ = ಈ ರೀತಿಯಾಗಿ, ಉಕ್ತೇ = ಹೇಳಿದರೆ, ನೀಲವಿಜ್ಞಾನಾತ್ = ನೀಲವಸ್ತುವಿನ ಜ್ಞಾನದಿಂದ, ನೈಲ್ಯಾದೇಃ =ವಸ್ತುವಿನಲ್ಲಿ ನೀಲವರ್ಣದ, ನಿವರ್ತನಂ = ನಾಶವು, ನ ದೃಷ್ಟಂ = ಕಾಣಸಿಗುವುದಿಲ್ಲ, ತತಃ = ಆದ್ದರಿಂದ, ದೃಷ್ಟಬಲಂ = ಬೇರೆ ಕಡೆ ಕಂಡಿರುವುದರ ಬಲವು, ಕಥಂ ಸ್ಯಾತ್ = ಹೇಗೆ ತಾನೆ ಸತ್ಯಬಂಧನಾಶಕ್ಕೆ ಕಾರಣವಾದೀತು? ಇತಿ = ಎಂಬುದಾಗಿ, ಯಚ್ಚ ಚೋದಿತಂ = ಏನನ್ನು ನಿನ್ನ ಶಾಸ್ತ್ರಕಾರರು ಹೇಳಿದ್ದಾರೆಯೋ, ತತ್ ಚ = ಅದೂ ಕೂಡ,

ಜಾತ್ಯುತ್ತರಂ = ಜಾತ್ಯುತ್ತರ ಎಂಬ ನಿಗ್ರಹಸ್ಥಾನವುಳ್ಳದ್ದಾಗಿ, ಮನ್ಯೇ = ತಿಳಿಯುತ್ತೇನೆ. ಜಾತಿಮದುತ್ತರಂ = ಸರಿಯಾದ ರೀತಿಯ ಉತ್ತರವುಳ್ಳದ್ದು, ನ ಏವ = ಅಲ್ಲವೇ ಅಲ್ಲ

**ಅನುವಾದ** - ಜ್ಞಾನದಿಂದ ಸತ್ಯವಾದ ಪುಣ್ಯಪಾಪಗಳು ನಾಶವಾಗುವುದು ಕಂಡಿದೆ. ಆದ್ದರಿಂದ ಇದು ದೃಷ್ಟವಾದ ವಿಷಯ. ಇದರ ಬಲದಿಂದ ಜ್ಞಾನವು ಸತ್ಯವಾದ ಬಂಧವನ್ನು ನಾಶಗೊಳಿಸುತ್ತದೆ ಎಂಬ ಪಕ್ಷಕ್ಕೆ ಮಾಯಾವಾದಿಗಳ ಆಕ್ಷೇಪ ಹೀಗಿದೆ - ದೃಷ್ಟವಾಗಿದೆ ಎಂಬುದರ ಬಲದಿಂದ ನೀವು ಸತ್ಯವಾದ ಬಂಧವೂ ನಾಶವಾಗುತ್ತದೆ ಎಂದು ಹೇಳುವುದಾದರೆ, ವಸ್ತುವಿನಲ್ಲಿ ನೀಲವರ್ಣವು ದೃಷ್ಟವಾಗಿದೆ (ಪ್ರತ್ಯಕ್ಷದಿಂದ ಕಾಣುತ್ತದೆ). ಹಾಗಾಗಿ ಇದರ ಬಲದಿಂದ ಸತ್ಯವಾದ ನೀಲವರ್ಣವು ನಾಶವಾಲಿ. ಹೀಗೆ ನಾಶವಾಗದು ಆದ್ದರಿಂದ ಸತ್ಯಬಂಧವೂ ನಾಶವಾಗದು ಎಂದು. ಹೀಗೆ ಆಕ್ಷೇಪ ಮಾಡಿದರೆ ಜಾತ್ಯುತ್ತರ ಎಂಬ ನಿಗ್ರಹಸ್ಥಾನವು ಮಾಯಾವಾದಿಗಳಿಗೆ ಪ್ರಾಪ್ತವಾಗುತ್ತದೆ. (ಸ್ವವ್ಯಾಹತವಾಗಿದ್ದು ದೂಷಣೆಮಾಡಲು ಅಸಮರ್ಥವಾದ ಉತ್ತರವನ್ನು ಹೇಳಿದರೆ ಅದು ಜಾತಿ ಎಂಬ ನಿಗ್ರಹಸ್ಥಾನವಾಗುತ್ತದೆ. ಈ ಜಾತಿ ಎಂಬ ನಿಗ್ರಹಸ್ಥಾನವು ಇಪ್ಪತ್ತನಾಲ್ಕು ವಿಭಾಗವುಳ್ಳದ್ದು. - ಪ್ರಮಾಣಪದ್ಧತಿ/ ಅನುಮಾನಪರಿಚ್ಛೇದ - ೧೪೫) ಹೊರತು ಇದು ಸರಿಯಾದ ಉತ್ತರವಲ್ಲ. ಈ ವಿಷಯವನ್ನು ಮುಂದಿನ ಶ್ಲೋಕಗಳಲ್ಲಿ ಸ್ಪಷ್ಟಪಡಿಸುತ್ತಾರೆ.

**ಭಾವವಿಲಾಸಿನೀ**– ಯಚ್ಚ ಪರೇಣ ಜ್ಞಾನಸ್ಯ ಸತ್ಯಬಂಧನಿವರ್ತಕತ್ವಂ ದೃಷ್ಟಬಲಾದ್ವಾ ಶ್ರುತಿಬಲಾದ್ವೇತಿ ವಿಕಲ್ಪ್ಯಾದ್ಯೇ ದೂಷಣಮುಕ್ತಂ ನೀಲಜ್ಞಾನಾನ್ನೀಲಾದಿನಿವೃತ್ತೇರದೃಷ್ಟತ್ವಾದಿತಿ। ತದನೂದ್ಯ ದೂಷಯತಿ॥ **ಯಚ್ಚೇತಿ** ॥ ಜಾತ್ಯುತ್ತರಮ್ । ಸ್ವವ್ಯಾಘಾತಕತ್ವಾತ್ । ತದೇವ ವಿಶದಯತಿ ॥ **ಯತ ಇತಿ** ॥೨೭೩-೨೭೪॥

ಯತೋ ದೃಷ್ಟಬಲಾದೇಕಭಾವೇ ಭಾವಾಂತರಾನುಮಾ ।
ನ ಸ್ಯಾತ್ ಸ್ವಾಭಿಮತಾ ರಾಸಭಾದೌ ವಹ್ನ್ಯಾದ್ಯದರ್ಶನಾತ್ ॥ ೨೭೫ ॥

**ಅರ್ಥ**– ಯತಃ = ಏಕೆಂದರೆ, ದೃಷ್ಟಬಲಾತ್ = ಪ್ರತ್ಯಕ್ಷದ ಬಲದಿಂದ, ಏಕಭಾವೇ = ಒಂದು ವಸ್ತುವು ಇದೆಯಾದರೆ ಭಾವಾಂತರಾನುಮಾ= ಇನ್ನೊಂದು ವಸ್ತುವಿದೆಯೆಂಬ, (ಧೂಮವು ಇದ್ದರೆ ವಹ್ನಿ ಇದೆಯೆಂಬ) ಅನುಮಾನವು, ಸ್ವಾಭಿಮತಾ = ಮಾಯಾವಾದಿಗೆ ಒಪ್ಪಿಗೆಯಾದ ವಿಷಯವಾಗಿದ್ದರೂ, ರಾಸಭಾದೌ = ಕತ್ತೆ ಮೊದಲಾದ ವಸ್ತುಗಳಿದ್ದಲ್ಲಿ, ವಹ್ನ್ಯಾದ್ಯದರ್ಶನಾತ್= ಬೆಂಕಿ ಮೊದಲಾದ ವಸ್ತುಗಳು ಕಂಡಿಲ್ಲದೇ ಇರುವುದರಿಂದ, ನ ಸ್ಯಾತ್ =ಅನುಮಾನವು ಉಂಟಾಗದಿರಬೇಕಾದೀತು.

**ಅನುವಾದ** - ನೀಲವಸ್ತುವು ಕಂಡರೆ ವಸ್ತುವಿನಲ್ಲಿನ ನೀಲಾದಿಗಳು ನಾಶ- ವಾಗಬೇಕಾದೀತು ಎಂಬ ಆಪತ್ತಿಯನ್ನು ನೀವು ಮಾಡುವುದಾರೆ ಧೂಮವಿರುವಲ್ಲಿ

ಬೆಂಕಿಯನ್ನು ಅನೇಕಬಾರಿ ನೋಡಿ ಅವೆರಡು ವಸ್ತುಗಳಿಗೆ ಪರಸ್ಪರ ಸಂಬಂಧವನ್ನು ಒಪ್ಪಿ ಧೂಮವನ್ನು ಮಾತ್ರಕಂಡಾಗ ವಹ್ನಿಯನ್ನು ಅನುಮಾನಮಾಡುವುದು ಸರ್ವಸಮ್ಮತವಾಗಿದ್ದರೂ ಕತ್ತೆಯಿರುವಲ್ಲಿ ಬೆಂಕಿಯು ನಿಯಮೇನ ಕಂಡಿಲ್ಲದಿರುವುದರಿಂದ ಧೂಮವಿರುವಲ್ಲೂ ಬೆಂಕಿಯನ್ನು ಅನುಮಾನ ಮಾಡಲು ಸಾಧ್ಯವಿಲ್ಲ ಎಂದು ನೀವು ಒಪ್ಪಿಕೊಳ್ಳಬೇಕಾಗುತ್ತದೆ.

**ಭಾವವಿಲಾಸಿನೀ–** ಏಕಭಾವೇ ಏಕಸ್ಯ ಧೂಮಸ್ಯ ಸದ್ಭಾವೇ ಭಾವಾಂತರಾನುಮಾ ವಹ್ನ್ಯನುಮಾಸ್ವಾಭಿಮತಾ ಸ್ವಸ್ಯ ಮಾಯಾವಾದಿನೋಽಭಿಮತಾ । ದೃಷ್ಟಬಲೇನ ಹಿ ಧೂಮೇ ಸತಿ ವಹ್ನ್ಯನುಮಾನಂ ಪರಸ್ಯಾಪ್ಯಭಿಮತಮ್ । ತದಪಿ ನ ಸ್ಯಾತ್ । ರಾಸಭಾದೌ ಸತಿ ವಹ್ನೇರ್ದೃಷ್ಟ್ಯಭಾವೇನ ದೃಷ್ಟಬಲಾಭಾವಾದಿತಿ ತ್ವದ್ವದೇವ ಪರೇಣಾಪಿ ವಕ್ತುಂ ಶಕ್ಯತ್ವಾತ್ । ಅತಃ ಸ್ವವ್ಯಾಘಾತಕತ್ವಾತ್ ಜಾತ್ಯುತ್ತರಮಿತಿ ಭಾವಃ ॥ ೨೭೫ ॥

ಅಥ ವ್ಯಾಪ್ಯಸ್ಯ ಸದ್ಭಾವೇ ವ್ಯಾಪಕಾಂತರಸಂಗತೇಃ ।
ದೃಷ್ಟಿರ್ದೃಷ್ಟಬಲಂ ನೈವ ಯಸ್ಯ ಕಸ್ಯಾಪಿ ದರ್ಶನಂ ।
ಇತಿ ತತ್ರ ಸಮಾಧಾನೇ ಸಮಾಧಾನಂ ಸಮಂ ಮಮ ॥ ೨೭೬ ॥

**ಅರ್ಥ–** ಅಥ = ಈ ರೀತಿಯ ಆಪತ್ತಿಯು ಬಂದಾಗ, ವ್ಯಾಪ್ಯಸ್ಯ = ವ್ಯಾಪ್ಯವಾದ ವಸ್ತುವಿನ, (ಒಂದು ವಸ್ತುವಿಲ್ಲದೇ ಇನ್ನೊಂದು ವಸ್ತುವು ಇರಲಾರದು ಎಂಬ ಸಂದರ್ಭದಲ್ಲಿ ಇನ್ನೊಂದು ವಸ್ತು ವ್ಯಾಪ್ಯ. ಉದಾ ಬೆಂಕಿ ಮತ್ತು ಹೊಗೆ ಇವುಗಳ ಪೈಕಿ ಹೊಗೆಯು ವ್ಯಾಪ್ಯವಸ್ತು) ಸದ್ಭಾವೇ = ಅಸ್ತಿತ್ವ ಇದ್ದಾಗ, ವ್ಯಾಪಕಾಂತರ ಸಂಗತೇಃ = ವ್ಯಾಪಕವಾದ ವಸ್ತುವಿನ ಸಂಬಂಧವು ಇರುತ್ತದೆ ಎಂಬ, ದೃಷ್ಟಿಃ = ಜ್ಞಾನವು, ದೃಷ್ಟಬಲಂ = ಕಂಡಿದೆ (ದೃಷ್ಟವಾಗಿದೆ) ಎಂಬ ಬಲವೇ ಹೊರತು, ಯಸ್ಯ ಕಸ್ಯಾಪಿ = ಯಾವುದೋ ವಸ್ತುವಿನ, ದರ್ಶನಂ = ಜ್ಞಾನವು, ನ ಏವ = ಅಲ್ಲವೇ ಅಲ್ಲ, ಇತಿ = ಹೀಗೆ, ತತ್ರ = ಈ ಹಿಂದಿನ ಆಪತ್ತಿಯಲ್ಲಿ, ಸಮಾಧಾನೇ = ಸಮಾಧಾನವನ್ನು ನೀವು ಹೇಳುವಿರಾದರೆ, ಮಮ = ನನಗೂ ಕೂಡ, ಸಮಾಧಾನಂ = ಸಮಾಧಾನವು, ಸಮಂ = ಸಮಾನವಾಗಿದೆ.

**ಅನುವಾದ -** ಎಲ್ಲಿ ಎಲ್ಲಿ ಧೂಮವು (ಹೊಗೆ) ಇದೆಯೋ ಅಲ್ಲಿ ಅಲ್ಲಿ ಬೆಂಕಿಯು ಇದ್ದೇ ಇರುವುದಾಗಿ ಕಂಡಿದೆ. ಎಲ್ಲಿ ಬೆಂಕಿ ಇಲ್ಲವೋ ಅಲ್ಲಿ ಧೂಮವಿರಲು ಸಾಧ್ಯವೇ ಇಲ್ಲ. ಹಾಗಾಗಿ ಧೂಮವು ವ್ಯಾಪ್ಯ ವಸ್ತು. ಬೆಂಕಿಯು ವ್ಯಾಪಕ. ಈ ರೀತಿಯ ವ್ಯಾಪ್ಯವ್ಯಾಪಕಭಾವವನ್ನು ಕಂಡುಕೊಂಡದ್ದನ್ನೇ ದೃಷ್ಟಬಲ ಎಂದು ನಾವು ಕರೆಯಬೇಕೇ ವಿನಹ ಸಂಬಂಧವಿಲ್ಲದ ಯಾವ್ಯಾವುದೋ ವಸ್ತುವನ್ನು ಕಂಡಮಾತ್ರಕ್ಕೆ ಅಲ್ಲಿ ದೃಷ್ಟಬಲವನ್ನು ಹೇಳಲಾಗದು. ಕತ್ತೆಯಿದ್ದಲ್ಲಿ ಬೆಂಕಿ ಇರಬೇಕೆಂಬ ನಿಯಮವೇ ಇಲ್ಲ. ಅಥವಾ ಕತ್ತೆಯಿದ್ದಲ್ಲಿ ಬೆಂಕಿ ಇರಬಾರದೆಂಬ ನಿಯಮವೂ ಇಲ್ಲ. ಹೀಗೆ

ಸಂಬಂಧವೇ ಇಲ್ಲದಿರುವುದರಿಂದ ಕತ್ತೆಯಿರುವುದರಿಂದ ಬೆಂಕಿಯಿಲ್ಲವೆಂದು ಹೇಗೆ ಹೇಳಲಾದೀತು? ಎಂದು ನೀವು ಸಮಾಧಾನವನ್ನು ಹೇಳಬೇಕು. ಇದೇ ರೀತಿಯ ಸಮಾಧಾನ ಸತ್ಯಬಂಧನಾಶಕ್ಕೂ, ನೀಲಜ್ಞಾನದಿಂದ ನೈಲ್ಯಾದಿಗಳು ನಾಶವಾಗದೇ ಇರುವುದಕ್ಕೂ ನಮ್ಮ ಪಕ್ಷದಲ್ಲೂ ಇದೆ. ಇದನ್ನೇ ಮುಂದೆ ಸ್ಪಷ್ಟಪಡಿಸುತ್ತಾರೆ.

**ಭಾವವಿಲಾಸಿನೀ– ಶಂಕತೇ ॥ ಅಥೇತಿ ॥** ತತ್ರ ಅನುಮಾನೇ। **ಉತ್ತರಮಾಹ – ಸಮಾಧಾನ- ಮಿತಿ** ॥ ೨೭೬ ॥

ಭೂಯೋಭೂಯಃ ಸಾಹಚರ್ಯಾದ್ ಯದ್ಧಿ ಯಸ್ಯ ವಿನಾಶಕಂ ।
ದೃಷ್ಟಂ ತಾದೃಕ್ ಪದಾರ್ಥೋ ಯಃ ಸ ಸತ್ಯಸ್ಯಾಪಿ ನಾಶಕಃ ।
ಇತಿ ಸರ್ವೈಶ್ಚ ವಕ್ತವ್ಯಂ ಶೈತ್ಯೇ ಸತ್ಯನಲಾರ್ಥಿಭಿಃ ॥ ೨೭೭ ॥

**ಅರ್ಥ–** ಯತ್ = ಯಾವ ವಸ್ತುವು, ಭೂಯೋ ಭೂಯಃ = ಮತ್ತೆ ಮತ್ತೆ, ಸಾಹಚರ್ಯಾತ್ = ಜೊತೆಯಾಗಿದ್ದು, ಯಸ್ಯ = ಯಾವ ವಸ್ತುವಿಗೆ, ವಿನಾಶಕಂ = ನಾಶಗೊಳಿಸುವಂತಹುದಾಗಿ, ದೃಷ್ಟಂ ಹಿ = ಕಾಣಲ್ಪಟ್ಟು ಪ್ರಸಿದ್ಧವೋ, ಯಃ = ಯಾವುದು, ತಾದೃಕ್‌ಪದಾರ್ಥಃ = ಅಂತಹ ವಿನಾಶಕವಸ್ತುವೋ, ಸಃ = ಅದು, ಸತ್ಯಸ್ಯ ಅಪಿ = ಸತ್ಯವಾದ ವಸ್ತುವಿಗೂ, ನಾಶಕಃ = ನಾಶಕವಾಗುತ್ತದೆ. ಇತಿ = ಹೀಗೆ, ಶೈತ್ಯೇ ಸತಿ = ಛಳಿ ಇದ್ದಾಗ, ಅನಲಾರ್ಥಿಭಿಃ = ಬೆಂಕಿಯನ್ನು ಹುಡುಕುವ, ಸರ್ವೈಃ ಚ = ಎಲ್ಲರಿಂದಲೂ ಕೂಡ, ವಕ್ತವ್ಯಂ = ಹೇಳೋಣವಾಗುತ್ತದೆ.

**ಅನುವಾದ** - ಒಂದು ವಸ್ತುವು ಇನ್ನೊಂದು ವಸ್ತುವನ್ನು ನಾಶಗೊಳಿಸುತ್ತದೆ ಎಂದು ಅನೇಕಕಡೆಗಳಲ್ಲಿ ಕಂಡಿದ್ದರೆ ಅಂತಹ ವಸ್ತುವು ಇನ್ನೊಂದು ವಸ್ತು ಸತ್ಯವಾಗಿದ್ದರೂ ಅದನ್ನು ನಾಶಗೊಳಿಸುತ್ತದೆ ಎಂದು ಒಪ್ಪಬೇಕು. ಅನೇಕ ಕಡೆ ಬೆಂಕಿಯು ಛಳಿಯನ್ನು ಹೋಗಲಾಡಿಸುತ್ತದೆ ಎಂದು ಅನುಭವಸಿದ್ಧವಾಗಿದ್ದಾಗ ತುಂಬಾ ಛಳಿ ಇರುವಾಗ ವ್ಯಕ್ತಿಯು ಬೆಂಕಿಯನ್ನು ಹುಡುಕಿಕೊಂಡು ಹೋಗುತ್ತಾನೆ ತಾನೆ. ಸತ್ಯವಾದ ಛಳಿಯನ್ನು ಬೆಂಕಿಯು ಹೋಗಲಾಡಿಸುವಂತೆ ನಾಶಕವಾದ ವಸ್ತುವು ಸತ್ಯವಾದ ವಸ್ತುವನ್ನೂ ನಾಶಗೊಳಿಸಬಲ್ಲದು ಎಂದು ಎಲ್ಲರೂ ಅನಿವಾರ್ಯವಾಗಿ ಒಪ್ಪಿಕೊಳ್ಳಬೇಕು.

**ಭಾವವಿಲಾಸಿನೀ–** ತಾದೃಕ್ ಪದಾರ್ಥಃ ನಾಶಕತಯಾ ಭೂಯೋ ಭೂಯೋ ದೃಷ್ಟಃ ಪದಾರ್ಥಃ ॥ ೨೭೭ ॥

ಜ್ಞಾನಂ ಚೇದೃಗ್ ದೃಶ್ಯತೇ ಚೇತ್ತಚ್ಚ ಸತ್ಯಂ ವಿನಾಶಯೇತ್ ।
ಯತಃ ಸ್ವಸುಹೃದಾಂ ದೃಷ್ಟ್ವಾ ಮನೋದುಃಖಂ ನಿವರ್ತತೇ ।
ಮಹಚ್ಚರಣದೃಷ್ಟ್ಯಾ ಚ ಪಾಪಂ ಸರ್ವಂ ನಿವರ್ತತೇ ॥ ೨೭೮ ॥

**ಅರ್ಥ–** ಈದೃಕ್ = ಈ ರೀತಿಯಾಗಿ, ಜ್ಞಾನಂ = ಜ್ಞಾನವು, ದೃಶ್ಯತೇ ಚೇತ್ = ಕಾಣುತ್ತದೆಯಾದರೆ, ತತ್ ಚ = ಆ ಜ್ಞಾನವೂ ಕೂಡ, ಸತ್ಯಂ = ಸತ್ಯವಾದ ಬಂಧವನ್ನು, ವಿನಾಶಯೇತ್ = ನಾಶಗೊಳಿಸುತ್ತದೆ. ಯತಃ = ಏಕೆಂದರೆ, ಮನೋದುಃಖಂ = ಸತ್ಯವಾದ ಮನೋದುಃಖವು, ಸ್ವಸುಹೃದಾಂ = ತನ್ನ ಮಿತ್ರರ, ದೃಷ್ಟ್ಯಾ = ನೋಡುವಿಕೆಯಿಂದ, ನಿವರ್ತತೇ = ನಿವಾರಣೆಯಾಗುತ್ತದೆ. ಚ = ಅಷ್ಟೇ ಅಲ್ಲದೇ, ಸರ್ವಂ = ಎಲ್ಲಾ ರೀತಿಯ ಪಾಪಂ = ಪಾಪವು (ಅನಿಷ್ಟವು) ಮಹಚ್ಚರಣದೃಷ್ಟ್ಯಾ = ಮಹಾತ್ಮರ ಪಾದದರ್ಶನದಿಂದ, ನಿವರ್ತತೇ = ನಾಶವಾಗುತ್ತದೆ.

**ಅನುವಾದ** - ಬೆಂಕಿಯು ಸತ್ಯವಾದ ಚಳಿಯನ್ನು ನಾಶಗೊಳಿಸುವ ಸಾಮರ್ಥ್ಯವುಳ್ಳದ್ದು ಹೇಗೋ ಅದೇ ರೀತಿ ಜ್ಞಾನವು ಬಂಧವನ್ನು ನಾಶಗೊಳಿಸುವುದು ಎಂದು ಪ್ರಮಿತವಾಗಿದ್ದರೆ ಸತ್ಯವಾಗಿದ್ದರೂ ಬಂಧವನ್ನು ನಾಶಗೊಳಿಸಬಲ್ಲುದು. ಹೇಗೆಂದರೆ ಮನೋದುಃಖವು ಸತ್ಯವಾಗಿದ್ದರೂ ಸ್ನೇಹಿತರ ದರ್ಶನದಿಂದ ಅದು ನಿವಾರಣೆಯಾಗುತ್ತದೆ ತಾನೆ? ಹಾಗೆಯೇ ಪಾಪವು ಸತ್ಯವಾಗಿದ್ದರೂ ಮಹಾತ್ಮರ ಪಾದದರ್ಶನದಿಂದಲೇ ಅದು ನಿವಾರಣೆಯಾಗುವುದು ತಾನೆ? ಅಂತಯೇ ಸತ್ಯವಾಗಿದ್ದರೂ ಬಂಧವು ಜ್ಞಾನದಿಂದ ನಾಶವಾಗಬಹುದು.

**ಭಾವವಿಲಾಸಿನೀ**–ನನ್ವರ್ಥೇ ಅಸ್ತ್ವೇವಂ ದೃಷ್ಟಫಲಮ್ । ಜ್ಞಾನೇ ನಾಸ್ತೀತ್ಯತ ಆಹ – **ಜ್ಞಾನಂ ಚೇತಿ** ॥ ಈದೃಕ್ ಸತ್ಯಸ್ಯೈವ ನಾಶಕತಯಾ ಭೂಯೋ ಭೂಯೋ ದೃಷ್ಟಮ್ । ತತ್ ಜ್ಞಾನಮ್ ॥ ೨೭೮ ॥

ಯಥೈವ ನೃಪತೇರ್ದೃಷ್ಟ್ಯಾ ಭೂಯೋಭೂಯೋ ನಿವೃತ್ತಿಮಾನ್ ।
ಬಂಧೋ ದೃಷ್ಟೋ ಭಟಾದ್ಯೇಷು ತಥಾ ಭಗವದೀಕ್ಷಣಂ ।
ಬಂಧಸ್ಯ ಶಿಕ್ಷಕಂ ದೃಷ್ಟಂ ಭೂಯೋಭೂಯಃ ಶುಕಾದಿಷು ॥ ೨೭೯ ॥

**ಅರ್ಥ**–ಯಥಾ = ಹೇಗೆ, ಭಟಾದ್ಯೇಷು = ಸೈನಿಕರೇ ಮೊದಲಾದ ವ್ಯಕ್ತಿಗಳಲ್ಲಿ, ಬಂಧಃ = ಬಂಧನವು, ನೃಪತೇಃ =ರಾಜನ, ದೃಷ್ಟ್ಯಾ = ಪ್ರಸನ್ನದೃಷ್ಟಿಯಿಂದ, ನಿವೃತ್ತಿಮಾನ್ = ನಾಶವುಳ್ಳದ್ದಾಗಿ, ಭೂಯೋ ಭೂಯಃ = ಮತ್ತೆ ಮತ್ತೆ, ದೃಷ್ಟಃ ಏವ = ನಿಶ್ಚಿತವಾಗಿ ಕಂಡಿದೆಯೋ, ತಥಾ = ಹಾಗೆಯೇ, ಶುಕಾದಿಷು = ಶುಕಾಚಾರ್ಯರೇ ಮೊದಲಾದವರಲ್ಲಿ ಭಗವದೀಕ್ಷಣಂ = ಭಗವಂತನ ಪ್ರಸನ್ನದೃಷ್ಟಿಯು, ಬಂಧಸ್ಯ = ಬಂಧಕ್ಕೆ, ಶಿಕ್ಷಕಂ = ನಾಶಕವಾಗಿ, ಭೂಯೋ ಭೂಯಃ = ಮತ್ತೆ ಮತ್ತೆ, ದೃಷ್ಟಂ = ಕಂಡಿದೆ.

**ಅನುವಾದ** - ಸತ್ಯವಾದ ಬಂಧವೂ ನಾಶವಾಗುತ್ತದೆ ಎಂಬುದಕ್ಕೆ ಸಾಮಾನ್ಯವಾದ ಎರಡು ದೃಷ್ಟಾಂತಗಳನ್ನು ಹಿಂದೆ ಹೇಳಿದ್ದು, ಈಗ ಅಂತರಂಗ ದೃಷ್ಟಾಂತವನ್ನು ನೀಡುತ್ತಿದ್ದಾರೆ. ತಪ್ಪುಮಾಡಿದವನನ್ನು ಸೈನಿಕರು ಬಂಧನಕ್ಕೊಳಪಡಿಸಿದರೂ

ಬಂಧಿತವ್ಯಕ್ತಿಯು ರಾಜನ ಮೊರೆಹೊಕ್ಕರೆ ರಾಜನ ದೃಷ್ಟಿಯಿಂದ ಸೈನಿಕರ ಬಂಧನದಿಂದ ವ್ಯಕ್ತಿಗೆ ಬಿಡುಗಡೆ ಸಿಗುತ್ತದೆ ತಾನೆ? ಈ ವಿಷಯವು ಅನೇಕಬಾರಿ ಲೋಕದಲ್ಲಿ ನೋಡಸಿಗುವುಂತಹುದೇ ಆಗಿದೆ. ಹಾಗಯೇ ಎಂತಹ ಕರ್ಮಬಂಧಕ್ಕೊಳಗಾದ ವ್ಯಕ್ತಿಯಾಗಿದ್ದರೂ, ಭಗವಂತನ ಪ್ರಸನ್ನದೃಷ್ಟಿ ಅವನ ಮೇಲೆ ಬಿದ್ದರೆ, ಎಂದರೆ ಭಗವಂತನ ಅಪರೋಕ್ಷದರ್ಶನವಾದರೆ ಆ ವ್ಯಕ್ತಿಯ ಬಂಧಗಳೆಲ್ಲವೂ ನಾಶವಾಗುತ್ತವೆ ಎಂಬುದು ಶುಕಾದಿಮಹರ್ಷಿಗಳ ವಿಷಯದಲ್ಲಿ ಅನೇಕ ಕಡೆ ಕಂಡಿದೆ. ಹೀಗಾಗಿ ಭಗವಂತನ ಜ್ಞಾನದಿಂದ ಬಂಧವು ಸತ್ಯವಾಗಿದ್ದರೂ ನಾಶವಾಗಬಲ್ಲುದು.

ಅತೋ ವ್ಯಾಪ್ತಿಮತೋ ಬ್ರಹ್ಮಜ್ಞಾನಾತ್ ಸತ್ಯಭವಚ್ಯುತೌ ।
ಸಾಧಿತಾಯಾಂ ವ್ಯಾಪ್ತಿಶೂನ್ಯನೀಲನೀಲಧಿಯೋರಪಿ ॥ ೨೮೦ ॥

ನಾಶ್ಯನಾಶಕತಾಚೋದ್ಯಂ ಕಥಂ ಹೃದ್ಯಂ ಭವೇತ್ ಸತಾಂ ।
ತಸ್ಮಾನ್ಮಿಥ್ಯಾತ್ವಕಥನಂ ನ ಕಥಂಚನ ಸಂಗತಂ ॥ ೨೮೧ ॥

**ಅರ್ಥ**– ಅತಃ = ಆದ್ದರಿಂದ, ವ್ಯಾಪ್ತಿಮತಃ = ವ್ಯಾಪ್ತಿಯುಳ್ಳ, ಬ್ರಹ್ಮಜ್ಞಾನಾತ್ = ಬ್ರಹ್ಮಜ್ಞಾನದಿಂದ, ಸತ್ಯಭವಚ್ಯುತೌ = ಸತ್ಯವಾದ ಸಂಸಾರಬಂಧದ ನಾಶವು, ಸಾಧಿತಾಯಾಂ = ಸಾಧಿತವಾಗುತ್ತಿರಲು, ವ್ಯಾಪ್ತಿಶೂನ್ಯನೀಲನೀಲಧಿಯೋಃ ಅಪಿ = ವ್ಯಾಪ್ತಿಯೇ ಇಲ್ಲದ ನೀಲವರ್ಣ ಮತ್ತು ನೀಲಜ್ಞಾನಗಳಿಗೂ, ನಾಶ್ಯನಾಶಕತಾಚೋದ್ಯಂ = ನಾಶ್ಯ ಮತ್ತು ನಾಶಕವಾಗಲಿ ಎಂಬ ಹೇಳಿಕೆಯು, ಕಥಂ = ಹೇಗೆ ತಾನೆ, ಸತಾಂ = ಸಜ್ಜನರಿಗೆ, ಹೃದ್ಯಂ =ಮೆಚ್ಚಿಗೆಯು, ಭವೇತ್ = ಆದೀತು? ತಸ್ಮಾತ್ = ಆದ್ದರಿಂದ, ಕಥಂಚನ = ಯಾವುದೇ ರೀತಿಯಿಂದ, ಮಿಥ್ಯಾತ್ವಕಥನಂ = ಬಂಧವು ಮಿಥ್ಯಾ ಎಂಬ ಹೇಳಿಕೆಯು, ನ ಸಂಗತಂ = ಸರಿಹೊಂದಲಾರದು.

**ಅನುವಾದ** - ಹಿಂದೆ ಹೇಳಿದಂತೆ ಶುಕಾದಿಮಹರ್ಷಿಗಳಲ್ಲಿ ಬ್ರಹ್ಮಜ್ಞಾನವು ಸತ್ಯವಾದ ಬಂಧವನ್ನೂ ನಾಶಗೊಳಿಸುತ್ತದೆ ಎಂಬ ವ್ಯಾಪ್ತಿಯು ಕಂಡಿರುವುದರಿಂದ, ಅಂತಹ ವ್ಯಾಪ್ತಿಯುಳ್ಳ ಬ್ರಹ್ಮಜ್ಞಾನದಿಂದ ಸತ್ಯವಾದ ಸಂಸಾರಬಂಧವು ನಾಶವಾಗುತ್ತದೆ ಎಂದು ಸಾಧಿಸಿ ತೋರಿಸಿದ್ದೇವೆ. ಹೀಗಿರುವಾಗ ವ್ಯಾಪ್ತಿಯೇ ಇಲ್ಲದ ನೀಲಜ್ಞಾನದಿಂದ ನೀಲವರ್ಣವು ನಾಶವಾಗಲಿ ಎಂದು ನೀವು ಹೇಳಿದರೆ ಅದು ಹೇಗೆ ತಾನೆ ಸರಿಯಾದೀತು? ಏಕೆಂದರೆ ನೀಲಜ್ಞಾನದಿಂದ ನೀಲವರ್ಣವು ನಾಶವಾಗುತ್ತದೆ ಎಂದು ಎಲ್ಲೂ ಕಂಡಿಲ್ಲ.

(ನೀಲಜ್ಞಾನದಿಂದ ನೀಲವರ್ಣವು ನಾಶವಾಗುವುದು ಎಲ್ಲೂ ಕಂಡಿಲ್ಲದಿದ್ದರೂ, ನೀಲವರ್ಣವು ನಾಶವಾಗದು ಎಂಬ ಕಾರಣದಿಂದ ನಾಶವಾಗುವುದು ಎಲ್ಲಿ

ಕಂಡಿದೆಯೋ ಅಲ್ಲೂ ನಾಶವಾಗದೆ ಇರಲಿ ಎಂಬ ಶಂಕೆಯನ್ನು ವ್ಯಕ್ತಪಡಿಸುವ ಮಾಯಾವಾದಿಯು, ಅಮೇಧ್ಯವು ತಿನ್ನಲು ಯೋಗ್ಯ ಎಂದು ಎಲ್ಲೂ ಕಂಡಿಲ್ಲದೆ ಇರುವುದರಿಂದ ತಿನ್ನಲು ಯೋಗ್ಯವೆಂದು ಕಂಡ ಅನ್ನವನ್ನೂ ಬಿಡಬೇಕಾದ ಪರಿಸ್ಥಿತಿಯನ್ನು ತಂದುಕೊಂಡು ಹಸಿವಿನಿಂದ ಸಾಯಬೇಕಾದ ಸಂದರ್ಭ ಒದಗಿಬಂದೀತು. ಹೀಗೆ ಮಾತಿನಿಂದ ಮಾತ್ರ ಸ್ವವ್ಯಾಹತಿದೋಷವಲ್ಲ, ತನ್ನ ದೇಹಕ್ಕೂ ವ್ಯಾಹತಿಯನ್ನು ತಂದುಕೊಳ್ಳಬೇಕಾದೀತು - ಸುರೋತ್ತಮತೀರ್ಥರು.)

ಆದ್ದರಿಂದ ಅವೆರಡರಲ್ಲಿ ನಾಶ್ಯ (ನಾಶವಾಗುವಿಕೆ) ನಾಶಕ (ನಾಶಮಾಡುವಿಕೆ) ಭಾವವೇ ಇಲ್ಲ. ಆದ್ದರಿಂದ ಈ ಹೇಳಿಕೆಯು ಸಜ್ಜನರು ಮೆಚ್ಚುವಂತಹ ಹೇಳಿಕೆಯೇ ಅಲ್ಲ. ಹೀಗೆ ಯಾವುದೇ ರೀತಿಯಿಂದ ನೋಡಿದರೂ ಬಂಧವು ಮಿಥ್ಯಾ ಎಂಬ ನಿನ್ನ ಹೇಳಿಕೆಯು ಹೊಂದುವುದೇ ಇಲ್ಲ.

**ಭಾವವಿಲಾಸಿನೀ–** ಸಾಮಾನ್ಯತೋ ದೃಷ್ಟಾಂತದ್ವಯಮುಕ್ತ್ವಾಽಂತರಂಗಮಪಿ ದೃಷ್ಟಾಂತಮಾಹ – **ಯಥೈವೇತಿ** ॥ ಸುಹೃದ್ದರ್ಶನಾತ್ ಗುರುದರ್ಶನಾತ್ ರಾಜದರ್ಶನಾಚ್ಚ ನಾಶ್ಯತಯಾ ವ್ಯಾಪ್ಯಸ್ಯ ನಾಶದೃಷ್ಟೇರ್ಭಗವದ್ದರ್ಶನಾದಪ್ಯತೀತಾನಂತಭಕ್ತೇಷು ಭೂಯೋ ಭೂಯೋ ಭಗವದ್ದರ್ಶನನಾಶ್ಯತಯಾ ವ್ಯಾಪ್ತಬಂಧಸ್ಯ ಭಕ್ತಾಂತರೇಽಪಿ ಸತ್ಯಸ್ಯೈವ ನಿವೃತ್ತಿ-ರ್ದೃಷ್ಟಬಲಾದೇವೋಚ್ಯತ ಇತಿ ಮಯಾಪಿ ವಕ್ತುಂ ಶಕ್ಯತ್ವಾತ್ ಸಮಂ ಸಮಾಧಾನಮ್ । ನೀಲಜ್ಞಾನಸ್ಯ ನೀಲನಿವರ್ತಕತಯಾ ಕ್ವಾಪ್ಯದೃಷ್ಟಸ್ಯ ತದನಿವರ್ತಕತ್ವೇ ನಿವರ್ತಕತಯಾ ದೃಷ್ಟಸ್ಯಾಪ್ಯನಿವರ್ತಕತ್ವಂ ಶಂಕಮಾನಃ ಅಮೇಧ್ಯಸ್ಯ ಭೋಜ್ಯತ್ವಾದರ್ಶನಾದ್ದೃಷ್ಟಮಪ್ಯನ್ನಸ್ಯ ಭೋಜ್ಯತ್ವಂ ತ್ಯಜನ್‌ಕ್ಷುಧಿತೋ ಮ್ರಿಯೇತ । ಅತೋ ನ ವಚನತಃ ಸ್ವವ್ಯಾಹತಿಮಾತ್ರಂ ಕಿಂತು ಸ್ವದೇಹವ್ಯಾಹತ್ಯಾಪಿ ಸ್ವವ್ಯಾಹತಿರಿತಿ ಭಾವಃ ॥ ೨೭೯-೨೮೧ ॥

**ವಿವರಣೆ** - ಇಲ್ಲಿ ಹೀಗೆ ಅನುಮಾನ ಪ್ರಯೋಗ ಮಾಡಬೇಕು - ವಿಮತೋ ಬ್ರಹ್ಮಸಾಕ್ಷಾತ್ಕಾರಃ ಬಂಧನಿವರ್ತಕಃ, ಬಂಧನಿವೃತ್ತ್ಯನ್ವಯವ್ಯತಿರೇಕಾನುವಿಧಾಯಿತ್ವಾತ್, ಯೋ ಯನ್ನಿವೃತ್ತ್ಯನ್ವಯವ್ಯತಿರೇಕಾನುವಿಧಾಯೀ ಸ ತನ್ನಿವರ್ತಕಃ, ಯಥಾ ಸುಹೃದ್ದರ್ಶನಾದಿಕಂ ದುಃಖಾದೇಃ, ವಿವಾದ ವಿಷಯವಾದ ಬ್ರಹ್ಮಸಾಕ್ಷಾತ್ಕಾರವು ಬಂಧವನ್ನು ನಿವೃತ್ತಿಗೊಳಿಸುವಂತಹುದು. ಏಕೆಂದರೆ ಬಂಧನಿವೃತ್ತಿ ಎಲ್ಲೆಲ್ಲಾ ಇದೆಯೋ ಅಲ್ಲಿ ಬ್ರಹ್ಮಸಾಕ್ಷಾತ್ಕಾರ ಇದೆ ಎಂಬ ಅನ್ವಯವ್ಯಾಪ್ತಿಯನ್ನೂ,ಬ್ರಹ್ಮಸಾಕ್ಷಾತ್ಕಾರ ಎಲ್ಲಿ ಇಲ್ಲವೋ ಅಲ್ಲಿ ಬಂಧನಿವೃತ್ತಿ ಇಲ್ಲ ಎಂಬ ವ್ಯತಿರೇಕವ್ಯಾಪ್ತಿಯನ್ನೂ ಹೇಳಬರುವುದರಿಂದ, ಯಾವ ವಸ್ತುವು ಇನ್ನೊಂದು ವಸ್ತುವಿನ ನಾಶಕ್ಕೆ ಅನ್ವಯವಾಗಿ ಅಥವಾ ವ್ಯತಿರೇಕವಾಗಿ ವ್ಯಾಪ್ತಿಯನ್ನು ಹೊಂದಿದೆಯೋ, ಅದು ಇನ್ನೊಂದು ವಸ್ತುವನ್ನು ನಾಶಗೊಳಿಸುವುದು. ಇದು ಹೇಗೆಂದರೆ ಮಿತ್ರರ ದರ್ಶನಮೊದಲಾದವುಗಳು ದುಃಖನಿವೃತ್ತಿಯನ್ನು ಮಾಡುವುದು ಅನ್ವಯವಾಗಿಯೂ ವ್ಯತಿರೇಕವಾಗಿಯೂ ಕಂಡಿರುವಂತೆ. ಅಥವಾ

(ಯೋ ಬಂಧನಿವೃತ್ತ್ಯನ್ವಯವ್ಯತಿರೇಕಾನುವಿಧಾಯೀ ಸ ಬಂಧನಿವರ್ತಕಃ, ಯಥಾ ರಾಜಸಾಕ್ಷಾತ್ಕಾರೋ ನಿಗಡಬಂಧಸ್ಯ ಇತಿ ವಿಶಿಷ್ಯೈವ ವಾ)

ಸೈನಿಕರ ಬಂಧನದಿಂದ ಬಿಡುಗಡೆ ಪಡೆಯಲು ರಾಜಸಾಕ್ಷಾತ್ಕಾರವು ಹೇಗೆ ಅನ್ವಯವಾಗಿಯೂ ವ್ಯತಿರೇಕವಾಗಿಯೂ ಕಾರಣವೆಂದು ಕಂಡಿದೆಯೋ, ಹಾಗೆಯೇ ಸಂಸಾರಬಂಧವು ಬ್ರಹ್ಮಸಾಕ್ಷಾತ್ಕಾರದಿಂದ ನಾಶವಾಗುತ್ತದೆ ಎಂದು ವಿಶೇಷರೀತಿಯಿಂದ ಅನ್ವಯ ಹಾಗೂ ವ್ಯತಿರೇಕವ್ಯಾಪ್ತಿಗಳನ್ನು ಮುಂದಿಟ್ಟುಕೊಂಡು ಸಮಾಧಾನವನ್ನು ಹೇಳಲಾಗಿದೆ. ಮುಂದೆ ವ್ಯಾಪ್ತಿಯ ಸುದ್ದಿ ಇಲ್ಲದೆಯೂ ಸಮಾಧಾನವನ್ನು ಹೇಳುವ ಕೌಶಲವನ್ನು ತೋರಿಸುತ್ತಾರೆ.

ಕಿಂಚ ದೃಷ್ಟಬಲಾತ್ ಸ್ವಾರ್ಥಂ ಯಃ ಸಿಷಾಧಯಿಷತ್ಯಸೌ ।
ಜ್ಞಾನಾತ್ ಸತ್ಯಸ್ಯಾಪಿ ನಾಶಂ ಯತ್ರ ಯತ್ರಾಭಿಪಶ್ಯತಿ ॥ ೨೮೨ ॥

ತದೇವ ದೃಷ್ಟಂ ದೃಷ್ಟಂ ಚ ಸ್ವಬಲಂ ವಷ್ಟ್ಯಭೀಷ್ಟದಂ ।
ಪೂರ್ವೋಕ್ತವರ್ತ್ಮನಾ ತಚ್ಚ ಸ್ಥಾನಸ್ಥಾನೇಷು ವರ್ತತೇ ॥ ೨೮೩ ॥

**ಅರ್ಥ**–ಕಿಂಚ = ಅಷ್ಟೇ ಅಲ್ಲದೆ, ದೃಷ್ಟಬಲಾತ್ = ಕೇವಲ ಕಂಡಿದೆಯೆಂಬ ಕಾರಣದಿಂದ, ಸ್ವಾರ್ಥಂ = ತನಿಗಿಷ್ಟವಾದ ಅಭಿಪ್ರಾಯವನ್ನು, ಯಃ = ಯಾವ ಈ ಮಾಯಾವಾದಿಯು, ಸಿಷಾಧಯಿಷತಿ = ಸಾಧಿಸಬಯಸುವನೋ, ಅಸೌ = ಇವನು, ಯತ್ರ ಯತ್ರ = ಎಲ್ಲೆಲ್ಲಾ, ಜ್ಞಾನಾತ್ = ಜ್ಞಾನದಿಂದ, ಸತ್ಯಸ್ಯ ಅಪಿ = ಸತ್ಯವಾದ ವಸ್ತುವಿಗೂ ಕೂಡ, ನಾಶಂ = ನಾಶವನ್ನು, ಅಭಿಪಶ್ಯತಿ = ನೋಡುವನೋ, ತತ್ ಏವ = ಅದೇ ನಿವರ್ತಕವಾದ ಜ್ಞಾನವು, ದೃಷ್ಟಂ ದೃಷ್ಟಂ ಚ = ಮತ್ತೆ ಮತ್ತೆ ನೋಡಲ್ಪಟ್ಟಾಗ, ಅಭೀಷ್ಟದಂ = ನಮ್ಮ ಇಷ್ಟವನ್ನು ಕೊಡುವ, (ಸತ್ಯಬಂಧವನ್ನು ನಾಶಮಾಡುವ) ಸ್ವಬಲಂ = ತನ್ನ ಬಲವನ್ನು, ವಷ್ಟಿ = ಹೇಳುತ್ತದೆ. ತತ್ ಚ = ಆ ಜ್ಞಾನದಲ್ಲಿರುವ ಸತ್ಯಬಂಧವನ್ನು ನಾಶಗೊಳಿಸುವ ಸಾಮರ್ಥ್ಯವು, ಪೂರ್ವೋಕ್ತವರ್ತ್ಮನಾ = ಹಿಂದೆ ಹೇಳಿದ ಕ್ರಮದಂತೆ, ಸ್ಥಾನಸ್ಥಾನೇಷು = ಅನೇಕ ಸ್ಥಳಗಳಲ್ಲಿ, ವರ್ತತೇ = ಇದೆ.

**ಅನುವಾದ** - ನೀಲಜ್ಞಾನದಿಂದ ಸತ್ಯವಾದ ನೀಲವರ್ಣವು ನಾಶವಾಗದಿರುವುದು ಕಂಡಿದೆ ಎಂದು ಬ್ರಹ್ಮಜ್ಞಾನದಿಂದಲೂ ಸತ್ಯಬಂಧವು ನಾಶವಾಗದು ಎಂದು ವ್ಯಾಪ್ತಿಯ ಬಲ ಇಲ್ಲದೇ ಕೇವಲ ದೃಷ್ಟವಾಗಿದೆ ಎಂಬುದರ ಬಲದಿಂದ ತನ್ನ ಪಕ್ಷವನ್ನು ಸಮರ್ಥಿಸಿಕೊಳ್ಳಲು ಮಾಯಾವಾದಿಯು ಬಯಸುತ್ತಿದ್ದಾನೆ. ಅವನೂ ಕೂಡ ಸ್ನೇಹಿತರ ದರ್ಶನದಿಂದ ದುಃಖನಾಶವನ್ನೂ, ಮಹಾತ್ಮರ ಪಾದದರ್ಶನದಿಂದ ಪಾಪನಾಶವನ್ನೂ, ರಾಜನ ದರ್ಶನದಿಂದ ಸೈನಿಕರಿಂದ ಉಂಟಾದ ಕೈಕೋಳದ ಬಂಧನವನ್ನೂ ನಾಶಪಡಿಸುವ ಬಗೆಯನ್ನು ಕಂಡೇ

ಕಾಣುತ್ತಾನೆ. ಹೀಗೆ ಕಂಡಾಗ ಜ್ಞಾನದಿಂದ ಸತ್ಯವೂ ನಾಶವಾಗಬಲ್ಲದು ಎಂಬುದನ್ನು ಅವನಿಗೆ ಜ್ಞಾನವೇ ತಿಳಿಸಿಕೊಡುತ್ತದೆ. ಹೀಗೆ ಅನೇಕ ಕಡೆಗಳಲ್ಲಿ ಸತ್ಯವೂ ಜ್ಞಾನದಿಂದ ನಾಶವಾಗುವ ವಿಚಾರವೂ ಇರುವುದರಿಂದ ವ್ಯಾಪ್ತಿಯನ್ನು ಹೇಳಿ ನಾವು ಅವನನ್ನು ಒಪ್ಪಿಸುವ ಕ್ಲೇಶವಿಲ್ಲದೇ ಅವನಿಂದಲೇ ನಮ್ಮ ಅಭೀಷ್ಟವು ಸಿದ್ಧಿಯಾಗುವುದು.

**ಭಾವವಿಲಾಸಿನೀ–** ಅತ್ರಾಯಂ ಪ್ರಯೋಗಃ । ವಿಮತೋ ಬ್ರಹ್ಮಸಾಕ್ಷಾತ್ಕಾರಃ ಬಂಧನಿವರ್ತಕಃ । ಬಂಧನಿವೃತ್ತ್ಯನ್ವಯವ್ಯತಿರೇಕಾನುವಿಧಾಯಿತ್ವಾತ್ । ಯೋ ಯನ್ನಿವೃತ್ತ್ಯನ್ವಯ ವ್ಯತಿರೇಕಾನುವಿಧಾಯೀ ಸ ತನ್ನಿವರ್ತಕಃ । ಯಥಾ ಸುಹೃದ್ದರ್ಶನಾದಿಕಂ ದುಃಖಾದೇರಿತಿ ವಾ ಯೋ ಬಂಧನಿವೃತ್ತ್ಯನ್ವಯವ್ಯತಿರೇಕಾನುವಿಧಾಯೀ ಸ ಬಂಧನಿವರ್ತಕಃ ಯಥಾ ರಾಜಸಾಕ್ಷಾತ್ಕಾರೋ ನಿಗಡಬಂಧಸ್ಯೇತಿ ವಿಶಿಷ್ಯೈವ ವಾ ಅನ್ವಯವ್ಯತಿರೇಕಪುರಸ್ಕಾರೇಣ ಪ್ರಾಕ್‌ಸಮಾಧಾನಮುಕ್ತಮ್ । ಇದಾನೀಂ ತದ್ವಾರ್ತಾಭಾವೇಽಪಿ ಸಮಾಧಾನಕೌಶಲಂ ದರ್ಶಯತಿ ॥ **ಕಿಂಚೇತಿ** ॥ ದೃಷ್ಟಂ ದೃಷ್ಟಮಿತಿ ವೀಪ್ಸಾ । ವಷ್ಟಿ ವಕ್ತಿ । ತತ್ ನಿವರ್ತಕಂ ಜ್ಞಾನಮ್॥೨೮೨-೨೮೩ ॥

ಏವಂ ದೃಷ್ಟಬಲಸ್ಯಾಸ್ಯ ಕಾ ನಷ್ಟಿಃ ಕ್ವಾಪ್ಯದೃಷ್ಟಿತಃ ।
ತೇನಾಸಂಗತಸಂಬಂಧಿ ಸರ್ವಮಾಸೀದಸಂಗತಮ್ ॥ ೨೮೪ ॥

**ಅರ್ಥ–** ಏವಂ = ಈ ರೀತಿಯಾಗಿ, ದೃಷ್ಟಬಲಸ್ಯ = ಕೇವಲ ದೃಷ್ಟವಾಗುವುದನ್ನೇ ಬಲ ಎಂದೆನ್ನುವ ಮಾಯಾವಾದಿಗೆ, ಕ್ವಾಪಿ ಅದೃಷ್ಟಿತಃ= ಎಲ್ಲಿಯೋ ಒಂದು ಕಡೆ ಕಾಣದಿದ್ದ ಮಾತ್ರಕ್ಕೆ, ಕಾ ನಷ್ಟಿಃ = ಏನು ತೊಂದರೆ? (ಏನೂ ಇಲ್ಲ.) ತೇನ = ಹೀಗೆ ವ್ಯಾಪ್ತಿ ಅವನಿಗೆ ಬೇಕಾಗಿಲ್ಲವಾದ್ದರಿಂದ, ಅಸಂಗತಸಂಬಂಧಿ = ಸೂತ್ರಕ್ಕೆ ಸಂಬಂಧವಿಲ್ಲದ ಮಿಥ್ಯಾತ್ವಕ್ಕೆ ಹೊಂದಿಕೊಂಡ, ಸರ್ವಂ = ಮಾಯಾವಾದಿಯ ಎಲ್ಲಾ ವಿವರಣೆಯೂ, ಅಸಂಗತಂ = ಅಸಂಗತವಾಗಿ, ಆಸೀತ್ = ಆಗಿದೆ.

**ಅನುವಾದ -** ಈ ಹಿಂದೆ ವಿವರಿಸಿದಂತೆ ನೀಲಜ್ಞಾನವೂ ಸತ್ಯವಾದ ನೀಲವಸ್ತುವನ್ನು ನಾಶಗೊಳಿಸದಿರುವುದು ಅಲ್ಲಲ್ಲಿ ಕಂಡಿದ್ದರೂ ಬ್ರಹ್ಮಜ್ಞಾನವು ಸತ್ಯವಾದ ಸಂಸಾರಬಂಧವನ್ನು ನಾಶಗೊಳಿಸುವುದು ಅಸಂಗತವೇನೂ ಅಲ್ಲ. ಈ ಸಂದರ್ಭದಲ್ಲಿ ಮಾಯಾವಾದಿಯು ಆಕ್ಷೇಪಿಸುವಂತೆ ನೀಲವಸ್ತುವಿನ ಜ್ಞಾನದಿಂದ ನೀಲವರ್ಣಾದಿಗಳು ನಾಶವಾಗುವುದು ಎಲ್ಲೂ ಕಂಡಿರದೇ ಇರುವುದರಿಂದ ಬ್ರಹ್ಮಜ್ಞಾನವೂ ಸತ್ಯವಾದ ಬಂಧಕ್ಕೆ ನಿವರ್ತಕವಾಗುವುದಿಲ್ಲ ಎಂಬ ಆಕ್ಷೇಪದಿಂದ ಏನೂ ತೊಂದರೆಯಾಗದು. ಹೀಗೆ ಸೂತ್ರಗಳಿಗೆ ವಿರುದ್ಧವಾಗಿ ಮಿಥ್ಯಾತ್ವವನ್ನು ಆಶ್ರಯಿಸಿ ತನ್ನ ಪಕ್ಷದಲ್ಲಿ ಸಂಗತಿಯನ್ನು ಹೇಳಹೊರಟ ಮಾಯಾವಾದಿಯ ಎಲ್ಲಾ ಸಂಗತಿಯನ್ನು ಹೇಳಹೊರಟ ಗ್ರಂಥವು ವಿಫಲವಾಗಿ ಅಸಂಗತವಾಗಿ ಕಾಣುತ್ತದೆ.

**ಭಾವವಿಲಾಸಿನೀ**– ದೃಷ್ಟಂ ದೃಷ್ಟಮೇವ ಬಲಂ ಯಸ್ಯ ಸಃ ದೃಷ್ಟಬಲಃ ತಸ್ಯ । ಕ್ವಾಪಿ ನೀಲಜ್ಞಾನಾದೌ । ಅಸಂಗತಸಂಬಂಧಿ ಸೂತ್ರಾಸಂಗತಮಿಥ್ಯಾತ್ವಸಂಬಂಧಿ । ಸರ್ವಂ ಸಂಗತ್ಯುಪಪಾದಕ ಗ್ರಂಥಸಂದರ್ಭಃ॥೨೮೪॥

ಮೊದಲನೇ ವಿಕಲ್ಪಕ್ಕೆ ಉತ್ತರ ನೀಡಿ ಎರಡನೆಯ ವಿಕಲ್ಪಕ್ಕೂ ಉತ್ತರವನ್ನು ಶ್ರೇಷ್ಠ ಇತ್ಯಾದಿ ಶ್ಲೋಕದಿಂದ ನೀಡುತ್ತಿದ್ದಾರೆ. (ವಿಕಲ್ಪ ೨೭೩ನೇ ಶ್ಲೋಕದಲ್ಲಿ ಇದೆ.)

ಶ್ರೇಷ್ಠೇಷ್ಟದೃಷ್ಟ್ಯಾಽನಿಷ್ಟಸ್ಯ ನಷ್ಟೇರ್ದೃಷ್ಟಬಲಂ ಚ ಮೇ ।
ಅಸ್ತಿ ತ್ವದುಕ್ತದುರ್ವ್ಯಾಪ್ತ್ಯುಚ್ಛಿತ್ತ್ಯಾ ಮಾನಬಲಂ ಚ ಮೇ ॥ ೨೮೫ ॥

**ಅರ್ಥ**– ಶ್ರೇಷ್ಠೇಷ್ಟದೃಷ್ಟ್ಯಾ = ಶ್ರೇಷ್ಠನೂ ಇಷ್ಟನೂ ಆದ ರಾಜಾದಿಗಳ ದರ್ಶನದಿಂದ, ಅನಿಷ್ಟಸ್ಯ = ಅನಿಷ್ಟವಾದ ನಿಗಡಬಂಧದ, ನಷ್ಟೇಃ = ನಾಶವಾಗುವುದು ಕಂಡಿರುವುದರಿಂದ, ದೃಷ್ಟಬಲಂ ಚ = ವ್ಯಾಪ್ತಿಯ ಬಲವೂ, ಅಸ್ತಿ = ಇದೆ. ತ್ವದುಕ್ತದುರ್ವ್ಯಾಪ್ತ್ಯುಚ್ಛಿತ್ತ್ಯಾ, ತ್ವತ್ = ನಿನ್ನಿಂದ, ಉಕ್ತ = ಹೇಳಲ್ಪಟ್ಟ, ದುರ್ವ್ಯಾಪ್ತಿ = ದುಷ್ಟವಾದ ವ್ಯಾಪ್ತಿಯ, ಉಚ್ಛಿತ್ತ್ಯಾ = ಖಂಡನೆಯಿಂದ, ಮಾನಬಲಂ ಚ = ಶ್ರುತಿಯೇ ಮೊದಲಾದ ಪ್ರಮಾಣಗಳ ಬಲವೂ, ಮೇ = ನನಗೆ, ಅಸ್ತಿ = ಇದೆ.

**ಅನುವಾದ** - ಜ್ಞಾನವು ಸತ್ಯಬಂಧನಿವರ್ತಕ ಎಂಬಲ್ಲಿ ರಾಜರು ದೃಷ್ಟಬಲದಿಂದಲೂ ಶ್ರುತಿಬಲದಿಂದಲೂ ಸಮರ್ಥನೆ ನೀಡುತ್ತಿದ್ದಾರೆ. ಈ ಹಿಂದೆ ಹೇಳಿದಂತೆ ಭಗವಂತನು ಸರ್ವಶ್ರೇಷ್ಠನೂ, ಸಕಲರಿಗೆ ಇಷ್ಟನೂ ಆಗಿದ್ದು, ಅಂತಹ ಭಗವಂತನ ದೃಷ್ಟಿಯಿಂದ (ಅಪರೋಕ್ಷದರ್ಶನದಿಂದ) ಸಂಸಾರಬಂಧವು ಸತ್ಯವಾಗಿದ್ದರೂ ನಾಶವಾಗಬಲ್ಲುದು. ಇದಕ್ಕೆ ಹಿಂದೆ ಹೇಳಿದಂತೆ ದೃಷ್ಟಬಲವೂ ಇದೆ (ವ್ಯಾಪ್ತಿಬಲವೂ ಇದೆ) ನೀನು ಹೇಳುವ ಜ್ಞಾನವು ಅಜ್ಞಾನಮಾತ್ರನಿವರ್ತಕ ಎಂಬ ವ್ಯಾಪ್ತಿಯ ಖಂಡನೆವಾಗಿರುವುದರಿಂದ ಆ ವ್ಯಾಪ್ತಿಯು ದುರ್ವ್ಯಾಪ್ತಿ ಎಂದು ನಿಶ್ಚಿತವಾಗುತ್ತದೆ. ಈ ದುರ್ವ್ಯಾಪ್ತಿಯಿಂದಲೇ ನೀನು ಶ್ರುತಿಗೆ ಅನ್ಯಾರ್ಥಮಾಡಲು ಹೊರಟಿದ್ದು ತಾನೆ? ಇದು ದುಷ್ಟವ್ಯಾಪ್ತಿ ಎಂದು ನಿಶ್ಚಯವಾದಾಗ ಶ್ರುತಿಗೆ ಅನ್ಯಾರ್ಥಮಾಡುವ ಪ್ರಸಂಗವಿಲ್ಲ ತಾನೆ? ಹೀಗಾಗಿ ಶ್ರುತಿಯು ನೇರವಾಗಿ ಹೇಳುವಂತೆ ದೃಷ್ಟ್ವೈವ ತಂ ಮುಚ್ಯತೇ ನಾಪರೇಣ - ಭಗವಂತನನ್ನು ನೋಡಿಯೇ ಸರ್ವಬಂಧಗಳಿಂದ ಮುಕ್ತನಾಗುತ್ತಾನೆ, ಬೇರೆ ಮಾರ್ಗವೇ ಮುಕ್ತಿ ಪಡೆಯಲು ಇಲ್ಲ ಎಂಬ ಅರ್ಥವೇ ಸಮ್ಮತವಾಗುವುದರಿಂದ ಶ್ರುತಿಬಲವೂ ನಮಗಿದೆ.

**ಭಾವವಿಲಾಸಿನೀ** – ಪೂರ್ವವಿಕಲ್ಪೋತ್ತರಮನುವದನುತ್ತರವಿಕಲ್ಪಸ್ಯಾಪ್ಯುತ್ತರಮಾಹ–ಶ್ರೇಷ್ಠೇತಿ ॥ ವ್ಯಾಪ್ತಿಬಲಾದ್ಧಿ ಶ್ರುತೇರರ್ಥಪ್ರಚ್ಯಾವನೇ ಶ್ರುತಿಬಲಂ ನ ಸ್ಯಾತ್। ವ್ಯಾಪ್ತೇಶ್ಚೋಕ್ತವಿಧಯಾ ಉಚ್ಛೇದೇ ಯಥಾಶ್ರುತಶ್ರುತ್ಯರ್ಥೇ ಬಾಧಕಾಭಾವಾತ್ ಶ್ರುತಿಬಲಂ ಚಾಸ್ತೀತಿ ಭಾವಃ ॥೨೮೫॥

**ತತ್ ತೇ ವಿಕಲ್ಪೋಽಪ್ಯಾಕಲ್ಪಕಲ್ಪಃ ಪಶ್ಯ ಮಮಾಭವತ್ ।**
**ಮನಃಸಂಕಲ್ಪಮಾಕಲ್ಪಮಪ್ಯಲ್ಪೀಕುರುತೇ ತವ ॥ ೨೮೬ ॥**

**ಅರ್ಥ–** ತತ್ = ಆದ್ದರಿಂದ, ತೇ = ನಿನ್ನ, ವಿಕಲ್ಪಃ ಅಪಿ = ಜ್ಞಾನದಿಂದ ಸತ್ಯಬಂಧನಾಶದ ವಿಷಯದಲ್ಲಿ ನೀನು ಮಾಡಿರುವ ಎರಡು ವಿಕಲ್ಪವೂ ಕೂಡ, ಮಮ = ನನಗೆ, ಆಕಲ್ಪಕಲ್ಪಃ = ಆಭರಣದಂತೆ ಅಲಂಕಾರವೇ, ಅಭವತ್ = ಆಯಿತು. ಪಶ್ಯ = ನೋಡು. ತವ = ನಿನ್ನ ಮನಃಸಂಕಲ್ಪಂ = ಬಂಧಮಿಥ್ಯಾತ್ವಕ್ಕೆ ಸಂಗತಿಯನ್ನು ಹೇಳುವ ಮನಃಸಂಕಲ್ಪವನ್ನು, ಆಕಲ್ಪಂ = ಕಲ್ಪಕೊನೆಯಾಗುವ ತನಕದ ಕಾಲವನ್ನು ಕೂಡ, ಅಲ್ಪೀಕುರುತೇ = ಕಡಿಮೆಯಾದದ್ದನ್ನಾಗಿ ಮಾಡುತ್ತದೆ.

**ಅನುವಾದ** - ನಮ್ಮ ಅಭಿಪ್ರಾಯವಾದ ಜ್ಞಾನವು ಸತ್ಯಬಂಧನಿವರ್ತಕ ಎಂಬ ವಿಷಯವನ್ನು ಖಂಡಿಸುವುದಕ್ಕಾಗಿ ನೀನು ದೃಷ್ಟಿ ಬಲದಿಂದ ಸಮರ್ಥಿಸುವಿರೋ ಶ್ರುತ ಬಲದಿಂದ ಸಮರ್ಥಿಸುವಿರೋ ಎಂದು ಎರಡು ವಿಕಲ್ಪ ಮಾಡಿರುವಿ. ಆದರೆ ಆ ಎರಡು ವಿಕಲ್ಪವೂ ನಮಗೆ ಅನುಕೂಲವೇ ಆದುದರಿಂದ ಅದು ನಮಗೆ ಆಭರಣದಂತೆ ಅಲಂಕಾರವೇ ಆಯಿತು. ಹೀಗಾಗಿ ನೀನು ಬಂಧಕ್ಕೆ ಮಿಥ್ಯಾತ್ವವನ್ನು ಹೇಳಲು ಏನೇನು ಸಂಗತಿಗಳನ್ನು ಹೇಳಲು ಏನು ಮನಸ್ಸಿನಲ್ಲಿ ಸಂಕಲ್ಪ ಮಾಡಿರುವೆಯೊ ಅವೆಲ್ಲವನ್ನೂ ಕಲ್ಪವು ಕೊನೆಯಾಗುವವವರೆಗೆ ಹೇಳಿದರೂ ಅದೆಲ್ಲಾ ಕಡಿಮೆಯೇ ಆಗುತ್ತದೆ. ಏಕೆಂದರೆ ಆ ಯಾವ ಸಂಗತಿಗಳೂ ಮಿಥ್ಯಾತ್ವವನ್ನು ಸಾಧಿಸಲಾರವು.

**ಭಾವವಿಲಾಸಿನೀ–** ತತ್ ತಸ್ಮಾತ್ ವಿಕಲ್ಪದ್ವಯಸ್ಯಾಪಿ ಮದನುಕೂಲತ್ವಾತ್ । ಆಕಲ್ಪಕಲ್ಪಃ ಆಭರಣಸಮಾನಃ । ಆಕಲ್ಪಂ ಕಲ್ಪಪರ್ಯಂತಮ್ । ಕಲ್ಪಪರ್ಯಂತಮೇವಂ ವಿಕಲ್ಪೇ ಕೃತೇಽಪಿ ತ್ವದಭೀಷ್ಟಮಿಥ್ಯಾತ್ವಸಂಗತಿರ್ನ ಭವೇದಿತಿ ಭಾವಃ ॥೨೮೬॥

ಈ ಹಿಂದೆ ಹೇಳಿದ ವಿಕಲ್ಪವು ಮಾಯಾವಾದಿಗೆ ಇಷ್ಟಕಾರಕವಾಗದು, ಮಾತ್ರವಲ್ಲ, ತನ್ನ ಪ್ರಮೇಯವನ್ನು ಸಾಧಿಸಲು ದೃಷ್ಟಬಲವಿಲ್ಲದಿರುವುದರಿಂದ ಅನಿಷ್ಟಕಾರಕವೂ ಆಗಿದೆ ಎಂದು ಮುಂದಿನ ಶ್ಲೋಕದಲ್ಲಿ ಹೇಳುತ್ತಿದ್ದಾರೆ-

**ಅಜ್ಞಾನೋಪಾದಾನಕಸ್ಯ ಮಿಥ್ಯಾರ್ಥಸ್ಯ ವಿನಾಶನಂ ।**
**ಜ್ಞಾನೇನ ಜಾಯಮಾನಂ ಯನ್ನ ದೃಷ್ಟಂ ನಾಪಿ ಚ ಶ್ರುತಂ ॥ ೨೮೭ ॥**

**ಅರ್ಥ–** ಯತ್ = ಯಾವ, ಅಜ್ಞಾನೋಪಾದಾನಕಸ್ಯ = ಅಜ್ಞಾನವೇ ಉಪಾದಾನಕಾರಣವುಳ್ಳ, ಮಿಥ್ಯಾರ್ಥಸ್ಯ = ಮಿಥ್ಯೆಯಾದ ವಸ್ತುವಿನ, ವಿನಾಶನಂ = ನಾಶವಿದೆಯೋ ಅದು, ಜ್ಞಾನೇನ = ಜ್ಞಾನದಿಂದ, ಜಾಯಮಾನಂ = ಉಂಟಾಗುವುದು, ನ

ದೃಷ್ಟಂ = ಎಲ್ಲೂ ಕಂಡಿಲ್ಲ, ಅಪಿ ಚ = ಅಷ್ಟೇ ಅಲ್ಲದೆ, ನ ಶ್ರುತಂ = ಆಗಮದಿಂದಲೂ ಸಿದ್ಧವಾಗಿರುವುದಿಲ್ಲ.

**ಅನುವಾದ -** ಈ ಸಂಸಾರಬಂಧವುಂಟಾಗಲು ಅಜ್ಞಾನವೇ ಕಾರಣ, ಹಾಗಾಗಿ ಇದು ಅಜ್ಞಾನೋಪಾದಾನಕವಾಗಿದೆ. ಆದ್ದರಿಂದ ಇದರ ನಾಶವು ಜ್ಞಾನದಿಂದಲೇ ಆಗಬೇಕೆಂದು ನಿನ್ನ (ಮಾಯಾವಾದಿಯ) ಮತ, ಆದರೆ ಅಜ್ಞಾನದಿಂದ ಉಂಟಾದ ಯಾವ ವಸ್ತುವೂ ಜ್ಞಾನದಿಂದ ನಾಶವಾಗುತ್ತದೆ ಎಂದು ತೋರಿಸಲು ಬರುವುದಿಲ್ಲ. ಅದು ಎಲ್ಲೂ ಕಂಡಿಲ್ಲ. ಅಲ್ಲದೇ ಯಾವ ಶ್ರುತಿಯೂ ಇದನ್ನು ಸಮರ್ಥಿಸುವುದಿಲ್ಲ. ಹಾಗಾಗಿ ನೀನು ಒಪ್ಪಿದ ಭಾಷ್ಯಕಾರರ ಅಭಿಮತವೇ ಅದೃಷ್ಟ ಮತ್ತು ಅಶ್ರುತವಾಗಿದೆ. ಆದ್ದರಿಂದ ನೀನು ಮಾಡಿದ ವಿಕಲ್ಪವು ನಿನ್ನ ಗುರುವನ್ನೇ ನಾಶಗೊಳಿಸುತ್ತದೆ.

**ಭಾವವಿಲಾಸಿನೀ–** ನ ಕೇವಲಮಿಷ್ಟಕಾರೀವಿಕಲ್ಪೋಽಯಂ ಮಾಯಿನಃ ಕಿಂತು ಸ್ವಪ್ರಮೇಯಸ್ಯೈವ ದೃಷ್ಟಬಲಾಭಾವೇನಾನಿಷ್ಟಕಾರೀ ಚೇತ್ಯಾಹ – **ಅಜ್ಞಾನೇತಿ** ॥ ಶುಕ್ತಿರಜತಾದೇರ-ಜ್ಞಾನೋಪಾದಾನಕತ್ವಾಭಾವಾತ್ತನ್ನಾಶಾಭಾವಾಚ್ಚ ಭವದ್ಭಾಷ್ಯಕಾರಾಭಿಲಷಿತಮೇವ ಪ್ರಮೇಯಮದೃಷ್ಟಮಶ್ರುತಂ ಚ । ಅತಸ್ತ್ವದ್ವಿಕಲ್ಪಸ್ತವ ಗುರುಮೇವ ಹಂತೀತಿ ಭಾವಃ ॥೨೮೭॥

ಅಲ್ಲದೇ ಚಿತ್ರಾವಯವವುಳ್ಳ ವಸ್ತುವಿನಲ್ಲಿ ನೀಲವರ್ಣವು ನಾಶವಾಗಬೇಕಾದೀತು ಎಂಬ ಆಪತ್ತಿಯು ನಮ್ಮನ್ನು ಕುರಿತು ಅಸಂಗತವೆಂದು ಹೇಳುತ್ತಿದ್ದಾರೆ-

ಸತ್ಯಂ ಸರ್ವಂ ಸ್ವಸ್ವದೃಷ್ಟ್ಯಾ ನಶ್ಯತ್ಯೇವೇತಿ ವಕ್ತರಿ ।
ಚಿತ್ರಾವಯವಿನೋ ವಾರ್ತಾಪ್ರಸ್ತಾವಸ್ತು ಪ್ರಶಾಸ್ತಿಕೃತ್ ॥ ೨೮೮ ॥

**ಅರ್ಥ–** ಸತ್ಯಂ = ಸತ್ಯವಾದ, ಸರ್ವಂ = ಎಲ್ಲಾವಸ್ತು ವು, ಸ್ವಸ್ವದೃಷ್ಟ್ಯಾ = ತನ್ನ ತನ್ನ ಜ್ಞಾನದಿಂದಲೇ, ನಶ್ಯತಿ = ನಾಶವಾಗುತ್ತದೆ. ಇತಿ = ಈ ರೀತಿಯಾಗಿ, ವಕ್ತರಿ = ಹೇಳುವಂತಹ ವ್ಯಕ್ತಿಗೆ, ಚಿತ್ರಾವಯವಿನಃ= ನೀಲಾದಿ ಅವಯವುವುಳ್ಳ ವಸ್ತುವಿಗೆ, ವಾರ್ತಾಪ್ರಸ್ತಾವಃ = ವಿಕಲ್ಪಮಾಡಿ ದೋಷಹೇಳುವ ಪ್ರಸ್ತಾವನೆಯು, ಪ್ರಶಾಸ್ತಿಕೃತ್ ತು = ಬುದ್ಧಿಕಲಿಸುತ್ತದೆ (ತೊಂದರೆಯನ್ನುಂಟುಮಾಡಬಹುದೇನೋ?)

**ಅನುವಾದ -** ವಿರೋಧಿಯಾಗಿರಲಿ,ಆಗಿಲ್ಲದಿರಲಿ, ಎಲ್ಲ ಸತ್ಯವಾದ ವಸ್ತುವು ತಮ್ಮ ತಮ್ಮ ಜ್ಞಾನದಿಂದ ನಾಶವಾಗುತ್ತದೆ ಎಂದು ಯಾವನು ಹೇಳುವನೋ ಅವನಿಗೆ ವಿವರಣ ಗ್ರಂಥದಲ್ಲಿ ಹೇಳಿರುವ ನೀಲಜ್ಞಾನದಿಂದ ನೀಲಾದಿ ಚಿತ್ರವರ್ಣಾದಿಗಳ ನಾಶವು ಆಗುವುದಿಲ್ಲ ಎಂಬ ಕುರಿತಾದ ಪ್ರಸ್ತಾವನೆಯು ಅನಿಷ್ಟವಾಗಿ ಕಂಡರೂ ನಮಗೆ ಅದು ಅನಿಷ್ಟವಾಗದು.

ದೃಷ್ಟ್ಯಾ ಸತ್ಯಸ್ಯಾಪಿ ನಾಶೋ ದೃಷ್ಟೋऽಸ್ತೀತಿ ತು ವಕ್ತಿ ಯಃ ।
ನೈಲ್ಯಾನಾಶಕಥಾ ಸ್ವಾಸ್ಯನೈಲ್ಯಾನಾಶಾಯ ತಂ ಪ್ರತಿ ॥ ೨೮೯ ॥

**ಅರ್ಥ–** ದೃಷ್ಟ್ಯಾ = ಜ್ಞಾನದಿಂದ, ಸತ್ಯಸ್ಯ ಅಪಿ = ಸತ್ಯವಾದ ವಸ್ತುವಿಗೂ, ನಾಶಃ = ನಾಶವು, ದೃಷ್ಟಃ ಅಸ್ತಿ = ಕೆಲವೆಡೆ ಕಂಡಿದೆ., ಇತಿ = ಈ ರೀತಿಯಾಗಿ, ಯಃ ತು = ಯಾರಾದರೂ, ವಕ್ತಿ = ಹೇಳುವನೋ, ತಂ ಪ್ರತಿ = ಅವನನ್ನು ಕುರಿತು, ನೈಲ್ಯಾನಾಶಕಥಾ = ನೀಲಜ್ಞಾನದಿಂದ ವಸ್ತುಗತವಾದ ನೀಲವರ್ಣಾದಿಗಳು ನಾಶವಾಗದು ಎಂಬ ಆಕ್ಷೇಪವು, ಸ್ವಾಸ್ಯನೈಲ್ಯಾನಾಶಾಯ= ತನ್ನ ಮುಖ ಕಪ್ಪಿಡದಂತೆ ಮಾಡಲಾರದು.

**ಅನುವಾದ** - ವ್ಯಾಪ್ತಿಯ ಬಲವಿದ್ದು, ಜ್ಞಾನದಿಂದ ಸತ್ಯವಸ್ತುವೂ ನಾಶವಾಗುವುದು ಕಂಡಿದೆ ಎಂದು ಯಾರು ಒಪ್ಪಿಕೊಳ್ಳುತ್ತಾರೋ ಅವರನ್ನು ಕುರಿತು ನೀಲವಸ್ತುವಿನ ಜ್ಞಾನದಿಂದ ವಸ್ತುವಿನಲ್ಲಿರುವ ನೀಲವರ್ಣಾದಿಗಳೂ ನಾಶವಾಗದು ಎಂಬ ಆಕ್ಷೇಪವನ್ನು ನೀವು ಮಾಡುವುದಾದರೆ ಪರಾಭವದಿಂದ ಕಪ್ಪಿಟ್ಟ ನಿನ್ನ ಮುಖದ ಕಪ್ಪು ನಾಶವಾಗದೇ ಹಾಗೇ ಉಳಿಯುತ್ತದೆ. (ನೀವು ಪರಾಭವದಿಂದ ಮುಕ್ತನಾಗಲು ಸಾಧ್ಯವಿಲ್ಲ.)

**ಭಾವವಿಲಾಸಿನೀ–** ಕಿಂಚ ಚಿತ್ರಾವಯವಿಗ್ರಂಥಸ್ಯ ಪ್ರಸ್ತಾವೋऽಪ್ಯಸ್ಮಾನ್ ಪ್ರತ್ಯಸಂಗತ ಇತ್ಯಾಹ – ಸತ್ಯಮಿತಿ ॥ ದೃಷ್ಟೋऽಸ್ತಿ ಕ್ವಚಿತ್ಕ್ವಚಿದ್ದೃಷ್ಟೋऽಸ್ತಿ । ನೀಲಜ್ಞಾನೇನ ನೈಲ್ಯಾನಾಶಕಥಾ ಸರ್ವಂ ಸತ್ಯಂ ವಸ್ತು ಸ್ವಸ್ವಜ್ಞಾನೇನ ನಿವರ್ತ್ಯ ಇತಿ ಕಶ್ಚಿದುನ್ಮತ್ತೋ ವದತಿ ಚೇತ್ತಂ ಪ್ರತಿ ಕಥನೀಯಾಸ್ಯಾತ್ । ಸತಿ ಕಲ್ಪಕೇ ಸತ್ಯಮಪಿ ವಸ್ತು ಕ್ವಚಿತ್ ಕ್ವಚಿದ್ಜ್ಞಾನೇನಾಪಿ ನಿವರ್ತಿತುಮರ್ಹತೀತಿ ವದಂತಂ ಪ್ರತಿ ನೀಲಜ್ಞಾನಾನ್ನೈಲ್ಯಮಪಿ ನಶ್ಯೇದಿತಿ ವಚನಮಸಂಗತತ್ವಾತ್ ವಕ್ತುರಾಸ್ಯ ನೈಲ್ಯಾಯೈವ ಸ್ಯಾದಿತಿ ಭಾವಃ॥೨೮೯॥

ಹಿಂದೆ ಹೇಳಿದ ಅಸಂಗತಿಯನ್ನೇ ಇಲ್ಲಿ ಸ್ಪಷ್ಟಪಡಿಸುತ್ತಾರೆ-

ಜ್ಞಾನಾತ್ ಸ್ವವಿಷಯಸ್ತಸ್ಯ ಧರ್ಮೋ ವಾ ತದ್ವಿರೋಧಿ ವಾ ।
ನಿವರ್ತತೇ ಸ್ವಾಶ್ರಯಸ್ಥಮುಭಯಸ್ಥಮಥಾಪಿ ವಾ ॥ ೨೯೦ ॥

ಇತಿ ಪೃಷ್ಟ್ವಾಪರೋ ಯತ್ತು ದೂಷಯಾಮಾಸ ದೂಷಣೈಃ ।
ಅನುಕ್ತೋಪಾಲಂಭನೇನ ತತ್ಸ್ವಾತ್ಮಾನಂ ಹಿ ದೂಷಯೇತ್ ॥ ೨೯೧ ॥

**ಅರ್ಥ–** ಜ್ಞಾನಾತ್ = ಜ್ಞಾನದಿಂದ, ಸ್ವವಿಷಯಃ = ತನ್ನ ವಿಷಯವು, ವಾ = ಅಥವಾ, ತಸ್ಯ = ಆ ವಿಷಯದಲ್ಲಿನ, ಧರ್ಮಃ = ಧರ್ಮವು, ವಾ = ಅಥವಾ, ತದ್ವಿರೋಧಿ = ಆ ವಿಷಯದಲ್ಲಿರುವ ಧರ್ಮಕ್ಕೆ ವಿರೋಧಿಯಾದ ಧರ್ಮವು, ವಾ = ಅಥವಾ, ಸ್ವಾಶ್ರಯಸ್ಥಂ = ಜ್ಞಾನಕ್ಕೆ ಆಶ್ರಯವಾದ ಆತ್ಮನಲ್ಲಿರುವಂಥದ್ದು, ವಾ = ಅಥವಾ, ಉಭಯಸ್ಥಂ = ಆತ್ಮ ಮತ್ತು

ಜ್ಞಾನವಿಷಯದಲ್ಲಿರುವಂಥದ್ದು, ನಿವರ್ತತೇ ವಾ = ನಿವೃತ್ತಿ (ನಾಶ)ಯಾಗುತ್ತದೆಯೋ? ಇತಿ = ಹೀಗೆ, ಪೃಷ್ಟ್ವಾ = ಕೇಳಿ, ಪರಃ = ಮಾಯಾವಾದಿಯು, ದೂಷಣೈಃ = ದೋಷಗಳಿಂದ, ಯತ್ತು = ಯಾವ ರೀತಿಯಿಂದ, ದೂಷಯಾಮಾಸ = ದುಷ್ಟವಾದದ್ದನ್ನಾಗಿ ಹೇಳಿದನೋ, ತತ್ = ಆ ದೂಷಣಪ್ರಸಾರವು, ಅನುಕ್ತೋಪಾಲಂಭನೇನ = ಅನುಕ್ತೋಪಾಲಂಭನ ಎಂಬ ನಿಗ್ರಹಸ್ಥಾನದಿಂದ, ಸ್ವಾತ್ಮಾನಂ = ತನ್ನನ್ನೇ (ಮಾಯಾವಾದಿಯನ್ನೇ) ದೂಷಯೇತ್ ಹಿ = ದುಷ್ಟನನ್ನಾಗಿ ಮಾಡುತ್ತದೆ ತಾನೇ?

**ಅನುವಾದ** - ಜ್ಞಾನವು ಸತ್ಯವಾದ ಬಂಧವನ್ನು ನಾಶಗೊಳಿಸುವುದು ಎಂಬುದನ್ನು ಆಕ್ಷೇಪಿಸುತ್ತಾ ಮಾಯಾವಾದಿಯು ಹೀಗೆ ಹೇಳುತ್ತಾನೆ - ಜ್ಞಾನವು ತನ್ನ ವಿಷಯವನ್ನು ನಾಶಪಡಿಸುವುದೋ? ಆವಿಷಯದಲ್ಲಿನ ಧರ್ಮವನ್ನು ನಾಶಕೊಳಿಸುವುದೋ? ಆ ವಿಷಯದಲ್ಲಿನ ಧರ್ಮಕ್ಕೆ ವಿರೋಧಿಯಾದ ಧರ್ಮವನ್ನು ನಾಶಗೊಳಿಸುವುದೋ? ಅಥವಾ ತನಗೆ (ಜ್ಞಾನಕ್ಕೆ) ಆಶ್ರಯನಾದ ಆತ್ಮನಲ್ಲಿರುವ ಧರ್ಮವನ್ನು ನಾಶಗೊಳಿಸುವುದೋ? ಅಥವಾ ವಿಷಯ ಹಾಗೂ ಆಶ್ರಯನಾದ ಆತ್ಮ ಹೀಗೆ ಇವೆರಡರಲ್ಲಿರುವ ಧರ್ಮವನ್ನು ನಾಶಗೊಳಿಸುವುದೋ? ಹೀಗೆ ಐದು ರೀತಿಯಲ್ಲಿ ವಿಕಲ್ಪಮಾಡಿ ದೂಷಣೆ ಮಾಡಿದ್ದಾನೆ. ಆದರೆ ಈ ಐದು ವಿಕಲ್ಪವೂ ನಾವು ಹೇಳದ ವಿಷಯಗಳೇ ಆದ್ದರಿಂದ ಅನುಕ್ತ ಉಪಾಲಂಭ (ಹೇಳದ ವಿಷಯವನ್ನು ಆಕ್ಷೇಪಿಸುವುದು) ಎಂಬ ನಿಗ್ರಹಸ್ಥಾನದಿಂದ ಅವನ ವಾದವೇ ದುಷ್ಟವಾಗುತ್ತದೆಯೇ ಹೊರತು ಅವನ ಆಕ್ಷೇಪಗಳಿಂದ ನಮ್ಮ ಪ್ರಮೇಯವು ದುಷ್ಟವಾಗುವುದಿಲ್ಲ.

**ಭಾವವಿಲಾಸಿನೀ**– ಅಸಂಗತಿಮೇವ ಸ್ಪಷ್ಟಯತಿ ॥ **ಜ್ಞಾನಾದಿತ್ಯಾದಿನಾ** ॥ ಸ್ವವಿಷಯಃ ಜ್ಞಾನವಿಷಯಃ ತಸ್ಯ ವಿಷಯಸ್ಯ । ತದ್ವಿರೋಧಿ ವಿಷಯಗತಧರ್ಮವಿರೋಧಿ । ಸ್ವಾಶ್ರಯಸ್ಥಂ ನಿವರ್ತತೇ ವಾ ಉಭಯಸ್ಥಂ ನಿವರ್ತತೇ ವೇತಿ ಪೂರ್ವಕ್ರಿಯಾವೃತ್ತ್ಯಾ ಯೋಜನೀಯಮ್ । ತದ್‌ಗ್ರಂಥಸ್ಯ ಸಕಲವಿಕಲ್ಪಾನಾಮುದಾಹರಣಮಿದಮ್ । ದೂಷಣೈಃ ನೀಲಜ್ಞಾನೇನ ನೀಲಸ್ಯ ನೀಲಗುಣಸ್ಯ ತದ್ವಿರುದ್ಧಪೀತಗುಣಸ್ಯ ಚಾನಿವೃತ್ತೇರಾತ್ಮಗತಧರ್ಮಾದೇರನಿವೃತ್ತೇರಾತ್ಮವಿಷಯಸಂಬಂಧಸ್ಯ ಚಾನಿವೃತ್ತೇರಿತ್ಯಾದಿದೂಷಣೈಃ । ಅನುಕ್ತೋಪಾಲಂಭೇನ ಅನುಕ್ತೋಪಾಲಂಭಾಖ್ಯನಿಗ್ರಹ-ಸ್ಥಾನೇನ । ತದ್ದೂಷಣಮ್ । ಪರಾನುಕ್ತಪ್ರಮೇಯಸ್ಯೈವ ವಿಕಲ್ಪ್ಯ ದೂಷಿತತ್ವೇನ ಸ್ವಾಕೌಶಲದ್ಯೋತಕಮಿತ್ಯರ್ಥಃ ॥ ೨೯೦-೨೯೧ ॥

**ವಿವರಣೆ** - ಮಾಯಾವಾದಿಯ ಗ್ರಂಥದಲ್ಲಿರುವ ಸಮಸ್ತವಿಕಲ್ಪಗಳನ್ನು ತೋರಿಸಿ ಇಲ್ಲಿ ಉತ್ತರನೀಡಿದ್ದಾರೆ. ಇಲ್ಲಿ ಹೇಳಿದ ಐದು ವಿಕಲ್ಪಗಳಿಗೆ ಅವನ ಗ್ರಂಥದಲ್ಲಿ ಉತ್ತರ ನೀಡಿದೆ. ನೀಲವಸ್ತುವಿನ ಜ್ಞಾನದಿಂದ ನೀಲವಸ್ತುವಾಗಲೀ, ನೀಲಗುಣವಾಗಲೀ, ಅದಕ್ಕೆ ವಿರುದ್ಧವಾದ ಹಳದಿವರ್ಣವಾಗಲೀ, ಜ್ಞಾನಾಶ್ರಯನಾದ ಆತ್ಮನಲ್ಲಿರುವ ಗುಣವಾಗಲೀ,

ಆತ್ಮ ಹಾಗೂ ವಿಷಯಗಳಲ್ಲಿನ ಸಂಬಂಧವಾಗಲೀ ನಾಶವಾಗದು. ಆದರೆ ಈ ಯಾವ ಉತ್ತರವೂ ನಮಗೆ ಬಾಧಕವಾಗದು. ಏಕೆಂದರೆ ನಾವು ಅವನ್ನು ಹೇಳಿಯೇ ಇಲ್ಲ. ಇದು ಅವನ ವಾದದಲ್ಲಿನ ಮೌಢ್ಯವನ್ನು ತೋರಿಸುತ್ತದೆ.

**ಅನುಕ್ತೋಪಾಲಂಭನವನ್ನು ಸ್ಪಷ್ಟಪಡಿಸಲು ನಮ್ಮ ಅನುವಕ್ತಿಯನ್ನು ತೋರಿಸುತ್ತಿದ್ದಾರೆ-**

**ಕಿಂ ಬ್ರಹ್ಮಜ್ಞಾನತೋ ಬ್ರಹ್ಮ ತದ್ಧರ್ಮಸ್ತದ್ದ್ವಿಷೋಽಸುರಾಃ ।**
**ಜೀವತ್ವಂ ವಾ ಬ್ರಹ್ಮಜೀವಭೇದೋ ವಾ ದ್ವಿತ್ವಮೇತಯೋಃ ।**
**ನಿವರ್ತ್ಯತ ಇತಿ ಬ್ರೂತೇ ತ್ವದಗ್ರೇ ಕೋಽಪಿ ಮಾನುಷಃ ॥ ೨೯೨ ॥**

**ಅರ್ಥ–** ತ್ವದಗ್ರೇ = ನಿನ್ನ ಎದುರು, ಕೋಪಿ = ಯಾವನಾದರೂ, ಮಾನುಷಃ = ಮನುಷ್ಯನು, ಬ್ರಹ್ಮಜ್ಞಾನತಃ = ಬ್ರಹ್ಮನ ಜ್ಞಾನದಿಂದ, ಬ್ರಹ್ಮ= ಬ್ರಹ್ಮನಾಗಲೀ. ತದ್ಧರ್ಮಃ= ಬ್ರಹ್ಮನಲ್ಲಿನ ಗುಣವಾಗಲೀ, ತದ್‌ದ್ವಿಷಃ ಅಸುರಾಃ= ಬ್ರಹ್ಮನ ವಿರೋಧಿಗಳಾದ ಅಸುರರಾಗಲೀ, ಜೀವತ್ವಂ ವಾ = ಜೀವತ್ವವಾಗಲೀ, ಬ್ರಹ್ಮಜೀವಭೇದೋ ವಾ = ಬ್ರಹ್ಮ ಮತ್ತು ಜೀವರ ಭೇದವಾಗಲೀ, ಏತಯೋಃ = ಇವರಿಬ್ಬರ, ದ್ವಿತ್ವಂ ವಾ = ದ್ವಿತ್ವವಾಗಲೀ, ನಿವರ್ತ್ಯತೇ= ನಾಶಮಾಡಲ್ಪಡುತ್ತದೆ. ಇತಿ= ಹೀಗೆಂದು, ಬ್ರೂತೇ ಕಿಂ? = ಹೇಳುತ್ತಾನೇನು?

**ಅನುವಾದ - ಮಾಯಾವಾದಿಯು ಐದು ರೀತಿಯಲ್ಲಿ ವಿಕಲ್ಪಮಾಡಿ ದೋಷವನ್ನು ಹೇಳಿದಾಗ ಐದು ವಿಷಯವೂ ನಾವು ಹೇಳದಿರುವುದೇ ಆಗಿದೆ. ನಾವು ಒಪ್ಪಿದ ಪ್ರಮೇಯದಂತೆ ಬ್ರಹ್ಮಜ್ಞಾನದಿಂದ ಬಂಧವು ನಾಶವಾಗುತ್ತದೆ ಎಂದು ಮಾತ್ರ ನಮ್ಮ ಮತ. ನಿನ್ನ ವಿಕಲ್ಪದಂತೆ ಬ್ರಹ್ಮಜ್ಞಾನವು ಬ್ರಹ್ಮನನ್ನಾಗಲೀ, ಬ್ರಹ್ಮನಲ್ಲಿರುವ ಧರ್ಮ (ಗುಣ)ವನ್ನಾಗಲೀ, ಬ್ರಹ್ಮನ ಗುಣಗಳನ್ನು ದ್ವೇಷಿಸುವ ಅಸುರರನ್ನಾಗಲೀ, ಜ್ಞಾನಕ್ಕೆ ಆಶ್ರಯನಾದ ಜೀವನಲ್ಲಿರುವ ಜೀವತ್ವವನ್ನಾಗಲೀ ಅಥವಾ ಜೀವನಲ್ಲಿರುವ ಬ್ರಹ್ಮನ ಭೇದವನ್ನಾಗಲೀ, ಇವರಿಬ್ಬರು ಎಂದು ಹೇಳಲು ಕಾರಣವಾದ ದ್ವಿತ್ವವನ್ನಾಗಲೀ ನಾಶಮಾಡುವುದು ಎಂದು ನಾವು ಹೇಳಿಯೇ ಇಲ್ಲ. ನಾವು ಮಾತ್ರವಲ್ಲ ಯಾವ ಮನುಷ್ಯನೂ ಇದನ್ನು ಹೇಳುವುದಿಲ್ಲ. ಹಾಗಾಗಿ ಅನುಕ್ತವನ್ನು ಆಕ್ಷೇಪಿಸಿ ದೋಷಾರೋಪಣೆ ಮಾಡುವ ನಿನಗೆ (ಮಾಯಾವಾದಿಗೆ) ನಿಗ್ರಹಸ್ಥಾನವೇ ಬರುತ್ತದೆ.**

**ಭಾವವಿಲಾಸಿನೀ– ಅನುಕ್ತತ್ವಮೇವ ದರ್ಶಯತಿ ॥ ಕಿಂ ಬ್ರಹ್ಮಜ್ಞಾನತ ಇತಿ ॥ ತದ್ಧರ್ಮಾಃ ಬ್ರಹ್ಮಧರ್ಮಾಃ ಸಾರ್ವಜ್ಞಾದಿಃ । ತದ್ದ್ವಿಷಃ ಬ್ರಹ್ಮದ್ವಿಷೋ ಬ್ರಹ್ಮದರ್ಮದ್ವಿಷಶ್ಚ । ವಿಷಯವಿಷಯಧರ್ಮ-ತದ್ವಿರೋಧಿನಾಂ ಸಂಗ್ರಹೋಽಯಮ್ । ಜೀವತ್ವಮಿಥ್ಯಾಶ್ರಯನಿಷ್ಠಧರ್ಮಗ್ರಹಣಮ್ । ಏತಯೋಃ ಬ್ರಹ್ಮಜೀವಯೋಃ ದ್ವಿತ್ವಮಿತ್ಯುಭಯಗತಸ್ಯೋದಾಹರಣಮ್ ॥ ೨೯೨ ॥**

**ಕಿಂತು ಜ್ಞಾನವಿನಾಶ್ಯತ್ವಂ ಯಸ್ಯ ಮಾನೇನ ಮೀಯತೇ ।**
**ತದಜ್ಞಾನಾತಿರಿಕ್ತಂ ಚ ನಶ್ಯದ್ ಜ್ಞಾನೇನ ದೃಶ್ಯತೇ ॥ ೨೯೩ ॥**

**ಅರ್ಥ–** ಕಿಂತು = ಆದರೆ, ಯಸ್ಯ = ಯಾವವಸ್ತುವಿಗೆ, ಮಾನೇನ= ಪ್ರಮಾಣದಿಂದ, ಜ್ಞಾನವಿನಾಶ್ಯತ್ವಂ = ಜ್ಞಾನದಿಂದ ನಾಶವಾಗುವಿಕೆಯು, ಮೀಯತೇ = ಯಥಾರ್ಥವಾಗಿ ತಿಳಿಯಲ್ಪಡುತ್ತದೆ, ಅಜ್ಞಾನಾತಿರಿಕ್ತಂ = ಅಜ್ಞಾನಕ್ಕಿಂತ ಬೇರೆಯಾದ, ತತ್ ಚ = ಆ ಬಂಧವೇ, ಜ್ಞಾನೇನ = ಬ್ರಹ್ಮಜ್ಞಾನದಿಂದ, ನಶ್ಯತ್ = ನಾಶವಾಗುವಂಥಾದ್ದು 'ಅಜ್ಞಾನಾತಿರಿಕ್ತಂ ಚ ನಶ್ಯದ್‌ಜ್ಞಾನೇನ ದೃಶ್ಯತೇ' ಎಂಬುದು ಶ್ಲೋ. ೨೯೫ ರಲ್ಲಿಯೂ ಅನ್ವಯವಾಗುತ್ತದೆ.

**ಅನುವಾದ -** ನಾವು ಹೇಳದ ವಿಷಯವನ್ನೇ ನೀನು ವಿಕಲ್ಪಿಸಿರುವಿ. ನಾವು ಹೇಳುವುದು ಹೀಗೆ - ಯಾವ ವಸ್ತುವು ಜ್ಞಾನದಿಂದ ನಾಶವಾಗುವುದು ಎಂದು ಸರಿಯಾದ ಪ್ರಮಾಣಗಳಿಂದ ನಿಶ್ಚಯವಾಗಿದೆಯೋ ಅಂತಹ ವಸ್ತುವು ಮಾತ್ರ ಜ್ಞಾನದಿಂದ ನಾಶಹೊಂದುತ್ತದೆ. ಪ್ರಕೃತದಲ್ಲಿ ಅಜ್ಞಾನಕ್ಕಿಂತ ಬೇರೆಯಾದ ಸಂಸಾರಬಂಧವು ಮಾತ್ರ ಬ್ರಹ್ಮಜ್ಞಾನದಿಂದ ನಾಶವಾಗುತ್ತದೆ. ತದಾ ವಿದ್ವಾನ್‌ಪುಣ್ಯಪಾಪೇ ವಿಧೂಯ, ದೃಷ್ಟ್ವೈವ ತಂ ಮುಚ್ಯತೇ ಇತ್ಯಾದಿ ಪ್ರಮಾಣಗಳಿಂದ ಸಿದ್ಧವಾದುದನ್ನು ಮಾತ್ರ ನಾವು ಹೇಳಿರುವುದರಿಂದ ನಮಗೆ ಯಾವ ದೋಷವೂ ಇಲ್ಲ.

**ಭಾವವಿಲಾಸಿನೀ–** ತತ್ ಜ್ಞಾನನಿವರ್ತ್ಯತಯಾ ಪ್ರಮಿತವ್ ಜ್ಞಾನೇನ ನಶ್ಯದಿತಿ ಸಂಬಂಧಃ ॥೨೯೩॥

**ಉತ್ತರಜ್ಞಾನತಃ ಪೂರ್ವಜ್ಞಾನಸ್ಯ ವಿನಿವರ್ತನಾತ್ ।**
**ಪ್ರಮಯಾ ಭ್ರಮನಾಶಾಚ್ಚ ಸೂರ್ಯಾದೀನಾಂ ಚ ದರ್ಶನಾತ್ ॥೨೯೪॥**

**ದುರಿತಧ್ವಂಸದೃಷ್ಟೇಶ್ಚ ಸುಹೃದ್ದರ್ಶನತೋ ನೃಣಾಂ ।**
**ಚಿಂತಾಜ್ವರಾದಿನಾಶಸ್ಯ ದೃಷ್ಟತ್ವಾತ್ ತತ್ರ ತತ್ರ ಚ ।**
**ಇತಿ ಬ್ರೂತೇ ಪರಸ್ತತ್ರ ಕುಚೋದ್ಯಾವಸರಃ ಕ್ವ ತೇ ॥ ೨೯೫ ॥**

**ಅರ್ಥ–** ಉತ್ತರಜ್ಞಾನತಃ = ಅನಂತರ ಬಂದ ಜ್ಞಾನದಿಂದ, ಪೂರ್ವಜ್ಞಾನಸ್ಯ = ಮೊದಲು ಬಂದ ಜ್ಞಾನದ, ವಿನಿವರ್ತನಾತ್ = ನಾಶವಿರುವುದರಿಂದ, ಪ್ರಮಯಾ = ಯಥಾರ್ಥಜ್ಞಾನದಿಂದ, ಭ್ರಮನಾಶಾತ್ ಚ = ಭ್ರಮೆಯ ನಾಶವು ಇರುವುದರಿಂದ, ಸೂರ್ಯಾದೀನಾಂ = ಸೂರ್ಯನೇ ಮೊದಲಾದ ದೇವತೆಗಳ, ದರ್ಶನಾಚ್ಚ = ಸಂದರ್ಶನದಿಂದ, ದುರಿತಧ್ವಂಸದೃಷ್ಟೇಶ್ಚ = ಪಾಪನಾಶವು ಕಂಡಿರುವುದರಿಂದ, ಸುಹೃದ್ದರ್ಶನತಃ = ಮಿತ್ರರ ದರ್ಶನದಿಂದ, ನೃಣಾಂ = ಮಾನವರಿಗೆ, ಚಿಂತಾಜ್ವರಾದಿನಾಶಸ್ಯ = ಜ್ವರದಂತೆ ಕಾಡುವ ಚಿಂತೆಯನಾಶವು, ದೃಷ್ಟತ್ವಾತ್ = ಕಂಡಿರುವುದರಿಂದ, ತತ್ರ ತತ್ರ =

ಅಲ್ಲಲ್ಲಿ, ಅಜ್ಞಾನಾತಿರಿಕ್ತಂ ಜ್ಞಾನೇನ ನಶ್ಯದ್ ದೃಶ್ಯತೇ = ಅಜ್ಞಾನಾತಿರಿಕ್ತವಾದ ಸತ್ಯವಸ್ತುವು ಜ್ಞಾನದಿಂದ ನಾಶವಾಗುವುದು ಕಂಡಿದೆ. ಇತಿ = ಹೀಗೆ, ಪರಃ = ಮಾಯಾವಾದಿಗಿಂತ ಬೇರೆಯವನು, ಬ್ರೂತೇ = ಹೇಳುತ್ತಾನೆ. ತತ್ರ = ಈ ವಿಷಯದಲ್ಲಿ, ತೇ = ನಿನಗೆ, ಕುಚೋದ್ಯಾವಸರಃ = ಕೆಟ್ಟ ರೀತಿಯ ವಿಕಲ್ಪಗಳಿಗೆ ಅವಕಾಶವು, ಕ್ವ = ಎಲ್ಲಿದೆ?

**ಅನುವಾದ** - ಜ್ಞಾನದಿಂದ ಸತ್ಯವಸ್ತುವೂ ನಾಶವಾಗುವುದು ಅನೇಕ ಕಡೆ ಕಂಡಿದೆ. ಉತ್ತರಜ್ಞಾನದಿಂದ ಪೂರ್ವಜ್ಞಾನವು ಸತ್ಯವಾಗಿದ್ದರೂ ನಾಶವಾಗುವುದು, ಯಥಾರ್ಥಜ್ಞಾನಬಂದಾಗ ಭ್ರಮೆಯು ನಾಶವಾಗುವುದು, (ನನಗೆ ಈವರೆಗೆ ಭ್ರಮೆ ಇತ್ತು, ಎಂದು ಅನುಭವದಿಂದ ಭ್ರಮೆಯು ಸತ್ಯ ಎಂದು ಸಿದ್ಧವಾಗುತ್ತದೆ - ಸು. ತೀ.) ಸೂರ್ಯಾದಿದೇವತೆಗಳ ದರ್ಶನ ಮಾಡಿದಾಗ ಪಾಪವು ಸತ್ಯವಾಗಿದ್ದರೂ ನಾಶವಾಗುವುದು, ಹಾಗೆಯೇ ಸತ್ಯವಾದ ಚಿಂತಾಜ್ವರವು ಮಿತ್ರರ ದರ್ಶನದಿಂದ ನಾಶವಾಗುವುದು, ಈ ರೀತಿಯಾಗಿ ಸತ್ಯವಾದ ವಸ್ತುವೂ ಜ್ಞಾನದಿಂದ ನಾಶವಾಗುವುದು ಎಂಬ ವಿಷಯವು ಪ್ರಮಾಣಸಿದ್ಧವಾಗಿದ್ದು ಇದರಂತೆ ಬಂಧವು ಸತ್ಯವಾಗಿದ್ದರೂ ಪ್ರಮಾಣಸಿದ್ಧವಾದುದರಿಂದ ನಾಶವಾಗುವುದು ಎಂದು ನಿನ್ನ ಪ್ರತಿವಾದಿಗಳು ಹೇಳಿದರೆ ಇಲ್ಲಿ ಹೇಳಿದ ಎಲ್ಲಾ ಅಂಶವು ನಿನಗೂ ಸಮ್ಮತವೇ ಆಗಿರುವುದರಿಂದ ಕೆಟ್ಟದಾಗಿ ವಿಕಲ್ಪಿಸಿ ಪ್ರತಿವಾದಿಗಳಿಗೆ ದೋಷಹೇಳುವ ಅವಕಾಶವೇ ನಿನಗೆ ಸಿಗುವುದಿಲ್ಲ.

**ಭಾವವಿಲಾಸಿನೀ**– ಕುಚೋದ್ಯಾವಸರಃ ಕುತ್ಸಿತವಿಕಲ್ಪಃ । ತಸ್ಯಾವಸರಃ ॥ ೨೯೪-೨೯೫ ॥

ತ್ವದುಕ್ತದೂಷಣಾನಾಂ ಚ ವ್ರಣಂ ವಿವರಣವ್ರಣೇ ।
ದ್ರಷ್ಟವ್ಯಂ ವಿಸ್ತರಭಯಾನ್ನೇಹ ತಚ್ಚ ವಿತನ್ಯತೇ ॥ ೨೯೬ ॥

**ಅರ್ಥ**– ತ್ವದುಕ್ತದೂಷಣಾನಾಂ = ನೀನು ವಿಕಲ್ಪಮಾಡಿಹೇಳಿದ ದೋಷಾರೋಪಗಳ, ವ್ರಣಂ = ಖಂಡನೆಯು, ವಿವರಣವ್ರಣೇ = ವಿವರಣವ್ರಣ ಎಂಬ ನಮ್ಮ ಗ್ರಂಥದಲ್ಲಿ, ದ್ರಷ್ಟವ್ಯಂ = ನೋಡಬೇಕು. ವಿಸ್ತರಭಯಾತ್ = ಗ್ರಂಥವು ವಿಸ್ತಾರವಾಗುವ ಭೀತಿಯಿಂದ, ಇಹ = ಈ ಗ್ರಂಥದಲ್ಲಿ, ತತ್ ಚ = ಆ ಖಂಡನೆಯು, ನ ವಿತನ್ಯತೇ = ವಿಸ್ತಾರವಾಗಿ ನೀಡಲ್ಪಡುವುದಿಲ್ಲ.

**ಅನುವಾದ** - ಈ ಸಂದರ್ಭದಲ್ಲಿ ನೀನು ಯಾವ ಯಾವ ವಿಕಲ್ಪಗಳಿಂದ ದೋಷಾರೋಪಣೆಯನ್ನು ಮಾಡಿರುವಿಯೋ, ಅವೆಲ್ಲಕ್ಕೂ ಉತ್ತರವನ್ನು ವಿಸ್ತಾರವಾಗಿ ನಮ್ಮ ವಿವರಣವ್ರಣ ಎಂಬ ಗ್ರಂಥದಲ್ಲಿ ನೀಡಲಾಗಿದೆ. ಅದನ್ನು ಅಲ್ಲೇ ನೋಡಿಕೋ, ಗ್ರಂಥವು ವಿಸ್ತಾರವಾಗಿ ಬೆಳೆಯುವುದೆಂಬ ಭಯದಿಂದ ಇಲ್ಲಿ ಅವೆಲ್ಲವನ್ನೂ ಸಂಕ್ಷಿಪ್ತವಾಗಿ ಹೇಳಿದ್ದೇವೆ.

**ಭಾವವಿಲಾಸಿನೀ–** ದೂಷಣಾನಾಂ ವಿಕಲ್ಪದೂಷಣಾನಾಮ್ । ತದ್ದೂಷಣದೂಷಣಮ್ ॥೨೯೬॥

ಕಿಂಚೈವಮಪಿ ತೇ ಬಂಧಮಾತ್ರಸ್ಯಾಜ್ಞಾನಕಾರ್ಯತಾ ।
ಅಸ್ತು ಸರ್ವಸ್ಯ ಜಗತೋ ಮಿಥ್ಯಾತ್ವಂ ತು ಕುತೋ ವದ ।
ನ ಹಿ ಸರ್ವಸ್ಯ ಚ ಜ್ಞಾನಾನ್ನಾಶಃ ಸೂತ್ರೇಣ ಸೂತ್ರಿತಃ ॥ ೨೯೭ ॥

**ಅರ್ಥ–** ಕಿಂಚ = ಅಷ್ಟೇ ಅಲ್ಲದೆ, ತೇ = ನಿನಗೆ, ಏವಮಪಿ = ಈ ಹಿಂದೆ ಹೇಳಿದ ಎಲ್ಲಾ ದೋಷಗಳಿದ್ದರೂ, ಬಂಧಮಾತ್ರಸ್ಯ = ಕೇವಲ ಬಂಧಕ್ಕೆ, ಅಜ್ಞಾನಕಾರ್ಯತಾ = ಅಜ್ಞಾನದಿಂದ ಹುಟ್ಟಿರುವಿಕೆಯು, ಅಸ್ತು = ಇರಲಿ, ಸರ್ವಸ್ಯ = ಎಲ್ಲ, ಜಗತಃ = ಜಗತ್ತಿನಲ್ಲಿರುವ ವಸ್ತುಗಳಿಗೆ, ಮಿಥ್ಯಾತ್ವಂ ತು = ಅಜ್ಞಾನಕಲ್ಪಿತ ಎಂಬ ವಾದವು, ಕುತಃ = ಹೇಗೆ ಸಾಧ್ಯ? ವದ = ಹೇಳು. ಹಿ = ಏಕೆಂದರೆ, ಸೂತ್ರೇಣ = ಬ್ರಹ್ಮಸೂತ್ರದಿಂದ, ಸರ್ವಸ್ಯ = ಎಲ್ಲ ವಸ್ತುಗಳಿಗೆ, ಜ್ಞಾನಾತ್ = ಬ್ರಹ್ಮಜ್ಞಾನದಿಂದ, ನಾಶಃ = ನಾಶವಿದೆ ಎಂಬ ವಿಚಾರವು, ನ ಸೂತ್ರಿತಃ = ಉಪಪಾದಿತವಾಗಿಲ್ಲ.

**ಅನುವಾದ** - ಸೂತ್ರಕಾರರು ಬಂಧನಾಶವು ಜ್ಞಾನದಿಂದಲೇ ಆಗುತ್ತದೆ ಎಂದು ಹೇಳಿರುವುದರಿಂದ, ನೀನು ಹೇಳುವ ನಿಯಮದಂತೆ ಬಂಧವು ಮಾತ್ರ ಜ್ಞಾನಕಲ್ಪಿತ ಎಂದು ಒಪ್ಪಿಕೊಳ್ಳೋಣ. ಆದರೆ ನೀನು ಇಡೀ ಜಗತ್ತಿಗೆ ಮಿಥ್ಯಾತ್ವವನ್ನು ಹೇಳಲು ಹೊರಟಿರುವಿ. ಸೂತ್ರಕಾರರು ಇಡೀ ಜಗತ್ತು ಜ್ಞಾನದಿಂದ ನಾಶವಾಗುವುದು ಎಂದು ಹೇಳದಿರುವುದರಿಂದ ಸೂತ್ರಾನುಸಾರಿಯಾಗಿ ಪ್ರಮೇಯವನ್ನು ನಿರೂಪಿಸಲು ಹೊರಟ ನೀನು ಇಡೀ ಜಗತ್ತು ಮಿಥ್ಯಾ ಎಂದು ಹೇಳುವುದು ಹೇಗೆ?

**ಭಾವವಿಲಾಸಿನೀ–** ಅಪಿ ಚೈವಮಪಿ ಬ್ರಹ್ಮಜ್ಞಾನಾದ್ ಬಂಧಮಾತ್ರನಿವೃತ್ತಿಶ್ರವಣಾತ್ ತಸ್ಯೈವಾಜ್ಞಾನಕಲ್ಪಿತತ್ವಂ ಸ್ಯಾತ್ । ಸರ್ವಸ್ಯ ಜಗತೋಽಜ್ಞಾನಕಲ್ಪಿತತ್ವಕಥಾಯಾಃ ಕಾ ಸಂಗತಿರಿತ್ಯಾಹ – **ಕಿಂಚೇತಿ** ॥ ೨೯೭ ॥

ಸೂತ್ರದಲ್ಲಿ ಜ್ಞಾನದಿಂದ ಜಗತ್ತಿಗೆ ನಾಶವನ್ನು ಹೇಳಿಲ್ಲ ಎಂಬುದು ಮಾತ್ರವಲ್ಲ, ಅಧಿಕಾರಾದಿಸಂಪತ್ತುಗಳ ಅನಂತರ ಎಂದು ಸೂಚಿಸುವ ಅಥಶಬ್ದ ಪ್ರಯೋಗವನ್ನು ಸೂತ್ರಕಾರರು ಮಾಡಿರುವುದರಿಂದ ಜಗತ್ತು ಸತ್ಯ ಎಂಬುದೂ ಸೂತ್ರಕ್ಕೆ ಅಭಿಮತ ಎಂದೂ ತಿಳಿಸುತ್ತಿದ್ದಾರೆ-

ಅಧಿಕಾರ್ಯಾದಿಸದ್ಭಾವಾದ್ ಗುರುಶಿಷ್ಯಾದಿಸಂಭವಾತ್ ।
ವಕ್ತೃಶ್ರೋತೃಮನೋದೇಹಗೇಹಾದೇರನುಪದ್ರವಾತ್ ॥ ೨೯೮ ॥

ಸ್ವಯೋಗ್ಯದೇಶಕಾಲಾನ್ನಸದ್ಭಾವಾತ್ ಫಲಸಂಭವಾತ್ ।
ಮೀಮಾಂಸ್ಯವೇದಸದ್ಭಾವಾನ್ಮೀಮಾಂಸಾಶಾಸ್ತ್ರಸಂಭವಾತ್ ॥ ೨೯೯ ॥

**ಕಾರ್ಯೈವ ಬ್ರಹ್ಮಮೀಮಾಂಸಾ ಸದೇತ್ಯಾದಾವಸೂತ್ರಯತ್ ।**
**ಯಃ ಸೂತ್ರಕಾರಃ ಸ ಜಗನ್ಮಿಥ್ಯಾತ್ವಂ ನೈವ ಮನ್ಯತೇ ॥ ೩೦೦ ॥**

**ಅರ್ಥ–** ಅಧಿಕಾರ್ಯಾದಿ ಸದ್ಭಾವಾತ್ = ಅಧಿಕಾರಿ ಮೊದಲಾದ ಅನುಬಂಧಗಳು ಇರುವುದರಿಂದ, ಗುರುಶಿಷ್ಯಾದಿಸಂಭವಾತ್ = ಗುರುಗಳು ಹಾಗೂ ಶಿಷ್ಯರು ಇರುವುದರಿಂದ, ವಕ್ತೃಶ್ರೋತೃಮನೋದೇಹಗೇಹಾದೇಃ = ಹೇಳುವ ಗುರು, ಕೇಳುವ ಶಿಷ್ಯ, ವಿಚಾರಮಾಡುವ ಮನಸ್ಸು, ಸರಿಯಾದ ದೇಶ ಮನೆ ಇವೇ ಮೊದಲಾದವುಗಳ, ಅನುಪದ್ರವಾತ್ =ತೊಂದರೆ ಇಲ್ಲದಿರುವುದರಿಂದ, ಸ್ವಯೋಗ್ಯದೇಶಕಾಲಾನ್ನಸದ್ಭಾವಾತ್ = ತನಗೆ ಯೋಗ್ಯವಾದ ದೇಶ, ಕಾಲ ಹಾಗೂ ಅನ್ನ ಇವುಗಳು ಇರುವುದರಿಂದ, ಫಲಸಂಭವಾತ್ = ಉತ್ತಮ ಫಲವೂ ಉಂಟಾಗುವುದರಿಂದ, ಮೀಮಾಂಸ್ಯವೇದಸದ್ಭಾವಾತ್ = ಅರ್ಥೈಸಿಕೊಳ್ಳಬೇಕಾದ ವೇದವೂ ಇರುವುದರಿಂದ, ಮೀಮಾಂಸಾಶಾಸ್ತ್ರಸಂಭವಾತ್ = ಅರ್ಥಮಾಡುವ ಮೀಮಾಂಸಾಶಾಸ್ತ್ರವೂ ಇರುವುದರಿಂದ, ಸದಾ= ಯಾವಾಗಲೂ, ಬ್ರಹ್ಮಮೀಮಾಂಸಾ = ಬ್ರಹ್ಮನನ್ನು ತಿಳಿದುಕೊಳ್ಳುವ ವಿಚಾರವನ್ನು, ಕಾರ್ಯಾ ಏವ = ಮಾಡಲೇಬೇಕು, ಇತಿ = ಈ ರೀತಿಯಾಗಿ, ಯಃ = ಯಾವ, ಸೂತ್ರಕಾರಃ = ಸೂತ್ರಕಾರರಾದ ವೇದವ್ಯಾಸರು, ಆದೌ = ಸೂತ್ರಗ್ರಂಥದ ಆರಂಭದಲ್ಲಿ, ಅಸೂತ್ರಯತ್ = ತಿಳಿಸಿದ್ದಾರೋ, ಸಃ = ಆ ವೇದವ್ಯಾಸರು, ಜಗನ್ಮಿಥ್ಯಾತ್ವಂ = ಜಗತ್ತು ಮಿಥ್ಯೆಎಂಬುದುದನ್ನು, ನ ಮನ್ಯತೇ ಏವ = ಒಪ್ಪಿಕೊಳ್ಳುವುದೇ ಇಲ್ಲ.

**ಅನುವಾದ -** ಅರ್ಥನಿರ್ಣಾಯಕಶಾಸ್ತ್ರಗಳಲ್ಲಿ ಪರಮಪ್ರಮಾಣವೆಂದು ಸರ್ವರೂ ಆದರಿಸುವ ಬ್ರಹ್ಮಮೀಮಾಂಸಾಶಾಸ್ತ್ರವನ್ನು ವೇದವ್ಯಾಸರು ಬರೆದಿದ್ದಾರೆ. ಅವರು ಬರೆದ ಬ್ರಹ್ಮಸೂತ್ರಗ್ರಂಥದಲ್ಲಿ ಮೊದಲಸೂತ್ರದಲ್ಲಿ ಅಥ ಮತ್ತು ಅತಃ ಎಂಬ ಶಬ್ದಗಳ ಪ್ರಯೋಗದಿಂದ ಗ್ರಂಥದ ವಿಷಯವಾದ ಬ್ರಹ್ಮನ ಕುರಿತಾಗಿ ವಿಚಾರಮಾಡುವುದಕ್ಕೆ ಅಧಿಕಾರ್ಯಾದಿಅನುಬಂಧಗಳು ಇವೆ. ಜ್ಞಾನನೀಡುವ ಗುರುವೂ, ಜ್ಞಾನದಲ್ಲಿ ಆಸಕ್ತನಾದ ಶಿಷ್ಯನೂ ಇದ್ದಾನೆ. ತಿಳಿಸಿಕೊಡುವ ವೇದವ್ಯಾಸರಲ್ಲಾಗಲೀ, ಕೇಳಿಸಿಕೊಳ್ಳುವ ಬ್ರಹ್ಮರುದ್ರಾದಿಗಳಲ್ಲಾಗಲೀ, ವಂಚನೆ ಮೋಸಗಳು ಇಲ್ಲ. ಮನಸ್ಸು ನಿರ್ಮಲವಾಗಿದೆ. ಶರೀರದಲ್ಲಿ ರೋಗಾದ್ಯುಪದ್ರವಗಳು ಇಲ್ಲ. ಮನೆಯಲ್ಲಿ ತಾಪತ್ರಯ ಇಲ್ಲ. ಶಾಸ್ತ್ರವಿಚಾರಕ್ಕೆ ಅನುಕೂಲವಾದ ಉತ್ತಮದೇಶ, ಉತ್ತಮಕಾಲ ಹಾಗೂ ಶುದ್ಧವಾದ ತನ್ನ ಇದೆ. ಶಾಸ್ತ್ರವಿಚಾರದಿಂದ ಉತ್ತಮ ಫಲವೂ ಸಿಗುವುದು. ಬ್ರಹ್ಮನನ್ನು ತಿಳಿಯಲು ಅಗತ್ಯವಾದ ವೇದಗಳೂ ಇವೆ. ವೇದದ ಅರ್ಥವನ್ನು ಸರಿಯಾಗಿ ನಿರ್ಣಯಿಸಲು ಅಗತ್ಯವಾದ ಬ್ರಹ್ಮಮೀಮಾಂಸಾಶಾಸ್ತ್ರವೂ ಇದೆ. ಈ ಎಲ್ಲಾ ಕಾರಣಗಳಿಂದ ಪ್ರತಿಯೊಬ್ಬನೂ ಯಾವಾಗಲೂ ಬ್ರಹ್ಮನ ಕುರಿತಾದ (ಅವನನ್ನು ತಿಳಿದುಕೊಳ್ಳಲು ಅಗತ್ಯವಾದ) ವಿಚಾರವಿಮರ್ಶೆಯನ್ನು ಅಗತ್ಯವಾಗಿ

ಮಾಡಲೇಬೇಕು. ಈ ಎಲ್ಲಾ ವಸ್ತುಗಳು ಸತ್ಯವಾದುದರಿಂದಲೇ, ಸೂತ್ರಕಾರರು ತಿಳಿಸುವುದು ಸಂಗತವಾಗುತ್ತದೆಯೇ ಹೊರತು ಮಿಥ್ಯೆಯಾದರೆ ಮೂಲಭೂತವಸ್ತುಗಳೇ ಇಲ್ಲದಿರುವುದರಿಂದ ವಿಚಾರವಿಮರ್ಶೆಯ ಅಗತ್ಯವೇ ಬರಲಾರದು ತಾನೆ? ಹಾಗಿದ್ದೂ ಸೂತ್ರಕಾರರು ಇವೆಲ್ಲವನ್ನೂ ಸೂಚಿಸುವ ಶಬ್ದವನ್ನು ಆದಿಸೂತ್ರದ ಆರಂಭದಲ್ಲಿ ಬಳಸಿದ್ದಾರೆ ಎಂದರೆ ಸೂತ್ರಕಾರರರಿಗೆ ಜಗತ್ತು ಸತ್ಯ ಎಂಬುದೇ ಅಭಿಮತವಾಗಿದೆ, ಹಾಗಾಗಿ ಸೂತ್ರಕಾರರು ಜಗನ್ಮಿಥ್ಯಾತ್ವವನ್ನು ಒಪ್ಪದೇ ಇರುವುದರಿಂದ ಸೂತ್ರಾನುಸಾರಿಯಾಗಿ ವಿಮರ್ಶೆಗೆ ಹೊರಟ ನೀವು ಜಗತ್ತು ಮಿಥ್ಯೆ ಎನ್ನುವುದು ಸರಿಯಲ್ಲ.

**ಭಾವವಿಲಾಸಿನೀ–** ನ ಕೇವಲಂ ಸೂತ್ರೇ ಜಗನ್ನಿವೃತ್ತೇರಶ್ರವಣಮಾತ್ರಮ್ । ಕಿಂತ್ವಧಿಕಾರಸಂಪತ್ತೇರಾನಂತರ್ಯಾರ್ಥಕಾಥಶಬ್ದೇನ ಜಗತ್ಸತ್ಯತ್ವಮಪಿ ಸೂತ್ರಾಭಿಪ್ರೇತಮಿತ್ಯಾಹ – **ಅಧಿಕಾರೀತಿ** ॥ ೨೯೮-೩೦೦ ॥

ಜಗಜ್ಜನ್ಮಾದಿಹೇತುತ್ವಂ ಯಃ ಪ್ರದೀಪಮದೀಪಯತ್ ।
ಸ್ವದತ್ತದೀಪತೈಲಸ್ಯಾಭಾವಂ ಸ ಮನುತೇ ಕಥಂ ॥ ೩೦೧ ॥

**ಅರ್ಥ–** ಯಃ= ಯಾವ ವೇದವ್ಯಾಸರು, ಜಗಜ್ಜನ್ಮಾದಿಹೇತುತ್ವಂ= ಜಗಜ್ಜನ್ಮಾದಿಕಾರಣತ್ವ ರೂಪವಾದ, ಪ್ರದೀಪಂ= ಲಕ್ಷಪ್ರಕಾಶವಾದ್ದರಿಂದ ಪ್ರದೀಪದಂತಿರುವ ಸೂತ್ರವನ್ನು, ಅದೀಪಯತ್= ರಚಿಸಿದರು (ದೀಪವನ್ನು ಹಚ್ಚಿಸಿದರು), ಸಃ= ಆ ವ್ಯಾಸರು, ಸ್ವದತ್ತದೀಪತೈಲಸ್ಯ= ತಾವೇ ಕೊಟ್ಟ ದೀಪದ ತೈಲದ, ಅಭಾವಂ= ಅಭಾವವನ್ನು, ಕಥಂ ಮನುತೇ= ಹೇಗೆ ಅಭಿಪ್ರಾಯಪಡುತ್ತಾರೆ.

**ಅನುವಾದ–** ಯಾವ ವೇದವ್ಯಾಸರು ಜಗಜ್ಜನ್ಮಾದಿಹೇತುತ್ವರೂಪವಾದ ಶ್ರೇಷ್ಠವಾದ ದೀಪವನ್ನು ಹಚ್ಚಿಸಿದರೋ ಅವರು ತಾವೇ ಕೊಟ್ಟ ದೀಪದ (ದೀಪಕ್ಕೆ) ತೈಲದ ಅಭಾವವನ್ನು ಹೇಗೆ ಅಭಿಪ್ರಾಯಪಡುತ್ತಾರೆ?

**ಭಾವವಿಲಾಸಿನೀ–** ದ್ವಿತೀಯಸೂತ್ರಾರ್ಥಪರ್ಯಾಲೋಚನಯಾಪಿ ಜಗತ್ಸತ್ಯತ್ವಮೇವ ಸೂತ್ರಾಕಾರಸ್ಯಾಭಿಮತಮಿತ್ಯಾಹ – **ಜಗದಿತಿ** ॥ ಲಕ್ಷಣಸ್ಯಾರ್ಥನಿರ್ಣಾಯಕತ್ವಾತ್ ಪ್ರದೀಪಮಿತ್ಯುಕ್ತಮ್ । ಜಗತೋಽಭಾವೇ ಜಗತ್ಕಾರಣತ್ವಸ್ಯಾಪ್ಯಭಾವಪ್ರಸಂಗಾತ್ ದೀಪತೈಲಸ್ಯೇತ್ಯುಕ್ತಮ್ ॥ ೩೦೧ ॥

**ವಿವರಣೆ–** ಪ್ರದೀಪವು ಅರ್ಥವನ್ನು ಪ್ರಕಾಶಿಸುವಂತೆ ಲಕ್ಷಣವು ಲಕ್ಷ್ಯವಾದ ಬ್ರಹ್ಮನನ್ನು ನಿರ್ಣಯಿಸುವುದರಿಂದ ಜಗಜ್ಜನ್ಮಾದಿಕಾರಣತ್ವವು ಪ್ರದೀಪಕ್ಕೆ ಹೋಲಿಸಿದ್ದಾರೆ. ಈ ದೀಪದಲ್ಲಿ ಜಗತ್ ಎಂಬುದು ತೈಲಭಾಗ. ತೈಲವೇ ಇಲ್ಲದಿದ್ದರೆ ಹೇಗೆ ದೀಪವು ಉರಿಯುವುದಿಲ್ಲವೊ ಹಾಗೆ ಜಗತ್ತೇ ಇಲ್ಲದಿದ್ದರೆ ಜಗಜ್ಜನ್ಮಾದಿಕಾರಣತ್ವರೂಪವಾದ

ದೀಪವು ಉರಿಯುವುದಿಲ್ಲ. ಆದ್ದರಿಂದ ಜಗಜ್ಜನ್ಮಾದಿಕಾರಣತ್ವವಾದ ದೀಪವು ಉರಿಯಬೇಕಾದರೆ ಅದರಲ್ಲಿ ಘಟಕವಾದ ಜಗತ್ತೂ ಇರಲೇಬೇಕು. ಆದ್ದರಿಂದ ಜಗತ್ತಿಗೆ ಸತ್ಯತ್ವವು ಸಿದ್ಧವಾಗುತ್ತದೆ ಎಂದು ಅಭಿಪ್ರಾಯ.

**ಅಂತ್ಯಾವಯವಿನೋ ನಾಶಃ ಪೂರ್ವಂ ಘಟವಿನಾಶನೇ ।**
**ಕಪಾಲಂ ತದುಪಾದಾನಂ ಕಿಂ ನಶ್ಯತಿ ತದಾ ವದ ॥ ೩೦೨ ॥**

**ಕಾರ್ಯಾತ್ಮನಾ ವಿನಷ್ಟೋಽಸೌ ಘಟಃ ಕಾರಣರೂಪತಃ ।**
**ಅಸ್ತ್ಯೇವೇತಿ ಮತಂ ಸರ್ವೇ ಪೂರ್ವೇಽಂಗೀಕುರ್ವತೇ ತವ ॥ ೩೦೩ ॥**

**ಅರ್ಥ–** ಪೂರ್ವಂ= ಮೊದಲು, ಅಂತ್ಯಾವಯವಿನಃ= ಎಂದರೆ ಕೊನೆಯ ಕಾರ್ಯದ, ನಾಶಃ= ನಾಶವುಂಟಾಗುತ್ತದೆ, ಘಟವಿನಾಶನೇ= ಘಟವು ನಾಶವನ್ನು ಹೊಂದಿದರೆ, ತದಾ= ಆಗ, ತದುಪಾದಾನಂ= ಅದಕ್ಕೆ ಉಪಾದಾನವಾದ, ಕಪಾಲಂ= ಕಪಾಲವು, ಕಿಂ ನಶ್ಯತಿ= ನಾಶ ಹೊಂದುತ್ತದೆಯೇ, ವದ= ಹೇಳು? ಅಸೌಘಟಃ= ಈ ಘಟವು, ಕಾರ್ಯಾತ್ಮನಾ= ಕಾರ್ಯರೂಪದಿಂದ, ವಿನಷ್ಟಃ= ನಾಶಹೊಂದಿದರೂ, ಕಾರಣರೂಪತಃ= ಕಾರಣರೂಪದಿಂದ, ಅಸ್ತ್ಯೇವೇತಿ= ಇದ್ದೇ ಇದೆ ಎಂಬ, ಮತಂ= ಮತವನ್ನು, ತವಪೂರ್ವೇ= ನಿನ್ನ ಹಿಂದಿನವರಾದ, ಸರ್ವೇ= ಎಲ್ಲರೂ, ಅಂಗೀಕುರ್ವತೇ= ಅಂಗೀಕರಿಸುತ್ತಾರೆ.

**ಅನುವಾದ–** ಮೊದಲೇ ಅಂತ್ಯಾವಯವ ನಾಶವಾಗುತ್ತದೆ. ಘಟವು ನಾಶವಾದಾಗ ಅದಕ್ಕೆ ಉಪಾದಾನವಾದ ಕಪಾಲವು ನಾಶವಾಗುತ್ತದೆಯೇ ಎಂದು ಹೇಳು? ಈ ಘಟವು ಕಾರ್ಯರೂಪದಿಂದ ನಷ್ಟವಾದರೂ ಕಾರಣರೂಪದಿಂದ ಇದ್ದೇ ಇದೆ ಎಂಬ ಮತವನ್ನು ನಿನ್ನ ಪೂರ್ವಜರೆಲ್ಲರೂ ಅಂಗೀಕರಿಸುತ್ತಾರೆ.

**ಭಾವವಿಲಾಸಿನೀ–** ಕಿಂಚ ನದೀಮುಭಯತೋ ವಾಹಾಮಿತ್ಯಾದಿ ಪ್ರಮಾಣಬಲಾದ್ವಿಪರ್ಯೇಣ ಲಯಂ ವಕ್ಷ್ಯನ್ ಸೂತ್ರಾಕಾರಃ ಉಪಾದಾನ ನಾಶಪ್ರಕ್ರಿಯಯಾ ಜಗನ್ನಾಶಂ ನಾಭಿಪ್ರೈತಿ । ಕಿಂತ್ವಂತ್ಯಾವಯವಿನಾಮೇವ ಪ್ರಾಙ್ನಾಶಃ ತತಸ್ತದುಪಾದಾನಸ್ಯೇತ್ಯೇವಾಧೋಧಃ ಕ್ರಮೇಣ ಪ್ರಾಥಮಿಕೋಪಾದಾನೇ ಪ್ರಕೃತೌ ವಿಕೃತಿನಾಶಸ್ಯ ಪರ್ಯವಸಾನಂ ವದತಿ । ಮೂಲ ಪ್ರಕೃತೇಸ್ತ್ವನಾದ್ಯನಂತ ಜಗನ್ಮೂಲೋಪಾದಾನಭೂತಾಯಾಃ ಪ್ರಕೃತಿತ್ವಾದವಿನಾಶ ಏವ ಶ್ರುತಿಸೂತ್ರಾದಿನಾಮಭಿಮತಃ । ಏವಂ ಚೋಪಾದಾನ ನಾಶದ್ವಾರಾಜಗನ್ನಾಶಾಭಾವಾಚ್ಚ ನ ಜ್ಞಾನನಿವರ್ತ್ಯತ್ವಾಖ್ಯಂ ಮಿಥ್ಯಾತ್ವಂ ಜಗತೀತ್ಯಾಹ **–ಅಂತ್ಯೇತಿ** ॥ ೩೦೨-೩೦೩ ॥

**ವಿವರಣೆ–** 'ನದೀಂ ಉಭಯತೋ ಭಾವಂ' ಎಂಬ ಭಾಗವತ ವಚನದಿಂದಲೂ 'ವಿಪರ್ಯಯೇಣತು ಕ್ರಮಃ' ಎಂಬ ಸೂತ್ರದಿಂದಲೂ ಉಪಾದಾನನಾಶ ಪ್ರಕ್ರಿಯೆಯಿಂದ ಜಗತ್ತಿನ ನಾಶವೆಂಬ ಮತವು ನಿರಾಕೃತವಾಗುತ್ತದೆ ಎಂದು ಇಲ್ಲಿ

ಹೇಳುತ್ತಾರೆ. ಮೊದಲು ಅಂತ್ಯಾವಯವಿಯ ನಾಶ, ಅನಂತರ ಅದರ ಉಪಾದಾನದ ನಾಶ, ಅನಂತರ ಅದರ ಉಪಾದಾನದ ನಾಶ ಹೀಗೆ ವಿಕಾರವೆಲ್ಲವೂ ನಾಶವನ್ನು ಹೊಂದಿ ಮೂಲಕಾರಣವಾದ ಪ್ರಕೃತಿಯವರೆಗೂ ಹೋಗುತ್ತದೆ. ಪ್ರಕೃತಿ ಇದ್ದಂತೆ ಇರುತ್ತದೆ. ಅದಕ್ಕೆ ನಾಶವಿಲ್ಲ. ಆದ್ದರಿಂದಲೇ ಅದಕ್ಕೆ ಪ್ರಕೃತಿ ಎಂದು ಹೆಸರು. ಇಂತಹ ನಾಶವೇ ಶ್ರುತಿಸ್ಮೃತಿಸೂತ್ರಗಳಲ್ಲಿ ಕಂಡುಬರುತ್ತದೆ ಹೊರತಾಗಿ ನಿನಗೆ ಅಭಿಮತವಾದ ಉಪಾದಾನವಾದ ಅಜ್ಞಾನದ ನಾಶದಿಂದ ಉಪಾದೇಯವಾದ ಜಗತ್ತಿನ ನಾಶವು ಎಲ್ಲಿಯೂ ಕಂಡುಬರುವುದಿಲ್ಲ. ಆದ್ದರಿಂದ ಜಗತ್ತಿನಲ್ಲಿ ಜ್ಞಾನನಿವರ್ತ್ಯತ್ವರೂಪವಾದ ಮಿಥ್ಯಾತ್ವವು ಸಿದ್ಧವಾಗುವುದಿಲ್ಲ ಎಂದು ಅಭಿಪ್ರಾಯ.

ಕಪಾಲಸ್ಯ ತು ನಾಶೇ ತು ಘಟಸ್ಯಾತ್ಯಂತನಾಶನಂ ।
ರೂಪದ್ವಯೇನಾಪಿ ನಾಶಾತ್ಪುನಃ ಕಾರಣರೂಪತಃ ।
ಕಪಾಲಾನಾಮೇವ ಸತ್ತಾ ಘಟವರ್ತಾ ಗತಾ ತದಾ ॥ ೩೦೪ ॥

**ಅರ್ಥ–** ಕಪಾಲಸ್ಯ ತು ನಾಶೇ ತು= ಕಪಾಲವು ನಾಶವಾದರೆ ಮಾತ್ರ, ರೂಪದ್ವಯೇನಾಪಿ= ಕಾರ್ಯಕಾರಣ ಎರಡು ರೂಪಗಳಿಂದಲೂ, ನಾಶಾತ್= ನಾಶವು ಉಂಟಾಗುವುದರಿಂದ, ಘಟಸ್ಯ= ಘಟಕ್ಕೆ, ಅತ್ಯಂತನಾಶನಂ= ಅತ್ಯಂತನಾಶವೇ ಉಂಟಾಗುತ್ತದೆ, ಪುನಃ= ಮತ್ತೆ, ಕಾರಣರೂಪತಃ= ಕಾರಣರೂಪದಿಂದ, ಕಪಾಲಾನಾಮೇವ ಸತ್ತಾ= ಕಪಾಲಗಳಿಗೆ ಸತ್ತ್ವವಿರುತ್ತದೆ ಎಂಬ, ಘಟವರ್ತಾ= ಘಟವಾರ್ತೆಯು, ತದಾ= ಆಗ, ಗತಾ= ಹೊರಟು ಹೋಗುತ್ತದೆ.

**ಅನುವಾದ–** ಕಪಾಲನಾಶದಿಂದ ಎಲ್ಲಿ ಘಟವು ನಾಶವನ್ನು ಹೊಂದುತ್ತದೋ, ಅಲ್ಲಿ ಘಟವು ಕಾರ್ಯರೂಪದಿಂದಲೂ ಮತ್ತು ಕಾರಣರೂಪದಿಂದಲೂ ನಾಶವನ್ನು ಹೊಂದುವುದರಿಂದ ಅದಕ್ಕೆ ಅತ್ಯಂತನಾಶವೇ ಇದೆ. ಆಗ ಕಾರಣರೂಪದಿಂದ ಕಪಾಲಗಳೇ ಇರುತ್ತವೆ. ಘಟವಾರ್ತೆಯು ಹೊರಟು ಹೋಗುತ್ತದೆ.

**ವಿವರಣೆ–** ಎಲ್ಲಿ ಕಪಾಲನಾಶದಿಂದ ಘಟನಾಶವಾಗುವುದೋ ಅಲ್ಲಿ ಘಟವೂ ಇಲ್ಲ, ಕಪಾಲವೂ ಇಲ್ಲ. ಕಪಾಲಗಳ ಕಾರಣ ಮಾತ್ರ ಉಳಿಯುತ್ತದೆ. ಕಪಾಲದ ಕಾರಣಗಳು ನಷ್ಟವಾದಾಗ ಕಪಾಲದ ಕಾರಣದ ಕಾರಣಗಳು ಉಳಿಯುತ್ತದೆ ಹೊರತಾಗಿ ಆಗ ಘಟವಾರ್ತೆಯಾಗಲಿ, ಕಪಾಲವಾರ್ತೆಯಾಗಲಿ, ಕಪಾಲಕಾರಣವಾರ್ತೆಯಾಗಲಿ ಇರುವುದಿಲ್ಲ ಎಂದು ಅಭಿಪ್ರಾಯ.

ಏವಂ ಪ್ರಕೃತಿಪರ್ಯಂತಂ ನಾಶೋಧೋಽಧಃ ಕ್ರಮಾತ್ಕಿಲ ।
ಭೂಭೂಧರಾದೇರಪ್ಯೇವಮೇವ ನಾಶಂ ವಿದುರ್ಬುಧಾಃ ॥ ೩೦೫ ॥

**ಅರ್ಥ–** ಏವಂ= ಈ ರೀತಿಯಾಗಿ, ಅಧೋಽಧಃ ಕ್ರಮಾತ್= ಹಿಂದು ಹಿಂದಿನ ಕ್ರಮದಿಂದ, ಪ್ರಕೃತಿಪರ್ಯಂತಂ= ಪ್ರಕೃತಿಯವರೆಗೆ, ಕ್ರಮಾತ್= ಕ್ರಮವಾಗಿ, ನಾಶಾತ್ ಕಿಲ= ನಾಶವಾಗುವುದಷ್ಟೆ, ಬುಧಾಃ= ಜ್ಞಾನಿಗಳು, ಭೂಭೂಧರಾದೇಃ ಅಪಿ= ಭೂಮಿ, ಪರ್ವತ ಮೊದಲಾದವುಗಳಿಗೂ, ಏವಮೇವ= ಈ ರೀತಿಯಲ್ಲಿಯೂ, ನಾಶಂ= ನಾಶವನ್ನು, ವಿದುಃ= ತಿಳಿಯುತ್ತಾರೆ.

**ಅನುವಾದ – ಹೀಗೆ ಪ್ರಕೃತಿಯವರೆಗೂ ಉತ್ತರೋತ್ತರನಾಶವಾದ ಮೇಲೆ ಪೂರ್ವಪೂರ್ವನಾಶವು ಕ್ರಮವಾಗಿ ಉಂಟಾಗುವುದಷ್ಟೆ. ಜ್ಞಾನಿಗಳು ಭೂಭೂಧರಾದಿಗಳ ನಾಶವನ್ನು ಇದೇ ರೀತಿಯಲ್ಲಿ ತಿಳಿಯುತ್ತಾರೆ.**

**ಇಮಾಂ ಪ್ರಲಯಮರ್ಯಾದಾಂ ವದಂತ್ಯಖಿಲವಾದಿನಃ ।**
**ಏವಂ ಚೋಪಾದಾನನಾಶಾತ್ಕಾರ್ಯನಾಶಃ ಕದಾ ವದ ॥ ೩೦೬ ॥**

**ಅರ್ಥ–** ಅಖಿಲವಾದಿನಃ= ಎಲ್ಲ ವಾದಿಗಳು, ಇಮಾಂ ಪ್ರಲಯಮರ್ಯಾದಾಂ= ಇದೇ ಪ್ರಲಯಪ್ರಕಾರವನ್ನೇ, ವದಂತಿ= ಹೇಳುತ್ತಾರೆ, ಏವಂ ಚ= ಆ ಕಾರಣದಿಂದ, ಉಪಾದಾನ ನಾಶಾತ್= ಉಪಾದಾನ ನಾಶದಿಂದ, ಕಾರ್ಯನಾಶಃ= ಕಾರ್ಯನಾಶವು ಉಂಟಾಗುವುದು, ಕದಾ= ಯಾವಾಗ ಎಂದು, ವದ= ಹೇಳು.

**ಅನುವಾದ– ಎಲ್ಲ ವಾದಿಗಳು ಇದೇ ಪ್ರಲಯಪ್ರಕಾರವನ್ನೇ ಹೇಳುತ್ತಾರೆ. ಹೀಗಿರುವಾಗ ಉಪಾದಾನದ ನಾಶದಿಂದ ಕಾರ್ಯನಾಶವು ಯಾವಾಗ ಉಂಟಾಗುತ್ತದೆ ಎಂದು ಹೇಳು.**

**ಭಾವವಿಲಾಸಿನೀ – ರೂಪದ್ವಯೇನ ಕಾರ್ಯರೂಪೇಣ ಸಾಕ್ಷಾತ್ ಸ್ವಕಾರಣರೂಪೇಣ ಚ ॥ ೩೦೪-೦೬ ॥**

**ವಿವರಣೆ–** ಅದ್ವೈತಿಗಳು ಮೊದಲು ಉಪಾದಾನವಾದ ಅಜ್ಞಾನದ ನಾಶ, ಅದರಿಂದ ಅನಂತರ ಕಾರ್ಯವಾದ ಜಗತ್ತಿನ ನಾಶ ಎಂದು ಹೇಳುತ್ತಾರೆ. ಆದರೆ ಸ್ಮೃತಿ-ಸೂತ್ರಗಳಿಗೆ ಅನುಸಾರವಾಗಿ ಎಲ್ಲ ವಾದಿಗಳು, ಮೊದಲು ಕಾರ್ಯದ ನಾಶ, ಅನಂತರ ಕಾರಣದ ನಾಶ, ಅನಂತರ ಅದರ ಕಾರಣದ ನಾಶ. ಹೀಗೆ ಪ್ರಕೃತಿಯವರೆಗೆ ಹೋಗಿ ಪ್ರಲಯರೂಪವಾದ ನಾಶವನ್ನು ಅಂಗೀಕರಿಸುತ್ತಾರೆ. ಆದ್ದರಿಂದ ಕಾರ್ಯನಾಶದಿಂದ ಕಾರಣನಾಶವಾಗಬಹುದೇ ಹೊರತು, ನಿನಗೆ ಅಭಿಮತವಾದ ಕಾರಣನಾಶದಿಂದ ಕಾರ್ಯನಾಶವು ಅಪ್ರಾಮಾಣಿಕವಾದುದು ಎಂದು ಅಭಿಪ್ರಾಯ.

**ತಸ್ಮಾದನಾದಿತೋನಂತಬ್ರಹ್ಮಾಂಡಾನಾಂ ಲಯೇ ಲಯೇ ।**
**ಅಜ್ಞಾನಚ್ಛೇದತಚ್ಛೇದೋ ನ ದ್ವೇಧಾಪೀತಿ ಧೀರ್ಮಮ ।**
**ಅದ್ಯಾಪ್ಯಜ್ಞಾನವಿಶಿಷ್ಟೈರ್ನಷ್ಟೈಶ್ಚೋಕ್ತವಿಧತ್ವತಃ ॥ ೩೦೭ ॥**

**ಅರ್ಥ–** ಅದ್ಯಾಪಿ= ಈಗಲೂ ಕೂಡ, ಅಜ್ಞಾನವಿಶಿಷ್ಟೇಃ= ಅಜ್ಞಾನವು ಉಳಿದಿರುವುದರಿಂದ, ಚ= ಮತ್ತು, ನಷ್ಟೇಃ= ನಾಶವು, ಉಕ್ತವಿಧತ್ವತಃ= ಉಕ್ತಪ್ರಕಾರವಾಗಿರುವುದರಿಂದ, ಅನಾದಿತಃ= ಅನಾದಿಕಾಲದಿಂದಲೂ, ಅನಂತ ಬ್ರಹ್ಮಾಂಡಾನಾಂ= ಅನಂತಬ್ರಹ್ಮಾಂಡಗಳ, ಲಯೇ ಲಯೇ= ಪ್ರತಿ ಪ್ರಲಯದಲ್ಲಿಯೂ, ತಸ್ಮಾತ್= ಆ ಕಾರಣದಿಂದ, ಅಜ್ಞಾನಚ್ಛೇದಕಃ= ಅಜ್ಞಾನನಾಶದಿಂದ, ಭೇದಃ= ಜಗನ್ನಾಶವು, ದ್ವೇಧಾಪಿ= ಎರಡು ರೀತಿಯಲ್ಲಿಯೂ ಕೂಡ, ನ ಇತಿ= ಇಲ್ಲವೆಂದು, ಮಮ ಧೀಃ= ನನ್ನ ಅಭಿಪ್ರಾಯ.

**ಅನುವಾದ–** ಆದ್ದರಿಂದ ಅನಾದಿಕಾಲದಿಂದ ಅನಂತಬ್ರಹ್ಮಾಂಡಗಳು ಲಯವನ್ನು ಹೊಂದುತ್ತಿದ್ದರೂ ಅಜ್ಞಾನವು ಇನ್ನೂ ಉಳಿದಿರುವುದರಿಂದ ಮತ್ತು ನಾಶವು ಉಕ್ತಪ್ರಕಾರವಾಗಿರುವುದರಿಂದ ಅಜ್ಞಾನನಾಶದಿಂದ ಜಗನ್ನಾಶವು ಎರಡು ರೀತಿಯಿಂದಲೂ ಸಂಭವಿಸಲಿಲ್ಲ ಎಂದು ನನ್ನ ಅಭಿಪ್ರಾಯ.

**ವಿವರಣೆ–** ಪ್ರತಿ ಪ್ರಲಯದಲ್ಲಿಯೂ ಜಗನ್ನಾಶವಾಗುತ್ತದೆ. ಆದರೆ ಅಜ್ಞಾನ ನಾಶವಾಗುವುದಿಲ್ಲ. ಏಕೆಂದರೆ ಅಜ್ಞಾನವು ಈಗಲೂ ಇದೆ. ಆದ್ದರಿಂದ ಅಜ್ಞಾನ ನಾಶದಿಂದ ಜಗನ್ನಾಶವೆಂಬ ಪ್ರಕಾರವು ಸರಿಯಲ್ಲ. ಹಿಂದೆ ಹೇಳಿದಂತೆ ಕಾರ್ಯನಾಶದ ನಂತರ ಕಾರಣದ ನಾಶ ಉಂಟಾಗುವುದೇ ಹೊರತು, ಕಾರಣನಾಶದಿಂದ ಕಾರ್ಯನಾಶ ಉಂಟಾಗುವುದಿಲ್ಲ. ನೀನು ಅಜ್ಞಾನವು ಜಗತ್ತಿಗೆ ಕಾರಣವೆಂದು ಒಪ್ಪಿರುವುದರಿಂದ ಈ ರೀತಿಯಿಂದಲೂ ಜಗತ್ತಿನ ನಾಶ ಉಂಟಾಗಲಿಲ್ಲ. ಆದ್ದರಿಂದ ಎರಡು ರೀತಿಯಿಂದಲೂ ಅಜ್ಞಾನನಾಶದಿಂದ ಜಗನ್ನಾಶವಿಲ್ಲ ಎಂದು ಅಭಿಪ್ರಾಯ.

ಯಸ್ತೇ ಸರ್ವಲಯೋ ಮುಕ್ತ್ಯೈ ತತ್ರಾಪ್ಯೇಷ ಲಯಕ್ರಮಃ ।
ಪೃಥಿವ್ಯಪ್ಸು ವಿಲೀನಾ ಸ್ಯಾತ್ತಸ್ತೇಜಸ್ಯನಿಲೇ ಚ ತತ್ ॥ ೩೦೮ ॥

ಸ ವ್ಯೋಮ್ನಿ ತದಹಂಕಾರೇ ಮಹತ್ತತ್ವೇ ಸ ಲೀಯತೇ ।
ತನ್ಮಾಯಾಯಾಂ ಸಾ ಚ ಮಾಯಾಜ್ಞಾನೇ ಲೀನಾ ಭವೇತ್ತವ ॥ ೩೦೯ ॥

**ಅರ್ಥ–** ತೇ= ನಿನಗೆ, ಮುಕ್ತ್ಯೈ= ಪರಮಮೋಕ್ಷಕ್ಕಾಗಿ, ಯಃ= ಯಾವ, ಸರ್ವಲಯಃ= ಸರ್ವನಾಶವು ಅಭಿಪ್ರೇತವಾಗಿದೆಯೋ, ತತ್ರಾಪಿ= ಅಲ್ಲಿಯೂ ಸಹ, ಲಯಕ್ರಮಃ= ಲಯದ ಕ್ರಮವು, ಏಷಃ= ಇದೇ ರೀತಿಯಾಗಿರುತ್ತದೆ. ಪೃಥಿವಿ= ಭೂಮಿಯು, ಅಪ್ಸು= ಜಲದಲ್ಲಿ, ವಿಲೀನಾ ಸ್ಯಾತ್= ಲಯವನ್ನು ಹೊಂದುತ್ತದೆ, ತಾಃ= ಜಲವು, ತೇಜಸಿ= ತೇಜಸ್ಸಿನಲ್ಲಿ, ಚ= ಮತ್ತು, ತತ್= ಆ ತೇಜಸ್ಸು, ಅನಿಲೇ= ವಾಯುವಿನಲ್ಲಿ, ಸಃ= ಆ ವಾಯುವು, ವ್ಯೋಮ್ನಿ= ಆಕಾಶದಲ್ಲಿ, ತತ್= ಆ ಆಕಾಶವು, ಅಹಂಕಾರೇ= ಅಹಂಕಾರತತ್ವದಲ್ಲಿ, ಸಃ= ಆ

ಅಹಂಕಾರತತ್ವವು, ಮಹತ್ತತ್ವೇ= ಮಹತ್ತತ್ವದಲ್ಲಿ, ಲೀಯತೇ= ಲಯವನ್ನು ಹೊಂದುತ್ತದೆ, ತತ್= ಆ ಮಹತ್ತತ್ವವು, ತವ= ನಿನ್ನ ಮತದಂತೆ, ಮಾಯಾಯಾಂ= ಮಾಯೆಯಲ್ಲಿ, ಸಾ ಚ ಮಾಯಾ= ಆ ಮಾಯೆಯಾದರೂ, ಅಜ್ಞಾನೇ= ಅಜ್ಞಾನದಲ್ಲಿ, ಲೀನಾ ಭವೇತ್= ಲಯವನ್ನು ಹೊಂದುತ್ತದೆ.

**ಅನುವಾದ–** ನೀನು ಪರಮಮೋಕ್ಷಕ್ಕಾಗಿ ಯಾವ ಸರ್ವಲಯವನ್ನು ಅಭಿಪ್ರಾಯ ಪಡುತ್ತೀಯೋ ಅಲ್ಲಿಯೂ ಇದೇ ಲಯಕ್ರಮವಷ್ಟೆ? ಭೂಮಿಯು ಜಲದಲ್ಲಿ ಲಯವನ್ನು ಹೊಂದುತ್ತದೆ. ಜಲವು ತೇಜಸ್ಸಿನಲ್ಲಿ, ತೇಜಸ್ಸು ವಾಯುವಿನಲ್ಲಿ, ವಾಯುವು ಆಕಾಶದಲ್ಲಿ, ಆಕಾಶವು ಅಹಂಕಾರದಲ್ಲಿ, ಅಹಂಕಾರವು ಮಹತ್ತತ್ವದಲ್ಲಿ ಲಯವನ್ನು ಹೊಂದುತ್ತದೆ. ನಿನ್ನ ಮತದಂತೆ ಮಹತ್ತತ್ವವು ಮಾಯೆಯಲ್ಲಿ, ಆ ಮಾಯೆಯಾದರೂ ಅಜ್ಞಾನದಲ್ಲಿ ಲಯವನ್ನು ಹೊಂದುತ್ತದೆ.

**ವಿವರಣೆ–** ಅದ್ವೈತಿಗಳು ಮಾಯೆಯನ್ನು ಅಜ್ಞಾನಕಾರ್ಯವೆಂದು ಹೇಳುವುದರಿಂದ ಮಹತ್ತತ್ವವು ಮಾಯೆಯಲ್ಲಿ ಮಾಯೆಯು ಅಜ್ಞಾನದಲ್ಲಿ ಲಯವನ್ನು ಹೊಂದುತ್ತದೆ ಎಂದು ಅವರ ಮತದ ಪ್ರಕ್ರಿಯೆಯಂತೆ ಅನುವಾದ.

ಮಮ ತು ಪ್ರಲಯೇ ಸರ್ವಾ ವಿಕೃತಿಃ ಪ್ರಕೃತಿಂ ವಿಶೇತ್ ।
ಸಾ ಚ ಪ್ರಕೃತಿರೇವಾಸ್ಯಾ ಲಯೋ ನೇತಿ ಪರಂ ಮತಮ್ ।
ಏವಂ ಚಾಜ್ಞಾನನಾಶೇನ ನಾಶೋ ದೇಶಾಂತರಂ ಗತಃ ॥ ೩೧೦ ॥

**ಅರ್ಥ–** ಪರಂ ಮಮ ತು= ಆದರೆ ನನಗಾದರೂ, ಪ್ರಲಯೇ= ಪ್ರಲಯಕಾಲದಲ್ಲಿ, ಸರ್ವಾ ವಿಕೃತಿಃ= ವಿಕೃತಿಯೆಲ್ಲವೂ, ಪ್ರಕೃತಿಂ= ಪ್ರಕೃತಿಯನ್ನು, ವಿಶೇತ್= ಪ್ರವೇಶಿಸುತ್ತದೆ, ಸಾ ಚ= ಪ್ರಕೃತಿಯಾದರೂ, ಪ್ರಕೃತಿರೇವ= ಪ್ರಕೃತಿಯಾಗಿಯೇ ಉಳಿಯುತ್ತದೆ, ಅಸ್ಯ= ಈ ಪ್ರಕೃತಿಗೆ, ಲಯೋ ನೇತಿ= ಲಯವಿಲ್ಲವೆಂದು, ಮತಮ್= ಅಭಿಪ್ರೇತವಾಗಿದೆ, ಏವಂ ಚ= ಹೀಗಾಗಿ, ಅಜ್ಞಾನನಾಶೇನ= ಅಜ್ಞಾನನಾಶದಿಂದ, ನಾಶಃ= ಜಗನ್ನಾಶವು, ದೇಶಾಂತರಂ ಗತಃ= ದೇಶಾಂತರಕ್ಕೆ ಹೋಯಿತು.

**ಅನುವಾದ–** ಆದರೆ ನನಗಾದರೂ ಪ್ರಲಯಕಾಲದಲ್ಲಿ ಎಲ್ಲಾ ವಿಕೃತಿಯು ಪ್ರಕೃತಿಯನ್ನು ಪ್ರವೇಶಿಸುತ್ತದೆ. ಆ ಪ್ರಕೃತಿಯಾದರೂ ಪ್ರಕೃತಿಯಾಗಿಯೇ ಉಳಿಯುತ್ತದೆ (ಆದ್ದರಿಂದಲೇ ಅದಕ್ಕೆ ಪ್ರಕೃತಿ ಎಂದು ಹೆಸರು). ಈ ಪ್ರಕೃತಿಗಾದರೂ ಲಯವಿಲ್ಲ ಎಂದು ಅಭಿಪ್ರಾಯ. ಆದ್ದರಿಂದ ಅಜ್ಞಾನನಾಶದಿಂದ ಜಗನ್ನಾಶವು ದೇಶಾಂತರಕ್ಕೆ ಹೋಯಿತು.

**ವಿವರಣೆ–** ನಿನ್ನ ಪ್ರಲಯಪ್ರಕ್ರಿಯೆಯಲ್ಲಿಯೂ ಅಜ್ಞಾನದ ನಾಶವು ಕೊನೆಯ ನಾಶ. ಆದ್ದರಿಂದ ಅಜ್ಞಾನನಾಶದಿಂದ ಜಗನ್ನಾಶವೆಂಬುದು ಇಲ್ಲ. ನನ್ನ ಪ್ರಕ್ರಿಯೆಯಲ್ಲಿ ನೀನು ಯಾವುದನ್ನು ಅಜ್ಞಾನವೆಂದು ಕರೆಯುತ್ತೀಯೋ, ಅಂತಹ ವಸ್ತುವನ್ನು ನಾನು ಪ್ರಕೃತಿ

ಎಂದು ಕರೆಯುತ್ತೇನೆ. ಅದಕ್ಕೆ ಲಯವೇ ಇಲ್ಲ. ಆದ್ದರಿಂದ ನನ್ನ ಪ್ರಕ್ರಿಯೆಯಿಂದಲೂ ಕಾರಣನಾಶದಿಂದ ಕಾರ್ಯನಾಶವುಂಟಾಗಲಿಲ್ಲ. ಆದ್ದರಿಂದ ಅಜ್ಞಾನರೂಪವಾದ ಕಾರಣನಾಶದಿಂದ ಕಾರ್ಯವಾದ ಜಗತ್ತಿನ ನಾಶವೆಂಬ ನಿನ್ನ ಪ್ರಮೇಯವು ದೇಶಾಂತರಕ್ಕೆ ಹೋಯಿತು ಎಂದು ಅಭಿಪ್ರಾಯ.

**ಭಾವವಿಲಾಸಿನೀ–** ದ್ವೇಧಾ ವಿಪರ್ಯಯೇಣ ತು ಲಯ ಇತಿ ಸೂತ್ರೇ ಉಪಾದಾನ ನಾಶದ್ವಾರಾ ಜಗನ್ನಾಶಸ್ಯಾಪ್ರಸ್ತುತತ್ವಾತ್ । ಅಜ್ಞಾನನಾಶದ್ವಾರಾ ನಾಶಸ್ಯ ಸುತರಾಮಭಾವಾಚ್ಚ । ದ್ವೇಧೇತ್ಯಸ್ಯಾಭಿಪ್ರಾಯಾಂತರ ಮಾಹ – **ಅದ್ಯಾಪೀತಿ** ॥ ಅನಾದಿಕಾಲತೋ ಜಗತಃ ಕಲ್ಪೇ ಕಲ್ಪೇ ವಿನಿಷ್ಪತ್ತಾತ್ ಅಜ್ಞಾನಸ್ಯ ಚಾದ್ಯಾಪ್ಯರ್ವರಿತತ್ವಾದಿತ್ಯರ್ಥಃ। ಭೇದೋ ಜಗನ್ನಾಶಃ ॥ ೩೦೭-೩೧೦ ॥

**ಭೂಯಾಶ್ಚಾಂತೇ ವಿಶ್ವಮಾಯಾನಿವೃತ್ತಿರಿತಿ ಹಿ ಶ್ರುತಿಃ ।**
**ಅತೋ ನ ಲೌಕಿಕೀನಾಪಿ ವೈದಿಕೀಯಂ ಸ್ಥಿತಿಸ್ತವಃ ॥ ೩೧೧ ॥**

**ಅರ್ಥ–** ಶ್ರುತಿ= ಶ್ರುತಿಯಾದರೊ, ಭೂಯಾಶ್ಚಾಂತೇ ವಿಶ್ವಮಾಯಾನಿವೃತ್ತಿಃ ಇತಿ= ಮತ್ತು ಕೊನೆಯಲ್ಲಿ ವಿಶ್ವಮಾಯಾ ನಿವೃತ್ತಿಯಾಗುತ್ತದೆ ಎಂದು, ಹಿ= ಇದೆಯಷ್ಟೆ, ಅತಃ= ಆದ್ದರಿಂದ, ತವ ಇಯಂ ಸ್ಥಿತಿಃ= ನಿನ್ನ ಈ ಪ್ರಕ್ರಿಯೆಯು, ನ ಲೌಕಿಕೀ= ಲೌಕಿಕವೂ ಅಲ್ಲ, ನಾಪಿ ವೈದಿಕೀ= ವೈದಿಕವೂ ಅಲ್ಲ.

**ಅನುವಾದ–** ಶ್ರುತಿಯಾದರೊ ಮತ್ತು ಕೊನೆಯಲ್ಲಿ ವಿಶ್ವಮಾಯಾ ನಿವೃತ್ತಿಯಾಗುತ್ತದೆ ಎಂದು ಹೇಳುತ್ತದೆಯಷ್ಟೆ. ಆದ್ದರಿಂದ ಈ ನಿನ್ನ ಪ್ರಕ್ರಿಯಾಸ್ಥಿತಿಯು ಲೋಕಸಮ್ಮತವಾದುದೂ ಅಲ್ಲ, ವೇದಸಮ್ಮತವಾದುದೂ ಅಲ್ಲ.

**ವಿವರಣೆ–** ಲೋಕದಲ್ಲಿ ಘಟಾದಿ ನಾಶವೆಂದರೆ ಮುದ್ಗರದಿಂದ ಘಟನಾಶ, ಅನಂತರ ಕಪಾಲದ ನಾಶ, ಅನಂತರ ಕಪಾಲದ ಅವಯವದ ನಾಶ, ಅನಂತರ ಅದರ ಅವಯವದ ನಾಶ. ಹೀಗೆ ಕಾರ್ಯನಾಶದಿಂದ ಕಾರಣನಾಶದ ಕಡೆಗೆ ಹೋಗುತ್ತದೆ. ವೇದವಂತೂ ಪೃಥಿವ್ಯಾದಿಭೂತರೂಪವಾದ ಕಾರ್ಯಗಳ ನಾಶವೆಲ್ಲಾ ಆದಮೇಲೆ ಕೊನೆಯಲ್ಲಿ ಮಾಯಾನಾಶವನ್ನು ಹೇಳುತ್ತಿದೆ. ಆದ್ದರಿಂದ ನಿನ್ನ ಪ್ರಕ್ರಿಯೆಯು ಲೋಕಸಮ್ಮತವೂ ಅಲ್ಲ, ವೇದಸಮ್ಮತವೂ ಅಲ್ಲ ಎಂದು ಅಭಿಪ್ರಾಯ.

**ಭಾವವಿಲಾಸಿನೀ–** ತದಭಿಮತ ಶ್ರುತ್ಯೈವ ಜಗನ್ನಾಶೋತ್ತರಕಾಲಮಜ್ಞಾನನಾಶಂ ಪ್ರತಿಪಾದಯತಿ ॥ **ಭೂಯ ಇತಿ** ॥ ವಿಶ್ವಮಾಯಾ ವಿಶ್ವೋಪಾದಾನಭೂತಮಾಯಾ । ತಸ್ಯಾಶ್ಚಾಂತೇ ನಿವೃತ್ತಿಶ್ರವಣಾತ್ ತನ್ನಾಶೋತ್ತರಕಾಲೇ ಜಗನ್ನಾಶಸ್ತ್ವಯಾಪಿ ವಕ್ತುಂ ನ ಶಕ್ಯತ ಇತಿ ಭಾವಃ ॥ ೩೧೧ ॥

ತ್ವತ್ ಪ್ರಕ್ರಿಯಾಲಯವ್ಯಾಪ್ತಾ ಯಸ್ಮಾತ್ ಸರ್ವೇ ಮಹಾಲಯಾಃ ।
ತತ್ ಸೂತ್ರಸೂತ್ರಿತಾರ್ಥಾಖ್ಯರತ್ನಮಾಲಾಪಕರ್ಷಣಮ್ ॥
ಯಃ ಕರೋತಿ ನರಾಕಾರೋ ವಾನರಃ ಸ ನ ಸಂಶಯಃ ॥ ೩೧೨ ॥

**ಅರ್ಥ–** ಯಸ್ಮಾತ್=ಯಾವ ಕಾರಣದಿಂದ, ಸರ್ವೇ=ಎಲ್ಲ ಮಹಾಲಯಾಃ= ಮಹಾಪ್ರಲಯಗಳು, ತ್ವತ್ಪ್ರಕ್ರಿಯಾಲಯವ್ಯಾಪ್ತಾಃ=ಅದ್ವೈತ ಪ್ರಕ್ರಿಯೆಯ ವೈಪರೀತ್ಯದಿಂದ ವ್ಯಾಪ್ತವಾಗಿವೆಯೊ, ತತ್=ಆ ಕಾರಣದಿಂದ, ಯಃ=ಯಾರು, ಸೂತ್ರ ಸೂತ್ರಿತಾರ್ಥಾಖ್ಯರತ್ನ ಮಾಲಾಪಕರ್ಷಣಂ=ಬ್ರಹ್ಮಸೂತ್ರವೆಂಬ ದಾರದಿಂದ ಪೋಣಿಸಿದ ಅರ್ಥವೆಂಬ ರತ್ನಗಳ ಸರದ ಎಳೆಯುವಿಕೆಯನ್ನು, ಕರೋತಿ=ಮಾಡುತ್ತಾನೊ, ಸಃ=ಅವನು, ನರಾಕಾರಃ= ಮನುಷ್ಯಾಕಾರವಿರುವ, ವಾನರಃ= ಕಪಿಯು, ನ ಸಂಶಯಃ= ಸಂಶಯವಿಲ್ಲ.

**ಅನುವಾದ** - ಎಲ್ಲ ಮಹಾಪ್ರಲಯಗಳಲ್ಲೂ ನೀವು ಹೇಳುವಂತೆ ಉಪಾದಾನ ನಾಶದಿಂದ ಕಾರ್ಯನಾಶವಲ್ಲ. ಕಿಂತು ಅದಕ್ಕೆ ವಿರುದ್ಧವಾಗಿ ಲಯವಾಗುತ್ತದೆ. ಆದ್ದರಿಂದ, ನೀವು ಬ್ರಹ್ಮಸೂತ್ರಾರ್ಥವಾದ ಜ್ಞಾನವೇ ಬಂಧನಿವರ್ತಕವೆಂಬ ಅರ್ಥಕ್ಕೆ ವಿರುದ್ಧವಾಗಿ ಮಾತನಾಡುತ್ತಿರುವುದರಿಂದ ಬ್ರಹ್ಮಸೂತ್ರವೆಂಬ ದಾರದಿಂದ ಪೋಣಿಸಿದ ಅರ್ಥಗಳೆಂಬ ರತ್ನಗಳ ಹಾರವನ್ನು ಅಪಹರಿಸಿದಂತಾಯಿತು. ರತ್ನಹಾರವನ್ನು ಎಳೆಯುವುದು ವಾನರದ (ಕಪಿಯ) ಸ್ವಭಾವವಾದ್ದರಿಂದ ನೀವು ನರಾಕಾರದ ವಾನರರು ಎನ್ನುವುದರಲ್ಲಿ ಸಂಶಯವಿಲ್ಲ.

**ಭಾವವಿಲಾಸಿನೀ–** ತ್ವತ್ಪ್ರಕ್ರಿಯಾಲಯವ್ಯಾಪ್ತಾಃ ತ್ವತ್ಪ್ರಕ್ರಿಯಾಯಾ ಲಯೇನ ನಾಶೇನ ವೈಪರೀತ್ಯೇನೇತ್ಯರ್ಥಃ । ವ್ಯಾಪ್ತಾಃ ಸರ್ವೇಽಪಿ ಮಹಾಲಯಾಃ । ಸೃಷ್ಟಿವೈಪರೀತ್ಯೇನೈವ ಲಯೋನತ್ವೇಕೋಽಪಿ ಲಯಸ್ತ್ವದುಕ್ತರೀತ್ಯಾ ಉಪಾದಾನನಾಶದ್ವಾರೇತ್ಯರ್ಥಃ । ಯಥಾ ಮಹಾಲಯ ಶ್ರಾದ್ಧಂ ಲಯವ್ಯಾಪ್ತಂ ತಥೇತಿ ಸೂಚನಾಯ ಮಹಾಲಯ ಇತ್ಯುಕ್ತಮ್ । ಸೂತ್ರಸೂತ್ರಿತಾರ್ಥಃ ಜ್ಞಾನಸ್ಯೈವ ಬಂಧನಿವರ್ತಕತ್ವಮ್ ॥ ೩೧೨ ॥

**ವಿವರಣೆ** - ಸರ್ವೇ ಮಹಾಲಯಾಃ ಲಯವ್ಯಾಪ್ತಾಃ ಎಂಬಲ್ಲಿ ಒಂದು ಶಬ್ದ ಚಮತ್ಕಾರವಿದೆ. ಮಹಾಲಯ ಎಂಬ ಶಬ್ದದಲ್ಲಿ ಲಯ ಶಬ್ದ ಸೇರಿದೆ. ಹೀಗಾಗಿ, ಹೇಗೆ ಮಹಾಲಯ ಶ್ರಾದ್ಧವು ಪಿತೃಗಳ ಲಯದಿಂದ ಕೂಡಿದೆಯೋ ಅದರಂತೆ ನಿನ್ನ ಪ್ರಕ್ರಿಯಾ ಲಯದಿಂದ ಕೂಡಿದೆ. ಬ್ರಹ್ಮಸೂತ್ರವು ನಿನ್ನ ಪ್ರಕ್ರಿಯೆಗಳಿಗೆ ಮಹಾಲಯ ಶ್ರಾದ್ಧ ಮಾಡಿ ಬಿಟ್ಟಿದೆ ಎಂದು ಸೂಚಿಸಲು ಮಹಾಲಯ ಎಂಬ ಶಬ್ದವನ್ನು ಬಳಸಿದ್ದಾರೆ.

ವಿಪರ್ಯಯೇಣ ತು ಲಯಂ ಯಃ ಸೂತ್ರೇ ಸೂತ್ರಯಿಷ್ಯತಿ ।
ಸೋಽಧುನೋಪಾದಾನನಾಶಾತ್ ಕಾರ್ಯನಾಶಂ ನ ಬೋಧಯೇತ್ ॥ ೩೧೩ ॥

**ಅರ್ಥ–** ಯಃ=ಯಾವ ವೇದವ್ಯಾಸರು, ಸೂತ್ರೇ=ವಿಪರ್ಯಯೇಣ ತು ಕ್ರಮೋಽತ ಉಪಪದ್ಯತೇ ಚ (೨-೩-೧೪) ಎಂಬ ಸೂತ್ರದಲ್ಲಿ, ವಿಪರ್ಯಯೇಣ ತು=ಸೃಷ್ಟಿಕ್ರಮಕ್ಕೆ ವಿರುದ್ಧಕ್ರಮದಿಂದ, ಲಯಂ=ಲಯವನ್ನು, ಸೂತ್ರಯಿಷ್ಯತಿ= ಮುಂದೆ ಬರೆಯುವರೋ, ಸಃ=ಅವರು, ಅಧುನಾ=ಈಗ ಅಥಾತೋ ಬ್ರಹ್ಮಜಿಜ್ಞಾಸಾ ಎಂಬ ಸೂತ್ರದಲ್ಲಿ, ಉಪಾದಾನನಾಶಾತ್=ಉಪಾದಾನದ ನಾಶದಿಂದ, ಕಾರ್ಯನಾಶಂ= ಕಾರ್ಯದ ನಾಶವನ್ನು, ನ ಬೋಧಯೇತ್=ಹೇಳುವುದಿಲ್ಲ.

**ಅನುವಾದ** - ಅಥಾತೋ ಬ್ರಹ್ಮಜಿಜ್ಞಾಸಾ ಎಂಬ ಸೂತ್ರವನ್ನು ರಚಿಸಿದವರೇ ಮುಂದೆ ಎರಡನೆಯ ಅಧ್ಯಾಯದಲ್ಲಿ ಸೃಷ್ಟಿಕ್ರಮಕ್ಕೆ ವಿಪರೀತ ಕ್ರಮದಲ್ಲಿ ಲಯ, ಎಂದರೆ, ಮೊದಲು ಕಾರ್ಯನಾಶ. ಅನಂತರದಲ್ಲಿ ಉಪಾದಾನ ನಾಶ - ಎಂದಿದ್ದಾರೆ. ಅಂತಹವರು ಆರಂಭದಲ್ಲಿ ಈ ಸೂತ್ರದಲ್ಲಿ ಉಪಾದಾನನಾಶದಿಂದ ಕಾರ್ಯನಾಶವನ್ನು ಹೇಗೆ ಹೇಳಲು ಸಾಧ್ಯ? ಆದ್ದರಿಂದ ಆ ವ್ಯಾಖ್ಯಾನ ವೇದವ್ಯಾಸರಿಗೆ ಸಮ್ಮತವಲ್ಲ.

**ವಿವರಣೆ** - ವಿಪರ್ಯಯೇಣ ಎಂಬ ಬ್ರಹ್ಮಸೂತ್ರದ ವಿವರಗಳು ಹಿಂದೆ 307ನೇ ಶ್ಲೋಕದ ವಿವರಣೆಯಲ್ಲಿವೆ.

**ಅರ್ಥಸ್ಯಾಸ್ಯಾನರ್ಥದಸ್ಯ ತಸ್ಮಾತ್ ಸೂತ್ರಂ ನ ಸೂಚಕಮ್ ।**
**ತ್ರಿಲೋಕೀಸೂಚಕೋ ಯಸ್ತೇ ಗುರುರಾಸ್ತೇ ಸ ಸೂಚಕಃ ॥ ೩೧೪ ॥**

**ಅರ್ಥ–** ತಸ್ಮಾತ್=ಆದ್ದರಿಂದ, ಅಸ್ಯ=ಈ, ಅನರ್ಥದಸ್ಯ=ಅನರ್ಥಕರವಾದ, ಅರ್ಥಸ್ಯ=ಅರ್ಥಕ್ಕೆ, ಸೂತ್ರಂ= ಅಥಾತೋ ಬ್ರಹ್ಮಜಿಜ್ಞಾಸಾ ಎಂಬ ಸೂತ್ರವು, ನ ಸೂಚಕಂ= ಸೂಚಕವಲ್ಲ, ಯಃ= ಯಾವ, ತ್ರಿಲೋಕೀಸೂಚಕಃ= ಜಗದ್ವಂಚಕನಾದ, ತೇ= ನಿನ್ನ, ಗುರುಃ= ಗುರುವು, ಆಸ್ತೇ= ಇದ್ದಾನೋ, ಸಃ= ಅವನು, ಸೂಚಕಃ= ಉಪಾದಾನನಾಶದಿಂದ ಕಾರ್ಯನಾಶವೆಂಬ ಅರ್ಥದ ಸೂಚಕನು.

**ಅನುವಾದ** - ಈ ಹಿಂದಿನ ಕಾರಣದಿಂದ ಅಥಾತೋ ಎಂಬ ಸೂತ್ರವು ಅನೇಕ ಅನುಪಪತ್ತಿಗಳಿರುವ, ಉಪಾದಾನನಾಶದಿಂದ ಕಾರ್ಯನಾಶವೆಂಬ ಅರ್ಥವನ್ನು ಸೂಚಿಸುವುದಿಲ್ಲ. ಮೂರುಲೋಕದ ಸೂಚಕ= ವಂಚಕನಾದ ಮಾಯಾವಾದೋಪದೇಶಕನು ಈ ಅರ್ಥದ ಸೂಚಕ.

**ಭಾವವಿಲಾಸಿನೀ–** ತ್ರಿಲೋಕೀಸೂಚಕಃ ತ್ರಿಲೋಕ್ಯಾಃ ಪೈಶುನ್ಯಕಾರೀ ॥ ೩೧೪ ॥

**ವಿವರಣೆ** - ಹಿಂದೆ 300ನೇ ಶ್ಲೋಕದಲ್ಲಿ ಅಥಾತೋ ಬ್ರಹ್ಮಜಿಜ್ಞಾಸಾ ಎಂಬ ಸೂತ್ರವು ಜಗತ್ತು ಅಜ್ಞಾನಕಾರ್ಯ ಎಂಬ ಅರ್ಥವನ್ನು ಸೂಚಿಸುವುದಿಲ್ಲ ಎಂದು ಪ್ರಸ್ತುತವಾಗಿದ್ದನ್ನು

ಸಮರ್ಥಿಸಿದಂತಾಯಿತು. ಹಾಗಾದರೆ ಈ ಅರ್ಥಕ್ಕೆ ಯಾರು ಸೂಚಕ ಎಂಬ ಪ್ರಶ್ನೆ ಬಂದರೆ ಮಾಯಾವಾದೋಪದೇಶಕ ಎಂಬ ಉತ್ತರವನ್ನು ಶ್ರೀವಾದಿರಾಜರು ಸೂಚಕ ಶಬ್ದದ ಸ್ವಾರಸ್ಯದಿಂದ ಹೇಳುತ್ತಾರೆ. ಅಮರಕೋಶದಲ್ಲಿ ಕರ್ಣೇಜಪಃ ಸೂಚಕಃ ಸ್ಯಾತ್ ಪಿಶುನ: ಎಂದು ಹೇಳಿದ್ದಾರೆ. ಈ ಶಬ್ದವನ್ನು ಹಲಾಯುಧಕೋಶದಲ್ಲಿ ವ್ಯಾಖ್ಯಾನ ಮಾಡುತ್ತಾ ಮನಸ್ಸಿನಲ್ಲಿ ಇನ್ನಾವುದೋ ಅರ್ಥವನ್ನು ಇಟ್ಟುಕೊಂಡು ಹೊರಗೆ ಬೇರೆ ಮಾತನಾಡುವವನು ಎಂದೂ ವ್ಯಾಖ್ಯಾನ ಮಾಡಲಾಗಿದೆ. ಹೀಗೆ, ಜಗತ್ಸೂಚಕ= ಜಗದ್ವಂಚಕರಾದ ಮಾಯಾವಾದೋಪದೇಶಕರು ಇಂಥ ಅರ್ಥಕ್ಕೆ ಸೂಚಕ ಎಂದು ಶಬ್ದ ಸ್ವಾರಸ್ಯವಾಗಿ ಹೇಳಿದ್ದಾರೆ.

**ಅಜ್ಞಾನಕಾರ್ಯತಾ ಚಾಸ್ಯ ಸಮಸ್ತಸ್ಯ ನ ಯುಜ್ಯತೇ ।**
**ಯದ್ಯಜ್ಞಾನಮುಪಾದಾನಂ ವೃತ್ತ್ಯಾಽಜ್ಞಾನನಿವರ್ತನೇ ॥**
**ತದುಪಾದೇಯಕಾರ್ಯಸ್ಯ ಹ್ಯನಿವೃತ್ತಿಃ ಕಥಂ ವದ ॥ ೩೧೫ ॥**

**ಅರ್ಥ**– ಚ=ಮತ್ತು, ಅಸ್ಯ ಸಮಸ್ತಸ್ಯ=ಈ ಇಡೀ ಜಗತ್ತಿಗೆ, ಅಜ್ಞಾನಕಾರ್ಯತಾ= ಅಜ್ಞಾನ ಕಾರ್ಯತ್ವವು, ನ ಯುಜ್ಯತೇ=ಹೊಂದುವುದಿಲ್ಲ ಹಿ=ಏಕೆಂದರೆ, ಯದಿ=ಒಂದು ವೇಳೆ, ಅಜ್ಞಾನಂ=ಅಜ್ಞಾನವು, ಉಪಾದಾನಂ=ಉಪಾದಾನವಾದರೆ, (ತರ್ಹಿ=ಆ ಪಕ್ಷದಲ್ಲಿ) ವೃತ್ತ್ಯಾ=ವೃತ್ತಿಜ್ಞಾನದಿಂದ, ಅಜ್ಞಾನ ನಿವರ್ತನೇ (ಸತಿ)=ಅಜ್ಞಾನ ನಿವೃತ್ತಿಯಾದಾಗ, ತದುಪಾದೇಯಕಾರ್ಯಸ್ಯ=ಆ ಅಜ್ಞಾನದಿಂದ ಉಂಟಾದ ಜಗತ್ತಿನ, ಅನಿವೃತ್ತಿಃ=ನಿವೃತ್ತಿ ಆಗದಿರುವುದು, ಕಥಂ=ಹೇಗೆ? ವದ=ಹೇಳು.

**ಅನುವಾದ** - ಮತ್ತೊಂದು ಕಾರಣದಿಂದಲೂ ಈ ಜಗತ್ತು ಅಜ್ಞಾನಕಾರ್ಯ ಎನ್ನಲಾಗದು. ಏಕೆಂದರೆ, ವೃತ್ತಿಜ್ಞಾನದಿಂದ ಅಜ್ಞಾನವು ನಾಶ ಹೊಂದುತ್ತದೆ. ಆಗ, ಅದರಿಂದಾದ ಜಗತ್ತು ನಾಶಹೊಂದಬೇಕಾಗಿದ್ದಿತು. ಆದರೆ ಕಾರ್ಯ ನಾಶವಾಗುತ್ತಿಲ್ಲ. ಏಕೆ?

**ಭಾವವಿಲಾಸಿನೀ** – ತದ್ರೀತ್ಯೈವ ಜಗತೋಽಜ್ಞಾನಾನುಪಾದಾನಕತ್ವಂ ಚ ಸಮರ್ಥಯತೇ ॥ **ಅಜ್ಞಾನಕಾರ್ಯತೇತಿ** ॥ ೩೧೫ ॥

**ವಿವರಣೆ** - ಅದ್ವೈತಿಗಳ ರೀತಿಯಿಂದಲೇ ಅಜ್ಞಾನವು ಉಪಾದಾನ ಅಲ್ಲ ಎನ್ನುವುದನ್ನು ಈ ಶ್ಲೋಕದಿಂದ (317 ನೇ ಶ್ಲೋಕದ ವರೆಗೆ) ಸಮರ್ಥಿಸುತ್ತಿದ್ದಾರೆ.

ಇಲ್ಲಿ ಹೇಳಿರುವ ವಿಷಯ ಮುಂದಿನ ಶ್ಲೋಕದ ಉದಾಹರಣೆಯಿಂದ ಸ್ಪಷ್ಟವಾಗುತ್ತದೆ.

**ಘಟವೃತ್ತ್ಯಾ ಘಟಾಜ್ಞಾನನಾಶೇ ನ ಹಿ ಘಟಕ್ಷಯಃ ।**
**ತವಾಪ್ಯಸ್ತಿ ಮತೇ ತಸ್ಮಾತ್ ತದುಪಾದೇಯತಾಪಿ ನ ॥ ೩೧೬ ॥**

**ಅರ್ಥ–** ತವ=ನಿನ್ನ, ಮತೇ ಅಪಿ=ಮತದಲ್ಲೂ, ಘಟವೃತ್ತ್ಯಾ=ಘಟದ ವೃತ್ತಿಜ್ಞಾನದಿಂದ, ಘಟಾಜ್ಞಾನನಾಶೇ (ಸತಿ) =ಘಟಾಜ್ಞಾನದ ನಾಶವಾಗುತ್ತಿರಲು, ಘಟಕ್ಷಯಃ= ಘಟನಾಶವು, ನಾಸ್ತಿ ಹಿ=ಆಗುತ್ತಿಲ್ಲತಾನೇ? ತಸ್ಮಾತ್= ಆದ್ದರಿಂದ, ತದುಪಾದೇಯತಾ ಅಪಿ=ಅಜ್ಞಾನದಿಂದ ಹುಟ್ಟುವಿಕೆಯೂ, ನಾಸ್ತಿ=ಇಲ್ಲ.

**ಅನುವಾದ** - ವೃತ್ತಿಜ್ಞಾನದಿಂದ ಅಜ್ಞಾನನಾಶ ಎನ್ನುವುದು ನಿಮ್ಮ ಮತ. ಎಂದರೆ, ಕಣ್ಣಿನಿಂದ ಘಟದ ವೃತ್ತಿಜ್ಞಾನವಾದಾಗ ಘಟದ ಅಜ್ಞಾನ ನಾಶವಾಗುತ್ತದೆ. ಎಂದರೆ, ನಿಮ್ಮ ಮತದಂತೆ ಘಟೋಪಾದಾನವಾದ ಅಜ್ಞಾನ ನಾಶವಾಯಿತು. ಆದರೆ ಘಟದ ನಾಶ ಆಗಿಲ್ಲ. ಹಾಗಾದರೆ ಘಟಕ್ಕೆ ಅಜ್ಞಾನ ಹೇಗೆ ಉಪಾದಾನವಾದೀತು?

**ಭಾವವಿಲಾಸಿನೀ–** ಘಟಕ್ಷಯೋ ನಾಸ್ತಿ ಹೀತಿ ಸಂಬಂಧಃ ॥ ೩೧೬ ॥

ಉಪಾದಾನಸ್ಯ ಸಂಬಂಧನಾಶೇನಾಪಿ ವಿನಶ್ಯತಃ ।
ಉಪಾದಾನಸ್ಯೈವ ನಾಶೇ ಕಥಂ ನಾಶೋ ನ ಜಾಯತೇ ।
ಅತೋಽಜ್ಞಾನಮುಪಾದಾನಮಿತಿ ರಿಕ್ತಂ ವಚಸ್ತವ ॥ ೩೧೭ ॥

**ಅರ್ಥ–** ಉಪಾದಾನಸ್ಯ=ಉಪಾದಾನದ, ಸಂಬಂಧನಾಶೇನ ಅಪಿ=ಸಂಬಂಧದ ನಾಶದಿಂದಲೂ, ವಿನಶ್ಯತಃ (ವಸ್ತುನಃ)=ನಾಶವಾಗುವ ವಸ್ತುವಿಗೆ, ಉಪಾದಾನಸ್ಯೈವ ನಾಶೇ ಸತಿ= ಉಪಾದಾನದ್ದೇ ನಾಶವಾದಾಗ, ನಾಶಃ=ನಾಶವು, ಕಥಂ=ಹೇಗೆ, ನ ಜಾಯತೇ=ಆಗುವುದಿಲ್ಲ? ಅತಃ=ಆದ್ದರಿಂದ, ಅಜ್ಞಾನಂ=ಅಜ್ಞಾನವು, ಉಪಾದಾನಂ= ಜಗತ್ತಿಗೆ ಉಪಾದಾನವು, ಇತಿ=ಎಂಬ, ತವ=ನಿನ್ನ, ವಚಃ=ಮಾತು, ರಿಕ್ತಂ=ಅರ್ಥಶೂನ್ಯ.

**ಅನುವಾದ** - ಉಪಾದಾನದ ಸಂಬಂಧ ಕಾರ್ಯಕ್ಕೆ ಅಸಮವಾಯಿಕಾರಣ (೧) ಅದು ನಾಶವಾದಾಗಲೂ ಕಾರ್ಯನಾಶವಾಗುತ್ತದೆ ಎಂದ ಮೇಲೆ ಉಪಾದಾನವೇ ನಾಶವಾದಾಗ ಕಾರ್ಯವು ಅವಶ್ಯ ನಾಶವಾಗಬೇಕಿತ್ತು. ಆದರೆ, ಅಜ್ಞಾನವು ನಾಶವಾದರೂ ಘಟ ನಾಶವಾಗುತ್ತಿಲ್ಲ. (೨) ಆದ್ದರಿಂದ ಅಜ್ಞಾನವು ಉಪಾದಾನವೆಂಬ ನಿನ್ನ ಮಾತಿಗೆ ಅರ್ಥವಿಲ್ಲ.

**ಭಾವವಿಲಾಸಿನೀ–** ಉಪಾದಾನಸ್ಯ ತಂತೋಸ್ಸಂಬಂಧನಾಶೇ ಸಂಯೋಗಾಖ್ಯಾ ಸಮವಾಯಿ ಕಾರಣನಾಶೇ । ಏವಂಚ ತತ್ತತ್ಕ್ರಿಯಯೈವಾಜ್ಞಾನನಾಶೇಽಪಿ ಘಟಾದಿಕಾರ್ಯಾಣಾಮನಾಶಾತ್ ಮೃತ್ಪಿಂಡಾದಿನಾಶೇಚನಾಶಾತ್ ಮೃದಾದಿಕಮೇವ ಘಟಾದ್ಯುಪಾದಾನಮಿತಿ ಭಾವಃ ॥ ೩೧೭ ॥

**ವಿವರಣೆ** - (1) ವಸ್ತುವಿಗೆ ಅವಯವಗಳು ಉಪಾದಾನ; ಅವಯವಗಳ ಸಂಬಂಧ ಅಸಮವಾಯಿಕಾರಣ ಎನಿಸುತ್ತದೆ. ಉದಾಹರಣೆಗೆ, ಪಟಕ್ಕೆ ತಂತುಗಳು ಉಪಾದಾನ.

ತಂತುಗಳು ಜೋಡಣೆ (ಸಂಯೋಗ) ಅಸಮವಾಯಿ ಕಾರಣ. ತಂತುಗಳ ಸಂಯೋಗ ನಾಶವಾದರೂ ಪಟ ನಾಶವಾಗುತ್ತದೆ. ತಂತುಗಳೇ ನಾಶವಾದರೂ ನಾಶವಾಗಲೇಬೇಕು ಆಗುತ್ತದೆ ಕೂಡ.

(2) ಹಿಂದಿನ ಶ್ಲೋಕದಲ್ಲಿ ಹೇಳಿದಂತೆ ಅದ್ವೈತಿಗಳು ಹೇಳುವ ಅಜ್ಞಾನವೆಂಬ ಉಪಾದಾನ ನಾಶವಾದರೂ ಘಟದ ನಾಶವಾಗುತ್ತಿಲ್ಲ. ಇದಕ್ಕೆ ವ್ಯತಿರಿಕ್ತವಾಗಿ ಮೃತ್ (ಮಣ್ಣು) ನಾಶವಾದಾಗ ಘಟದ ನಾಶವಾಗುತ್ತದೆ. ಇದರಿಂದ ಮೃತ್ತೇ ಘಟಕ್ಕೆ ಉಪಾದಾನ; ಅಜ್ಞಾನವಲ್ಲ ಎಂದು ಸಿದ್ಧವಾಗುತ್ತದೆ.

**ಹೇಳಿದ ವಿಷಯವನ್ನು ಅನುಮಾನರೂಪದಿಂದ ಕಥನ ಮಾಡುತ್ತಾರೆ-**

**ತದಜ್ಞಾನಾನುಪಾದಾನವಸ್ತುತ್ವಾದ್ ಬ್ರಹ್ಮವಜ್ಜಗತ್ ।**
**ಸದಾ ಸತ್ ಸ್ಯಾನ್ನ ಚೇನ್ನ ಸ್ಯಾತ್ ಪ್ರತಿಕರ್ಮವ್ಯವಸ್ಥಿತಿಃ ॥ ೩೧೮ ॥**

**ಅರ್ಥ**– ತತ್= ಆದ್ದರಿಂದ, ಜಗತ್= ಜಗತ್ತು, ಸದಾ ಸತ್ ಸ್ಯಾತ್=ಯಾವಾಗಲೂ ಸತ್ಯವಾಗಬೇಕು, ಏಕೆಂದರೆ, ಅಜ್ಞಾನಾನುಪಾದಾನವಸ್ತುತ್ವಾತ್=ಅಜ್ಞಾನವು ಉಪಾದಾನ ವಾಗಿರದ ವಸ್ತುವಾದ್ದರಿಂದ, ಬ್ರಹ್ಮವತ್=ಬ್ರಹ್ಮನಂತೆ. (೧) ನ ಚೇತ್=ಹೀಗಲ್ಲದಿದ್ದರೆ, ಪ್ರತಿಕರ್ಮವ್ಯವಸ್ಥಿತಿಃ= ಪ್ರಪಂಚದ ಎಲ್ಲ ಪದಾರ್ಥಗಳೂ ಬ್ರಹ್ಮನಲ್ಲಿಯೇ ಇದ್ದರೂ ಕೂಡ ಅವುಗಳಲ್ಲಿ ಯಾರ ಕಣ್ಣಿಗೆ ಯಾವ ಪದಾರ್ಥದ ಸಂಬಂಧವಾಗುವುದೋ ಅವನಿಗೆ ಮಾತ್ರ ಆ ಪದಾರ್ಥ ಕಾಣುತ್ತದೆ ಹೊರತು ಎಲ್ಲ ಪದಾರ್ಥ ಎಲ್ಲರಿಗೂ ಕಾಣಿಸುವುದಿಲ್ಲ ಎಂಬ ಪ್ರತಿಕರ್ಮವ್ಯವಸ್ಥೆಯು, (೨) ನ ಸ್ಯಾತ್=ಇಲ್ಲದೆ ಹೋದೀತು.

**ಅನುವಾದ** - ಬ್ರಹ್ಮನಿಗೆ ಅಜ್ಞಾನವು ಉಪಾದಾನವಲ್ಲ; ಮತ್ತು ಅವನು ಸರ್ವದಾ ಸತ್ಯನೂ ಆಗಿದ್ದಾನೆ. ಅದರಂತೆ, ಇಲ್ಲಿಯವರೆಗೆ ಸಮರ್ಥನೆ ಮಾಡಿದಂತೆ ಜಗತ್ತಿಗೆ ಅಜ್ಞಾನವು ಉಪಾದಾನವಲ್ಲವಾದ್ದರಿಂದ ಅದೂ ಸರ್ವದಾ ಸತ್ಯವೇ ಆಗಿರಬೇಕು. ಇಲ್ಲದಿದ್ದರೆ, ಪ್ರತಿಕರ್ಮವ್ಯವಸ್ಥೆಯನ್ನು ಹೊಂದಿಸಲು ಆಗುವುದಿಲ್ಲ.

**ಭಾವವಿಲಾಸಿನೀ**– ಪರಪ್ರಕ್ರಿಯಯೈವ ಸಿದ್ಧತ್ವಾತ್ ಪ್ರಾಕ್‌ಸೂಚಿತಸ್ಯಾಪ್ಯನುಮಾನಸ್ಯ ಪುನರ್ವಚನಂ ॥ ೩೧೮ ॥

**ವಿವರಣೆ** - ಇಲ್ಲಿಯವರೆಗೆ ಹೇಳಿದಂತೆ ಪರರು ಒಪ್ಪುವ ರೀತಿಯಿಂದಲೇ ಜಗತ್ತಿಗೆ ಉಪಾದಾನ ಅಜ್ಞಾನ ಅಲ್ಲ ಎಂದು ತೀರ್ಮಾನವಾಗಿದೆ. ಆ ವಿಷಯವನ್ನೇ ಅನುಮಾನದ ರೀತಿಯಲ್ಲಿ ಹೇಳುತ್ತಿದ್ದಾರೆ.

(1) ಪರ್ವತಃ, ವಹ್ನಿಮಾನ್, ಧೂಮಾತ್, ಮಹಾನಸವತ್ ಎಂಬಲ್ಲಿ ಪಕ್ಷ - ಸಾಧ್ಯ - ಹೇತು - ದೃಷ್ಟಾಂತಗಳನ್ನು ಹೇಳಿದಂತೆ ಇಲ್ಲಿ ಜಗತ್ ಎಂದು ಪಕ್ಷದ ನಿರ್ದೇಶ.

ಸದಾ ಸತ್ ಎಂದು ಸಾಧ್ಯ. ಅಜ್ಞಾನಾನುಪಾದಾನ ವಸ್ತುತ್ವಾತ್ ಎಂದು ಹೇತು. ಬ್ರಹ್ಮವತ್ ಎಂದು ದೃಷ್ಟಾಂತ ನಿರ್ದೇಶ.ಅಜ್ಞಾನಂ ಅನುಪಾದಾನಂ ಯಸ್ಯ ತತ್=ಅಜ್ಞಾನಾನುಪಾದಾನಂ. ತಚ್ಚ ತತ್ ವಸ್ತು ಚ=ತಾದೃಶವಸ್ತು. ತಸ್ಯ ಭಾವಃ=ತಾದೃಶವಸ್ತುತ್ವಂ ತಸ್ಮಾತ್ ಎಂದು ಹೇತು ಭಾಗದ ವಿಗ್ರಹ. ಹೇತುರಸ್ತು ಸಾಧ್ಯಂ ಮಾಸ್ತು ಎಂದು ಅಪ್ರಯೋಜಕತ್ವವನ್ನು ನಚೇತ್ ಎಂದು ಶಂಕಿಸಿಕೊಂಡು ಪ್ರತಿಕರ್ಮ ವ್ಯವಸ್ಥಿತಿಃ ನ ಸ್ಯಾತ್ ಎಂದು ಉತ್ತರ ನೀಡಲಾಗಿದೆ.

(2) ಲೋಕದಲ್ಲಿ ಪ್ರತೀಕರ್ಮದಲ್ಲಿ, ಅಂದರೆ ಜ್ಞಾನಕ್ಕೆ ಕರ್ಮವೆನಿಸಿರುವ ವಿಷಯ ಪದಾರ್ಥದಲ್ಲಿ ಅದರ ಬಗ್ಗೆ ಜನರಿಗೆ ಜ್ಞಾನ ಬರುವಲ್ಲಿ ಹೀಗೊಂದು ವ್ಯವಸ್ಥೆಯಿದೆ - ಕಣ್ಣು ತೆರೆದಾಗ ಎದುರಿಗೆ ಯಾವ ವಸ್ತುವಿನ ಸಂಬಂಧ ಯಾರಿಗೆ ಆಗುತ್ತದೊ ಅವರಿಗೆ ಆ ವಸ್ತುವಿನ ಆ ಜ್ಞಾನ ಬರುತ್ತದೆ. ಉದಾ. ಘಟ ಸಂಬಂಧವಿದ್ದಾಗ ಅಯಂ ಘಟಃ ಎಂದು. ಅದೇ ಪ್ರಾತಿಭಾಸಿಕವಾಗಿರುವ ಆರೋಪ ಸ್ಥಳದಲ್ಲಿ ರಜತ ಸಂಬಂಧವಿಲ್ಲದೆಯೇ ಒಬ್ಬನಿಗೆ ಇದಂ ರಜತಂ ಎಂದೂ ರಂಗ ಸಂಬಂಧವಿಲ್ಲದೆಯೇ ಇದಂ ರಂಗಂ (ಸೀಸಂ) ಎಂದೂ ಜ್ಞಾನ ಬರಬಹುದು. ಏಕೆಂದರೆ ನೀವು ಹೇಳುವಂತೆ ಅಲ್ಲಿ ಅಜ್ಞಾನವು ಉಪಾದಾನ.ಪ್ರತಿಕರ್ಮವ್ಯವಸ್ಥೆಯೂ ಇಲ್ಲ. ಜಗತ್ತು ಸತ್ಯವಲ್ಲದೆ ಹೋಗಿದ್ದರೆ (ಸಾಧ್ಯ ಬೇಡ ಎನ್ನುವುದಾದರೆ) ಶುಕ್ತಿರಜತಾದಿಗಳಂತೆ ಅಜ್ಞಾನೋಪಾದಾನಕವೇ ಆಗಿದ್ದರೆ ಪ್ರತಿಕರ್ಮವ್ಯವಸ್ಥೆ ಇಲ್ಲದೆ ಹೋದೀತು ಎಂಬುದು ವಿಪಕ್ಷೇ ಬಾಧಕವಾಗುತ್ತದೆ.

ಅಜ್ಞಾನಾತಿರಿಕ್ತವೇ ಜ್ಞಾನನಾಶ್ಯ - ಲೋಕದೃಷ್ಟಾಂತ-

ಶುಕ್ತೇರಾವರಣೇಽಜ್ಞಾನೇ ನಷ್ಟೇ ಬಾಧಪ್ರಮಾ ಪುನಃ ।
ಇಯಂ ಶುಕ್ತಿರ್ನ ರಜತಮಿತ್ಯಾಕಾರಾ ಹಿ ಜಾಯತೇ ॥ ೩೧೯ ॥

**ಅರ್ಥ–** ಶುಕ್ತೇಃ=ಶುಕ್ತಿಯ, ಆವರಣೇ=ಆವರಣವಾದ, ಅಜ್ಞಾನೇ=ಅಜ್ಞಾನವು, ನಷ್ಟೇ ಸತಿ=ನಾಶವಾಗುತ್ತಿರಲು, ಪುನಃ=ನಂತರ, ಇಯಂ ಶುಕ್ತಿಃ ನ ರಜತಂ=ಇದು ಶುಕ್ತಿ, ರಜತವಲ್ಲ, ಇತ್ಯಾಕಾರಾ=ಎಂಬ, ಬಾಧಪ್ರಮಾ=ಬಾಧಜ್ಞಾನವು, ಜಾಯತೇ ಹಿ= ಹುಟ್ಟಿರುವುದಷ್ಟೆ.

**ಅನುವಾದ - ಶುಕ್ತಿಯಲ್ಲಿ ಇದಂ ರಜತಂ ಎಂಬ ಭ್ರಮೆ ಬರಲು ಕಾರಣ ಶುಕ್ತಿಗೆ ಆವರಣವಾದ ಅಜ್ಞಾನ. ಅದು ಇರುವಷ್ಟು ಕಾಲ ಭ್ರಮೆ ಇದ್ದೇ ಇರುತ್ತದೆ. ಅದು ನಾಶವಾದಾಗಲೇ ಇದು ಶುಕ್ತಿ, ರಜತವಲ್ಲ ಎಂಬ ಬಾಧಕಜ್ಞಾನ ಬರುವುದು. ಹೀಗೆ ಬಾಧಜ್ಞಾನ ಹುಟ್ಟುವ ಮೊದಲೇ ನಷ್ಟವಾಗುವ ಅಜ್ಞಾನವು ಜ್ಞಾನನಾಶ್ಯವಾಗುವುದು ಹೇಗೆ?**

ತಂತುಗಳು ಜೋಡಣೆ (ಸಂಯೋಗ) ಅಸಮವಾಯಿ ಕಾರಣ. ತಂತುಗಳ ಸಂಯೋಗ ನಾಶವಾದರೂ ಪಟ ನಾಶವಾಗುತ್ತದೆ. ತಂತುಗಳೇ ನಾಶವಾದರೂ ನಾಶವಾಗಲೇಬೇಕು ಆಗುತ್ತದೆ ಕೂಡ.

(2) ಹಿಂದಿನ ಶ್ಲೋಕದಲ್ಲಿ ಹೇಳಿದಂತೆ ಅದ್ವೈತಿಗಳು ಹೇಳುವ ಅಜ್ಞಾನವೆಂಬ ಉಪಾದಾನ ನಾಶವಾದರೂ ಘಟದ ನಾಶವಾಗುತ್ತಿಲ್ಲ. ಇದಕ್ಕೆ ವ್ಯತಿರಿಕ್ತವಾಗಿ ಮೃತ್ (ಮಣ್ಣು) ನಾಶವಾದಾಗ ಘಟದ ನಾಶವಾಗುತ್ತದೆ. ಇದರಿಂದ ಮೃತ್ತೇ ಘಟಕ್ಕೆ ಉಪಾದಾನ; ಅಜ್ಞಾನವಲ್ಲ ಎಂದು ಸಿದ್ಧವಾಗುತ್ತದೆ.

**ಹೇಳಿದ ವಿಷಯವನ್ನು ಅನುಮಾನರೂಪದಿಂದ ಕಥನ ಮಾಡುತ್ತಾರೆ-**

**ತದಜ್ಞಾನಾನುಪಾದಾನವಸ್ತುತ್ವಾದ್ ಬ್ರಹ್ಮವಜ್ಜಗತ್ ।**
**ಸದಾ ಸತ್ ಸ್ಯಾನ್ನ ಚೇನ್ನ ಸ್ಯಾತ್ ಪ್ರತಿಕರ್ಮವ್ಯವಸ್ಥಿತಿಃ ॥ ೩೧೮ ॥**

**ಅರ್ಥ–** ತತ್= ಆದ್ದರಿಂದ, ಜಗತ್= ಜಗತ್ತು, ಸದಾ ಸತ್ ಸ್ಯಾತ್=ಯಾವಾಗಲೂ ಸತ್ಯವಾಗಬೇಕು, ಏಕೆಂದರೆ, ಅಜ್ಞಾನಾನುಪಾದಾನವಸ್ತುತ್ವಾತ್=ಅಜ್ಞಾನವು ಉಪಾದಾನ ವಾಗಿರದ ವಸ್ತುವಾದ್ದರಿಂದ, ಬ್ರಹ್ಮವತ್=ಬ್ರಹ್ಮನಂತೆ. (೧) ನ ಚೇತ್=ಹೀಗಲ್ಲದಿದ್ದರೆ, ಪ್ರತಿಕರ್ಮವ್ಯವಸ್ಥಿತಿಃ= ಪ್ರಪಂಚದ ಎಲ್ಲ ಪದಾರ್ಥಗಳೂ ಬ್ರಹ್ಮನಲ್ಲಿಯೇ ಇದ್ದರೂ ಕೂಡ ಅವುಗಳಲ್ಲಿ ಯಾರ ಕಣ್ಣಿಗೆ ಯಾವ ಪದಾರ್ಥದ ಸಂಬಂಧವಾಗುವುದೋ ಅವನಿಗೆ ಮಾತ್ರ ಆ ಪದಾರ್ಥ ಕಾಣುತ್ತದೆ ಹೊರತು ಎಲ್ಲ ಪದಾರ್ಥ ಎಲ್ಲರಿಗೂ ಕಾಣಿಸುವುದಿಲ್ಲ ಎಂಬ ಪ್ರತಿಕರ್ಮವ್ಯವಸ್ಥೆಯು, (೨) ನ ಸ್ಯಾತ್=ಇಲ್ಲದೆ ಹೋದೀತು.

**ಅನುವಾದ** - ಬ್ರಹ್ಮನಿಗೆ ಅಜ್ಞಾನವು ಉಪಾದಾನವಲ್ಲ; ಮತ್ತು ಅವನು ಸರ್ವದಾ ಸತ್ಯನೂ ಆಗಿದ್ದಾನೆ. ಅದರಂತೆ, ಇಲ್ಲಿಯವರೆಗೆ ಸಮರ್ಥನೆ ಮಾಡಿದಂತೆ ಜಗತ್ತಿಗೆ ಅಜ್ಞಾನವು ಉಪಾದಾನವಲ್ಲವಾದ್ದರಿಂದ ಅದೂ ಸರ್ವದಾ ಸತ್ಯವೇ ಆಗಿರಬೇಕು. ಇಲ್ಲದಿದ್ದರೆ, ಪ್ರತಿಕರ್ಮವ್ಯವಸ್ಥೆಯನ್ನು ಹೊಂದಿಸಲು ಆಗುವುದಿಲ್ಲ.

**ಭಾವವಿಲಾಸಿನೀ–** ಪರಪ್ರಕ್ರಿಯಯೈವ ಸಿದ್ಧತ್ವಾತ್ ಪ್ರಾಕ್‌ಸೂಚಿತಸ್ಯಾಪ್ಯನುಮಾನಸ್ಯ ಪುನರ್ವಚನಂ ॥ ೩೧೮ ॥

**ವಿವರಣೆ** - ಇಲ್ಲಿಯವರೆಗೆ ಹೇಳಿದಂತೆ ಪರರು ಒಪ್ಪುವ ರೀತಿಯಿಂದಲೇ ಜಗತ್ತಿಗೆ ಉಪಾದಾನ ಅಜ್ಞಾನ ಅಲ್ಲ ಎಂದು ತೀರ್ಮಾನವಾಗಿದೆ. ಆ ವಿಷಯವನ್ನೇ ಅನುಮಾನದ ರೀತಿಯಲ್ಲಿ ಹೇಳುತ್ತಿದ್ದಾರೆ.

(1) ಪರ್ವತಃ, ವಹ್ನಿಮಾನ್, ಧೂಮಾತ್, ಮಹಾನಸವತ್ ಎಂಬಲ್ಲಿ ಪಕ್ಷ - ಸಾಧ್ಯ - ಹೇತು - ದೃಷ್ಟಾಂತಗಳನ್ನು ಹೇಳಿದಂತೆ ಇಲ್ಲಿ ಜಗತ್ ಎಂದು ಪಕ್ಷದ ನಿರ್ದೇಶ.

ಸದಾ ಸತ್ ಎಂದು ಸಾಧ್ಯ. ಅಜ್ಞಾನಾನುಪಾದಾನ ವಸ್ತುತ್ವಾತ್ ಎಂದು ಹೇತು. ಬ್ರಹ್ಮವತ್ ಎಂದು ದೃಷ್ಟಾಂತ ನಿರ್ದೇಶ.ಅಜ್ಞಾನಂ ಅನುಪಾದಾನಂ ಯಸ್ಯ ತತ್=ಅಜ್ಞಾನಾನುಪಾದಾನಂ. ತಚ್ಚ ತತ್ ವಸ್ತು ಚ=ತಾದೃಶವಸ್ತು. ತಸ್ಯ ಭಾವಃ=ತಾದೃಶವಸ್ತುತ್ವಂ ತಸ್ಮಾತ್ ಎಂದು ಹೇತು ಭಾಗದ ವಿಗ್ರಹ. ಹೇತುರಸ್ತು ಸಾಧ್ಯಂ ಮಾಸ್ತು ಎಂದು ಅಪ್ರಯೋಜಕತ್ವವನ್ನು ನಚೇತ್ ಎಂದು ಶಂಕಿಸಿಕೊಂಡು ಪ್ರತಿಕರ್ಮ ವ್ಯವಸ್ಥಿತಿಃ ನ ಸ್ಯಾತ್ ಎಂದು ಉತ್ತರ ನೀಡಲಾಗಿದೆ.

(2) ಲೋಕದಲ್ಲಿ ಪ್ರತೀಕರ್ಮದಲ್ಲಿ, ಅಂದರೆ ಜ್ಞಾನಕ್ಕೆ ಕರ್ಮವೆನಿಸಿರುವ ವಿಷಯ ಪದಾರ್ಥದಲ್ಲಿ ಅದರ ಬಗ್ಗೆ ಜನರಿಗೆ ಜ್ಞಾನ ಬರುವಲ್ಲಿ ಹೀಗೊಂದು ವ್ಯವಸ್ಥೆಯಿದೆ - ಕಣ್ಣು ತೆರೆದಾಗ ಎದುರಿಗೆ ಯಾವ ವಸ್ತುವಿನ ಸಂಬಂಧ ಯಾರಿಗೆ ಆಗುತ್ತದೊ ಅವರಿಗೆ ಆ ವಸ್ತುವಿನ ಆ ಜ್ಞಾನ ಬರುತ್ತದೆ. ಉದಾ. ಘಟ ಸಂಬಂಧವಿದ್ದಾಗ ಅಯಂ ಘಟಃ ಎಂದು. ಅದೇ ಪ್ರಾತಿಭಾಸಿಕವಾಗಿರುವ ಆರೋಪ ಸ್ಥಳದಲ್ಲಿ ರಜತ ಸಂಬಂಧವಿಲ್ಲದೆಯೇ ಒಬ್ಬನಿಗೆ ಇದಂ ರಜತಂ ಎಂದೂ ರಂಗ ಸಂಬಂಧವಿಲ್ಲದೆಯೇ ಇದಂ ರಂಗಂ (ಸೀಸಂ) ಎಂದೂ ಜ್ಞಾನ ಬರಬಹುದು. ಏಕೆಂದರೆ ನೀವು ಹೇಳುವಂತೆ ಅಲ್ಲಿ ಅಜ್ಞಾನವು ಉಪಾದಾನ.ಪ್ರತಿಕರ್ಮವ್ಯವಸ್ಥೆಯೂ ಇಲ್ಲ. ಜಗತ್ತು ಸತ್ಯವಲ್ಲದೆ ಹೋಗಿದ್ದರೆ (ಸಾಧ್ಯ ಬೇಡ ಎನ್ನುವುದಾದರೆ) ಶುಕ್ತಿರಜತಾದಿಗಳಂತೆ ಅಜ್ಞಾನೋಪಾದಾನಕವೇ ಆಗಿದ್ದರೆ ಪ್ರತಿಕರ್ಮವ್ಯವಸ್ಥೆ ಇಲ್ಲದೆ ಹೋದೀತು ಎಂಬುದು ವಿಪಕ್ಷೇ ಬಾಧಕವಾಗುತ್ತದೆ.

ಅಜ್ಞಾನಾತಿರಿಕ್ತವೇ ಜ್ಞಾನನಾಶ್ಯ - ಲೋಕದೃಷ್ಟಾಂತ-

ಶುಕ್ತೇರಾವರಣೇಽಜ್ಞಾನೇ ನಷ್ಟೇ ಬಾಧಪ್ರಮಾ ಪುನಃ ।
ಇಯಂ ಶುಕ್ತಿರ್ನ ರಜತಮಿತ್ಯಾಕಾರಾ ಹಿ ಜಾಯತೇ ॥ ೩೧೯ ॥

**ಅರ್ಥ–** ಶುಕ್ತೇಃ=ಶುಕ್ತಿಯ, ಆವರಣೇ=ಆವರಣವಾದ, ಅಜ್ಞಾನೇ=ಅಜ್ಞಾನವು, ನಷ್ಟೇ ಸತಿ=ನಾಶವಾಗುತ್ತಿರಲು, ಪುನಃ=ನಂತರ, ಇಯಂ ಶುಕ್ತಿಃ ನ ರಜತಂ=ಇದು ಶುಕ್ತಿ, ರಜತವಲ್ಲ, ಇತ್ಯಾಕಾರಾ=ಎಂಬ, ಬಾಧಪ್ರಮಾ=ಬಾಧಜ್ಞಾನವು, ಜಾಯತೇ ಹಿ= ಹುಟ್ಟಿರುವುದಷ್ಟೆ.

**ಅನುವಾದ - ಶುಕ್ತಿಯಲ್ಲಿ ಇದಂ ರಜತಂ ಎಂಬ ಭ್ರಮೆ ಬರಲು ಕಾರಣ ಶುಕ್ತಿಗೆ ಆವರಣವಾದ ಅಜ್ಞಾನ. ಅದು ಇರುವಷ್ಟು ಕಾಲ ಭ್ರಮೆ ಇದ್ದೇ ಇರುತ್ತದೆ. ಅದು ನಾಶವಾದಾಗಲೇ ಇದು ಶುಕ್ತಿ, ರಜತವಲ್ಲ ಎಂಬ ಬಾಧಕಜ್ಞಾನ ಬರುವುದು. ಹೀಗೆ ಬಾಧಜ್ಞಾನ ಹುಟ್ಟುವ ಮೊದಲೇ ನಷ್ಟವಾಗುವ ಅಜ್ಞಾನವು ಜ್ಞಾನನಾಶ್ಯವಾಗುವುದು ಹೇಗೆ?**

**ಭಾವವಿಲಾಸಿನೀ–ಕಿಂಚಾಜ್ಞಾನಾತಿರಿಕ್ತಸ್ಯೈವ ಲೋಕೇ ಜ್ಞಾನವಿನಾಶ್ಯತ್ವದರ್ಶನಾತ್ ಸಾಕ್ಷಾದ್ಬಂಧಸ್ಯೈವ ಜ್ಞಾನವಿನಾಶ್ಯತ್ವಮುಚಿತಮಿತ್ಯಾಹ – ಶುಕ್ತೇರಿತಿ ॥ ೩೧೯ ॥**

**ವಿವರಣೆ** - ಮತ್ತೊಂದು ರೀತಿಯಿಂದ ಬಂಧವು (ಜಗತ್ತು) ಅಜ್ಞಾನದ ಕಾರ್ಯವಲ್ಲ. ಸಾಕ್ಷಾತ್ ಜ್ಞಾನದಿಂದಲೇ ನಿವೃತ್ತವಾಗುತ್ತದೆ ಎಂದು ಹೇಳುತ್ತಾರೆ. ಏಕೆಂದರೆ, ಲೋಕದಲ್ಲಿ ಅಜ್ಞಾನಾತಿರಿಕ್ತವೇ ಜ್ಞಾನನಾಶ್ಯವಾಗಿ ಕಂಡಿದೆ. ಅದ್ವೈತಿಗಳು ಜ್ಞಾನಂ ಅಜ್ಞಾನಸ್ಯೈವ ನಿವರ್ತಕಂ ಎಂಬ ನಿಯಮದಿಂದ ತಾನೆ ಜ್ಞಾನನಾಶ್ಯವಾದ ಬಂಧವು ಅಜ್ಞಾನಕಾರ್ಯ ಎನ್ನುವುದು. ಜ್ಞಾನಂ ಅಜ್ಞಾನಾತಿರಿಕ್ತಸ್ಯೈವ ನಿವರ್ತಕಂ ಎಂದು ಸಮರ್ಥಿಸಿದರೆ ಬಂಧವು ಅಜ್ಞಾನಕಾರ್ಯವಲ್ಲ ಎಂದು ಸಿದ್ಧವಾಗುತ್ತದೆ - ಎಂದು ಅಭಿಪ್ರಾಯ.

**ಆವೃತೇಽರ್ಥೇ ಕಥಂ ಸಾಕ್ಷಾತ್ಕಾರರೂಪಾ ಪ್ರಮಾ ವದ ।**
**ತಸ್ಮಾಜ್ಜ್ಞಾನವಿನಾಶ್ಯತ್ವಂ ಶುಕ್ತ್ಯಜ್ಞಾನೇ ನ ಯುಜ್ಯತೇ ॥ ೩೨೦ ॥**

**ಜ್ಞಾನಾಭಾವಸ್ಯ ತು ಜ್ಞಾನಂ ನಿವೃತ್ತಿರ್ನ ನಿವರ್ತಕಮ್ ।**
**ಅತೋ ಜ್ಞಾನೇನೈವ ನಾಶೋ ನಾಜ್ಞಾನೇ ದೃಶ್ಯತೇ ಕ್ವಚಿತ್ ॥ ೩೨೧ ॥**

**ಅರ್ಥ–** ಅರ್ಥೇ=ಅರ್ಥವು, ಆವೃತೇ ಸತಿ=ಅಜ್ಞಾನಾವೃತವಾಗಿರುವಾಗ, ಸಾಕ್ಷಾತ್ಕಾರ ರೂಪಾ ಪ್ರಮಾ=ಪ್ರತ್ಯಕ್ಷಪ್ರಮಾಜ್ಞಾನವು, ಕಥಂ ಭವತಿ ?=ಹೇಗೆ ಬಂದೀತು? ವದ= ಹೇಳು. ತಸ್ಮಾತ್=ಆದ್ದರಿಂದ, ಶುಕ್ತ್ಯಜ್ಞಾನೇ=ಶುಕ್ತಿಯ ಅಜ್ಞಾನದಲ್ಲಿ, ಜ್ಞಾನವಿನಾಶ್ಯತ್ವಂ= ಜ್ಞಾನದಿಂದ ನಾಶವಾಗುವಿಕೆಯು, ನ ಯುಜ್ಯತೇ=ಹೊಂದುವುದಿಲ್ಲ.

ಜ್ಞಾನಾಭಾವಸ್ಯ ತು=ಅಭಾವರೂಪ ಅಜ್ಞಾನಕ್ಕಾದರೊ, ಜ್ಞಾನಂ=ಜ್ಞಾನವು, ನಿವೃತ್ತಿಃ=ನಾಶ ರೂಪವೇ ಹೊರತು, ನಿವರ್ತಕಂ ನ=ನಾಶಕವಲ್ಲ, ಅತಃ=ಆದ್ದರಿಂದ ಕ್ವಚಿತ್ ಅಪಿ=ಯಾವುದೇ ಅಜ್ಞಾನೇ=ಅಜ್ಞಾನದಲ್ಲಿ, ಜ್ಞಾನೇನೈವ ನಾಶಃ=ಜ್ಞಾನದಿಂದಲೇ ನಾಶವು, ನ ದೃಶ್ಯತೇ=ಕಾಣುವುದಿಲ್ಲ.

**ಅನುವಾದ** - ಜ್ಞಾನದಿಂದ ಅಜ್ಞಾನನಾಶ ಎನ್ನುವವರು ಹೀಗೆ ಹೇಳಬೇಕಾಗುತ್ತದೆ - ಅರ್ಥವು ಅಜ್ಞಾನದಿಂದ ಆವೃತವಾಗಿದ್ದರೂ ಪ್ರಮಾ ಹುಟ್ಟುತ್ತದೆ. ಆ ಪ್ರಮಾ ಅಜ್ಞಾನವನ್ನು ನಾಶ ಮಾಡುತ್ತದೆ ಎಂದು. ಆದರೆ, ಅರ್ಥವು ಇನ್ನೂ ಅಜ್ಞಾನಾವೃತವಾಗಿರುವಾಗ ಪ್ರಮಾ ಹೇಗೆ ಹುಟ್ಟೀತು? ಆದ್ದರಿಂದ ಅಜ್ಞಾನವು ಜ್ಞಾನನಾಶ್ಯವಾಗದು. ಇದಿಷ್ಟು ಭಾವರೂಪ ಅಜ್ಞಾನಕ್ಕೆ ಸಂಬಂಧಿಸಿದ್ದು.

ಇನ್ನು ಅಭಾವರೂಪ ಅಜ್ಞಾನವನ್ನು ಇಟ್ಟುಕೊಂಡರೆ, ಅದರ ನಿವೃತ್ತಿಯೇ ಜ್ಞಾನವು ಹೊರತು ಅದಕ್ಕೆ ನಿವರ್ತಕ ಜ್ಞಾನವಲ್ಲ. ಹೀಗೆ ಯಾವುದೇ ಅಜ್ಞಾನದಲ್ಲಿ ಎಂದರೆ

ಭಾವರೂಪ ಅಥವಾ ಅಭಾವರೂಪಾಜ್ಞಾನದಲ್ಲಿ ಜ್ಞಾನದಿಂದಲೇ ನಾಶವು ಕಾಣುವುದಿಲ್ಲ.

**ಭಾವವಿಲಾಸಿನೀ–** ಆವರಣೇ ಸತ್ಯಪಿ ಭ್ರಮ ಸಂಭವಾತ್ ಪ್ರಮೇತ್ಯುಕ್ತಮ್ । ತಸ್ಮಾತ್ ಆವರಣಾಜ್ಞಾನನಿವೃತ್ಯನಂತರಮೇವ ಜ್ಞಾನೋದಯಸಂಭವಾತ್ ।। ೩೨೦ ।।

**ವಿವರಣೆ** - ಆವರಣ ಇದ್ದಾಗಲೂ ಅರ್ಥದ ಭ್ರಮೆ ಬರಬಹುದು. ಆದ್ದರಿಂದ ಸಾಕ್ಷಾತ್ಕಾರರೂಪ ಪ್ರಮಾ ಎಂಬಲ್ಲಿ ಪ್ರಮಾ ಎಂಬ ಶಬ್ದವನ್ನು ಬಳಸಿದ್ದಾರೆ. ಅನಾದಿಕಾಲದಿಂದ ವಸ್ತುವಿನ ಅಭಾವ (ಪ್ರಾಗಭಾವ) ಇರುತ್ತದೆ. ಅದರ ಅಭಾವ ಎಂದರೆ ವಸ್ತುವಿನ ಉತ್ಪತ್ತಿ. ಹೀಗೆ ವಸ್ತುವು ಅಭಾವದ ನಿವೃತ್ತಿ (ಅಭಾವ) ಹೊರತು ಅಭಾವಕ್ಕೆ ನಿವರ್ತಕ ಅಲ್ಲ. ಎಂದು ಅಭಿಪ್ರಾಯ.

ಜ್ಞಾನವು ಅಜ್ಞಾನ ನಿವರ್ತಕವಲ್ಲ ಭಗವಂತನ ಪ್ರಸಾದವು ನಿವರ್ತಕ-

ಅಪಸಾರ್ಯೈವ ಹೃನ್ಮಾಯಾಂ ದರ್ಶನಂ ದಿಶತಿ ಪ್ರಭುಃ ।
ನಚೇತ್ ತಯಾऽऽವೃತಂ ಚಿತ್ತಂ ಕಥಂ ದ್ರಷ್ಟುಂ ಕ್ಷಮಂ ಭವೇತ್ ।।೩೨೨।।

ದೃಷ್ಟ್ವಾ ಪ್ರಸನ್ನಃ ಪಶ್ಚಾತ್ ತಾಂ ಮುಕ್ತಾವೇವ ನಿವರ್ತಯೇತ್ ।
ತದೈವ ಸರ್ವಥಾ ನಾಶೇ ಜೀವನ್ಮುಕ್ತಿದಶಾ ಕಥಮ್ ।। ೩೨೩ ।।

**ಅರ್ಥ–** ಪ್ರಭುಃ=ಸ್ವಾಮಿಯಾದ ಭಗವಂತನು, ಹೃನ್ಮಾಯಾಂ=ಹೃದಯದ ಅಜ್ಞಾನವನ್ನು, ಅಪಸಾರ್ಯ ಏವ=ಪಕ್ಕಕ್ಕೆ ಸರಿಸಿ, ದರ್ಶನಂ=ತನ್ನ ದರ್ಶನವನ್ನು, ದಿಶತಿ=ಕೊಡುತ್ತಾನೆ. ನ ಚೇತ್=ಹೀಗಲ್ಲದಿದ್ದರೆ, ತಯಾ=ಆ ಅಜ್ಞಾನದಿಂದ, ಆವೃತಂ=ಆವರಿಸಲ್ಪಟ್ಟ ಚಿತ್ತಂ=ಮನಸ್ಸು, ದ್ರಷ್ಟುಂ=ಭಗವಂತನನ್ನು ನೋಡಲು, ಕಥಂ=ಹೇಗೆ, ಕ್ಷಮಂ ಭವೇತ್?=ಸಮರ್ಥವಾದೀತು? ಪಶ್ಚಾತ್=ಸಾಕ್ಷಾತ್ಕಾರೋತ್ತರ ಕಾಲದಲ್ಲಿ, ದೃಷ್ಟ್ವಾ=ಸಾಕ್ಷಾತ್ಕಾರದಿಂದ, ಪ್ರಸನ್ನಃ ಸನ್=ಸಂತುಷ್ಟನಾಗಿ, ಮುಕ್ತಾವೇವ= ಮುಕ್ತಿ ಕಾಲದಲ್ಲೇ, ತಾಂ=ಆ ಅಜ್ಞಾನವನ್ನು, ನಿವಾರಯೇತ್ = ಕಳೆಯುತ್ತಾನೆ. ತದಾ ಏವ= ಸಾಕ್ಷಾತ್ಕಾರ ಕಾಲದಲ್ಲೇ, ಸರ್ವಥಾ= ಸಂಪೂರ್ಣವಾಗಿ, ನಾಶೇ ಸತಿ=ನಾಶವಾದರೆ, ಜೀವನ್ಮುಕ್ತಿ ದಶಾ=ಜೀವನ್ಮುಕ್ತಿ ಅವಸ್ಥೆಯು, ಕಥಂ ಭವೇತ್= ಹೇಗೆ ಕೂಡುತ್ತದೆ?

**ಅನುವಾದ** - ಭಗವಂತನು ಜೀವರ ಹೃದಯದಲ್ಲಿನ ಅಜ್ಞಾನವನ್ನು ಸ್ವಲ್ಪ ಸರಿಸಿ ತನ್ನ ಬಿಂಬ ಸಾಕ್ಷಾತ್ಕಾರವನ್ನು ನೀಡುತ್ತಾನೆ. ಹೀಗೆ ಸರಿಸದಿದ್ದರೆ ಅಜ್ಞಾನದಿಂದ ಆವೃತವಾದ ಮನಸ್ಸು ಸಾಕ್ಷಾತ್ಕಾರ ಪಡೆಯಲು ಸಮರ್ಥವೇ ಆಗದು.

ಮುಂದೆ ಮುಕ್ತಿಕಾಲ ಬಂದಾಗ, ಸಾಕ್ಷಾತ್ಕಾರದಿಂದ ಪ್ರಸನ್ನನಾದ ಭಗವಂತನು ಮುಕ್ತಿಯಲ್ಲೇ ಆ ಅಜ್ಞಾನವನ್ನು ಸಂಪೂರ್ಣವಾಗಿ ನಾಶಮಾಡುತ್ತಾನೆ. ಹೀಗೊಪ್ಪದೆ,

**ಸಾಕ್ಷಾತ್ಕಾರ ಎಂಬ ಜ್ಞಾನವಾದಾಗಲೇ ಅಜ್ಞಾನವು ಸಂಪೂರ್ಣ ನಾಶವಾಗುವುದಾದರೆ, ಆಗಲೇ ಎಲ್ಲರೂ ಮುಕ್ತರಾಗುವುದರಿಂದ ಜೀವನ್ಮುಕ್ತಿ ಅವಸ್ಥೆಯೇ ಇಲ್ಲದೆ ಹೋದೀತು. ನಾವು ಹೇಳಿದಂತೆ ಒಪ್ಪಿದರೆ, ಯಾರಿಗೆ ಅಜ್ಞಾನವನ್ನು ಸ್ವಲ್ಪ ಸರಿಸಲಾಗಿದೆಯೋ ಅವರು ಜೀವನ್ಮುಕ್ತರು; ಸಂಪೂರ್ಣ ನಾಶವಾದವರು ಮುಕ್ತರು. ಹೀಗೆ ಎರಡೂ ಅವಸ್ಥೆಗಳನ್ನು ಹೊಂದಿಸಬಹುದು.**

**ಭಾವವಿಲಾಸಿನೀ– ತಯಾ ಮಾಯಯಾ । ಸರ್ವದಾ ದರ್ಶನಪ್ರಸಂಗಾದಿತಿ ಭಾವಃ ॥೩೨೨-೨೩॥**

**ಭಿದ್ಯತೇ ಹೃದಯಗ್ರಂಥಿಶ್ಛಿದ್ಯಂತೇ ಸರ್ವಸಂಶಯಾಃ ।**
**ಕ್ಷೀಯಂತೇ ಚಾಸ್ಯ ಕರ್ಮಾಣಿ ತಸ್ಮಿನ್ ದೃಷ್ಟೇ ಪರಾವರೇ ॥**
**ಇತಿ ಶ್ರುತ್ಯುಕ್ತಹೃದ್ಗ್ರಂಥಿವಿನಾಶೋऽಪ್ಯಯಮೇವ ಹಿ ॥ ೩೨೪ ॥**

**ಅರ್ಥ–** ತಸ್ಮಿನ್=ಆ, ಪರಾವರೇ=ಸರ್ವೋತ್ತಮನಾದ ಪರಮಾತ್ಮನು, ದೃಷ್ಟೇ ಸತಿ= ಕಾಣಲ್ಪಡುತ್ತಿರಲು, ಹೃದಯಗ್ರಂಥಿಃ=ಹೃದಯಾವರಣ ಅಜ್ಞಾನವು, ಭಿದ್ಯತೇ= ನಾಶವಾಗುತ್ತದೆ, ಸರ್ವಸಂಶಯಾಃ=ಎಲ್ಲ ಸಂಶಯಗಳೂ, ಛಿದ್ಯಂತೇ= ಪರಿಹಾರವಾಗುತ್ತವೆ. ಚ=ಮತ್ತು, ಅಸ್ಯ=ಸಾಕ್ಷಾತ್ಕಾರ ಪಡೆದವನ, ಕರ್ಮಾಣಿ= ಕರ್ಮಗಳು, ಕ್ಷೀಯಂತೇ=ಕ್ಷಯ ಹೊಂದುತ್ತವೆ, ಇತಿ ಶ್ರುತ್ಯುಕ್ತಹೃತ್ ಗ್ರಂಥಿವಿನಾಶಃ=ಈ ಶ್ರುತಿಯಲ್ಲಿ ಹೇಳಿದ ಹೃದಯಾವರಣ ಅಜ್ಞಾನದ ವಿನಾಶ ಎಂದರೆ, ಅಯಂ ಏವ=ಇದೇ, ಎಂದರೆ, ಸಾಕ್ಷಾತ್ಕಾರವಾದಾಗ ಸರಿಸುವುದು, ಮುಕ್ತಿಯಲ್ಲಿ ಸಂಪೂರ್ಣನಾಶ.

**ಭಾವವಿಲಾಸಿನೀ–** ಅಯಮೇವ ಜ್ಞಾನದಶಾಯಾಮುಪಸರಣಂ ಮೋಕ್ಷಕಾಲೇ ವಿನಾಶ- ಶ್ಚೇತ್ಯುಭಯಮಪೀತ್ಯರ್ಥಃ ॥ ೩೨೪ ॥

**ವಿವರಣೆ** - ಭಿದ್ಯತೇ...........ಎಂಬುದು ಮುಂಡಕೋಪನಿಷತ್ತಿನ ವಾಕ್ಯ. ಭಗವತ್ಸಾಕ್ಷಾತ್ಕಾರ ಪಡೆದವರ ಸ್ಥಿತಿಯನ್ನು ಹೇಳುವ ವಾಕ್ಯ. ಅದರಲ್ಲಿ ಬಂದಿರುವ ಹೃದಯಗ್ರಂಥಿಭೇದ ಎನ್ನುವುದರ ಅರ್ಥವನ್ನು ಇಲ್ಲಿ ವಿಚಾರ ಮಾಡುತ್ತಿದ್ದಾರೆ. ಉಳಿದ ಪದಗಳ ಅರ್ಥವನ್ನು ಮುಂದಿನ ಮೂರು ಶ್ಲೋಕಗಳಲ್ಲಿ ವಿಚಾರ ಮಾಡುತ್ತಾರೆ

**ಅಜ್ಞಾನಹೃದ್ವಿಭಾಗೋ ಯಃ ಸ ಚೇಶ್ವರಪರಾಕ್ರಮಾತ್ ॥ ೩೨೫ ॥**

**ತದೇಕೋ ದೃಷ್ಟತೋ ನಷ್ಟೋ ದೃಷ್ಟ್ಯಾ ನಷ್ಟಾಸ್ತತೋऽಪರೇ ।**
**ನ ಚೇದ್ಯತ್ನಶತೇನಾಪಿ ಕಥಮಾವೃತದರ್ಶನಮ್ ॥ ೩೨೬ ॥**

**ಸಂಶಯಭ್ರಮಯೋರಪ್ರಾರಬ್ಧಯೋಃ ಪುಣ್ಯಪಾಪಯೋಃ ।**
**ತದೈವ ನಾಶಃ ಶ್ರುತ್ಯುಕ್ತರೀತ್ಯಾ ಜ್ಞಾನೇನ ಸಂಭವೇತ್ ॥ ೩.೨೭ ॥**

**ಅರ್ಥ–** ಯಃ= ಯಾವ, ಅಜ್ಞಾನ ಹೃದ್ವಿಭಾಗಃ=ಅಜ್ಞಾನ ಹೃದಯಗಳ ಬೇರ್ಪಡುವಿಕೆಯು, ಅಸ್ತಿ=ಇದೆಯೊ, ಸಃ ಚ=ಅದಾದರೊ, ಈಶ್ವರಪರಾಕ್ರಮಾತ್ – ಭಗವಂತನ ಶಕ್ತಿಯಿಂದ, ಭವತಿ=ಆಗುತ್ತದೆ. ತತ್=ಆದ್ದರಿಂದ=ಆವರಣನಾಶವು ಜ್ಞಾನದಿಂದ ಆಗದ ಕಾರಣ, ಏಕಃ=ಅಜ್ಞಾನವೆಂಬ ಹೃದಯಗ್ರಂಥಿಯು, ದೃಷ್ಟತಃ=ಸಾಕ್ಷಾತ್ಕಾರ ವಿಷಯನಾಗುವ ಪರಮಾತ್ಮನಿಂದ, ಮೊದಲಿಗೇ ನಷ್ಟಃ ಭವತಿ=ನಾಶವಾಗುತ್ತದೆ. ತತಃ=ಅಜ್ಞಾನಕ್ಕಿಂತ, ಅಪರೇ=ಬೇರೆಯಾದ ಸಂಶಯಗಳು ಉಪಲಕ್ಷಣಯಾ ಭ್ರಮ – ಕರ್ಮಗಳು, ದೃಷ್ಟ್ಯಾ=ಭಗವತ್ಸಾಕ್ಷಾತ್ಕಾರದಿಂದ, ನಷ್ಟಾಃ ಭವಂತಿ=ನಾಶಹೊಂದುತ್ತವೆ. ನ ಚೇತ್=ಪರಮಾತ್ಮನು ಮೊದಲಿಗೆ ಆವರಣ ನಿವಾರಕನಲ್ಲದಿದ್ದರೆ, ಆವೃತದರ್ಶನಂ= ಆವೃತವಾದ ಪರಮಾತ್ಮ ಜೀವಾದಿತತ್ವಗಳ ಜ್ಞಾನವು, ಯತ್ನಶತೇನ ಅಪಿ=ನೂರಾರು ಪ್ರಯತ್ನಗಳಿಂದಲೂ, ಕಥಂ ಭವತಿ=ಹೇಗೆ ಆಗುತ್ತದೆ? ಸಂಶಯ ಭ್ರಮಯೋಃ=ಸಂಶಯ ಮತ್ತು ಭ್ರಮೆಗಳ, ಮತ್ತು, ಅಪ್ರಾರಬ್ಧಯೋಃ=ಪ್ರಾರಬ್ಧವಲ್ಲದ, ಪುಣ್ಯಪಾಪಯೋಃ= ಪುಣ್ಯಪಾಪಗಳಿಗೆ, ತದಾ ಏವ=ಸಾಕ್ಷಾತ್ಕಾರವಾದಾಗಲೇ, ಜ್ಞಾನೇನ ನಾಶಃ=ಜ್ಞಾನದಿಂದ ನಾಶವು, ಶ್ರುತ್ಯುಕ್ತರೀತ್ಯಾ=ಶ್ರುತಿ ಹೇಳಿದ ರೀತಿಯಂತೆ, ಸಂಭವೇತ್=ಆಗುತ್ತದೆ.

**ಅನುವಾದ - ಜೀವನಿಗೆ ಆವರಕವಾದ ಅಜ್ಞಾನ ಹೋಗುವುದು ಭಗವಂತನ ಸಾಮರ್ಥ್ಯದಿಂದ ಹೊರತು, ಜ್ಞಾನದ ಸಾಮರ್ಥ್ಯದಿಂದ ಅಲ್ಲ. ಹೀಗೆ ಅಜ್ಞಾನ ನಿವೃತ್ತಿಯು ದೃಷ್ಟನಿಂದ, ಸಂಶಯ - ಭ್ರಮ - ಕರ್ಮಗಳ ನಾಶವು ದೃಷ್ಟಿಯಿಂದ, ಎಂದರೆ, ಭಗವತ್ಸಾಕ್ಷಾತ್ಕಾರದಿಂದ ಆಗುತ್ತದೆ. ಇದನ್ನು ಒಪ್ಪದಿದ್ದರೆ, ಜೀವಾದಿಸ್ವರೂಪವು ಅಜ್ಞಾನದಿಂದ ಆವೃತವೇ ಆಗಿರುತ್ತಾದ್ದರಿಂದ ನೂರಾರು ಪ್ರಯತ್ನಗಳಿಂದಲೂ ಅವುಗಳ ಜ್ಞಾನ ಬರಲು ಸಾಧ್ಯವಿಲ್ಲ. ಶ್ರುತಿ ಹೇಳುವಂತೆ ಜ್ಞಾನದಿಂದ ನಾಶವಾಗುವಂಥವು ಇವು - ಸಂಶಯ, ಭ್ರಮ, ಮತ್ತು ಪ್ರಾರಬ್ಧ ಕರ್ಮಕ್ಕಿಂತ ಭಿನ್ನವಾದ ಸಂಚಿತ - ಆಗಾಮಿ ಕರ್ಮಗಳು.**

**ಭಾವವಿಲಾಸಿನೀ –** ತಚ್ಚಾಪಸರಣಂ ಭಗವತ್ಕೃತಮೇವ ನ ಜ್ಞಾನಕೃತಮಿತ್ಯಾಹ – **ಅಜ್ಞಾನೇತಿ ॥ ೩.೨೫ ॥**

**ವಿವರಣೆ -** ದೃಷ್ಟೇನ ಇತಿ=ದೃಷ್ಟತಃ ಎಂಬ ವಿವರಣೆಯಂತೆ ದೃಷ್ಟತಃ ಎಂಬುದು ದೃಷ್ಟೇನ ಎಂಬುದರ ತಸಿಲ್ಪ್ರತ್ಯಯಾಂತವಾದ ರೂಪ. ಅಲ್ಲಿಗೆ, ದೃಷ್ಟೇನ ಮತ್ತು ದೃಷ್ಟ್ಯಾ ಎಂಬ ಎರಡು ತೃತೀಯಾಂತಗಳನ್ನು ಬಳಸಿ ಬಹುಮುಖ್ಯವಾದ ಖಂಡನೆಯನ್ನು ಶಬ್ದಸ್ವಾರಸ್ಯ ಪೂರ್ವಕ ಮಾಡುತ್ತಿದ್ದಾರೆ. ಅಜ್ಞಾನವು ದೃಷ್ಟಿಯಿಂದಲ್ಲ ದೃಷ್ಟನಿಂದ

ನಾಶವಾಗುತ್ತದೆ. ದೃಷ್ಟಿಯಿಂದ ಹೋಗುವುದು ಸಂಶಯ - ಭ್ರಮಗಳು. - ಎಂದು ಅಭಿಪ್ರಾಯ. ತಸ್ಮಿನ್ ದೃಷ್ಟೇ ಪರಾವರೇ ಎಂಬ ವಾಕ್ಯದಲ್ಲಿ ದೃಷ್ಟೇ ಸತಿ ಎಂದು ಸತಿಸಪ್ತಮೀ. ಭಗವಂತನುಕಾಣುತ್ತಿರಲು ಅಜ್ಞಾನಗ್ರಂಥ್ಯಾದಿಗಳು ಹೋಗುತ್ತವೆ ಎಂದು ಅರ್ಥ ಮಾಡಿದಾಗ ನಾಶವೆಂಬ ಕಾರ್ಯಕ್ಕೆ ದೃಷ್ಟೇ ಸತಿ ಎಂಬುದರಿಂದ ಹೇಳಿದ್ದು ಕಾರಣ ಎಂದು ತಿಳಿಯುತ್ತದೆ. ಉದಾ. ಸೂರ್ಯೋದಯೇ ಸತಿ ಕಮಲವಿಕಾಸಃ ಸೂರ್ಯೋದಯವಾದಾಗ ಕಮಲ ಅರಳುತ್ತದೆ ಎಂಬಲ್ಲಿ ಅರಳುವಿಕೆಗೆ ಸೂರ್ಯೋದಯ ಕಾರಣ ಎಂದು ತಿಳಿದಂತೆ. ದೃಷ್ಟ ಎಂದರೆ ಭೂತಕಾಲ ವಿವಕ್ಷಿತವಲ್ಲ. ದೃಷ್ಟಿ ವಿಷಯ ಎಂದಿಷ್ಟೇ ಅರ್ಥ. ದೃಷ್ಟಿಗೆ=ಸಾಕ್ಷಾತ್ಕಾರಕ್ಕೆ, ವಿಷಯನಾಗಲಿರುವ ಪ್ರಸನ್ನನಾಗಿರುವ ಭಗವಂತನು ಕಾರಣ ಎಂಬಲ್ಲಿ ಭಗವಂತನೂ ಕಾರಣ ಅವನಿಗೆ ವಿಶೇಷಣವಾದ ದೃಷ್ಟಿಯೂ ಕಾರಣ - ಎಂದು ಅಭಿಪ್ರಾಯ.

**ಸುಹೃದ್ದರ್ಶನತಃ ಸದ್ಯಃ ಕ್ಲೇಶನಾಶೋ ಹಿ ಜಾಯತೇ ।**
**ಸೂರ್ಯಾವಲೋಕನಾತ್ ಪಾಪನಾಶಃ ಸರ್ವಸ್ಯ ಸಮ್ಮತಃ ॥**
**ದೋಷಸ್ಯ ದರ್ಶನಾದ್ ರಾಗನಾಶೋ ದುರ್ವಿಷಯೇ ಸತಾಮ್ ॥೩.೨೮॥**

**ಅರ್ಥ–** ಸುಹೃದ್ದರ್ಶನತಃ=ಗೆಳೆಯನ ದರ್ಶನದಿಂದ, ಸದ್ಯಃ=ಕೂಡಲೇ, ಕ್ಲೇಶನಾಶಃ= ಕಷ್ಟದ ನಿವೃತ್ತಿಯು, ಜಾಯತೇ ಹಿ=ಆಗುತ್ತದಷ್ಟೆ. ಸೂರ್ಯಾವಲೋಕನಾತ್= ಸೂರ್ಯನ ದರ್ಶನದಿಂದ, ಪಾಪನಾಶಃ= ಪಾಪನಾಶವಾಗುವುದು, ಸರ್ವಸ್ಯ=ಎಲ್ಲರಿಗೂ, ಸಂಮತಃ= ಒಪ್ಪಿಗೆಯಾದದ್ದು. ಸತಾಂ= ಸಜ್ಜನರಿಗೆ, ದುರ್ವಿಷಯೇ= ಕೆಟ್ಟ ವಿಷಯದಲ್ಲಿ ದೋಷಸ್ಯ=ದೋಷದ, ದರ್ಶನಾತ್= ದರ್ಶನದಿಂದ, ರಾಗನಾಶಃ=ಆಸಕ್ತಿಯ ನಾಶವು, ಜಾಯತೇ ಹಿ=ಆಗುತ್ತದೆಯಷ್ಟೆ.

**ಅನುವಾದ** - ವ್ಯಕ್ತಿಯೊಬ್ಬ ವಿವಿಧ ಚಿಂತೆ - ಜವಾಬ್ದಾರಿಗಳಂತಹ ಕ್ಲೇಶಗಳಲ್ಲಿದ್ದಾಗ ತನಗೆ ಹೆಗಲು ಕೊಡುವಂತಹ ಗೆಳೆಯ ಬಂದರೆ, ಅವನನ್ನು ಕಂಡಾಕ್ಷಣ ಕ್ಲೇಶಗಳು ಇಲ್ಲವಾಗುವುದು ಲೋಕದಲ್ಲಿ ಪ್ರಸಿದ್ಧ. ಅನೇಕ ಪಾಪಗಳು ಸೂರ್ಯನ ದರ್ಶನದಿಂದ ನಾಶವಾಗುತ್ತವೆ ಎನ್ನುವುದನ್ನು ಧರ್ಮಶಾಸ್ತ್ರ ಬಲ್ಲ ಎಲ್ಲರೂ ಒಪ್ಪುತ್ತಾರೆ. ಸಜ್ಜನರಿಗೆ ಇದು ಕೆಟ್ಟದು ಎಂದು ಗೊತ್ತಿದ್ದರೂ ಆ ಬಗ್ಗೆ ಆಸೆಯನ್ನು ಬಿಡಲು ಆಗದೆ ಇದ್ದದ್ದು ಆ ಕೆಟ್ಟ ವಿಷಯದ ದೋಷಗಳು ತಿಳಿಯುತ್ತಿದ್ದಂತೆ ಆಸೆ ದೂರವಾಗುತ್ತದೆ.

**ಭಾವವಿಲಾಸಿನೀ–**ತರ್ಹಿ ದೃಷ್ಟ ಏವಾತ್ಮನಿತ್ಯಸ್ಯ ಕಾ ಗತಿರಿತ್ಯತ ಆಹ–ತದಿತಿ ॥ ತತ್ ಆವರಣಾಪಗಮಸ್ಯ ಜ್ಞಾನೇನೈವ ಕರ್ತೃಮಶಕ್ಯತ್ವಾತ್ । ಏಕಃ ಅಜ್ಞಾನ ಹೃದಯಗ್ರಂಥಿಃ । ದೃಷ್ಟತಃ ದರ್ಶನವಿಷಯೀಭವತ್ಪರಮಾತ್ಮನಃ । ಅವ್ಯವಹಿತೋತ್ತರಕಾಲೇ ದರ್ಶನಂ ದಾತುಕಾಮಾದಿತಿ

**ಯಾವತ್ । ದೃಷ್ಟ್ವಾ ಭಗವದಪರೋಕ್ಷದರ್ಶನೇನ । ಅಪರೇ ಸಂಶಯಾಃ ಸಂಶಯಪದೋಪಲಕ್ಷಿತ ವಿಪರ್ಯಯಾಃ ಕರ್ಮಾಣಿ ಚ । ಏವಂಚ ದೃಷ್ಟ ಇತಿ ಸತಿಸಪ್ತಮ್ಯಾಃ ವಿಶೇಷ್ಯಭೂತಪರಮಾತ್ಮನಃ ವಿಶೇಷಣೀಭೂತದೃಷ್ಟೇಶ್ಚ ಯಥಾಯೋಗಂ ಕಾರಣತೋಚ್ಯತ ಇತಿ ಭಾವಃ । ನಚೇತ್ ಪರಮಾತ್ಮಾ ನ ನಿವರ್ತಯಿತಿ ಚೇತ್ ॥ ೩೨೬-೩೨೮ ॥**

ಏವಂ ಚಾಜ್ಞಾನತೋಽನ್ಯಸ್ಯ ಜ್ಞಾನಾನ್ನಾಶಃ ಪ್ರದೃಶ್ಯತೇ ।
ಅಜ್ಞಾನಸ್ಯ ತು ನ ಜ್ಞಾನನಾಶ್ಯತಾ ದೃಶ್ಯತೇ ಕ್ವಚಿತ್ ॥ ೩೨೯ ॥

**ಅರ್ಥ–** ಏವಂ ಚ=ಹೀಗೆ ಜ್ಞಾನಾತ್=ಜ್ಞಾನದಿಂದ, ಅಜ್ಞಾನತಃ ಅನ್ಯಸ್ಯ=ಅಜ್ಞಾನಕ್ಕಿಂತ ಬೇರೆಯದ್ದಕ್ಕೆ, ನಾಶಃ= ನಾಶವು, ಪ್ರದೃಶ್ಯತೇ=ಕಾಣುತ್ತದೆ. ಅಜ್ಞಾನಸ್ಯ ತು= ಅಜ್ಞಾನಕ್ಕಾದರೋ, ಜ್ಞಾನನಾಶ್ಯತಾ= ಜ್ಞಾನದಿಂದ ನಾಶವಾಗುವಿಕೆಯು, ಕ್ವಚಿತ್ ಅಪಿ= ಆವರಕವಾದ ಭಾವರೂಪಾಜ್ಞಾನದಲ್ಲಾಗಲೀ, ಅಭಾವರೂಪ ಅಜ್ಞಾನದಲ್ಲಾಗಲೀ, ನ ದೃಶ್ಯತೇ= ಕಾಣುವುದಿಲ್ಲ.

**ಅನುವಾದ - ಈ ಹಿಂದಿನ ಉದಾಹರಣೆಗಳನ್ನು ಪರಿಶೀಲಿಸಿದರೆ, ಜ್ಞಾನದಿಂದ ಅಜ್ಞಾನದ್ದಲ್ಲ, ಅಜ್ಞಾನಕ್ಕಿಂತ ಬೇರೆಯಾದ ಕ್ಲೇಶ - ಪಾಪ - ರಾಗಗಳ ನಾಶವೇ ಕಂಡಿದೆ. ಇರುವ ವಸ್ತು ಕಾಣದಂತೆ ಮಾಡುವ ಭಾವರೂಪ ಅಜ್ಞಾನವಾಗಲೀ, ಅಭಾವರೂಪ ಅಜ್ಞಾನವಾಗಲೀ ಎಲ್ಲಿಯೂ ಜ್ಞಾನದಿಂದ ನಾಶವಾಗುವುದು ಕಂಡಿಲ್ಲ.**

**ಭಾವವಿಲಾಸಿನೀ– ಕ್ವಚಿತ್ ಆವರಕಾಜ್ಞಾನೇ ಜ್ಞಾನಾಭಾವೇ ಚ ॥ ೩೨೯ ॥**

ವ್ಯಾಪ್ತ್ಯೈವ ದೃಷ್ಟಬಾಧಸ್ತೇ ವ್ಯಾಪ್ತೇರ್ಮೂಲಂ ನ ದೃಶ್ಯತೇ ।
ಗವ್ಯಾಪ್ತಿರಥವಾಽವ್ಯಾಪ್ತಿರ್ವ್ಯಾಪ್ತೇರ್ಮೂಲಂ ಹಿ ಕೇವಲಮ್ ॥ ೩೩೦ ॥

**ಅರ್ಥ–** ತೇ=ನಿನ್ನ ಮತದಲ್ಲಿ, ವ್ಯಾಪ್ತ್ಯಾ ಏವ=ವ್ಯಾಪ್ತಿಯಿಂದಲೇ, ದೃಷ್ಟಬಾಧಃ=ಶ್ರುತಿಸೂತ್ರಾದಿ ಪ್ರಮಾಣ ಸಿದ್ಧವಾದ ಅರ್ಥಕ್ಕೆ, ಬಾಧಃ ಅಸ್ತಿ= ಬಾಧವಿದೆ. ವ್ಯಾಪ್ತೇಃ=ವ್ಯಾಪ್ತಿಯ, ಮೂಲಂ=ಸಾಧಕವಾದ ದೃಷ್ಟಾಂತವು, ನ ದೃಶ್ಯತೇ=ಕಾಣದು. ಅಥವಾ, ವ್ಯಾಪ್ತೇಃ= ವ್ಯಾಪ್ತಿಯ, ಮೂಲಂ ಸಾಧಕವು, ಕೇವಲಂ=ಬರಿಯೆ, ಗವಿ ಆಪ್ತಿಃ=ದನಕಾಯುವವನ ಆಪ್ತತೆ, ಅವ್ಯಾಪ್ತಿಃ ಹಿ=ಕುರಿಕಾಯುವವನ ಆಪ್ತತೆ ತಾನೆ (ಅವಿ+ಆಪ್ತಿಃ).

**ಅನುವಾದ - ಶ್ರುತಿಸೂತ್ರ ಅನುಭವದಂತಹ ಪ್ರಮಾಣಗಳಲ್ಲಿ ಜ್ಞಾನದಿಂದ ಅಜ್ಞಾನಾನ್ಯಕ್ಕೆ ನಾಶ ಕಂಡರೂ ಅದನ್ನು ಕೇವಲ ನೀವೋಪ್ಪುವ ಜ್ಞಾನಂ ಅಜ್ಞಾನಸ್ಯೈವ ನಿವರ್ತಕಂ ಎಂಬ ವ್ಯಾಪ್ತಿಯಿಂದ ಬಿಡುತ್ತಿದ್ದೀರಿ. ಹೊರತು ಇದಕ್ಕೆ ಬೇರೆ ಯಾವ**

ನಾಶವಾಗುತ್ತದೆ. ದೃಷ್ಟಿಯಿಂದ ಹೋಗುವುದು ಸಂಶಯ - ಭ್ರಮಗಳು. - ಎಂದು ಅಭಿಪ್ರಾಯ. ತಸ್ಮಿನ್ ದೃಷ್ಟೇ ಪರಾವರೇ ಎಂಬ ವಾಕ್ಯದಲ್ಲಿ ದೃಷ್ಟೇ ಸತಿ ಎಂದು ಸತಿಸಪ್ತಮೀ. ಭಗವಂತನುಕಾಣುತ್ತಿರಲು ಅಜ್ಞಾನಗ್ರಂಥ್ಯಾದಿಗಳು ಹೋಗುತ್ತವೆ ಎಂದು ಅರ್ಥ ಮಾಡಿದಾಗ ನಾಶವೆಂಬ ಕಾರ್ಯಕ್ಕೆ ದೃಷ್ಟೇ ಸತಿ ಎಂಬುದರಿಂದ ಹೇಳಿದ್ದು ಕಾರಣ ಎಂದು ತಿಳಿಯುತ್ತದೆ. ಉದಾ. ಸೂರ್ಯೋದಯೇ ಸತಿ ಕಮಲವಿಕಾಸಃ ಸೂರ್ಯೋದಯವಾದಾಗ ಕಮಲ ಅರಳುತ್ತದೆ ಎಂಬಲ್ಲಿ ಅರಳುವಿಕೆಗೆ ಸೂರ್ಯೋದಯ ಕಾರಣ ಎಂದು ತಿಳಿದಂತೆ. ದೃಷ್ಟ ಎಂದರೆ ಭೂತಕಾಲ ವಿವಕ್ಷಿತವಲ್ಲ. ದೃಷ್ಟಿ ವಿಷಯ ಎಂದಿಷ್ಟೇ ಅರ್ಥ. ದೃಷ್ಟಿಗೆ=ಸಾಕ್ಷಾತ್ಕಾರಕ್ಕೆ, ವಿಷಯನಾಗಲಿರುವ ಪ್ರಸನ್ನನಾಗಿರುವ ಭಗವಂತನು ಕಾರಣ ಎಂಬಲ್ಲಿ ಭಗವಂತನೂ ಕಾರಣ ಅವನಿಗೆ ವಿಶೇಷಣವಾದ ದೃಷ್ಟಿಯೂ ಕಾರಣ - ಎಂದು ಅಭಿಪ್ರಾಯ.

**ಸುಹೃದ್ದರ್ಶನತಃ ಸದ್ಯಃ ಕ್ಲೇಶನಾಶೋ ಹಿ ಜಾಯತೇ ।**
**ಸೂರ್ಯಾವಲೋಕನಾತ್ ಪಾಪನಾಶಃ ಸರ್ವಸ್ಯ ಸಮ್ಮತಃ ॥**
**ದೋಷಸ್ಯ ದರ್ಶನಾದ್ ರಾಗನಾಶೋ ದುರ್ವಿಷಯೇ ಸತಾಮ್ ॥೩.೨೮॥**

**ಅರ್ಥ–** ಸುಹೃದ್ದರ್ಶನತಃ=ಗೆಳೆಯನ ದರ್ಶನದಿಂದ, ಸದ್ಯಃ=ಕೂಡಲೇ, ಕ್ಲೇಶನಾಶಃ= ಕಷ್ಟದ ನಿವೃತ್ತಿಯು, ಜಾಯತೇ ಹಿ=ಆಗುತ್ತದಷ್ಟೆ, ಸೂರ್ಯಾವಲೋಕನಾತ್= ಸೂರ್ಯನ ದರ್ಶನದಿಂದ, ಪಾಪನಾಶಃ= ಪಾಪನಾಶವಾಗುವುದು, ಸರ್ವಸ್ಯ=ಎಲ್ಲರಿಗೂ, ಸಂಮತಃ= ಒಪ್ಪಿಗೆಯಾದದ್ದು. ಸತಾಂ= ಸಜ್ಜನರಿಗೆ, ದುರ್ವಿಷಯೇ= ಕೆಟ್ಟ ವಿಷಯದಲ್ಲಿ, ದೋಷಸ್ಯ=ದೋಷದ, ದರ್ಶನಾತ್= ದರ್ಶನದಿಂದ, ರಾಗನಾಶಃ=ಆಸಕ್ತಿಯ ನಾಶವು, ಜಾಯತೇ ಹಿ=ಆಗುತ್ತದೆಯಷ್ಟೆ.

**ಅನುವಾದ** - ವ್ಯಕ್ತಿಯೊಬ್ಬ ವಿವಿಧ ಚಿಂತೆ - ಜವಾಬ್ದಾರಿಗಳಂತಹ ಕ್ಲೇಶಗಳಲ್ಲಿದ್ದಾಗ ತನಗೆ ಹೆಗಲು ಕೊಡುವಂತಹ ಗೆಳೆಯ ಬಂದರೆ, ಅವನನ್ನು ಕಂಡಾಕ್ಷಣ ಕ್ಲೇಶಗಳು ಇಲ್ಲವಾಗುವುದು ಲೋಕದಲ್ಲಿ ಪ್ರಸಿದ್ಧ. ಅನೇಕ ಪಾಪಗಳು ಸೂರ್ಯನ ದರ್ಶನದಿಂದ ನಾಶವಾಗುತ್ತವೆ ಎನ್ನುವುದನ್ನು ಧರ್ಮಶಾಸ್ತ್ರ ಬಲ್ಲ ಎಲ್ಲರೂ ಒಪ್ಪುತ್ತಾರೆ. ಸಜ್ಜನರಿಗೆ ಇದು ಕೆಟ್ಟದು ಎಂದು ಗೊತ್ತಿದ್ದರೂ ಆ ಬಗ್ಗೆ ಆಸೆಯನ್ನು ಬಿಡಲು ಆಗದೆ ಇದ್ದದ್ದು ಆ ಕೆಟ್ಟ ವಿಷಯದ ದೋಷಗಳು ತಿಳಿಯುತ್ತಿದ್ದಂತೆ ಆಸೆ ದೂರವಾಗುತ್ತದೆ.

**ಭಾವವಿಲಾಸಿನೀ–**ತರ್ಹಿ ದೃಷ್ಟವಿವಾತ್ಮನಿತ್ಯಸ್ಯ ಕಾ ಗತಿರಿತ್ಯತ ಆಹ–ತದಿತಿ ॥ ತತ್ ಆವರಣಾಪಗಮಸ್ಯ ಜ್ಞಾನೇನೈವ ಕರ್ತುಮಶಕ್ಯತ್ವಾತ್ । ಏಕಃ ಅಜ್ಞಾನ ಹೃದಯಗ್ರಂಥಿಃ । ದೃಷ್ಟತಃ ದರ್ಶನವಿಷಯೀಭವತ್‌ಪರಮಾತ್ಮನಃ । ಅವ್ಯವಹಿತೋತ್ತರಕಾಲೇ ದರ್ಶನಂ ದಾತುಕಾಮಾದಿತಿ

**ಯಾವತ್ । ದೃಷ್ಟ್ವಾ ಭಗವದಪರೋಕ್ಷದರ್ಶನೇನ । ಅಪರೇ ಸಂಶಯಾಃ ಸಂಶಯಪದೋಪಲಕ್ಷಿತ ವಿಪರ್ಯಯಾಃ ಕರ್ಮಣಿ ಚ । ಏವಂಚ ದೃಷ್ಟ ಇತಿ ಸತಿಸಪ್ತಮ್ಯಾಃ ವಿಶೇಷ್ಯಭೂತಪರಮಾತ್ಮನಃ ವಿಶೇಷಣೀಭೂತದೃಷ್ಟೇಶ್ಚ ಯಥಾಯೋಗಂ ಕಾರಣತೋಚ್ಯತ ಇತಿ ಭಾವಃ । ನಚೇತ್ ಪರಮಾತ್ಮಾ ನ ನಿವರ್ತಯಿತಿ ಚೇತ್ ॥ ೩೨೬-೩೨೮ ॥**

ಏವಂ ಚಾಜ್ಞಾನತೋಽನ್ಯಸ್ಯ ಜ್ಞಾನಾನ್ನಾಶಃ ಪ್ರದೃಶ್ಯತೇ ।
ಅಜ್ಞಾನಸ್ಯ ತು ನ ಜ್ಞಾನನಾಶ್ಯತಾ ದೃಶ್ಯತೇ ಕ್ವಚಿತ್ ॥ ೩೨೯ ॥

**ಅರ್ಥ–** ಏವಂ ಚ=ಹೀಗೆ ಜ್ಞಾನಾತ್=ಜ್ಞಾನದಿಂದ, ಅಜ್ಞಾನತಃ ಅನ್ಯಸ್ಯ=ಅಜ್ಞಾನಕ್ಕಿಂತ ಬೇರೆಯದ್ದಕ್ಕೆ, ನಾಶಃ= ನಾಶವು, ಪ್ರದೃಶ್ಯತೇ=ಕಾಣುತ್ತದೆ. ಅಜ್ಞಾನಸ್ಯ ತು= ಅಜ್ಞಾನಕ್ಕಾದರೋ, ಜ್ಞಾನನಾಶ್ಯತಾ= ಜ್ಞಾನದಿಂದ ನಾಶವಾಗುವಿಕೆಯು, ಕ್ವಚಿತ್ ಅಪಿ= ಆವರಕವಾದ ಭಾವರೂಪಾಜ್ಞಾನದಲ್ಲಾಗಲೀ, ಅಭಾವರೂಪ ಅಜ್ಞಾನದಲ್ಲಾಗಲೀ, ನ ದೃಶ್ಯತೇ= ಕಾಣುವುದಿಲ್ಲ.

**ಅನುವಾದ - ಈ ಹಿಂದಿನ ಉದಾಹರಣೆಗಳನ್ನು ಪರಿಶೀಲಿಸಿದರೆ, ಜ್ಞಾನದಿಂದ ಅಜ್ಞಾನದ್ದಲ್ಲ, ಅಜ್ಞಾನಕ್ಕಿಂತ ಬೇರೆಯಾದ ಕ್ಲೇಶ - ಪಾಪ - ರಾಗಗಳ ನಾಶವೇ ಕಂಡಿದೆ. ಇರುವ ವಸ್ತು ಕಾಣದಂತೆ ಮಾಡುವ ಭಾವರೂಪ ಅಜ್ಞಾನವಾಗಲೀ, ಅಭಾವರೂಪ ಅಜ್ಞಾನವಾಗಲೀ ಎಲ್ಲಿಯೂ ಜ್ಞಾನದಿಂದ ನಾಶವಾಗುವುದು ಕಂಡಿಲ್ಲ.**

**ಭಾವವಿಲಾಸಿನೀ– ಕ್ವಚಿತ್ ಆವರಕಾಜ್ಞಾನೇ ಜ್ಞಾನಾಭಾವೇ ಚ ॥ ೩೨೯ ॥**

ವ್ಯಾಪ್ತ್ಯೈವ ದೃಷ್ಟಬಾಧಸ್ತೇ ವ್ಯಾಪ್ತೇರ್ಮೂಲಂ ನ ದೃಶ್ಯತೇ ।
ಗವ್ಯಾಪ್ತಿರಥವಾಽವ್ಯಾಪ್ತಿರ್ವ್ಯಾಪ್ತೇರ್ಮೂಲಂ ಹಿ ಕೇವಲಮ್ ॥ ೩೩೦ ॥

**ಅರ್ಥ–** ತೇ=ನಿನ್ನ ಮತದಲ್ಲಿ, ವ್ಯಾಪ್ತ್ಯಾ ಏವ=ವ್ಯಾಪ್ತಿಯಿಂದಲೇ, ದೃಷ್ಟಬಾಧಃ=ಶ್ರುತಿಸೂತ್ರಾದಿ ಪ್ರಮಾಣ ಸಿದ್ಧವಾದ ಅರ್ಥಕ್ಕೆ, ಬಾಧಃ ಅಸ್ತಿ= ಬಾಧವಿದೆ. ವ್ಯಾಪ್ತೇಃ=ವ್ಯಾಪ್ತಿಯ, ಮೂಲಂ=ಸಾಧಕವಾದ ದೃಷ್ಟಾಂತವು, ನ ದೃಶ್ಯತೇ=ಕಾಣದು. ಅಥವಾ, ವ್ಯಾಪ್ತೇಃ= ವ್ಯಾಪ್ತಿಯ, ಮೂಲಂ ಸಾಧಕವು, ಕೇವಲಂ=ಬರಿಯೆ, ಗವಿ ಆಪ್ತಿಃ=ದನಕಾಯುವವನ ಆಪ್ತತೆ, ಅವ್ಯಾಪ್ತಿಃ ಹಿ=ಕುರಿಕಾಯುವವನ ಆಪ್ತತೆ ತಾನೆ (ಅವಿ+ಆಪ್ತಿಃ).

**ಅನುವಾದ - ಶುತ್ರಿಸೂತ್ರ ಅನುಭವದಂತಹ ಪ್ರಮಾಣಗಳಲ್ಲಿ ಜ್ಞಾನದಿಂದ ಅಜ್ಞಾನಾನ್ಯಕ್ಕೆ ನಾಶ ಕಂಡರೂ ಅದನ್ನು ಕೇವಲ ನೀವೋಪ್ಪುವ ಜ್ಞಾನಂ ಅಜ್ಞಾನಸ್ಯೈವ ನಿವರ್ತಕಂ ಎಂಬ ವ್ಯಾಪ್ತಿಯಿಂದ ಬಿಡುತ್ತಿದ್ದೀರಿ. ಹೊರತು ಇದಕ್ಕೆ ಬೇರೆ ಯಾವ**

**ಪ್ರಮಾಣವಿರೋಧವೂ ಇಲ್ಲ. ನಿಮ್ಮ ವ್ಯಾಪ್ತಿ ಸಿದ್ಧವಾಗಲು ಬೇಕಾದ ದೃಷ್ಟಾಂತ ಇಲ್ಲದಿರುವುದರಿಂದ ನಿಮ್ಮ ವ್ಯಾಪ್ತಿ ಆಧಾರ ರಹಿತವಾಗಿದೆ. (ಪರಿಹಾಸ-) ಅಥವಾ ನಿಮ್ಮ ವ್ಯಾಪ್ತಿಗೆ ಆಧಾರ ದನಕಾಯುವವರ ಮತ್ತು ಕುರಿಕಾಯುವವರ ಮಾತು ಮಾತ್ರ ಹೊರತು ಪಂಡಿತರ ಮಾತಲ್ಲ.**

**ಭಾವವಿಲಾಸಿನೀ– ದೃಷ್ಟಬಾಧಃ ಶ್ರುತಿಸೂತ್ರೋಕ್ತಾರ್ಥಬಾಧಃ । ಸುಹೃದ್ದರ್ಶನಾದೀನಾಮೇವ ದೃಷ್ಟಂ ಯದ್ದುಃಖಾದಿನಿವರ್ತಕತ್ವಂ ತಸ್ಯಾಬಾಧೋ ಯದನ್ಯಥೀಕರಣಂ ತದ್ಗ್ರಂಥೇ ವಾ ಅವ್ಯಾಪ್ತಿಃ ಅವಿಷು ಆಪ್ತಿಃ । ಆವೃತಪದಾರ್ಥಸಾಕ್ಷಾತ್ಕಾರೇಣೈವಾವರಕಜ್ಞಾನನಿವೃತ್ತಿರಿತಿ ಗೋಪಾಲೋ ವಾ ಅವಿಪಾಲೋ ವಾ ವಕ್ಷ್ಯತಿ । ನ ಪಂಡಿತ ಇತಿ ಭಾವಃ ॥ ೩೩೦ ॥**

**ವಿವರಣೆ** - ಶ್ಲೋಕದಲ್ಲಿ ಗವ್ಯಾಪ್ತಿಃ ಎಂಬಲ್ಲಿ ಗವಿ+ಆಪ್ತಿಃ ಎಂದು ಪದಚ್ಛೇದ. ಅವ್ಯಾಪ್ತಿಃ ಎಂಬುದು ಸಮಾಸ. ಅವೌ (ಅವಿಶಬ್ದದ ಸಪ್ತಮೀ ಏಕವಚನ) ಆಪ್ತಿಃ ಎಂದು ವಿಗ್ರಹ.

ಲೋಕದಲ್ಲಿ ಆವರಕವು ಸರಿದ ಮೇಲೆ ಆವೃತದ ಜ್ಞಾನ. ನೀವು ಆವೃತದ ಸಾಕ್ಷಾತ್ಕಾರದಿಂದ ಆವರಣಾಜ್ಞಾನ ನಿವೃತ್ತವಾಗುತ್ತದೆ ಎನ್ನುವಿರಿ. ಇದಕ್ಕೆ ಆಧಾರವಿಲ್ಲ. (ಇಷ್ಟು ಹೇಳಿದ ಶ್ರೀವಾದಿರಾಜರು ಹಾಸ್ಯ ಮಾಡುತ್ತಾ ಹೇಳುತ್ತಾರೆ ಅಥವಾ ದನ - ಕುರಿ ಕಾಯುವವರು ನೀವೆನ್ನುವಂತೆ ಹೇಳಬೇಕು. ಪಂಡಿತರಲ್ಲ.

ಪ್ರಬಲತ್ವಾದ್ ವಿಪಕ್ಷಸ್ಯ ಸಪಕ್ಷಸ್ಯ ತ್ವದರ್ಶನಾತ್ ।
ವ್ಯಾಪ್ತಿಶ್ಚ ಪಕ್ಷಯುಗಲಚ್ಛೇದೇ ಪಕ್ಷೀವ ತೇ ಮೃತಾ ॥ ೩೩೧ ॥

**ಅರ್ಥ–** ವಿಪಕ್ಷಸ್ಯ= ವಿಪಕ್ಷವು, ಪ್ರಬಲತ್ವಾತ್= ಪ್ರಬಲವಾಗಿರುವುದರಿಂದ, ಸಪಕ್ಷಸ್ಯ= ಸಪಕ್ಷವು, ಅದರ್ಶನಾತ್= ಕಾಣದಿರುವುದರಿಂದ, ಪಕ್ಷಯುಗಲಚ್ಛೇದೇ= ಎರಡು ರೆಕ್ಕೆಗಳನ್ನು ಕತ್ತರಿಸಿದ, ಪಕ್ಷೀವ= ಹಕ್ಕಿಯಂತೆ, ತೇ ವ್ಯಾಪ್ತಿಃ= ನಿನ್ನ ವ್ಯಾಪ್ತಿಯು, ಮೃತಾ= ಮೃತವಾಗಿದೆ.

**ಅನುವಾದ - ಹಕ್ಕಿಗೆ ಹಾರಲುಎರಡು ಪಕ್ಷಗಳು= ರೆಕ್ಕೆಗಳು ಬೇಕು. ಒಂದೊಂದುಪಕ್ಷ ಇಲ್ಲದಿದ್ದರೂ ಹಾರಲಾಗದ ಹಕ್ಕಿಗೆ ಎರಡೂ ರೆಕ್ಕೆಗಳು ಇಲ್ಲದಿದ್ದರೆ ಹಾರಾಟ ಅಸಾಧ್ಯ. ಅದರಂತೆ ಜ್ಞಾನಂ ಅಜ್ಞಾನನಿವರ್ತಕಂ ಎಂಬ ನಿಮ್ಮ ವ್ಯಾಪ್ತಿಗೆ ಸಪಕ್ಷದಲ್ಲಿ ಇರುವಿಕೆ ಎಂಬ ಅನ್ವಯರೂಪ, ವಿಪಕ್ಷದಲ್ಲಿ ಇಲ್ಲದಿರುವಿಕೆ ಎಂಬ ವ್ಯತಿರೇಕರೂಪ ಎಂಬ ಎರಡು ಧರ್ಮಗಳು ಬೇಕು ಆದರೆ ಪ್ರಕೃತ ವಿಪಕ್ಷವೇ ಅಂದರೆ ಜ್ಞಾನವು ಅಜ್ಞಾನಾತಿರಿಕ್ತಕ್ಕೆ ನಿವರ್ತಕ ಎಂಬ ವಿರುದ್ಧ ಪಕ್ಷವೇ ಪ್ರಬಲವಾಗಿದ್ದು, ಸಪಕ್ಷವು ಅಂದರೆ ವ್ಯಾಪ್ತಿಯನ್ನು ತಿಳಿಯುವ ನಿದರ್ಶನಸ್ಥಲವು ಇಲ್ಲದಿರುವುದರಿಂದ ನಿಮ್ಮ ವ್ಯಾಪ್ತಿಯು ಸರಿಯಲ್ಲ.**

**ಭಾವವಿಲಾಸಿನೀ–** ವಿಪಕ್ಷಸ್ಯ ಜ್ಞಾನಮಜ್ಞಾನಾತಿರಿಕ್ತಸ್ಯೈವ ನಾಶಕಮಿತಿ ವಿರುದ್ಧಪಕ್ಷಸ್ಯ ಸಪಕ್ಷಸ್ಯ ಜ್ಞಾನಮಜ್ಞಾನಸ್ಯೈವ ನಾಶಕಮಿತಿ ತ್ವದುಕ್ತವ್ಯಾಪ್ತಿನಿರ್ದಶನಸ್ಥಲಸ್ಯ ವ್ಯಾಪ್ತೌ ವ್ಯಾಪ್ಯತಯೋಕ್ತಸ್ಯ ಜ್ಞಾನತ್ವಸ್ಯ ವಿಪಕ್ಷಗಾಮಿತ್ವೇನ ಸಪಕ್ಷೇಽದರ್ಶನೇನ ಚ ದ್ವೇಧಾಪೀಯಂ ಚ ವ್ಯಾಪ್ತಿರಯುಕ್ತೇತ್ಯೇತತ್ ಸಾಹಿತ್ಯಮುದ್ರಯಾಽಽಹ – **ವ್ಯಾಪ್ತಿಶ್ಚೇತಿ** ॥ ಪಕ್ಷಿಣಃ ಪಕ್ಷಯುಗಲಂ ಪ್ರಸಿದ್ಧಮೇವ । ವ್ಯಾಪ್ತೇಸ್ತ್ವನ್ವಯರೂಪತ್ವಂ ವ್ಯತಿರೇಕರೂಪತ್ವಂ ಚೇತಿ ಪಕ್ಷಯುಗಲಂ ದ್ರಷ್ಟವ್ಯಮ್ ॥ ೩೩೧ ॥

**ವಿವರಣೆ** - ವಿಪಕ್ಷವು=ಜ್ಞಾನಂ ಅಜ್ಞಾನಾತಿರಿಕ್ತಸ್ಯೈವ ನಾಶಕಂ ಎಂಬ ಪಕ್ಷವು ಪ್ರಬಲವಾದ್ದರಿಂದ ಎಂಬಲ್ಲಿ ವಿಪಕ್ಷ ಎಂದರೆ ಪ್ರಕೃತಪಕ್ಷಕ್ಕೆ ವಿರುದ್ಧವಾದ ಪಕ್ಷ ಎಂದರ್ಥ. ಯತ್ರ ಯತ್ರ ಜ್ಞಾನತ್ವಂ ತತ್ರ ತತ್ರ ಅಜ್ಞಾನಮಾತ್ರನಿವರ್ತಕತ್ವಂ ಎಂಬ ವ್ಯಾಪ್ತಿಯಲ್ಲಿ ವ್ಯಾಪ್ಯ ಎಂದು ಅದ್ವೈತಿಗಳು ಹೇಳುತ್ತಿರುವ ಜ್ಞಾನತ್ವವು ವಿಪಕ್ಷದಲ್ಲಿ= ಸಂಶಯಾದಿನಿವರ್ತಕದಲ್ಲಿ ಬಂದಿತು. ದೃಷ್ಟಾಂತದಲ್ಲಿ ಇಲ್ಲ. ಹೀಗೆ ವ್ಯಾಪ್ಯಕ್ಕೆ ಇರಬೇಕಾದ ಎರಡು ಧರ್ಮಗಳು ಇಲ್ಲವಾದವು ಎಂಬುದನ್ನು ಕಾವ್ಯಮಯವಾಗಿ ಅಂದರೆ ಪಕ್ಷ ಶಬ್ದಕ್ಕಿರುವ ರೆಕ್ಕೆ - ವ್ಯಾಪ್ತಿಗೆ ಇರುವ ಅನ್ವಯ ವ್ಯತಿರೇಕರೂಪಗಳು ಎಂಬ ಎರಡು ಅರ್ಥಗಳನ್ನು ಬಳಸಿ ಚಮತ್ಕಾರದಿಂದ ಇಲ್ಲಿ ಹೇಳುತ್ತಿದ್ದಾರೆ.

**ತಸ್ಮಾಜ್ ಜ್ಞಾನೇನ ಬಂಧಸ್ಯ ನಾಶೇ ನಾನುಪಪನ್ನತಾ ।**
**ಭವದ್‌ಗ್ರಂಥಸ್ಯ ನಿರ್ಬಂಧನಾಶೇ ತ್ವನುಪಪನ್ನತಾ ॥ ೩೩೨ ॥**

**ಅರ್ಥ–** ತಸ್ಮಾತ್=ನಿಮ್ಮ ವ್ಯಾಪ್ತಿ ಇಲ್ಲವಾದ್ದರಿಂದ, ಜ್ಞಾನೇನ=ಜ್ಞಾನದಿಂದ, ಬಂಧಸ್ಯ=ಸಂಸಾರದ ನಾಶೇ=ನಾಶದ ವಿಷಯದಲ್ಲಿ, ಅನುಪಪನ್ನತಾ=ಅನುಪಪತ್ತಿಯು, ನಾಸ್ತಿ=ಇಲ್ಲ, ಭವದ್ಗ್ರಂಥಸ್ಯ=ನಿಮ್ಮ ಗ್ರಂಥದ (ಗ್ರಂಥದಲ್ಲಿ ಹೇಳಿದ) ನಿರ್ಬಂಧ ನಾಶೇತು=ಅಜ್ಞಾನಕ್ಕೇ, ನಾಶ ಎಂಬ ಆಗ್ರಹ ಪೂರ್ವಕವಾದ ಬಂಧನಾಶದ ವಿಷಯದಲ್ಲಿ ಮಾತ್ರ ಅನುಪಪನ್ನತಾ ಅಸ್ತಿ=ಅನುಪಪತ್ತಿ ಇದೆ.

**ಅನುವಾದ** - ಜ್ಞಾನೇನ ಬಂಧಸ್ಯ ನಿವೃತ್ತಿಃ ಎನ್ನುವುದನ್ನು ವೇದ ಹೇಳುತ್ತಿದೆ. ಇದರಲ್ಲಿ ಅನುಪಪತ್ತಿ ಏನೂ ಇಲ್ಲ. ಇದನ್ನು ಸಾಧಿಸಲು ನೀವು ಆಶ್ರಯಿಸಿದ ವ್ಯಾಪ್ತಿ ಜ್ಞಾನೇನ ಅಜ್ಞಾನಸ್ಯ ಏವ ನಿವೃತ್ತಿಃ ಎಂದು ಇದಕ್ಕೆ ನಿರ್ಬಂಧವನ್ನು ಹಾಕುತ್ತೀರಿ. ಇಲ್ಲಿಯವರೆಗಿನ ವಿಚಾರದಂತೆ ಜ್ಞಾನದಿಂದ ಅಜ್ಞಾನ ನಿವೃತ್ತಿ ಎಂಬ ನಿಮ್ಮ ವ್ಯಾಪ್ತಿ ಅಪ್ರಾಮಾಣಿಕ. ನಿರ್ಬಂಧವಂತೂ ಬಹಳ ಅಪ್ರಾಮಾಣಿಕ. ಆದರಿಂದ ಜ್ಞಾನೇನ ಬಂಧಸ್ಯ ನಿವೃತ್ತಿಃ ಎಂದ ವೇದಮತಕ್ಕೇನೂ ಹಾನಿಯಾಗಲಿಲ್ಲ. ನಿಮ್ಮ ಗ್ರಂಥದಲ್ಲಿ ನಿರ್ಬಂಧಪೂರ್ವಕ ಬಂಧನಾಶವನ್ನು ಪ್ರತಿಪಾದಿಸಲು ಹೊರಟದ್ದರಿಂದ ನಿಮಗೆ ಶ್ರುತಿಸೂತ್ರ ದ್ರೋಹ ಕಟ್ಟಿಕೊಂಡ ಅನುಪಪತ್ತಿಯೇ ಹಾನಿಯಾಯಿತಷ್ಟೆ.

**ಭಾವವಿಲಾಸಿನೀ–** ತಸ್ಮಾತ್‌ಪರೋದೀರಿತ ವ್ಯಾಪ್ತೇರಭಾವಾತ್ । ಅನುಪಪನ್ನತಾ ನೇತಿ ಸಂಬಂಧಃ । ನಿರ್ಬಂಧನಾಶೇ ಗುರೋರ್ಗ್ರಂಥಂ ದೂಷಯತೋ ಬಂಧನಾಶಾನುಪಪತ್ತ್ಯಾಖ್ಯ

**ದೂಷಣಮುಪಸರ್ಗಮಾತ್ರಾಧಿಕ್ಯೇನ ಸ್ವಗ್ರಂಥ ಏವ ಪತಿತಮತೋ ಮಹದ್ದ್ರೋಹೋ ನ ಕರ್ತವ್ಯ ಇತಿ ಭಾವಃ ॥ ೩೩೨ ॥**

**ವಿವರಣೆ** - ಬಂಧನಾಶಕ್ಕೆ ಅನುಪಪತ್ತಿ ಇಲ್ಲ. ನಿರ್ಬಂಧನಾಶವಾದಕ್ಕೆ ಅನುಪಪತ್ತಿ ಬಂದಿತು. ಹೀಗೆ ಬಂಧ- ನಿರ್ಬಂಧ ಎಂಬ ಉಪಸರ್ಗದ ಜೋಡಣೆಯಿಂದ ಅನುಪಪತ್ತಿ ಹೆಚ್ಚು ಬಂದಿದ್ದು ಗುರುಗಳಾದ ಬಾದರಾಯಣರಿಗೆ ದ್ರೋಹ ಬಗೆಯಬಾರದು. ದ್ರೋಹ ಬಗೆದ ಪರಿಣಾಮವಾಗಿಯೇ ಬಂಧನಾಶಾನುಪಪತ್ತಿಯು ಇನ್ನೂ ಹೆಚ್ಚಾಗಿ ನಿನ್ನ ಗ್ರಂಥದಲ್ಲಿಯೇ ಬಂದಿತು. 'ನಿರ್' ಎಂಬ ಉಪಸರ್ಗಾಧಿಕ್ಯವೇ ಇದನ್ನು ಹೇಳುತ್ತದೆ.

**ಅತೋ ಜ್ಞಾನವಿನಾಶ್ಯತ್ವಸ್ಯಾನ್ಯಥಾನುಪಪತ್ತಿತಃ ।**
**ಅಜ್ಞಾನೋಪಾದಾನಕತ್ವಂ ಕೇನೋಪಾಯೇನ ಸಾಧ್ಯತೇ ॥ ೩೩೩ ॥**

**ಅರ್ಥ**– ಅತಃ=ಬಂಧವು ಸಾಕ್ಷಾತ್ ಜ್ಞಾನನಾಶ್ಯವಾಗಬಹುದಾದ್ದರಿಂದ, ಜ್ಞಾನವಿನಾಶ್ಯತ್ವಸ್ಯ ಅನ್ಯಥಾನುಪಪತ್ತಿತಃ ಅಜ್ಞಾನೋಪಾದಾನಕತ್ವಂ=ಬಂಧಕ್ಕೆ ಜ್ಞಾನದಿಂದ ನಾಶವನ್ನು ಅಜ್ಞಾನಕಾರ್ಯತ್ವವಿಲ್ಲದೆ ಒಪ್ಪಲಾಗದು ಎಂಬುದನ್ನು ಕೇನ=ಯಾವ, ಉಪಾಯೇನ=ಸಾಧನದಿಂದ, ಸಾಧ್ಯತೇ=ಸಾಧಿಸಲಾಗುವುದು?

**ಅನುವಾದ** - ಬಂಧಸ್ಯ ಜ್ಞಾನನಾಶ್ಯತ್ವಾನ್ಯಾಥಾನುಪಪತ್ತಿತಃ ಅಜ್ಞಾನೋಪಾದಾನಕತ್ವಂ ಎಂಬ ಅರ್ಥಾಪತ್ತಿಯಿಂದ ಜಗತ್ತು ಅಜ್ಞಾನಕಲ್ಪಿತ ಎಂದು ಸಾಧಿಸಲು ಹೊರಟದ್ದೀರಿ. ನಾವು ಬಂಧಕ್ಕೆ ಸಾಕ್ಷಾತ್ ಜ್ಞಾನದಿಂದ ನಾಶವನ್ನು ಸಮರ್ಥಿ - ಸಿದ್ದರಿಂದ ನಿಮಗೆ ಇದನ್ನು ಸಾಧಿಸಲು ಇನ್ನೇನು ಉಪಾಯವಿದೆ? ಏನೂ ಇಲ್ಲ.

**ಭಾವವಿಲಾಸಿನೀ**– ಅತಃ ಉಕ್ತವಿಧಯಾ ಬಂಧಸ್ಯೈವ ಸಾಕ್ಷಾತ್‌ಜ್ಞಾನವಿನಾಶ್ಯತ್ವ ಸಂಭವಾತ್ । ಕೇನೋಪಾಯೇವ ಜ್ಞಾನನಿವರ್ತ್ಯತ್ವಸ್ಯಾನ್ಯಥಾನುಪಪತ್ತಿಃ । ಅಜ್ಞಾನೋಪಾದಾನತ್ವಂ ಕಲ್ಪ್ಯತೇ ನ ಕೇನಾಪ್ಯುಪಾಯೇನ । ಅನ್ಯಥೈವೋಪಪತ್ತ್ಯಾ ಭವದಭಿಲಷಿತಾನ್ಯಥಾನುಪಪತ್ತೇ- ರೇವಾಭಾವಾದಿತಿ ಭಾವಃ ॥ ೩೩೩॥

**ವಿವರಣೆ** - ಅರ್ಥಾಪತ್ತಿಗೆ ಅನ್ಯಥೈವೋಪಪತ್ತಿ= ಬೇರೆಯದರಿಂದಲೇ ಕೂಡಿಸ ಬಹುದು ಅಥವಾ ಅನ್ಯಥಾಪ್ಯುಪಪತ್ತಿ= ಬೇರೆಯದರಿಂದಲೂ ಕೂಡಿಸಬಹುದು, ಎನ್ನುವುದು ದೋಷ. ಪ್ರಕೃತ ನಿಮ್ಮದಕ್ಕೆ ಅನ್ಯಥೈವ= ಅಜ್ಞಾನೋಪಾದಾನಕತ್ವಂ ವಿನೈವ, ಉಪಪತ್ತಿ= ಹೊಂದಿಸುವಿಕೆ= ಎಂಬ ದೋಷ ಬಂದಿತು.

**ಸಾಕ್ಷಾಜ್‌ಜ್ಞಾನವಿನಾಶ್ಯತ್ವಾತ್ ಪ್ರಭುನಾಶ್ಯತ್ವತೋಽಪಿ ವಾ ।**
**ಅನಾದ್ಯಜ್ಞಾನವತ್ ಸೋಽಯಂ ಬಂಧೋ ನಾಜ್ಞಾನಕಲ್ಪಿತಃ ॥ ೩೩೪ ॥**

**ಅರ್ಥ–** ಸೋಯಂ=ಪ್ರಸಿದ್ಧವಾದ ಈ, ಬಂಧಃ=ಸಂಸಾರ ಬಂಧವು, ಅಜ್ಞಾನಕಲ್ಪಿತಃ ನ=ಅಜ್ಞಾನದಿಂದ ಕಲ್ಪಿತವಲ್ಲ, ಸಾಕ್ಷಾತ್=ನೇರವಾಗಿ, ಜ್ಞಾನವಿನಾಶ್ಯತ್ವಾತ್=ಜ್ಞಾನದಿಂದ ನಾಶವಾಗುತ್ತಿರುವುದರಿಂದ, ವಾ=ಅಥವಾ, ಪ್ರಭುನಾಶ್ಯತ್ವತಃ ಅಪಿ=ಸಮರ್ಥನಾದ ಭಗವಂತನಿಂದ ನಾಶವಾಗುತ್ತಿರುವುದರಿಂದಲೂ, ಅನಾದ್ಯಜ್ಞಾನವತ್=ಅನಾದಿಯಾದ ಅಜ್ಞಾನದಂತೆ.

**ಅನುವಾದ** - ಅನಾದಿ ಅಜ್ಞಾನವು ಭಗವಂತನ ಸಾಕ್ಷಾತ್ಕಾರದಿಂದ ನಾಶವಾಗುತ್ತದೆ. ಅಥವಾ ಜ್ಞಾನಗೋಚರನಾದ ಭಗವಂತನ ಸಾಮರ್ಥ್ಯದಿಂದ ನಾಶವಾಗುತ್ತದೆ. ಜಗತ್ತು ಅದರಂತೆಯೇ, (ಹೀಗೆ ದೃಷ್ಟಾಂತ - ಪಕ್ಷಗಳಲ್ಲಿ ಹೇತು ಬಂದಿತು.) ದೃಷ್ಟಾಂತವಾದ ಅಜ್ಞಾನ ಅನಾದಿಯಾಗಿರುವುದರಿಂದ ಅಜ್ಞಾನದಿಂದ ಕಲ್ಪಿತವಲ್ಲ, ಹಾಗಿದ್ದಲ್ಲಿ ಅದು ಅನಾದಿಯೇ ಆಗುತ್ತಿರಲಿಲ್ಲ. ಜಗತ್ತು ಅದರಂತೆಯೇ ಅಜ್ಞಾನ ಕಲ್ಪಿತವಲ್ಲ.

**ಭಾವವಿಲಾಸಿನೀ–** ನ ಕೇವಲಮಜ್ಞಾನೋಪಾದಾನಕತ್ವಸ್ಯ ಸಾಧಕಾಭಾವಃ । ಕಿಂತು ಬಾಧಕಮಪಿ ಪ್ರಮಾಣಮಸ್ತೀತ್ಯಾಹ –**ಸಾಕ್ಷಾದಿತಿ** ॥ ಸಾಕ್ಷಾತ್ ಅಜ್ಞಾನದ್ವಾರಮನಪೇಕ್ಷ್ಯೇತ್ಯರ್ಥಃ ॥೩೩೪॥

**ವಿವರಣೆ** - ಪಕ್ಷಃ ಸಾಧ್ಯವಾನ್ ಹೇತುಮತ್ತ್ವಾತ್ ದೃಷ್ಟಾಂತವತ್ - ಇದು ಯಾವುದೇ ಅನುಮಾನದ ಆಕಾರ. ಈ ಶ್ಲೋಕವು ಒಂದು ಅನುಮಾನವನ್ನು ಹೇಳುತ್ತದೆ. ಅನ್ವಯದಲ್ಲಿ ತೋರಿಸಿದ್ದು, ಪಕ್ಷಾದಿಕ್ರಮದ ಅನುಮಾನ. 'ಬಂಧಃ ನಾಜ್ಞಾನಕಲ್ಪಿತಃ ಸಾಕ್ಷಾಜ್‌ಜ್ಞಾನ ವಿನಾಶ್ಯತ್ವಾತ್, ಪ್ರಭುನಾಶ್ಯತ್ವಾದ್ವಾ ಅನ್ಯಾದ್ಯಜ್ಞಾನವತ್' ಎಂದು ಅನುಮಾನ ಪ್ರಯೋಗ.

ಹಿಂದಿನ ಅನುಮಾನದ ದೃಷ್ಟಾಂತವನ್ನು ಸಮರ್ಥಿಸುತ್ತಿದ್ದಾರೆ-

**ಪರನ್ಯಾಯೇನ ದೃಷ್ಟಾಂತಃ ಪೂರ್ವಹೇತೌ ಭವೇದ್ಧಿ ತತ್ ।**
**ಪ್ರಾಮಾಣಿಕತ್ವಾದನ್ಯಸ್ಮಿನ್ ಹೇತೌ ಚ ಸ್ಯಾನ್ನಿದರ್ಶನಮ್ ॥ ೩೩೫ ॥**

**ಅರ್ಥ–** ತತ್=ಅಜ್ಞಾನವು, ಪೂರ್ವಹೇತೌ=ಮೊದಲ ಹೇತುವಿನಲ್ಲಿ, ಪರನ್ಯಾಯೇನ= ಪರರು ಒಪ್ಪಿದಂತೆ, ದೃಷ್ಟಾಂತಃ= ದೃಷ್ಟಾಂತವು, ಭವೇತ್ ಹಿ=ಆಗುವುದಷ್ಟೆ. ಅನ್ಯಸ್ಮಿನ್ ಹೇತೌ ಚ= ಎರಡನೇಯ ಹೇತುವಿನಲ್ಲಾದರೂ, ಪ್ರಾಮಾಣಿಕತ್ವಾತ್= ಪ್ರಮಾಣಸಿದ್ಧವಾದ್ದರಿಂದ, ತತ್= ಅಜ್ಞಾನವು, ನಿದರ್ಶನಂ= ದೃಷ್ಟಾಂತವು ಭವೇತ್= ಆಗುವುದು

**ಅನುವಾದ** - ಈ ಅನುಮಾನದಲ್ಲಿ ಅಜ್ಞಾನವು ದೃಷ್ಟಾಂತವಾಗಿದ್ದು ಸಾಕ್ಷಾತ್ ಜ್ಞಾನನಾಶ್ಯತ್ವವು ಮೊದಲ ಹೇತು ಹಾಗೂ ಪ್ರಭುನಾಶ್ಯತ್ವವು ಎರಡನೆಯ ಹೇತುವಾಗಿದೆ. ಇವುಗಳಲ್ಲಿ ದೃಷ್ಟಾಂತದಲ್ಲಿ ಮೊದಲ ಹೇತು ಇದೆ ಎನ್ನುವುದನ್ನು

**ಅದ್ವೈತಿಗಳು ಒಪ್ಪುತ್ತಾರೆ. ಎರಡನೆಯದನ್ನು ಅವರು ಒಪ್ಪುವುದಿಲ್ಲ. ಆದರೆ ಪ್ರಮಾಣಸಿದ್ಧವಾದ್ದರಿಂದ ಒಪ್ಪಬೇಕಾಗುತ್ತದೆ. ಆದ್ದರಿಂದ ಸಾಧನವೈಕಲ್ಯ ಬರದು.**

**ಭಾವವಿಲಾಸಿನೀ– ಪರನ್ಯಾಯೇನ ಪರೇಣಾಜ್ಞಾನಸ್ಯೈವ ಸಾಕ್ಷಾತ್‌ಜ್ಞಾನ ವಿನಾಶ್ಯತ್ವಾಂಗೀಕಾರಾತ್ । ತದಜ್ಞಾನಮ್ ॥ ೩೩೫ ॥**

ಅಜ್ಞಾನವನ್ನು ಪಕ್ಷವಾಗಿಸಿ ಮತ್ತೊಂದು ಬಾಧಕ ಪ್ರಮಾಣವನ್ನು ಹೇಳುತ್ತಾರೆ-

**ವಿವಾದಪದಮಜ್ಞಾನಂ ಬಂಧೋಪಾದಾನಮೇವ ನ ।**
**ಸಾಕ್ಷಾಜ್‌ಜ್ಞಾನಾನಿವರ್ತ್ಯತ್ವಾದ್ ಯಥಾ ಘಟಪಟಾದಿಕಮ್ ॥ ೩೩೬ ॥**

**ಅರ್ಥ–** ವಿವಾದಪದಂ=ವಿವಾದಕ್ಕೆ ವಿಷಯವಾದ, ಅಜ್ಞಾನಂ=ಅಜ್ಞಾನವು. ಬಂಧೋಪಾದಾನಂ ನ ಭವತಿ ಏವ=ಬಂಧಕ್ಕೆ ಉಪಾದಾನವಾಗುವುದೇ ಇಲ್ಲ. ಸಾಕ್ಷಾತ್ ಜ್ಞಾನಾನಿವರ್ತ್ಯತ್ವಾತ್=ಸಾಕ್ಷಾತ್ ಜ್ಞಾನದಿಂದ ನಿವರ್ತ್ಯ ಆಗದಿರುವುದರಿಂದ. ಯಥಾ ಘಟ ಪಟಾದಿಕಂ=ಘಟ-ಪಟ ಮೊದಲಾದವುಗಳಂತೆ.

**ಅನುವಾದ -** ಅಜ್ಞಾನವು ಬಂಧಕ್ಕೆ ಉಪಾದಾನ ಹೌದೋ ಅಲ್ಲವೋ ಎಂಬ ವಿವಾದ ನಡೆದಿದೆ ಅಷ್ಟೆ. ಈ ಅಜ್ಞಾನವು ಬಂಧಕ್ಕೆ ಉಪಾದಾನವಾಗಲಾರದು. ಏಕೆಂದರೆ (ಹಿಂದೆ ಸಮರ್ಥಿಸಿದಂತೆ) ಸಾಕ್ಷಾತ್ ಜ್ಞಾನದಿಂದ ಆವರಕ ಅಜ್ಞಾನ ನಿವರ್ತ್ಯವಾಗಿಲ್ಲ. ಇದಕ್ಕೆ ದೃಷ್ಟಾಂತ ಘಟ ಪಟಾದಿಗಳು. ಘಟವು ಮುದ್ಗರ ಪ್ರಹಾರದಿಂದ ನಿವರ್ತ್ಯವೆ ಹೊರತು ಜ್ಞಾನದಿಂದಲ್ಲ. ಹೀಗೆ ಅದರಲ್ಲಿ ಹೇತು ಬಂದಿತು. ಮತ್ತು, ಘಟಕ್ಕೆ ಮೃತ್ ಉಪಾದಾನ ಹೊರತು ಅಜ್ಞಾನವಲ್ಲ. ಹೀಗೆ ಸಾಧ್ಯವೂ ಇದೆ. ಹೀಗೆ ವ್ಯಾಪ್ತಿ ಇರುವ ಹೇತು ಪಕ್ಷದಲ್ಲಿ ಇರುವುದರಿಂದ ಸಾಧ್ಯವೂ ಇರಲೇಬೇಕು.

**ಭಾವವಿಲಾಸಿನೀ–** ಅಜ್ಞಾನಂ ಪಕ್ಷೀಕೃತ್ಯಾಪಿ ಬಂಧಸ್ಯಾಜ್ಞಾನಾನುಪಾದಾನಕತ್ವಂ ಸಾಧಯತಿ ॥ **ವಿವಾದಪದಮಿತಿ** ॥ ಆವರಕಾಜ್ಞಾನಸ್ಯ ಜ್ಞಾನಾದನ್ಯೇನೈವ ನಿವರ್ತ್ಯತ್ವಸ್ಯ ಸಾಧಿತತ್ವಾನ್ನಾಸಿದ್ಧಿಃ । ಜ್ಞಾನೇನ ಪ್ರಸನ್ನಪರಮಾತ್ಮನಾ ಮೋಕ್ಷದಶಾಯಾಮಜ್ಞಾನಸ್ಯಾಪಿ ನಿವರ್ತ್ಯತ್ವಾತ್ ಪುನರಸಿದ್ಧಿ-ಪರಿಹಾರಾಯ ಸಾಕ್ಷಾದಿತ್ಯುಕ್ತಮ್ ॥ ೩೩೬ ॥

ಜ್ಞಾನನಿವರ್ತ್ಯತ್ವಾನ್ಯಥಾನುಪಪತ್ತ್ಯಾ, ಅಜ್ಞಾನೋಪಾದಾನಕತ್ವಂ ಬಂಧಸ್ಯ ಎಂಬ ಅರ್ಥಾಪತ್ತಿಗೆ ಹಿಂದೆ ಹೇಳಿದ ಬಾಧವನ್ನು ನೆನಪಿಸುತ್ತಾರೆ-

**ಬಂಧೇ ಜ್ಞಾನವಿನಾಶ್ಯತ್ವಸ್ಯಾನ್ಯಥಾನುಪಪತ್ತಿತಃ ।**
**ಅಜ್ಞಾನೋಪಾದಾನಕತ್ವಂ ಸಿಷಾಧಯಿಷಿತಂ ತವ ॥ ೩೩೭ ॥**

ಅನಾದಿರೇವ ಬಂಧೋಽಯಂ ತವಾಪಿ ಚ ಮಮಾಪಿ ಚ ।
ಅತೋ ಬಾಧಿತ ಏವಾಯಮರ್ಥಃ ಸಾಧ್ಯಃ ಕಥಂ ವದ ।
ಅರ್ಥಾಪತ್ತಿಸ್ತತಸ್ತೇಽಭೂದನರ್ಥಾಪತ್ತಿರೇವ ಹಿ ॥ ೩೩೮ ॥

**ಅರ್ಥ–** ಬಂಧೇ=ಬಂಧದಲ್ಲಿ ಜ್ಞಾನವಿನಾಶ್ಯತ್ವಸ್ಯ= ಜ್ಞಾನನಿವರ್ತ್ಯತ್ವದ, ಅನ್ಯಥಾನುಪಪತ್ತಿತಃ= ಅಜ್ಞಾನೋಪಾದಾನಕತ್ವದ ಹೊರತು ಕೂಡದಿರುವಿಕೆಯಿಂದ, ಅಜ್ಞಾನೋಪಾದಾನಕತ್ವಂ= ಅಜ್ಞಾನನಿರ್ಮಿತತ್ವವು, ತವ=ನಿನಗೆ, ಸಿಷಾಧಯಿಷಿತಂ= ಸಾಧಿಸಲು ಇಷ್ಟವಾಗಿದೆ. ಆದರೆ ತವ ಅಪಿ=ನಿನಗೂ, ಚ=ಮತ್ತು, ಮಮ ಅಪಿ=ನನಗೂ, ಅಯಂ ಬಂಧಃ=ಈ ಸಂಸಾರವು, ಅನಾದಿಃ=ಆದಿ ಇಲ್ಲದ್ದು. ಅತಃ=ಆದ್ದರಿಂದ, ಬಾಧಿತಃ=ಪ್ರಮಾಣವಿರುದ್ಧವಾದ, ಅಯಂ ಅರ್ಥಃ=ಅಜ್ಞಾನೋಪಾದಾನಕತ್ವವು, ಕಥಂ= ಹೇಗೆ, ಸಾಧ್ಯಃ ಭವತಿ=ಸಾಧ್ಯವಾಗುತ್ತದೆ. ವದ=ಹೇಳು. ತತಃ=ಆದ್ದರಿಂದ, ಅರ್ಥಾಪತ್ತಿಃ= ಅರ್ಥಾಪತ್ತಿಯು, ತೇ= ನಿನಗೆ, ಅನರ್ಥಾಪತ್ತಿರೇವ=ಬಾಧವೆಂಬ ಅನರ್ಥಕ್ಕೆ ಕಾರಣವೇ, ಅಭೂತ್ ಹಿ=ಆಯಿತಷ್ಟೆ

**ಅನುವಾದ** - ತರತಿ ಶೋಕಂ ಆತ್ಮವಿತ್ ಎಂಬ ವೇದವಾಕ್ಯದಲ್ಲಿ ಆತ್ಮತತ್ವಜ್ಞಾನದಿಂದ ಬಂಧವು ನಾಶವಾಗುತ್ತದೆ. ಇದು ಹೊಂದಬೇಕಾದರೆ ಜಗತ್ತು ಅಜ್ಞಾನದ ಕಾರ್ಯ ಆಗಬೇಕು - ಇದು ನಿಮ್ಮ ಅರ್ಥಾಪತ್ತಿಯ ಆಶಯ. ಆದರೆ ನಾವು ಮತ್ತು ನೀವು ಇಬ್ಬರೂ ಒಪ್ಪುವಂತೆ ಬಂಧವು ಅನಾದಿ. ಆದಿಯೇ ಇಲ್ಲದ್ದಕ್ಕೆ ಅಜ್ಞಾನದಿಂದ ಉತ್ಪತ್ತಿಯನ್ನು ಹೇಗೆ ಸಾಧಿಸಬಹುದು? ಆದ್ದರಿಂದ, ನಿಮ್ಮ ಅರ್ಥಾಪತ್ತಿಯು ನಿಮಗೆ ಅನರ್ಥದ ಆಪತ್ತಿಗೆ=ಪ್ರಾಪ್ತಿಗೆ ಕಾರಣವಾಯಿತಷ್ಟೆ?

**ಭಾವವಿಲಾಸಿನೀ–** ಪರಕೀಯಾರ್ಥಾಪತ್ತೇಃ ಪ್ರಾಗುಕ್ತಂ ಬಾಧಂ ಸ್ಮಾರಯತಿ ॥ ಬಂಧ ಇತಿ ॥ ಪ್ರಾಕ್ಪರಾಕೌಶಲ ಪ್ರದರ್ಶನಾರ್ಥಮೇವೋಕ್ತಮ್ । ಇದಾನೀಮರ್ಥಾ- ಪತ್ತೇರ್ಬಾಧಿತವಿಷಯತ್ವಾಯೇತಿ ಭೇದಃ ॥೩೩೭-೩೩೮॥

**ವಿವರಣೆ** - ಅರ್ಥಾಪತ್ತಿ - ಅನರ್ಥಾಪತ್ತಿ ಎಂಬ ಶಬ್ದಗಳ ಸ್ವಾರಸ್ಯವನ್ನು ಬಳಸಿ ಇಲ್ಲಿ ದೋಷವನ್ನು ಹೇಳಲಾಗಿದೆ.

**ಹಿಂದಿನ (೩೩೪, ೩೩೫, ಶ್ಲೋಕಗಳಲ್ಲಿ ಹೇಳಿದ) ಅನುಮಾನಗಳಲ್ಲಿ ಹೇತುವನ್ನು ಪರನಿಗೆ ಸಾಧಿಸುವ ಆವಶ್ಯಕತೆ ಇದ್ದಿತು. ಈಗ ಅದರ ಅಗತ್ಯವಿಲ್ಲದ ಉಭಯ ಸಮ್ಮತವಾದ ಅನುಮಾನವನ್ನು ಹೇಳುತ್ತಾರೆ-**

ಅನಾದಿತ್ವಾಚ್ಚ ಬಂಧೋಽಯಂ ನ ಸ್ಯಾದಜ್ಞಾನಕಲ್ಪಿತಃ ।
ಆತ್ಮವತ್ ತೇನ ಶಾಸ್ತ್ರಸ್ಯ ಪ್ರಕ್ರಿಯಾ ವಿಕ್ರಿಯೈವ ತೇ ॥ ೩೩೯ ॥

**ಅರ್ಥ–** ಚ=ಮತ್ತು, ಅಯಂ ಬಂಧಃ=ಈ ಬಂಧವು, ಅಜ್ಞಾನಕಲ್ಪಿತಃ ನ ಸ್ಯಾತ್=ಅಜ್ಞಾನಕಲ್ಪಿತವಾಗದು, ಅನಾದಿತ್ವಾತ್=ಅನಾದಿಯಾದ್ದರಿಂದ, ಆತ್ಮವತ್= ಆತ್ಮನಂತೆ. ತೇನ=ಆದ್ದರಿಂದ, ತೇ=ನಿನ್ನ, ಶಾಸ್ತ್ರಸ್ಯ=ಶಾಸ್ತ್ರದ, ಪ್ರಕ್ರಿಯಾ=ಜಗದುತ್ಪತ್ತಿಯ ಕ್ರಮವು, ವಿಕ್ರಿಯಾ ಏವ=ವಿಪರೀತಕ್ರಿಯೆಯೇ, ಭವತಿ=ಆಗುತ್ತದೆ.

**ಅನುವಾದ - ಹೇಗೆ ಅನಾದಿಯಾದ ಆತ್ಮ ಅಜ್ಞಾನಕಲ್ಪಿತನಲ್ಲವೊ, ಅದರಂತೆ, ಬಂಧವು ಅನಾದಿಯಾದ್ದರಿಂದ ಅಜ್ಞಾನಕಲ್ಪಿತವಾಗದು, ಈ ಅನುಮಾನದ ವಿರೋಧ ಬರುವುದರಿಂದ ನಿನ್ನ ಶಾಸ್ತ್ರದ ಬಂಧನಾಶಾದಿಗಳ ಪ್ರಕ್ರಿಯೆಯು, ಪ್ರಮಾಣಗಳಿಗೆ ವಿಪರೀತವೇ ಆಗಿದೆ.**

**ಭಾವವಿಲಾಸಿನೀ–** ಪ್ರಾಕ್‌ಪ್ರಸಾಧ್ಯಾಂಗಕಹೇತುಭಿಃ ಸಾಧ್ಯಂ ಸಾಧಿತವಮ್ । ಇದಾನೀಮುಭಯವಾದಿ ಸಂಪ್ರತಿಪನ್ನೇನಾಪಿ ಹೇತುನಾ ಸಾಧಯತಿ ॥ **ಅನಾದಿತ್ವಾದಿತಿ ॥೩೩೯॥**

**ವಿವರಣೆ** - ಇಲ್ಲಿ ಪ್ರಕ್ರಿಯಾ - ವಿಕ್ರಿಯಾ ಶಬ್ದಗಳ ಪ್ರಾಸದೊಂದಿಗೆ ವಿಮರ್ಶೆ ಮಾಡಲಾಗಿದೆ.

**ಕಿಂಚ ಬಾಧಪ್ರಮಾನಾಶ್ಯಂ ನೈವ ಕಿಂಚಿತ್ ಪ್ರದೃಶ್ಯತೇ ।**
**ಪ್ರಾಜ್ ನಷ್ಟರಜತಜ್ಞಾನೇ ಭ್ರಮತ್ವಂ ಬೋಧಯೇದ್ಧಿ ಸಾ ॥ ೩೪೦ ॥**

**ಅರ್ಥ–** ಕಿಂಚ=ಮತ್ತು, ಬಾಧಪ್ರಮಾನಾಶ್ಯಂ=ಬಾಧದಿಂದ ನಾಶವಾಗುವ, ಕಿಂಚಿತ್ ಅಪಿ=ಯಾವುದೂ ನಪ್ರದೃಶ್ಯತೇ=ಕಾಣುವುದಿಲ್ಲ. ಸಾ=ಬಾಧಪ್ರಮಾವು ಪ್ರಾಕ್ ನಷ್ಟರಜತಜ್ಞಾನೇ=ಹಿಂದೆ ನಾಶವಾಗಿರುವ ರಜತಜ್ಞಾನದಲ್ಲಿ, ಭ್ರಮತ್ವಂ=ಭ್ರಮತ್ವವನ್ನು ಬೋಧಯೇತ್ ಹಿ=ತಿಳಿಸುತ್ತದೆ. ಅಷ್ಟೆ.

**ಅನುವಾದ - ಲೋಕದಲ್ಲಿ (ಇದಂ ರಜತಂ ಮೊದಲಾದ) ಭ್ರಮೆಗಳ ನಂತರ, ಬರುವ (ಇದಂ ನ ರಜತಂಎಂಬ) ಬಾಧಜ್ಞಾನಗಳು ಆರೋಪಿತವನ್ನು (ರಜತವನ್ನು) ನಾಶಮಾಡುವುದಿಲ್ಲ, ಕ್ಷಣಿಕವಾದ್ದರಿಂದ ಮೊದಲೇ ಭ್ರಮವು ನಾಶವಾಗಿರುತ್ತದೆ. ಬಾಧವು ನಾಶವಾಗಿರುವ ಆ ಜ್ಞಾನವನ್ನೇ ಭ್ರಮ ಎಂದು ತಿಳಿಸುತ್ತದೆ. ಆದ್ದರಿಂದ ಜ್ಞಾನನಿವರ್ತ್ಯತ್ವವು ದೃಷ್ಟಾಂತದಲ್ಲಿ ಬರುವುದಿಲ್ಲ.**

**ಭಾವವಿಲಾಸಿನೀ– ಅನಯೈವಾರ್ಥಾಪತ್ತ್ಯಾ ಜಗತಿ ಜ್ಞಾನನಿವರ್ತ್ಯತ್ವಾಖ್ಯಂ ಮಿಥ್ಯಾತ್ವಂ ಪರೋ ವಕ್ತಿ । ತದಪಿ ನ ಯುಕ್ತಮಿತ್ಯಾಹ – ಕಿಂ ಚೇತಿ ॥ ಸಾ ಬಾಧಪ್ರಮಾ ॥ ೩೪೦ ॥**

**ಅಥವಾ, (ಬಾಧಪ್ರಮಾ) ತತ್ರ ಪುನಃ ಭ್ರಮಸ್ಯ ಅನುತ್ಪಾದಂ ಸಾಧಯೇತ್, ರಜತಸ್ಯ ನಾಶಃ ತು ನ (ಭವತಿ). ಹಿ ಪ್ರಾಕ್ ಸತಃ ವಿನಾಶನಂ (ಭವತಿ).**

**ಪುನರ್ಭ್ರಮಸ್ಯಾನುತ್ಪಾದಮಥವಾ ತತ್ರ ಸಾಧಯೇತ್ ।**
**ರಜತಸ್ಯ ತು ನಾಶೋ ನ ಪ್ರಾಕ್ ಸತೋ ಹಿ ವಿನಾಶನಮ್ ॥ ೩೪೧ ॥**

**ಅರ್ಥ–** ಅಥವಾ=ಮತ್ತೊಂದು ಪಕ್ಷ, ಬಾಧಪ್ರಮಾ=ನೇದಂ ರಜತಂ ಎಂಬ ಬಾಧವು, ತತ್ರ= ಆ ವಿಷಯದಲ್ಲಿ ಪುನಃ=ಮತ್ತೆ, ಭ್ರಮಸ್ಯ=ಭ್ರಮದ, ಅನುತ್ಪಾದಂ= ಹುಟ್ಟದಿರುವಿಕೆಯನ್ನು, ಸಾಧಯೇತ್=ಸಾಧಿಸೀತು. ರಜತಸ್ಯ=ಶುಕ್ತಿರಜತದ, ನಾಶಸ್ತು= ನಾಶವಾದರೊ, ನ ಭವತಿ=ಆಗುವುದಿಲ್ಲ, ಹಿ=ಏಕೆಂದರೆ, ಪ್ರಾಕ್=ಹಿಂದೆ, ಸತಃ= ಇರುವುದಕ್ಕೆ, ವಿನಾಶನಂ=ನಾಶವು, ಭವತಿ=ಆಗುತ್ತದೆ.

**ಅನುವಾದ -** ನೇದಂ ರಜತಂ ಎಂಬ ಬಾಧವು ಏನು ಮಾಡುತ್ತದೆ ಎಂದು ಪರಿಶೀಲಿಸಿದರೆ ಹೀಗೆ ಎರಡನೆಯ ಉತ್ತರವನ್ನು ಕಾಣಬಹುದು. ನೇದಂ ಜರತಂ ಎಂದು ತಿಳಿದವನಿಗೆ ಅದೇ ಶುಕ್ತಿಯ ವಿಷಯದಲ್ಲಿ ಮತ್ತೆ ಭ್ರಮೆ ಬರುವುದಿಲ್ಲ - ಎಂದು. ಹೊರತು ರಜತದ ನಾಶ ಬಾಧದಿಂದ ಆಗದು. ಏಕೆಂದರೆ, ಹಿಂದೆ ಇದ್ದದ್ದು ಮುಂದೆ ನಾಶವಾಗುತ್ತದೆ. ರಜತವು ಎಂದೂ ಇಲ್ಲದ್ದು. ಆದ್ದರಿಂದ ನಾಶವಾಗದು.

**ಭಾವವಿಲಾಸಿನೀ–** ತತ್ರಶುಕ್ತೌ ॥ ೩೪೧ ॥

ಬಾಧದಿಂದ ರಜತನಾಶವಾಗುತ್ತದೆ ಎಂದು ಒಪ್ಪಿದ ಪಕ್ಷದಲ್ಲೂ ದೋಷದ ಪ್ರತಿಪಾದನೆ ಮಾಡುತ್ತಾರೆ-

**ನಾಶಶ್ಚೇತ್ ತರ್ಹ್ಯುಪಾದಾನನಾಶಾನ್ನಷ್ಟಂ ಪುರೈವ ಹಿ ।**
**ಅತೋ ಬಾಧಪ್ರಮಾನಾಶ್ಯಂ ಜಗತ್ಯಪಿ ನ ಕಿಂಚನ ॥ ೩೪೨ ॥**

**ಅರ್ಥ–** ನಾಶಃ ಚೇತ್=ಒಂದು ವೇಳೆ ರಜತದ ನಾಶವಾಗುವುದಾದರೆ, ತರ್ಹಿ=ಆ ಪಕ್ಷದಲ್ಲಿ, ರಜತಂ=ರಜತವು, ಉಪಾದಾನನಾಶಾತ್. ಉಪಾದಾನವಾದ ಅಜ್ಞಾನದ ನಾಶದಿಂದ, ಪುರೈವ=ಮೊದಲೇ, ನಷ್ಟಂ ಹಿ=ನಾಶ ಹೊಂದಿದೆಯಷ್ಟೆ? ಅತಃ=ದೃಷ್ಟಾಂತದಲ್ಲಿ ಬಾಧಪ್ರಮಾನಾಶ್ಯವಾದದ್ದು ಏನೂ ಇಲ್ಲದಿರುವುದರಿಂದ, ಜಗತಿ=ಜಗತ್ತಿನಲ್ಲಿ, ಬಾಧಪ್ರಮಾನಾಶ್ಯಂ= ಬಾಧಜ್ಞಾನದಿಂದ ನಾಶ ಹೊಂದುವುದು ಕಿಂಚನ ಅಪಿ ಯಾವುದೂ ನಾಸ್ತಿ=ಇಲ್ಲ.

**ಅನುವಾದ -** ರಜತದ ನಾಶವಾಗುತ್ತದೆ ಎಂಬ ನಿಮ್ಮ ವಾದವನ್ನು ಒಪ್ಪಿದರೂ, ಅದು ಜ್ಞಾನದಿಂದ ನೇರವಾಗಿ ಆಗುವುದಿಲ್ಲ. ಮೊದಲು ಉಪಾದಾನವಾದ ಆವರಣವಾದ ಅಜ್ಞಾನ ನಷ್ಟವಾಗಿರುತ್ತದೆ. ಅನಂತರ ಅದರ ಕಾರ್ಯವಾದ ರಜತವೂ ನಷ್ಟವಾಗಿರುತ್ತದೆ. ಆನಂತರ ಜ್ಞಾನ ಹುಟ್ಟುವುದು ಆವರಣವಿರುವಾಗ ಜ್ಞಾನ ಹುಟ್ಟಲಾರದು. ಹೀಗೆ, ಉಪಾದಾನ ನಾಶವಾದಾಗಲೇ ನಷ್ಟವಾಗಿರುವ ರಜತ ಹೇಗೆ ಮತ್ತೆ ಜ್ಞಾನದಿಂದ ನಾಶ ಹೊಂದಲು ಸಾಧ್ಯ? ಅದರಿಂದ ಜ್ಞಾನದಿಂದ ಅಜ್ಞಾನ

ನಾಶವೂ ಇಲ್ಲ, ಅಜ್ಞಾನೋಪಾದಾನಕವಾದ ರಜತದ ನಾಶವೂ ಇಲ್ಲ. ಎರಡೂ ಜ್ಞಾನ ಹುಟ್ಟುವ ಮೊದಲೇ ಆಗಿರುತ್ತದೆ.

**ಭಾವವಿಲಾಸಿನೀ–** ನಾಶಪಕ್ಷೇಽಪಿ ದೂಷಣಮಾಹ – **ನಾಶಶ್ಚೇದಿತಿ** ॥ ಉಪಾದಾನನಾಶಾತ್ ಉಪಾದಾನಾಜ್ಞಾನನಾಶಾತ್ । ಪುರಾ ಬಾಧಪ್ರಮಾತಃ ಪುರಾ । ಆವರಣಾಜ್ಞಾನ-ನಾಶೋತ್ತರಕಾಲಂ ಹಿ ಬಾಧಪ್ರಮಾ । ರಜತಸ್ಯಾವಿದ್ಯಕತ್ವಪಕ್ಷೇಽಪ್ಯವಿದ್ಯಾನಾಶಕಾಲ ಏವ ನಾಶ ಇತಿ ಭಾವಃ । ಅತಃ ಶುಕ್ತಿರಜತಾದೌ ಬಾಧಪ್ರಮಾನಾಶ್ಯಸ್ಯೈಕಸ್ಯಾಪ್ಯದರ್ಶನಾತ್ ॥ ೩೪೨ ॥

ಭವೇದ್ ದೃಷ್ಟಾನುಸಾರಶ್ಚೇದನ್ಯಥಾಽದೃಷ್ಟಕಲ್ಪನಾ ।
ಅರ್ಥಾಪತ್ತೇಸ್ತತೋ ಮೂಲಮರ್ಥಸ್ಯಾಪತ್ತಿರೇವ ತೇ ॥ ೩೪೩ ॥

**ಅರ್ಥ–** ದೃಷ್ಟಾನುಸಾರಶ್ಚೇದ್= ಅನುಭವಾನುಸಾರ ಕಲ್ಪಿಸುವುದಾದರೆ ಹೀಗೆ, ಭವೇತ್= ಆಗುತ್ತದೆ. ಅನ್ಯಥಾ=ಇದಕ್ಕೆ ಹೊರತಾಗಿ ರಜತದ ನಾಶವನ್ನು ಒಪ್ಪಿದರೆ, ಅದೃಷ್ಟಕಲ್ಪನಾ= ಅದೃಷ್ಟಕಲ್ಪನಾ ಎಂಬ ದೋಷವು, ಭವೇತ್=ಬರುತ್ತದೆ. ತತಃ=ಈ ಕಾರಣಗಳಿಂದ, ಅರ್ಥಾಪತ್ತೇಃ= ಅರ್ಥಾಪತ್ತಿಯ, ಮೂಲಂ=ಪ್ರವೃತಿಮೂಲ, ಅರ್ಥಸ್ಯ=ಬಾಧ ಜ್ಞಾನದಿಂದ ಏನೋ ನಾಶವಾಗುತ್ತದೆ ಎಂಬ ವಿಷಯದ, ಆಪತ್ತಿಃ ಏವ=ಭ್ರಾಂತಿಯೇ ಆಗಿದೆ.

**ಅನುವಾದ -** ಅನುಭವವನ್ನು ಅನುಸರಿಸಿ ಒಪ್ಪುವುದಾದರೆ ಹಿಂದೆ ಹೇಳಿದಂತೆಯೇ ಒಪ್ಪಬೇಕು. ಅದನ್ನು ಬಿಟ್ಟು ಬಾಧಜ್ಞಾನದಿಂದ ರಜತದ ನಾಶವಾಗುತ್ತದೆ ಎಂದರೆ ಅದೃಷ್ಟಕಲ್ಪನಾದೋಷವು ಬರುತ್ತದೆ. ಅದು ಭ್ರಮೆ. ಹೀಗೆ, ನಿಮ್ಮ ಭ್ರಮೆಯೇ ಅರ್ಥಾಪತ್ತಿಯ ಮೂಲ ಎಂದು ಸಿದ್ಧವಾಯಿತು. ಎಂದರೆ, ವಿಚಾರಮಾಡಿದರೆ ನಿಮ್ಮ ಅರ್ಥಾಪತ್ತಿಗೆ ಮೂಲವೇ ಇಲ್ಲ.

**ಭಾವವಿಲಾಸಿನೀ–** ದೃಷ್ಟಾನುಸಾರಶ್ಚೇತ್ ದೃಷ್ಟಾನುಸಾರೇಣ ಕಲ್ಪ್ಯತೇ ಚೇದಿತ್ಯರ್ಥಃ । ತತಃ ಬಾಧಪ್ರಮಾಯಾ ನಾಶಕತ್ವಾದರ್ಶನಾತ್ । ಅರ್ಥಾಪತ್ತೇರ್ಜಗತಿ ಜ್ಞಾನವಿನಾಶ್ಯತ್ವ-ಪ್ರಾಪಕಾರ್ಥಾಪತ್ತೇಃ । ಮೂಲಂ ಉತ್ಥಾನಮೂಲಮ್ । ಅರ್ಥಸ್ಯಾಪತ್ತಿಃ ಆಪತ್ ಭ್ರಮ ಇತ್ಯರ್ಥಃ । ಶುಕ್ತಿರಜತಾದೌ ಬಾಧಕಪ್ರಮಯಾ ಕಸ್ಯಚಿನ್ನಾಶೋಽಸ್ತೀತಿ ನಾಶರೂಪಾರ್ಥಸ್ಯ ಭ್ರಾಂತಿರೇವ ತವಾರ್ಥಾಪತ್ತೇರ್ಮೂಲಮ್ । ವಿಚಾರ್ಯಮಾಣೇ ನಿರ್ಮೂಲೈ-ವಾರ್ಥಾಪತ್ತಿರಿತಿಭಾವಃ ॥ ೩೪೩ ॥

ತಸ್ಮಾಜ್‌ಜ್ಞಾನೇನಾವಿನಾಶ್ಯವಸ್ತುತ್ವಾದ್ ಬ್ರಹ್ಮವಜ್ಜಗತ್ ।
ಪರಮಾರ್ಥಸದೇವಾಭೂನ್ನಾಭೂತ್ ತವ ಸಮೀಹಿತಮ್ ॥ ೩೪೪ ॥

**ಅರ್ಥ–** ತಸ್ಮಾತ್=ಆದ್ದರಿಂದ, ಜಗತ್=ಜಗತ್ತು, ಬ್ರಹ್ಮವತ್=ಬ್ರಹ್ಮನಂತೆ, ಜ್ಞಾನೇನ= ಬಾಧಪ್ರಮಾದಿಂದ, ಅವಿನಾಶ್ಯವಸ್ತುತ್ವಾತ್= ನಾಶವಾಗದ ವಸ್ತುವಾದ್ದರಿಂದ,

ಪರಮಾರ್ಥಸತ್ ಏವ=ಪಾರಮಾರ್ಥಿಕ ಸತ್ಯವೇ, ಅಭೂತ್=ಆಯಿತು, ತವ=ನಿನ್ನ ಸಮೀಹಿತಂ=ಇಷ್ಟವಾದ ಮಿಥ್ಯಾತ್ವವು ನಾಭೂತ್=ಸಿದ್ಧವಾಗಲಿಲ್ಲ.

**ಅನುವಾದ** - ಇಲ್ಲಿಯವರೆಗೆ ಪ್ರತಿಪಾದಿಸಿದಂತೆ, ತರತಿ ಶೋಕಮಾತ್ಮವಿತ್ ಎಂಬ ವಾಕ್ಯದಂತೆ ಜಗತ್ತು ಬಾಧಜ್ಞಾನದಿಂದ ನಾಶವಾಗದು (ಆ ವಾಕ್ಯಕ್ಕೆ ಆ ಅಭಿಪ್ರಾಯವಿಲ್ಲ.) ಜ್ಞಾನದಿಂದ ನಾಶವಾಗದ ಬ್ರಹ್ಮ ಹೇಗೆ ಪಾರಮಾರ್ಥಿಕನೋ ಹಾಗೇ ಜಗತ್ತು ಅದೇ ಹೇತುವಿನಿಂದ ಪಾರಮಾರ್ಥಿಕವಾಯಿತು. ನೀವು ಬಯಸಿದಂತೆ ಮಿಥ್ಯಾ ಆಗಲಿಲ್ಲ.

**ಭಾವವಿಲಾಸಿನೀ**–ಜ್ಞಾನೇನ ಬಾಧಪ್ರಮಯಾ । ನಚ ಬಂಧಪುಣ್ಯಪಾಪಾದೌ ಭಾಗಾಸಿದ್ಧಿಃ । ಪ್ರಭುಜ್ಞಾನತಯಾ ಶೋಭನವಸ್ತುಜ್ಞಾನತಯಾ ವಾ ತೇಷಾಂ ಜ್ಞಾನನಾಶ್ಯತ್ವ ಸದ್ಭಾವೇಽಪಿ ತ್ವದುಕ್ತವಿಧಜ್ಞಾನನಾಶ್ಯತ್ವಸ್ಯ ತತ್ರಾಪ್ಯಭಾವಾತ್ ॥ ೩೪೪ ॥

**ವಿವರಣೆ** - ಜಗತ್ ಪರಮಾರ್ಥಸತ್ ಜ್ಞಾನೇನ ಅವಿನಾಶ್ಯವಸ್ತುತ್ವಾತ್ ಬ್ರಹ್ಮವತ್ ಎಂಬ ಅನುಮಾನವು ಇಲ್ಲಿ ವಿವಕ್ಷಿತವಾಗಿದೆ. ಇಲ್ಲಿ ಹೇತುವಿನಲ್ಲಿ ಸೇರಿದ ಜ್ಞಾನ ಎಂದರೆ ಬಾಧಪ್ರಮಾ. ಹೀಗೆ ಅರ್ಥೈಸದೆ ಕೇವಲ ಜ್ಞಾನ ಎಂದಿಷ್ಟೇ ಆದರೆ, ರಾಜದರ್ಶನದಿಂದ ನಾಶವಾಗುವ ಕೈದಿಯ ಬಂಧ, ಸೇತುದರ್ಶನದಿಂದ ನಾಶವಾಗುವ ಪಾಪ ಮುಂತಾದವುಗಳಲ್ಲಿ ಜ್ಞಾನೇನ ಅವಿನಾಶ್ಯವಸ್ತುತ್ವ ಎಂಬ ಹೇತು ಬರದೆ ಭಾಗಾಸಿದ್ಧಿ ದೋಷವು ಬರುತ್ತಿತ್ತು. ಬಾಧಪ್ರಮಾ ಎಂಬ ಅರ್ಥವನ್ನು ಇಟ್ಟುಕೊಂಡರೆ ಬಂಧಪಾಪಾದಿಗಳು ಬಾಧದಿಂದ ನಾಶ್ಯವಾಗಿಲ್ಲ ಕಿಂತು ಬಂಧವು ಪ್ರಭುಜ್ಞಾನದಿಂದ ಪಾಪವು ಶೋಭನವಸ್ತುಜ್ಞಾನದಿಂದ ನಾಶವಾಗಿದೆ. ಆದ್ದರಿಂದ ಭಾಗಾಸಿದ್ಧಿ ಇಲ್ಲ.

ದ್ವೈತಾದ್ವೈತವಾದಿಗಳಿಬ್ಬರಿಗೂ ಸಮ್ಮತವಾದ ರೀತಿಯಿಂದ ಜಗತ್ತಿಗೆ ಸತ್ಯತ್ವವನ್ನು ಸಾಧಿಸುವ ಮತ್ತೊಂದು ಅನುಮಾನವನ್ನು ಹೇಳುತ್ತಾರೆ-

ಕಿಂಚ ಬಾಧಪ್ರಮಾ ಯೇಯಂ ಸಾಪಿ ಬಾಧ್ಯಾ ಭವನ್ಮತೇ ।
ಮಮಾಪಿ ಬಾಧ್ಯಾ ತೇನಾಸ್ಯಾ ಬಾಧಸ್ತೂಭಯಸಮ್ಮತಃ ॥ ೩೪೫ ॥

ತಸ್ಮಾದುಭಯಸಮ್ಮತ್ಯಾ ಬಾಧ್ಯಬಾಧತ್ವತಃ ಸದಾ ।
ಪರಮಾರ್ಥಸದೇವಾಭೂಜ್ಜಗದ್ ಬ್ರಹ್ಮವದೇವ ಮೇ ॥ ೩೪೬ ॥

**ಅರ್ಥ**– ಕಿಂಚ=ಮತ್ತು,ಯಾ ಇಯಂ=ಈ ಯಾವ, ಬಾಧಪ್ರಮಾ=ಬಾಧವಿದೆಯೊ, ಸಾ= ಅದು, ಭವನ್ಮತೇ ಅಪಿ=ಅದ್ವೈತಿಗಳ ಮತದಲ್ಲೂ, ಬಾಧ್ಯಾ=ಬಾಧಿತ. ತೇನ=ಹೀಗೆ, ಅಸ್ಯಾಃ= ಬಾಧದ, ಬಾಧಃ ತು=ಬಾಧವಾದರೂ, ಉಭಯಸಂಮತಃ=ಇಬ್ಬರಿಗೂ ಒಪ್ಪಿಗೆಯಾದದ್ದು, ತಸ್ಮಾತ್=ಈ ಕಾರಣದಿಂದ, ಮೇ ಜಗತ್= ನಾನು ಸತ್ಯವೆಂದು ಒಪ್ಪಿರುವ

ಜಗತ್ತು, ಉಭಯಸಂಮತ್ಯಾ ಬಾಧ್ಯಬಾಧತ್ವತಃ=ಇಬ್ಬರೂ ಒಪ್ಪಿದ ಬಾಧ್ಯವಾದ ಬಾಧವುಳ್ಳದ್ದಾದ್ದರಿಂದ, ಬ್ರಹ್ಮವತ್ = ಬ್ರಹ್ಮನಂತೆಯೇ, ಸದಾ= ಯಾವಾಗಲೂ, ಸತ್ ಏವ=ಪಾರಮಾರ್ಥಿಕವೇ, ಅಭೂತ್ =ಆಯಿತು.

**ಅನುವಾದ -** ಜಗತ್ತಿಗೆ ಒಂದು ದಿನ ನೇಹ ನಾನಾಸ್ತಿ ಇತ್ಯಾದಿ ಬಾಧಜ್ಞಾನ ಬರುತ್ತದೆ ಎನ್ನುತ್ತಾರೆ ಅದ್ವೈತಿಗಳು. ಜಗತ್ತಿನಲ್ಲಿ ಸೇರಿದ ಈ ಬಾಧವೂ ಬಾಧ್ಯವೇ ಎಂದೂ ಅವರು ಒಪ್ಪುತ್ತಾರೆ. ಬಾಧವು ಬಾಧ್ಯ ಎಂದರೆ ನಿಜವಾಗಿ ಇಲ್ಲ ಎಂದರ್ಥ. ಬಾಧವು ನಿಜವಾಗಿ ಇಲ್ಲ ಎಂದು ನಾವೂ ಒಪ್ಪುತ್ತೇವೆ. ಆದ್ದರಿಂದ ಜಗತ್ತಿನಲ್ಲಿ ಬಾಧ್ಯ ಬಾಧವತ್ತ್ವಂ ಎಂಬ ಹೇತು ಇಬ್ಬರಿಗೂ ಸಿದ್ಧವಾಯಿತು. ಬಾಧ್ಯಬಾಧವತ್ ಆದ ಬ್ರಹ್ಮ ಸತ್ಯನಾದಂತೆ ಜಗತ್ತೂ ಸತ್ಯವಾಗಬೇಕು. ಇಲ್ಲ ಎನ್ನುವುದು ಸರಿಯಲ್ಲ ಎಂದರೆ ಇದೆ ಎಂದರ್ಥ. ಇದು ಬ್ರಹ್ಮನಲ್ಲೂ ಇದೆ. ಜಗತ್ತಿನಲ್ಲೂ ಇದೆ ಎಂದು ಇಬ್ಬರಿಗೂ ಒಪ್ಪಿಗೆ ಇದೆ. ಆದ್ದರಿಂದ ಬ್ರಹ್ಮನಂತೆ ಜಗತ್ತೂ ಸತ್ಯ ಎಂದು ಸಿದ್ಧವಾಯಿತು.

ಭಾವವಿಲಾಸಿನೀ– ಉಭಯವಾದಿಸಂಪ್ರತಿಪತ್ತ್ಯಾ ಜಗತ್ಸತ್ಯತ್ವೇಽನುಮಾನಾಂತರಮಾಹ – **ಕಿಂಚೇತಿ॥** ಅಸ್ಯಾಃ ಬಾಧಪ್ರಮಾಯಾಃ ॥ ೩೪೫-೩೪೬ ॥

**ವಿವರಣೆ -** ಬಾಧ್ಯಬಾಧತ್ವತಃ ಎನ್ನುವುದಕ್ಕೆ ಹೀಗೆ ವಿಗ್ರಹ - ಬಾಧ್ಯಃಬಾಧಃ ಯಸ್ಯ ತತ್=ಬಾಧ್ಯಬಾಧಂ. ಬಾಧ್ಯಬಾಧಸ್ಯ ಭಾವಃ=ಬಾಧ್ಯಬಾಧತ್ವಂ. ಬಾಧ್ಯಬಾಧತ್ವಾತ್ ಇತಿ=ಬಾಧ್ಯಬಾಧತ್ವತಃ. ಇಲ್ಲಿ ಬಹುವ್ರೀಹಿ ಸಮಾಸವನ್ನು ಆರಂಭದಲ್ಲಿ ಮಾಡಿಕೊಳ್ಳಬೇಕು ಎಂಬುದು ಗಮನೀಯ.

ಶ್ಲೋಕದ ಕೊನೆಯಲ್ಲಿ ಬ್ರಹ್ಮವದೇವ ಮೇ ಎಂದಿದೆ. ಮೇ ಜಗತ್ ಬ್ರಹ್ಮವತ್ ಪರಮಾರ್ಥಸದೇವ ಎಂದು ಅನ್ವಯ ಮಾಡಿ ನನ್ನ ಜಗತ್ತು ಅಥವಾ ನನ್ನ ಮತದಲ್ಲಿ ಜಗತ್ತು ಬ್ರಹ್ಮನಂತೆ ಪಾರಮಾರ್ಥಿಕ ಎಂದು ಅರ್ಥೈಸಿದರೆ ನನ್ನ ಜಗತ್ತು ಎಂಬುದಕ್ಕೆ ಔಚಿತ್ಯ ಇದೆ. ನನ್ನ ಮತದಲ್ಲಿ ಜಗತ್ತು ಸತ್ಯ. ಸತ್ಯವೆಂದು ನಾನು ನಂಬಿರುವ ಜಗತ್ತು ನನ್ನ ಜಗತ್ತು. ಅದು ಈಗ ಉಭಯ ವಾದಿ ಸಿದ್ಧವಾದ ಹೇತುವಿನಿಂದ ಸತ್ಯವೆಂದೇ ಸಿದ್ಧವಾಗುತ್ತಿದೆ ಎಂದು. 'ನನ್ನ ಬ್ರಹ್ಮ' ಎಂದರೆ ನನ್ನ ಸಗುಣ ಬ್ರಹ್ಮ ಅದ್ವೈತಿಗೆ ಮಿಥ್ಯೆಯಾದ್ದರಿಂದ ದೃಷ್ಟಾಂತ ಉಭಯ ಸಮ್ಮತವಾಗದು.

ಜಗತ್ತಿಗೆ ಅಜ್ಞಾನೋಪಾದಾನಕತ್ವವನ್ನು ಒಪ್ಪಿದರೂ ಸರ್ವಮಿಥ್ಯಾತ್ವ ಸಿದ್ಧಿಸದು ಎನ್ನುತ್ತಾರೆ-

ಅಸ್ತು ವಾ ತದುಪಾದಾನಂ ಮಿಥ್ಯಾತ್ವಾಶಾ ತದಾಽಪಿ ನ ।
ಅನಾದೇರ್ಜೀವಭೇದಸ್ಯ ಕಾಲಸ್ಯ ಗಗನಸ್ಯ ಚ ॥ ೩೪೭ ॥

ಅಜ್ಞಾನಸ್ಯ ಚ ಮಿಥ್ಯಾತ್ವಂ ಕೇನೋಪಾಯೇನ ತೇ ವದ ।
ಅತಃ ಸರ್ವಸ್ಯ ಮಿಥ್ಯಾತ್ವೇ ನಾಭೂದೇತತ್ ಪ್ರಯೋಜಕಮ್॥ ೩೪೮ ॥

**ಅರ್ಥ–** ವಾ=ಅಥವಾ, ತತ್=ಅಜ್ಞಾನವು, ಉಪಾದಾನಂ=ಜಗತ್ತಿಗೆ ಉಪಾದಾನವು, ಅಸ್ತು=ಆಗಲಿ. ತದಾಪಿ=ಆಗಲೂ, ಮಿಥ್ಯಾತ್ವಾಶಾ= ಸರ್ವಮಿಥ್ಯಾತ್ವದ ಆಸೆಯು, ನ ಅಸ್ತಿ=ಇಲ್ಲ, ಅನಾದೇಃ=ಆದಿ ಇಲ್ಲದ, ಜೀವಭೇದಸ್ಯ=ಜೀವಬೇದಕ್ಕೆ, ಕಾಲಸ್ಯ=ಕಾಲಕ್ಕೆ, ಚ=ಮತ್ತು, ಗಗನಸ್ಯ=ಆಕಾಶಕ್ಕೆ, ಚ=ಮತ್ತು, ಅಜ್ಞಾನಸ್ಯ=ಅಜ್ಞಾನಕ್ಕೆ, ಮಿಥ್ಯಾತ್ವಂ= ಮಿಥ್ಯಾತ್ವವು, ತೇ=ನಿನಗೆ, ಕೇನ=ಯಾವ, ಉಪಾಯೇನ=ಸಾಧನದಿಂದ ಎಂದು, ವದ= ಹೇಳು. ಅತಃ= ಆದ್ದರಿಂದ, ಸರ್ವಸ್ಯ=ಎಲ್ಲದರ, ಮಿಥ್ಯಾತ್ವೇ=ಮಿಥ್ಯಾತ್ವದ ವಿಷಯದಲ್ಲಿ ಏತತ್= ಅಜ್ಞಾನೋಪಾದಾನಕತ್ವಯುಕ್ತಿಯು, ಪ್ರಯೋಜಕಂ= ಪ್ರಯೋಜಕವು, ನ ಅಭೂತ್= ಆಗಲಿಲ್ಲ.

**ಅನುವಾದ** - ಜಗತ್ತಿಗೆ ಅಜ್ಞಾನವು ಬೇಕಾದರೆ ಉಪಾದಾನವಾಗಲಿ. ಆದರೂ ನಿನ್ನ ಮಿಥ್ಯಾತ್ವಾಶೆಯು ಈಡೇರುವುದಿಲ್ಲ. ಅನಾದಿಯಾದ ಜೀವಭೇದ, ಕಾಲ, ಗಗನ, ಅಜ್ಞಾನಗಳಿಗೆ ಯಾವ ರೀತಿಯಿಂದ ಮಿಥ್ಯಾತ್ವವು ಸಿದ್ಧವಾಗುತ್ತದೆಂದು ಹೇಳು. ಆದ್ದರಿಂದ ಈ ಜ್ಞಾನನಾಶ್ಯತ್ವವು ಸರ್ವಮಿಥ್ಯಾತ್ವಕ್ಕೆ ಪ್ರಯೋಜಕವಲ್ಲ.

**ಭಾವವಿಲಾಸಿನೀ**–ಮಿಥ್ಯಾತ್ವಾಶಾ ಸರ್ವಮಿಥ್ಯಾತ್ವಾಶಾ । ಅನಾದಿಷ್ವೇಷು ಸರ್ವೇಷು ಅಜ್ಞಾನೋಪಾದಾನಕತ್ವಾಭಾವಾದಿತಿ ಭಾವಃ ॥೩೪೭-೩೪೮॥

**ವಿವರಣೆ** - ಜೀವ ಈಶೋ ವಿಶುದ್ಧಾ ಚಿತ್ ಭೇದಸ್ತಸ್ಯಾಃ ತಯೋರ್ದ್ವಯೋಃ।
ಅವಿದ್ಯಾ ತಚ್ಚಿತ್ತೋರ್ಯೋಗಃ ಷಡಸ್ಮಾಕ ಮನಾದಯಃ ॥

ಎಂದು ಅದ್ವೈತಿಗಳು ಆರಕ್ಕೆ ಅನಾದಿತ್ವವನ್ನು ಒಪ್ಪಿದ್ದಾರೆ. ಈ ಆರರಲ್ಲಿ ಜೀವಭೇದ- ಅಜ್ಞಾನಗಳನ್ನೂ, ಉಳಿದವರೆಲ್ಲ ಅನಾದಿ ಎಂದು ಒಪ್ಪಿದ ಕಾಲ-ಗಗನಗಳನ್ನೂ ತೆಗೆದುಕೊಂಡಿದ್ದಾರೆ. ಉಪಲಕ್ಷಣಯಾ ಅನಾದಿ ಎಂದು ಒಪ್ಪಿದ ಉಳಿದವನ್ನೂ ತೆಗೆದುಕೊಳ್ಳಬೇಕು.

ಅಥ ಬಾಧೇನ್ನೈವ ತೇಷಾಂ ಮಿಥ್ಯಾತ್ವೇ ನ ಹ್ಯನಶ್ಯತಾಮ್ ।
ಮಿಥ್ಯಾತ್ವಂ ಬ್ರಹ್ಮವತ್ ತಸ್ಮಾತ್ ತೇಷಾಂ ನಾಶಃ ಕಥಂ ವದ ॥ ೩೪೯ ॥

**ಅರ್ಥ–** ಅಥ=ಇನ್ನು, ತೇಷಾಂ=ಗಗನಾದಿಗಳಿಗೆ, ಬಾಧೇನ್ನೈವ=ನೇಹ ನಾನಾಸ್ತಿ ಎಂಬ ಬಾಧದಿಂದಲೇ, ಮಿಥ್ಯಾತ್ವೇ=ಮಿಥ್ಯಾತ್ವವನ್ನು ಸಾಧಿಸುವುದಾದರೆ, ಹಿ=ಯಾವ ಕಾರಣದಿಂದ, ಅನಶ್ಯತಾಂ=ನಾಶ ಇಲ್ಲದವುಗಳಿಗೆ, ಬ್ರಹ್ಮವತ್=ಬ್ರಹ್ಮನಂತೆ, ಮಿಥ್ಯಾತ್ವಂ= ಮಿಥ್ಯಾತ್ವವು, ನಾಸ್ತಿ=ಇಲ್ಲವೊ, ತಸ್ಮಾತ್=ಆ ಅಪ್ರಯೋಜಕವಾದ ಬಾಧ್ಯತ್ವ ಹೇತುವಿನಿಂದ, ತೇಷಾಂ= ನಿತ್ಯಪದಾರ್ಥಗಳಿಗೆ, ನಾಶಃ ನಾಶವು, ಕಥಂ=ಹೇಗೆ, ಭವತಿ=ಸಿದ್ಧವಾಗುತ್ತದೆ? ವದ=ಹೇಳು.

**ಅನುವಾದ** - ಅನಿತ್ಯಗಳಿಗೆ ಅಜ್ಞಾನೋಪಾದಾನಕತ್ವ ಹೇತುವಿನಿಂದ ಮಿಥ್ಯಾತ್ವ ನಿತ್ಯವಾದ ಗಗನಾದಿಗಳಿಗೆ ಆ ಹೇತು ಇಲ್ಲದಿದ್ದರೂ, ನೇಹ ನಾನಾಸ್ತಿ ಎಂಬ ಬಾಧವಿರುವುದರಿಂದ ಮಿಥ್ಯಾತ್ವ - ಎಂದು ಅದ್ವೈತಿಗಳು ಹೇಳಬೇಕು. ಎಂದರೆ ಗಗನಾದಿಕಂ ಮಿಥ್ಯಾ ಬಾಧ್ಯತ್ವಾತ್ ಎಂದು ಅನುಮಾನವನ್ನು ಹೇಳಿದಂತೆ. ಇದಕ್ಕೆ ಪ್ರತಿಯಾಗಿ - ಗಗನಾದಿಕಂ ನ ಮಿಥ್ಯಾ ನಾಶರಹಿತತ್ವಾತ್ ಬ್ರಹ್ಮವತ್ - ಎಂದು ಸತ್ಪ್ರತಿಪಕ್ಷವನ್ನು ಹೇಳುತ್ತೇವೆ. (ಜೊತೆಗೆ, ಜಗತ್ ನ ಬಾಧ್ಯಂ ನಾಶರಹಿತತ್ವಾತ್ ಬ್ರಹ್ಮವತ್ ಎಂಬ ಅನುಮಾನದಿಂದ ನಿಮ್ಮ ಅನುಮಾನಕ್ಕೆ ಅಸಿದ್ಧಿ ದೋಷವೂ ಬರುತ್ತದೆ. ಬಾಧ್ಯತ್ವ ಹೇತುವಿನಿಂದಲೇ ಗಗನಾದಿಗಳಿಗೆ ನಾಶವನ್ನು ಸಾಧಿಸುತ್ತೇವೆ ಎಂದರೆ, ನಮಗೆ ಹೇತು ಅಸಿದ್ಧ. ಶ್ರುತಿಯು ಗಗನಾದಿಗಳನ್ನು ಅನಶ್ವರವೆಂದಿದೆ. ಹಾಗಿದ್ದರೂ ಬಾಧ ಒಪ್ಪಿದರೆ ಬ್ರಹ್ಮನಿಗೂ ಬಾಧವಿರುವುದರಿಂದ ನಾಶ ಪ್ರಸಂಗ. ಶೂನ್ಯ ಶ್ರುತಿಯಲ್ಲಿ ಬಾಧ ಶ್ರುತವಾಗಿದೆ. ಹೀಗೆ ಸತ್ಪ್ರತಿಪಕ್ಷ - ಅಸಿದ್ಧಿ ದೋಷಗಳಿಂದ ಕೂಡಿದ ನಿಮ್ಮ ಹೇತುವು ಗಗನಾದಿಗಳಿಗೆ ಮಿಥ್ಯಾತ್ವವನ್ನು ಸಾಧಿಸಲಾರದು.

**ಭಾವವಿಲಾಸಿನೀ**– ತೇಷಾಂ ಆಕಾಶಾದಿಪದಾರ್ಥಾನಾಂ ಬಾಧ್ಯತ್ವೇನೈವ ಮಿಥ್ಯಾತ್ವೇ ಸಾಧ್ಯಮಾನೇ ಸತಿ ಅನಶ್ಯತಾಂ ನಾಶರಹಿತಾನಾಂ ಕಾಲ ಆಕಾಶ ಪ್ರಕೃತ್ಯಾದೀನಾಂ ಬ್ರಹ್ಮವನ್ಮಿಥ್ಯಾತ್ವಂ ನಹಿ ನ ಸ್ಯಾದ್ಧಿ । ಅಜ್ಞಾನೋಪಾದಾನತ್ವರಹಿತಾನಾಂ ಕಾಲಾದೀನಾಂ ಬಾಧ್ಯತ್ವೇನೈವ ಮಿಥ್ಯಾತ್ವಸಾಧನೇಽವಿನಾಶಿತ್ವೇನ ಬ್ರಹ್ಮವತ್ ಮಿಥ್ಯಾತ್ವಂ ನೇತ್ಯಸ್ಮಾಭಿಃ ಸಾಧ್ಯತೇ । ಅತಃ ಸಪ್ರತಿಪಕ್ಷಂ ತ್ವದನುಮಾನಮಿತಿ ಭಾವಃ । ಉಪಲಕ್ಷಣಂ ಚೈತತ್ । ಅನೇನೈವ ಹೇತುನಾ ಬ್ರಹ್ಮವದ್ಬಾಧ್ಯತ್ವಾಭಾವೋಽಪಿ ಸಾಧಯಿತುಂ ಶಕ್ಯತ ಇತ್ಯಪಿ ದ್ರಷ್ಟವ್ಯಮ್ । ನನು ಬಾಧ್ಯತ್ವಾತ್ತೇಷಾಂ ನಾಶೋಽಪಿ ಸಾಧ್ಯತ ಇತ್ಯತ ಆಹ – **ತಸ್ಮಾದಿತಿ** ॥ ತಸ್ಮಾತ್ ಸಪ್ರತಿಪಕ್ಷಾದಸಿದ್ಧಾಚ್ಚ ಬಾಧ್ಯತ್ವಾತ್ । ಶ್ರುತ್ಯಾ ಬ್ರಹ್ಮವದನಶ್ವರತಯಾ ಪ್ರತಿಪಾದಿತಾನಾಂ ತೇಷಾಂ ನಾಶೇ ಬ್ರಹ್ಮಣೋಽಪಿ ನಾಶ್ಯತ್ವಪ್ರಸಂಗಾತ್ । ''ಶೂನ್ಯಾದೇವೇದಮಾವಿರಾಸೀದಿ''ತಿ ಶ್ರುತ್ಯಾ ಬ್ರಹ್ಮಣೋಽಪಿ ಬಾಧಶ್ರವಣಾತ್ । ಶೂನ್ಯಶ್ರುತೇರನ್ಯಾರ್ಥತ್ವೇ ತವ ಶ್ರುತೇರಪ್ಯನ್ಯಾರ್ಥತ್ವ-ಸ್ಯೋಕ್ತತ್ವಾತ್ ವಕ್ಷ್ಯಮಾಣತ್ವಾಚ್ಚ ಸಮಃಸಮಾಧಿಃ । ಏತದೇವಾಭಿಪ್ರೇತ್ಯ ಕಥಂ ನ ಕಥಂಚಿದಿತ್ಯುಕ್ತಮ್ ॥ ೩೪೯ ॥

**ವಿವರಣೆ** - ಶ್ರುತಿ ಬ್ರಹ್ಮನನ್ನು ಅವಿನಾಶಿ ಎಂದಂತೆ ಗಗನಾದಿಗಳನ್ನೂ ಅವಿನಾಶಿ ಎಂದಿದೆ. ಆದ್ದರಿಂದ ನಮ್ಮ ಸತ್ಪ್ರತಿಪಕ್ಷ ಅನುಮಾನ ಗಟ್ಟಿಯಾಯಿತು. ಇದನ್ನೊಪ್ಪದಿದ್ದರೆ ಅವಿನಾಶಿ ಎಂದು ಶ್ರುತನಾದ ಬ್ರಹ್ಮನೂ ನಾಶ್ಯನಾಗಬೇಕಾದೀತು. ಅಲ್ಲ, ಜಗತ್ತಿಗೂ ಬ್ರಹ್ಮನಿಗೂ ವ್ಯತ್ಯಾಸವಿದೆ. ನೇಹ ನಾನಾಸ್ತಿ ಎಂದು ಜಗತ್ತಿನ ವಿಷಯದಲ್ಲಿ ಬಾಧಶ್ರುತಿ ಇದೆ - ಎಂದರೆ, ಶೂನ್ಯಾದೇವ ಇದಮಾವಿರಾಸೀತ್ ಇತ್ಯಾದಿ ಮೇಲ್ನೋಟಕ್ಕೆ ಬ್ರಹ್ಮನಿಗೆ ಉತ್ಪತ್ತಿಯನ್ನು, ತನ್ಮೂಲಕ ಬಾಧವನ್ನು ಹೇಳುವ ಶ್ರುತಿಯೂ ಇದೆ. ಶೂನ್ಯ ಶ್ರುತಿಗೆ ಬೇರೆ ಅರ್ಥ ಎನ್ನುವುದಾದರೆ, ನೇಹ ನಾನಾಸ್ತಿ ಶ್ರುತಿಗೂ ಬೇರೆ ಅರ್ಥ=ಎಂದು ಉತ್ತರ

ಸಮಾನ. ಈ ಬಗ್ಗೆ ಯುಕ್ತಿಗಳನ್ನು ಹಿಂದೆಯೂ ಹೇಳಿದೆ ಮುಂದೆಯೂ ಹೇಳುತ್ತೇವೆ. ಈ ಅಭಿಪ್ರಾಯದಿಂದಲೇ ಕಥಂ? ವದ ಹೇಗೆ? ಹೇಳು ಎಂದು ಕೇಳಿದ್ದು. ಯಾವರೀತಿಯಿಂದಲೂ ಹೇಳಲಾಗದು ಎಂದು ಅಭಿಪ್ರಾಯ.

ಅಥ ಬಾಧೇನೈವ ಸಾಕ್ಷಾತ್ ತೇಷಾಂ ನಾಶೇ ಗತಂ ಮತಮ್ ।
ಬ್ರಹ್ಮಪ್ರಮಾ ಹಿ ಬಾಧಸ್ತೇ ತಯಾ ಸಾಕ್ಷಾಜ್ಜಗತ್‍ಕ್ಷಯೇ ॥
ನಾಶಕಂ ಜ್ಞಾನಮಜ್ಞಾನಸ್ಯೈವೇತಿ ಹಿ ಯತೋ ಗತಮ್ ॥ ೩೫೦ ॥

**ಅರ್ಥ–** ಅಥ = ಇನ್ನು, ಬಾಧೇನೈವ=ಬಾಧದಿಂದಲೇ ತೇಷಾಂ=ಗಗನಾದಿಗಳ, ನಾಶೇ=ನಾಶವಾಗುವ ಪಕ್ಷದಲ್ಲಿ, ಮತಂ=ಮತವು, ಗತಂ=ಬಿದ್ದುಹೋಯಿತು. ಹಿ= ಏಕೆಂದರೆ, ಬಾಧಃ=ಬಾಧವು, ಬ್ರಹ್ಮಪ್ರಮಾ=ಬ್ರಹ್ಮಜ್ಞಾನವು. ತಯಾ=ಆ ಬ್ರಹ್ಮಜ್ಞಾನದಿಂದ, ಸಾಕ್ಷಾತ್=ಸಾಕ್ಷಾತ್ತಾಗಿ, ಜಗತ್ ಕ್ಷಯೇ ಸತಿ=ಜಗತ್ತಿನ ನಾಶವಾಗುತ್ತಿರಲು, ಜ್ಞಾನಂ=ಜ್ಞಾನವು, ಅಜ್ಞಾನಸ್ಯೈವ=ಅಜ್ಞಾನಕ್ಕೆ ಮಾತ್ರ, ನಾಶಕಂ=ನಾಶಕಾರಕ, ಇತಿ=ಎಂಬ ಮತಂ=ನಿಮ್ಮ ಪಕ್ಷವು, ಗತಂ ಹಿ=ಬಿದ್ದುಹೋಯಿತಷ್ಟೆ.

**ಅನುವಾದ -** ಅನಿತ್ಯಗಳಿಗೆ ಹೇಳಿದಂತೆ ನಿತ್ಯಗಳಿಗೆ ಮಿಥ್ಯಾತ್ವವನ್ನು ಹೇಳಲಾಗಲಿಲ್ಲ. ಆದರೆ ಅವುಗಳಿಗೂ ಮಿಥ್ಯಾತ್ವವನ್ನು ಹೇಳಬೇಕಿದೆ. ಅದಕ್ಕಾಗಿ ಗಗನಾದಿಗಳು ಸಾಕ್ಷಾತ್ತಾಗಿ ಬಾಧಜ್ಞಾನದಿಂದ ನಾಶಹೊಂದುತ್ತವೆ ಎನ್ನಬೇಕು. ಆಗ ಜ್ಞಾನವು ಅಜ್ಞಾನಕ್ಕೆ, ನಾಶಕ ಎಂಬ ನಿಮ್ಮ ಪಕ್ಷ ಬಿದ್ದುಹೋಯಿತು. ಏಕೆಂದರೆ, ಬಾಧ ಎಂದು ನೀವೊಪ್ಪುವ ಬ್ರಹ್ಮಜ್ಞಾನವು ಅಜ್ಞಾನವೂ ಅಲ್ಲದ ಅಜ್ಞಾನದ ಕಾರ್ಯವೂ ಅಲ್ಲದ ಗಗನಾದಿಗಳಿಗೆ ನಾಶಕವಾಯಿತು.

**ಭಾವವಿಲಾಸಿನೀ–** ಕಿಂಚ ವಿಪರೀತಪ್ರಮಾ ಹಿ ಬಾಧಃ । ತಯಾ ಗಗನಾದೀನಾಂ ಸ್ವೇನೈವ ಸಾಕ್ಷಾನ್ನಾಶಸ್ಸಾಧ್ಯತೇ ವಾ ಉಪಾದಾನಾಜ್ಞಾನನಾಶದ್ವಾರಾ ವಾ ನಾಶಾಕಾಂತರೇಣ ನಾಶೋ ವೇತಿ ವಿಕಲ್ಪ್ಯ ಪಕ್ಷತ್ರಯೇಽಪಿ ದೂಷಣಮಾಹ–**ಅಥೇತಿ** ॥ ಇತಿ ಮತಂ ಗತಮಿತಿ ಶೇಷಂ ಪೂರಯಿತ್ವಾ ಯೋಜನೀಯಮ್ ॥ ೩೫೦ ॥

ಬಾಧೇನೈವ ಜಗನ್ನಾಶೇ ಗತಮಾಸೀನ್ಮತಂ ತವ ।
ಅನ್ಯದ್ವಾರಾಽಪಿ ತನ್ನಾಶೇ ಗತಮಾಸೀನ್ಮತಂ ತವ ॥
ಅನಾದಿಗಗನಾದೀನಾಮನಾಶ್ಯತ್ವಪ್ರಸಕ್ತಿತಃ ॥ ೩೫೧ ॥

**ಅರ್ಥ–** ಬಾಧೇನೈವ=ಬಾಧದಿಂದಲೇ, ಜಗನ್ನಾಶೇ=ಗಗನಾದಿ ಜಗತ್ತು ನಾಶವಾಗುವ ಪಕ್ಷದಲ್ಲಿ, ತವ ಮತಂ=ಜ್ಞಾನವು ಅಜ್ಞಾನಕ್ಕೇ ನಿವರ್ತಕವೆಂಬ ನಿನ್ನ ಪಕ್ಷ, ಗತಮಾಸೀತ್= ಬಿಟ್ಟುಹೋಯಿತು. ಅನ್ಯದ್ವಾರಾ=ಅಜ್ಞಾನನಾಶದ್ವಾರಾ,ತನ್ನಾಶೇ ಅಪಿ= ಜಗನ್ನಾಶವಾಗುವ

ಪಕ್ಷದಲ್ಲೂ, ಅನಾದಿಗಗನಾದೀನಾಂ=ಆದಿ ಇಲ್ಲದ ಗಗನಾದಿಗಳಿಗೆ ಅನಾಶ್ಯತ್ವಪ್ರಸಕ್ತಿತಃ= ಅಜ್ಞಾನೋಪಾದಾನಕತ್ವವಿಲ್ಲದ್ದರಿಂದ ನಾಶವಿಲ್ಲದ ಪ್ರಸಂಗ ಬರುವುದರಿಂದ, ತವ ಮತಂ= ಬ್ರಹ್ಮಾತಿರಿಕ್ತವಾದ ಎಲ್ಲವೂ ನಾಶವಾಗುತ್ತದೆಂಬ ಪಕ್ಷ, ಗತಮಾಸೀತ್=ಬಿಟ್ಟುಹೋಯಿತು. ಅನ್ಯದ್ವಾರಾ= ಮತ್ತೊಂದು ನಾಶಕವನ್ನೊಪ್ಪಿ ಅದರ ದ್ವಾರಾ, ತನ್ನಾಶೇ ಅಪಿ=ಜಗನ್ನಾಶದ ಪಕ್ಷದಲ್ಲೂ, ತವ ಮತಂ=ಬ್ರಹ್ಮಾತಿರಿಕ್ತಸರ್ವಕ್ಕೆ ಜ್ಞಾನದಿಂದ ನಾಶ ಎಂಬ ಪಕ್ಷವು, ಗತಮಾಸೀತ್= ಬಿಟ್ಟುಹೋಯಿತು.

**ಅನುವಾದ** - ಬ್ರಹ್ಮಜ್ಞಾನದಿಂದ ಜಗನ್ನಾಶ ಎಂಬುದನ್ನು ನೀವು ಮೂರು ವಿಧದಲ್ಲಿ ಹೇಳಬಹುದು. ಒಂದು (ಗಗನಾದಿ) ಜಗತ್ತು ಸಾಕ್ಷಾತ್ ಜ್ಞಾನನಾಶ್ಯ. ಎರಡು - ಅಜ್ಞಾನನಾಶದ್ವಾರಾ ಜಗತ್ತು ಜ್ಞಾನನಾಶ್ಯ. ಮೂರು ನಾಶಕವಾದ ಒಂದು ಹೊಸ ಪದಾರ್ಥವನ್ನು ಒಪ್ಪಿ ಅದರಿಂದ ಜಗತ್ತು ನಾಶ್ಯ ಎಂದು. ಇದರಲ್ಲಿ ಯಾವುದನ್ನು ಒಪ್ಪಿದರೂ, ಜ್ಞಾನವು ಅಜ್ಞಾನಕ್ಕೇ ನಾಶಕ, ಬ್ರಹ್ಮಾತಿರಿಕ್ತವಾದ ಸರ್ವವೂ ನಾಶವಾಗುತ್ತದೆ ಎಂಬ ಎರಡೂ ಪಕ್ಷಗಳನ್ನು ಸಮರ್ಥಿಸಲಾಗದು. ಗಗನಾದಿ ಜಗತ್ತು ಜ್ಞಾನನಾಶ್ಯ ಎಂಬ ಪಕ್ಷದಲ್ಲಿ ಜ್ಞಾನಂ ಅಜ್ಞಾನಸ್ಯೈವ ನಾಶಕಂ ಎಂಬ ಮತ ಬಿಟ್ಟು ಹೋಯಿತು. ಇದನ್ನು ಗಟ್ಟಿಯಾಗಿ ಹಿಡಿದರೆ, ಅನಾದಿಯಾದ ಗಗನಾದಿಗಳಿಗೆ ಯಾವ ಉಪಾದಾನವೂ ಇಲ್ಲದಿರುವುದರಿಂದ ಅಜ್ಞಾನನಾಶದ್ವಾರಾ ಕೂಡ ನಾಶಕವನ್ನು ಹೇಳಲಾಗದು. ಆಗ, ಬ್ರಹ್ಮಾತಿರಿಕ್ತವಾದ ಸಕಲವೂ ನಾಶವಾಗುತ್ತದೆ ಎಂಬ ಪಕ್ಷ ಬಿಟ್ಟು ಹೋಗುತ್ತದೆ. ಇದರ ಪರಿಹಾರಕ್ಕೆ ಮತ್ತೊಂದು ನಾಶಕವಾದ ಹೊಸಪದಾರ್ಥವನ್ನು ಒಪ್ಪಿ ಸಕಲ ಜಗತ್ತಿನ ನಾಶವನ್ನು ಒಪ್ಪಿದರೆ ಬ್ರಹ್ಮಾತಿರಿಕ್ತ ಸಕಲಕ್ಕೆ ಜ್ಞಾನದಿಂದ ನಾಶ ಎಂಬ ಪಕ್ಷ ಬಿಟ್ಟು ಹೋಗುತ್ತದೆ.

ಭಾವವಿಲಾಸಿನೀ– ಉಕ್ತದೂಷಣಮನುವದನ್ನತಿರಿಕ್ತಪಕ್ಷದ್ವಯದೂಷಣಂ ಸಂಗೃಹ್ಯಾಹ – **ಬಾಧನೇತಿ** ।। ತನ್ನಾಶೇ ಗಗನಾದಿಜಗನ್ನಾಶೇ । ಕಥಮಿತ್ಯತ ಆಹ – ಅನಾದೀತಿ ।। ಅಜ್ಞಾನನಾಶದ್ವಾರಾ ಜಗನ್ನಾಶಾಂಗೀಕಾರೇಽಪಿ ಅನಾದಿಗಗನಾದೀನಾಂ ನಿರುಪಾದಾನತ್ವೇನಾಜ್ಞಾನನಾಶದ್ವಾರಂ ನಾಶಾಯೋಗಾತ್ ಅನಾಶ್ಯತ್ವಪ್ರಸಂಗೇನ ಬ್ರಹ್ಮವ್ಯತಿರಿಕ್ತಸರ್ವನಾಶಮತಂ ಗತಮಿತಿ ಭಾವಃ । ಏವಮನ್ಯದ್ವಾರಾ ನಾಶಕಾಂತರದ್ವಾರಾ ತನ್ನಾಶೇ ಜಗನ್ನಾಶೇ ಮತಂ ಬ್ರಹ್ಮವ್ಯತಿರಿಕ್ತಸ್ಯ ಸರ್ವಸ್ಯ ಜ್ಞಾನವಿನಾಶ್ಯತ್ವಮತಂ ಗತಮಿತಿ ತೃತೀಯಪಕ್ಷಸ್ಯಾಪಿ ದೂಷಣಂ ಯೋಜನೀಯಮ್ ।। ಅತಃ ಪ್ರಕ್ಷತ್ರಯೇಽಪಿ ತ್ವನ್ಮತೇ ಗಗನಾದೀನಾಂ ನಾಶಾಯೋಗಾತ್ ।।೩೫೨।।

**ವಿವರಣೆ** - ಮೂಲದಲ್ಲಿ ಎರಡು ಪಕ್ಷಗಳನ್ನು ಮಾತ್ರ ವಿಮರ್ಶಿಸಿದಂತೆ ಕಾಣುತ್ತದೆ. ಶ್ರೀ ಸುರೋತ್ತಮತೀರ್ಥರು ಈ ಶ್ಲೋಕದಲ್ಲಿ ಮೂರು ಪಕ್ಷಗಳ ವಿಮರ್ಶೆ ನಡೆದಿದೆ ಎಂದು ವ್ಯಾಖ್ಯಾನಿಸಿದ್ದಾರೆ, ಈ ಶಬ್ದಗಳ ಅರ್ಥವ್ಯತ್ಯಾಸದಿಂದ ಮೂರು ಪಕ್ಷಗಳು

ಲಭಿಸಿವೆಂಬಾ ಧೇನ್ನೈವ ಸಾಕ್ಷಾತ್ ಬ್ರಹ್ಮವ್ಯತಿರಿಕ್ತ ಸರ್ವನಾಶಮತಂ 2. ಅನ್ಯದ್ವಾರಾ=ಅಜ್ಞಾನದ್ವಾರಾ. ಬ್ರಹ್ಮವ್ಯತಿರಿಕ್ತ ಸರ್ವನಾಶಮತಂ. 3. ಅನ್ಯದ್ವಾರಾ. ನಾಶಕಾಂತರದ್ವಾರಾ ಬ್ರಹ್ಮವ್ಯತಿರಿಕ್ತಸರ್ವಸ್ಯ ಜ್ಞಾನವಿನಾಶ್ಯತ್ವಮತಂ.

**ಏವಂ ಚಾನಾಶ್ಯವಸ್ತುತ್ವಾದ್ ಬ್ರಹ್ಮವತ್ ಪರಮಾರ್ಥಸತ್ ।**
**ಅಬಾಧ್ಯಂ ಚಾಭವಜ್ಜೀವಭೇದಕಾಲಾಂಬರಾದಿಕಮ್ ।**
**ಅತೋ ಬಾಧೋ ನೈವ ತೇಷಾಂ ಮಿಥ್ಯಾತ್ವಾಶಾऽಪಿ ತೇ ಗತಾ ॥೩೫೨॥**

**ಅರ್ಥ–** ಏವಂ ಚ=ಹೀಗೆ, ಜೀವಭೇದಕಾಲಾಂಬರಾದಿಕಂ=ಜೀವಭೇದ-ಕಾಲ-ಗಗನ ಮುಂತಾದ ನಿತ್ಯ ವಸ್ತುಗಳು, ಅನಾಶ್ಯವಸ್ತುತ್ವಾತ್=ನಾಶವಾಗದ ವಸ್ತುವಾದ್ದರಿಂದ, ಬ್ರಹ್ಮವತ್= ಬ್ರಹ್ಮನಂತೆ, ಪರಮಾರ್ಥಸತ್=ಪಾರಮಾರ್ಥಿಕ, ಚ=ಮತ್ತು, ಅಬಾಧ್ಯಂ= ಬಾಧವಿಲ್ಲದ್ದು ಅಭವತ್=ಆಯಿತು. ಅತಃ=ಆದ್ದರಿಂದ, ತೇಷಾಂ=ಅವುಗಳಿಗೆ ಬಾಧಃ= ಬಾಧವು, ನ ಅಸ್ತ್ಯೇವ=ಇಲ್ಲವೇ ಇಲ್ಲ, ತೇ ನಿನ್ನ, ತೇಷಾಂ=ಅವುಗಳ, ಮಿಥ್ಯಾತ್ವಾಶಾ ಅಪಿ= ಮಿಥ್ಯಾತ್ವದ ಆಸೆಯೂ ಕೂಡ, ಗತಾ=ಹೋಯಿತು.

**ಅನುವಾದ -** ಇಲ್ಲಿಯವರೆಗಿನ ವಿಚಾರದಂತೆ, ನಿತ್ಯವಾದ ಜೀವಭೇದಾದಿಗಳು ನಾಶವಿಲ್ಲದ ವಸ್ತುಗಳಾದ್ದರಿಂದ, ನಾಶವಿಲ್ಲದ ಬ್ರಹ್ಮನು ಹೇಗೆ ಪಾರಮಾರ್ಥಿಕ ಮತ್ತು ಅಬಾಧ್ಯನೋ, ಅದರಂತೆ, ಇವೂ ಪಾರಮಾರ್ಥಿಕ ಮತ್ತು ಅಬಾಧ್ಯವಾದವು. ಹೀಗೆ ಅವುಗಳಿಗೆ ಬಾಧ ಇಲ್ಲದಂತಾಯಿತು. ಬಾಧವಿಲ್ಲದ ಮೇಲೆ ಜಗತ್ತು ಮಿಥ್ಯೆಯಾಗಬೇಕೆಂಬ ನಿನ್ನ ಆಸೆಯೂ ಕಮರಿತು.

**ವಿವರಣೆ -** ಜೀವಭೇದಾದಿಕಂ ಪರಮಾರ್ಥಸತ್, ಅಬಾಧ್ಯಂ ಚ, ಅನಾಶ್ಯ-ವಸ್ತುತ್ವಾತ್, ಬ್ರಹ್ಮವತ್ - ಎಂಬ ಅನುಮಾನ ಇಲ್ಲಿ ವಿವಕ್ಷಿತ.

ಮತ್ತೊಂದು ರೀತಿಯಿಂದಲೂ ಬಾಧವಿಲ್ಲವೆಂದು ಸಾಧಿಸುತ್ತಾರೆ-

**ನಚ ಬಾಧೋऽಪಿ ತೇಷಾಂ ಸ್ಯಾದನಾದಿತ್ವಾತ್ ಪರಾತ್ಮವತ್ ।**
**ತಸ್ಮಾಜ್ಜೀವವಿಭೇದಾದೇರ್ಮಿಥ್ಯಾತ್ವೇ ಕಾರಣಂ ನ ತೇ ॥ ೩೫೩ ॥**

**ಅರ್ಥ–** ಚ=ಮತ್ತು, ತೇಷಾಂ=ಜೀವಭೇದಾದಿಗಳಿಗೆ, ಬಾಧಃ ನ ಸ್ಯಾತ್=ಬಾಧ ಸಲ್ಲದು, ಅನಾದಿತ್ವಾತ್=ಅನಾದಿಯಾದ್ದರಿಂದ, ಪರಾತ್ಮವತ್=ಪರಮಾತ್ಮನಂತೆ. ತಸ್ಮಾತ್=ಆ ಕಾರಣದಿಂದ, ಜೀವಭೇದಾದೇಃ=ಜೀವಭೇದಾದಿ ನಿತ್ಯಗಳ, ಮಿಥ್ಯಾತ್ವೇ=ಮಿಥ್ಯಾತ್ವ ವಿಷಯದಲ್ಲಿ, ತೇ=ನಿನಗೆ, ಕಾರಣಂ=ಕಾರಣವು, ನಾಸ್ತಿ=ಇಲ್ಲ.

**ಅನುವಾದ** - ಅನಾದಿಯಾದ ಪರಮಾತ್ಮನು ಹೇಗೆ ಬಾಧವಿಲ್ಲದವನೋ, ಹಾಗೆ ನಿತ್ಯವಾದ ಗಗನಾದಿಗಳೂ ಬಾಧವಿಲ್ಲದವೇ ಆಗಿವೆ. ಹೀಗೆ ಬಾಧವಿಲ್ಲದ್ದರಿಂದ ಇವುಗಳು ಮಿಥ್ಯಾ ಎನ್ನಲು ನಿಮ್ಮ ಬಳಿ ಕಾರಣಗಳಿಲ್ಲ.

**ಭಾವವಿಲಾಸಿನೀ**– ಪ್ರಕಾರಾಂತರೇಣಾಪಿ ಬಾಧಾಭಾವಂ ಸಾಧಯತಿ ॥ ನ ಚೇತಿ ॥ ೩೫೩ ॥

(ಸೂಚನೆ. ಶ್ಲೋಕದ ಕೊನೆಯಪಾದ ತದ್ವ್ಯರ್ಥಾಜ್ಞಾನಕಾರ್ಯತಾ ಎಂದಾಗ ಬೇರೆ ಎರಡು ಪುಸ್ತಕಗಳಲ್ಲಿ ಇರುವ ತದ್ವ್ಯರ್ಥಾ ತಜ್ಞಾನಕಾರ್ಯತಾ ಎಂಬುದು ಪ್ರಾಮಾದಿಕ)

ಜ್ಞಾನದಿಂದ ನಾಶವು ಬಾಧವೆನಿಸುತ್ತದೆ ಎಂಬ ಪಕ್ಷದಲ್ಲಿ ಈಗ ಹೇಳಿದಂತೆ ನಾಶವಾಗದ ಗಗನಾದಿಗಳಿಗೆ ಬಾಧವಿಲ್ಲವಾಗುತ್ತದೆ. ಜ್ಞಾನದಿಂದ ಇದು ಎಂದೂ ಇಲ್ಲದ್ದು ಎಂಬ ತ್ರೈಕಾಲಿಕಸತ್ತ್ವದ ನಿಷೇಧವಾಗುತ್ತದೆ. ಇದೇ ಬಾಧ. ಇಂಥ ಬಾಧ ಅನಾದಿ ಗಗನಾದಿಗಳಿಗೂ ಬರಬಹುದು - ಎಂದು ಶಂಕಿಸಿದರೆ ಹೀಗೆ ಪ್ರಶ್ನಿಸಬೇಕಾಗುತ್ತದೆ-ಜ್ಞಾನದಿಂದ ಗಗನಾದಿನಿತ್ಯಗಳಿಗೆ ಮಾತ್ರ ನಾಸ್ತಿತ್ವವು (ಇಲ್ಲದಿರುವಿಕೆಯು) ತಿಳಿಯುತ್ತದೊ? ಅಥವಾ ಎಲ್ಲದಕ್ಕೂ ತಿಳಿಯುವುದೊ ? ಮೊದಲ ಪಕ್ಷವನ್ನು ನಿರಾಕರಿಸುತ್ತಾರೆ.

ಸರ್ವಂ ನೇತಿ ಚ ವಾಕ್ಯೇನ ಕಥಮರ್ಥಸ್ಯ ಬಾಧನಮ್ ।
ಸರ್ವಸ್ಯಾಪಿ ಚ ಬಾಧೇ ತು ಮಿಥ್ಯಾತ್ವಮಪಿ ತದ್ಬಲಾತ್ ॥
ಏವಂ ಸರ್ವಸ್ಯ ಯತ್ ಸ್ಯಾತ್ತತ್ತದ್ವ್ಯರ್ಥಾऽಜ್ಞಾನಕಾರ್ಯತಾ ॥ ೩೫೪ ॥

**ಅರ್ಥ**– ಚ=ಮತ್ತು, ಸರ್ವಂ ನ ಇತಿ ವಾಕ್ಯೇನ= ನೇಹ ನಾನಾಸ್ತಿ ಕಿಂಚನ, ಎಂಬ ವಾಕ್ಯದಿಂದ, ಅರ್ಥಸ್ಯ=ನಿತ್ಯಕ್ಕೆ ಮಾತ್ರ, ಬಾಧನಂ= ಬಾಧವು ಕಥಂ ? ಹೇಗೆ ಸರಿ? ಸರ್ವಸ್ಯಾಪಿ ಚ=ಎಲ್ಲದಕ್ಕೂ ಕೂಡ, ಬಾಧೇ ತು= ಬಾಧವಿರುವುದಾದರೆ, ಯತ್= ಯಾವ ಕಾರಣದಿಂದ, ತದ್ಬಲಾತ್= ಆ ಬಾಧದ ಬಲದಿಂದ, ಸರ್ವಸ್ಯ ಅಪಿ=ಎಲ್ಲಕ್ಕೂ, ತತ್ ಮಿಥ್ಯಾತ್ವಂ= ಆ ಮಿಥ್ಯಾತ್ವವು, ಸ್ಯಾತ್=ಆದೀತೊ, ತತ್= ಆ ಕಾರಣದಿಂದ, ಅಜ್ಞಾನಕಾರ್ಯತಾ= ಅಜ್ಞಾನಕಾರ್ಯತ್ವವು, ವ್ಯರ್ಥಾ=ವ್ಯರ್ಥ.

**ಅನುವಾದ** - ನೇಹ ನಾನಾಸ್ತಿ ಕಿಂಚನ ಎಂಬ ವಾಕ್ಯವು ಸರ್ವಂ ನ ಏನೂ ಇಲ್ಲ ಎಂದು ಎಲ್ಲಕ್ಕೂ ಸತ್ತ್ವ ನಿಷೇಧ ಮಾಡುತ್ತದೆ. ಹೀಗಿರುವಾಗ ಗಗನಾದಿ ಭಾಗಕ್ಕೆ ಮಾತ್ರ ಬಾಧ ಎಂಬ ಮೊದಲ ಪಕ್ಷ ಸರಿಯಲ್ಲ. ಇನ್ನು, ಎಲ್ಲಕ್ಕೂ ಬಾಧವೆಂದು ಎರಡನೆಯ ಪಕ್ಷವನ್ನು ಒಪ್ಪಿದರೆ ಅದರಿಂದಲೇ ಎಲ್ಲಕ್ಕೂ ಮಿಥ್ಯಾತ್ವವನ್ನು ಹೇಳಬಹುದಾದ್ದರಿಂದ ನಿಮ್ಮ ಭಾಷ್ಯದಲ್ಲಿ ಜಗತ್ತಿಗೆ ಅಜ್ಞಾನೋಪಾದಾನಕತ್ವವನ್ನು ಹೇಳಿದ್ದು ಅಸಂಗತ.

**ಭಾವವಿಲಾಸಿನೀ**–ನನು ಜ್ಞಾನೇನ ವಿನಾಶಸ್ಯ ಬಾಧತ್ವೇ ಸ್ಯಾದೇವೋಕ್ತವಿಧಯಾ ಗಗನಾದೀನಾಮನಾಶ್ಯತ್ವೇನಾಬಾಧ್ಯತ್ವಮ್ । ಜ್ಞಾನೇನ ತ್ರೈಕಾಲಿಕಸತ್ತ್ವನಿಷೇಧೋ ಬಾಧ ಇತ್ಯಂಗೀಕಾರೇ

ಗಗನಾದೀನಾಮಪಿ ಬಾಧಃ ಸಂಭವತೀತ್ಯಾಶಂಕಾಯಾಮಪಿ ನಾಸ್ತಿತ್ವಪ್ರಕಾರಕಬಾಧಕಜ್ಞಾನೇನ ಗಗನಾದೀನಾಮೇವ ನಾಸ್ತಿತ್ವಂ ಬೋಧ್ಯತೇ ವಾ ಸರ್ವಸ್ಯ ಜಗತೋ ವೇತಿ ವಿಕಲ್ಪ್ಯಾದ್ಯಂ ದೂಷಯತಿ॥ **ಸರ್ವಮಿತಿ** ॥ ಸರ್ವಶಬ್ದಸ್ಯ ಸಂಕೋಚಾಯೋಗಾದಿತಿ ಭಾವಃ । ದ್ವಿತೀಯಂ ದೂಷಯತಿ ॥ **ಸರ್ವಸ್ಯೇತಿ**। ತದ್ಬಲಾತ್ ಸರ್ವಂ ನೇತಿ ವಾಕ್ಯಬಲಾತ್ । ಏವಂ ಗಗನಾದಿವತ್ । ಯತ್ ಯಸ್ಮಾತ್ । ತತ್ ತಸ್ಮಾತ್ ತ್ರೈಕಾಲಿಕಸತ್ತಾನಿಷೇಧೇನೈವ ಮಿಥ್ಯಾತ್ವಸಂಭವಾತ್ । ತ್ರೈಕಾಲಿಕನಿಷೇಧಪ್ರತಿಯೋಗಿತ್ವಸ್ಯೈವ ಮಿಥ್ಯಾತ್ವೋಪಯೋಗಿತ್ವೇ ತದೇವ ಶಾಸ್ತ್ರೇ ಪ್ರತಿಪಾದನೀಯಮ್ । ಅಜ್ಞಾನೋಪಾದಾನಕತ್ವ-ವರ್ಣನಮಸಂಗತಮೇವ । ನಚ ತದಪಿ ಮಿಥ್ಯಾತ್ವೋಪಯೋಗಿ । ಗಗನಾದೌ ತದಭಾವೇಽಪಿ ಮಿಥ್ಯಾತ್ವದರ್ಶನಾದಿತಿ ಭಾವಃ ॥ ೩೫೪ ॥

**ವಿವರಣೆ** - ಯಾವುದರಿಂದ ಮಿಥ್ಯಾತ್ವ ಸಿದ್ಧವಾಗುವುದೊ ಅದನ್ನೇ ಭಾಷ್ಯದಲ್ಲಿ ಹೇಳಬೇಕು. ಬಾಧದಿಂದ ಮಿಥ್ಯಾತ್ವವಾದರೆ ಅದನ್ನು ಹೇಳಬೇಕು. ಅಜ್ಞಾನೋಪಾದನಕತ್ವದ ವಿವರಣೆ ಏಕೆ? ನಿಜ, ಬಾಧದಿಂದಲೇ ಮಿಥ್ಯಾತ್ವ. ಆ ಮಿಥ್ಯಾತ್ವಕ್ಕೆ ಉಪಯೋಗಿಯಾದ್ದರಿಂದ ಅಜ್ಞಾನೋಪಾದಾನಕತ್ವವನ್ನು ಹೇಳಿದ್ದು-ಎಂಬ ಸಮರ್ಥನೆ ಸರಿಯಲ್ಲ, ಏಕೆಂದರೆ ಅದಿಲ್ಲದಿದ್ದರೂ ಗಗನಾದಿಗಳು ಮಿಥ್ಯಾ ಆಗಿವೆ-ಎಂದು ಅಭಿಪ್ರಾಯ.

ಭಾಷ್ಯ ಅಸಂಗತವಾಗಲಿ. ವಿಷಯವಂತೂ ಸರಿ ಇದೆ. ತ್ರೈಕಾಲಿಕ - ನಿಷೇಧಕ್ಕೆ ಜಗತ್ತು ಪ್ರತಿಯೋಗಿಯಾದ್ದರಿಂದಲೇ ಮಿಥ್ಯಾ ಎಂದು ಸಾಧಿಸುತ್ತೇನೆ ಎಂಬ ಪರರ ಆಸೆಯನ್ನು ನಿರಾಕರಿಸುತ್ತಾರೆ-

ಅಥ ತೇನೈವ ಸರ್ವಸ್ಯ ಮಿಥ್ಯಾತ್ವಾಶಾಽಪಿ ಮಾಽಸ್ತು ತೇ ।
ಅನಾದಿತ್ವಾದನಾಶಿತ್ವಾಜ್ ಜ್ಞಾನಾನಾಶ್ಯತ್ವತಸ್ತಥಾ ॥ ೩೫೫ ॥

ಅಜ್ಞಾನಾಕಾರ್ಯವಸ್ತುತ್ವಾದ್ ಬ್ರಹ್ಮವತ್ ಸಕಲಂ ಜಗತ್ ।
ಅಂಬರಾದ್ಯಂ ಘಟಾದ್ಯಂ ಚ ಯದಬಾಧ್ಯಮಸಾಧ್ಯತ ॥ ೩೫೬ ॥

**ಅರ್ಥ**– ಅಥ= ಇನ್ನು, ತೇನೈವ=ತ್ರೈಕಾಲಿಕ ನಿಷೇಧದಿಂದಲೇ, ತೇ ನಿನಗೆ, ಸರ್ವಸ್ಯ=ಎಲ್ಲಕ್ಕೂ, ಮಿಥ್ಯಾತ್ವಾಶಾ ಅಪಿ= ಮಿಥ್ಯಾತ್ವದ ಆಸೆಯೂ, ಮಾಸ್ತು= ಬೇಡ. ಯತ್= ಯಾವ ಕಾರಣದಿಂದ, ಅಂಬರಾದ್ಯಂ=ಗಗನಾದಿ, ಚ=ಮತ್ತು, ಘಟಾದ್ಯಂ= ಘಟಾದಿ, ಸಕಲಂ= ಎಲ್ಲ, ಜಗತ್=ಜಗತ್ತು, ಅನಾದಿತ್ವಾತ್= ಅನಾದಿಯಾದ್ದರಿಂದ, ಅನಾಶಿತ್ವಾತ್= ನಾಶರಹಿತವಾದ್ದರಿಂದ, ಜ್ಞಾನಾನಾಶ್ಯತ್ವತಃ= ಜ್ಞಾನದಿಂದ ನಾಶ ವಿಲ್ಲದಿರುವುದರಿಂದ, ತಥಾ=ಹಾಗೆಯೇ, ಅಜ್ಞಾನಾಕಾರ್ಯವಸ್ತುತ್ವಾತ್= ಅಜ್ಞಾನದಿಂದ ಹುಟ್ಟದ ವಸ್ತುವಾದ್ದರಿಂದ, ಬ್ರಹ್ಮವತ್=ಬ್ರಹ್ಮನಂತೆ, ಅಬಾಧ್ಯಂ= ಅಬಾಧ್ಯವಾಗಿ, ಅಸಾಧ್ಯತ=ಸಾಧಿಸಲ್ಪಟ್ಟಿತು.

**ಅನುವಾದ** - ನೇಹ ನಾನಾಸ್ತಿ ಎಂಬಲ್ಲಿ ಹೇಳಿದ ತ್ರೈಕಾಲಿಕ ನಿಷೇಧದಿಂದಲೇ ಎಲ್ಲಕ್ಕೂ ಮಿಥ್ಯಾತ್ವ ಸಿದ್ಧವಾಗುತ್ತದೆ ಎಂಬ ಆಸೆಯೂ ಬೇಡ. ಏಕೆಂದರೆ, ನಿತ್ಯಾನಿತ್ಯರೂಪವಾದ ಗಗನಾದಿ - ಘಟಆದಿ ಸಕಲ ಜಗತ್ತು ಅನಾದಿತ್ವ - ಅನಾಶಿತ್ವ - ಜ್ಞಾನಾನಾಶ್ಯತ್ವ - ಅಜ್ಞಾನಾಕಾರ್ಯವಸ್ತುತ್ವ ಎಂಬ ಹೇತುಗಳಿಂದ ಬ್ರಹ್ಮ-ದೃಷ್ಟಾಂತದಂತೆ ಅಬಾಧ್ಯವೆಂದೇ ಸಿದ್ಧವಾಗುತ್ತದೆ.

**ಭಾವವಿಲಾಸಿನೀ**– ಅಸ್ತು ತರ್ಹಿ ಭಾಷ್ಯಮಸಂಗತಮ್ । ತ್ರೈಕಾಲಿಕನಿಷೇಧ ಪ್ರತಿಯೋಗಿತ್ವೇನೈವ ಮಿಥ್ಯಾತ್ವಂ ಸಾಧಯಾಮೀತಿ ಪರಕೀಯಾಶಾಃ ಖಂಡಯತಿ ।। **ಅಥೇತಿ** ।। ತೇನ ತ್ರೈಕಾಲಿಕನಿಷೇಧೇನ । ಯತ್ ಯಸ್ಮಾತ್ । ಅನಾದಿತ್ವಾತ್ ಅನಾಶಿತ್ವಾದಿತ್ಯೇವ ಹೇತುಃ । ತಚ್ಚ ಸ್ವರೂಪತೋ ವಾ ಪ್ರವಾಹತೋ ವಾ ಅತೋ ನ ಕ್ವಾಪ್ಯಸಿದ್ಧಿಃ । ಪರಪ್ರಕ್ರಿಯಯಾಪಿ ತದುಪಪಾದಯಿತುಂ ಜ್ಞಾನಾನಾಶ್ಯತ್ವವತ ಇತ್ಯುಕ್ತವಮ್ । ಯತ್ ಯಸ್ಮಾತ್ । ಬಾಧ್ಯತ್ವಮಿಥ್ಯಾತ್ವಯೋರತ್ಯಂತಭೇದಾಭಾವಾತ್ ಮಿಥ್ಯಾತ್ವಬಾಧಕೈರೇವ ಹೇತುಭಿರ್ಬಾಧ್ಯತ್ವಸ್ಯಾಪಿ ಬಾಧಯಿತುಂ ಶಕ್ಯತ್ವಾತ್ ನಾನೇನಾಪಿ ಹೇತುನಾ ತವೇಷ್ಟಸಿದ್ಧಿರಿತಿ ಭಾವಃ ।। ೩೫೫-೩೫೬ ।।

**ವಿವರಣೆ** - ಅನಾದಿತ್ವ - ಅನಾಶಿತ್ವಗಳು ಎರಡು ವಿಧ. ಸ್ವರೂಪತಃ ಮತ್ತು ಪ್ರವಾಹತಃ. ನಿತ್ಯದಲ್ಲಿ ಸ್ವರೂಪತಃ, ಅನಿತ್ಯದಲ್ಲಿ ಪ್ರವಾಹತಃ, ಅನಾದಿತ್ವ ಅನಾಶಿತ್ವಗಳಿವೆ. ಆದ್ದರಿಂದ ಹೇತುಗಳಿಗೆ ಅನಿತ್ಯದಲ್ಲಿ ಅಸಿದ್ಧಿ ಇಲ್ಲ.

ಪರರ ಎಂದರೆ ಅದ್ವೈತಿಗಳ ಪ್ರಕ್ರಿಯೆಯಂತೆಯೂ ಉಪಪಾದಿಸಲು ಜ್ಞಾನಾನಾಶ್ಯತ್ವವನ್ನು ಮತ್ತು ಅಜ್ಞಾನಾಕಾರ್ಯವಸ್ತುತ್ವವನ್ನು ಹೇತುವನ್ನಾಗಿ ಹೇಳಿದ್ದು ಇಲ್ಲಿಯವರೆಗೆ ಇವೇ ಹೇತುಗಳಿಂದ ಮಿಥ್ಯಾತ್ವವಿಲ್ಲವೆಂದು ಸಾಧಿಸಿ ಈಗ ಇವೇ ಹೇತುಗಳಿಂದ ಬಾಧ್ಯತ್ವವಿಲ್ಲವೆಂದು ಸಾಧಿಸುತ್ತಾರೆ. ಏಕೆಂದರೆ ಮಿಥ್ಯಾತ್ವಕ್ಕೂ ಬಾಧ್ಯತ್ವಕ್ಕೂ ಸ್ವಲ್ಪ ವ್ಯತ್ಯಾಸ ಅಷ್ಟೆ.

ಹಿಂದಿನ ಅನುಮಾನಗಳಿಗೆ ಅಪ್ರಯೋಜಕತಾ ಶಂಕೆಯನ್ನು ಪರಿಹರಿಸುತ್ತಾರೆ-

ನ ಚೇದ್ ಬ್ರಹ್ಮಾಪಿ ಬಾಧ್ಯಂ ಸ್ಯಾದಕಸ್ಮಾದಿತಿ ವಾಕ್ಯತಃ ।
ತಸ್ಯ ಚಾನ್ಯಾರ್ಥತಾಯಾಂ ಸ್ಯಾದಸ್ಯಾಪ್ಯನ್ಯಾರ್ಥತೈವ ಹಿ ।। ೩೫೭ ।।

**ಅರ್ಥ**– ನ ಚೇತ್=ಹೀಗಲ್ಲದಿದ್ದರೆ, ಅಕಸ್ಮಾತ್ ಇತಿ ವಾಕ್ಯತಃ=ಅಕಸ್ಮಾದ್ಧಿ ಇದಮಾವಿರಾಸೀತ್ ಎಂಬ ವಾಕ್ಯದಿಂದ, ಬ್ರಹ್ಮಾಪಿ=ಬ್ರಹ್ಮನೂ, ಬಾಧ್ಯಂ ಸ್ಯಾತ್=ಬಾಧ್ಯನಾಗಬೇಕಾದೀತು. ತಸ್ಯ=ಆ ವಾಕ್ಯಕ್ಕೆ, ಅನ್ಯಾರ್ಥತಾಯಾಂ ಚ=ಬೇರೆ ಅರ್ಥ ಇರುವುದಾದಲ್ಲಿ, ಅಸ್ಯಾಪಿ=ನೇಹ ನಾನಾಸ್ತಿ ಎಂಬುದಕ್ಕೂ, ಅನ್ಯಾರ್ಥತಾ ಏವ=ಬೇರೆ ಅರ್ಥವೇ, ಸ್ಯಾತ್ ಹಿ=ಆಗಬಹುದಷ್ಟೆ.

**ಅನುವಾದ** - ಬ್ರಹ್ಮನಂತೆ ಜಗತ್ತು ಅನಾದಿಯಾದರೂ ಸತ್ಯವಾಗದಿದ್ದರೆ ಬ್ರಹ್ಮನೂ ಬಾಧ್ಯನಾಗಬೇಕಾದೀತು. ಇಲ್ಲಿ ನೇಹನಾನಾಸ್ತಿ ಎಂಬ ವಾಕ್ಯವಿದೆ. ಬ್ರಹ್ಮನಿಗೆ ಬಾಧಕವೇನಿದೆ? ಎಂದರೆ, ಅಕಸ್ಮಾದ್ದಿ ಇದಮಾವಿರಾಸೀತ್ ಈ ಜಗತ್ತು ಶೂನ್ಯದಿಂದ ಹುಟ್ಟದೆ ಎಂಬರ್ಥದ ವಾಕ್ಯ ಬ್ರಹ್ಮನಿಗೂ ಬಾಧಕವಾಗಿದೆ. ಆ ವಾಕ್ಯಕ್ಕೆ ಶೂನ್ಯಕಾರಣತ್ವವು ಅರ್ಥವಲ್ಲ; ಬೇರೆ ಅರ್ಥ, ಎಂದರೆ ನೇಹ ನಾನಾಸ್ತಿ ಎಂಬ ವಾಕ್ಯಕ್ಕೂ ಜಗನ್ಮಿಥ್ಯಾತ್ವವು ಅರ್ಥವಲ್ಲ. (ಭಗವಂತನಿಗೂ ಅವನ ಗುಣಗಳಿಗೂ ಭೇದವಿಲ್ಲ ಎಂಬ) ಬೇರೆ ಅರ್ಥವಿದೆ ಎಂದು ಹೇಳುತ್ತೇವೆ.

**ಭಾವವಿಲಾಸಿನೀ**– ನಚೇತ್ ಅನಾದಿತ್ವಾದಿನಾ ಬ್ರಹ್ಮಸಾಮ್ಯೇऽಪ್ಯಬಾಧ್ಯತ್ವಂ ನಚೇತ್ । ಬ್ರಹ್ಮಣಿ ನ ಬಾಧಃ ಶ್ರೂಯತೇ ಇತ್ಯತ ಆಹ – **ಅಕಸ್ಮಾದಿತಿ ವಾಕ್ಯತ ಇತಿ** ॥ ೩೫೭ ॥

**ವಿವರಣೆ** - ಅಕಸ್ಮಾದ್ಧೀದಮಾವಿರಾಸೀತ್ ಅಕಸ್ಮಾತ್ ತಿಷ್ಠತ್ಯಕಸ್ಮಾತ್ ಲಯಮಭ್ಯುಪೈತಿ ಎಂಬ ಶ್ರುತಿಯನ್ನು ಬ್ರಹ್ಮಸೂತ್ರಭಾಷ್ಯದ 2-1-13ನೇ ಸೂತ್ರದಲ್ಲಿ ಉಲ್ಲೇಖಿಸಲಾಗಿದೆ.

ಜಗತ್ತು ಸತ್ಯವಾಗದಿದ್ದರೆ ಬ್ರಹ್ಮನೂ ಸತ್ಯನಾಗದಿರಬೇಕಾದೀತು ಎಂಬ ಈ ಪ್ರತಿಬಂದಿ ಏಕೆ ಎಂದರೆ ಜಗತ್ತು ಮತ್ತು ಬ್ರಹ್ಮರಿಬ್ಬರೂ ಜೊತೆ ಜೊತೆಗೇ ಇರುತ್ತಾರೆ ಎಂಬುದು ಲೋಕದ ರೀತಿಯಿಂದ ಸಿದ್ಧವಾಗಿದೆ ಎನ್ನುತ್ತಾರೆ-

ಜಗಚ್ಚ ಜಗತೀನಾಥೋ ದ್ವಾವೇತೌ ನಿಯತೌ ಸದಾ ।
ಅಭಟೋ ಯನ್ನೃಪೋ ನಷ್ಟೋ ನಷ್ಟಂ ರಾಷ್ಟ್ರಮರಾಜಕಮ್ ॥ ೩೫೮ ॥

**ಅರ್ಥ**– ಯತ್=ಯಾವ ಕಾರಣದಿಂದ, ಅಭಟಃ=ಭೃತ್ಯರಿಲ್ಲದ, ನೃಪಃ=ರಾಜನು, ನಷ್ಟಃ= ಇಲ್ಲವಾಗುತ್ತಾನೆ. ಅರಾಜಕಂ=ರಾಜನಿಲ್ಲದ, ರಾಷ್ಟ್ರಂ=ದೇಶವೂ ನಷ್ಟಂ=ಇಲ್ಲವಾಗುತ್ತದೆ. ತಸ್ಮಾತ್=ಆದ್ದರಿಂದ, ಜಗತ್=ಜಗತ್ತು, ಚ=ಮತ್ತು, ಜಗತೀನಾಥಃ=ಜಗದೊಡೆಯನೂ, ಏತೌ ದ್ವೌ= ಇವರಿಬ್ಬರೂ, ಸದಾ= ಯಾವಾಗಲೂ, ನಿಯತೌ= ಪರಸ್ಪರ ಬಿಟ್ಟಿರುವುದಿಲ್ಲ.

**ಅನುವಾದ** - ಭೃತ್ಯರಿಲ್ಲದಿದ್ದರೆ ರಾಜನಿರಲಾರ (ರಾಜನು ರಾಜನೆನಿಸಲಾರ). ರಾಜನಿರದಿದ್ದರೆ ರಾಷ್ಟ್ರ ಎನಿಸದು. ಆದ್ದರಿಂದ, ಜಗತ್ತು ಮತ್ತು ಜಗನ್ನಾಥ ಇಬ್ಬರೂ ಯಾವಾಗಲೂ ಪರಸ್ಪರವಾಗಿ ಬಿಟ್ಟು ಇರುವುದಿಲ್ಲ.

**ಭಾವವಿಲಾಸಿನೀ**–ಕಿಮರ್ಥಮಿಯಂ ಜಗತ್‌ಸತ್ಯತ್ವಾಭಾವೇ ಬ್ರಹ್ಮಸತ್ಯತ್ವಾಭಾವ ಪ್ರತಿಬಂದೀತ್ಯತ ಉಭಯೋರಪಿ ಸಮನಿಯತತ್ವಸ್ಯ ಲೋಕರೀತ್ಯಾ ಸಿದ್ಧತ್ವಾದಿತ್ಯಾಹ – **ಜಗಚ್ಚೇತಿ** ॥ ಅಭಟಃ ಭಟರಹಿತಃ । ಯತ್ ಯಸ್ಮಾತ್ । ಅರಾಜಕಂ ರಾಜರಹಿತಮ್ । ರಾಷ್ಟ್ರಾಭಾವೇ ರಾಜಾಭಾವದರ್ಶನೇನ ರಾಜಾಭಾವೇ ಚ ರಾಷ್ಟ್ರಾಭಾವಸ್ಯ ಲೋಕೇ ದರ್ಶನೇನ ಜಗದಭಾವೇ ಭಗವತೋ ಜಗನ್ನಾಥತ್ವಮಹಿಮಾಭಾವಃ ಸ್ಯಾತ್ । ಜಗನ್ನಾಥಾಭಾವೇ ಚ ನಿಯಾಮಕಾಭಾವೇನ ಜಗದಭಾವೋऽಪಿ

**ಸ್ಯಾತ್ । ಅತ ಉಭಯೋರಪಿ ಸಮನಿಯತತ್ವಾತ್ ಏಕಾಽಸತ್ಯತ್ವೋಕ್ತೌ ಅಪರಾಽಸತ್ಯತ್ವ ಪ್ರತಿಬಂದೀತಿ ಭಾವಃ ॥ ೩೫೮ ॥**

**ವಿವರಣೆ** - ರಾಷ್ಟ್ರ ಇಲ್ಲದಿರೆ ರಾಜ ಇರನು. ರಾಜ ಇರದಿರೆ ರಾಷ್ಟ್ರ ಇರದು. ಇದು ಲೋಕದಲ್ಲಿ ಕಂಡಿದೆ. ಅದರಂತೆ, ಜಗತ್ತು ಸತ್ಯವಾಗದಿದ್ದರೆ ಭಗವಂತನ ಜಗನ್ನಾಥತ್ವಮಹಿಮೆಯೂ ಇಲ್ಲವಾಗುತ್ತದೆ. ಜಗತ್ತಿಗೆ ನಾಥನು ಇಲ್ಲದಿದ್ದರೆ ನಿಯಾಮಕರು ಇಲ್ಲದೆ ಅಸ್ವತಂತ್ರವಾದ ಜಗತ್ತೂ ಇಲ್ಲವಾಗುತ್ತದೆ. ಹೀಗೆ ಇಬ್ಬರಿಗೂ ಪರಸ್ಪರ ಸಂಬಂಧ ಇರುವುದರಿಂದ ಒಂದು ಅಸತ್ಯ ಎಂದರೆ ಮತ್ತೊಂದು ಅಸತ್ಯವಾಗಬೇಕಾದೀತು - ಎಂಬ ಪ್ರತಿಬಂದಿಯನ್ನು ನೀಡಿದ್ದು. ಇದು ಆಶಯ.

ಅಜ್ಞಾನಜನ್ಯವಾದರೂ ಜಗತ್ತು ಸತ್ಯವಾಗಬಹುದು.

**ಬಂಧವು ಅಜ್ಞಾನೋಪಾದಾನಕವಾಗಲಿ. ಆದರೂ, ಅಜ್ಞಾನವು ಮಿಥ್ಯಾಎನ್ನಲು ಕಾರಣವಿಲ್ಲವಾದ್ದರಿಂದ ಅದು ಸತ್ಯವಾಗಬೇಕು. ಆಗ ಆದರಿಂದ ಹುಟ್ಟಿದ ಬಂಧವೂ ಸತ್ಯವೇ ಆಗಬೇಕು. ಏಕೆಂದರೆ ಉಪಾದಾನ - ಉಪಾದೇಯಗಳಿಗೆ ವಿಜಾತೀಯತೆ ಕಂಡಿಲ್ಲ ಎನ್ನುತ್ತಾರೆ-**

**ಕಿಂಚಾಜ್ಞಾನಂ ಜ್ಞಾನನಾಶ್ಯಂ ವಿರೋಧಾದೇವ ಕೇವಲಮ್ ।**
**ನಹಿ ದೀಪಸ್ತಮೋನಾಶೇ ತನ್ಮಿಥ್ಯಾತ್ವಮಪೇಕ್ಷತೇ ॥ ೩೫೯ ॥**

**ಅತೋಽಜ್ಞಾನಮಿದಂ ಜ್ಞಾನನಾಶ್ಯಂ ಸತ್ಯಂ ಚ ಸಂಭವೇತ್ ।**
**ಸತ್ಯಾಜ್ಞಾನಭವಂ ವಿಶ್ವಂ ಸತ್ಯಮೇವ ಭವಿಷ್ಯತಿ ॥ ೩೬೦ ॥**

**ಅರ್ಥ**– ಕಿಂಚ=ಮತ್ತು, ಅಜ್ಞಾನಂ= ಅಜ್ಞಾನವು, ಕೇವಲಂ ವಿರೋಧಾದೇವ= ಕೇವಲ ವಿರೋಧವಿರುವುದರಿಂದಲೇ, ಜ್ಞಾನನಾಶ್ಯಂ=ಜ್ಞಾನದಿಂದ ನಾಶ್ಯವಾಗಿದೆ. ದೀಪಃ ದೀಪವು, ತಮೋನಾಶೇ=ಕತ್ತಲನ್ನು ಕಳೆಯಲು, ಮಿಥ್ಯಾತ್ವಂ=ಕತ್ತಲಿನ ಮಿಥ್ಯಾತ್ವವನ್ನು. ನ ಅಪೇಕ್ಷತೇ ಹಿ=ಬಯಸದಷ್ಟೆ. ಅತಃ=ಆದ್ದರಿಂದ, ಇದಂ ಅಜ್ಞಾನಂ=ಈ ಅಜ್ಞಾನವು, ಜ್ಞಾನನಾಶ್ಯಂ= ಜ್ಞಾನದಿಂದ ನಾಶಹೊಂದುವಂಥದ್ದು, ಚ=ಮತ್ತು, ಸತ್ಯಂ=ಸತ್ಯವು, ಸಂಭವೇತ್= ಆಗಬಹುದು. ಸತ್ಯಾಜ್ಞಾನ-ಭವಂ=ಸತ್ಯವಾದ ಅಜ್ಞಾನದಿಂದ ಹುಟ್ಟಿದ, ವಿಶ್ವಂ=ಜಗತ್ತು, ಸತ್ಯಮೇವ= ಸತ್ಯವೇ, ಭವಿಷ್ಯತಿ=ಆಗುತ್ತದೆ.

**ಅನುವಾದ - ಆಗಲಿ, ಜಗತ್ತು ಅಜ್ಞಾನದಿಂದ ಹುಟ್ಟಿದೆ. ಜ್ಞಾನವೂ ಅಜ್ಞಾನವನ್ನು ನಾಶಮಾಡುತ್ತದೆ ಎಂದೇ ಒಪ್ಪೋಣ. ಏಕೆ ಅಜ್ಞಾನವು ಜ್ಞಾನದಿಂದ ನಾಶವಾಗುತ್ತದೆ ಎಂಬ ಪ್ರಶ್ನೆ ಬಂದರೆ ಅವೆರಡಕ್ಕೂ ವಿರೋಧವಿದೆಯಾದ್ದರಿಂದ ಎಂದು ಉತ್ತರ ಲಭಿಸುತ್ತದೆ ಹೊರತು ಅಜ್ಞಾನವು ಮಿಥ್ಯಾ ಆದ್ದರಿಂದ ಜ್ಞಾನನಾಶ್ಯ ಎನ್ನಬೇಕಾಗಿಲ್ಲ. ಉದಾಹರಣೆಗೆ ನಾಶ್ಯನಾಶಕಭಾವವಿರುವ ಮತ್ತೊಂದು ಸ್ಥಳವನ್ನು ನೋಡೋಣ.**

ದೀಪ ಹಚ್ಚಿದಾಗ ಕತ್ತಲೆ ಏಕೆ ದೂರವಾಗುತ್ತದೆ? ಕತ್ತಲೆಯು ಮಿಥ್ಯಾ ಎಂಬ ಕಾರಣಕ್ಕೋ? ಅಲ್ಲ, ದೀಪ - ಕತ್ತಲೆಗಳಿಗೆ ವಿರೋಧವಿದೆ ಎಂಬ ಕಾರಣಕ್ಕೆ. ಹಾಗೆ ಇಲ್ಲೂ. ಆದ್ದರಿಂದ ಅಜ್ಞಾನವು ಜ್ಞಾನನಾಶ್ಯವಾದರೂ ಸತ್ಯವೇ ಆಗಬಹುದು. ಇಂಥ ಸತ್ಯವಾದ ಅಜ್ಞಾನದಿಂದ ಹುಟ್ಟುವ ಜಗತ್ತೂ ಸತ್ಯವೇ ಆಗುತ್ತದೆ.

**ಭಾವವಿಲಾಸಿನೀ–** ಅಸ್ತು ವಾಽಜ್ಞಾನೋಪಾದಾನಕತ್ವಂ ಬಾಧ್ಯಸ್ಯ ತಥಾಪ್ಯಜ್ಞಾನಸ್ಯ ಮಿಥ್ಯಾತ್ವೇ ಕಾರಣಾಭಾವೇನ ಸತ್ಯತ್ವ ಸಂಭವಾತ್ ತದುಪಾದಾನಕಬಂಧಸ್ಯಾಪಿ ಸತ್ಯತ್ವಂ ಬಲಾದಾಯಾಸ್ಯತಿ। ಉಪಾದಾನೋಪಾದೇಯಯೋರ್ವೈಜಾತ್ಯಾದರ್ಶನಾದಿತ್ಯಾಹ – **ಕಿಂಚೇತಿ** ।। ೩೫೯ ।। ಅತಃ ವಿರುದ್ಧತಯೈವಾಜ್ಞಾನನಾಶಾತ್ ।। ೩೬೦ ।।

ತಸ್ಮಾದಜ್ಞಾನಕಾರ್ಯತ್ವಮಸ್ತು ವಾ ಜಗತಸ್ತವ ।
ಮಿಥ್ಯಾತ್ವಾಶಾ ತು ತಸ್ಮಿನ್ ಯಾ ಸಾ ಕಪೋ(ಫೋ)ಣಿಗುಡಾಯತೇ ।। ೩೬೧ ।।

**ಅರ್ಥ–** ತಸ್ಮಾತ್=ಆದ್ದರಿಂದ, ಜಗತಃ=ಜಗತ್ತಿಗೆ, ಅಜ್ಞಾನಕಾರ್ಯತ್ವಂ =ಅಜ್ಞಾನದ ಕಾರ್ಯತ್ವವು, ಅಸ್ತು ವಾ=ಇರಲಿ ಬೇಕಾದರೆ. ಆದರೂ ತಸ್ಮಿನ್=ಆ ಜಗತ್ತಿನ ವಿಷಯದಲ್ಲಿ ತವ= ನಿನಗೆ, ಯಾ=ಯಾವ, ಮಿಥ್ಯಾತ್ವಾಶಾ ಅಸ್ತಿ=ಮಿಥ್ಯಾತ್ವದ ಆಸೆ ಇದೆಯೊ, ಸಾ=ಅದು, ಕಫೋಣಿಗುಡಾಯತೇ= ಮೊಣಕೈ ತುದಿಯ ಬೆಲ್ಲದಂತೆ ಆಗುತ್ತದೆ.

**ಅನುವಾದ -** ಹೀಗೆ ಜಗತ್ತು ಅಜ್ಞಾನ ಜನ್ಯ ಎಂದೊಪ್ಪಿದರೂ ನೀವು ಬಯಸುವ ಮಿಥ್ಯಾತ್ವ ಸಿದ್ಧವಾಗದು. ಮೊಣಕೈತುದಿಗೆ ಬೆಲ್ಲ ಹಚ್ಚಿದರೆ ಅದು ಕಾಣುತ್ತದೆ ಹೊರತು ನೆಕ್ಕಲಾಗದು. ಅದರಂತೆ ಮಿಥ್ಯಾತ್ವವು ನಿಮ್ಮ ಆಸೆಯಲ್ಲಿರಬಹುದೇ ಹೊರತು ಬಾಯಿಯಿಂದ ಹೇಳಿ ಸಮರ್ಥಿಸಲಾಗದು.

**ಭಾವವಿಲಾಸಿನೀ–**ಕಫೋಣಿಃ ಪ್ರಕೋಷ್ಠಸ್ಯಾದಿಭಾಗಃ । ತತ್ರತ್ಯಗುಡೋಘ ಯಥಾ ನ ಜಿಹ್ವಯಾ ಲೇಢುಂಶಕ್ಯಃ । ತಥಾ ಜಗನ್ಮಿಥ್ಯಾತ್ವಮಪಿ ತವ ಜಿಹ್ವಯಾ ನ ವಕ್ತುಂ ಶಕ್ಯಮಿತಿ ಭಾವಃ ।।೩೬೧।।

ಇಲ್ಲಿಯವರೆಗೆ ಹೇಳಿದ್ದನ್ನು ಕಾವ್ಯಶೈಲಿಯಲ್ಲಿ ಪರರನ್ನು ಅಪಹಾಸ್ಯ ಮಾಡುತ್ತಾ ವಿವರಿಸುತ್ತಾರೆ-

ಅಸ್ತ್ವಜ್ಞಾನಭವಂ ವಿಶ್ವಮಜ್ಞಾನೇ ಜ್ಞಾನನಾಶ್ಯತಾ ।
ನ ದೋಗ್ಧಿ ತೇ ಪ್ರಿಯಂ ದುಗ್ಧಂ ಶಿಲಾಧೇನುಸ್ತನೋ ಹ್ಯಯಮ್ ।।೩೬೨।।

**ಅರ್ಥ-** ವಿಶ್ವಂ=ಜಗತ್ತು. ಅಜ್ಞಾನಭವಂ= ಅಜ್ಞಾನಜನ್ಯ, ಅಸ್ತು=ಆಗಲಿ. ಅಜ್ಞಾನೇ= ಅಜ್ಞಾನದಲ್ಲಿ, ಜ್ಞಾನನಾಶ್ಯತಾ=ಜ್ಞಾನದಿಂದ ನಾಶವಾಗುವಿಕೆಯೂ, ಅಸ್ತು=ಇರಲಿ. (ತಥಾಪಿ=ಹಾಗಿದ್ದರೂ) ಅಯಂ=ಈ ಅರ್ಥವು ತೇ=ನಿನಗೆ, ಪ್ರಿಯಂ=ಇಷ್ಟವಾದ,

ದುಗ್ಧಂ=ಮಿಥ್ಯಾತ್ವವೆಂಬ ಹಾಲನ್ನು, ನ ದೋಗ್ಧಿ=ಕರೆಯದು. ಹಿ=ಏಕೆಂದರೆ ಅಯಂ=ಈ ಅರ್ಥವು, ಶಿಲಾಧೇನುಸ್ತನಃ=ಕಲ್ಲಿನಂತಹ ಅಜ್ಞಾನವೆಂಬ ಹಸವಿನ ಕೆಚ್ಚಲಾಗಿದೆ.

**ಅನುವಾದ** - ಜಗತ್ತು ಅಜ್ಞಾನಜನ್ಯವೆಂದೂ ಆಗಲಿ. ಅಜ್ಞಾನವು ಜ್ಞಾನನಾಶ್ಯವೂ ಆಗಲಿ. ಆದರೆ ಅದರಿಂದ ನಿಮಗೆ ಬೇಕಾದ ಮಿಥ್ಯಾತ್ವ ದೊರೆಯದು. ಕಾಮಧೇನುವಿನ ಕೆಚ್ಚಲಿನಿಂದ ಬೇಕಾದ ಹಾಲನ್ನು ಪಡೆಯಬಹುದು. ಆದರೆ ಕಲ್ಲಿನ ಹಸುವಿನ ಕೆಚ್ಚಲಿನಿಂದ ಏನನ್ನೂ ಪಡೆಯಲಾಗದು.

**ಭಾವವಿಲಾಸಿನೀ**– ಇಮಮೇವಾರ್ಥಂ ಸಾಹಿತ್ಯಮುದ್ರಯಾ ಪರಮುಪಹಸನ್ ಪ್ರಪಂಚಯತಿ ॥ **ಅಸ್ತ್ವಿತಿ**॥ ತೇ ಪ್ರಿಯಂ ದುಗ್ಧಂ ಮಿಥ್ಯಾತ್ವಾಖ್ಯಂ ದುಗ್ಧಮ್ । ಅಯಮ್ ಅಜ್ಞಾನೋದ್ಭವತ್ವ-ರೂಪೋಽರ್ಥಃ । ಶಿಲಾಧೇನುಸ್ತನಃ । ಮಿಥ್ಯಾತ್ವಕಾರಣಾಭಾವೇನ ಶಿಲಾವದ್ದೃಢಾ-ಜ್ಞಾನಾಖ್ಯಧೇನುಸ್ತನರೂಪತಯಾತ್ವದಭಿಲಷಿತಮಿಥ್ಯಾತ್ವಾಖ್ಯದುಗ್ಧಾದೋಗ್ಧೃತ್ವೇನ ತ್ವಾಂ ಪ್ರತ್ಯುಭಯೋರಪಿ ಶಿಲಾರೂಪತ್ವಾತ್ ಶಿಲಾಧೇನುತ್ವಂ ಶಿಲಾಸ್ತನತ್ವಂ ಚ । ಅಸ್ಮಾನ್ ಪ್ರತಿ ತೂಭಯೋರಪಿ ಸತ್ಯತ್ವಸಾಧಕತ್ವಾತ್ ಕಾಮಧೇನುತ್ವಂ ಕಾಮಧೇನುಸ್ತನತ್ವಂ ಚೇತಿಭಾವಃ ॥ ೩೬೨ ॥

**ವಿವರಣೆ** - ಅಜ್ಞಾನವು ಕಲ್ಲಿನ ಹಸುವಿನಂತೆ. ಅಜ್ಞಾನಜನ್ಯತ್ವ ಅದರ ಕೆಚ್ಚಲಿನಂತೆ. ಮಿಥ್ಯಾತ್ವ ಅದರಿಂದ ಪಡೆಯಬಯಸುವ ಹಾಲಿನಂತೆ. ಅದು ದೊರೆಯದು. ನಮಗಾದರೆ ಅಜ್ಞಾನವೂ ಸತ್ಯ. ತತ್ಕಾರ್ಯತ್ವವೂ ಸತ್ಯ. ಆದ್ದರಿಂದ ಕಾಮಧೇನು ಹಾಗೂ ಅದರ ಕೆಚ್ಚಲಿನಂತೆ. ಇದರಿಂದ ನಾವು ನಮಗೆ ಬೇಕಾದ ಜಗತ್ಸತ್ಯತ್ವವೆಂಬ ಹಾಲನ್ನು ಪಡೆಯಬಹುದು - ಎಂದು ಅಭಿಪ್ರಾಯ.

**ವಿರೋಧೇನೈವ ವಿಜ್ಞಾನಂ ಸ್ಯಾದಜ್ಞಾನಸ್ಯ ನಾಶಕಮ್ ।**
**ತನ್ಮಿಥ್ಯಾತ್ವಕಥಾ ವ್ಯರ್ಥಾ ಮೃತಮಾರಣಯತ್ನವತ್ ॥ ೩೬೩ ॥**

**ಅರ್ಥ**– ವಿಜ್ಞಾನಂ=ಜ್ಞಾನವು, ವಿರೋಧೇನೈವ=ವಿರೋಧದಿಂದಲೇ, ಅಜ್ಞಾನಸ್ಯ= ಅಜ್ಞಾನಕ್ಕೆ, ನಾಶಕಂ=ನಾಶಕಾರಣವು, ಸ್ಯಾತ್=ಆಗಬೇಕು. ಮೃತಮಾರಣಯತ್ನವತ್= ಸತ್ತವನನ್ನು ಸಾಯಿಸುವ ಪ್ರಯತ್ನದಂತೆ, ತನ್ಮಿಥ್ಯಾತ್ವಕಥಾ=ಅಜ್ಞಾನಕ್ಕೆ ಮಿಥ್ಯಾತ್ವವನ್ನು ಹೇಳುವುದು, ವ್ಯರ್ಥಾ=ವ್ಯರ್ಥವು.

**ಅನುವಾದ** - ಜ್ಞಾನವು ಅಜ್ಞಾನವನ್ನು ನಿವೃತ್ತಿಗೊಳಿಸಲು ವಿರೋಧವೇ ಪ್ರಯೋಜಕ. ಮಿಥ್ಯಾತ್ವವಲ್ಲ. ಹಾಗಾಗಿಯೂ ಜ್ಞಾನನಿವೃತ್ತಿಗಾಗಿ ಅಜ್ಞಾನಕ್ಕೆ ಮಿಥ್ಯಾತ್ವವನ್ನು ಹೇಳುವುದು ಸತ್ತವನನ್ನು ಸಾಯಿಸಲು ಬ್ರಹ್ಮಾಸ್ತ್ರಾದಿಗಳನ್ನು ಪ್ರಯೋಗಿಸುವ ಪ್ರಯತ್ನದಂತೆ ವ್ಯರ್ಥ.

**ಭಾವವಿಲಾಸಿನೀ**–ತನ್ಮಿಥ್ಯಾತ್ವಕಥಾ ಅಜ್ಞಾನಮಿಥ್ಯಾತ್ವಕಥಾ । ಮೃತಮಾರಣಯತ್ನವತ್ ಯಥಾಮೃತಸ್ಯ ಪುನರ್ಮಾರಣಾಯ ಬ್ರಹ್ಮಾಸ್ತ್ರಾದಿನಾ ತಾಡನಂ ವ್ಯರ್ಥಮ್ । ತಥಾ ವಿರೋಧೇನೈವ ಮೃತೇಽಜ್ಞಾನೇ ಮಾರಣೋಪಯೋಗಿತಯಾ ಮಿಥ್ಯಾತ್ವಸ್ಯಾಪಿ ಕಥನಂ ವ್ಯರ್ಥಮಿತ್ಯರ್ಥಃ । ನಚ ವಾಚ್ಯಂ ಮಿಥ್ಯಾತ್ವಮೇವಾನಿತ್ಯತ್ವೇ ಪ್ರಯೋಜಕಂ ನತು ವಿರೋಧ ಇತಿ । ಏವಂ ಸತಿ ತವ ಮತೇ ಬಂಧಸ್ಯೈವ ಶ್ರೌತಜ್ಞಾನನಿವರ್ತ್ಯತ್ವಸಂಭವೇನಾರ್ಥಾಪತ್ತೇರೇವಾನುತ್ಥಾನ ಪ್ರಸಂಗಾತ್ ಶಶವಿಷಾಣಸ್ಯಾಪ್ಯನುನ್ಮೂಲನ ಪ್ರಸಂಗಾತ್ । ನಾಪಿ ಮಿಥ್ಯಾತ್ವಂ ವಿರೋಧಶ್ಚೇತಿ ದ್ವಯಮಪ್ಯನಿತ್ಯತಾಪ್ರಯೋಜಕಮಿತಿ ಯುಕ್ತಮ್ । ಕ್ಷುರೇಣ ಕೂರ್ಮರೋಮ್ಣಾಂ ನಿಕೃಂತನಪ್ರಸಂಗಾತ್ । ನಚ ವಾಚ್ಯಂ ಸದಸದ್ವಿಲಕ್ಷಣತ್ವರೂಪಮಿಥ್ಯಾತ್ವಂ ವಿರೋಧಶ್ಚೇತಿ ದ್ವಯಂ ಪ್ರಯೋಜಕಮಿತಿ ತನ್ಮತೇ ದಹನೇನ ಶುಕ್ತಿರಜತಸ್ಯ ಭಸ್ಮೀಕರಣಪ್ರಸಂಗಾತ್ । ಅತೋ ಮಿಥ್ಯಾತ್ವಾಭಾವೋ ವಿರೋಧಶ್ಚೇತಿ ದ್ವಯಮೇವಾನಿತ್ಯತಾಪ್ರಯೋಜಕಂ ಮಿಥ್ಯಾತ್ವಸ್ಯ ತು ಕಥಾಪಿ ನಾನಿತ್ಯತಾಯಾಮುಪಕುರುತ ಇತಿ ಭಾವಃ ॥ ೨೬೩ ॥

**ವಿವರಣೆ** - ಕಾವ್ಯಶೈಲಿಯಲ್ಲಿ ವಿಷಯಗಳನ್ನು ವಿವರಿಸುತ್ತಾರೆ ಎಂದು ಹಿಂದಿನ ಶ್ಲೋಕದ ಅವತರಿಣಿಕೆಯಲ್ಲಿ ಹೇಳಿದ ಶ್ರೀಸುರೋತ್ತಮತೀರ್ಥರು ಈ ಶ್ಲೋಕದಲ್ಲಿ ತಾವೂ ವಿಚಾರವನ್ನು ಮುಂದುವರೆಸುತ್ತಾ ಕಾವ್ಯಶೈಲಿಯಲ್ಲಿ ವಿಮರ್ಶೆ ಮಾಡುತ್ತಾರೆ, ಅದರ ಸಂಗ್ರಹ ಹೀಗಿದೆ -

ಪ್ರಶ್ನೆ - ಬಂಧದ ನಾಶಕ್ಕೆ ಮಿಥ್ಯಾತ್ವವೇ ಪ್ರಯೋಜಕ, ವಿರೋಧವಲ್ಲ.

ಉತ್ತರ - ಹಾಗಾದರೆ, ತರತಿ ಶೋಕಮಾತ್ಮವಿತ್ ಎಂಬ ವೇದ ಹೇಳುವ ಕಾರಣ ಜ್ಞಾನದಿಂದ ಬಂಧಕ್ಕೇ ನಿವೃತ್ತಿಯನ್ನು ಹೇಳಬಹುದಾದ್ದರಿಂದ ಜ್ಞಾನನಿವರ್ತ್ಯತ್ವಾನ್ಯಥಾ-ನುಪಪತ್ತ್ಯಾ ಮಿಥ್ಯಾತ್ವಸಿದ್ಧಿಃ ಎಂಬ ನಿಮ್ಮ ಅರ್ಥಾಪತ್ತಿಗೆ ಅವಕಾಶವಿಲ್ಲವಾದೀತು. ಇಷ್ಟಾದರೂ ಹಟ ಮಾಡಿದರೆ, ಶಶವಿಷಾಣಕ್ಕೂ ನಿವೃತ್ತಿಯನ್ನು ಹೇಳಬೇಕಾದೀತು.

ಪ್ರಶ್ನೆ - ಮಿಥ್ಯಾತ್ವ ಮತ್ತು ವಿರೋಧ ಹೀಗೆ ಇವೆರಡು ನಾಶ ಪ್ರಯೋಜಕವಾಗಲಿ.

ಉತ್ತರ - ಕತ್ತಿಯಿಂದ (ಅಸತ್ತಾದ) ಕೂರ್ಮರೋಮದ ಕ್ಷೌರ ಮಾಡಬೇಕಾದೀತು. (ಇದರಂತೆ ನೀವು ಹೇಳುವುದು ಅಸಂಬದ್ಧ)

ಪ್ರಶ್ನೆ - ಸದಸದ್ವಿಲಕ್ಷಣತ್ವರೂಪ ಮಿಥ್ಯಾತ್ವ ಮತ್ತು ವಿರೋಧ ಇವೆರಡು ಪ್ರಯೋಜಕವಾಗಲಿ.

ಉತ್ತರ - ನಿಮ್ಮ ಮತದಲ್ಲಿ ಬೆಂಕಿಯಿಂದ ಶುಕ್ತಿರಜತವನ್ನು ಭಸ್ಮ ಮಾಡಬೇಕಾದೀತು.

ಆದ್ದರಿಂದ, ಮಿಥ್ಯಾತ್ವಾಭಾವಃ ಮತ್ತು ವಿರೋಧ ಇವೆರಡೇ ನಾಶಪ್ರಯೋಜಕ. ಮಿಥ್ಯಾತ್ವದಿಂದ ಯಾವ ಉಪಯೋಗವೂ ಇಲ್ಲ ಎಂದು ಅಭಿಪ್ರಾಯ.

ಜ್ಞಾನದಿಂದ ಅಜ್ಞಾನನಾಶಕ್ಕೆ ಮಿಥ್ಯಾತ್ವವನ್ನು ಪ್ರಯೋಜಕ ಎನ್ನುವುದಿಲ್ಲ ಹಾಗಾದಲ್ಲಿ ಹಿಂದಿನ ದೋಷ ಬರುತ್ತಿತ್ತು. ಮತ್ತೇನೆಂದರೆ, ಜ್ಞಾನದಿಂದ ನಷ್ಟವಾದ ಅಜ್ಞಾನದಲ್ಲಿ ಅನಿತ್ಯತ್ವದ ಬಲದಿಂದ ಮಿಥ್ಯಾತ್ವವನ್ನು ಸಾಧಿಸುತ್ತೇವೆ ಎಂಬ ಪ್ರಶ್ನೆಗೆ ಉತ್ತರ ನೀಡುತ್ತಾರೆ-

ದೃಶ್ಯತ್ವಾದೇವ ಮಿಥ್ಯಾತ್ವಂ ನಾನಿತ್ಯತ್ವಾಚ್ಚ ತೇ ಮತೇ ।
ನಚೇತ್ತೇನೈವ ಬಂಧಸ್ಯ ಸಾಕ್ಷಾನ್ಮಿಥ್ಯಾತ್ವಸಿದ್ಧಿತಃ ।
ಬಕಬಂಧಪ್ರಕಾರೋಽಯಂ ವಿಕಾರಾಯ ಭವೇತ್ತವ ॥ ೩೬೪ ॥

**ಅರ್ಥ–** ತೇ ಮತೇ= ನಿನ್ನ ಮತದಲ್ಲಿ, ಮಿಥ್ಯಾತ್ವಂ= ಮಿಥ್ಯಾತ್ವವು, ದೃಶ್ಯತ್ವಾದೇವ= ದೃಶ್ಯತ್ವದಿಂದಲೇ ಸಾಧಿಸಲ್ಪಡುತ್ತದೆ. ಚ ಅನಿತ್ಯತ್ವಾತ್ ನ= ಮತ್ತು ಅನಿತ್ಯತ್ವದಿಂದಲ್ಲ, ನ ಚೇತ್= ಹಾಗಲ್ಲದಿದ್ದರೆ, ತೇನೈವ= ಆ ಅನಿತ್ಯತ್ವದಿಂದಲೇ, ಸಾಕ್ಷಾತ್= ನೇರವಾಗಿ, ಮಿಥ್ಯಾತ್ವಸಿದ್ಧಿತಃ= ಮಿಥ್ಯಾತ್ವವು ಸಿದ್ಧಿಸುವುದರಿಂದ, ಅಯಂ ಬಕಬಂಧಪ್ರಕಾರಃ= ಈ ಬಕಬಂಧ ರೀತಿಯು, ತವ= ನಿನ್ನ, ವಿಕಾರಾಯ ಭವೇತ್= ವಿಕಾರವನ್ನೇ ಸಾಧನೆ ಮಾಡುವುದಾಗುತ್ತದೆ.

**ಅನುವಾದ** - ನೀವು ವಿಮತಂ ಮಿಥ್ಯಾ ದೃಶ್ಯತ್ವಾತ್ ಎಂದು ದೃಶ್ಯತ್ವ ಹೇತುವಿನಿಂದ ಮಿಥ್ಯಾತ್ವವನ್ನು ಹೇಳುವವರು. ಅನಿತ್ಯತ್ವ ಹೇತುವಿನಿಂದಲ್ಲ. ಅನಿತ್ಯತ್ವವೇ ಸಾಧಕವಾಗಿದ್ದರೆ, ಅದರಿಂದಲೇ ನೇರವಾಗಿ ಬಂಧಮಿಥ್ಯಾತ್ವದ ಸಾಧನೆ ಮಾಡುವುದನ್ನು ಬಿಟ್ಟು, ಅಜ್ಞಾನೋಪಾದಾನಕತ್ವವನ್ನು ಮಧ್ಯದಲ್ಲಿ ತರುವುದು ಬಕಬಂಧ ನ್ಯಾಯವನ್ನು ಅನುಸರಿಸುತ್ತದೆ.

**ಭಾವವಿಲಾಸಿನೀ–** ನನು ಜ್ಞಾನೇನಾಜ್ಞಾನಸ್ಯ ವಿನಾಶಾಯ ನ ಮಿಥ್ಯಾತ್ವಮಪಿ ಪ್ರಯೋಜಕಮುಚ್ಯತೇ । ಯೇನೋಕ್ತದೋಷಸ್ಸ್ಯಾತ್ । ಕಿಂತು ಜ್ಞಾನೇನ ವಿನಷ್ಟೇಽಜ್ಞಾನೇಽನಿತ್ಯತ್ವ ಬಲಾದೇವ ಮಿಥ್ಯಾತ್ವಮಾನೀಯತ ಇತ್ಯತ ಆಹ – **ದೃಶ್ಯತ್ವಾದೇವೇತಿ** ॥ ನಚೇತ್ ಅನಿತ್ಯತ್ವಂ ಮಿಥ್ಯಾತ್ವಸ್ಯಾಸಾಧಕಂ ನಚೇತ್ । ಅನಿತ್ಯತ್ವೇನೈವ ಮಿಥ್ಯಾತ್ವಮಪ್ಯಾಯಾಸ್ಯತೀತಿ ಚೇದಿತ್ಯರ್ಥಃ । ತೇನೈವ ಅನಿತ್ಯತ್ವೇನೈವ । ಸಾಕ್ಷಾತ್ ಅಜ್ಞಾನೋಪಾದಾನಕತ್ವಪ್ರನಾಡೀಂ ವಿನಾ ಕೇವಲಂ ಜ್ಞಾನೇನೈವ ನಾಶಾತ್ । ಬಕಬಂಧಪ್ರಕಾರಃ । ಬಕಬಂಧಸ್ಯ ಪ್ರಕಾರ ಇವ ಪ್ರಕಾರೋ ಯಸ್ಯ ಸಃ । ಅಯಂ ಮಿಥ್ಯಾತ್ವಸಿದ್ಧ್ಯರ್ಥಮ್ ಅಜ್ಞಾನೋಪಾದಾನಕತ್ವಾನಯನಾಯಾಸಃ । ಯಥಾಹಸ್ತಗೃಹೀತ ಬಕಸ್ಯ ಪ್ರಾಗೇವ ಸಿದ್ಧಬಂಧನಾಯ ಪುನಸ್ತಚ್ಚಕ್ಷುಷಿ ತೈಲದಾನಾದಿಕಂ ಕುರ್ವನ್ ಅವಿಚಾರೀ ಅನಿತ್ಯತ್ವೇನೈವಾಗತಮಿಥ್ಯಾತ್ವಸ್ಯ ಪುನಃ ಪ್ರಯತ್ನಂ ಕುರ್ವಂಸ್ತ್ವಮಪ್ಯವಿವೇಕೀ ಸ್ಯಾಃ । ತಸ್ಮಾದನಿತ್ಯತ್ವಮಪಿ ಮಿಥ್ಯಾತ್ವಪ್ರಯೋಜಕಂ ನ ವದೇತಿ ಭಾವಃ ॥ ೩೬೪ ॥

**ವಿವರಣೆ** - ಬಕಬಂಧ ಪ್ರಕಾರಃ ಎನ್ನುವುದಕ್ಕೆ ಹೀಗೆ ವಿಗ್ರಹ - ಬಕಬಂಧಸ್ಯ ಪ್ರಕಾರಃ ಇವ ಪ್ರಕಾರಃ ಯಸ್ಯ ಸಃ - ಎಂದು. ಇದರ ಆಶಯ ಹೀಗಿದೆ -

ಕೆರೆಯಲ್ಲಿ ಆಕರ್ಷಕ ಬಕಪಕ್ಷಿಯನ್ನು ಕಂಡ ಇಬ್ಬರಿಗೆ ಅದನ್ನು ಹಿಡಿಯಬೇಕು ಎನಿಸಿತು. ಹತ್ತಿರ ಹೋದಾಕ್ಷಣ ಅದು ಹಾರಿ ಹೋಗುತ್ತಿತ್ತು. ಆಗ ಒಬ್ಬ ಹೀಗೆ ಹೇಳಿದ - ಅದರ ತಲೆಯ ಮೇಲೆ ಎಣ್ಣೆಯನ್ನೊ ಬೆಣ್ಣೆಯನ್ನೊ ಇಡೋಣ. ಅದು ಕರಗಿ ಅದರ ಕಣ್ಣುಗಳಲ್ಲಿ ಇಳಿದು ಕಣ್ಣು ಕಾಣದಂತೆ ಮಾಡುತ್ತದೆ. ಆಗ ಅದನ್ನು ಸುಲಭವಾಗಿ ಹಿಡಿಯಬಹುದು - ಎಂದು ಅದರ ತಲೆಯ ಮೇಲೆ ಎಣ್ಣೆ ಹಾಕಲು ಅದರ ಬಳಿ ಸಾರಬೇಕು, ಅದನ್ನು ಹಿಡಿಯಬೇಕು. ಹಿಡಿದ ಬಳಿಕ ತೈಲಾದಿಗಳನ್ನು ಹಾಕುವುದು ವ್ಯರ್ಥವಲ್ಲವೆ?

ಅದರಂತೆ ಪ್ರಕೃತದಲ್ಲೂ, ಅನಿತ್ಯತ್ವದಿಂದಲೇ ಮಿಥ್ಯಾತ್ವವನ್ನು ಹೇಳುವವರು ಅಜ್ಞಾನೋಪಾದಾನಕತ್ವವನ್ನು ಭಾಷ್ಯಾದಿಗಳಲ್ಲಿ ಏಕೆ ಸಮರ್ಥಿಸುತ್ತೀರಿ?

ಮತ್ತೊಂದು ದೋಷವನ್ನು ಹೇಳುತ್ತಾರೆ-

ಅಥ ತೇನೈವ ತತ್ಸಿದ್ಧಾವಾಶಾ ಕ್ಲೇಶಾಯ ಕೇವಲಮ್ ।
ದೃಷ್ಟಾಂತೇ ಶುಕ್ತಿರಜತೇ ಮಮ ಹೇತೋರಸಮ್ಮತೇಃ ॥ ೩೬೫ ॥

**ಅರ್ಥ**— ಅಥ=ಇನ್ನು, ತೇನೈವ=ಆ ಅನಿತ್ಯತ್ವದಿಂದಲೇ, ತತ್ಸಿದ್ಧೌ=ಮಿಥ್ಯಾತ್ವ ಸಿದ್ಧವಾಗುವ, ಆಶಾ= ಆಸೆಯು ಕೇವಲ ಕ್ಲೇಶಾಯ= ಕೇವಲ ಕ್ಲೇಶಜನಕವಾಗುತ್ತದೆ. ಏಕೆಂದರೆ, ಶುಕ್ತಿರಜತೇ= ಶುಕ್ತಿರಜತದಲ್ಲಿ, ಮಮ= ನನಗೆ, ಹೇತೋ ರಸಂ ಮತೇಃ= ಅನಿತ್ಯ ಹೇತು ಸಮ್ಮತವಲ್ಲವಾದ್ದರಿಂದ.

**ಅನುವಾದ** - ಇನ್ನು, ಅಜ್ಞಾನೋಪಾದಾನಕತ್ವವನ್ನು ತರದೆ ಕೇವಲ ಅನಿತ್ಯತ್ವದಿಂದಲೇ ಮಿಥ್ಯಾತ್ವವನ್ನು ಸುಲಭವಾಗಿ ಸಾಧಿಸುತ್ತೇವೆ ಎನ್ನಬೇಕು. ಆಗ ನಿಮ್ಮ ಅನುಮಾನ- ಬಂಧೋ ಮಿಥ್ಯಾ ಅನಿತ್ಯತ್ವಾತ್ ಶುಕ್ತಿರಜತವತ್ - ಎಂದು ಈ ಅನುಮಾನದಲ್ಲಿ ಅನಿತ್ಯತ್ವಹೇತುವು ದೃಷ್ಟಾಂತವಾದ, ನಾವು ಅಸತ್ ಎಂದು ಒಪ್ಪುವ, ಶುಕ್ತಿರಜತದಲ್ಲಿ ಇಲ್ಲ. ಇಂಥ ಅನುಮಾನದಿಂದ ಮಿಥ್ಯಾತ್ವವನ್ನು ಸಾಧಿಸಲು ಹೊರಟರೆ ನನ್ನ ಮತದಲ್ಲಿ ಸಾಧನವೈಕಲ್ಯ ದೋಷ ಬರುವುದರಿಂದ ನೀನು ಕ್ಲೇಶವನ್ನೇ ಎದುರಿಸಬೇಕಾಗುತ್ತದೆ.

**ಭಾವವಿಲಾಸಿನೀ**— ದೂಷಣಾಂತರಂ ಚಾಹ — **ಅಥೇತಿ** ॥ ತೇನೈವ ಅನಿತ್ಯತ್ವೇನೈವ । ತತ್ಸಿದ್ಧೌ ಮಿಥ್ಯಾತ್ವಸಿದ್ಧೌ । ಮಮಮತೇ । ಹೇತೋರನಿತ್ಯತ್ವಹೇತೋಃ । ಬಂಧೋ ಮಿಥ್ಯಾ ಅನಿತ್ಯತ್ವಾತ್। ಶುಕ್ತಿರೂಪ್ಯವದಿತಿ ಖಲ್ವನಿತ್ಯತ್ವೇನ ಮಿಥ್ಯಾತ್ವಂ ಸಾಧನೀಯಮ್ । ತದಾ ದೃಷ್ಟಾಂತೇ ಪ್ರತಿವಾದಿನೋ ಮತೇ ಸಾಧನವೈಕಲ್ಯಮಿತಿ ಭಾವಃ ॥ ೩೬೫ ॥

ಕೃತಕತ್ವಂ ಚ ತದ್ಬೀಜಂ ನ ದುರ್ಬೀಜಮಿದಂ ತವ ॥ ೩೬೬ ॥

**ಅರ್ಥ–** ತದ್ಬೀಜಂ ಚ=ಆ ಅನಿತ್ಯತ್ವದ ಕಾರಣವಾದರೋ, ಕೃತಕತ್ವಂ ಭವತಿ= ಕೃತಕತ್ವವಾಗುತ್ತದೆ. ತವ=ನಿನ್ನ, ದುರ್ಬೀಜಂ=ಕಾರಣಾಭಾಸವಾದ, ಇದಂ=ಮಿಥ್ಯಾತ್ವವು, ಬೀಜಂ ನ ಭವತಿ=ಕಾರಣವಾಗದು.

**ಅನುವಾದ -** ಅನಿತ್ಯತ್ವದ ಸಂದೇಹ ಬಂದರೆ ಅದನ್ನು ಸಾಧಿಸುವುದು ಕೃತಕತ್ವದಿಂದ, ಹೊರತು, ನೀವು ಹೇಳುವ ಮಿಥ್ಯಾತ್ವದಿಂದಲ್ಲ, ಅದು ಕಾರಣಾಭಾಸ.

**ಭಾವವಿಲಾಸಿನೀ–**ತದ್ಬೀಜಂ ಅನಿತ್ಯತ್ವಬೀಜಮ್ । ಇದಂ ಮಿಥ್ಯಾತ್ವಮ್ । ಅನಿತ್ಯತ್ವೇ ಮಿಥ್ಯಾತ್ವಮಪಿ ಪ್ರಯೋಜಕಂ ಚೇತ್ ಪ್ರಯೋಜಕಂ ವಿನಾಽನುಪಪದ್ಯಮಾನಾಂ ಪ್ರಯೋಜ್ಯ- ಮನಿತ್ಯತ್ವಂ ಮಿಥ್ಯಾತ್ವಮಪ್ಯಾಕ್ಷಿಪೇತ್ । ತದೇವ ನಾಸ್ತಿತ್ಯರ್ಥಃ । ಅನಿತ್ಯತ್ವೇನ ಕೃತಕತ್ವಮೇವ ಸಾಧಯಿತುಂ ಶಕ್ಯಮುಭಯೋರಪಿ ಸಮನಿಯತತ್ವಾತ್ । ನತು ಮಿಥ್ಯಾತ್ವಮಿತಿ ಭಾವಃ ॥ ೩೬೬॥

**ವಿವರಣೆ -** ಧೂಮವನ್ನು ಕಂಡವನಿಗೆ ಇದು ಇಲ್ಲಿ ಹೇಗೆ ಬಂದಿತು ಎಂದು ಧೂಮಪ್ರಯೋಜಕದ ಸಂಶಯ ಬಂದರೆ ವಹ್ನಿಯು ಧೂಮಕ್ಕೆ ಪ್ರಯೋಜಕ ಎಂದು ತಿಳಿದು ಪ್ರಯೋಜ್ಯವಾದ ಧೂಮ ಇದ್ದ ಮೇಲೆ ಪ್ರಯೋಜಕವಾದ ವಹ್ನಿ ಇರಲೇಬೇಕು ಎಂದು ತೀರ್ಮಾನಿಸುತ್ತಾರೆ.

ಅದರಂತೆ ಅನಿತ್ಯತ್ವಕ್ಕೆ ಯಾವುದು ಪ್ರಯೋಜಕವೆಂದರೆ ಕೃತಕತ್ವವು ಪ್ರಯೋಜಕ. ಬೇರೆ ಶಬ್ದಗಳಲ್ಲಿ ಹೇಳುವುದಾರೆ ಇದು ಏಕೆ ಅನಿತ್ಯ=ನಾಶವಾಗುವಂಥದ್ದು ಎನ್ನುವುದಕ್ಕೆ ಉತ್ತರ ಕೃತಕ=ಹುಟ್ಟುವಂಥದ್ದು ಆದ್ದರಿಂದ=ಎಂದು ಹೇಳುತ್ತೇವೆ. ಆದರೆ, ನೀವು ಹೇಳುತ್ತಿರುವುದು - ಅನಿತ್ಯ ಏಕೆ ಎಂದರೆ ಮಿಥ್ಯಾ ಆದ್ದರಿಂದ ಎಂದು. ಈ ಮಿಥ್ಯಾತ್ವವು ಅನಿತ್ಯತ್ವಕ್ಕೆ ಪ್ರಯೋಜಕವಲ್ಲ. ಪ್ರಯೋಜಕವಾಗಿದ್ದರೆ ಅನಿತ್ಯತ್ವದಿಂದ ಮಿಥ್ಯಾತ್ವವನ್ನು ಸಾಧಿಸಬಹುದಿತ್ತು.

ಅತೋಽಂಧಕಾರಮಾಲೋಕ ಇವ ವಿಜ್ಞಾನಮೇವ ತೇ ।
ಪರಸ್ಪರವಿರೋಧೇನ ತದಜ್ಞಾನಂ ಹಿ ನಾಶಯೇತ್ ।
ಮಿಥ್ಯಾತ್ವಕಾರಣಾಭಾವಾತ್ ತತ್ಸತ್ಯಮಭವದ್ ಧ್ರುವಮ್ ॥ ೩೬೭ ॥

**ಅರ್ಥ–** ಅತಃ=ನಾಶಕ್ಕೆ ಮಿಥ್ಯಾತ್ವವುಅಪ್ರಯೋಜಕವಾದ್ದರಿಂದ ಆಲೋಕಃ= ಬೆಳಕು, ಅಂಧಕಾರಂ ಇವ=ಕತ್ತಲೆಯನ್ನು ಹೇಗೊ ಹಾಗೆ, ತೇ=ನಿನ್ನ (ನೀವು ಹೇಳುವ), ವಿಜ್ಞಾನಂ= ಬ್ರಹ್ಮಜ್ಞಾನವು, ಪರಸ್ಪರವಿರೋಧೇನ= ಜ್ಞಾನಾಜ್ಞಾನಗಳ ಪರಸ್ಪರ ವಿರೋಧದ ಕಾರಣ, ತತ್ ಅಜ್ಞಾನಂ= ಆ ಅಜ್ಞಾನವನ್ನು, ನಾಶಯೇತ್ ಹಿ= ನಾಶಗೊಳಿಸುತ್ತದಷ್ಟೆ, ಮಿಥ್ಯಾತ್ವ- ಕಾರಣಾಭಾವಾತ್= ಮಿಥ್ಯಾತ್ವಕ್ಕೆ ಕಾರಣ ಇಲ್ಲದಿರುವುದರಿಂದ, ತತ್=ಅನಿತ್ಯವು, ಧ್ರುವಂ= ನಿಶ್ಚಿತವಾಗಿ, ಸತ್ಯಂ ಅಭವತ್=ಸತ್ಯವಾಯಿತು.

**ಅನುವಾದ -** ನಾಶವನ್ನು ಕುರಿತು ಮಿಥ್ಯಾತ್ವವು ಪ್ರಯೋಜಕವಲ್ಲವಾದ್ದರಿಂದ ಪರಸ್ಪರ ವಿರೋಧದಿಂದ ಬೆಳಕು ಕತ್ತಲೆಯನ್ನು ನಾಶಮಾಡಿದರೆ ಜ್ಞಾನವೇ ಅಜ್ಞಾನವನ್ನು ನಾಶಮಾಡುತ್ತದೆ. ಜಗತ್ತಿಗೆ ಮಿಥ್ಯಾತ್ವವನ್ನು ಒಪ್ಪಲು ಏನೂ ಕಾರಣವಿಲ್ಲವಾದ್ದರಿಂದ ಜಗತ್ತು ನಿಶ್ಚಿತವಾಗಿ ಸತ್ಯವೇ ಆಯಿತು.

**ಭಾವವಿಲಾಸಿನೀ–** ಅತಃ ನಾಶೇ ಮಿಥ್ಯಾತ್ವಸ್ಯಾಪ್ರಯೋಜಕತ್ವಾತ್ । ತದಜ್ಞಾನಮ್ ॥೩೬೭॥

**ಯಾ ದುರ್ಘಟಂ ಚ ಘಟಯೇತ್ ಸಾ ಕಿಮನ್ಯದಪೇಕ್ಷತೇ ।**
**ವಾಕ್ಯಾದೀನಾಮನುಸೃತೌ ಯುಕ್ತಿರೇಷಾ ವೃಥಾ ಗತಾ ॥ ೩೬೮ ॥**

**ಅರ್ಥ–** ಯಾ= ಯಾವ ಅವಿದ್ಯೆಯು, ದುರ್ಘಟಂ= ದುರ್ಘಟವಾದುದನ್ನು, ಘಟಯೇತ್= ಘಟನೆ ಮಾಡುತ್ತದೆಯೋ, ಸಾ= ಆ ಅವಿದ್ಯೆಯು, ಅನ್ಯತ್= ಬೇರೆ ಉಪಪಾದಕವನ್ನು, ಕಿಂ ಅಪೇಕ್ಷತೇ= ಏತಕ್ಕೆ ಅಪೇಕ್ಷಿಸುತ್ತದೆ? ವಾಕ್ಯಾದೀನಾಮನುಸೃತೌ= ವಾಕ್ಯಾದಿಗಳನ್ನು ಅನುಸರಿಸಿದರೆ, ಏಷಾಯುಕ್ತಿಃ= ಮಿಥ್ಯಾತ್ವಸಾಧಕವಾದ ಈ ಯುಕ್ತಿಯು, ವೃಥಾ ಗತಾ= ವ್ಯರ್ಥವಾಗುತ್ತದೆ.

**ಅನುವಾದ -** ಅಜ್ಞಾನವು ಅಘಟಿತಘಟನಾಚತುರ ಎಂದೂ ನೀವು ಒಪ್ಪಿದ್ದೀರಿ. ಅದು ಏಕೆ ನಾಶವಾಗುತ್ತದೆ ಎಂದರೆ ತನ್ನ ಶಕ್ತಿಯಿಂದ ಎಂದರೆ ಸಾಕು ಮತ್ತೆ ಮಿಥ್ಯಾತ್ವವನ್ನು ಏಕೆ ಒಪ್ಪಬೇಕು? ಇಲ್ಲ, ನೇಹ ನಾನಾಸ್ತಿ ಮೊದಲಾದ ಶ್ರುತಿಗಳು ಜಗನ್ಮಿಥ್ಯಾತ್ವವನ್ನು ಹೇಳುತ್ತಿವೆ. ಶ್ರುತಿಯ ಬಲದಿಂದ ಅಜ್ಞಾನ ಮಿಥ್ಯಾತ್ವವನ್ನು ಒಪ್ಪುತ್ತೇವೆ ಎನ್ನುವುದಾದರೆ ಹಾಗಾದರೆ ಜಗನ್ಮಿಥ್ಯಾತ್ವಕ್ಕೆ ಶ್ರುತಿಯನ್ನೇ ಹೇಳಿ. ಅಜ್ಞಾನೋಪಾದಾನಕವಾದ್ದರಿಂದ ಮಿಥ್ಯಾ ಎಂಬ ಯುಕ್ತಿಯನ್ನು ಭಾಷ್ಯದಲ್ಲಿ ಏಕೆ ಹೇಳಿದ್ದು?

**ಜಗತ್ಸತ್ಯತ್ವಮಪಿ ಕಿಂ ವಾಕ್ಯೈರ್ನೈವ ನ ಸಾಧ್ಯತೇ ।**
**ಅತೋ ಯುಕ್ತೇಃ ಪುರಸ್ಕರ್ತುಃ ನೈವ ಮಿಥ್ಯಾತ್ವಸಾಧಕಮ್ ॥ ೩೬೯ ॥**

**ಅರ್ಥ–** ಜಗತ್ಸತ್ಯತ್ವಮಪಿ=ಜಗತ್ಸತ್ಯತ್ವವೂ ಕೂಡ, ವಾಕ್ಯೈರ್ನೈವ=ವಿಶ್ವಂ ಸತ್ಯಂ ಮುಂತಾದ ಶ್ರುತಿಯಿಂದಲೇ, ಕಿಂ=ಏಕೆ, ನ ಸಾಧ್ಯತೇ=ಸಾಧಿತವಾಗದು? ಅತಃ=ಆದ್ದರಿಂದ, ಯುಕ್ತೇಃ ಪುರಸ್ಕರ್ತುಃ=ಯುಕ್ತಿಯನ್ನು ಮುಂದಿಡುವವರೆಗೆ, ಮಿಥ್ಯಾತ್ವ ಸಾಧಕಂ= ಅಜ್ಞಾನಮಿಥ್ಯಾತ್ವ ಸಾಧಕವಾದದ್ದು, ನ ಅಸ್ತ್ಯೆವ=ಇಲ್ಲವೇ ಇಲ್ಲ.

**ಅನುವಾದ -** ಶ್ರುತಿಯ ಬಲದಿಂದ ಅಜ್ಞಾನ ಮಿಥ್ಯಾತ್ವವನ್ನು ಒಪ್ಪುವುದಾದರೆ ಶ್ರುತಿಯೇ ಹೇಳುವ ಜಗತ್ಸತ್ಯತ್ವವನ್ನು ಏಕೆ ಒಪ್ಪುವುದಿಲ್ಲ? ಆದ್ದರಿಂದ ಯುಕ್ತಿಯನ್ನು ಮುಂದಿಟ್ಟುಕೋಂಡು ವಿಚಾರಮಾಡಿದರೆ ಜಗತ್ತಿಗೆ ಮಿಥ್ಯಾತ್ವವನ್ನು ಸಾಧಿಸುವಂತಹದು ಯಾವುದೂ ಇಲ್ಲ.

**ಭಾವವಿಲಾಸಿನೀ**– ಯಾ ಅವಿದ್ಯಾ ಸ್ವನಾಶೇ ಮಿಥ್ಯಾತ್ವಸಹಾಯಮ್ । ವಾಕ್ಯಾದೀನಾಂ ನೇಹನಾನಾಸ್ತೀತಿ ವಾಕ್ಯನಾಮ್ । ಅನುಸೃತೌ ಅಜ್ಞಾನಮಿಥ್ಯಾತ್ವಾದಾವನುಸೃತೌ । ಅಜ್ಞಾನೋಪಾದಾನಕತ್ವಾನ್ಮಿಥ್ಯಾತ್ವಂ ಮಾಸ್ತು । ಶ್ರುತಿಬಲಾದೇವ ಜಗತೋ ಮಿಥ್ಯಾತ್ವಂ ಸ್ಯಾದಿತ್ಯಂಗೀಕಾರ ಇತ್ಯರ್ಥಃ । ಏಷಾ ಭಾಷ್ಯೋಕ್ತಾರ್ಥಾಪತ್ತಿರೂಪ ॥ ೩೬೮-೩೬೯ ॥

ಕಾರಣಸ್ಯ ಹಿ ಸತ್ಯತ್ವೇ ಕಾರ್ಯಂ ಮಿಥ್ಯಾ ಕಥಂ ಭವೇತ್ ।
ಅತೋಽಜ್ಞಾನಸ್ಯಾನುಸೃತಿರಜ್ಞಾನಾದೇವ ಕೇವಲಮ್ ॥ ೩೭೦ ॥

**ಅರ್ಥ**– ಹಿ=ಯಾವ ಕಾರಣದಿಂದ, ಕಾರಣಸ್ಯ=ಕಾರಣಕ್ಕೆ, ಸತ್ಯತ್ವೇ ಸತಿ=ಸತ್ಯತ್ವವಿದ್ದಲ್ಲಿ, ಕಾರ್ಯಂ=ಕಾರ್ಯವು, ಕಥಂ=ಹೇಗೆ, ಮಿಥ್ಯಾ ಭವೇತ್=ಮಿಥ್ಯಾ ಆದೀತು? ಅತಃ=ಆದ್ದರಿಂದ, ಅಜ್ಞಾನಸ್ಯ ಅನುಸೃತಿಃ= ಅಜ್ಞಾನದ ಅನುಸರಣೆಯು, ಕೇವಲಂ= ಕೇವಲ, ಅಜ್ಞಾನಾದೇವ ಕೃತಾ=ಅಜ್ಞಾನದಿಂದಲೇ ಮಾಡಿದ್ದು.

**ಅನುವಾದ** - ಕಾರಣ ಸತ್ಯವಾದಲ್ಲಿ ಕಾರ್ಯ ಸತ್ಯವೇ ಆಗಬೇಕಲ್ಲವೆ? ಮಿಥ್ಯಾ ಹೇಗೆ ಆದೀತು? ಆದ್ದರಿಂದ ಜಗತ್ತಿಗೆ ಉಪಾದಾನವಾಗಿ ಸತ್ಯವಾದ ಅಜ್ಞಾನವನ್ನು ಒಪ್ಪುವುದು ಅಜ್ಞಾನದಿಂದಷ್ಟೆ, ವಿಚಾರಪೂರ್ವಕವಾಗಿ ಅಲ್ಲ.

**ಭಾವವಿಲಾಸಿನೀ**– ಅನುಸೃತಿಃ ಮಿಥ್ಯಾತ್ವಸಿದ್ಧ್ಯರ್ಥಮನುಸರಣಮ್ ॥ ೩೭೦ ॥

ಜ್ಞಾನಂ ಅಜ್ಞಾನಸ್ಯೈವ ನಿವರ್ತಕಂ ಎಂಬ ಏವಕಾರಸಹಿತ ವ್ಯಾಪ್ತಿಯನ್ನು ಒಪ್ಪಿದರೆ ಬಾಧಪ್ರಮಾ ವ್ಯರ್ಥವೇ ಆದೀತು ಎಂದು ಹೇಳುತ್ತಾರೆ-

ಯದ್ಯಜ್ಞಾನಕ್ಷಯಾದನ್ಯಜ್ಜ್ಞಾನಕಾರ್ಯಂ ನ ತೇ ಮತೇ ।
ವ್ಯರ್ಥಾ ಬಾಧಪ್ರಮಾ ತರ್ಹಿ ಸಾ ಹ್ಯಜ್ಞಾನಕ್ಷಯೋತ್ತರಾ ॥
ನಹ್ಯಜ್ಞಾನೇ ಸತಿ ಜ್ಞಾನಮವಿರೋಧಪ್ರಸಂಗತಃ ॥ ೩೭೧ ॥

**ಅರ್ಥ**– ಯದಿ=ಒಂದು ವೇಳೆ, ಅಜ್ಞಾನಕ್ಷಯಾತ್=ಅಜ್ಞಾನನಾಶಕಿಂತ, ಅನ್ಯತ್= ಬೇರೆ, ಜ್ಞಾನಕಾರ್ಯಂ, ಜ್ಞಾನದ ಕಾರ್ಯವು, ತೇ=ನಿನ್ನ, ಮತೇ=ಮತದಲ್ಲಿ, ನಾಸ್ತಿ= ಇಲ್ಲವೋ, ತರ್ಹಿ=ಆ ಪಕ್ಷದಲ್ಲಿ, ಬಾಧಪ್ರಮಾ=ಬಾಧಜ್ಞಾನವು, ವ್ಯರ್ಥಾ ಭವತಿ= ವ್ಯರ್ಥವಾಗುತ್ತದೆ. ಹಿ=ಏಕೆಂದರೆ, ಸಾ=ಬಾಧಜ್ಞಾನವು, ಅಜ್ಞಾನಕ್ಷಯೋತ್ತರಾ ಭವತಿ= ಅಜ್ಞಾನನಾಶದ ನಂತರದಲ್ಲಿ ಬರುತ್ತದೆ. ಅಜ್ಞಾನೇ ಸತಿ=ಅಜ್ಞಾನವಿದ್ದಾಗ, ಜ್ಞಾನಂ= ಬಾಧಜ್ಞಾನವು, ಅವಿರೋಧಪ್ರಸಂಗತಃ= ಅವುಗಳಿಗೆ ವಿರೋಧವಿಲ್ಲದಿರುವ ಪ್ರಸಂಗ ಬರುವುದರಿಂದ, ನ ಭವತಿ ಹಿ=ಬರುವುದಿಲ್ಲವಷ್ಟೆ.

**ಅನುವಾದ** - ಬಾಧಜ್ಞಾನವು ಅಜ್ಞಾನನಾಶವನ್ನಷ್ಟೇ ಮಾಡುತ್ತದೆ ಎಂಬ ಅಭಿಪ್ರಾಯದಿಂದ ತಾನೆ ಜ್ಞಾನನಾಶ್ಯವಾದ ಬಂಧಕ್ಕೆ ಅಜ್ಞಾನಕಾರ್ಯತ್ವವನ್ನು

ಒಪ್ಪುತ್ತಿರುವುದು. ಹೀಗಾದಲ್ಲಿ ಬಾಧಜ್ಞಾನವನ್ನು ಒಪ್ಪುವುದೇ ವ್ಯರ್ಥವಾಗುತ್ತದೆ. ಏಕೆಂದರೆ, ಜ್ಞಾನ -ಅಜ್ಞಾನಗಳಿಗೆ ವಿರೋಧ ಇರುವುದರಿಂದ ಅಜ್ಞಾನ ಇರುವಾಗ ಜ್ಞಾನ ಬಾರದು. (ವೃತ್ತಿಯಿಂದ) ಅಜ್ಞಾನವು ನಾಶವಾದ ಮೇಲೆಯೇ ಜ್ಞಾನ ಬರುವುದು. ಆದ್ದರಿಂದ ಬಾಧಜ್ಞಾನವನ್ನು ಒಪ್ಪುವುದೇ ವ್ಯರ್ಥವಾಗುತ್ತದೆ. ಬಾಧಜ್ಞಾನದ ಏಕೈಕ ಕಾರ್ಯವಾದ ಅಜ್ಞಾನನಾಶವು ಉಂಟಾಗಿರುವುದರಿಂದ ಬಾಧಕ್ಕೆ ಬೇರೆ ಯಾವ ಪ್ರಯೋಜನವೂ ಇಲ್ಲ.

**ಭಾವವಿಲಾಸಿನೀ–** ಜ್ಞಾನಮಜ್ಞಾನಸ್ಯೈವ ನಿವರ್ತಕಮಿತಿ ಸಾವಧಾರಣವ್ಯಾಪ್ತ್ಯಂಗೀಕಾರೇ ಬಾಧಪ್ರಮಾಯಾ ವೈಯರ್ಥ್ಯಮೇವ ಸ್ಯಾದಿತ್ಯಾಹ – **ಯದೀತಿ** ॥ ಸಾ ಬಾಧಪ್ರಮಾ । ಜ್ಞಾನಂ ಬಾಧಪ್ರಮಾರೂಪಜ್ಞಾನಮ್ ॥ ೩೭೧॥

ಅತೋಽಜ್ಞಾನಂ ವಿಲೋಪ್ಯೈವ ಬಾಧಜ್ಞಾನೋದಯೋ ಭವೇತ್ ।
ತಸ್ಯ ಜ್ಞಾನಸ್ಯ ಕಿಂ ಸಾಧ್ಯಂ ನಹಿ ದಗ್ಧಂ ಪುನರ್ದಹೇತ್ ॥ ೩೭೨ ॥

**ಅರ್ಥ–** ಅತಃ=ಆದ್ದರಿಂದ, ಅಜ್ಞಾನಂ ಸ್ವರೂಪಜ್ಞಾನಾವಿರೋಧಿಯಾದ ಅಜ್ಞಾನವನ್ನು ವಿಲೋಪ್ಯ ಏವ=ಮನೋವೃತ್ತಿಜ್ಞಾನದಿಂದ ಹೋಗಲಾಡಿಸಿಯೇ, ಬಾಧಜ್ಞಾನೋದಯಃ= ಬಾಧಜ್ಞಾನದ ಉತ್ಪತ್ತಿಯು, ಭವೇತ್=ಆಗಬೇಕು. ತಸ್ಯ ಜ್ಞಾನಸ್ಯ=ಆ ಜ್ಞಾನದಿಂದ, ಸಾಧ್ಯಂ= ಕಾರ್ಯ, ಕಿಂ=ಏನು? ಹಿ=ಏಕೆಂದರೆ, (ವಹ್ನಿಃ=ಬೆಂಕಿಯು) ದಗ್ಧಂ=ಸುಟ್ಟ ಕಟ್ಟಿಗೆಯನ್ನು ನ ದಹೇತ್=ಸುಡದು.

**ಅನುವಾದ** - ಮಾಯಾವಾದಿಗಳ ಪ್ರಕಾರ ಜ್ಞಾನದಲ್ಲಿ ಎರಡು ವಿಧಗಳಿವೆ. ಸ್ವರೂಪಜ್ಞಾನ ಮತ್ತು ಮನೋವೃತ್ತಿಜ್ಞಾನ. ಅವುಗಳಲ್ಲಿ ಸ್ವರೂಪಜ್ಞಾನವು ಅಜ್ಞಾನವಿರೋದಿಯಲ್ಲ. ಮನೋವೃತ್ತಿಜ್ಞಾನವು ಅಜ್ಞಾನವನ್ನು ನಾಶ ಮಾಡಿದ ಮೇಲೆ ಬಾಧಜ್ಞಾನವು ಹುಟ್ಟುತ್ತದೆ. ಆ ಬಾಧಜ್ಞಾನದ ಕಾರ್ಯ ಏನು? ಹೇಗೆ ಸುಟ್ಟ ಕಟ್ಟಿಗೆಯನ್ನು ಮತ್ತೇ ಸುಡಲು ಅಸಾಧ್ಯವೋ, ಅದರಂತೆ, ನಿವೃತ್ತವಾದ ಅಜ್ಞಾನವನ್ನು ಮತ್ತೆ ನಿವೃತ್ತಿಗೊಳಿಸಲು ಸಾಧ್ಯವಿಲ್ಲ.

ಭಾವವಿಲಾಸಿನೀ– **ಅತಃ** ಸ್ವರೂಪಜ್ಞಾನಾವಿರೋಧಿನೋಽಜ್ಞಾನಸ್ಯ ಮನೋವೃತ್ತಿರೂಪ ಜ್ಞಾನವಿರೋಧಿತ್ವಾವಶ್ಯಂಭಾವಾತ್ । **ವಿಲೋಪ್ಯ** ಸ್ವ ವ್ಯತಿರಿಕ್ತನಾಶಕಾಂತರೇಣ ನಾಶಯಿತ್ವಾ । **ದಗ್ಧಂ** ಭಸ್ಮೀಭೂತಂ **ಕಾಷ್ಠಮ್** ॥ ೩೭೨ ॥

ಯದಿ ನಶ್ಯೇತ್ ತತೋ ವಿಶ್ವಂ ಶಾಸ್ತ್ರಂ ವ್ಯರ್ಥೀಕರೋತಿ ತೇ ।
ಅಜ್ಞಾನಸ್ಯೈವ ಯಜ್‌ಜ್ಞಾನಂ ನಾಶಕಂ ನ ಪರಸ್ಯ ಹಿ ॥ ೩೭೩ ॥

**ಅರ್ಥ–** ಯದಿ=ಒಂದು ವೇಳೆ, ವಿಶ್ವಂ=ಜಗತ್ತು, ತತಃ=ಜ್ಞಾನದಿಂದ ಸಾಕ್ಷಾತ್, ನಶ್ಯೇತ್= ನಾಶವಾಗುವುದೊ, ತರ್ಹಿ=ಆ ಪಕ್ಷದಲ್ಲಿ (ಸ ನಾಶಃ=ಆ ನಾಶವು) ತೇ=ನಿನ್ನ

ಶಾಸ್ತ್ರಂ=ಜ್ಞಾನಂ ಅಜ್ಞಾನಸ್ಯೈವ ನಾಶಕಂ ಎಂಬ ಶಾಸ್ತ್ರವಚನವನ್ನು ವ್ಯರ್ಥೀಕರೋತಿ= ವ್ಯರ್ಥಗೊಳಿಸುತ್ತದೆ. ಯತ್=ಯಾವ ಕಾರಣದಿಂದ, ಜ್ಞಾನಂ=ಜ್ಞಾನವು, ಅಜ್ಞಾನಸ್ಯೈವ= ಅಜ್ಞಾನಕ್ಕೆ ಮಾತ್ರ, ನಾಶಕಂ=ನಾಶಕವಾಗುತ್ತದೆ. ಪರಸ್ಯ, ಬೇರೆಯದಕ್ಕೆ, ನ ನಾಶಕಂ= ನಾಶಕವಲ್ಲ ಎಂದು ನಿನ್ನ ಶಾಸ್ತ್ರ ತಾನೆ?

**ಅನುವಾದ** - ಜ್ಞಾನದಿಂದಲೇ ನೇರವಾಗಿ ಜಗತ್ತು ನಾಶವಾಗುವುದಾದರೆ ಆಗ ನಿಮ್ಮ ಶಾಸ್ತ್ರಕ್ಕೆ ಪ್ರಯೋಜನವಿಲ್ಲ. ಏಕೆಂದರೆ ನಿಮ್ಮ ಶಾಸ್ತ್ರವು ಜ್ಞಾನಂ ಅಜ್ಞಾನಸ್ಯೈವ ನಾಶಕಂ ಪರಸ್ಯ ನ ಎನ್ನುತ್ತಿದೆ. ಆದರೆ ಜ್ಞಾನವು ಅಜ್ಞಾನಕ್ಕೆ ನಾಶಕವಾಗದೆ ಬೇರೆಯದಕ್ಕೆ ನಾಶಕವಾಗಿದೆ. ಹೀಗಾಗಿ ಶಾಸ್ತ್ರ ವ್ಯರ್ಥ.

**ಭಾವವಿಲಾಸಿನೀ**– ತತಃ ಜ್ಞಾನಾತ್ । ನಶ್ಯೇತ್ ಸಾಕ್ಷಾನ್ನಶ್ಯೇತ್ । ಶಾಸ್ತ್ರಂ ಜ್ಞಾನಮಜ್ಞಾನಸ್ಯೈವ ನಿವರ್ತಕಮಿತಿ ಶಾಸ್ತ್ರಮ್ । ಯತ್ ಯಸ್ಮಾತ್ ॥ ೩೭೩ ॥

**ನ ಚೇನ್ನಶ್ಯೇತ್ ತತೋ ವಿಶ್ವಂ ಸ್ವಯಂ ವ್ಯರ್ಥೀಭವಿಷ್ಯತಿ ।**
**ನಾಶ್ಯತ್ವಬೋಧಿಕಾ ಸಾ ಚೇನ್ನಾಸ್ತಿತ್ವಂ ಕಾ ಪ್ರಬೋಧಯೇತ್ ॥ ೩೭೪ ॥**

**ಅರ್ಥ**– ವಿಶ್ವಂ=ಜಗತ್ತು, ತತಃ=ಜ್ಞಾನದಿಂದ, ನ ನಶ್ಯೇತ್ ಚೇತ್=ನಾಶವಾಗದಿದ್ದರೆ, ಶಾಸ್ತ್ರಂ=ಶಾಸ್ತ್ರವು, ಸ್ವಯಂ=ತಾನೇ, ವ್ಯರ್ಥೀಭವಿಷ್ಯತಿ=ವ್ಯರ್ಥವಾಗುತ್ತದೆ. ಸಾ=ತರತಿ ಶೋಕಂ ಇತ್ಯಾದಿಶ್ರುತಿಯು, ನಾಶ್ಯತ್ವಬೋಧಿಕಾ, ಚೇತ್= ನಾಶ್ಯತ್ವ ಪ್ರಯೋಜಕ- ವಾಗಿದ್ದರೂ, ನಾಶ್ಯತ್ವವನ್ನು ಹೇಳುವುದಾದರೆ, ನಾಸ್ತಿತ್ವಂ=ತ್ರೈಕಾಲಿಕ ನಿಷೇಧ ಪ್ರತಿಯೋಗಿತ್ವವವನ್ನು, ಕಾ=ಯಾವ ಶ್ರುತಿಯು, ಪ್ರಬೋಧಯೇತ್=ತಿಳಿಸೀತು?

**ಅನುವಾದ** - ಜಗತ್ತು ಬ್ರಹ್ಮಜ್ಞಾನದಿಂದ ನಾಶವಾಗದಿದ್ದರೆ ಶಾಸ್ತ್ರವು ತಾನೇ ವ್ಯರ್ಥವಾಗುತ್ತದೆ. ಶ್ರುತಿಗಳು ಜ್ಞಾನನಾಶ್ಯತ್ವವನ್ನು ಹೇಳುತ್ತವೆ ಎಂದಾದರೆ, ನೀವೇ ಒಪ್ಪುವ ತ್ರೈಕಾಲಿಕನಿಷೇಧ ಪ್ರತಿಯೋಗಿತ್ವವು ಯಾವ ಶ್ರುತಿಯಿಂದ ಸಿದ್ಧವಾದೀತು?

**ಭಾವವಿಲಾಸಿನೀ**– ವಿಶ್ವಂ ತತೋ ನ ನಶ್ಯೇಚ್ಚೇದಿತಿ ಸಂಬಂಧಃ । ತತಃ ಜ್ಞಾನಾತ್ । ನಾಶ್ಯತ್ವ- ಬೋಧಿಕಾ ಜಗನ್ನಾಶ್ಯತ್ವಬೋಧಿಕಾ । ಅಜ್ಞಾನೋತ್ತರಕಾಲೀನತ್ವೇನ ಸಾಕ್ಷಾತ್‌ಜಗನ್ನಾಶಕತ್ವಾ- ಭಾವೇಽಪಿ ಅಜ್ಞಾನನಾಶೇ ಸತಿ ಪ್ರಾಗೇವ ಜಾತಂ ಜಗನ್ನಾಶಂ ಭೋದಯತಿ ಚೇದಿತ್ಯರ್ಥಃ । ಸಾಕ್ಷಾತ್ ಜ್ಞಾನೇನ ಜಗತೋ ನಾಶಾಭಾವೇಽಪಿ ನಾಶ್ಯತ್ವಪ್ರಬೋಧಕತ್ವೇನ ವಾ ಜ್ಞಾನನಾಶ್ಯತ್ವಂ ಭವಿಷ್ಯತೀತಿ ಪರಸ್ಯಾಶಯಃ । ದೂಷಣಮಾಹ – **ನಾಸ್ತಿತ್ವಮಿತಿ** ॥ ನಾಸ್ತಿತ್ವಂ ತ್ರೈಕಾಲಿಕ- ನಿಷೇಧಪ್ರತಿಯೋಗಿತ್ವಮ್ ॥ ೩೭೪ ॥

**ವಿವರಣೆ** - ಹಿಂದಿನ ಶ್ಲೋಕದಲ್ಲಿ ಜ್ಞಾನದಿಂದ ಜಗನ್ನಾಶವಾಗುವುದಾದರೆ ಅದು ಶಾಸ್ತ್ರವನ್ನು ವ್ಯರ್ಥಗೊಳಿಸುತ್ತದೆ ಎಂದು ಹೇಳಲಾಗಿದ್ದಿತು. ಈಗ ಜ್ಞಾನದಿಂದ

ಜಗನ್ನಾಶವಾಗುವುದಿಲ್ಲ, ಆದರೂ ಹಿಂದೆ ಅಜ್ಞಾನನಾಶವಾದಾಗ ಜಗನ್ನಾಶವೂ ಆಗಿದ್ದಿತು. ಹೀಗೆ ಜಗತ್ತು ನಾಶ ಯೋಗ್ಯವೆಂದು ಶಾಸ್ತ್ರ ಹೇಳುತ್ತದೆ ಎಂದು ಅದ್ವೈತಿ ಹೇಳಿದರೆ ಶಾಸ್ತ್ರ ಸ್ವಯಂ ವ್ಯರ್ಥ ಎಂದು ಈ ಶ್ಲೋಕ ಹೇಳುತ್ತಿದೆ. ಜಗತ್ತು ನಾಶಯೋಗ್ಯವೆಂದು ಹೇಳಿ ಏನು ಪ್ರಯೋಜನ? ನಾಸ್ತಿತ್ವವನ್ನು ಅಂದರೆ ಮಿಥ್ಯಾತ್ವವನ್ನು ಹೇಳಬೇಕು. ಅದನ್ನು ಯಾವ ಶ್ರುತಿ ಹೇಳುತ್ತದೆ ಎಂದು ರಾಜರು ಕೇಳುತ್ತಾರೆ.

ಬಾಧಜ್ಞಾನದಿಂದ ನಾಶ್ಯತ್ವವೇ ಬೋಧಿತವಾದಾಗ ಅರ್ಥಾತ್ ಅದರಿಂದಲೇ ತ್ರೈಕಾಲಿಕ ನಿಷೇಧ ಪ್ರತಿಯೋಗಿತ್ವವೂ ಸಿದ್ಧವಾಗುತ್ತದೆ ಎಂಬ ಶಂಕೆಗೆ ಉತ್ತರ ನೀಡುತ್ತಾರೆ-

ನಾಶ್ಯತ್ವಾದೇವ ನಾಸ್ತಿತ್ವೇ ಹೇತುಃ ಸ್ಯಾದಪ್ರಯೋಜಕಃ ।
ಭಾವತ್ವೇ ಸತಿ ನಾಶ್ಯಂ ಯತ್ ಪ್ರಾಯಃ ಕೃತಕಮೇವ ತತ್ ॥ ೩೭೫ ॥

**ಅರ್ಥ–** ನಾಶ್ಯತ್ವಾತ್ ಏವ ನಾಶವಾಗುವುದರಿಂದಲೇ, ನಾಸ್ತಿತ್ವೇ=ತ್ರಿಕಾಲಗಳಲ್ಲಿ ಇಲ್ಲ ಎನ್ನುವುದಾದರೆ, ಹೇತುಃ=ನಾಶ್ಯತ್ವಹೇತುವು, ಅಪ್ರಯೋಜಕಃ ಸ್ಯಾತ್= ಅಪ್ರಯೋಜಕವಾದೀತು. ಏಕೆಂದರೆ, ಯತ್=ಯಾವುದು, ಭಾವತ್ವೇ ಸತಿ ನಾಶ್ಯಂ= ಭಾವಪದಾರ್ಥವಾಗಿದ್ದು ನಾಶಹೊಂದುವುದೋ, ತತ್=ಅದು, ಪ್ರಾಯಃ= ಹೆಚ್ಚಾಗಿ, ಕೃತಕಮೇವ=ಜನ್ಯವೇ ಭವತಿ=ಆಗಿರುತ್ತದೆ.

**ಅನುವಾದ** - ನಾಶವಾಗುವುದರಿಂದಲೇ ನಾಸ್ತಿತ್ವ ಎಂಬುದು ಸರಿಯಲ್ಲ. ಏಕೆಂದರೆ ನಾಶವಾಗದ ಶಶವಿಷಾಣವು ನಾಸ್ತಿತ್ವ ಪಡೆದಿದೆ. ಇನ್ನು ನಾಶ್ಯತ್ವದಿಂದ ಯಾವುದು ಪ್ರಯೋಜ್ಯ? ಎಂದರೆ, ಯಾವುದು ಭಾವಪದಾರ್ಥವಾಗಿದ್ದು ನಾಶ್ಯವೊ ಅದು ಹೆಚ್ಚಾಗಿ ಜನ್ಯವೇ ಆಗಿರುವುದರಿಂದ ಕೃತಕತ್ವವೇ ಪ್ರಯೋಜ್ಯ ಎಂದು ಉತ್ತರ.

**ಭಾವವಿಲಾಸಿನೀ–** ನನು ಬಾಧಪ್ರಮಯಾ ನಾಶ್ಯತ್ವ ಏವ ಬೋಧಿತೇಽರ್ಥಾನ್ನಾಸ್ತಿತ್ವಮಪಿ ತೇನೈವ ಸಿದ್ಧ್ಯತೀತ್ಯಾಶಂಕಾಂ ಪರಿಹರತಿ ॥ **ನಾಶ್ಯತ್ವಾದಿತಿ** ॥ ನಾಶ್ಯತ್ವಾಭಾವೇಽಪಿ ಶಶವಿಷಾಣಾದೌನಾಸ್ತಿತ್ವದರ್ಶನೇನ ನಾಶ್ಯತ್ವಂ ನಾಸ್ತಿತ್ವೇ ಪ್ರಯೋಜಕಂ ನ ಭವತೀತಿ ಭಾವಃ । ಕಿಂತರ್ಹಿ ನಾಶ್ಯತ್ವಪ್ರಯೋಜ್ಯಮಿತ್ಯತಸ್ತದ್ದರ್ಶಯತಿ ॥ **ಭಾವತ್ವ ಇತಿ** ॥ ೩೭೫ ॥

**ವಿವರಣೆ** - ಪ್ರಾಗಭಾವವು ನಾಶವಾಗುತ್ತದಾದರೂ ಕೃತಕವಲ್ಲ. ಅದಕ್ಕಾಗಿ ಭಾವತ್ವೇಸತಿ ಎಂದು ಸೇರಿಸಿದ್ದು, ಅನಾದಿಯಾದ ಪ್ರಕೃತಿಬಂಧವು ಭಾವನಾಶ್ಯವಾದರೂ ಜನ್ಯವಲ್ಲ. ಅದಕ್ಕಾಗಿ ತದ್ಭಿನ್ನತ್ವೇ ಸತಿ ಎಂಬ ಅರ್ಥದ ಪ್ರಾಯಃ ಎಂಬ ವಿಶೇಷಣವನ್ನು ಸೇರಿಸಿದ್ದು.

ಅಥ ನಾಸ್ತಿತ್ವವಕ್ತ್ರೀ ಸಾ ನಾಸ್ತಿತ್ವೇನೈವ ನಾಶ್ಯತಾ ।
ಇತಿ ಪಕ್ಷೋ ಯದಿ ಭವೇದ್ ಗತಾಽಜ್ಞಾನಪ್ರನಾಡಿಕಾ ॥ ೩೭೬ ॥

ಶಾಸ್ತ್ರಂ=ಜ್ಞಾನಂ ಅಜ್ಞಾನಸ್ಯೈವ ನಾಶಕಂ ಎಂಬ ಶಾಸ್ತ್ರವಚನವನ್ನು ವ್ಯರ್ಥೀಕರೋತಿ= ವ್ಯರ್ಥಗೊಳಿಸುತ್ತದೆ. ಯತ್=ಯಾವ ಕಾರಣದಿಂದ, ಜ್ಞಾನಂ=ಜ್ಞಾನವು, ಅಜ್ಞಾನಸ್ಯೈವ= ಅಜ್ಞಾನಕ್ಕೆ ಮಾತ್ರ, ನಾಶಕಂ=ನಾಶಕವಾಗುತ್ತದೆ. ಪರಸ್ಯ, ಬೇರೆಯದಕ್ಕೆ, ನ ನಾಶಕಂ= ನಾಶಕವಲ್ಲ ಎಂದು ನಿನ್ನ ಶಾಸ್ತ್ರ ತಾನೆ?

**ಅನುವಾದ** - ಜ್ಞಾನದಿಂದಲೇ ನೇರವಾಗಿ ಜಗತ್ತು ನಾಶವಾಗುವುದಾದರೆ ಆಗ ನಿಮ್ಮ ಶಾಸ್ತ್ರಕ್ಕೆ ಪ್ರಯೋಜನವಿಲ್ಲ. ಏಕೆಂದರೆ ನಿಮ್ಮ ಶಾಸ್ತ್ರವು ಜ್ಞಾನಂ ಅಜ್ಞಾನಸ್ಯೈವ ನಾಶಕಂ ಪರಸ್ಯ ನ ಎನ್ನುತ್ತಿದೆ. ಆದರೆ ಜ್ಞಾನವು ಅಜ್ಞಾನಕ್ಕೆ ನಾಶಕವಾಗದೆ ಬೇರೆಯದಕ್ಕೆ ನಾಶಕವಾಗಿದೆ. ಹೀಗಾಗಿ ಶಾಸ್ತ್ರ ವ್ಯರ್ಥ.

**ಭಾವವಿಲಾಸಿನೀ**– ತತಃ ಜ್ಞಾನಾತ್ । ನಶ್ಯೇತ್ ಸಾಕ್ಷಾನ್ನಶ್ಯೇತ್ । ಶಾಸ್ತ್ರಂ ಜ್ಞಾನಮಜ್ಞಾನಸ್ಯೈವ ನಿವರ್ತಕಮಿತಿ ಶಾಸ್ತ್ರಮ್ । ಯತ್ ಯಸ್ಮಾತ್ ॥ ೩೭೩ ॥

ನ ಚೇನ್ನಶ್ಯೇತ್ ತತೋ ವಿಶ್ವಂ ಸ್ವಯಂ ವ್ಯರ್ಥೀಭವಿಷ್ಯತಿ ।
ನಾಶ್ಯತ್ವಬೋಧಿಕಾ ಸಾ ಚೇನ್ನಾಸ್ತಿತ್ವಂ ಕಾ ಪ್ರಬೋಧಯೇತ್ ॥ ೩೭೪ ॥

**ಅರ್ಥ**– ವಿಶ್ವಂ=ಜಗತ್ತು, ತತಃ=ಜ್ಞಾನದಿಂದ, ನ ನಶ್ಯೇತ್ ಚೇತ್=ನಾಶವಾಗದಿದ್ದರೆ, ಶಾಸ್ತ್ರಂ=ಶಾಸ್ತ್ರವು, ಸ್ವಯಂ=ತಾನೇ, ವ್ಯರ್ಥೀಭವಿಷ್ಯತಿ=ವ್ಯರ್ಥವಾಗುತ್ತದೆ. ಸಾ=ತರತಿ ಶೋಕಂ ಇತ್ಯಾದಿಶ್ರುತಿಯು, ನಾಶ್ಯತ್ವಬೋಧಿಕಾ, ಚೇತ್= ನಾಶ್ಯತ್ವ ಪ್ರಯೋಜಕ- ವಾಗಿದ್ದರೂ, ನಾಶ್ಯತ್ವವನ್ನು ಹೇಳುವುದಾದರೆ, ನಾಸ್ತಿತ್ವಂ=ತ್ರೈಕಾಲಿಕ ನಿಷೇಧ ಪ್ರತಿಯೋಗಿತ್ವವನ್ನು, ಕಾ=ಯಾವ ಶ್ರುತಿಯು, ಪ್ರಬೋಧಯೇತ್=ತಿಳಿಸೀತು?

**ಅನುವಾದ** - ಜಗತ್ತು ಬ್ರಹ್ಮಜ್ಞಾನದಿಂದ ನಾಶವಾಗದಿದ್ದರೆ ಶಾಸ್ತ್ರವು ತಾನೇ ವ್ಯರ್ಥವಾಗುತ್ತದೆ. ಶ್ರುತಿಗಳು ಜ್ಞಾನನಾಶ್ಯತ್ವವನ್ನು ಹೇಳುತ್ತವೆ ಎಂದಾದರೆ, ನೀವೇ ಒಪ್ಪುವ ತ್ರೈಕಾಲಿಕನಿಷೇಧ ಪ್ರತಿಯೋಗಿತ್ವವು ಯಾವ ಶ್ರುತಿಯಿಂದ ಸಿದ್ಧವಾದೀತು?

**ಭಾವವಿಲಾಸಿನೀ**– ವಿಶ್ವಂ ತತೋ ನ ನಶ್ಯೇಚ್ಚೇದಿತಿ ಸಂಬಂಧಃ । ತತಃ ಜ್ಞಾನಾತ್ । ನಾಶ್ಯತ್ವ- ಬೋಧಿಕಾ ಜಗನ್ನಾಶ್ಯತ್ವಬೋಧಿಕಾ । ಅಜ್ಞಾನೋತ್ತರಕಾಲೀನತ್ವೇನ ಸಾಕ್ಷಾತ್‌ಜಗನ್ನಾಶಕತ್ವಾ- ಭಾವೇಽಪಿ ಅಜ್ಞಾನನಾಶೇ ಸತಿ ಪ್ರಾಗೇವ ಜಾತಂ ಜಗನ್ನಾಶಂ ಭೋದಯತಿ ಚೇದಿತ್ಯರ್ಥಃ । ಸಾಕ್ಷಾತ್ ಜ್ಞಾನೇನ ಜಗತೋ ನಾಶಾಭಾವೇಽಪಿ ನಾಶ್ಯತ್ವಪ್ರಬೋಧಕತ್ವೇನ ವಾ ಜ್ಞಾನನಾಶ್ಯತ್ವಂ ಭವಿಷ್ಯತೀತಿ ಪರಸ್ಯಾಶಯಃ । ದೂಷಣಮಾಹ – **ನಾಸ್ತಿತ್ವಮಿತಿ** ॥ ನಾಸ್ತಿತ್ವಂ ತ್ರೈಕಾಲಿಕ- ನಿಷೇಧಪ್ರತಿಯೋಗಿತ್ವಮ್ ॥ ೩೭೪ ॥

**ವಿವರಣೆ** - ಹಿಂದಿನ ಶ್ಲೋಕದಲ್ಲಿ ಜ್ಞಾನದಿಂದ ಜಗನ್ನಾಶವಾಗುವುದಾದರೆ ಅದು ಶಾಸ್ತ್ರವನ್ನು ವ್ಯರ್ಥಗೊಳಿಸುತ್ತದೆ ಎಂದು ಹೇಳಲಾಗಿದ್ದಿತು. ಈಗ ಜ್ಞಾನದಿಂದ

ಜಗನ್ನಾಶವಾಗುವುದಿಲ್ಲ, ಆದರೂ ಹಿಂದೆ ಅಜ್ಞಾನನಾಶವಾದಾಗ ಜಗನ್ನಾಶವೂ ಆಗಿದ್ದಿತು. ಹೀಗೆ ಜಗತ್ತು ನಾಶ ಯೋಗ್ಯವೆಂದು ಶಾಸ್ತ್ರ ಹೇಳುತ್ತದೆ ಎಂದು ಅದ್ವೈತಿ ಹೇಳಿದರೆ ಶಾಸ್ತ್ರ ಸ್ವಯಂ ವ್ಯರ್ಥ ಎಂದು ಈ ಶ್ಲೋಕ ಹೇಳುತ್ತಿದೆ. ಜಗತ್ತು ನಾಶಯೋಗ್ಯವೆಂದು ಹೇಳಿ ಏನು ಪ್ರಯೋಜನ? ನಾಸ್ತಿತ್ವವನ್ನು ಅಂದರೆ ಮಿಥ್ಯಾತ್ವವನ್ನು ಹೇಳಬೇಕು. ಅದನ್ನು ಯಾವ ಶ್ರುತಿ ಹೇಳುತ್ತದೆ ಎಂದು ರಾಜರು ಕೇಳುತ್ತಾರೆ.

ಬಾಧಜ್ಞಾನದಿಂದ ನಾಶ್ಯತ್ವವೇ ಬೋಧಿತವಾದಾಗ ಅರ್ಥಾತ್ ಅದರಿಂದಲೇ ತ್ರೈಕಾಲಿಕ ನಿಷೇಧ ಪ್ರತಿಯೋಗಿತ್ವವೂ ಸಿದ್ಧವಾಗುತ್ತದೆ ಎಂಬ ಶಂಕೆಗೆ ಉತ್ತರ ನೀಡುತ್ತಾರೆ-

**ನಾಶ್ಯತ್ವಾದೇವ ನಾಸ್ತಿತ್ವೇ ಹೇತುಃ ಸ್ಯಾದಪ್ರಯೋಜಕಃ ।**
**ಭಾವತ್ವೇ ಸತಿ ನಾಶ್ಯಂ ಯತ್ ಪ್ರಾಯಃ ಕೃತಕಮೇವ ತತ್ ।। ೩೭೫ ।।**

**ಅರ್ಥ–** ನಾಶ್ಯತ್ವಾತ್ ಏವ ನಾಶವಾಗುವುದರಿಂದಲೇ, ನಾಸ್ತಿತ್ವೇ=ತ್ರಿಕಾಲಗಳಲ್ಲಿ ಇಲ್ಲ ಎನ್ನುವುದಾದರೆ, ಹೇತುಃ=ನಾಶ್ಯತ್ವಹೇತುವು, ಅಪ್ರಯೋಜಕಃ ಸ್ಯಾತ್= ಅಪ್ರಯೋಜಕವಾದೀತು. ಏಕೆಂದರೆ, ಯತ್=ಯಾವುದು, ಭಾವತ್ವೇ ಸತಿ ನಾಶ್ಯಂ= ಭಾವಪದಾರ್ಥವಾಗಿದ್ದು ನಾಶಹೊಂದುವುದೋ, ತತ್=ಅದು, ಪ್ರಾಯಃ= ಹೆಚ್ಚಾಗಿ, ಕೃತಕಮೇವ=ಜನ್ಯವೇ ಭವತಿ=ಆಗಿರುತ್ತದೆ.

**ಅನುವಾದ** - ನಾಶವಾಗುವುದರಿಂದಲೇ ನಾಸ್ತಿತ್ವ ಎಂಬುದು ಸರಿಯಲ್ಲ. ಏಕೆಂದರೆ ನಾಶವಾಗದ ಶಶವಿಷಾಣವು ನಾಸ್ತಿತ್ವ ಪಡೆದಿದೆ. ಇನ್ನು ನಾಶ್ಯತ್ವದಿಂದ ಯಾವುದು ಪ್ರಯೋಜ್ಯ? ಎಂದರೆ, ಯಾವುದು ಭಾವಪದಾರ್ಥವಾಗಿದ್ದು ನಾಶ್ಯವೊ ಅದು ಹೆಚ್ಚಾಗಿ ಜನ್ಯವೇ ಆಗಿರುವುದರಿಂದ ಕೃತಕತ್ವವೇ ಪ್ರಯೋಜ್ಯ ಎಂದು ಉತ್ತರ.

**ಭಾವವಿಲಾಸಿನೀ–** ನನು ಬಾಧಪ್ರಮಯಾ ನಾಶ್ಯತ್ವ ಏವ ಬೋಧಿತೇऽರ್ಥಾನ್ನಾಸ್ತಿತ್ವಮಪಿ ತೇನೈವ ಸಿದ್ಧ್ಯತೀತ್ಯಾಶಂಕಾಂ ಪರಿಹರತಿ ।। **ನಾಶ್ಯತ್ವಾದಿತಿ** ।। ನಾಶ್ಯತ್ವಾಭಾವೇऽಪಿ ಶಶವಿಷಾಣಾದೌನಾಸ್ತಿತ್ವದರ್ಶನೇನ ನಾಶ್ಯತ್ವಂ ನಾಸ್ತಿತ್ವೇ ಪ್ರಯೋಜಕಂ ನ ಭವತೀತಿ ಭಾವಃ । ಕಿಂತರ್ಹಿ ನಾಶ್ಯತ್ವಪ್ರಯೋಜ್ಯಮಿತ್ಯತಸ್ತದ್ದರ್ಶಯತಿ ।। **ಭಾವತ್ವ ಇತಿ** ।। ೩೭೫ ।।

**ವಿವರಣೆ** - ಪ್ರಾಗಭಾವವು ನಾಶವಾಗುತ್ತದಾದರೂ ಕೃತಕವಲ್ಲ. ಅದಕ್ಕಾಗಿ ಭಾವತ್ವೇಸತಿ ಎಂದು ಸೇರಿಸಿದ್ದು, ಅನಾದಿಯಾದ ಪ್ರಕೃತಿಬಂಧವು ಭಾವನಾಶ್ಯವಾದರೂ ಜನ್ಯವಲ್ಲ. ಅದಕ್ಕಾಗಿ ತದ್ಭಿನ್ನತ್ವೇ ಸತಿ ಎಂಬ ಅರ್ಥದ ಪ್ರಾಯಃ ಎಂಬ ವಿಶೇಷಣವನ್ನು ಸೇರಿಸಿದ್ದು.

**ಅಥ ನಾಸ್ತಿತ್ವವಕ್ತ್ರೀ ಸಾ ನಾಸ್ತಿತ್ವೇನೈವ ನಾಶ್ಯತಾ ।**
**ಇತಿ ಪಕ್ಷೋ ಯದಿ ಭವೇದ್ ಗತಾऽಜ್ಞಾನಪ್ರನಾಡಿಕಾ ।। ೩೭೬ ।।**

**ಅರ್ಥ–** ಸಾ = ಆ ಬಾಧಬುದ್ಧಿಯು, ನಾಸ್ತಿತ್ವವಕ್ತ್ರೀ= ನಾಸ್ತಿತ್ವವನ್ನು ಉಲ್ಲೇಖಿಸುತ್ತದೆ, ನಾಸ್ತಿತ್ವೇನ ಏವ= ನಾಸ್ತಿತ್ವ ಸಿದ್ಧವಾದುದರಿಂದಲೇ, ನಾಶ್ಯತಾ= ನಾಶ್ಯತ್ವವೂ (ಸಿದ್ಧವಾಗುತ್ತದೆ), ಇತಿ ಪಕ್ಷಃ= ಈ ರೀತಿಯಾದ ಪಕ್ಷವು, ಯದಿ= ಒಂದು ವೇಳೆ, ಭವೇತ್= ಅಭಿಮತವಾದರೆ, ಅಜ್ಞಾನಪ್ರನಾಡಿಕಾ= ಅಜ್ಞಾನವಾದವೂ, ಗತಾ= ಹೋಯಿತು.

**ಅನುವಾದ** - ಭ್ರಮೆಯ ನಂತರ ಬರುವ ಬಾಧಜ್ಞಾನದಲ್ಲಿ 'ನಾಸ್ತಿತ್ವ'ವು ಉಲ್ಲೇಖಿತ ವಾಗಿರುತ್ತದೆ. ಜಗತ್ ನಾಸ್ತ್ಯೇವ ಎಂಬುದಾಗಿ, ನಾಸ್ತಿತ್ವದಿಂದಲೇ ಜಗತ್ತಿಗೆ ನಾಶ್ಯತ್ವವೂ ಸಿದ್ಧವಾಯಿತು ಎಂಬ ಪಕ್ಷವನ್ನು ಅಂಗೀಕರಿಸುವುದಾದರೆ, ನಿಮ್ಮ ಅಜ್ಞಾನವಾದವು, ಅದನ್ನು ಸಾಧಿಸುವ ಭಾಷ್ಯವು ಅಸಂಗತವೇ ಆಗುತ್ತದೆ.

**ಭಾವವಿಲಾಸಿನೀ–** ಪುನಃ ಶಂಕತೇ ॥ **ಅಥೇತಿ** ॥ ವಕ್ತ್ರೀ ಉಲ್ಲೇಖಿನೀತ್ಯರ್ಥಃ । ದೂಷಯತಿ ॥ **ಗತೇತಿ** ॥ ಅಜ್ಞಾನಪ್ರಿನಾಡಿಕಾ ಜ್ಞಾನಮಜ್ಞಾನಸ್ಯ ವಿನಾಶಕಮ್ । ತನ್ನಾಶೇ ಚ ಜಗನ್ನಾಶ ಇತಿ ಪ್ರನಾಡಿಕೇತ್ಯರ್ಥಃ । ಜ್ಞಾನಬೋಧಿತ ನಾಸ್ತಿತ್ವೇನೈವ ಸಾಕ್ಷಾಜ್ಜಗನ್ನಾಶಸ್ಯ ಸಿದ್ಧೇ- ರ್ಮಧ್ಯೇऽಜ್ಞಾನಕಲ್ಪನಾಯಾಂ ಬೀಜಾಭಾವಾತ್ । ಜಾನಮಜ್ಞಾನಸ್ಯೈವ ನಿವರ್ತಕಮಿತಿ ವ್ಯಾಪ್ತಿರ್ಹಿ ತದ್ಬೀಜಮ್ । ಜ್ಞಾನಸ್ಯ ಚಾಜ್ಞಾನಾನಿವರ್ತಕತ್ವೇ ನಾಸ್ತಿತ್ವಕಥನಮಾತ್ರೇಣ ಚರಿತಾರ್ಥತ್ವೇ ಚಾಜ್ಞಾನಕಲ್ಪನಾಯಾಂ ನ ಕಿಂಚಿತ್ ಬೀಜಮತೋ ಭಾಷ್ಯಮಸಂಗತ- ಮೇವಾಭೂದಿತಿ ಭಾವಃ ॥ ೩೭೬ ॥

**ವಿವರಣೆ** - ಜ್ಞಾನದಿಂದ ಅಜ್ಞಾನ ನಾಶವಾಗುತ್ತದೆ. ಅಜ್ಞಾನ ನಾಶವಾದಾಗ ಅಜ್ಞಾನದ ಕಾರ್ಯವಾದ ಈ ಜಗತ್ತೂ ನಾಶವಾಗುತ್ತದೆ ಎಂಬುದು ಅದ್ವೈತ ಸಿದ್ಧಾಂತ. ಈಗ ಬಾಧ ಬುದ್ಧಿಯಲ್ಲಿ ನಾಸ್ತಿತ್ವವು ಉಲ್ಲೇಖಿತವಾಗುತ್ತದೆ ಎಂದು ಒಪ್ಪಿ ಅದರಿಂದಲೇ ಜಗತ್ತಿನ ನಾಶವನ್ನೂ ಒಪ್ಪಿರುವುದರಿಂದ, ಮಧ್ಯದಲ್ಲಿ ಅಜ್ಞಾನವನ್ನು ಒಪ್ಪುವ ಅಗತ್ಯವಿಲ್ಲ. ಇದರ ಅಭಿಪ್ರಾಯ ಹೀಗಿದೆ - ಜ್ಞಾನದಿಂದಲೇ ಸಂಸಾರ ಬಿಡುಗಡೆ ಎಂದು ಅನೇಕ ಶ್ರುತಿಗಳು ಪಾಡುತ್ತಿವೆ. ಆದುದರಿಂದ ಈ ಜಗತ್ತು (ಸಂಸಾರ) ಅಜ್ಞಾನ ಕಲ್ಪಿತವಾದರೆ ಮಾತ್ರ ಜ್ಞಾನವು ಅಜ್ಞಾನಕ್ಕೆ ನಿವರ್ತಕ ಎಂಬ ನಿಯಮಕ್ಕನುಗುಣವಾಗಿ ಈ ಜಗತ್ತು ನಿವೃತ್ತಿಯಾಗುತ್ತದೆ ಎಂದು ಒಪ್ಪಬೇಕು. ಇದು ಜಗತ್ತು ಅಜ್ಞಾನಕಲ್ಪಿತ ಎಂದು ಒಪ್ಪುವುದಕ್ಕೆ ಪ್ರಬಲ ಕಾರಣ. ಈಗ ಜ್ಞಾನವು ಅಜ್ಞಾನಕ್ಕೆ ನಾಶಕವಾಗದಿದ್ದರೂ ಬಾಧ ಜ್ಞಾನದಲ್ಲಿ ನಾಸ್ತಿತ್ವ ತೋರುವ ಮಾತ್ರದಿಂದ ಜಗತ್ತು ನಾಶವಾಗುತ್ತದೆ ಎಂದು ಒಪ್ಪುವುದಾದರೆ ಜಗತ್ತು ಅಜ್ಞಾನಕಲ್ಪಿತ ಎಂದು ಸಾಧಿಸುವ ಅಗತ್ಯವಿಲ್ಲ. ಹೀಗಾಗಿ ಅಜ್ಞಾನ ಎಂಬ ಪದಾರ್ಥವೇ ಅನುಪಯುಕ್ತವಾದ ಕಾರಣ ಭಾಷ್ಯವು ಅಸಂಗತ ಎಂದು.

ನಿರ್ವಿಕಲ್ಪಕರೂಪಾ ಸಾ ನೋಭಯಂ ಚ ಪ್ರಬೋಧಯೇತ್ ॥ ೩೭೭ ॥

**ಅರ್ಥ**–ಸಾ= ಆ ಬಾಧಬುದ್ಧಿಯು, ನಿರ್ವಿಕಲ್ಪಕರೂಪಾ= ನಿರ್ವಿಕಲ್ಪಕ ರೂಪವಾದುದು, ಅತಃ= ಆದ್ದರಿಂದ, ಉಭಯಂ ಚ= ನಾಸ್ತಿತ್ವವನ್ನಾಗಲೀ ಅಥವಾ ನಾಶ್ಯತ್ವವನ್ನಾಗಲೀ ಎರಡನ್ನೂ, ನ ಪ್ರಬೋಧಯೇತ್= ತಿಳಿಸಿಕೊಡುವುದಿಲ್ಲ.

**ಅನುವಾದ** - ಬಾಧಬುದ್ಧಿಯು ನಿರ್ವಿಕಲ್ಪಕ ಎಂದರೆ ಆ ಜ್ಞಾನದಲ್ಲಿ ಯಾವುದೂ ಪ್ರಕಾರವಾಗಿ ತೋರುವುದಿಲ್ಲ. ಹೀಗಾಗಿ ನಾಸ್ತಿತ್ವ ನಾಶ್ಯತ್ವಗಳು ವಿಶೇಷಣವಾಗಿ ತೋರುವುದೆಂದು ಆದುದರಿಂದ ಬಾಧಬುದ್ಧಿಯೇ ಜಗತ್ತಿಗೆ ನಾಶಕ ಎಂದು ಹೇಳಲು ಬರುವುದಿಲ್ಲ. ಈ ಎರಡೂ ಪಕ್ಷಗಳು ಸಂಭಾವಿತವಾದುದರಿಂದ ವಿಕಲ್ಪ ಮಾಡಿ ನಿರಾಕರಣೆ ಮಾಡಿದ್ದಾರೆ ವಸ್ತುತಃ ಇದು ಅದ್ವೈತಿಗಳು ಒಪ್ಪುವ ಪಕ್ಷಗಳಲ್ಲ ಎಂದು ವ್ಯಾಖ್ಯಾನದಲ್ಲಿ ಅವತರಣಿಕೆ ನೀಡಲಾಗಿದೆ.

**ಭಾವವಿಲಾಸಿನೀ**–ಸಂಭಾವಿತತ್ವಾದಿದಮಾಶಂಕಿತಮ್ । ವಸ್ತುಗತ್ಯಾ ತನ್ಮತೇ ನೋಭಯಬೋಧಕತ್ವಂ ಚ ಘಟತ ಇತ್ಯಾಹ – **ನಿರ್ವಿಕಲ್ಪಕೇತಿ** ॥ ೩೭೭ ॥

**ವಿವರಣೆ** - ಸವಿಕಲ್ಪಕಜ್ಞಾನದಲ್ಲಿ ಗುಣ, ಜಾತಿ ಮೊದಲಾದವುಗಳು ವಿಶೇಷಣವಾಗಿ ತೋರುತ್ತವೆ. 'ರೂಪೀ ಘಟಃ, ಅಯಂ ಘಟಃ' ಮೊದಲಾದ ಕಡೆಗಳಲ್ಲಿ ರೂಪ, ಘಟತ್ವ ಇವುಗಳು ವಿಶೇಷಣಗಳಾಗಿವೆ. ಆದರೆ ನಿರ್ವಿಕಲ್ಪಕ ಜ್ಞಾನದಲ್ಲಿ ಪ್ರಕಾರವಾಗಲೀ ಪ್ರಕಾರ, ವಿಶೇಷ್ಯಗಳ ಸಂಬಂಧವಾಗಲೀ ತೋರದೆ, ಕೇವಲ ವಸ್ತು ಮಾತ್ರ ತೋರುತ್ತದೆ.

ದೀಪೇನೇವ ತಯಾ ನಾಶೇ ಸಾಕ್ಷಾನ್ನಾಶೇ ಗತಂ ಮತಮ್ ।
ಅಜ್ಞಾನದ್ವಾರತೋ ನಾಶೇ ಸ್ಯಾದನ್ಯೋನ್ಯಾಶ್ರಯಾದಿಕಮ್ ॥ ೩೭೮ ॥

**ಅರ್ಥ**–ತಥಾ= ಆ ಬಾಧ ಪ್ರಮೆಯಿಂದ, ದೀಪೇನ ಇವ= ದೀಪದಿಂದ ಹೇಗೋ ಹಾಗೆ, ನಾಶೇ= ಜಗತ್ತಿನ ನಾಶವನ್ನು ಒಪ್ಪುವುದಾದರೆ, ಸಾಕ್ಷಾತ್ ನಾಶೇ= ಸಾಕ್ಷಾತ್ತಾಗಿ ನಾಶ ಪಕ್ಷದಲ್ಲಿ, ಮತಂ= ನಿಮ್ಮ ಮತವು, ಗತಂ= ಹೋಯಿತು. ಅಜ್ಞಾನದ್ವಾರತಃ= ಅಜ್ಞಾನದ ಮೂಲಕ ನಾಶಪಕ್ಷದಲ್ಲಿ, ಅನ್ಯೋನ್ಯಾಶ್ರಾಯಾದಿಕಂ= ಅನ್ಯೋನ್ಯಾಶ್ರಯವೇ ಮೊದಲಾದ ದೋಷವು, ಸ್ಯಾತ್= ಬರುತ್ತದೆ.

**ಅನುವಾದ** - ದೀಪದಿಂದ ಕತ್ತಲು ಹೇಗೆ ನಾಶವಾಗುವುದೋ, ಹಾಗೆಯೇ ಬಾಧಜ್ಞಾನದಿಂದ ಜಗತ್ತಿನ ನಾಶ ಎಂದು ಹೇಳುವುದಾದರೆ, ನಾವು ವಿಕಲ್ಪ ಮಾಡುತ್ತೇವೆ. ಬಾಧ ಜ್ಞಾನವು ನೇರವಾಗಿ ಜಗತ್ತಿನ ನಾಶಕ್ಕೆ ಕಾರಣವೊ ಅಥವಾ ಅಜ್ಞಾನವನ್ನು ನಾಶಪಡಿಸಿ, ತನ್ಮೂಲಕ ಜಗನ್ನಾಶಕ್ಕೆ ಕಾರಣವೊ ಎಂದು. ನೇರವಾಗಿ ನಾಶಕ ಎಂಬ ಮೊದಲನೆ ಪಕ್ಷ ಸರಿಯಲ್ಲ. ಹೀಗಾದರೆ ಅಜ್ಞಾನವನ್ನು ಒಪ್ಪುವ ನಿಮ್ಮ ಮತ ಸರಿಯಲ್ಲ ಎಂದಾಗಬೇಕು. ಎರಡನೇ ಪಕ್ಷದಲ್ಲಿ ಅನ್ಯೋನ್ಯಾಶ್ರಯ ಮುಂತಾದ

ದೋಷ ಬರುತ್ತದೆ. ಬಾಧ ಜ್ಞಾನ ಬಂದ ಮೇಲೆ ಅಜ್ಞಾನ ನಾಶ. ಅಜ್ಞಾನ ನಾಶವಾದ ಮೇಲೆ ಬಾಧಜ್ಞಾನ. ಹೀಗೆ ಬಾಧ ಜ್ಞಾನಕ್ಕೆ ಅಜ್ಞಾನನಾಶ ಕಾರಣ. ಅಜ್ಞಾನನಾಶಕ್ಕೆ ಬಾಧಜ್ಞಾನ ಕಾರಣ. ಆದುದರಿಂದ ಅನ್ಯೋನ್ಯಾಶ್ರಯ.

**ಭಾವವಿಲಾಸಿನೀ–**ಪಕ್ಷಾಂತರಂ ಚಾಶಂಕ್ಯ ದೂಷಯತಿ ॥ **ದೀಪೇನೇವೇತಿ** ॥ ತಯಾ ಬಾಧಪ್ರಮಯಾ। ನಾಶೇ ಜಗನ್ನಾಶೇ । ದೂಷಯತಿ ॥ **ಸಾಕ್ಷಾದಿತಿ** ॥ ಜ್ಞಾನೇನೈವ ಸಾಕ್ಷಾತ್ ಜಗನ್ನಾಶ ಇತ್ಯರ್ಥಃ । ಮತಂ ಜ್ಞಾನಮಜ್ಞಾನಸ್ಯೈವ ನಿವರ್ತಕಮಿತಿ ಮತಮ್ । ಅನ್ಯೋನ್ಯಾಶ್ರಯಾದಿಕಮಿತ್ಯತ್ರಾದಿ ಪದೇನ ಬಂಧಸ್ಯೈವ ಸಾಕ್ಷಾತ್‌ಜ್ಞಾನ ನಿವರ್ತ್ಯತ್ವಮ್ ಅವಿದ್ಯಾಶಬ್ದಯೋಗ್ಯತ್ವಂ ಚ ಗೃಹ್ಯತೇ ॥ ೩೭೮ ॥

ನ ಹ್ಯಜ್ಞಾನೇ ಸತಿ ಜ್ಞಾನಂ ಮನೋವೃತ್ತ್ಯಾತ್ಮಕಂ ತವ ।
ಸಾಕ್ಷಿಜ್ಞಾನವದೇವಾಸ್ಯಾಪ್ಯವಿರೋಧಪ್ರಸಂಗತಃ ॥ ೩೭೯ ॥

ಜ್ಞಾನೇನೈವ ಚ ತನ್ನಾಶೇ ಸ್ಯಾದನ್ಯೋನ್ಯಾಶ್ರಯೋ ಧ್ರುವಮ್ ।
ಪರಸ್ಪರಾಲಿಂಗಿತಾಭ್ಯಾಂ ಕ್ಲೀಬಾಭ್ಯಾಂ ಕಿಂ ಫಲಂ ಭವೇತ್ ॥ ೩೮೦ ॥

**ಅರ್ಥ–** ಮನೋವೃತ್ತ್ಯಾತ್ಮಕಂ= ಅಂತಃಕರಣ ಪರಿಣಾಮ ರೂಪವಾದ, ಜ್ಞಾನಂ= ಬಾಧ ಪ್ರಮೆಯು, ಅಜ್ಞಾನೇ ಸತಿ= ಅಜ್ಞಾನವಿರುವಾಗ, ತವ= ನಿನ್ನ (ಮತದಲ್ಲಿ), ನ ಭವೇತ್ ಹಿ= ಇರಲಾರದಷ್ಟೇ, (ಒಂದು ವೇಳೆ ಅಜ್ಞಾನವಿರುವಾಗಲೂ ಬಾಧಜ್ಞಾನವನ್ನು ಒಪ್ಪುವುದಾದರೆ) ಅಸ್ಯ ಅಪಿ= ಅಂತಃಕರಣಪರಿಣಾಮರೂಪವಾದ ಬಾಧಜ್ಞಾನಕ್ಕೂ ಕೂಡ ಸಾಕ್ಷಿಜ್ಞಾನ ವದೇವ= ಸಾಕ್ಷಿ ಜ್ಞಾನದಂತೆ ಅವಿರೋಧ ಪ್ರಸಂಗತಃ= ಅಜ್ಞಾನದೊಟ್ಟಿಗೆ ವಿರೋಧವಿಲ್ಲ ಎಂದೊಪ್ಪಬೇಕಾಗುತ್ತದೆಯಾದುದರಿಂದ, ಜ್ಞಾನೇನ ಏವ= ಬಾಧಜ್ಞಾನ ದಿಂದಲೇ, ತನ್ನಾಶೇ= ಅಜ್ಞಾನ ನಾಶ ಎಂದೊಪ್ಪಿದರೆ, ಧ್ರುವಂ= ನಿಶ್ಚಯವಾಗಿಯೂ, ಅನ್ಯೋನ್ಯಾಶ್ರಯಃ = ಅನ್ಯೋನ್ಯಾಶ್ರಯ ದೋಷವು (ಬರುತ್ತದೆ) ಪರಸ್ಪರಾಲಿಂಗಿತಾಭ್ಯಾಂ= ಒಬ್ಬರನ್ನೊಬ್ಬರು ಅಪ್ಪಿಕೊಂಡ, ಕ್ಲೀಬಾಭ್ಯಾಂ= ನಪುಂಸಕರಿಂದ, ಕಿಂ ಫಲಂ= ಏನು ಪ್ರಯೋಜನವು, ಭವೇತ್= ಆದೀತು?

**ಅನುವಾದ** - ಈ ಎರಡು ಶ್ಲೋಕಗಳಲ್ಲಿ ಅನ್ಯೋನ್ಯಾಶ್ರಯದೋಷವನ್ನು ಸಮರ್ಥನೆ ಮಾಡಿದ್ದಾರೆ. ಅದ್ವೈತ ಸಿದ್ಧಾಂತದಲ್ಲಿ ಜ್ಞಾನ ಎರಡು ವಿಧ. ಒಂದು ಸಾಕ್ಷಿ ಜ್ಞಾನ. ಇದು ಅಜ್ಞಾನ ವಿರೋಧಿಯಲ್ಲ. ಮತ್ತೊಂದು ಅಂತಃಕರಣ ಪರಿಣಾಮ ರೂಪವಾದುದು. ಅಂದರೆ ವಸ್ತುವಿಗೂ ಕಣ್ಣು ಮೊದಲಾದ ಇಂದ್ರಿಯಗಳಿಗೂ ಸಂಬಂಧವಾದಾಗ, ಮನಸ್ಸು ಆಯಾಯಾ ವಸ್ತುವಿನಂತೆ ಪರಿಣಾಮ ಹೊಂದಿದಾಗ ಆಯಾ ವಸ್ತುವಿನ ಜ್ಞಾನ ಬರುತ್ತದೆ. ಇದು ಅಂತಃಕರಣ ಪರಿಣಾಮರೂಪವಾದ ಜ್ಞಾನ. ಇದೇ ಅಜ್ಞಾನಕ್ಕೆ ವಿರೋಧಿ ಎಂದರೆ ಈ ಮನೋವೃತ್ತಿ ಇರುವಾಗ

ಅಜ್ಞಾನವಿರಲು ಸಾಧ್ಯವಿಲ್ಲ, ಈಗ ಬಾಧಪ್ರಮೆಯು ಮನೋವೃತ್ತಿ ರೂಪಜ್ಞಾನವಾದುದರಿಂದ ಅಜ್ಞಾನವಿದ್ದಾಗ ಬರಲು ಸಾಧ್ಯವೇ ಇಲ್ಲ. ಒಂದು ವೇಳೆ ಬರುತ್ತದೆ ಎಂದು ಸ್ವೀಕರಿಸಿದರೆ ಸಾಕ್ಷಿಜ್ಞಾನದಂತೆ ಮನೋವೃತ್ತಿಯೂ ಅಜ್ಞಾನ ವಿರೋಧಿಯಲ್ಲ ಎಂದೇ ಒಪ್ಪಬೇಕಾದೀತು. ಹೀಗಾಗಿ ಮನೋವೃತ್ತಿಯಿಂದಲೇ ಅಜ್ಞಾನ ನಾಶ ಎಂದು ಒಪ್ಪುವ ನಿಮಗೆ ಅನ್ಯೋನ್ಯಾಶ್ರಯ ದೋಷ ಇದ್ದೇ ಇದೆ. ಇದನ್ನು ಒಂದು ಲೌಕಿಕ ದೃಷ್ಟಾಂತದಿಂದ ಇಲ್ಲಿ ಸಮರ್ಥನೆ ಮಾಡಿದ್ದಾರೆ. ಇಬ್ಬರು ನಪುಂಸಕರು, ಸುಖಪಡಲೂ ಅಸಮರ್ಥರು, ಪುತ್ರೋತ್ಪತ್ತಿಯಲ್ಲಿಯೂ ಅಸಮರ್ಥರು. ಇವರಿಬ್ಬರ ಆಲಿಂಗನದಿಂದ ಯಾವುದೇ ಪ್ರಯೋಜನವಿಲ್ಲ. ಆದರಂತೆ, ಮನೋವೃತ್ತಿ ಮತ್ತು ಅಜ್ಞಾನಗಳು ಪರಸ್ಪರ ವಿರೋಧಕ್ಕೆ ಅಸಮರ್ಥಗಳಾಗಿವೆ. ಇವುಗಳ ಮೇಲನದಿಂದ ಯಾವುದೇ ಪ್ರಯೋಜನವಿಲ್ಲ ಎಂದು ಭಾವ.

**ಭಾವವಿಲಾಸಿನೀ–** ಅನ್ಯೋನ್ಯಾಶ್ರಯಮುಪಪಾದಯತಿ ॥ ನಹೀತಿ ॥ ಅಸ್ಯ ಮನೋವೃತ್ತಿರೂಪಜ್ಞಾನಸ್ಯ ॥ ೩೭೯ ॥

ಅನ್ಯೋನ್ಯಾಶ್ರಯಸ್ಯ ದೋಷತ್ವಂ ಸಾಹಿತ್ಯಮುದ್ರಯೋಪಪಾದಯತಿ ॥ ಪರಸ್ಪರೇತಿ ॥ ಯಥಾ ಕ್ಲೀಬಯೋಃ ಸ್ತ್ರೀಪುರುಷಯೋರನ್ಯೋನ್ಯಾಲಿಂಗನೇ ನ ಕಿಂಚಿತ್‌ಫಲಮ್ । ತಥಾಽನ್ಯೋನ್ಯ-ಪೂರ್ವಭಾವಾಪೇಕ್ಷಿತಯಾಽಸಮರ್ಥಾಭ್ಯಾಂಅನ್ಯೋನ್ಯಾಶ್ರಯಗ್ರಸ್ತಪಕ್ಷಾಭ್ಯಾಂ ನ ಕಿಂಚಿತ್ ಸಾಧಯಿತುಂ ಶಕ್ಯಮಿತಿ ಭಾವಃ ॥ ೩೮೦ ॥

ಅರ್ಥಾನಪೇಕ್ಷಜನ್ಮಾ ಹಿ ದೀಪೋಽನ್ಯತ್ರಾಪಿ ಜಾಯತೇ ।
ಸಕರ್ಮಕಕ್ರಿಯಾ ಜ್ಞಾನಂ ನಾರ್ಥಸ್ಪರ್ಶಂ ವಿನಾ ಭವೇತ್ ॥ ೩೮೧ ॥

**ಅರ್ಥ–** ಅರ್ಥಾನಪೇಕ್ಷಜನ್ಮಾ= ಕತ್ತಲೆಯಲ್ಲಿರುವ ಮಡಕೆಯೇ ಮೊದಲಾದ ವಸ್ತುಗಳ ಅಪೇಕ್ಷೆ ಇಲ್ಲದೆ ಹುಟ್ಟುವ ದೀಪಃ= ದೀಪವು, ಅನ್ಯತ್ರಾಪಿ= ಬೇರೆ ಕಡೆ ಕತ್ತಲೆ ಇಲ್ಲದಿರುವಲ್ಲಿಯೂ, ಜಾಯತೇ ಹಿ= ಹುಟ್ಟುತ್ತದೆಯಷ್ಟೆ (ಆದರೆ) ಸಕರ್ಮಕ ಕ್ರಿಯಾಜ್ಞಾನಂ= ವಿಷಯೋಲ್ಲೇಖಿಯಾದ, ಮನಃಪರಿಣಾಮ ಕ್ರಿಯಾರೂಪವಾದ ಜ್ಞಾನವು ಅರ್ಥಸ್ಪರ್ಶಂ ವಿನಾ= ವಿಷಯ ಸನ್ನಿಕರ್ಷ (ಸಂಬಂಧ) ವಿಲ್ಲದೆ ನ ಭವೇತ್= ಹುಟ್ಟಲಾರದು.

**ಅನುವಾದ -** ದೀಪದ ದೃಷ್ಟಾಂತ ಸರಿಯಲ್ಲ ಎಂದು ಇಲ್ಲಿ ಪ್ರತಿವಾದಿಸಿದೆ. ಯಾವುದೇ ವಸ್ತುವಿನ ಅಪರೋಕ್ಷ ಜ್ಞಾನ ಬರಬೇಕು ಎಂದಾದರೆ, ಆ ವಸ್ತುವಿಗೆ ಯಾವುದೇ ಆವರಣ ಇರಬಾರದು. ಅಂತಹ ವಸ್ತುವಿಗೂ ಇಂದ್ರಿಯಕ್ಕೂ ಸನ್ನಿಕರ್ಷ (ಸಂಬಂಧ) ವಾಗಬೇಕು. ಆಗ ಆ ವಸ್ತುವಿನ ಪ್ರತ್ಯಕ್ಷ ಬರುತ್ತದೆ. ಅದ್ವೈತ ಸಿದ್ಧಾಂತದ ಪ್ರಕಾರ ಅಜ್ಞಾನವು ವಿಷಯಕ್ಕೆ ಆವರಕ, ಹೀಗಾಗಿ ಅನಾವೃತವಿಷಯ

ಸಂಪರ್ಕವಿಲ್ಲದಿರುವುದರಿಂದ ಪ್ರತ್ಯಕ್ಷವು ಬರಲು ಸಾಧ್ಯವಿಲ್ಲ. ಇದಕ್ಕಾಗಿ ಮೊದಲು ಆವರಣರೂಪವಾದ ಅಜ್ಞಾನದ ನಾಶವಾಗಬೇಕು. ಅಜ್ಞಾನಕ್ಕೂ ನಾಶಕವಾದುದು ಮನೋವೃತ್ತಿರೂಪವಾದ ಬಾಧಜ್ಞಾನವೆನ್ನುವುದಾದರೆ ಅನ್ಯೋನ್ಯಾಶ್ರಯ ಪರಿಹಾರವಾಗಲಾರದು. ಆದರೆ ದೃಷ್ಟಾಂತವಾದ ದೀಪದ ವಿಚಾರ ಹೀಗಲ್ಲ. ಕತ್ತಲೆಯಲ್ಲಿರುವ ವಸ್ತುಗಳನ್ನು ಅಪೇಕ್ಷಿಸದೇ ಕತ್ತಲೆ ಇರಲಿ ಇಲ್ಲದಿರಲಿ ಬೆಂಕಿಗೂ ಬತ್ತಿಗೂ ಸಂಪರ್ಕವಾದಾಗ ದೀಪ ಹುಟ್ಟುತ್ತದೆ. ನಂತರ ಕತ್ತಲೆಯನ್ನು ದೀಪ ನಾಶಪಡಿಸುತ್ತದೆ. ಇಲ್ಲಿ ಪರಸ್ಪರ ಅಪೇಕ್ಷೆ ಇಲ್ಲದಿರುವುದರಿಂದ ಅನ್ಯೋನ್ಯಾಶ್ರಯ ದೋಷವಿಲ್ಲ. ಆದುದರಿಂದ ದೃಷ್ಟಾಂತ ದಾರ್ಷ್ಟಾಂತಿಕಗಳಿಗೆ ಬಹಳ ವೈಷಮ್ಯವಿದೆ.

**ಭಾವವಿಲಾಸಿನೀ–** ತದಭಿಮತದೀಪದೃಷ್ಟಾಂತೇ ವೈಲಕ್ಷಣ್ಯಂ ದರ್ಶಯತಿ ॥ **ಅರ್ಥೇತಿ** ॥ ಅರ್ಥಶಬ್ದೇನಾಂಧಕಾರಾವೃತಘಟಾದಿಕಂ ಗೃಹ್ಯತೇ । ಅರ್ಥಸ್ಪರ್ಶಃ ವಿಷಯಸ್ಪರ್ಶಃ । ಅನಾವೃತ-ವಿಷಯಸನ್ನಿಕರ್ಷೇಣೈವ ತದಪರೋಕ್ಷಜ್ಞಾನಂ ನಾನ್ಯಥಾ । ಅತಃ ತತ್ರಾಪರಿಹಾರ್ಯೋಽ-ನ್ಯೋನ್ಯಾಶ್ರಯಃ । ದೀಪಸ್ತು ತಮಸ್ಯೇವಾಂಗಾರಾವಸ್ಥಿತಾನಲವರ್ತಿಕಾ ಸನ್ನಿಕರ್ಷಮಾತ್ರೇಣ ಜಾಯಾಮಾನೋ ನ ತನ್ನಿವೃತ್ತಿಮುಪೇಕ್ಷತೇ । ಸ್ವಜನ್ಮಾನಂತರಂ ಚಾನ್ಯೋನ್ಯಾಶ್ರಯ-ದೋಷಾಭಾವಾತ್ತಂ ನಾಶಯತಿ । ಅತೋ ದೃಷ್ಟಾಂತ ದಾರ್ಷ್ಟಾಂತಿಕಯೋರ್ಬಹುವೈಷಮ್ಯಮಿತಿ ಭಾವಃ ॥ ೩೮೧ ॥

ಆವೃತೇಽರ್ಥೇಽಪಿ ಚೇದ್ ಜ್ಞಾನಂ ನಾವಿತ್ತಿಸ್ತದ್ವಿರೋಧಿನೀ ।
ಅವಿರೋಧಿ ನ ತನ್ನಾಶ್ಯಂ ನ ಚೇದ್ ಬಂಧೋಽಪಿ ನಶ್ಯತು ॥ ೩೮೨ ॥

**ಅರ್ಥ–** ಅರ್ಥೇ= ವಸ್ತುವು, ಆವೃತೇ ಅಪಿ= ಅಜ್ಞಾನದಿಂದ ಆವರಿಸಲ್ಪಟ್ಟಿದ್ದರೂ, ಜ್ಞಾನಂ ಚೇತ್= ಜ್ಞಾನವು ಹುಟ್ಟುತ್ತದೆ ಎಂದಾದರೆ, ಅವಿತ್ತಿಃ= ಅಜ್ಞಾನವು ತದ್ವಿರೋಧಿನೀನ= ಜ್ಞಾನ ವಿರೋಧಿಯಾಗಲಾರದು. ಅವಿರೋಧಿ= ಜ್ಞಾನವಿರೋಧಿಯಲ್ಲದಿದ್ದರೆ, ನ ತನ್ನಾಶ್ಯಂ= ಅದು ಜ್ಞಾನನಾಶ್ಯವಾಗದು, ನ ಚೇತ್= ಜ್ಞಾನವಿರೋಧಿಯಲ್ಲದಿದ್ದರೂ, ಜ್ಞಾನದಿಂದ ನಾಶವಾಗುತ್ತದೆ ಎನ್ನುವುದಾದರೆ, ಬಂಧಃ ಅಪಿ= ಸಂಸಾರವೂ ಕೂಡ, ನಶ್ಯತು= ನಶಿಸಲಿ.

**ಅನುವಾದ -** ದೀಪ ಹೇಗೆ ಕತ್ತಲೆ ಇದ್ದಾಗಲೇ ಉತ್ಪತ್ತಿಯಾಗುತ್ತದೆಯೋ ಅದರಂತೆ ಅಜ್ಞಾನರೂಪವಾದ ಆವರಣವಿರುವಾಗಲೇ ಜ್ಞಾನವು ಹುಟ್ಟುತ್ತದೆ ಎಂದು ಹೇಳುವುದು ಸರಿಯಲ್ಲ. ಈ ಪಕ್ಷದಲ್ಲಿ ಲೋಕದಲ್ಲಿ ಕಾಣದೇ ಇದ್ದದ್ದನ್ನು ಕಲ್ಪನೆ ಮಾಡಬೇಕಾದೀತು ಎಂಬ 'ಅದೃಷ್ಟ ಕಲ್ಪನೆ' ಎಂಬ ದೋಷವಿದ್ದೇ ಇದೆ. ಮತ್ತೊಂದು ದೋಷವನ್ನು ಇಲ್ಲಿ ನಿರೂಪಿಸಿದ್ದಾರೆ. ಅಜ್ಞಾನವಿರುವಾಗಲೇ ಜ್ಞಾನದ ಉತ್ಪತ್ತಿಯನ್ನು ಒಪ್ಪಿದರೆ ಅಜ್ಞಾನವು ಜ್ಞಾನವಿರೋಧಿಯಾಗಲಾರದು. ಜ್ಞಾನ ವಿರೋಧಿಯಲ್ಲ ಎಂದಾದರೆ, ಅಜ್ಞಾನವು ಜ್ಞಾನದಿಂದ ನಾಶ ಹೊಂದುತ್ತದೆ ಎಂದು

ಹೇಳಲು ಬರುವುದಿಲ್ಲ. ಇಲ್ಲೊಂದು ದೃಷ್ಟಾಂತವನ್ನು ಭಾವವಿಲಾಸಿನಿಯಲ್ಲಿ ನೀಡಿದ್ದಾರೆ. ಗೂಬೆಗೆ ಕಾಗೆಯೊಂದಿಗೆ ವಿರೋಧವಿದೆ ವೈರವಿದೆ. ಆದುದರಿಂದ ಗೂಬೆಯನ್ನು ಕಾಗೆ ನಾಶಪಡಿಸುತ್ತದೆ. ಆದರೆ ಕಾಗೆ ಮತ್ತೊಂದು ಕಾಗೆಯನ್ನಲ್ಲ. ಆದುದರಿಂದ ಸಹಜ ವಿರೋಧವಿದ್ದರೆ ಮಾತ್ರ ನಾಶ್ಯನಾಶಕಭಾವವನ್ನು ಒಪ್ಪಬಹುದು. ಹಾಗಿಲ್ಲದಿದ್ದರೂ ಜ್ಞಾನವು ಅಜ್ಞಾನನಾಶಕ ಎಂದು ಒಪ್ಪುವುದಾದರೆ, ಸಂಸಾರಬಂಧನವೂ ಅಜ್ಞಾನದಂತೆ ಜ್ಞಾನದಿಂದಲೇ ನಾಶವಾಗಲಿ, ಅಜ್ಞಾನಕ್ಕೂ, ಸಂಸಾರಕ್ಕೂ ಯಾವುದೇ ವ್ಯತ್ಯಾಸವನ್ನು ಒಪ್ಪದಿರುವುದರಿಂದ ನೇರವಾಗಿ ಸಂಸಾರಬಂಧವು ಜ್ಞಾನದಿಂದಲೇ ನಾಶವಾಗುತ್ತದೆ ಎಂದು ಒಪ್ಪಲು ಬರುವುದರಿಂದ ಅಜ್ಞಾನಕಲ್ಪನೆಯು ನಿರಾಧಾರ.

**ಭಾವವಿಲಾಸಿನೀ–** ತರ್ಹಿ ಮಮಾಪ್ಯಾವರಣೇ ಸತ್ಯೇವ ಜ್ಞಾನೋದಯೋ ಭವತು ಕೋ ದೋಷ ಇತ್ಯತೋಽದೃಷ್ಟಕಲ್ಪನಾಖ್ಯದೋಷೇ ಸತ್ಯೇವ ದೋಷಾಂತರಮಾಹ – **ಆವೃತ ಇತಿ** ॥ ತದ್ವಿರೋಧಿನೀ ಜ್ಞಾನವಿರೋಧಿನೀ । ಜ್ಞಾನೋತ್ಪತ್ತಿ ಪ್ರತಿಬಂಧಕತ್ವಾಖ್ಯವಿರೋಧವತೀತ್ಯರ್ಥಃ । ಅವಿರೋಧಿ ಆವರಣಂ । ತನ್ನಾಶ್ಯಂ ಜ್ಞಾನನಾಶ್ಯಮ್ । ಉಲೂಕಸ್ಯೇವ ಕಾಕಸ್ಯ ಕಾಕಾಂತರ ನಾಶಕತ್ವಾದರ್ಶನಾದಿತಿಭಾವಃ । ನ ಚೇದ್ವಿರೋಧ್ಯೇವ ನಾಶಕಂ ನ ಚೇತ್ । ನಾಶ್ಯ-ನಾಶಕಭಾವಾತಿರಿಕ್ತಸಹಜವಿರೋಧಾಂತರಾಭಾವೇಽಪ್ಯೇಕಸ್ಮಾದೇಕಸ್ಯ ನಾಶೋ ಭವತಿ ಚೇದಿತ್ಯರ್ಥಃ । ಉತ್ತರಮಾಹ – **ಬಂಧ ಇತಿ** ॥ ಶ್ರುತಿಸೂತ್ರಯೋರ್ನಾಶ್ಯನಾಶಕಭಾವಸ್ಯ ಪ್ರಮಿತತ್ವಾತ್ ಜ್ಞಾನಾದೇವ ಬಂಧನಾಶೋ ಭವತ್ವಿತ್ಯರ್ಥಃ । ನಾಶ್ಯನಾಶಕಭಾವಾತಿರಿಕ್ತ- ವಿರೋಧಾಭಾವಸ್ಯ ಬಂಧ ಇವಾಜ್ಞಾನೇಽಪಿ ತ್ವಯಾ ಅಂಗೀಕಾರಾದಿತಿ ಭಾವಃ ॥ ೩೮೨ ॥

ತ್ರಿಕ್ಷಣಾಸ್ಥಾಯಿ ವಿಜ್ಞಾನೇ ವಿರಮ್ಯವ್ಯಾಪೃತಿಶ್ಚ ನ ॥ ೩೮೩ ॥

**ಅರ್ಥ–** ತ್ರಿಕ್ಷಣಾಸ್ಥಾಯಿ ವಿಜ್ಞಾನೇ= ಮೂರುಕ್ಷಣವಿರುವ ಜ್ಞಾನಕ್ಕೆ, ವಿರಮ್ಯವ್ಯಾಪೃತಿಶ್ಚ= ಬಿಟ್ಟು ಬಿಟ್ಟು ಕೆಲಸ ಮಾಡುವಿಕೆಯೂ, ನ= ಕೂಡುವುದಿಲ್ಲ.

**ಅನುವಾದ** - ಸಂಸಾರ ಬಂಧನವೂ ಜ್ಞಾನದಿಂದಲೇ ನಾಶವಾಗಬೇಕಾದೀತು ಎಂಬ ಆಕ್ಷೇಪಕ್ಕೆ ಹೌದು, ಹಾಗೆಯೇ ಒಪ್ಪುತ್ತೇವೆ. ಜ್ಞಾನವು, ಅಜ್ಞಾನ ಮತ್ತು ಸಂಸಾರ ಬಂಧನ ಎರಡನ್ನು ನಾಶಪಡಿಸುತ್ತದೆ ಎಂದು ಹೇಳುವುದು ಸರಿಯಲ್ಲ. ಜ್ಞಾನವು ಎರಡು ಕ್ಷಣ ಮಾತ್ರ ಇರುತ್ತದೆ. ಒಂದು ಹುಟ್ಟಿದ ಕ್ಷಣ. ಎರಡನೇ ಕ್ಷಣದಲ್ಲಿ ಅಜ್ಞಾನವನ್ನು ನಾಶಪಡಿಸುತ್ತದೆ, ಮೂರನೆಯದ್ದು ನಾಶಕ್ಷಣ. ಈಗ ನಾವು ವಿಕಲ್ಪ ಮಾಡುತ್ತೇವೆ. ಜ್ಞಾನವು ಅಜ್ಞಾನ ಮತ್ತು ಸಂಸಾರವನ್ನು ಎರಡನ್ನೂ ಒಟ್ಟಿಗೆ ನಾಶಪಡಿಸುತ್ತದೆಯೋ, ಅಥವಾ ಪ್ರತ್ಯೇಕವಾಗಿಯೋ ಎಂದು. ಮೊದಲನೆಯ ಪಕ್ಷದಲ್ಲಿ ಅಜ್ಞಾನವನ್ನು ಒಪ್ಪುವ ಅಗತ್ಯವೇ ಇಲ್ಲ. ಎರಡನೇ ಪಕ್ಷವೂ ಸರಿಯಲ್ಲ.

ಜ್ಞಾನವು ಎರಡೇ ಕ್ಷಣವಿರುತ್ತದೆ ಎಂದೊಪ್ಪಿರುವುದರಿಂದ ಎರಡನೇ ಕ್ಷಣದಲ್ಲಿ ಅಜ್ಞಾನವನ್ನು ನಾಶಪಡಿಸಿ ಮುಂದಿನ ಕ್ಷಣದಲ್ಲಿ ಜಗತ್ತನ್ನು ನಾಶಪಡಿಸುತ್ತದೆ ಎಂಬ ಈ ವಿರಮ್ಯವ್ಯಾಪಾರ ಸರಿಹೊಂದುವುದಿಲ್ಲ. ಆಗ ಜ್ಞಾನವೇ ಇರುವುದಿಲ್ಲ.

**ಭಾವವಿಲಾಸಿನೀ–** ಅಸ್ತು ತರ್ಹ್ಯುಭಯೋರಪಿ ನಿವರ್ತಕಂ ಜ್ಞಾನಮಿತಿ ಚೇನ್ನ । ಸಹೈವ ನಿವೃತ್ತೌ ಅಜ್ಞಾನಪ್ರನಾಡ್ಯಪಗಮಪ್ರಸಂಗಾತ್ । ಕ್ರಮಿಕನಿವೃತ್ತೌ ಚ ದೋಷಮಾಹ–ತ್ರಿಕ್ಷಣೇತಿ ॥೩೮೩॥

ಯದ್ಯುತ್ಪತ್ತೌ ವಿರೋಧೋ ನ ನಾಶ್ಯತ್ವೇನೈವ ಕೇವಲಮ್ ।
ವಿರೋಧ್ಯಜ್ಞಾನಮುಚ್ಯೇತ ಬಂಧ ಏವಾಸ್ತು ತಾದೃಶಃ ॥ ೩೮೪ ॥

**ಅರ್ಥ–** ಉತ್ಪತ್ತೌ= ಉತ್ಪತ್ತಿಯಲ್ಲಿ, ವಿರೋಧಃ= ವಿರೋಧವು, ನ= ಇಲ್ಲ, ಕೇವಲಂ= ನಾಶ್ಯತ್ವೇನೈವ= ಜ್ಞಾನದಿಂದ ನಾಶವಾಗುತ್ತದೆ ಎಂಬ ಕಾರಣದಿಂದಲೇ, ವಿರೋಧಿ= ಜ್ಞಾನ ವಿರೋಧಿ (ಎಂಬ ಕಾರಣದಿಂದ) ಅಜ್ಞಾನಂ= ಅಜ್ಞಾನ ಎಂದು, ಉಚ್ಯೇತ= ಹೇಳಲ್ಪಡುತ್ತದೆಯಾದರೆ, ಬಂಧ ಏವ= ಸಂಸಾರ ಬಂಧನವೇ, ತಾದೃಶಃ= ಜ್ಞಾನದಿಂದ ನಾಶವಾಗುತ್ತದೆ. ಆದುದರಿಂದ ವಿರೋಧಿ, ಹೀಗಾಗಿ ಅಜ್ಞಾನಪದವಾಚ್ಯ ಎಂದು ಅಸ್ತು= ಆಗಲಿ.

**ಅನುವಾದ -** 'ಅಜ್ಞಾನ' ವನ್ನು ಅಜ್ಞಾನ ಎಂಬ ಪದದಿಂದ ಕರೆಯುತ್ತೇವೆ ಹೊರತು ಬಂಧವನ್ನಲ್ಲ. ಆದುದರಿಂದ ಜ್ಞಾನ ಮತ್ತು ಅಜ್ಞಾನಗಳಿಗೆ ಅರ್ಥತಃ ವಿರೋಧವಿಲ್ಲ. ಅಂದರೆ ಅಜ್ಞಾನವು ಜ್ಞಾನದ ಹುಟ್ಟಿಗೆ ಪ್ರತಿಬಂಧಕವಲ್ಲ. ಆದರೂ ಶಬ್ದತಃ ವಿರೋಧ ಇರುವುದರಿಂದ ಜ್ಞಾನವು ಅಜ್ಞಾನಕ್ಕೆ ಮಾತ್ರ ನಾಶಕವಾಗುತ್ತದೆ ಹೊರತು ಸಂಸಾರ ಬಂಧಕ್ಕಲ್ಲ. ಜ್ಞಾನದಿಂದ ನಾಶವಾಗುತ್ತದೆ ಎಂಬ ಕಾರಣದಿಂದಲೇ ಅಜ್ಞಾನವನ್ನು 'ಅಜ್ಞಾನ' ಎಂಬ ಪದದಿಂದ ವ್ಯವಹರಿಸುವುದು ಎಂಬ ಆಕ್ಷೇಪ ಸರಿಯಲ್ಲ. ಹಾಗಾದರೆ, ಬಂಧವನ್ನು ಅಜ್ಞಾನ ಪದದಿಂದ ಕರೆಯಬಹುದು. ಬಂಧವೂ ಜ್ಞಾನದಿಂದ ನಾಶವಾಗುತ್ತದೆ ಎಂದು ಒಪ್ಪಿದಾಗ ಇದೂ ಕೂಡ ಜ್ಞಾನ ವಿರೋಧಿಆದುದರಿಂದ ಬಂಧವನ್ನು ಅಜ್ಞಾನ ಶಬ್ದದಿಂದ ಕರೆಯಿರಿ ಮಧ್ಯದಲ್ಲಿ ಅಜ್ಞಾನವನ್ನು ಒಪ್ಪುವ ಆವಶ್ಯಕತೆ ಏನಿದೆ ಎಂದು ಭಾವ!

**ಭಾವವಿಲಾಸಿನೀ–** ನನ್ವಜ್ಞಾನೇಽಜ್ಞಾನಪದವಾಚ್ಯತ್ವಮಸ್ತಿ ನ ಬಂಧೇ । ಅತೋಽರ್ಥತೋ ವಿರೋಧಾಭಾವೇಽಪಿ ಶಬ್ದಮಾತ್ರೇಣ ವಿರೋಧಾತ್ ತಯೋರೇವ ನಾಶ್ಯನಾಶಕಭಾವ ಇತಿ ಶಂಕಾಮನೂದ್ಯ ದೂಷಯತಿ ॥ ಯದೀತಿ ॥ ಉತ್ಪತ್ತೌ ವಿರೋಧಃ ಉತ್ಪತ್ತಿಪ್ರತಿಬಂಧಕತ್ವ- ಮಿತ್ಯರ್ಥಃ । ವಿರೋಧಿ ಅತ ಏವಾಜ್ಞಾನಮಜ್ಞಾನಪದವಾಚ್ಯಮಿತ್ಯರ್ಥಃ । ತಾದೃಶಃ ನಾಶ್ಯತ್ವೇನ ವಿರೋಧೀ । ತೇನೈವಾಜ್ಞಾನಪದವಾಚ್ಯಶ್ಚೇತ್ಯರ್ಥಃ ॥ ೩೮೪ ॥

**ಬಂಧೇಽಪಿ ಜ್ಞಾನನಾಶ್ಯತ್ವರೂಪಾ ಸ್ಯಾದ್ಧಿ ವಿರುದ್ಧತಾ ।**
**ಜ್ಞಾನನಾಶ್ಯತ್ವಮಾತ್ರೇಣಾಜ್ಞಾನತ್ವಂ ಚಾಸ್ಯ ಸಂಭವೇತ್ ॥ ೩೮೫ ॥**

**ಅರ್ಥ–** ಬಂಧೇ ಅಪಿ= ಬಂಧದಲ್ಲಿಯೂ ಕೂಡ, ಜ್ಞಾನ ನಾಶ್ಯತ್ವ ರೂಪಾ= ಜ್ಞಾನದಿಂದ ನಾಶವಾಗುವಿಕೆ ಎಂಬ, ವಿರುದ್ಧತಾ= ವಿರೋಧವು, ಸ್ಯಾತ್= ಇರುತ್ತದೆ, ಚ= ಮತ್ತು ಜ್ಞಾನ ನಾಶ್ಯತ್ವ ಮಾತ್ರೇಣ= ಜ್ಞಾನ ನಾಶ್ಯತ್ವ ಎಂಬ ಧರ್ಮವಿರುವ ಪ್ರಯುಕ್ತ, ಅಸ್ಯ= ಈ ಬಂಧಕ್ಕೆ, ಅಜ್ಞಾನತ್ವಂ= ಅಜ್ಞಾನ ಪದ ವಾಚ್ಯತ್ವವೂ, ಸಂಭವೇತ್= ಕೂಡುತ್ತದೆ.

**ಅನುವಾದ - ಅಜ್ಞಾನದಲ್ಲಿ 'ಜ್ಞಾನೋತ್ಪತ್ತಿ ಪ್ರತಿಬಂಧಕತ್ವ' ಎಂಬ ವಿರೋಧವನ್ನು ಒಪ್ಪದಿದ್ದರೂ ಜ್ಞಾನದಿಂದ ನಾಶವಾಗುವಿಕೆಯನ್ನು ಒಪ್ಪಿ, ಅದರಿಂದಲೇ 'ಅಜ್ಞಾನ' ಪದದ ವ್ಯವಹಾರವನ್ನು ಕೂಡಿಸುವುದಾದರೇ, ಬಂಧದಲ್ಲಿಯೂ ಕೂಡ ಜ್ಞಾನದಿಂದ ನಾಶವಾಗುವಿಕೆ ಎಂಬ ಧರ್ಮವಿದೆ. ಆದುದರಿಂದ ಬಂಧವೂ ಜ್ಞಾನ ವಿರೋಧಿ. ಆದುದರಿಂದ ಬಂಧವನ್ನೂ 'ಅಜ್ಞಾನ' ಎಂಬ ಶಬ್ದದಿಂದ ವ್ಯವಹರಿಸಬಹುದಷ್ಟೇ!!**

**ಭಾವವಿಲಾಸಿನೀ–** ತಾದೃಶತ್ವಮೇವ ವಿಶದಯತಿ ॥ **ಬಂಧ ಇತಿ** ॥ ಅಜ್ಞಾನತ್ವಮಜ್ಞಾನ ಪದವಾಚ್ಯತ್ವಮ್ ॥ ೩೮೫ ॥

**ಏವಂ ಚ ಭವತೋ ವ್ಯಾಪ್ತಿರಪ್ಯಾಸೀತ್ ಕಿಂಕರೀ ಮಮ ।**
**ಅತೋ ನಾಶ್ಯತ್ವತೋಽವಶ್ಯಂ ವಾಚ್ಯಾಽನ್ಯೈವ ವಿರುದ್ಧತಾ ॥ ೩೮೬ ॥**

**ಅರ್ಥ–** ಏವಂ ಚ= ಈ ರೀತಿಯಾಗಿ, ಭವತಃ= ನೀನು ಹೇಳಿದ, ವ್ಯಾಪ್ತಿಃ= ಜ್ಞಾನವು ಅಜ್ಞಾನಕ್ಕೆ ಮಾತ್ರ ನಿವರ್ತಕ ಎಂಬ ವ್ಯಾಪ್ತಿಯು, ಮಮ= ನನಗೆ, ಕಿಂಕರೀ= ಸೇವಕಿಯು (ನಮ್ಮ ಮತ ಸಾಧಕವು), ಆಸೀತ್= ಆಯಿತು, ಅತಃ= ಆದುದರಿಂದ, ಅವಶ್ಯಂ= ಅವಶ್ಯವಾಗಿ, ನಾಶ್ಯತ್ವತಃ= ನಾಶ್ಯತ್ವಕ್ಕಿಂತ, ಅನ್ಯೈವ= ಬೇರೆಯದೇ ಆದ, ವಿರುದ್ಧತಾ= ವಿರುದ್ಧತ್ವವು, ವಾಚ್ಯಾ= ಹೇಳಲ್ಪಡಬೇಕು.

**ಅನುವಾದ - ಜ್ಞಾನಂ ಅಜ್ಞಾನಸ್ಯೈವ ನಾಶಕಮ್ ಎಂದರೆ ಜ್ಞಾನವು ಅಜ್ಞಾನಕ್ಕೆ ಮಾತ್ರ ನಾಶಕ ಎಂದು ನಿಯಮ. ಹೀಗಾಗಿ ಸಂಸಾರರೂಪ ಬಂಧವು ಜ್ಞಾನದಿಂದ ನಾಶವಾಗುತ್ತದೆ ಎಂದು ಶ್ರುತಿ ಇರುವ ಪ್ರಯುಕ್ತ ಈ ಬಂಧ ಅಜ್ಞಾನ ಕಲ್ಪಿತ ಎಂಬುದು ನಿಮ್ಮ (ಅದ್ವೈತ) ಸಿದ್ಧಾಂತ. ಈಗ ಹಿಂದೆ ನಾವು ನಿರೂಪಿಸಿದಂತೆ ಬಂಧವೂ ಕೂಡ ಅಜ್ಞಾನರೂಪವೇ ಆದುದರಿಂದ ಜ್ಞಾನದಿಂದ ಸಾಕ್ಷಾತ್ತಾಗಿ ನಾಶವಾಗುತ್ತದೆ. ಹೀಗಾಗಿ ಜಗತ್ತನ್ನು ಅಜ್ಞಾನ ಕಲ್ಪಿತ ಎಂದು ಹೇಳುವ ಅಗತ್ಯವಿಲ್ಲದ ಕಾರಣ ನಿಮ್ಮ ವ್ಯಾಪ್ತಿಯು ನಮ್ಮ ಸಿದ್ಧಾಂತಕ್ಕೆ ಸಾಧಕವೇ ಆಗುತ್ತದೆ.**

ಆದುದರಿಂದ ನೀವು ಹೇಳಿದ ವ್ಯಾಪ್ತಿಯು ನಮ್ಮ ಸೇವಕ. ಆದುದರಿಂದ ವಿರುದ್ಧ ಎಂದರೆ ನಾಶ್ಯ ಎಂಬ ಅರ್ಥವನ್ನು ಹೇಳಲು ಬರುವುದಿಲ್ಲ. ನಾಶ್ಯತ್ವಕ್ಕಿಂತ ಬೇರೆಯೇ ಆದ ವಿರುದ್ಧತ್ವವನ್ನು ಪರಿಷ್ಕರಿಸುವುದು ಅನಿವಾರ್ಯವಾಗುತ್ತದೆ.

**ಭಾವವಿಲಾಸಿನೀ–** ವ್ಯಾಪ್ತಿಃ ಜ್ಞಾನವುಜ್ಞಾನಸ್ಯೈವ ನಿವರ್ತಕಮಿತಿ ವ್ಯಾಪ್ತಿಃ । ಕಿಂಕರೀ ಏತಾದೃಶಾಜ್ಞಾನತ್ವಸ್ಯ ಬಂಧೇಽಪಿ ಸಂಭವೇನ ಬಂಧಸ್ಯೈವ ಸಾಕ್ಷಾತ್ ಮದಭಿಮತಜ್ಞಾನನಾಶ್ಯತ್ವ ಸಾಧಿಕೇತ್ಯರ್ಥಃ ॥ ೩೮೬ ॥

ನ ಚೇದರ್ಥಕೃತೋ ರೋಧಃ ಶಬ್ದರೋಧೇನ ಕಿಂ ಫಲಮ್ ।
ನಹ್ಯಶ್ವಾನಶ್ವ ಶಬ್ದಾಭ್ಯಾಂ ವಿರೋಧೋಽಸ್ತಿ ಗವಾಶ್ವಯೋಃ ॥ ೩೮೭ ॥

**ಅರ್ಥ–** ಅರ್ಥಕೃತಃ= ಅರ್ಥದಿಂದ ಸಿದ್ಧವಾಗುವ, ರೋಧಃ= ವಿರೋಧವು, ನ ಚೇತ್= ಇಲ್ಲವಾದರೇ (ಕೇವಲ) ಶಬ್ದರೋಧೇನ= ಶಬ್ದಕೃತವಾದ ವಿರೋಧದಿಂದ, ಕಿಂ ಫಲಂ= ಏನು ಪ್ರಯೋಜನ, ಗವಾಶ್ವಯೋಃ= ಹಸು ಮತ್ತು ಕುದುರೆಗಳಿಗೆ, ಅಶ್ವಾನಶ್ವಶಬ್ದಾಭ್ಯಾಂ= ಅಶ್ವ-ಅನಶ್ವ ಎಂಬ ಶಬ್ದಮಾತ್ರದಿಂದ, ವಿರೋಧಃ= ವಿರೋಧವು, ನ ಹ್ಯಸ್ತಿ= ಇರುವುದಿಲ್ಲವಷ್ಟೆ.

**ಅನುವಾದ -** ಅಜ್ಞಾನವಿದ್ದಾಗಲೇ ಜ್ಞಾನವು ಉತ್ಪತ್ತಿಯಾಗಬಹುದು. ಅವುಗಳಿಗೆ ಉತ್ಪತ್ತಿಯಲ್ಲಿ ವಿರೋಧವಿಲ್ಲ. ಆದರೆ ಜ್ಞಾನವು ಅಜ್ಞಾನಕ್ಕೆ ನಾಶಕವಾದುದರಿಂದ ಅವುಗಳಿಗೆ ವಿರೋಧವನ್ನು ಹೇಳುವುದು ಎಂಬ ಪ್ರಕೃತ ಪೂರ್ವಪಕ್ಷಕ್ಕೆ ಹಾಗಾದರೆ, ಬಂಧವೂ ಕೂಡ ಜ್ಞಾನದಿಂದ ನಾಶವಾಗುವ ಪ್ರಯುಕ್ತ ಈ ಸಂಸಾರವನ್ನು ಅಜ್ಞಾನ ಎಂಬ ಶಬ್ದದಿಂದ ಕರೆಯಬೇಕಾದೀತು ಎಂದು ಉತ್ತರ. ಈ ಸಂದರ್ಭದಲ್ಲಿ ಅರ್ಥಕೃತವಾದ ವಿರೋಧವಿಲ್ಲದಿದ್ದರೆ, ಕೇವಲ ಶಬ್ದದಿಂದ ಸಿದ್ಧವಾಗುವ ವಿರೋಧದಿಂದ ಯಾವ ಪ್ರಯೋಜನವೂ ಇಲ್ಲ. ಏಕೆಂದರೆ, ಕುದುರೆಯನ್ನು ಅಶ್ವ ಎಂದು, ಹಸುವನ್ನು ಅನಶ್ವ (ಕುದುರೆಯಲ್ಲ) ಎಂದೂ ಕರೆಯುತ್ತೇವೆ. ಇಷ್ಟುಮಾತ್ರಕ್ಕೆ ಅವುಗಳಲ್ಲಿ ಯಾವುದೇ ವಿರೋಧವೂ ಇಲ್ಲ. ಆದುದರಿಂದ ಜ್ಞಾನ ಅಜ್ಞಾನಗಳಿಗೆ ವಿರೋಧವು ಸಿದ್ಧಿಸಲಾರದು.

**ಭಾವವಿಲಾಸಿನೀ–** ರೋಧಃ ವಿರೋಧಃ ॥೩೮೭॥

ನಞೋ ವಿರೋಧಾರ್ಥತ್ವೈವ ನಿರ್ಣೇಯಾ ಭಾವಯೋಃ ಕಥಮ್ ।
ನಾಶ್ಯತ್ವಮುಭಯೋಃ ಶ್ರೌತಂ ತದ್ಧಗ್ನಾಶ್ಯತ್ವಕರ್ಷಕಃ ॥ ೩೮೮ ॥

ಅನ್ಯಕೋಽಸ್ತಿ ವಿರೋಧಸ್ತೇ ಯದ್ವ್ಯುತ್ಪತ್ತಿಂ ರುಣದ್ಧಿ ನ ।
ಪ್ರಮಾಣಪಕ್ಷಪಾತಸ್ತು ಬಂಧ ಏವ ಪ್ರದೃಶ್ಯತೇ ॥ ೩೮೯ ॥

**ಅರ್ಥ–**ನಞಃ= ಅಜ್ಞಾನವೆಂಬಲ್ಲಿರುವ ನಞ್ ಪದಕ್ಕೆ, ವಿರೋಧಾರ್ಥತ್ವೈವ= ವಿರೋಧವೆಂಬ ಅರ್ಥವನ್ನೇ , ನಿರ್ಣೇಯಾ= ನಿರ್ಣಯಿಸಬೇಕು, ಭಾವಯೋಃ= ಭಾವರೂಪವಾದ ಅಜ್ಞಾನ ಮತ್ತು ಜ್ಞಾನಗಳಿಗೆ ಅಥವಾ ಬಂಧ ಮತ್ತು ಜ್ಞಾನಗಳಿಗೆ, ಕಥಂ= ಹೇಗೆ ವಿರೋಧವುಂಟಾಗುತ್ತದೆ, ನಾಶ್ಯತ್ವಂ= ನಾಶ್ಯತ್ವವೇ ವಿರೋಧವೆಂದು ಹೇಳಿದರೆ ಅದು, ಉಭಯೋಃ= ಅಜ್ಞಾನ ಮತ್ತು ಬಂಧ ಇವೆರಡರಲ್ಲಿಯೂ, ಶ್ರೌತಂ= ಶ್ರುತಿಯಿಂದ ಸಿದ್ಧವಾಗಿದೆ, ಯದಿ= ಒಂದು ಪಕ್ಷ, ಉತ್ಪತ್ತಿಂ= ಜ್ಞಾನೋತ್ಪತ್ತಿಯನ್ನು, ನ ರುಣದ್ಧಿ= ಅಜ್ಞಾನವು ಪ್ರತಿರೋಧಿಸದಿದ್ದರೆ, ತದ್ಗನಾಶ್ಯತ್ವಕರ್ಷಕಃ= ಬಂಧನಿಷ್ಠನಾಶ್ಯತ್ವವನ್ನು ವಿಘಟನೆ ಮಾಡುವಂತಹ, ಅನ್ಯಃ ವಿರೋಧಃ= ಬೇರೆ ವಿರೋಧವು, ತೇ= ನಿನಗೆ, ಕಃ ಅಸ್ತಿ= ಯಾವುದು ಇದೆ, ಪ್ರಮಾಣಪಕ್ಷಪಾತಸ್ತು= ನಾಶ್ಯನಾಶಕಭಾವರೂಪವಾದ ವಿರೋಧವನ್ನು ಪ್ರತಿಪಾದನೆ ಮಾಡುವ ಪ್ರಮಾಣ ಪಕ್ಷಪಾತವಾದರೂ, ಬಂಧ ಏವ= ಬಂಧದಲ್ಲಿಯೇ, ಪ್ರದೃಶ್ಯತೇ= ಕಾಣುತ್ತದೆ.

**ಅನುವಾದ -** ಅಜ್ಞಾನವೆಂಬಲ್ಲಿರುವ ನಞ್ ಪದಕ್ಕೆ ವಿರೋಧ ಎಂಬ ಅರ್ಥವನ್ನೇ ನಿರ್ಣಯಿಸಬೇಕು. ಜ್ಞಾನ ಮತ್ತು ಅಜ್ಞಾನ ಇವೆರಡು, ಹಾಗೆಯೇ ಜ್ಞಾನ ಮತ್ತು ಬಂಧ ಇವೆರಡು ಭಾವರೂಪವಾಗಿರುವುದರಿಂದ ಅವುಗಳಿಗೆ ಭಾವಾಭಾವರೂಪವಾದ ವಿರೋಧವನ್ನು ಹೇಳಲು ಸಾಧ್ಯವಿಲ್ಲ. ನಾಶ್ಯನಾಶಕಭಾವರೂಪವಾದ ವಿರೋಧವನ್ನು ಹೇಳುವುದಾದರೆ ಅದು ಅಜ್ಞಾನ ಮತ್ತು ಬಂಧ ಎರಡರಲ್ಲಿಯೂ ಶ್ರುತಿಯಿಂದ ಸಿದ್ಧವಾಗುತ್ತದೆ. ಅಜ್ಞಾನವು ಜ್ಞಾನೋತ್ಪತ್ತಿಯನ್ನು ಪ್ರತಿಬಂಧಿಸದಿದ್ದರೆ ಆಗ ಬಂಧನಿಷ್ಟನಾಶ್ಯತ್ವವನ್ನು ವಿಘಟನೆ ಮಾಡುವಂತಹ ಅಜ್ಞಾನವಿರೋಧವು ನಿನಗೆ ಯಾವುದಿದೆ? ನಾಶ್ಯನಾಶಕಭಾವವನ್ನು ಪ್ರತಿಪಾದಿಸುವ ಪ್ರಮಾಣದ ಪಕ್ಷಪಾತವಾದರೂ ಬಂಧದಲ್ಲಿಯೇ ತೋರುತ್ತದೆ.

**ಭಾವವಿಲಾಸಿನೀ–**ನನ್ವನಶ್ವ ಇತ್ಯತ್ರ ನಞೋಽನ್ಯಾರ್ಥತ್ವೈವ ನ ವಿರುದ್ಧಾರ್ಥತಾ । ಅಜ್ಞಾನಪದೇ ತು ನಞೋ ವಿರುದ್ಧಾರ್ಥಕತ್ವಮಿತಿ ಶಂಕಾಂ ಪರಿಹರತಿ ॥ ನಞ ಇತಿ ॥ ಭಾವಯೋಃ ಬಂಧಾಜ್ಞಾನಯೋಃ । ಏಕತ್ರ ವಿರುದ್ಧಾರ್ಥಕತ್ವಮ್ ಅನ್ಯತ್ರ ನೇತಿ ವಿವೇಕಕಾರಣಾಭಾವಾದಿತಿ ಭಾವಃ । ಉಭಯೋಃ ಅಜ್ಞಾನಬಂಧಯೋಃ । ತದ್ಗನಾಶ್ಯತ್ವಕರ್ಷಕಃ ಬಂಧೇ ಶ್ರುತಜ್ಞಾನನಾಶ್ಯತ್ವಕರ್ಷಕಃ । ಭಾವಾಭಾವತಯಾ ವಿರೋಧಃ ತವ ಭಾವರೂಪಾಜ್ಞಾನೇಽಪಿ ನ । ಮಮ ಬಂಧೇಽಪಿ ನ । ನಾಶ್ಯನಾಶಕಭಾವವಿರೋಧಸ್ತೂಭಯತ್ರಾಪಿ ಶ್ರೂಯತೇ । ನಾಶ್ಯನಾಶಕಭಾವಾತಿರಿಕ್ತೋ ನಾಶ್ಯತ್ವ ಪ್ರಯೋಜಕಃ ಉತ್ಪತ್ತಿ ಪ್ರತಿಬಂಧಕತ್ವರೂಪಃ ಅಪರೋ ವಿರೋಧೋ ನೋಚ್ಯತೇ ಚೇತ್ ಜ್ಞಾನನಾಶ್ಯತಾಮಾತ್ರೇಣ ಪ್ರವೃತ್ತಸ್ಯಾಜ್ಞಾನಪದಸ್ಯ ಭವದಜ್ಞಾನ ಇವ ಮಮ ಬಂಧೇಽಪಿ ಸಾಮ್ಯೇನ ಜ್ಞಾನಮಜ್ಞಾನಸ್ಯೈವ ನಿವರ್ತಕಮಿತಿ ಭವದ್ವ್ಯಾಪ್ತೈವ ಮದಭಿಲಷಿತಬಂಧಸ್ಯ ಸಾಕ್ಷಾತ್‌ಜ್ಞಾನ ನಿವರ್ತ್ಯತ್ವಸ್ಯಾಪಿ ಸಿದ್ಧಿಃಸ್ಯಾತ್ । ಅತೋಽಜ್ಞಾನಮೇವ ಜ್ಞಾನೇನ ನಿವರ್ತ್ಯತ ಇತಿ ವದತಾ

ಬಂಧವೈಲಕ್ಷಣ್ಯಾಯ ನಾಶ್ಯತ್ವಾತಿರಿಕ್ತಃ ಕೋऽಪಿ ಸ್ವಾಭಾವಿಕವಿರೋಧೋ ವಕ್ತವ್ಯಃ । ಸ ಚಾವರಣಮಜ್ಞಾನಂ ವದತಾ ಜ್ಞಾನೋತ್ಪತ್ತಿಪ್ರತಿಬಂಧಕತ್ವರೂಪ ಏವ ವಾಚ್ಯಃ । ತಥಾ ಚ ಕಥಂ ನಾನ್ಯೋನ್ಯಾಶ್ರಯ ಇತಿ ಭಾವಃ ॥ ೩೮೮-೩೮೯ ॥

**ವಿವರಣೆ** - ಅನಶ್ವ ಎಂಬಲ್ಲಿ ನಞ್ ಪದಕ್ಕೆ ಅನ್ಯ ಎಂಬ ಅರ್ಥ. ಅಜ್ಞಾನ ಪದದಲ್ಲಿ ನಞ್‌ಗೆ ವಿರುದ್ಧ ಎಂಬ ಅರ್ಥ ಎಂಬ ಶಂಕೆಯನ್ನು ಇಲ್ಲಿ ಪರಿಹರಿಸುತ್ತಾರೆ. ಜ್ಞಾನಾಜ್ಞಾನಿಗಳು ಜ್ಞಾನಬಂಧಗಳು ಎರಡೂ ಭಾವರೂಪವಾಗಿರುವುದರಿಂದ ಒಂದು ಕಡೆ ವಿರೋಧವಿದೆ. ಇನ್ನೊಂದು ಕಡೆ ವಿರೋಧವಿಲ್ಲ ಎಂದು ವ್ಯತ್ಯಾಸವನ್ನು ಮಾಡಲು ಯಾವ ಕಾರಣವೂ ಇಲ್ಲ. ಆದ್ದರಿಂದ ಅಜ್ಞಾನದಲ್ಲಿ ಜ್ಞಾನೋತ್ಪತ್ತಿ ಪ್ರತಿಬಂಧಕರೂಪವಾದ ವಿರೋಧವಿದೆ, ಬಂಧದಲ್ಲಿ ಇಲ್ಲ ಎಂದು ಹೇಳಿ ಈ ವಿರೋಧದಿಂದ ಬಂಧನಿಷ್ಠನಾಶ್ಯತ್ವವನ್ನು ಘಟನೆ ಮಾಡಬೇಕು. ಹಾಗೆ ಮಾಡದಿದ್ದರೆ ಕೇವಲ ನಾಶ್ಯತ್ವರೂಪವಿರೋಧವನ್ನೇ ಹೇಳಿದರೆ ಅಜ್ಞಾನ ಎಂಬ ಪದಕ್ಕೆ ಜ್ಞಾನನಾಶ್ಯ ಎಂದೇ ಅರ್ಥವಾಗುತ್ತದೆ. ಜ್ಞಾನನಾಶ್ಯವಾಗುವುದು ಅಜ್ಞಾನವು ಹೇಗಾಗುತ್ತದೋ ಅದರಂತೆ ಬಂಧವೂ ಆಗುತ್ತದೆ ಎಂದು ಶ್ರುತಿಸಿದ್ಧವಾಗಿದೆ. ಆದ್ದರಿಂದ ಬಂಧವು ಅಜ್ಞಾನಶಬ್ದವಾಚ್ಯವಾಗುತ್ತದೆ. ಆಗ ಜ್ಞಾನವು ಅಜ್ಞಾನಕ್ಕೆ ಮಾತ್ರ ನಿವರ್ತಕ ಎಂಬ ನಿನ್ನ ವ್ಯಾಪ್ತಿಯಿಂದ ನಮಗೆ ಯಾವ ತೊಂದರೆಯೂ ಇಲ್ಲ. ಏಕೆಂದರೆ ಅಜ್ಞಾನಶಬ್ದವು ಬಂಧವನ್ನು ಹೇಳುವುದರಿಂದ ಜ್ಞಾನವು ಬಂಧಕ್ಕೆ ನಿವರ್ತಕ ಎಂಬ ನಮ್ಮ ಅರ್ಥವೇ ಸಿದ್ಧವಾಯಿತು. ಆದ್ದರಿಂದ ಬಂಧದಲ್ಲಿ ಇಲ್ಲದಿರುವ ಜ್ಞಾನೋತ್ಪತ್ತಿ ಪ್ರತಿಬಂಧಕತ್ವರೂಪವಾದ ವಿರೋಧವನ್ನು ಅಜ್ಞಾನಕ್ಕೆ ಹೇಳಬೇಕು. ನಾಶ್ಯನಾಶಕಭಾವ ವಿರೋಧವಾದರೂ ಶ್ರುತಿಗಳಲ್ಲಿ ಅಜ್ಞಾನಕ್ಕಿಂತಲೂ ಹೆಚ್ಚಾಗಿ ಬಂಧಕ್ಕೇ ಕಂಡುಬರುತ್ತದೆ ಎಂದು ಅಭಿಪ್ರಾಯ.

ತಮಸೋ ದೀಪನಾಶ್ಯತ್ವಂ ದೀಪೋತ್ಪತ್ತ್ಯವಿರೋಧಿನಃ ।
ಪ್ರಮಾಣಸ್ಯ ಬಲೇನೈವ ನಿರ್ಣೇಯಂ ನಾನ್ಯತಃ ಕ್ವಚಿತ್ ॥ ೩೯೦ ॥

**ಅರ್ಥ**– ದೀಪೋತ್ಪತ್ತ್ಯವಿರೋಧಿನಃ= ದೀಪದ ಹುಟ್ಟಿಗೆ ವಿರೋಧಿಯಲ್ಲದ, ತಮಸಃ= ಕತ್ತಲೆಯ, ದೀಪನಾಶ್ಯತ್ವಂ= ದೀಪದಿಂದ ನಾಶವಾಗುವಿಕೆಯು, ಪ್ರಮಾಣಸ್ಯ= ಪ್ರಮಾಣದ, ಬಲೇನ ಏವ= ಸಾಮರ್ಥ್ಯದಿಂದಲೇ, ನಿರ್ಣೇಯಂ= ನಿರ್ಣಯಿಸಲ್ಪಡ ಬೇಕು. ಅನ್ಯತಃ ನ= ನಾಶ್ಯನಾಶಕಭಾವಕ್ಕಿಂತ ಹೊರತಾದ ಮತ್ತೊಂದು, ವಿರೋಧವಿದೆ ಎಂಬ ಕಾರಣದಿಂದ ಅಲ್ಲ.

**ಅನುವಾದ** - ಕತ್ತಲೆ - ದೀಪಗಳಿಗೆ ವಿರೋಧವಿಲ್ಲ. ಅಂದರೆ, ದೀಪದ ಹುಟ್ಟಿಗೆ ಕತ್ತಲೆ ಪ್ರತಿಬಂಧಕವಲ್ಲ. ಆದರೂ ಕತ್ತಲೆ ದೀಪದಿಂದ ನಾಶವಾಗುತ್ತದೆ. ನಾಶ್ಯ-ನಾಶಕ ಭಾವವನ್ನು ಒಪ್ಪುವುದಾದರೆ, ವಿರೋಧವನ್ನು ಒಪ್ಪಲೇಬೇಕು ಎನ್ನುವುದಾದರೆ ದೀಪ

- ಕತ್ತಲೆಗಳ ವಿಚಾರದಲ್ಲಿ ಹೇಗೆ ಎಂಬ ಪ್ರಶ್ನೆಗೆ ಈ ಶ್ಲೋಕದಲ್ಲಿ ಉತ್ತರ ನೀಡಲಾಗಿದೆ. ದೀಪದಿಂದ ಕತ್ತಲೆ ನಾಶವಾಗುವುದು ನಮ್ಮ ಅನುಭವಕ್ಕೆ ಬಂದಿದೆ. ಆದುದರಿಂದ ವಿರೋಧವನ್ನು ಕಲ್ಪಿಸಬೇಕು. ಅನುಭವರೂಪವಾದ ಪ್ರಮಾಣ ಬಲದಿಂದಲೇ ಈ ವಿಷಯ ಸಿದ್ಧವಾಗುತ್ತದೆ. ಅದಕ್ಕೋಸ್ಕರ ಆ ಸ್ಥಳದಲ್ಲಿ ನಾಶ್ಯನಾಶಕಭಾವಕ್ಕಿಂತ ಭಿನ್ನವಾದ ಮತ್ತೊಂದು ವಿರೋಧವನ್ನು ಒಪ್ಪುವ ಅಗತ್ಯವಿಲ್ಲ.

**ಭಾವವಿಲಾಸಿನೀ**–ಕಥಂ ತರ್ಹಿ ತಮಃ ಪ್ರಕಾಶಯೋರ್ನಾಶ್ಯನಾಶಕಭಾವ ಘಟಕ ವಿರೋಧಾಭಾವೇಽಪಿ ನಾಶ್ಯನಾಶಕಭಾವ ಇತ್ಯತ ಆಹ –ತಮಸ ಇತಿ ॥ ಅನ್ಯತಃ ನಾಶ್ಯನಾಶ್ಯಕ- ಭಾವಾತಿರಿಕ್ತವಿರೋಧಾತ್। ವಧ್ಯಘಾತಕಯೋಃ ಸಹಾನವಸ್ಥಾನಸ್ಯಾಪ್ಯಸಂಭವಾತ್ । ಗೋತ್ವಾಶ್ವತ್ವಯೋರಿವ ನಾಶ್ಯನಾಶಕಭಾವಾಘಟಕತ್ವಾಚ್ಚ ಪ್ರಮಾಣತ ಏವ ತಮಸಿ ಬಂಧ ಇವ ನಾಶ್ಯನಾಶಕಭಾವಕಲ್ಪನಮ್ । ಅತೋ ನ ತತ್ರಾನುಪಪತ್ತಿಃ ॥ ೩೯೦ ॥

**ವಿವರಣೆ** - ವಿರೋಧ ಮೂರು ವಿಧ. ಭಾವಾಭಾವರೂಪ ವಿರೋಧ, ಸಹ ಅನವಸ್ಥಾನ ಮತ್ತು, ನಾಶ್ಯನಾಶಕಭಾವರೂಪ ವಿರೋಧ ಎಂದು. ಕತ್ತಲೆ-ದೀಪಗಳು ಭಾವ-ಅಭಾವ ರೂಪಗಳಲ್ಲ. ನಾಶ್ಯನಾಶಕಗಳು ಒಂದೇ ಕಡೆ ಇದ್ದರೆ, ಮಾತ್ರ ನಾಶ್ಯ-ನಾಶಕಭಾವ ಕೂಡುತ್ತದೆ. ಆದುದರಿಂದ ಸಹ-ಅನವಸ್ಥಾನ ರೂಪ ವಿರೋಧವೂ ಇಲ್ಲ. ಗೋತ್ವ-ಅಶ್ವತ್ವಗಳಿಗೆ ಸಹಾನವಸ್ಥಾನರೂಪ ವಿರೋಧವಿದ್ದರೂ ಅದು ನಾಶ್ಯ-ನಾಶಕಭಾವಕ್ಕೆ ಪ್ರಯೋಜಕವಾಗಿಲ್ಲ. ಆದುದರಿಂದ ಪ್ರಮಾಣಬಲದಿಂದ ತಮಸ್ಸು ದೀಪದಿಂದ ನಾಶವಾಗುತ್ತದೆ ಎಂದು ಒಪ್ಪುವಂತೆ ಬಂಧವು ಜ್ಞಾನದಿಂದ ನಾಶವಾಗುವುದೆಂದು ಒಪ್ಪಬೇಕು.

ಪ್ರಮಾಣಮನ್ಯಥಾಕರ್ತುಂ ಯತ್ನೋಽಯಂ ಹಿ ಮಹಾಂಸ್ತವ ।
ಶ್ರುತ್ಯುಕ್ತ ಬಂಧಗಜ್ಞಾನನಾಶ್ಯತ್ವಸ್ಯಾಪಕೃಷ್ಟಯೇ ।
ನಾಶ್ಯತ್ವಾದಪರಃ ಕೋಽಪಿ ವಿರೋಧೋ ವಾಚ್ಯ ಏವ ತೇ ॥ ೩೯೧ ॥

**ಅರ್ಥ**– ಶ್ರುತ್ಯುಕ್ತಬಂಧಗಜ್ಞಾನನಾಶ್ಯತ್ವಸ್ಯ= ಶ್ರುತಿಯಲ್ಲಿ ಹೇಳಿದ 'ಬಂಧವು ಜ್ಞಾನದಿಂದ ನಾಶವಾಗುತ್ತದೆ' ಎಂಬ ಜ್ಞಾನದಿಂದ ನಾಶವಾಗುವಿಕೆಯ ಅಪಕೃಷ್ಟಯೇ= ಅಪಕರ್ಷ (ಬೇರೆ ರೀತಿಯಾಗಿ ಹೇಳುವಿಕೆ) ಕ್ಕೋಸ್ಕರ ಪ್ರಮಾಣಂ= ಪ್ರಮಾಣವನ್ನು, ಅನ್ಯಥಾಕರ್ತುಂ= ಬೇರೆ ರೀತಿಯಾಗಿ ವ್ಯಾಖ್ಯಾನಿಸಲು, ಅಯಂ= ಇದು, ತವ= ನಿನ್ನ ಮಹಾನ್, ಯತ್ನಃ ಹಿ= ದೊಡ್ಡ ಪ್ರಯತ್ನವಷ್ಟೇ (ಅತಃ= ಆದುದರಿಂದ) ತೇ= ನಿನ್ನ ಮತದಲ್ಲಿ, ನಾಶ್ಯತ್ವಾತ್= ನಾಶವಾಗುವಿಕೆಗಿಂತ, ಅಪರಃ= ಬೇರೆ, ವಿರೋಧಃ= ವಿರೋಧವು, ವಾಚ್ಯಃ ಏವ= ಹೇಳಲ್ಪಡಲೇಬೇಕು.

**ಅನುವಾದ** - ವೇದದಲ್ಲಿ 'ಬಂಧವು ಜ್ಞಾನದಿಂದ ನಾಶವಾಗುತ್ತದೆ' ಎಂದು ಹೇಳಲಾಗಿದೆ. ಪ್ರಮಾಣ ಸಿದ್ಧವಾದ ವಿಷಯದಲ್ಲಿ ಅದು ಹೇಗೆ ಎಂಬ ಪ್ರಶ್ನೆಗೆ ಅವಕಾಶವಿಲ್ಲ. ಹಾಗಿದ್ದರೂ, ನಿಮ್ಮ (ಅದ್ವೈತ) ಮತದಲ್ಲಿ ಬಂಧ ಅಜ್ಞಾನ ಕಲ್ಪಿತವಾದುದರಿಂದ ಜ್ಞಾನ-ಅಜ್ಞಾನಗಳಿಗೆ ನಾಶ್ಯ-ನಾಶಕಭಾವವಿರುವುದರಿಂದ, ಅಜ್ಞಾನ ನಶಿಸಿದಾಗ, ಅಜ್ಞಾನಕಲ್ಪಿತವಾದ ಬಂಧವೂ ನಾಶವಾಗುತ್ತದೆ ಎಂದು ಅಂಗೀಕರಿಸಲಾಗಿದೆ. ಹೀಗಾಗಿ ಪ್ರಮಾಣವನ್ನೇ (ವೇದ) ನಿಮ್ಮ ಸಿದ್ಧಾಂತಕ್ಕೆ ಅನುಗುಣವಾಗಿ ವ್ಯಾಖ್ಯಾನಿಸುವ ದೊಡ್ಡ ಪ್ರಯತ್ನವನ್ನು ಮಾಡಲಾಗಿದೆ. ಆದುದರಿಂದ ಶ್ರುತಿಯಲ್ಲಿ ಜ್ಞಾನದಿಂದ ಬಂಧವು ನಾಶವಾಗುತ್ತದೆ ಎಂದು ಸ್ಪಷ್ಟವಾಗಿ ಹೇಳಿದ್ದರೂ, ಬೇರೆ ರೀತಿಯಲ್ಲಿ ಕಲ್ಪನೆ ಮಾಡಿರುವ ಪ್ರಯುಕ್ತ ನಾಶಕ್ಕಿಂತ ಬೇರೆಯಾದ ವಿರೋಧವನ್ನು ನೀವು ಒಪ್ಪಲೇಬೇಕು. ಆದರೆ ನಾವು (ತತ್ವವಾದಿಗಳು) ಪ್ರಮಾಣ ಬಲದಿಂದ ನಾಶವನ್ನು ಅಂಗೀಕರಿಸುತ್ತೇವೆ. ಇದಕ್ಕೆ ಹೊರತಾದ ವಿರೋಧವನ್ನು ಒಪ್ಪುವ ಅಗತ್ಯವಿಲ್ಲ.

**ಭಾವವಿಲಾಸಿನೀ**– ತ್ವಂತು ನ ತಾದೃಶ ಇತ್ಯಾಹ – **ಪ್ರಮಾಣಮಿತಿ** ॥ ಶ್ರುತ್ಯುಕ್ತಂ ಯದ್ಬಂಧಗಂ ಜ್ಞಾನನಾಶ್ಯತ್ವಂ ತಸ್ಯಾಪಕೃಷ್ಟಯೋಽಪಕರ್ಷಣಾಯ । ವಿರೋಧಬಲೇನ ಶ್ರುತ್ಯುಕ್ತನಾಶ್ಯತ್ವಮನ್ಯಥೀ-ಕುರ್ವತಾ ನಾಶಾತಿರಿಕ್ತ ಏವ ಕಶ್ಚಿದ್ವಿರೋಧೋ ವಕ್ತವ್ಯ ಇತ್ಯರ್ಥಃ ॥ ೩೯೧ ॥

ತಸ್ಮಾದನ್ಯೋನ್ಯಾಶ್ರಯಾಖ್ಯದೋಷಾಭಾವಾದ್ ಯಥಾಶ್ರುತಂ ।
ಬಂಧಸ್ಯೈವೋಚಿತಂ ಜ್ಞಾನನಾಶ್ಯತ್ವಮಿತಿ ಮೇ ಮತಿಃ ॥ ೩೯೨ ॥

**ಅರ್ಥ**– ತಸ್ಮಾತ್= ಆದುದರಿಂದ, ಅನ್ಯೋನ್ಯಾಶ್ರಯಾಖ್ಯದೋಷಾಭಾವಾತ್= ಅನ್ಯೋನ್ಯಾಶ್ರಯ ಎಂಬ ದೋಷವಿಲ್ಲದಿರುವುದರಿಂದ, ಯಥಾಶ್ರುತಂ= ಶ್ರುತಿವಚನಕ್ಕೆ ಅನುಗುಣವಾಗಿ, ಬಂಧಸ್ಯ ಏವ= ಬಂಧಕ್ಕೇ, ಜ್ಞಾನನಾಶ್ಯತ್ವಂ= ಜ್ಞಾನದಿಂದ ನಾಶವಾಗುಪಿಕೆಯು, ಇತಿ= ಎಂದು, ಮೇ= ನನ್ನ, ಮತಿಃ= ಅಭಿಪ್ರಾಯವು.

**ಅನುವಾದ** - 'ತರತಿ ಶೋಕಮಾತ್ಮವಿತ್' ಮೊದಲಾದ ವೇದ ವಚನಗಳು ಬಂಧ ರೂಪವಾದ ಈ ಜಗತ್ತು ಪರಮಾತ್ಮಜ್ಞಾನದಿಂದ ನಾಶವಾಗುತ್ತದೆ ಎಂದು ಹೇಳುತ್ತಿವೆ. ಅದ್ವೈತ ಸಿದ್ಧಾಂತದಂತೆ ಈ ಶ್ರುತಿಯನ್ನು ಸರಿಹೊಂದಿಸಲು ಜಗತ್ತನ್ನು ಅಜ್ಞಾನ ಕಲ್ಪಿತ ಎಂದು ಅಂಗೀಕರಿಸಬೇಕು. ಆದರೆ, ಹೀಗೆ ಒಪ್ಪಿದರೆ ನಾವು ಪ್ರಸ್ತುತ ಪಡಿಸಿದಂತೆ ಅನ್ಯೋನ್ಯಾಶ್ರಯ ದೋಷ ಬಂದೇ ಬರುತ್ತದೆ. ಆದುದರಿಂದ ಯಾವ ಆಕ್ಷೇಪಕ್ಕೂ ಅವಕಾಶವಿಲ್ಲದಂತೆ, ವೇದ ವಚನದಂತೆ ಈ ಬಂಧನವು ಭಗವಂತನ ಜ್ಞಾನದಿಂದ ನಿವೃತ್ತವಾಗುತ್ತದೆ ಎಂದೇ ಸ್ವೀಕರಿಸೋಣ. ಹೀಗಾಗಿ ಅಜ್ಞಾನ ಕಲ್ಪಿತ ಎಂದು ಅಂಗೀಕರಿಸುವ ಅಗತ್ಯವಿಲ್ಲದ ಪ್ರಯುಕ್ತ ಜಗತ್ತು ಸತ್ಯ ಎಂದೆ ಸಿದ್ಧವಾಯಿತು. ಇದು ನಮ್ಮ ಅಭಿಪ್ರಾಯ.

**ಭಾವವಿಲಾಸಿನೀ–**ತಸ್ಮಾತ್ ಜ್ಞಾನಾತ್ ಅಜ್ಞಾನನಾಶಪಕ್ಷೇऽನ್ಯೋನ್ಯಾಶ್ರಯ ದೋಷಸ್ಯಾ ಪರಿಹಾರ್ಯತ್ವಾತ್ ॥ ೩೯೨ ॥

ನ ಚೇದ್ ಜ್ಞಾನವಿನಾಶ್ಯತ್ವಘಟಕಃ ಸೋऽನ್ಯ ಏವ ಯತ್ ।
ವಾಚ್ಯೋ ವಿರೋಧಸ್ತೇऽಜ್ಞಾನೇ ನೋ ಚೇತ್ ಬಂಧೋ ನ ಮುಂಚತಿ ॥೩೯೩॥

ಜ್ಞಾನೋತ್ಪತ್ತಿವಿರೋಧಿತ್ವಮೇವ ಸ ಸ್ಯಾನ್ನ ಚಾಪರಃ ।
ಜ್ಞಾನೇನೈವ ಚ ತನ್ನಾಶೇ ಸ್ಯಾದನ್ಯೋನ್ಯಾಶ್ರಯೋ ಧ್ರುವಮ್ ॥ ೩೯೪ ॥

**ಅರ್ಥ–** ನ ಚೇತ್= ಜ್ಞಾನದಿಂದ ಸಂಸಾರಬಂಧವೇ ನಾಶವಾಗುತ್ತದೆ ಎಂದು ಒಪ್ಪದಿದ್ದರೆ, ಯತ್= ಯಾವ ಕಾರಣದಿಂದ, ಅಜ್ಞಾನೇ= ಅಜ್ಞಾನದಲ್ಲಿ, ಜ್ಞಾನವಿನಾಶ್ಯತ್ವ ಘಟಕಃ= ಜ್ಞಾನದಿಂದ ನಾಶವಾಗುವಿಕೆಯನ್ನು ಕೂಡಿಸುವ, ವಿರೋಧಃ= ವಿರೋಧವು, ತೇ= ನಿನ್ನ (ಅದ್ವೈತ) ಮತದಲ್ಲಿ, ಅನ್ಯಃ ಏವ= ಬೇರೆಯೇ, ವಾಚ್ಯಃ= ಹೇಳಲ್ಪಡಬೇಕೋ. ನೋ ಚೇತ್= ಬೇರೆ ರೀತಿಯಾಗಿ ವಿರೋಧವನ್ನು ಹೇಳುವುದಿಲ್ಲ ಎಂದಾದರೆ, ಬಂಧಃ= ಸಂಸಾರಬಂಧನವು, ನ ಮುಂಚತಿ= ಅಜ್ಞಾನವೆನಿಸದೆ ಬಿಡುವುದಿಲ್ಲ, ಸ ಚ= ಆ ವಿರೋಧವಾದರೂ, ಜ್ಞಾನೋತ್ಪತ್ತಿ ವಿರೋಧಿತ್ವಮ್ ಏವ= ಜ್ಞಾನದ ಹುಟ್ಟಿಗೆ ಪ್ರತಿಬಂಧಕ ರೂಪವಾದದ್ದೇ (ಹೊರತು) ನ ಅಪರಃ= ಬೇರೆಯಲ್ಲ ಮತ್ತು, ಜ್ಞಾನೇನ ಏವ= ಜ್ಞಾನದಿಂದಲೇ, ತನ್ನಾಶೇ ಚ= ಆ ಅಜ್ಞಾನದ ನಾಶವನ್ನು ಒಪ್ಪಿದರೆ, ಅನ್ಯೋನ್ಯಾಶ್ರಯಃ= ಅನ್ಯೋನ್ಯಾಶ್ರಯ ದೋಷವು, ಧ್ರುವಂ ಸ್ಯಾತ್= ನಿಶ್ಚಯವಾಗಿಯೂ ಬರುತ್ತದೆ.

**ಅನುವಾದ -** ಜ್ಞಾನದಿಂದ ನೇರವಾಗಿ ಸಂಸಾರ ಬಂಧನವೇ ನಾಶವಾಗುತ್ತದೆ, ಎಂದು ಒಪ್ಪದೆ, ಅಜ್ಞಾನನಾಶವಾಗಿ, ಅಜ್ಞಾನವು ಕಲ್ಪಿತವಾದ ಬಂಧವು ನಿವೃತ್ತಿಯಾಗುತ್ತದೆ ಎಂದು ಒಪ್ಪುವವರು ಅಜ್ಞಾನದಲ್ಲಿ ಇರುವ ವಿರೋಧ ಎಂತಹದು ಎಂದು ವಿವರಿಸಬೇಕು. ಅದು ಕೇವಲ ನಾಶ್ಯನಾಶಕಭಾವರೂಪವಾದುದು ಅಲ್ಲ, ಏಕೆಂದರೆ ನಾಶ್ಯ-ನಾಶಕಭಾವವು ಜ್ಞಾನ ಬಂಧಗಳಿಗೂ ಇದೆ. ಇದಕ್ಕಿಂತ ಬೇರೆಯ ವಿರೋಧವೆಂದರೆ 'ಜ್ಞಾನದ ಹುಟ್ಟಿಗೆ ಪ್ರತಿಬಂಧಕವಾಗಿರುವಿಕೆ' ಇಂತಹ ವಿರೋಧವನ್ನು ಅಂಗೀಕರಿಸಬೇಕು. ಅಂಗೀಕರಿಸದಿದ್ದರೆ, ನಾಶ್ಯನಾಶಕಭಾವರೂಪ ವಿರೋಧವಿರುವ ಕಾರಣದಿಂದ ಬಂಧವು ಜ್ಞಾನ ವಿರೋಧಿಯಾಗಿ 'ಅಜ್ಞಾನ' ವೆನಿಸದೆ ಬಿಡದು. ಅಂಗೀಕರಿಸಿದರೆ, ಅಜ್ಞಾನವು ನಾಶವಾದ ಮೇಲೆ ಪ್ರತಿಬಂಧಕವಿಲ್ಲವಾದುದರಿಂದ ಜ್ಞಾನದ ಉತ್ಪತ್ತಿ, ಜ್ಞಾನದ ಉತ್ಪತ್ತಿಯಿಂದ ಅನಂತರ ಅಜ್ಞಾನ ನಾಶ. ಹೀಗೆ ಅನ್ಯೋನ್ಯಾಶ್ರಯ ದೋಷ ಬಂದೇ ಬರುತ್ತದೆ.

**ಭಾವವಿಲಾಸಿನೀ–** ನಚೇತ್ ಜ್ಞಾನೇನ ಬಂಧಸ್ಯೈವ ನಾಶೋ ನಚೇತ್ । ಪ್ರಾಗುಕ್ತಾ-ನ್ಯೋನ್ಯಾಶ್ರಯೋ ನ ಮುಂಚತೀತ್ಯಾಹ – **ಜ್ಞಾನೇತ್ಯಾದಿನಾ** ॥ ನೋ ಚೇತ್

ನಾಶ್ಯತ್ವಘಟಕವಿರೋಧಾಂತರಂ ನೋಚ್ಯತೇ ಚೇತ್ । ಬಂಧಃ ಸಂಸಾರ ಬಂಧಃ । ಸ ವಿರೋಧಃ॥೩೯೩-೯೪ ॥

ವೃತ್ತ್ಯುತ್ಪತ್ತಿ ವಿರೋಧಿತ್ವಮಜ್ಞಾನಸ್ಯಾಸ್ತಿ ತನ್ಮತೇ ।
ನ ಚೇತ್ ವಿರೋಧವಾರ್ತಾಯಾ ದದ್ಯಾತ್ಸೋಽಪಿ ಜಲಾಂಜಲಿಮ್ ॥ ೩೯೫ ॥

**ಅರ್ಥ–** ತನ್ಮತೇ= ಅದ್ವೈತ ಮತದಲ್ಲಿಯೂ ವಿವರಣಕಾರನ ಮತದಲ್ಲಿ, ಅಜ್ಞಾನಸ್ಯ= ಅಜ್ಞಾನಕ್ಕೆ ವೃತ್ತ್ಯುತ್ಪತ್ತಿ ವಿರೋಧಿತ್ವಮ್= ವೃತ್ತಿ ಜ್ಞಾನಕ್ಕೆ ವಿರೋಧಿಯಾಗಿರುವಿಕೆಯು, ಅಸ್ತಿ= ಇದೆ, ನ ಚೇತ್= ವೃತ್ತಿಜ್ಞಾನವಿರೋಧಿತ್ವವನ್ನು ಒಪ್ಪದಿದ್ದರೆ, ಸಃ ಅಪಿ= ವಿವರಣಕಾರನೂ ಕೂಡ, ವಿರೋಧವಾರ್ತಾಯಾಃ= ಜ್ಞಾನ-ಅಜ್ಞಾನಗಳಿಗೆ ವಿರೋಧವಿದೆ ಎಂಬ ವಿಷಯಕ್ಕೆ, ಜಲಾಂಜಲಿಂ= ಜಲತರ್ಪಣವನ್ನು, ದದ್ಯಾತ್= ಕೊಡಬೇಕಾದೀತು!

**ಅನುವಾದ -** ಅದ್ವೈತ ಸಿದ್ಧಾಂತದಲ್ಲಿ ಸಾಕ್ಷಿಜ್ಞಾನವು ಅಜ್ಞಾನಕ್ಕೆ ವಿರೋಧಿಯಲ್ಲ, ಅದು ವಿಷಯಾವಭಾಸ ರೂಪವಾದುದರಿಂದ ಅಜ್ಞಾನಕ್ಕೆ ಸ್ಫೋರಕ, ಎಂದು ಒಪ್ಪಿದ್ದಾರೆ. ಆದುದರಿಂದ ಅಜ್ಞಾನವು ಮನೋವೃತ್ತಿರೂಪವಾದ ಜ್ಞಾನಕ್ಕೆ ಪ್ರತಿಬಂಧಕ ಎಂದು ವಿವರಣಕಾರ ಒಪ್ಪಿದ್ದಾನೆ. ಈ ರೀತಿಯಾದ ವೃತ್ತಿ ಜ್ಞಾನೋತ್ಪತ್ತಿ ಪ್ರತಿಬಂಧಕತ್ವವನ್ನೂ ಒಪ್ಪದಿದ್ದರೆ, ಜ್ಞಾನ-ಅಜ್ಞಾನಗಳಿಗೆ ವಿರೋಧವಿದೆ ಎಂಬ ವಿಚಾರವನ್ನೇ ಅದ್ವೈತವಾದಿಗಳು ಬಿಡಬೇಕಾದೀತು.

**ಭಾವವಿಲಾಸಿನೀ–**ನ್ಯಾಯಸಂಚರಾರ್ಥಮೇವಾನ್ಯೋನ್ಯಾಶ್ರಯಸ್ಯೋಪಪಾದನಂ ಕೃತಮ್ । ವಸ್ತುಗತ್ಯಾ ಮಾಯಿಮತೇ ಜ್ಞಾನಸ್ಯ ವಿಷಯಾವಭಾಸಾತ್ಮನೋದಿತಸ್ಯ ಸ್ವಕಾರ್ಯೇ ಪ್ರತಿಬಂಧಪ್ರತೀಕ್ಷಯೋರಭಾವಾದಿತಿ ವಿವರಣೇ ಸ್ವರೂಪಜ್ಞಾನಸ್ಯ ತತ್ ಕಾರ್ಯಸ್ಯ ಚ ನಿತ್ಯತಯಾ ಸ್ವರೂಪಜ್ಞಾನಕಾರ್ಯೇ ವಿಷಯಾವಭಾಸೇಽವಿದ್ಯಾಖ್ಯ ಪ್ರತಿಬಂಧಸ್ಯ ಕಾರಣಪ್ರತೀಕ್ಷಾಯಾಶ್ಚ ನಿಷೇಧೇನ ಸ್ವರೂಪಜ್ಞಾನೇ ತತ್ಕಾರ್ಯೇ ಚಾವರಣತ್ವಸ್ಯ ದುರ್ವಚತ್ವಾತ್ ಸ್ವರೂಪಜ್ಞಾನಾವಿರೋಧಿತ್ವೇನಾಂಗೀಕೃತೇ ಸಾಕ್ಷಿಪ್ರತ್ಯಕ್ಷವೇದ್ಯೇ ಭಾವರೂಪಾಜ್ಞಾನೇ ಮನೋವೃತ್ತಿರೂಪಸಾಕ್ಷಾತ್ಕಾರೋತ್ಪತ್ತಿಪ್ರತಿಬಂಧಕತ್ವೇ ನೈವಾವರಣತ್ವಮಭಿಮತಮ್ । ಅತಸ್ತದ್ರೀತ್ಯೈವಾಯಮನ್ಯೋನ್ಯಾಶ್ರಯಃ ಸುಸ್ಥೋನ ಪೃಥಗುಪಪಾದನೀಯ ಇತ್ಯಾಹ – ವೃತ್ತ್ಯುತ್ಪತ್ತೀತಿ ॥ ನಚೇತ್ ವೃತ್ತ್ಯುತ್ಪತ್ತಿವಿರೋಧಿತ್ವಂ ನಚೇತ್ । ವಿರೋಧವಾರ್ತಾಯಾಃ ಜ್ಞಾನಾಜ್ಞಾನವಿರೋಧವಾರ್ತಾಯಾಃ । ಸಃ ಮಾಯಾವಾದೀ । ಸ್ವರೂಪಜ್ಞಾನಾ-ವಿರೋಧಿನ್ಯಜ್ಞಾನೇ ವೃತ್ತ್ಯುತ್ಪತ್ತಿವಿರೋಧಿತ್ವಸ್ಯಾಪ್ಯಭಾವೇ ಆವರಣತ್ವರೂಪಂ ಜ್ಞಾನವಿರೋಧಿತ್ವಮೇವ ನ ಸ್ಯಾದಿತಿ ಭಾವಃ । ಉಪಲಕ್ಷಣಂ ಚೈತತ್ । ಅಜ್ಞಾನಸ್ಯ ವೃತ್ತ್ಯುತ್ಪತ್ತ್ಯವಿರೋಧಿತ್ವೇಽಪ್ರತಿಬದ್ಧಮನಸಾ ಸರ್ವೇಷಾಮಪಿ ಯಥಾವಸ್ಥಿತಾತ್ಮಸ್ವರೂಪಸಾಕ್ಷಾತ್ಕಾರಸಂಭವೇನ ಬ್ರಹ್ಮಣಿ ವಾದಿವಿವಾದಾಭಾವ ಪ್ರಸಂಗಾತ್ । ಇದಾನೀಮಪ್ಯನವಚ್ಛಿನ್ನಾನಂದಾನುಭವ ಪ್ರಸಂಗಾಚ್ಚೇತ್ಯಪಿ ದ್ರಷ್ಟವ್ಯಮ್ ॥ ೩೯೫ ॥

**ವಿವರಣೆ -** ಅಜ್ಞಾನವನ್ನು ಅದ್ವೈತಿಗಳು ಸ್ವರೂಪಜ್ಞಾನಕ್ಕೆ ಪ್ರತಿಬಂಧಕವೆಂದು ಒಪ್ಪಿಲ್ಲ. ಅವರು ಅಜ್ಞಾನವನ್ನು ಮನೋವೃತ್ತಿಗೂ ಪ್ರತಿಬಂಧಕ ಎಂದು ಒಪ್ಪದಿದ್ದರೆ, ಮನಸ್ಸಿಗೆ ಯಾವುದೇ ಪ್ರತಿಬಂಧಕವಿಲ್ಲದ ಪ್ರಯುಕ್ತ ಎಲ್ಲರಿಗೂ ಸರ್ವಕಾಲದಲ್ಲಿಯೂ ಆತ್ಮಸ್ವರೂಪದ ಸಾಕ್ಷಾತ್ಕಾರವಾಗಬೇಕು. ಹೀಗಾಗಿ ಆತ್ಮಸ್ವರೂಪ ವಿಚಾರದಲ್ಲಿ ಯಾರಿಗೂ ಸಂಶಯವೇ ಇರಲಾರದು ಮತ್ತು ಆತ್ಮಸ್ವರೂಪವು ಆನಂದಾನುಭವ ರೂಪವಾದುದರಿಂದ ಸಂಸಾರಾವಸ್ಥೆಯಲ್ಲಿಯೂ ಕೂಡ ಆನಂದಾನುಭವ ಯಾವಾಗಲೂ ಆಗುತ್ತಿರಬೇಕಾದೀತು. ಆದುದರಿಂದ ಅಜ್ಞಾನವನ್ನು ವೃತ್ತಿಜ್ಞಾನ ವಿರೋಧಿ ಎಂದು ಒಪ್ಪಲೇಬೇಕು ಎಂದು ಅಭಿಪ್ರಾಯ.

ಅವಿರೋಧಿ ಕಿಲಾಜ್ಞಾನಂ ಸ್ವರೂಪಜ್ಞಾನಸಂಪದಃ ।
ಅಜ್ಞಾನೇ ಸತ್ಯಪಿ ಜ್ಞಾನಮತಶ್ಚಿದ್ರೂಪಮೇವ ಹಿ ॥ ೩೯೬ ॥

**ಅರ್ಥ–** ಸ್ವರೂಪ ಜ್ಞಾನಸಂಪದಃ (ಸಾಕ್ಷಿ) ಆತ್ಮಸ್ವರೂಪ ಜ್ಞಾನ ಸಂಪತ್ತಿಗೆ, ಅಜ್ಞಾನಂ= ಅಜ್ಞಾನವು, ಅವಿರೋಧಿ ಕಿಲ= ವಿರೋಧಿಯಲ್ಲವಂತೆ! ಇದು ಎಂಥ ವಿಪರ್ಯಾಸ, ಅತಃ= ವಿರೋಧಿಯಲ್ಲದ ಪ್ರಯಕ್ತ, ಅಜ್ಞಾನೇ ಸತ್ಯಪಿ= ಅಜ್ಞಾನವಿದ್ದಾಗಲೂ ಕೂಡ, ಚಿದ್ರೂಪಂ ಜ್ಞಾನಂ= ಅಹಂ ಎಂಬ ಆತ್ಮಜ್ಞಾನವು (ಸ್ಯಾತ್) ಏವ ಹಿ= ಉಂಟಾಗುತ್ತದೆ ಎನ್ನುತ್ತಾರೆ.

**ಅನುವಾದ -** ಆತ್ಮಸ್ವರೂಪ ಜ್ಞಾನಕ್ಕೂ, ಅಜ್ಞಾನಕ್ಕೂ ಯಾವುದೇ ವಿರೋಧವಿಲ್ಲ ಎಂದು ಅದ್ವೈತಮತ. ಆದುದರಿಂದ ಅಜ್ಞಾನವಿದ್ದಾಗಲೂ 'ಅಹಂ' ಎಂಬ ಆತ್ಮಜ್ಞಾನ ಬರುತ್ತದೆ ಎನ್ನುತ್ತಾರೆ. ಹೀಗಾಗಿ ಅಜ್ಞಾನನಾಶಕವಾಗದ ಜ್ಞಾನ ಜ್ಞಾನವೆನಿಸುವುದೇ ಅಸಂಗತ.

**ಭಾವವಿಲಾಸಿನೀ– ಅತಃ ಅವಿರೋಧಿತ್ವಾತ್ । ಚಿದ್ರೂಪಂ ಅಹಮಿತ್ಯಾದಿ ಜ್ಞಾನಮ್ ॥೩೯೬॥**

ಮನೋವೃತ್ತಿಸ್ತು ನಾಜ್ಞಾನೇ ಸತಿ ಸ್ಯಾತ್ ತದ್ವಿರೋಧಿನೀ ।
ತಟಸ್ಥಶಂಕೋಚ್ಛೇದಾಯ ಚರ್ಚಾ ಚೇಯಂ ಕೃತಾ ಮಯಾ ॥ ೩೯೭ ॥

**ಅರ್ಥ–** ಅಜ್ಞಾನೇ ಸತಿ= ಅಜ್ಞಾನವಿದ್ದಾಗ ತದ್ವಿರೋಧಿನೀ= ಅಜ್ಞಾನಕ್ಕೆ ವಿರೋಧಿಯಾದ, ಮನೋವೃತ್ತಿಃ ತು= ಮನಃ ಪರಿಣಾಮರೂಪವಾದ ಜ್ಞಾನವು, ನ (ಸ್ಯಾತ್) ಉಂಟಾಗಲಾರದು. ಇಯಂ= ಈ ಚರ್ಚಾ ಹಿಂದೆ ನಿರೂಪಿಸಿದ ಅನ್ಯೋನ್ಯಾಶ್ರಯ ಚರ್ಚೆಯು, ತಟಸ್ಥಶಂಕೋಚ್ಛೇದಾಯ= ತಟಸ್ಥರ ಸಂಶಯಪರಿಹಾರಕ್ಕಾಗಿ, ಮಯಾ= ನನ್ನಿಂದ, ಕೃತಾ= ಮಾಡಲ್ಪಟ್ಟಿತು.

**ಅನುವಾದ -** ಅಜ್ಞಾನಕ್ಕೂ ಮನೋವೃತ್ತಿಗೂ ವಿರೋಧವಿರುವುದರಿಂದ ಅಜ್ಞಾನವಿದ್ದಾಗ ಮನಃ ಪರಿಣಾಮ ರೂಪವಾದ ಜ್ಞಾನವು ಹುಟ್ಟಲು ಸಾಧ್ಯವಿಲ್ಲ. ಹೀಗೆ

ಅನ್ಯೋನ್ಯಾಶ್ರಯದೋಷವು ಬರುತ್ತದೆ. ಈ ಚರ್ಚೆ ತತ್ವವಾದ ಮಾಯಾ-ವಾದಗಳಲ್ಲಿ ಆಗ್ರಹವಿಲ್ಲದೇ ತಟಸ್ಥರಾಗಿರುವವರಿಗೆ ಬರುವ ಸಂಶಯದ ಪರಿಹಾರಕ್ಕಾಗಿ ನಡೆದಿದೆ.

**ಭಾವವಿಲಾಸಿನೀ–** ತದ್ವಿರೋಧಿನೀ । ಅಜ್ಞಾನವಿರೋಧಿನೀ । ಇಯಂ ಚರ್ಚಾ ಪ್ರಾಚೀನ ಗ್ರಂಥಸಂದರ್ಭೇಣ ಕೃತಾऽನ್ಯೋನ್ಯಾಯಾಶ್ರಯಚರ್ಚಾ ॥ ೩೯೭ ॥

**ಕಿಂಚ ಜ್ಞಾನೇನ ನಾಶ್ಯತ್ವಮನ್ಯತ್ರಾಶಾಸ್ಯತಾಂ ತ್ವಯಾ ।**
**ಯದ್‌ಜ್ಞಾನೇನ ಜ್ಞಾನನಾಶಮಾಶಾಸ್ತೇ ಹಾಸ್ಯಮೇವ ತತ್ ॥ ೩೯೮ ॥**

**ಅರ್ಥ–** ಕಿಂಚ= ಮತ್ತು, ಅನ್ಯತ್ರ= ಬೇರೆ ಕಡೆ, ಜ್ಞಾನೇನ= ಜ್ಞಾನದಿಂದ, ನಾಶ್ಯತ್ವಮ್= ನಾಶವಾಗುವಿಕೆಯು, ತ್ವಯಾ= ನಿನ್ನಿಂದ, ಆಶಾಸ್ಯತಾಂ= ಅಂಗೀಕರಿಸಲ್ಪಡಲಿ, ಯತ್= ಯಾವ, ಜ್ಞಾನೇನ= ಜ್ಞಾನದಿಂದ, ಜ್ಞಾನನಾಶಂ= ಜ್ಞಾನದ ನಾಶವನ್ನು, ಆಶಾಸ್ತೇ= ಅಂಗೀಕಾರ ಮಾಡುತ್ತಿಯೋ, ತತ್= ಅದು, ಹಾಸ್ಯಂ ಏವ= ಹಾಸ್ಯಾಸ್ಪದವಾದುದೇ (ಆಗಿದೆ).

**ಅನುವಾದ** - ಚರಮಮನೋವೃತ್ತಿ ಅಂದರೆ ಸಂಸಾರಬಂಧನಕ್ಕೆ ನಾಶಕವಾದ ಮನಃಪರಿಣಾಮರೂಪವಾದ ಜ್ಞಾನ. ಇದರಿಂದ ಎಲ್ಲ ಬಂಧವೂ ನಿವೃತ್ತಿಯಾಗಿ, ಸಕಲ ಪ್ರಪಂಚವೇ ಇಲ್ಲವೆಂದಾಗುತ್ತದೆ. ಆದರೆ, ಈ ಜ್ಞಾನವೂ ಸತ್ಯವಲ್ಲ, ಅದೂ ಕೂಡ ನಾಶವಾಗುತ್ತದೆ. ಯಾವುದರಿಂದ ಎಂಬ ಪ್ರಶ್ನೆಗೆ ಅದ್ವೈತಿಗಳು ಈ ಜ್ಞಾನದಿಂದಲೇ ಈ ಜ್ಞಾನವೂ ನಾಶವಾಗುತ್ತದೆ ಎಂದು ಹೇಳುತ್ತಾರೆ. ಈ ಅಂಶವನ್ನು ಇಲ್ಲಿ ನಿರಾಕರಿಸಲಾಗಿದೆ. ಜ್ಞಾನದಿಂದ, ಅಜ್ಞಾನವೋ, ಬಂಧವೋ, ನಿವೃತ್ತಿಯಾಗುತ್ತದೆ ಎಂದು ಬೇಕಾದರೆ ಒಪ್ಪಬಹುದು. ಆದರೆ, ಜ್ಞಾನದಿಂದ (ತನ್ನಿಂದ) ಜ್ಞಾನವೇ (ತಾನೇ) ನಾಶವಾಗುತ್ತದೆ ಎಂಬ ಆತ್ಮಾಶ್ರಯಬರುವಂತಹ ಮಾತು ಹಾಸ್ಯಾಸ್ಪದ. ಆದುದರಿಂದ ಈ ಚರಮವೃತ್ತಿ ಹೇಗೆ ನಾಶವಾಗುತ್ತದೆ ಎಂಬ ಪ್ರಶ್ನೆಗೆ ಉತ್ತರವಿಲ್ಲ.

**ಭಾವವಿಲಾಸಿನೀ–** ಪ್ರಾಕ್‌ಸಂಕೋಚೇನೋಕ್ತಾಂ ಜ್ಞಾನೇ ಜ್ಞಾನನಾಶ್ಯತ್ವಾನುಪಪತ್ತಿಂ ವಿಸ್ತರೇಣೋಪಪಾದಯತಿ ॥ **ಕಿಂಚೇತಿ** ॥ ತತ್ ಜ್ಞಾನೇನೈವ ಜ್ಞಾನನಾಶೇ ಆಶಾಕರಣಮ್ । ಆತ್ಮಾಶ್ರಯಪ್ರಸಂಗಾದಿತಿಭಾವಃ ॥ ೩೯೮ ॥

**ವೇಣುಂ ದಂದಹತೇ ವಹ್ನಿರ್ನ ಸ್ವಯಂ ತೇನ ದಹ್ಯತೇ ।**
**ಕಾಷ್ಠಾಭಾವೇನ ನಷ್ಟೋऽಸೌ ಕಾಂ ಕಾಷ್ಠಾಂ ಕಷ್ಟ ತೇ ದಿಶೇತ್ ॥೩೯೯॥**

**ಅರ್ಥ–** ವಹ್ನಿಃ= ಬೆಂಕಿಯು, ವೇಣುಂ= ಬಿದಿರನ್ನು, ದಂದಹತೇ= ಸುಡುತ್ತದೆ, ತೇನ= ಆ ಬೆಂಕಿಯಿಂದ, ಸ್ವಯಂ= ತಾನು (ಬೆಂಕಿಯು) ನ ದಹ್ಯತೇ= ಸುಡಲ್ಪಡುವುದಿಲ್ಲ, ಅಸೌ= ಈ

ಬೆಂಕಿಯು, ಕಾಷ್ಠಾಭಾವೇನ= ಕಟ್ಟಿಗೆಯಿಲ್ಲದಿರುವ ಪ್ರಯುಕ್ತ, ನಷ್ಟಃ= ನಾಶವಾಗಿದೆ, ಹೇ ಕಷ್ಟ= ಮಾಯಾವಾದಿಯೇ, ತೇ= ನಿನಗೆ, ಕಾಂ ಕಾಷ್ಠಾಂ= ಯಾವ ಅವಸ್ಥೆಯನ್ನು, ದಿಶೇತ್= ಈ ಬೆಂಕಿ ತಂದುಕೊಟ್ಟೀತು?

**ಅನುವಾದ** - ಬಿದಿರು ಬೆಂಕಿ ದೃಷ್ಟಾಂತದಿಂದ ಜ್ಞಾನವು ಜ್ಞಾನದಿಂದಲೇ ನಾಶವಾಗುತ್ತದೆ ಎಂದು ಅದ್ವೈತವಾದದಲ್ಲಿ ನಿರೂಪಿಸಲಾಗಿದೆ. ಬಿದಿರು ಒಂದಕ್ಕೊಂದು ಘರ್ಷಣೆಯಾದಾಗ ಬೆಂಕಿ ಹುಟ್ಟುತ್ತದೆ. ಆ ಬೆಂಕಿ ಎಲ್ಲ ಕಾಡನ್ನು ನಾಶಮಾಡಿ ಕೊನೆಗೆ ತಾನೂ ನಾಶವಾಗುತ್ತದೆ. ಇಲ್ಲಿ ಬೆಂಕಿ ಎಲ್ಲಕ್ಕೂ ನಾಶಕ. ಹಾಗೇ ತನಗೂ ನಾಶಕ. ಅದರಂತೆ ಕೊನೆಗೆ ಬರುವ ಸಾಕ್ಷಾತ್ಕಾರ (ಚರಮ ಸಾಕ್ಷಾತ್ಕಾರ) ಸಕಲ ಪ್ರಪಂಚವನ್ನೂ ನಾಶಪಡಿಸಿ (ಇಲ್ಲವೆಂಬ ಜ್ಞಾನವನ್ನು ಹುಟ್ಟಿಸಿ) ಕೊನೆಗೆ ತಾನೂ ನಾಶವಾಗುತ್ತದೆ. ಇಲ್ಲಿಯೂ ಕೂಡ ಸರ್ವನಾಶಕವಾದ ಜ್ಞಾನ ಕೊನೆಗೆ ತನಗೂ ನಾಶಕ. ಆದುದರಿಂದ ಜ್ಞಾನವು ಜ್ಞಾನದಿಂದಲೇ ನಾಶವಾಗುತ್ತದೆ. ಇದು ಅದ್ವೈತಿಗಳ ನಿರೂಪಣೆ. ಇಲ್ಲಿ ದೃಷ್ಟಾಂತವೇ ಸರಿಯಿಲ್ಲ ಎಂದು ಈ ಶ್ಲೋಕದಲ್ಲಿ ಪ್ರತಿಪಾದಿಸಲಾಗಿದೆ. ಬಿದಿರನ್ನು ಬೆಂಕಿ ನಾಶಪಡಿಸುತ್ತದೆ ಸರಿ. ಆದರೆ, ಬೆಂಕಿಗೆ ಬೆಂಕಿ ನಾಶಕವಲ್ಲ. ಕಟ್ಟಿಗೆ ಇಲ್ಲ ಆದುದರಿಂದ ಬೆಂಕಿ ನಶಿಸಿತೇ ಹೊರತು ಬೆಂಕಿಯನ್ನು ಬೆಂಕಿ ಸುಡಲಿಲ್ಲ. ಆದುದರಿಂದ ಈ ದೃಷ್ಟಾಂತ ಸರಿಯಿಲ್ಲ. ಆದುದರಿಂದ ಜ್ಞಾನವೇ ಜ್ಞಾನಕ್ಕೆ ನಾಶಕ ಎಂದು ಸಾಧಿಸಲು ಯಾವ ಮಾರ್ಗವನ್ನೂ ಈ ಬೆಂಕಿ ನಿನಗೆ ತೋರಿಸುವುದಿಲ್ಲ.

**ಭಾವವಿಲಾಸಿನೀ**– ವೇಣುಗುಲ್ಮಾನಲದೃಷ್ಟಾಂತೇನ ಜ್ಞಾನಸ್ಯ ಜ್ಞಾನೇನೈವ ನಾಶಂ ಪರೋ ಬ್ರೂತೇ। ತತ್ರ ದೃಷ್ಟಾಂತಸ್ಯ ವೈಷಮ್ಯಂ ದರ್ಶಯತಿ ॥ **ವೇಣುಮಿತಿ** ॥ ದಂದಹತೇ ದಹತಿ । ತೇನ ವೇಣುದಾಹಕದಹನೇನ । ನಹಿ ತತ್ರ ದಹನೇನೈವ ದಹನಸ್ಯ ದಾಹಂ ಕೋಽಪಿ ಬ್ರೂತೇ । ಕಥಂ ತರ್ಹಿ ದಹನಸ್ಯ ವಿನಾಶ ಇತ್ಯತ ಆಹ – **ಕಾಷ್ಠೇತಿ** ॥ ಪ್ರಾಚೀನಕಾಷ್ಠಸ್ಯ ಭಸ್ಮೀಭೂತತ್ವೇನ ಪುನಃ ಸ್ವಪೋಷಕ ಕಾಷ್ಠಾಂತರಾಭಾವಾದೇವ ದಹನನಾಶೋ ನತು ದಹನೇನ ದಹನನಾಶ ಇತ್ಯರ್ಥಃ । ಹೇ ಕಷ್ಟ ಹೇ ಮಾಯಾವಾದಿನ್ । ತೇ ಕಾಷ್ಠಾಮವಸ್ಥಾಂ ದಿಶೇತ್ । ತತ್ ದೃಷ್ಟಾಂತೇನ ಜ್ಞಾನಸ್ಯ ಜ್ಞಾನೇನೈವ ನಾಶಸ್ತ್ವಯಾ ವಕ್ತುಂ ನ ಶಕ್ಯತ ಇತಿ ಭಾವಃ । ನಚ ವಾಚ್ಯಂ ಮಮಾಪಿ ಜ್ಞಾನೇನೋಪಾದಾನೀಭೂತಪ್ರಾಚೀನಮನೋವಿನಾಶೇ ಮನೋಂತರಸ್ಯ ಚಾಭಾವಾತ್ ಜ್ಞಾನನಾಶ ಇತಿ । ಪ್ರಾಚೀನಮನಸೋ ನಾಶದಶಾಯಾಮೇವ ತ್ರಿಕ್ಷಣಾವಸ್ಥಾಯಿನೋ ಜ್ಞಾನಸ್ಯ ಭಗವತ್ ಸಂಕಲ್ಪಾದೇವ ನಷ್ಟತ್ವೇನೋಪಾದನನಾಶನಾಶ್ಯತಾಯಾ ಅಭಾವಾತ್ । ಮನೋಂತರಾಭಾವೇನಾಪಿ ಜ್ಞಾನಾಂತರಸ್ಯಾನುದಯಃ ಏವ ನ ಪುನರಸ್ಮೋಕ್ತವಿಧಯಾ ಪ್ರಾಗೇವ ನಷ್ಟಸ್ಯ ನಾಶೋಽಪಿ ಅನಲಸ್ಯ ತತ್ಸ್ಥಾಯಿತ್ವಾತ್ । ಪ್ರಾಚೀನಕಾಷ್ಠನಾಶದಶಯಾಮಪಿ ವಿದ್ಯಮಾನಸ್ಯ ಪೋಷಕಕಾಷ್ಠಾಂತರಾಭಾವಾದೇವ ನಾಶಃ । ಸ್ವೇನೈವ ಸ್ವಸ್ಯ ನಾಶಸ್ತು ಸಾಕ್ಷಾದ್ವಾ ಪರಂಪರಯಾ ವಾ ನೋಭಯತ್ರಾಪಿ । ಸಾಕ್ಷಾತ್ಸ್ವೇನೈವ ಸ್ವಸ್ಯ ನಾಶಸ್ಯಾತ್ಮಾಶ್ರಯದೋಷೇಣ ಸರ್ವೈರಪಿ ವಕ್ತುಮಶಕ್ಯತ್ವಾತ್। ಜ್ಞಾನಮಜ್ಞಾನಸ್ಯೈವ ನಿವರ್ತಕಮಿತಿ ವ್ಯಾಪ್ತಿಂ ವದತಾ ತ್ವಯಾ ಸರ್ವಥಾ ವಕ್ತುಮಶಕ್ಯತ್ವಾತ್ ।

ಪರಂಪರಾನಾಶೋಽಪಿ ಸ್ವನಾಶಿತ ಮನಸೋಽಜ್ಞಾನಸ್ಯ ವಾ ನಾಶೇನೈವ ಜ್ಞಾನಸ್ಯ ನಾಶೇ ಸ್ವದಗ್ಧಕಾಷ್ಠಸ್ಯ ನಾಶೇನೈವಾನಲಸ್ಯ ಚ ವಿನಾಶೇ ಸತಿ ಸ್ಯಾತ್ । ನ ಚೈತದಸ್ತಿ । ಜ್ಞಾನಸ್ಯೋಕ್ತವಿಧಯಾ ಪ್ರಾಗೇವ ನಷ್ಟತ್ವಾತ್। ಅನಲಸ್ಯ ಚ ಕಾಷ್ಠಾಂತರಸಂಯೋಗೇನ ಸಂಭವದವಸ್ಥಾನಸ್ಯ ತದಭಾವೇನೈವ ನಾಶಾತ್ । ಅತೋ ದೃಷ್ಟಾಂತದಾರ್ಷ್ಟಾಂತಿಕಯೋರ್ವೈಷಮ್ಯಮುಭಯತ್ರಾಪಿ ಸ್ವವಿನಾಶ್ಯತಾಭಾವಶ್ಚ ಸಿದ್ಧ ಇತಿ ಭಾವಃ॥

ರಜೋಽಪಿ ಕಾತಕಂ ಪಂಕಮಧಃ ಕುರ್ಯಾನ್ನ ಘಾತಕಮ್ ।
ಸ್ವಯಂ ಚಾಂತೇ ರಜೋರೂಪಮಧೋ ಗಚ್ಛೇದ್ ವಧೋಽಸ್ಯ ನ ॥೪೦೦॥

**ಅರ್ಥ–** ಕಾತಕಂ= ಕತಕದ, ರಜಃ ಅಪಿ= ಪುಡಿಯೂ ಕೂಡ, ಪಂಕಂ= ಕೆಸರನ್ನು, ಅಧಃ= ಕೆಳಗೆ (ಹೋಗುವಂತೆ), ಕುರ್ಯಾತ್= ಮಾಡೀತು (ಹೊರತಾಗಿ), ನ ಘಾತಕಂ= ನಾಶಪಡಿಸುವುದಿಲ್ಲ, ರಜೋರೂಪಂ= ಧೂಳಿನ ರೂಪದ, ಸ್ವಯಂ ಚ= ತಾನೂ ಕೂಡ, ಅಂತೇ= ಕೊನೆಗೆ, ಅಧಃ ಗಚ್ಛೇತ್= ಕೆಳಗೆ ಹೋದೀತು (ಹೊರತು), ಅಸ್ಯ= ಈ ಕತಕದ, ಪುಡಿಯ ವಧಃ= ನಾಶವು, ನ (ಅಸ್ತಿ)= ಇಲ್ಲ

**ಅನುವಾದ -** ಜ್ಞಾನವು ಜ್ಞಾನದಿಂದಲೇ ನಾಶವಾಗುತ್ತದೆ ಎಂಬ ವಿಷಯದಲ್ಲಿ ಅದ್ವೈತಿಗಳು ಕೊಡುವ ಮತ್ತೊಮ್ಮೆ ದೃಷ್ಟಾಂತ 'ಕತಕರಜಸ್ಸು' ಕತಕವೆಂದರೆ ಒಂದು ವಿಧವಾದ ಕಾಯಿ. ಅದರ ಪುಡಿಯನ್ನು ಕೆಸರಿನಿಂದ ರಾಡಿಯಾದ ನೀರಿಗೆ ಹಾಕಿದಾಗ, ನೀರಿನ ಕೆಸರಿನ ಕಣಗಳೆಲ್ಲವೂ ನಾಶವಾಗಿ ನೀರು ತಿಳಿಯಾಗುತ್ತದೆ. ಕೊನೆಗೆ ಹಾಕಿದ ಈ ಕತಕದ ಪುಡಿ ಅದೂ ಉಳಿಯುವುದಿಲ್ಲ. ಎಲ್ಲ ಕೆಸರಿನ ಕಣಗಳಿಗೆ ನಾಶಕವಾದ ಈ ಕತಕ ರಜಸ್ಸು ತನಗೂ ನಾಶಕ ಹೇಗೋ ಹಾಗೆ ಜ್ಞಾನಕ್ಕೆ ಜ್ಞಾನವೇ ನಾಶಕ ಎಂದು ದೃಷ್ಟಾಂತದ ಅಭಿಪ್ರಾಯ. ಆದರೆ ಇದೂ ಸರಿಯಲ್ಲ ಎಂದು ಈ ಶ್ಲೋಕದಲ್ಲಿ ನಿರೂಪಿಸಲಾಗಿದೆ. ಕತಕದ ಪುಡಿಯನ್ನು ಹಾಕಿದಾಗ ಕೆಸರು ನಾಶವಾಗುವುದಿಲ್ಲ ಹೊರತು ತಳಭಾಗಕ್ಕೆ ಇಳಿಯುತ್ತದೆ. ಕೊನೆಗೆ ಈ ಪುಡಿಯೂ ಕೂಡ ತಳಭಾಗಕ್ಕೆ ಹೋಗುತ್ತದೆ ಹೊರತು ನಾಶವಾಗುವುದಿಲ್ಲ. ಈ ದೃಷ್ಟಾಂತದಲ್ಲಿ ನಾಶ್ಯ-ನಾಶಕಭಾವವೇ ಇಲ್ಲದಿರುವ ಪ್ರಯುಕ್ತ ಇದು ಅತಿವಿಷಮವಾದ ದೃಷ್ಟಾಂತ.

**ಭಾವವಿಲಾಸಿನೀ–** ಕತಕರಜೋದೃಷ್ಟಾಂತೇ ಸ್ವಸ್ಯಾನ್ಯಸ್ಯ ಚ ನಾಶಸ್ಯೈವಾಭಾವಾದಿತಿವೈಷಮ್ಯಮಿತ್ಯಾಹ – ರಜ ಇತಿ ॥ ಕಾತಕಂ ಕತಕಸಂಬಂಧಿ । ಅಸ್ಯ ರಜಸಃ ॥ ೪೦೦-೪೦೧ ॥

ಅನ್ಯದ್ ವಿನಾಶಯೇತ್ ಜ್ಞಾನಂ ತ್ರಿಕ್ಷಣಂ ಸ್ವಸ್ಥಿತಿಕ್ಷಣೇ ।
ನಾಶಕ್ಷಣೇ ಸ್ವಯಂ ನಶ್ಯತ್ ಸ್ವಂ ವಾನ್ಯಂ ವಾ ನ ನಾಶಯೇತ್ ।
ಸ್ವೇನೈವ ಸ್ವಸ್ಯ ನಾಶಸ್ತು ನಾಸ್ತಿ ಲೋಕತ್ರಯೇಽಪಿ ತೇ ॥ ೪೦೧ ॥

**ಅರ್ಥ-** ತ್ರಿಕ್ಷಣಂ= ಮೂರು ಕ್ಷಣಮಾತ್ರವಿರುವ, ಜ್ಞಾನಂ= ಜ್ಞಾನವು, ಸ್ವಸ್ಥಿತಿಕ್ಷಣೇ= ತಾನು ಇರುವ ಕ್ಷಣದಲ್ಲಿ, ಅನ್ಯದ್= ಮತ್ತೊಂದನ್ನು, ವಿನಾಶಯೇತ್= ನಾಶಗೊಳಿಸೀತು, ನಾಶಕ್ಷಣೇ= ನಾಶವಾಗುವ ಕ್ಷಣದಲ್ಲಿ, ಸ್ವಯಂ= ತಾನೇ, ನಶ್ಯತ್= ನಾಶವಾಗುತ್ತಿರುವ ಜ್ಞಾನವು, ಸ್ವಂ ವಾ= ತನ್ನನ್ನಾಗಲೀ, ಅನ್ಯಂ ವಾ= ಮತ್ತೊಂದನ್ನಾಗಲೀ, ನ ನಾಶಯೇತ್= ನಾಶಗೊಳಿಸಲಾರದು, ಸ್ವೇನೈವ= ತನ್ನಿಂದಲೇ, ಸ್ವಸ್ಯ= ತನ್ನ, ನಾಶಸ್ತು= ನಾಶವಾದರೂ, ತೇ= ನಿನಗೆ, ಲೋಕತ್ರಯೇ ಅಪಿ= ಮೂರು ಲೋಕದಲ್ಲಿಯೂ, ನಾಸ್ತಿ= ಇಲ್ಲ.

**ಅನುವಾದ -** ಜ್ಞಾನವು ಮೂರು ಕ್ಷಣಮಾತ್ರವಿರುತ್ತದೆ. ಒಂದು ಹುಟ್ಟುವ ಕ್ಷಣ. ಎರಡನೆ ಕ್ಷಣದಲ್ಲಿ ಸ್ಥಿತಿ. ಮೂರನೇ ಕ್ಷಣದಲ್ಲಿ ನಾಶ. ಹುಟ್ಟುವ ಕ್ಷಣದಲ್ಲಿ ಅದು ಯಾವುದಕ್ಕೂ ನಾಶಕವಾಗುವುದಿಲ್ಲ. ಸ್ಥಿತಿ ಕ್ಷಣದಲ್ಲಿ ಮತ್ತೊಂದಕ್ಕೆ ನಾಶಕವಾಗಬಹುದು. ನಾಶಕ್ಷಣದಲ್ಲಿ ತಾನೇ ನಾಶ ಹೊಂದುತ್ತಿರುವುದರಿಂದ, ತನಗಾಗಲೀ ಮತ್ತೊಂದಕ್ಕಾಗಲೀ ನಾಶಕವಾಗಲಾರದು. ಅಷ್ಟೇ ಅಲ್ಲದೇ, ತನ್ನನ್ನು ತಾನೇ ನಾಶಪಡಿಸುವ ವಸ್ತುವು ಲೋಕತ್ರಯದಲ್ಲಿಯೂ ಸಿಗುವುದಿಲ್ಲ.

**ಭಾವವಿಲಾಸಿನೀ–** ಕತಕರಜೋದೃಷ್ಟಾಂತೇ ಸ್ವಸ್ಯಾನ್ಯಸ್ಯ ಚ ನಾಶಸ್ಯೈವಾಭಾವಾದಿತಿವೈಷಮ್ಯ ಮಿತ್ಯಾಹ –ರಜ ಇತಿ ॥ ಕಾತಕಂ ಕತಕಸಂಬಂಧಿ । ಅಸ್ಯ ರಜಸಃ ॥ ೪೦೦-೪೦೧ ॥

ವಷ್ಟ್ಯದೃಷ್ಟಂ ಯದಿ ಸ್ಪಷ್ಟಮೋಷ್ಠಕುಷ್ಠಂ ಭವೇತ್ ತವ ।
ಸಾಕ್ಷಾದೇವ ಸ್ವಯಂ ಜ್ಞಾನಂ ಸ್ವಾತ್ಮಾನಂ ನಾಶಯೇತ್ ಕಿಲ ॥ ೪೦೨ ॥

**ಅರ್ಥ-** ಯದಿ= ಒಂದು ವೇಳೆ, ಜ್ಞಾನಂ= ಜ್ಞಾನವು, ಸ್ವಯಂ= ತಾನಾಗಿಯೇ, ಸಾಕ್ಷಾದೇವ= ಸಾಕ್ಷಾತ್ತಾಗಿ, ಸ್ವಾತ್ಮಾನಂ= ತನ್ನನ್ನು (ಜ್ಞಾನವನ್ನು) ಕಿಲ ನಾಶಯೇತ್= ನಾಶಪಡಿಸುವುದೆಂದು, ಅದೃಷ್ಟಂ= ಎಲ್ಲೂ ಕಾಣದಿದ್ದನ್ನು, ವಷ್ಟಿ= ಹೇಳುವುದಾದರೆ, ತವ= ನಿನಗೆ, ಸ್ಪಷ್ಟಂ= ಸ್ಪಷ್ಟವಾಗಿ, ಓಷ್ಠಕುಷ್ಠಂ= ತುಟಿಗಳಲ್ಲಿ ಕುಷ್ಠರೋಗವು, ಭವೇತ್= ಆದೀತು.

**ಅನುವಾದ -** ಜ್ಞಾನವು ಜ್ಞಾನದಿಂದಲೇ ನಾಶವಾಗುತ್ತದೆ ಎಂದು ಅದ್ವೈತಿಗಳು ಒಪ್ಪುತ್ತಾರೆ. ಆದರೆ, ಇದು ಎಲ್ಲಿಯೂ ಕಂಡಿಲ್ಲ. ಅದೃಷ್ಟವಾದುದನ್ನು ಪ್ರಮಾಣವಿಲ್ಲದಿದ್ದರೂ ಒಪ್ಪುವುದಾದರೆ, ಅದ್ವೈತಿಗಳ ತುಟಿಗಳಲ್ಲಿ ಕುಷ್ಠರೋಗವು ಕಂಡಿಲ್ಲದಿದ್ದರೂ ಕುಷ್ಠರೋಗವಿದೆ ಎಂದು ಅನಿಷ್ಟವನ್ನು ಅಂಗೀಕರಿಸಬೇಕಾದೀತು. ಇದು ಯುಕ್ತವಲ್ಲ. ಆದುದರಿಂದ 'ಜ್ಞಾನಕ್ಕೆ ಜ್ಞಾನವೇ ನಾಶಕ' ಎಂಬ ಸಿದ್ಧಾಂತ ಸರಿಯಲ್ಲ.

**ಭಾವವಿಲಾಸಿನೀ–** ಅದೃಷ್ಟಂ ಕಲ್ಪಯತೋಽನಿಷ್ಟಮಾಹ –ವಷ್ಟೀತಿ ॥ ತಥಾ ಸತಿ ಸರ್ವೈರದೃಷ್ಟಂ ಕುಷ್ಠಮಪಿ ತವೋಷ್ಠೇ ಸ್ಯಾದಿತಿ ಭಾವಃ ॥ ೪೦೨ ॥

ಜ್ಞಾನನಾಶ್ಯೇ ತವಾಜ್ಞಾನೇ ಜ್ಞಾನೋಪಾದಾನತೈವ ನ ।
ತಮಸೋ ದೀಪನಾಶ್ಯಸ್ಯ ದೀಪೋಪಾದಾನತಾಽಸ್ತಿ ಕಿಮ್ ॥ ೪೦೩ ॥

**ಅರ್ಥ**- ತವ= ನಿನ್ನ (ಮತದಲ್ಲಿ) ಜ್ಞಾನನಾಶ್ಯೇ= ಜ್ಞಾನದಿಂದ ನಾಶವಾಗುವ, ಅಜ್ಞಾನೇ= ಅಜ್ಞಾನದಲ್ಲಿ ಜ್ಞಾನೋಪಾದಾನತಾ ಏವ= ಜ್ಞಾನಕ್ಕೂ ಉಪಾದಾನ ವಾಗಿರುವಿಕೆಯೇ, ನ= ಇಲ್ಲ ದೀಪನಾಶ್ಯಸ್ಯ= ದೀಪದಿಂದ ನಾಶವಾಗುವ, ತಮಸಃ= ಕತ್ತಲೆಗೆ, ದೀಪೋಪಾದಾನತಾ= ದೀಪಕ್ಕೆ ಉಪದಾನವಾಗಿರುವಿಕೆಯು, ಅಸ್ತಿ ಕಿಮ್= ಇದೆಯೇನು?

**ಅನುವಾದ** - ಜ್ಞಾನದಿಂದ ನೇರವಾಗಿ ಜ್ಞಾನನಾಶವಾಗುತ್ತದೆ ಎಂದು ಅದ್ವೈತಮತದಲ್ಲಿ ಹೇಳಲು ಬರುವುದಿಲ್ಲ. 'ಜ್ಞಾನಂ ಅಜ್ಞಾನಸ್ಯೈವ ನಾಶಕಂ' ಎಂಬ ನಿಯಮಕ್ಕೆ ವಿರೋಧ ಬರುವ ಪ್ರಯುಕ್ತ. ಹೀಗಾಗಿ ಅಜ್ಞಾನವು ಜ್ಞಾನಕ್ಕೆ ಉಪಾದಾನ ಕಾರಣ. ಜ್ಞಾನದಿಂದ ಅಜ್ಞಾನ ನಾಶವಾದಾಗ ಅಜ್ಞಾನವೇ ಉಪಾದಾನವಾಗಿ ಉಳ್ಳ ಜ್ಞಾನವೂ ನಾಶವಾಗುತ್ತದೆ. ಆದುದರಿಂದ ಜ್ಞಾನವು ಅಜ್ಞಾನದ್ವಾರಾ ಜ್ಞಾನನಾಶಕ ಎಂದೇ ಒಪ್ಪಬೇಕು. ಇದನ್ನೂ ಕೂಡ ಒಪ್ಪಲು ಆಗುವುದಿಲ್ಲ. ಏಕೆಂದರೆ ತ್ರಿಕ್ಷಣ ಮಾತ್ರವಿರುವ ಜ್ಞಾನವು ಸ್ವಸ್ಥಿತಿಕ್ಷಣದಲ್ಲಿ ಅಜ್ಞಾನವನ್ನು ನಾಶಪಡಿಸಿದರೂ ಕೂಡ, ಜ್ಞಾನವನ್ನು ನಾಶಪಡಿಸಲು ಸಾಧ್ಯವಿಲ್ಲ ಎಂದು ಹಿಂದೆ ನಿರೂಪಿಸಲಾಗಿದೆ. ಈಗ ಜ್ಞಾನಕ್ಕೆ ಅಜ್ಞಾನವು ಉಪಾದಾನ ಕಾರಣವಾಗಲು ಸಾಧ್ಯವಿಲ್ಲ ಎಂದು ಈ ಶ್ಲೋಕದಲ್ಲಿ ವಿವರಿಸಲಾಗಿದೆ. ದೀಪದಿಂದ ನಾಶವಾಗುವ ಕತ್ತಲೆಯು ದೀಪಕ್ಕೆ ಉಪಾದಾನ ಕಾರಣವಲ್ಲ. ಅದರಂತೆ ಜ್ಞಾನದಿಂದ ನಾಶವಾಗುವ ಅಜ್ಞಾನವು ಜ್ಞಾನಕ್ಕೆ ಉಪಾದಾನವಾಗಲು ಸಾಧ್ಯವಿಲ್ಲ.

**ಭಾವವಿಲಾಸಿನೀ**– ಕಿಂ ಚ ಸಾಕ್ಷಾತ್ ಜ್ಞಾನೇನೈವ ಜ್ಞಾನವಿನಾಶೇ ಜ್ಞಾನಮಜ್ಞಾನಸ್ಯೈವ ನಿವರ್ತಕ-ಮಿತಿ ವ್ಯಾಪ್ತಿಭಂಗಾತ್ ಉಪಾದಾನಾಜ್ಞಾನನಾಶದ್ವಾರೇಣೈವ ನಾಶಃ ಪರೇಣ ವಕ್ತವ್ಯಃ । ಸೋಽಪಿ ತ್ರಿಕ್ಷಣಾವಸ್ಥಾಯಿನೋ ಜ್ಞಾನಸ್ಯಾಜ್ಞಾನನಾಶಮನಪೇಕ್ಷ್ಯೈವ ಘಟಾಪರೋಕ್ಷವೃತ್ತಿ-ವತ್ತತ್ಪರೋಕ್ಷವೃತ್ತಿವಚ್ಚ ಭಗವತ್‌ಸಂಕಲ್ಪಾನ್ನಷ್ಟತ್ವೇನಾನುಪಪನ್ನ ಇತ್ಯುಕ್ತಮ್ । ಇದಾನೀಮಜ್ಞಾನಸ್ಯ ಜ್ಞಾನೋಪಾದಾನತ್ವಮೇವ ನ ಯುಕ್ತಮಿತ್ಯಾಹ – **ಜ್ಞಾನನಾಶ್ಯ ಇತಿ** ॥ ಆವರಣ-ನಿವೃತ್ತಿಜನ್ಯಾಪರೋಕ್ಷಜ್ಞಾನೇ ಆವರಣೋಪಾದಾನಕತ್ವಸ್ಯ ತನ್ನಾಶನಾಶ್ಯತ್ವಸ್ಯ ಚ ವಿರುದ್ಧತ್ವಾದಿತಿ ಭಾವಃ ॥ ೪೦೩॥

ದಶಾನಿಮಿತ್ತೋ ದೀಪಸ್ತು ತಾಂ ದಶಾಂ ನಾಶಯೇದಪಿ ।
ದಶಾಖಂಡಾತ್ಮಿಕಾ ಕಂಥಾ ಕಿಂ ತಾಂ ಹಂತಿ ವಿಚಾರಯ ॥ ೪೦೪ ॥

**ಅರ್ಥ-** ದಶಾನಿಮಿತ್ತಃ= ಬತ್ತಿಯೇ ನಿಮಿತ್ತಕಾರಣವಾಗಿರುವ, ದೀಪಃ ತು= ದೀಪವಾದರೂ ತಾಂ= ಆ, ದಶಾಂ= ಬತ್ತಿಯನ್ನು ನಾಶಯೇತ್ ಅಪಿ= ನಾಶಪಡಿಸುತ್ತದೆಯಾದರೂ, ದಶಾಖಂಡಾತ್ಮಿಕಾ= ಬಟ್ಟೆಯ ಚೂರೇ (ಖಂಡಪಟ) ಉಪಾದಾನವಾಗಿ ಉಳ್ಳ ಕಂಥಾ= ಬಟ್ಟೆಯು, ತಾಂ= ಆ ಖಂಡಪಟವನ್ನು (ಉಪಾದಾನವನ್ನು) ಹಂತಿ ಕಿಂ= ನಾಶಪಡಿಸುತ್ತದೆಯೇನು? ವಿಚಾರಯ= ವಿಚಾರಿಸು.

**ಅನುವಾದ** - ನಿಮಿತ್ತ ನೈಮಿತ್ತಿಕಗಳು ಪರಸ್ಪರ ಭಿನ್ನ. ಅವುಗಳಲ್ಲಿ ಕೆಲವು ಕಡೆ ನಾಶ್ಯ-ನಾಶಕ ಭಾವವಿರಬಹುದು. ದೀಪಕ್ಕೆ ಬತ್ತಿ ನಿಮಿತ್ತ. ನೈಮಿತ್ತಿಕವಾದ ದೀಪವು ನಿಮಿತ್ತವಾದ ಬತ್ತಿಯನ್ನು ನಾಶಪಡಿಸುತ್ತದೆ (ಸುಡುತ್ತದೆ). ಆದರೆ ಉಪಾದಾನ ಉಪಾದೇಯಗಳು ಪರಸ್ಪರ ಅಭಿನ್ನ. ಆದುದರಿಂದ ಅವುಗಳಿಗೆ ನಾಶ್ಯನಾಶಕಭಾವ ಕೂಡುವುದಿಲ್ಲ. ಖಂಡಪಟವು ಬಟ್ಟೆಗೆ ಉಪಾದಾನ. ಉಪಾದೇಯವಾದ ಬಟ್ಟೆಯು ಉಪಾದಾನವಾದ ಖಂಡಪಟಕ್ಕೆ ನಾಶಕವಾಗುತ್ತದೆಯೋ ಎಂದು ನೀನೇ ವಿಚಾರ ಮಾಡು.

**ಭಾವವಿಲಾಸಿನೀ**– ಭಿನ್ನಯೋರ್ನಿಮಿತ್ತನೈಮಿತ್ತಿಕಯೋಃ ಕ್ವಚಿದ್ವಿನಾಶ್ಯವಿನಾಶಕಭಾವ ದರ್ಶನೇಽಪಿ ಅಭಿನ್ನಯೋರುಪಾದಾನೋಪಾದೇಯಯೋರ್ನತದ್ಯುಕ್ತಂ ನಾಪಿ ದೃಷ್ಟಮಿತ್ಯಾಹ –**ದಶೇತಿ** ॥ ದಶಾಂ ವರ್ತಿಕಾಮ್ । ದಶಾಖಂಡೋ ವಸ್ತ್ರಖಂಡಃ । ತಾಂ ವಸ್ತ್ರಖಂಡರೂಪದಶಾಮ್ ॥ ೪೦೪ ॥

ಉಪಾದಾನಮುಪಾದೇಯಾಭಿನ್ನಮಿತ್ಯಾವಯೋರ್ಮತಮ್ ।
ಕಥಂ ವಿರುದ್ಧಯೋರೈಕ್ಯಮೈಕ್ಯೇ ಚ ಕ್ವ ವಿರುದ್ಧತಾ ॥ ೪೦೫ ॥

**ಅರ್ಥ-** ಉಪಾದಾನಂ= ಉಪಾದಾನವು, ಉಪಾದೇಯಾಭಿನ್ನಮ್= ಉಪಾದೇಯಕ್ಕಿಂತ ಅಭಿನ್ನ, ಇತಿ= ಎಂದು, ಆವಯೋಃ= ನಮ್ಮಿಬ್ಬರ, ಮತಮ್= ಸಿದ್ಧಾಂತವು (ಅಭಿಮತವು), ವಿರುದ್ಧಯೋಃ= ವಿರುದ್ಧವಾದವುಗಳಿಗೆ, ಐಕ್ಯಂ= ಐಕ್ಯವು, ಕಥಮ್= ಹೇಗೆ? ಚ= ಮತ್ತು, ಐಕ್ಯೇ= ಅಭೇದವಿದ್ದರೆ, ವಿರುದ್ಧತಾ= ವಿರೋಧವು, ಕಥಮ್= ಹೇಗೆ?

**ಅನುವಾದ** - ಜ್ಞಾನಕ್ಕೆ ಅಜ್ಞಾನವು ಉಪಾದಾನಕಾರಣವಾದುದರಿಂದ, ಅಜ್ಞಾನನಾಶವಾದಾಗ ಜ್ಞಾನವೂ ನಾಶವಾಗುತ್ತದೆ ಎಂದು ಅದ್ವೈತಿಗಳ ಅಭಿಪ್ರಾಯ. ಆದರೆ ಇದು ಸರಿಯಲ್ಲ, ಏಕೆಂದರೆ ಜ್ಞಾನ-ಅಜ್ಞಾನಗಳಿಗೆ ವಿರೋಧವಿದೆ ಮತ್ತು ಉಪಾದಾನ ಉಪಾದೇಯಗಳು ಅಭಿನ್ನ ಎಂದು ಇಬ್ಬರೂ (ದ್ವೈತಿಗಳು-ಅದ್ವೈತಿಗಳು) ಒಪ್ಪಿರುವ ವಿಚಾರ. ಹೀಗಾಗಿ ಜ್ಞಾನ-ಅಜ್ಞಾನಗಳಿಗೆ ವಿರೋಧವಿದೆ ಎಂದಾದರೆ, ಐಕ್ಯವಿರಲು ಸಾಧ್ಯವಿಲ್ಲವಾದುದರಿಂದ ಉಪಾದಾನ-ಉಪಾದೇಯಭಾವವು ಕೂಡುವುದಿಲ್ಲ. ಉಪಾದಾನ- ಉಪದೇಯಭಾವವಿದೆ

ಎಂದಾದರೆ ಐಕ್ಯವಿರುವ ಪ್ರಯುಕ್ತ ವಿರೋಧವು ಕೂಡಲಾರದು. ಆದುದರಿಂದ ಜ್ಞಾನಕ್ಕೆ ಅಜ್ಞಾನವನ್ನು ಉಪಾದಾನ ಎಂದು ಹೇಳುವುದು ಸರಿಯಲ್ಲ.

**ಭಾವವಿಲಾಸಿನೀ–** ವಿರುದ್ಧಯೋರೈಕ್ಯಾಯೋಗಾಚ್ಚ ದೀಪತಮಸೋರಿವ ನ ವಿನಾಶ್ಯ-ವಿನಾಶಕಯೋರುಪಾದಾನೋಪಾದೇಯಭಾವ ಇತ್ಯಾಹ – ಉಪದಾನಮಿತಿ ॥ ೪೦೫ ॥

**ನ ಚೇದ್ ವಿಶಿಷ್ಟಯೋರೈಕ್ಯಂ ಸ್ಯಾದತ್ಯಂತವಿರುದ್ಧಯೋಃ ।**
**ಅತಃ ಕೇನಾಪ್ಯುಪಾಯೇನ ನ ಜ್ಞಾನಂ ಜ್ಞಾನನಾಶಕಮ್ ॥ ೪೦೬ ॥**

**ಅರ್ಥ-** ನ ಚೇತ್= ವಿರೋಧವಿದ್ದರೂ ಭೇದವಿಲ್ಲವೆಂದಾದರೆ (ಐಕ್ಯವನ್ನೇ ಅಂಗೀಕರಿಸುವುದಾದರೆ), ಅತ್ಯಂತ ವಿರುದ್ಧಯೋಃ= ಅತ್ಯಂತ ವಿರುದ್ಧಗಳಾದ, ವಿಶಿಷ್ಟಯೋಃ (ಅಲ್ಪಜ್ಞತ್ವ-ಸರ್ವಜ್ಞತ್ವ) ವಿಶಿಷ್ಟಗಳಿಗೆ, ಐಕ್ಯಂ= ಐಕ್ಯವು ಸ್ಯಾತ್= ಆಗಬೇಕಾದೀತು, ಅತಃ= ಜ್ಞಾನಕ್ಕೆ ಅಜ್ಞಾನವು ಉಪಾದಾನವಲ್ಲವಾದುದರಿಂದ, ಕೇನಾಪಿ= ಯಾವುದೇ ಒಂದು ಉಪಾಯೇನ= ರೀತಿಯಿಂದಲೂ, ಜ್ಞಾನಂ= ಜ್ಞಾನವು, ಜ್ಞಾನನಾಶಕಂ= ಜ್ಞಾನನಾಶಕವು ನ (ಭವತಿ) ಆಗುವುದಿಲ್ಲ.

**ಅನುವಾದ -** ವಿರುದ್ಧವಾದರೂ ಅಜ್ಞಾನಜ್ಞಾನಗಳಿಗೆ ಉಪಾದಾನ ಉಪಾದೇಯ-ಭಾವವನ್ನು ಒಪ್ಪಿದರೆ, ವಿರುದ್ಧಗಳಿಗೆ ಭೇದವನ್ನು ಒಪ್ಪಬೇಕಾಗಿಲ್ಲ, ಐಕ್ಯವನ್ನು ಅಂಗೀಕರಿಸಬಹುದು ಎಂದಾಯಿತು. ಹಾಗಾದರೆ, ಅದ್ವೈತ ಮತದಲ್ಲಿ ಬರುವ ಒಂದು ಪ್ರಮುಖ ವಿಷಯವನ್ನು ಇಲ್ಲಿ ಆಕ್ಷೇಪಿಸಲಾಗಿದೆ. ಅದ್ವೈತ ಸಿದ್ಧಾಂತದಲ್ಲಿ 'ತತ್ತ್ವಮಸಿ' ಮುಂತಾದ ಶ್ರುತಿಗಳಿಗೆ ಅರ್ಥ ನಿರೂಪಣೆ ಈ ರೀತಿಯಾಗಿದೆ. ನಿಜವಾಗಿ ಇಲ್ಲಿ ತತ್ ಎಂದರೆ ಸರ್ವಜ್ಞನಾದ ಪರಮಾತ್ಮ. ತ್ವಂ ಎಂದರೆ ಅಲ್ಪಜ್ಞನಾದ ಜೀವ. ಇವರಿಬ್ಬರಿಗೆ ಐಕ್ಯವನ್ನು ಹೇಳಲು ಬರುವುದಿಲ್ಲ. ಏಕೆಂದರೆ ಸರ್ವಜ್ಞತ್ವ ಅಲ್ಪಜ್ಞತ್ವಗಳು ವಿರುದ್ಧವಾದುದರಿಂದ ಅವುಗಳಿಂದ ವಿಶಿಷ್ಟಗಳೂ ವಿರುದ್ಧ. ವಿರುದ್ಧಗಳಿಗೆ ಸರ್ವಜ್ಞತ್ವ ಅಲ್ಪಜ್ಞತ್ವಗಳು ವಿರುದ್ಧ- ಐಕ್ಯವನ್ನು ಹೇಳಬಾರದು. ಒಂದು ವೇಳೆ ಹೇಳುವುದಾದರೆ ಶೀತಲವಾದ ಹಿಮಕ್ಕೂ ಬಿಸಿಯಾದ ಅಗ್ನಿಗೂ ಐಕ್ಯವನ್ನು ಹೇಳಬೇಕಾದೀತು. ಅದಕ್ಕಾಗಿ ತತ್ ಮತ್ತು ತ್ವಂ ಪದಗಳಲ್ಲಿ ಮುಖ್ಯಾರ್ಥವನ್ನು ಬಿಟ್ಟು ಕೇವಲ ಆತ್ಮಸ್ವರೂಪ ಎಂದು ಅರ್ಥ ಮಾಡಬೇಕು. ಹೀಗೆ ತತ್ ಎಂದರೆ ಕೇವಲ ಶುದ್ಧ- ಚಿತ್. ತ್ವಂ ಎಂದರೂ ಚಿತ್ ಇವುಗಳಿಗೆ ಅಭೇದವನ್ನು 'ತತ್ತ್ವಮಸಿ' ಎಂಬ ವಾಕ್ಯ ನಿರೂಪಿಸಿದೆ ಎಂದು ಅರ್ಥೈಸಲಾಗಿದೆ. ಆದರೆ ವಿರುದ್ಧವಾದರೂ ಐಕ್ಯವನ್ನು ಹೇಳಬಹುದು ಎಂದು ಒಪ್ಪುವುದಾದರೆ ಅಲ್ಪಜ್ಞತ್ವವಿಶಿಷ್ಟ ಮತ್ತು ಸರ್ವಜ್ಞತ್ವವಿಶಿಷ್ಟಗಳಿಗೆ ಐಕ್ಯವನ್ನು ಹೇಳಬಹುದಾದ್ದರಿಂದ ಲಕ್ಷಣಾವೃತ್ತಿಯಿಂದ ಅಮುಖ್ಯವಾದ ಅರ್ಥವನ್ನು

ಹೇಳುವ ಅಗತ್ಯವಿಲ್ಲ, ಹೀಗಿದ್ದರೂ ಹೇಳಿದ್ದಾರೆ. ಆದುದರಿಂದ ಜ್ಞಾನ-ಅಜ್ಞಾನಗಳಿಗೆ ಉಪಾದಾನ ಉಪಾದೇಯಭಾವವಿಲ್ಲ.

**ಭಾವವಿಲಾಸಿನೀ–** ಅತಃ ಜ್ಞಾನಸ್ಯಾಜ್ಞಾನೋಪಾದಾನಕತ್ವಾಭಾವಾತ್ ॥ ೪೦೬ ॥

ಜ್ಞಾನಸ್ಥಿತಿಕ್ಷಣೋಽವಶ್ಯಮಜ್ಞಾನಸ್ಯ ಸ್ಥಿತಿಕ್ಷಣಃ ।
ಉಪಾದೇಯಸ್ಥಿತಿರ್ಯಾ ಸಾ ಸೋಪಾದಾನಸ್ಯ ಚ ಸ್ಥಿತಿಃ ॥ ೪೦೭ ॥

**ಅರ್ಥ-** ಜ್ಞಾನಸ್ಥಿತಿಕ್ಷಣಃ= ಜ್ಞಾನವು ಯಾವ ಕ್ಷಣದಲ್ಲಿ ಇರುವುದೋ ಆ ಕ್ಷಣವು, ಅವಶ್ಯಂ= ಅನಿವಾರ್ಯವಾಗಿ, ಅಜ್ಞಾನಸ್ಯ= ಅಜ್ಞಾನದ ಸ್ಥಿತಿಕ್ಷಣಃ= ಇರುವಿಕೆಯ ಕ್ಷಣವು, ಯಾ= ಯಾವುದು, ಉಪಾದೇಯ ಸ್ಥಿತಿಃ= ಉಪಾದೇಯದ ಇರುವಿಕೆಯೋ, ಸಾ= ಅದು, ಸೋಪಾದಾನಸ್ಯ ಚ= ಉಪಾದಾನ ಸಹಿತವಾದ ಉಪಾದೇಯದ್ದೇ, ಸ್ಥಿತಿಃ= ಇರುವಿಕೆಯು.

**ಅನುವಾದ -** ಜ್ಞಾನಕ್ಕೆ ಅಜ್ಞಾನವು ಉಪಾದಾನಕಾರಣ ಎಂದು ಅಂಗೀಕರಿಸುವವರ ಪ್ರಕಾರ ಜ್ಞಾನವು ತಾನಿರುವ ಕ್ಷಣದಲ್ಲಿ ಬೇರೆ ಪದಾರ್ಥಗಳ ನಾಶಕ್ಕೆ ಕಾರಣವಾಗಬಹುದು. ಆದರೆ ಅಜ್ಞಾನಕ್ಕೆ ನಾಶಕವಾಗಲಾರದು. ಏಕೆಂದರೆ ಅಜ್ಞಾನವು ಜ್ಞಾನಕ್ಕೆ ಉಪಾದಾನ ಕಾರಣ. ಉಪಾದೇಯವು ಇರುವ ಕ್ಷಣದಲ್ಲಿ ಉಪಾದಾನಸಹಿತವಾಗಿಯೇ ಉಪಾದೇಯವಿರುತ್ತದೆ ಹೊರತು ಉಪಾದಾನವಿಲ್ಲದೆ ಕೇವಲ ಉಪಾದೇಯವು ಇರುವುದಿಲ್ಲ. ಜ್ಞಾನವು ಉಪಾದೇಯ, ಅದು ಇರುವ ಕ್ಷಣದಲ್ಲಿ ಅಜ್ಞಾನವೂ ಇರಲೇಬೇಕು. ಹೀಗಾಗಿ ಜ್ಞಾನವು ಉಪಾದಾನವಾದ ಅಜ್ಞಾನಕ್ಕೆ ನಾಶಕವಾಗಲಾರದು.

**ಭಾವವಿಲಾಸಿನೀ–** ಜ್ಞಾನಸ್ಯಾಜ್ಞಾನೋಪಾದಾನಕತ್ವಮತೇ ಸ್ಯಾದಪಿ ಜ್ಞಾನಂ ಸ್ವಸ್ಥಿತಿದಶಾಯಾಮನ್ಯಸ್ಯ ನಾಶಕಮ್ । ಅಜ್ಞಾನನಾಶಕಂ ತು ಸರ್ವಥಾ ನ ಸ್ಯಾದಿತ್ಯಾಹ – ಜ್ಞಾನೇತಿ॥೪೦೭॥

ನ ಹಿ ತಂತುಸ್ಥಿತ್ಯಭಾವದಶಾಯಾಂ ಚ ಪಟಸ್ಥಿತಿಃ ।
ತತಸ್ತದೈವ ನ ತಯೋರ್ವಧ್ಯಘಾತಕತೋಚಿತಾ ॥ ೪೦೮ ॥

**ಅರ್ಥ-** ತಂತುಸ್ಥಿತ್ಯಭಾವದಶಾಯಾಂ ಚ= ನೂಲುಗಳು ಇಲ್ಲದಿರುವ ಕ್ಷಣದಲ್ಲಿಯಾದರೂ, ಪಟಸ್ಥಿತಿಃ= ಬಟ್ಟೆಯ ಇರುವಿಕೆಯು, ನ ಹಿ (ಭವತಿ)= ಇರುವುದಿಲ್ಲವಷ್ಟೆ. ತತಃ= ಆದ್ದರಿಂದ, ತಯೋಃ= ಉಪಾದಾನ ಉಪಾದೇಯಗಳಿಗೆ, ತದೈವ= ಅವುಗಳ ಇರುವಿಕೆಯ ಕ್ಷಣದಲ್ಲಿಯೇ, ವಧ್ಯಘಾತಕತಾ= ನಾಶ್ಯನಾಶಕ ಭಾವವು, ನ ಉಚಿತಾ= ಯೋಗ್ಯವಲ್ಲ.

**ಅನುವಾದ** - ನೂಲುಗಳು ಬಟ್ಟೆಗೆ ಉಪಾದಾನ ಕಾರಣ. ನೂಲುಗಳಿಲ್ಲದ ಕಾಲದಲ್ಲಿ ಬಟ್ಟೆ ಇದೆ ಎಂದು ಹೇಳಲು ಬರುವುದಿಲ್ಲ. ಬಟ್ಟೆ ಇದೆ ಎಂದರೆ ತಂತುಸಹಿತವಾಗಿಯೇ ಇದೆ ಎಂದರ್ಥ. ಆದುದರಿಂದ ಉಪಾದಾನ ಉಪಾದೇಯಗಳು ಒಟ್ಟಿಗೆ ಒಂದೇ ಕ್ಷಣದಲ್ಲಿ ಇರುವ ಕಾಲದಲ್ಲಿ ಅವುಗಳಿಗೆ ನಾಶ್ಯನಾಶಕಭಾವವನ್ನು ಹೇಳುವುದು ಸರಿಯಲ್ಲ. ಹೀಗಾಗಿ ಜ್ಞಾನವು ಅಜ್ಞಾನವನ್ನು ನಾಶಪಡಿಸುತ್ತದೆ ಎಂದು ಅಂಗೀಕರಿಸುವುದು ಯೋಗ್ಯವಾದುದಲ್ಲ.

**ಸ್ಥಿತಿರ್ಭಾವೋ ವಧೋ ಧ್ವಂಸಸ್ತಾವುಭಾವೇಕದಾ ಕಥಮ್ ।**
**ಕ್ಷಣಾಂತರೇ ಸ್ವಯಂ ನಶ್ಯತ್ ಕಸ್ಯ ವಾ ಸ್ಯಾದ್ ವಿನಾಶಕಮ್ ॥ ೪೦೯ ॥**

**ಅರ್ಥ**- ಸ್ಥಿತಿಃ= ಸ್ಥಿತಿ ಎಂದರೆ, ಭಾವಃ= ಇರುವಿಕೆ, ವಧಃ= ವಧವೆಂದರೆ, ಧ್ವಂಸಃ= ನಾಶವಾಗುವಿಕೆ, ತೌ ಉಭೌ= ಈ ಎರಡು, ಏಕದಾ= ಒಂದೇ ಕ್ಷಣದಲ್ಲಿ, ಕಥಮ್= ಹೇಗೆ (ಉಂಟಾಗುತ್ತವೆ), ಕ್ಷಣಾಂತರೇ= ಮುಂದಿನ ಕ್ಷಣದಲ್ಲಿ, ಸ್ವಯಂ= ತಾನೇ, ನಶ್ಯತ್= ನಾಶವಾಗುವ (ಜ್ಞಾನವು), ಕಸ್ಯ ವಾ= ಯಾವುದಕ್ಕೆ ತಾನೆ, ವಿನಾಶಕಂ= ನಾಶಕವು (ಸ್ಯಾತ್= ಆದೀತು).

**ಅನುವಾದ** - ಜ್ಞಾನ-ಅಜ್ಞಾನಗಳಿಗೆ ನಾಶ್ಯ-ನಾಶಕಭಾವವಿದೆ ಎಂದಾದರೆ ಜ್ಞಾನವು ಯಾವ ಕ್ಷಣದಲ್ಲಿ ಅಜ್ಞಾನವನ್ನು ನಾಶಪಡಿಸುತ್ತದೆ? ಜ್ಞಾನದ ಸ್ಥಿತಿ ಕ್ಷಣದಲ್ಲಿ ಎಂದು ಹೇಳಲು ಬರುವುದಿಲ್ಲ. ಹಿಂದೆ ನಿರೂಪಿಸಿದಂತೆ ಜ್ಞಾನದ ಸ್ಥಿತಿಯ ಕ್ಷಣದಲ್ಲಿ ಅಜ್ಞಾನದ ಸ್ಥಿತಿಯೂ ಇರುವುದರಿಂದ. ಇಲ್ಲಿ ಸ್ಥಿತಿ ಎಂದರೆ ಇರುವಿಕೆ. ವಧ ಎಂದರೆ ಧ್ವಂಸ. ಇರುವಿಕೆ ಮತ್ತು ಧ್ವಂಸ ಒಂದೇ ಕ್ಷಣದಲ್ಲಿರಲು ಸಾಧ್ಯವಿಲ್ಲ. ಹೀಗಾಗಿ ಜ್ಞಾನವು ಸ್ವಸ್ಥಿತಿಕ್ಷಣದಲ್ಲಿ ಅಜ್ಞಾನಕ್ಕೆ ನಾಶಕ ಎಂದು ಹೇಳಲಾಗದು. ಮುಂದಿನ ಕ್ಷಣದಲ್ಲಿ ಎಂದು ಹೇಳಬೇಕು. ಆದರೆ ಜ್ಞಾನವು ಮೂರು ಕ್ಷಣ ಮಾತ್ರವಿರುವುದರಿಂದ ಮುಂದಿನ ಕ್ಷಣವು ಜ್ಞಾನದ ನಾಶಕ್ಷಣ. ಈಗ ಸ್ವಯಂ ಜ್ಞಾನವೇ ನಾಶವಾಗುವ ಪ್ರಯುಕ್ತ ಅದು ಮತ್ತೆ ಯಾವುದಕ್ಕೂ ನಾಶಕವಾಗಲಾರದು. ಹೀಗೆ ಜ್ಞಾನಅಜ್ಞಾನಗಳಿಗೆ ವಧ್ಯಘಾತುಕಭಾವವನ್ನು ಒಪ್ಪುವುದೇ ಸರಿಯಲ್ಲ.

**ಭಾವವಿಲಾಸಿನೀ** – ತದೈವ ಸ್ಥಿತಿದಶಾಯಾಮೇವ । ತಯೋಃ ಉಪಾದಾನೋ-ಪಾದೇಯಯೋಃ ॥ ೪೦೯ ॥

ಅನ್ಯೋನ್ಯಮಸಹಿಷ್ಣುತ್ವರೂಪವೈರಾಭಿದೇ ಪುರಾ ।
ವಿರೋಧೇ ಸತಿ ಸಿಂಹೋಽಪಿ ಗಜಂ ಹಂತಿ ನಚಾನ್ಯಥಾ ।
ನ ಹಿ ಸ ಸ್ವಶಿಶೂನ್ ಹಂತಿ ನಾಪಿ ಹಂತಿ ಸಹೋದರಾನ್ ॥ ೪೧೦ ॥

**ಅರ್ಥ-** ಪುರಾ= ಮೊದಲು, ಅನ್ಯೋನ್ಯಂ= ಪರಸ್ಪರವಾಗಿ, ಅಸಹಿಷ್ಣುತ್ವರೂಪ ವೈರಾಭಿದೇ= ಅಸಹಿಷ್ಣುತ್ವವೆಂಬ ವೈರವೆಂದು ಹೆಸರುಳ್ಳ, ವಿರೋಧೇ ಸತಿ= ವಿರೋಧವಿರಲು, ಸಿಂಹೋಽಪಿ= ಸಿಂಹವೂ ಕೂಡ, ಗಜಂ= ಆನೆಯನ್ನು, ಹಂತಿ= ಕೊಲ್ಲುತ್ತದೆ, ಅನ್ಯಥಾ= ಈ ವೈರವಿರದಿದ್ದರೆ, ನ (ಹಂತಿ)= ಕೊಲ್ಲುವುದಿಲ್ಲ, ಸಃ= ಆ ಸಿಂಹವು, ಸ್ವಶಿಶೂನ್= ತನ್ನ ಮರಿಗಳನ್ನು, ನ ಹಂತಿ ಹಿ= ಕೊಲ್ಲುವುದಿಲ್ಲವಷ್ಟೇ? ಸಹೋದರಾನ್ ಅಪಿ= ಒಡಹುಟ್ಟಿದವರನ್ನೂ ಕೂಡ, ನ ಹಂತಿ= ಕೊಲ್ಲುವುದಿಲ್ಲ.

**ಅನುವಾದ** - ನಾಶ್ಯ-ನಾಶಕಭಾವಕ್ಕೆ ಪ್ರಯೋಜಕವಾದ ವಿರೋಧವು ಬೇರೆಯದ್ದೇ ರೀತಿಯಲ್ಲಿದೆ. ಪ್ರಕೃತ ಜ್ಞಾನ-ಅಜ್ಞಾನಗಳಿಗೆ ಉಪಾದಾನ ಉಪಾದೇಯಭಾವವನ್ನು ಒಪ್ಪಿರುವುದರಿಂದ ಅವೆರಡಕ್ಕೂ ಐಕ್ಯವೇ ಇದೆ. ಆದುದರಿಂದ ಇವುಗಳಲ್ಲಿ ವಿರೋಧವೇ ಇಲ್ಲ. ಹೀಗಾಗಿ ಇವುಗಳಿಗೆ ನಾಶ್ಯ-ನಾಶಕಭಾವವನ್ನು ಒಪ್ಪಲು ಸಾಧ್ಯವಿಲ್ಲ ಎಂದು ಈ ಶ್ಲೋಕದಲ್ಲಿ ವಿವರಿಸಲಾಗಿದೆ. ನಾಶ್ಯ-ನಾಶಕ ಭಾವಕ್ಕೆ ಪ್ರಯೋಜಕವಾದುದು ವಿರೋಧ ಎಂದರೆ ವೈರ. ವೈರವೆಂದರೆ ಒಬ್ಬರನ್ನೊಬ್ಬರು ಸಹಿಸದಿರುವಿಕೆ. ಅಸಹಿಷ್ಣುತೆ ಎಂಬ ವಿರೋಧ ಇದ್ದಾಗ ಮಾತ್ರ ಆನೆಯನ್ನು ಸಿಂಹವು ಕೊಲ್ಲುತ್ತದೆ. ಆದರೆ ತನ್ನ ಮರಿಗಳೊಟ್ಟಿಗೆ ವಿರೋಧ ಎಂದರೆ ವೈರವಿಲ್ಲ. ಆದುದರಿಂದ ಸಿಂಹವು ತನ್ನ ಮರಿಗಳನ್ನು ಕೊಲ್ಲುವುದಿಲ್ಲ. ಒಡಹುಟ್ಟಿದ ಬೇರೆ ಸಿಂಹಗಳನ್ನು ಕೆಲವು ಬಾರಿ ಕೊಲ್ಲಬಹುದು. ಅದು ಮತ್ತೊಂದು ಹೆಣ್ಣು ಸಿಂಹದ ಸಂಗಮ ವಿಷಯದಲ್ಲಿ ಅಥವಾ ಬೇಟೆಯ ವಿಷಯದಲ್ಲಿ ಅಸಹಿಷ್ಣುತೆ ಉಂಟಾದಾಗ ಮಾತ್ರ. ಈ ವೈರವಿಲ್ಲದೇ ನಾಶ್ಯ-ನಾಶಕಭಾವವಿರುವುದೇ ಇಲ್ಲ.

**ಭಾವವಿಲಾಸಿನೀ–** ಕಿಂಚ ವಿಚಾರ್ಯಮಾಣೇ ಸರ್ವತ್ರಲೋಕೇ ನಾಶ್ಯನಾಶಕಭಾವ-ಪ್ರಯೋಜಕಂ ವಿರೋಧಾಂತರಮಸ್ತಿ । ಜ್ಞಾನಾಜ್ಞಾನೇ ತೂಪಾದಾನೋಪಾದೇಯ-ಭಾವೇನೈಕತಾಮಾಪನ್ನೇ ವಿರೋಧ- ವಾರ್ತಾಮೇವ ನ ಸಹೇತೇ । ಅತೋ ನಾನಯೋರ್ವಿನಾಶ್ಯವಿನಾಶಕಭಾವ ಇತ್ಯಾಹ – **ಅನ್ಯೋನ್ಯಮಿತಿ** ॥ ಸಃ ಸಿಂಹಃ । ಶಿಶ್ವಾದಿಷು ಅಸಹಿಷ್ಣುತ್ವಾಭಾವಾತ್ । ವಿರೋಧಾಂತರಮನಪೇಕ್ಷ್ಯೈವ ನಾಶಕತ್ವೇ ತಾನಾಪಿ ನಾಶಯೇದಿತಿ ಭಾವಃ॥೪೧೦॥

**ಸಮಯೋಽಸ್ತು ವಿರೋಧೋಽಯಂ ನೀಚಸ್ಯೋಚ್ಚೈಃ ಸಹಾಸ್ಥಿತಿಃ ।**
**ಹಂತುರ್ಬಲಾದೇವ ಪರಂ ನೋ ಚೇನ್ನೀಚಃ ಪಲಾಯತೇ ॥ ೪೧೧ ॥**

**ಅರ್ಥ-** ಅಯಂ= ಈ ಹಿಂದೆ ಹೇಳಿದ, ವಿರೋಧಃ ತು= ಅಸಹಿಷ್ಣುತೆ ರೂಪವಾದ ವಿರೋಧವು, ಸಮಯೋಃ= ಸಮಬಲರಾದ, ಮಲ್ಲ-ಪ್ರತಿಮಲ್ಲ, ಸಿಂಹ-ಆನೆ

ಮೊದಲಾದವುಗಳಲ್ಲಿ, ನೀಚಸ್ಯ= ಕಡಿಮೆ ಬಲವುಳ್ಳವನಿಗೆ, ಉಚ್ಚೈಃ ಸಹ= ಹೆಚ್ಚು ಬಲವುಳ್ಳವರೊಟ್ಟಿಗೆ, ಅಸ್ಥಿತಿಃ= ಇಲ್ಲದಿರುವಿಕೆ (ಸಹ ಅನಮಸ್ಥಾನ ರೂಪವಾದ) ವಿರೋಧಃ= ವಿರೋಧವು. ಪರಂ= ಆದರೆ ಸಂಹಾರ ಕಾಲದಲ್ಲಿ, ಹಂತುಃ= ಕೊಲ್ಲುವವನ, ಬಲಾದೇವ= ಬಲದಿಂದಲೇ (ಒಟ್ಟಿಗೆ ಇರುವಿಕೆಯು). ನೋ ಚೇತ್= ಬಲಾತ್ಕಾರವಿಲ್ಲದಿದ್ದರೆ, ನೀಚಃ= ಕಡಿಮೆ ಬಲವುಳ್ಳವನು, ಪಲಾಯತೇ= ಓಡಿ ಹೋಗುತ್ತಾನೆ.

**ಅನುವಾದ** - ಹಿಂದೆ ಪರಸ್ಪರ ಸಹಿಸದಿರುವಿಕೆ ಎಂಬ ವಿರೋಧವನ್ನು ಹೇಳಿದ್ದಾರೆ. ಇದು ಸಮಬಲರಲ್ಲಿ ಮಾತ್ರ. ಅಂದರೆ ಆನೆ-ಸಿಂಹ, ಮಲ್ಲ-ಪ್ರತಿಮಲ್ಲರಲ್ಲಿ ಈ ವಿರೋಧವಿರುತ್ತದೆ. ಆದರೆ ಉಚ್ಚ-ನೀಚರಲ್ಲಿ ಅಂದರೆ ಕಡಿಮೆಶಕ್ತಿ ಮತ್ತು ಹೆಚ್ಚು ಶಕ್ತಿ ಉಳ್ಳವರಲ್ಲಿ ಸಹಾನವಸ್ಥಾನ ಅಂದರೆ ಒಟ್ಟಿಗೆ ಇರದಿರುವಿಕೆ ಎಂಬ ವಿರೋಧವನ್ನು ಹೇಳಬೇಕು. ಆದರೂ ಸಂಹಾರ ಕಾಲದಲ್ಲಿ ಒಟ್ಟಿಗೆ ಇರಲೇಬೇಕು. ಇದು ಕೊಲ್ಲುವವನು ಬಲಾತ್ಕಾರದಿಂದ ತನ್ನ ಸ್ಥಳದಲ್ಲಿ ಇರಿಸಿಕೊಂಡಿರುವುದರಿಂದ. ಹೀಗಾಗಿ ಇದು ಔಪಾಧಿಕ. ಕೊಲ್ಲುವುದಕ್ಕಿಂತ ಮೊದಲು ಜಿಂಕೆ-ಸಿಂಹಗಳಿಗೆ ಸಹಾನವಸ್ಥಾನ ರೂಪ ವಿರೋಧವು ಸಹಜವಾಗಿಯೇ ಇದೆ. ಕೊಲ್ಲುವ ಕಾಲದಲ್ಲಿ ಸಹಾವಸ್ಥಾನವು ಬಲಾತ್ಕಾರದಿಂದ ಉಂಟಾಗುತ್ತದೆ ಎಂದು ಒಪ್ಪಲೇಬೇಕು. ಬಲಾತ್ಕಾರವಿಲ್ಲದಿದ್ದರೆ, ಕಡಿಮೆ ಬಲವುಳ್ಳ ಜಿಂಕೆ ಮೊದಲಾದವುಗಳು ಓಡಿ ಹೋಗುತ್ತವೆ. ಸಹಾವಸ್ಥಾನವಿರುವುದೇ ಇಲ್ಲ.

**ಭಾವವಿಲಾಸಿನೀ**– ವಿರೋಧಾಂತರಮಪಿ ದರ್ಶಯತಿ ।। **ಸಮಯೋರಿತಿ** ।। ಸಮಯೋಃ ಸಿಂಹಗಜ ಮಲ್ಲಪ್ರತಿಮಲ್ಲಾದ್ಯಯೋಃ । ನೀಚೋಚ್ಚಯೋರ್ಭೇಕಮಂಡೂಕಯೋಃ ಹರಿಣೀ ಹರ್ಯಕ್ಷಾದ್ಯಯೋಶ್ಚ । ಪ್ರಾಕ್ಸಹಾನವಸ್ಥಾನಮೇವ ವಿರೋಧಃ । ವಧಕಾಲೇ ಸಹಾವಸ್ಥಾನಂ ತ್ವೌಪಾಧಿಕಮಿತ್ಯಾಹ – **ಹಂತುರಿತಿ** ।। **ನೋ ಚೇತ್** ಬಲಾತ್ಕಾರೋ ನಚೇತ್ ।। ೪೧೧ ।।

ಜಲಾಗ್ನ್ಯೋರ್ದೀಪತಮಸೋಸ್ತದ್ಗದಾಗದಯೋರಪಿ ।
ಮಧ್ಯೇ ವಧ್ಯಸ್ಯ ನ ಸಹಸ್ಥಾನಂ ತತ್ತತ್ಸ್ವಭಾವತಃ ।। ೪೧೨ ।।

**ಅರ್ಥ** - ಜಲಾಗ್ನ್ಯೋಃ= ನೀರು ಮತ್ತು ಬೆಂಕಿ ಇವುಗಳ ದೀಪತಮಸೋಃ= ದೀಪ ಮತ್ತು ಕತ್ತಲೆ ಇವುಗಳ ಗದಾಗದಯೋ ರಪಿ= ರೋಗ ಮತ್ತು ಔಷಧ ಇವುಗಳ ಮಧ್ಯೆ-ಮಧ್ಯದಲ್ಲಿ ತತ್ತತ್ಸ್ವಭಾವತಃ= ನಾಶವಾಗುವ ವಸ್ತುವಿನ ಸ್ವಭಾವಕ್ಕೆ ಅನುಗುಣವಾಗಿ, ವಧ್ಯಸ್ಯ= ನಾಶ್ಯವಸ್ತುವಿಗೆ (ಬೆಂಕಿ, ಕತ್ತಲೆ ಮತ್ತು ರೋಗ), ನ ಸಹ ಸ್ಥಾನಂ= ನಾಶಕ ವಸ್ತುವಿನ ಜೊತೆಗೆ ಇರುವಿಕೆ (ಸಹಾವಸ್ಥಾನ) ಇರುವುದಿಲ್ಲ.

**ಅನುವಾದ** - ನೀಚೋಚ್ಚಗಳಲ್ಲಿ ನಾಶಕವಾದುದು ಪ್ರಬಲವಾದುದರಿಂದ ಅದು ನಾಶ್ಯದ ಜೊತೆಗೆ ಇರಬಹುದು. ಆದರೆ, ನಾಶ್ಯವು ನಾಶಕದ ಜೊತೆಗೆ ಇರುವುದೇ ಇಲ್ಲ.

ಆದುದರಿಂದ ಸಹ ಅನವಸ್ಥಾನ ರೂಪ ವಿರೋಧವಿದ್ದೇ ಇದೆ. ನೀರು- ನಾಶಕ, ಬೆಂಕಿ- ನಾಶ್ಯ, ದೀಪ- ನಾಶಕ, ಕತ್ತಲೆ - ನಾಶ್ಯ, ಔಷಧ - ನಾಶಕ, ರೋಗ - ನಾಶ್ಯ. ಇವುಗಳಲ್ಲಿ ನಾಶ್ಯಗಳಾದ ಬೆಂಕಿ, ಕತ್ತಲೆ ಮತ್ತು ರೋಗ ಇವುಗಳು ನಾಶಕಗಳಾದ ನೀರು, ದೀಪ ಮತ್ತು ಔಷಧಗಳ ಜೊತೆಗೆ ಇರಲಾರವು. ಇದಕ್ಕೆ ಕಾರಣ ಆ ಆ ವಸ್ತುಗಳ ಸ್ವಭಾವ.

ವಿರುದ್ಧಗುಣವತ್ತ್ವೇನ ವಧ್ಯಘಾತಕತಾ ಕ್ವಚಿತ್ ॥ ೪೧೩ ॥

**ಅರ್ಥ**- ಕ್ವಚಿತ್= ಕೆಲವು ಕಡೆ (ಬೆಂಕಿ ಕಟ್ಟಿಗೆ ಇವುಗಳಲ್ಲಿ) ವಿರುದ್ಧಗುಣವತ್ತ್ವೇನ= ವಿರುದ್ಧ ಗುಣಗಳಿರುವ ಪ್ರಯುಕ್ತ, ವಧ್ಯಘಾತಕತಾ= ನಾಶ್ಯನಾಶಕಭಾವವು (ಅಸ್ತಿ= ಇರುತ್ತದೆ).

**ಅನುವಾದ** - ದಾಹಕದಲ್ಲಿರುವ ಗುಣ ಉಷ್ಣ ಸ್ಪರ್ಶ. ಯಾವುದೇ ವಸ್ತುಸುಡುತ್ತದೆ ಎಂದಾದರೆ ಅದರಲ್ಲಿ ಉಷ್ಣ ಸ್ಪರ್ಶವಿರಬೇಕು. ಆದುದರಿಂದ ಉಷ್ಣಸ್ಪರ್ಶವು ದಾಹಕತ್ವಕ್ಕೆ ಪ್ರಯೋಜಕವೂ ಆಗಿದೆ. ಈ ಗುಣವಿರುವುದರಿಂದಲೇ ಬೆಂಕಿ ಕಟ್ಟಿಗೆಯನ್ನು ಸುಡುತ್ತದೆ. ದಾಹ್ಯವಾದ ಕಟ್ಟಿಗೆಯಲ್ಲಿ ಮೃದು ಪದಾರ್ಥತ್ವ ಎಂಬ ಧರ್ಮವಿರುವುದರಿಂದ ಅದು ಸುಟ್ಟು ಹೋಗುತ್ತದೆ. ಹೀಗಾಗಿ ಕಟ್ಟಿಗೆ ಮತ್ತು ಬೆಂಕಿಗಳಿಗೆ ಅಸಹಿಷ್ಣುತೆ ರೂಪವಾದ ವಿರೋಧವಾಗಲೀ, ಸಹಾನವಸ್ಥಾನ ರೂಪವಾದ ವಿರೋಧವಾಗಲೀ ಇಲ್ಲದಿದ್ದರೂ ಅವುಗಳಲ್ಲಿ ನಾಶ್ಯ-ನಾಶಕಭಾವ ಹೇಗೆ ಎಂಬ ಆಕ್ಷೇಪಕ್ಕೆ ಅವಕಾಶವಿಲ್ಲ.

**ಭಾವವಿಲಾಸಿನೀ**– ತತ್ ತಸ್ಮಾತ್ । ನೀಚೋಚ್ಚಾದಿಷು ನಾಶಕಸ್ಯ ಪ್ರಬಲತಯಾ ಸಹಾವಸ್ಥಾನ-ಸಂಭವೇಽಪಿ ನಾಶ್ಯಾನಾಂ ಸಹಾನವಸ್ಥಿತಿರೇವ ವಿರೋಧ ಇತಿ ಭಾವಃ । ತತ್ತತ್ ಸ್ವಭಾವತಃ ನಾಶ್ಯವಸ್ತುಸ್ವಭಾವತಃ ॥ ಕ್ವಚಿತ್ ವಹ್ನಿಕಾಷ್ಠಾದೌ ದಾಹಕತ್ವೋಪಯೋಗ್ಯುಷ್ಣಸ್ಪರ್ಶವತ್ತ್ವಾತ್ ವಹ್ನಿರ್ದಹತಿ । ದಾಹ್ಯತ್ವೋಪಯೋಗಿಮೃದುಲಪದಾರ್ಥತ್ವಾ ದ್ದಾ(ದು)ರ್ವಾದಿರ್ದಹ್ಯತ ಇತಿ ಭಾವಃ ॥ ೪೧೩ ॥

ವಿಚಾರ್ಯಮಾಣೇ ಸರ್ವತ್ರಾಪ್ಯೇಕೈಕಸ್ಮಾತ್ ಪ್ರಯೋಜಕಾತ್ ।
ವಧ್ಯಘಾತಕತಾ ದೃಷ್ಟಾ ತವ ಜ್ಞಾನೇ ನ ಕಶ್ಚನ ॥ ೪೧೪ ॥

**ಅರ್ಥ**- ಸರ್ವತ್ರ= ನಾಶ್ಯನಾಶಕಭಾವವಿರುವ ಕಡೆಗಳಲ್ಲಿ, ವಿಚಾರ್ಯಮಾಣೇ= ವಿಚಾರ ಮಾಡುತ್ತಿರಲು, ಏಕೈಕಸ್ಮಾತ್= ಒಂದೊಂದು ಕಡೆ ಒಂದೊಂದು, ಪ್ರಯೋಜಕಾತ್= ಪ್ರಯೋಜಕದಿಂದ, ವಧ್ಯಘಾತಕತಾ= ನಾಶ್ಯನಾಶಕಭಾವವು, ದೃಷ್ಟಾ= ಕಂಡಿದೆ (ಆದರೆ), ತವ= ನಿನ್ನ ಮತದ, ಜ್ಞಾನೇ= ಜ್ಞಾನದಲ್ಲಿ, ಕಶ್ಚನ= ಯಾವುದೇ ರೀತಿಯ ವಿರೋಧವು, ನ= ಇರುವುದಿಲ್ಲ.

**ಅನುವಾದ** - ಯಾವ ಯಾವ ವಸ್ತುಗಳಿಗೆ ಅಥವಾ ವ್ಯಕ್ತಿಗಳಿಗೆ ನಾಶ್ಯ-ನಾಶಕ ಭಾವವಿದೆಯೋ ಅಲ್ಲೆಲ್ಲಾ ವಿಚಾರ ಮಾಡಿದಾಗ ಯಾವುದಾದರೂ ಒಂದು ವಿರೋಧವಿದ್ದೇ ಇದೆ. ಒಂದೊಂದು ಕಡೆ ಒಂದೊಂದು ರೀತಿಯ ವಿರೋಧವು ನಾಶ್ಯನಾಶಕ ಭಾವಕ್ಕೆ ಪ್ರಯೋಜಕವಾಗಿದೆ. ಆದರೆ ಜ್ಞಾನ ಅಜ್ಞಾನಗಳಿಗೆ ಉಪಾದೇಯ-ಉಪಾದಾನ ಭಾವವನ್ನು ನಿಮ್ಮ ಮತದಲ್ಲಿ ಹೇಳುವುದಾದರೆ, ಜ್ಞಾನೋತ್ಪತ್ತಿ ಕಾಲದಲ್ಲೇ ಅಜ್ಞಾನದೊಂದಿಗೆ ಇರುವಿಕೆ ಅನಿವಾರ್ಯ ವಾದುದರಿಂದ ಯಾವುದೇ ರೀತಿಯ ವಿರೋಧವನ್ನು ಹೇಳುವುದು ಯುಕ್ತವಲ್ಲ. ಹೀಗಾಗಿ ಜ್ಞಾನದಿಂದ ಅಜ್ಞಾನವು ನಾಶ ಹೊಂದುತ್ತದೆ ಎಂಬ ವಾದವು ಸರಿಯಲ್ಲ.

**ಭಾವವಿಲಾಸಿನೀ**– ಉಪಾದೇಯಸ್ಯ ಜ್ಞಾನಸ್ಯ ಸ್ವೋತ್ಪತ್ತಿದಶಾಯಾಮೇವೋಪಾದಾನಾ-ಜ್ಞಾನಸಹಾವಸ್ಥಾನಾವಶ್ಯಂಭಾವೇನ ನ ಕೋऽಪಿ ವಿರೋಧ ಇತ್ಯಾಹ –**ತವ ಜ್ಞಾನ ಇತಿ** ।।೪೧೪।।

ಉಪಾದಾನಮುಪದೇಯವಿರೋಧಿ ಸ್ಯಾತ್ ಕಥಂ ವದ ।
ಅತೋ ದ್ವೇಧಾಪಿ ನ ಜ್ಞಾನಂ ಸ್ವಯಮೇವ ಸ್ವಘಾತಕಮ್ ।
ಜ್ಞಾನಾವಿನಾಶ್ಯಂ ತಜ್‌ಜ್ಞಾನಂ ಕೇನೋಪಾಯೇನ ತನ್ಮೃಷಾ ।। ೪೧೫ ।।

**ಅರ್ಥ**- ಉಪಾದಾನಂ= ಉಪಾದಾನವು, ಉಪಾದೇಯವಿರೋಧಿ= ಉಪಾದೇಯ ವಿರೋಧಿಯು, ಕಥಂ - ಹೇಗೆ ತಾನೇ, ಸ್ಯಾತ್= ಆದೀತು, ವದ= ಹೇಳು, ಅತಃ= ಆದುದರಿಂದ, ದ್ವೇಧಾಪಿ= ಎರಡು ರೀತಿಯಿಂದಲೂ ಕೂಡ, ಜ್ಞಾನಂ= ಜ್ಞಾನವು, ಸ್ವಯಮೇವ= ತಾನಾಗಿಯೇ, ಸ್ವಘಾತಕಂ= ತನಗೇ ನಾಶಕವು, ನ ಭವತಿ= ಆಗುವುದಿಲ್ಲ ತತ್= ಆದುದರಿಂದ, ಜ್ಞಾನಾವಿನಾಶ್ಯಂ= ಜ್ಞಾನದಿಂದ ನಾಶವಾಗದಿರುವ ಜ್ಞಾನಂ= ಜ್ಞಾನವು, ಕೇನ ಉಪಾಯೇನ= ಯಾವ ರೀತಿಯಿಂದ, ಮೃಷಾ= ಸುಳ್ಳು (ಭವತಿ)= ಆಗುತ್ತದೆ?

**ಅನುವಾದ** - ಜ್ಞಾನವು ಜ್ಞಾನದಿಂದಲೇ (ತನ್ನಿಂದಲೇ) ನಾಶವಾಗುತ್ತದೆ ಎಂಬ ಅದ್ವೈತ ಸಿದ್ಧಾಂತದ ನಿರಾಕರಣೆಯನ್ನು ಇಲ್ಲಿಗೆ ಮುಗಿಸುತ್ತಿದ್ದಾರೆ. ನೇರವಾಗಿ ಜ್ಞಾನವು ಜ್ಞಾನನಾಶಕವಾಗಲಿಕ್ಕೂ ಸಾಧ್ಯವಿಲ್ಲ. ಜ್ಞಾನಕ್ಕೆ ಅಜ್ಞಾನವು ಉಪಾದಾನವಾದುದರಿಂದ ಜ್ಞಾನದಿಂದ ಅಜ್ಞಾನವು ನಾಶವಾದಾಗ ಜ್ಞಾನವೂ ನಾಶವಾಗುವ ಪ್ರಯುಕ್ತ ಜ್ಞಾನವು ಜ್ಞಾನನಾಶಕ ಎಂಬ ಎರಡನೆಯ ಮತವೂ ಸರಿಯಲ್ಲ. ಉಪಾದಾನ-ಉಪಾದೇಯಗಳಿಗೆ ಅಭೇದವಿರುವುದರಿಂದ, ಅವುಗಳಿಗೆ ಪರಸ್ಪರ ವಿರೋಧವಿರಲು ಸಾಧ್ಯವಿಲ್ಲ. ಹೀಗಾಗಿ ಜ್ಞಾನ-ಅಜ್ಞಾನಗಳಿಗೆ ಉಪಾದೇಯ ಉಪಾದಾನಭಾವವನ್ನು ಒಪ್ಪಿದರೆ, ವಿರೋಧವನ್ನು ಹೇಳಲು ಬಾರದ ಕಾರಣ, ಅಜ್ಞಾನನಾಶದ್ವಾರಾ ಜ್ಞಾನವು, ಜ್ಞಾನದಿಂದ ನಾಶವಾಗುತ್ತದೆ

ಎಂಬ ಮತ ಸರಿಯಾದುದಲ್ಲ. ಹೀಗೆ ಎರಡೂ ರೀತಿಯಿಂದ ಜ್ಞಾನವು ಸ್ವನಾಶಕವಲ್ಲ. ಅದ್ವೈತ ಸಿದ್ಧಾಂತದಲ್ಲಿ ಯಾವುದು ಮಿಥ್ಯೆಯೋ ಅದು ಜ್ಞಾನದಿಂದ ನಾಶವಾಗಲೇಬೇಕು. ಜ್ಞಾನ ನಾಶ್ಯವಲ್ಲದ್ದು ಸುಳ್ಳಲ್ಲ. ಅದು ಸತ್ಯವೇ. ಆದುದರಿಂದ ಜ್ಞಾನವು ಜ್ಞಾನನಾಶ್ಯವಾಗದ ಪ್ರಯುಕ್ತ ಅದನ್ನು ಮಿಥ್ಯಾ ಎಂದು ಹೇಗೆ ಸಾಧಿಸೋಣ? ಜ್ಞಾನವನ್ನು ಉಪಾಯವಿಲ್ಲದೇ ಸತ್ಯ ಎಂದೇ ಒಪ್ಪಬೇಕಾದ್ದರಿಂದ ಅದ್ವೈತ ಮತದಲ್ಲಿ ಅಪಸಿದ್ಧಾಂತ ದೋಷ ಬರುತ್ತದೆ ಎಂದು ಅಭಿಪ್ರಾಯ.

**ಭಾವವಿಲಾಸಿನೀ**– ದ್ವೇಧಾಪಿ ಅಜ್ಞಾನನಿವೃತ್ತಿದ್ವಾರಾ ಸಾಕ್ಷಾಚ್ಚ ಬಂಧಭಗವತ್ ಜ್ಞಾನಯೋರಪಿ ಗದಾಗದಯೋರಿವ ಸಹಾನವಸ್ಥಾನಸ್ವಭಾವತ್ವಸ್ಯ ಸದ್ಭಾವಾತ್ ಸ್ವಜ್ಞಾತರಿ ಭಗವತೋ ಬಂಧಾಸಹಿಷ್ಣುತ್ವಸದ್ಭಾವಾತ್ ವಿಷಯದ್ವಾರಾ ಬಂಧಾಸಹಿಷ್ಣುತ್ವ ಸಂಪಾದಕತ್ವಾದ್ವಾ ಮನ್ಮತೇ ಜ್ಞಾನಸ್ಯ ಬಂಧವಿರೋಧಿತ್ವಮ್ । ತವ ತು ಜ್ಞಾನಾಜ್ಞಾನಯೋರೈಕ್ಯಾತ್ ಜ್ಞಾನವಿಷಯಸ್ಯ ಬ್ರಹ್ಮಣೋನಿರ್ಗುಣತ್ವೇನಾಜ್ಞಾನಾಸಹಿಷ್ಣುತ್ವ ರೂಪಗುಣ ಸಂಪಾದಕತ್ವಾಯೋಗಾತ್ ವಿರೋಧ್ಯೈಕಮೂಲವ್ಯಾಪ್ತಿಬಲೇನ್ನೈವ ಜ್ಞಾನಸ್ಯಾಜ್ಞಾನನಿವರ್ತಕತ್ವಾಂಗೀಕಾರಾತ್ ಆವರಣತ್ವೇನಾಂಗೀಕೃತಾಜ್ಞಾನೇ ಪಟಾದ್ಯಾವರಣಸ್ಯೇವ ಜ್ಞಾನೋತ್ಪತ್ತಿ ಪ್ರತಿಬಂಧಕತ್ವೇನ್ನೈವ ವಿರೋಧಸ್ಯ ವಕ್ತವ್ಯತ್ವಾಚ್ಚ ನ ಕಥಂಚಿದಪಿ ಸಮಾಧಾನಮಿತಿ ಭಾವಃ । ತತಃ ತಸ್ಮಾತ್ ।।೪೧೫।।

ಕಿಂಚ ನಶ್ಯಜ್ಜನಂ ಪಶ್ಯ ಬೋಧೋಚ್ಛೇದಃ ಪುರೈವ ಹಿ ।। ೪೧೬ ।।

**ಅರ್ಥ**– ಕಿಂಚ= ಮತ್ತೂ ಕೂಡ, ನಶ್ಯಜ್ಜನಂ= ಮರಣ ಹೊಂದುತ್ತಿರುವ ಜನರನ್ನು, ಪಶ್ಯ= ನೋಡು, ಪುರಾ ಏವ= ಮರಣಕ್ಕೂ ಮೊದಲೇ, ಬೋಧೋಚ್ಛೇದಃ= ಜ್ಞಾನದ ನಾಶವು (ಭವತಿ) ಹಿ= ಆಗಿರುತ್ತದೆಯಷ್ಟೇ!

**ಅನುವಾದ** - ಎಲ್ಲವೂ ಜ್ಞಾನದಿಂದಲೇ ನಾಶವಾಗುತ್ತದೆ. ಆದುದರಿಂದ ಅವೆಲ್ಲವೂ ಮಿಥ್ಯಾ ಎಂದು ಸಾಧಿಸುವ ಅದ್ವೈತ ಮತದ ನಿರಾಕರಣೆ ಇಲ್ಲಿದೆ. ಜ್ಞಾನಿಗಳ ದೇಹದಲ್ಲಿಯೇ ಈ ನಿಯಮಕ್ಕೆ ಭಂಗವಿದೆ. ಸಾಯುತ್ತಿರುವ ಜನರಲ್ಲಿ ಸಾವಿಗಿಂತ ಮೊದಲೇ ಜ್ಞಾನ ನಾಶವಾಗಿರುತ್ತದೆ. ಜ್ಞಾನದಿಂದ ಎಲ್ಲದರ ನಾಶ ಎಂದಾದರೆ, ಮೊದಲೇ ದೇಹ ನಾಶವಾಗಿರಬೇಕಿತ್ತು. ದೇಹ ನಾಶವಾಗಿಲ್ಲ. ಜ್ಞಾನನಾಶದ ಅನಂತರವೇ ದೇಹನಾಶವಾಗುತ್ತದೆ. ಆದುದರಿಂದ ಸರ್ವಕ್ಕೂ ಜ್ಞಾನನಾಶ್ಯತ್ವವನ್ನು ಹೇಳುವುದು ಸರಿಯಲ್ಲ.

**ಭಾವವಿಲಾಸಿನೀ**– ಅಪಿ ಚ ಜ್ಞಾನಿನೋ ದೇಹ ಏವ ಜ್ಞಾನವಿನಾಶ್ಯತ್ವಂ ವಿಚಾರ್ಯಮಾಣೇ ನ ದೃಶ್ಯತೇ ಕಿಮುತಾನ್ಯಯತ್ರೇತ್ಯಾಹ – **ಕಿಂಚೇತಿ** ।। ಪುರಾ ಮರಣಾತ್ ಪೂರ್ವಮ್ ।।೪೧೬।।

ಶುನಾ ಪರಶುನಾ ವನ್ಯಪಶುನಾ ವಾ ತನುಕ್ಷಯಃ ।
ಜ್ಞಾನಾವಿನಾಶ್ಯೋ ದೇಹೋಯಂ ಕೇನೋಪಾಯೇನ ತೇ ಮೃಷಾ ।। ೪೧೭ ।।

**ಅರ್ಥ-** ಶುನಾ= ನಾಯಿಯು ತಿನ್ನುವುದರಿಂದ, ಪರಶುನಾ= ಕೊಡಲಿಯಿಂದ ಕತ್ತರಿಸಿದ ಕಟ್ಟಿಗೆಯಿಂದ ಸುಡುವುದರಿಂದ, ವಾ= ಅಥವಾ, ವನ್ಯಪಶುನಾ= ಕಾಡು ಪ್ರಾಣಿಗಳಿಂದ, ತನುಕ್ಷಯಃ= ದೇಹದ ನಾಶವು (ಆಗುತ್ತದೆ), ಅಯಂ= ಈ, ಜ್ಞಾನಾವಿನಾಶ್ಯಃ= ಜ್ಞಾನದಿಂದ ನಾಶವಾಗದ, ದೇಹಃ= ಶರೀರವು, ಕೇನ ಉಪಾಯೇನ= ಯಾವ ರೀತಿಯಿಂದ, ತೇ= ನಿನ್ನ ಮತದಂತೆ, ಮೃಷಾ= ಸುಳ್ಳು!

**ಅನುವಾದ -** ದೇಹವು ಜ್ಞಾನದಿಂದ ನಶಿಸುವುದಿಲ್ಲ, ಆದುದರಿಂದ ಅದು ಸುಳ್ಳಲ್ಲ ಎಂದು ಈ ಶ್ಲೋಕದಲ್ಲಿ ಸಮರ್ಥಿಸಲಾಗಿದೆ. ನಮ್ಮನ್ನು ನೋಡಿಕೊಳ್ಳುವ ವಾರಸುದಾರರು ಇದ್ದರೆ, ಅಂತಹವರು ಕಟ್ಟಿಗೆಯಿಂದ ಹಚ್ಚಿದ ಬೆಂಕಿಯಲ್ಲಿ ದೇಹವು ಸುಟ್ಟು ನಾಶವಾಗುತ್ತದೆ. ವಾರಸುದಾರರು ಇಲ್ಲದಿದ್ದರೆ, ನಾಯಿ ತಿಂದು ನಾಶವಾಗುತ್ತದೆ. ಇದು ಊರಿನಲ್ಲಿ ವ್ಯವಸ್ಥೆ. ಜ್ಞಾನಿಯು ವಾನಪ್ರಸ್ಥನಾಗಿದ್ದರೆ, ಸತ್ತನಂತರ ಕಾಡು ಪ್ರಾಣಿಗಳು ತಿಂದು ನಾಶವಾಗುತ್ತದೆ. ಹೊರತು ಜ್ಞಾನದಿಂದಲ್ಲ, ಆದುದರಿಂದ ದೇಹವನ್ನು ಮಿಥ್ಯಾ ಎಂದು ಹೇಗೆ ಸಾಧಿಸುವುದು?

**ಭಾವವಿಲಾಸಿನೀ—**ವಿಚಾರಕಾಭಾವೇ ಗ್ರಾಮೇ ಚೇತ್ ಶುನಾಭಕ್ಷಣಾತ್ । ವಿಚಾರಕಸದ್ಭಾವೇ ಪರಶುನಾ ಛಿನ್ನಕಾಷ್ಠಾದಿತೋ ದಾಹಾತ್ । ಉಪಲಕ್ಷಣಂ ಚೈತತ್ । ಮಹಾಯೋಗಿನೋಽಪಿ ಯೋಗಜನಿತಾಗ್ನಿನೈವ ದೇಹದಾಹೋ ನತು ಸಾಕ್ಷಾದಜ್ಞಾನನಾಶಪ್ರನಾಡ್ಯಾ ವಾ ಜ್ಞಾನೇನೈವೇತಿ ದ್ರಷ್ಟವ್ಯಮ್ । ಅರಣ್ಯೇ ಚೇತ್ ಅನ್ಯಪಶುನಾ ವ್ಯಾಘ್ರಾದಿನಾ । ನ ತು ಕ್ಷಯಃ ಉತ್ತಮಣಾನಂತರಂ ಜ್ಞಾನಿದೇಹಕ್ಷಯಃ ॥ ೪೧೭ ॥

ಅಥ ಸ್ವರೂಪಜ್ಞಾನಂ ಚ ಸ್ವಕಾರ್ಯೈಃ ಸಹ ವರ್ತತೇ ।
ಅಖಂಡಾರ್ಥೇ ಪದಶ್ರುತ್ಯಾ ಮಾನಸೀ ಚಾಪರೋಕ್ಷಧೀಃ ॥ ೪೧೮ ॥

ಕ್ಷಣೇ ಕ್ಷಣೇ ಭವತ್ಯೇವ ರಂಡಾಗೀತಶ್ರುತಾವಪಿ ।
ಅವಿದ್ಯಾವರಣಂ ಚಾಸ್ತಿ ದುರ್ಘಟಂ ಘಟಯಂ ತ್ಯಸೌ ॥ ೪೧೯ ॥

ಇತ್ಯಾವೃತಿಶ್ಚ ಸ್ಯಾದೇವೇತ್ಯೌದ್ಧತ್ಯಾದ್ವಕ್ತಿ ಕಶ್ಚನ ।
ತರ್ಹ್ಯಾವರಣತಾಗೋಷ್ಠೀ ವಾರ್ತಾಮಾತ್ರಮಭೂದಿಯಮ್ ॥ ೪೨೦ ॥

**ಅರ್ಥ-** ಅಥ= ಮತ್ತೊಂದು ವಿಚಾರ. ಸ್ವಕಾರ್ಯೈಃ ಸಹ= ತನ್ನ ಕಾರ್ಯಗಳ ಜೊತೆಗೆ ಸ್ವರೂಪ ಜ್ಞಾನಂ, ಚ= ಆತ್ಮಸ್ವರೂಪವಾದ 'ಅಹಂ' ಎಂಬ ಜ್ಞಾನವು, ವರ್ತತೇ= ಇರುತ್ತದೆ, ಅಖಂಡಾರ್ಥಪದ ಶ್ರುತ್ಯಾ= ಅಖಂಡಬ್ರಹ್ಮನನ್ನು ತಿಳಿಸಿಕೊಡುವ, ಉಪನಿಷತ್ ವಾಕ್ಯಗಳ ಕೇಳುವಿಕೆಯಿಂದ ಕ್ಷಣೇಕ್ಷಣೇ ಪ್ರತಿಕ್ಷಣದಲ್ಲಿಯೂ (ಯಾವಾಗಲೂ), ಮಾನಸೀ= ಮನೋವೃತ್ತಿರೂಪವಾದ, ಅಪರೋಕ್ಷಧೀಃ ಚ= ಬ್ರಹ್ಮಾಪರೋಕ್ಷಜ್ಞಾನವೂ ಕೂಡ, ಭವತಿ

ಏವ= ಇದ್ದೇ ಇರುತ್ತದೆ. ರಂಡಾಗೀತಶ್ರುತೌ ಅಪಿ= ಐಕ್ಯಜ್ಞಾನವುಳ್ಳ ರಂಡೆಯು ಹೇಳುವ ಐಕ್ಯಗೀತೆಯ ಶ್ರವಣವಿದ್ದರೂ ಕೂಡ, ಅವಿದ್ಯಾವರಣಂ ಚ= ಅಜ್ಞಾನರೂಪವಾದ ಆವರಣವೂ ಕೂಡ (ಇದ್ದೇ ಇರುತ್ತದೆ), ಅಸೌ ಈ ಅವಿದ್ಯೆಯು ದುರ್ಘಟಂ= ದುರ್ಘಟವಾದುದನ್ನು (ಕೂಡಿಸಲು ಬಾರದ್ದನ್ನು) ಘಟಯತಿ= ಕೂಡಿಸುತ್ತದೆ, ಇತಿ= ಈ ಕಾರಣದಿಂದ, ಆವೃತಿಃ ಚ= ಅಜ್ಞಾನದ ಆವರಣವೂ ಕೂಡ, ಸ್ಯಾತ್= ಇರುತ್ತದೆ, ಇತಿ= ಎಂದು ಕಶ್ಚನ= ಯಾರಾದರೂ ಒಬ್ಬ, ಔದ್ಧತ್ಯಾತ್= ಉದ್ಧಟತನದಿಂದ, ವಕ್ತಿಚೇತ್= ಹೇಳುವವನಾದರೇ, ತರ್ಹಿ= ಆ ಪಕ್ಷದಲ್ಲಿ, ಇಯಂ= ಈ ಆವರಣತಾ= ಆವರಿಸುವಿಕೆಯು, ಗೋಷ್ಠೀವಾರ್ತಾಮಾತ್ರಂ= ಕೇವಲ ಬಾಯಿಮಾತಿನಿಂದ ಹೇಳುವ ವಿಚಾರವು (ಭವೇತ್= ಆದೀತು).

**ಅನುವಾದ** - ಆತ್ಮಸ್ವರೂಪಜ್ಞಾನ 'ಅಹಂ' ಎಂದು. ಅದು ಆತ್ಮನಿಗೆ ಯಾವಾಗಲೂ ಇರುತ್ತದೆ. ಅಖಂಡ ನಿರ್ವಿಶೇಷ ಬ್ರಹ್ಮನನ್ನು ಪ್ರತಿಪಾದಿಸುವ ಉಪನಿಷದ್ವಾಕ್ಯಗಳನ್ನು ಶ್ರವಣ ಮಾಡಿದಾಗ, ಅಂತಃಕರಣಪರಿಣಾಮರೂಪವಾದ ಬ್ರಹ್ಮಾಪರೋಕ್ಷ ಜ್ಞಾನವೂ ಇರುತ್ತದೆ. ಇದರ ಜೊತೆ ಜೊತೆಯಲ್ಲಿ, ಎಷ್ಟೇ ಐಕ್ಯಗಾನಗಳನ್ನು ಕೇಳಿದರೂ ಕೂಡ, ಆವರಣ ರೂಪವಾದ ಅಜ್ಞಾನವೂ ಇರುತ್ತದೆ. ಇದೆಲ್ಲಾ ಹೇಗೆ ಸಾಧ್ಯ? ಆವರಣವಿದ್ದಾಗ, ಸ್ವರೂಪ ಜ್ಞಾನವಾಗಲೀ, ಬ್ರಹ್ಮಾಪರೋಕ್ಷ ಜ್ಞಾನವಾಗಲೀ ಹೇಗೆ ಹುಟ್ಟುತ್ತದೆ ಎಂಬ ಪ್ರಶ್ನೆಗೆ ಅಜ್ಞಾನವು ಅಘಟಿತಘಟನಾ ಚತುರ ಎಂದರೆ, ಯಾವುದು ಯಾವುದು ಕೂಡಲಾರದು ದುರ್ಘಟ ಎನ್ನಿಸುತ್ತದೆಯೋ ಆ ಎಲ್ಲವನ್ನೂ ಹೊಂದಿಸುವುದಕ್ಕಾಗಿಯೇ ಅಜ್ಞಾನವಿರುವುದು ಎಂದು ಹಾರಿಕೆಯ ಉತ್ತರವನ್ನು ಕೆಲವರು ಉದ್ಧಟತನದಿಂದ ಕೊಡಬಹುದು. ಹಾಗೆ ಉತ್ತರಿಸಿದರೆ, ಆಗ ಅಜ್ಞಾನವು ಆವರಣ ಎಂಬ ಮಾತು ಕೇವಲ ಮಾತಷ್ಟೇ ಹೊರತು ಆವರಣದ ಯಾವ ಕಾರ್ಯವೂ ಅಜ್ಞಾನದಿಂದ ಇಲ್ಲದಿರುವ ಪ್ರಯುಕ್ತ ಅಜ್ಞಾನವನ್ನು ಆವರಣ ಎಂದು ವಾಸ್ತವಿಕವಾಗಿ ಹೇಳಲು ಬರುವುದಿಲ್ಲ.

**ಭಾವವಿಲಾಸಿನೀ**–ಕಿಂಚ ಸ್ವರೂಪಜ್ಞಾನಂ ಸ್ವಕಾರ್ಯೈಃ ಸಹ ಸ್ವಭಾವೇನೈವಾಸ್ತಿ । ಮನೋವೃತ್ತಿರೂಪಜ್ಞಾನಂ ಚ ಸ್ವಕಾರಣೇ ಸತಿ ಭವತ್ಯೇವ । ಉಭಯತ್ರಾಪ್ಯಾವರಣರೂಪಮಜ್ಞಾನಂ ಚಾಸ್ತೀತಿ ಪರಸ್ಯ ಮತಂ ತಚ್ಚಾನುಪಪನ್ನಮಿತ್ಯಾಹ – **ಅಥೇತಿ॥** ಅಖಂಡಾರ್ಥಪದಶ್ರುತ್ಯಾ ಅಖಂಡಬ್ರಹ್ಮವಿಷಯಕಪದಾವಲೀಶ್ರವಣೇನ । ಐಕ್ಯಜ್ಞಾನವತ್ಯಾ ರಂಡಯಾ ಕೃತಂ ಗೀತಂ ರಂಡಾಗೀತಮ್ । ಅವಿದ್ಯಾವರಣಮ್ ಅವಿದ್ಯಾರೂಪಮಾವರಣಮ್ । ಚ ಶಬ್ದೇನ ಸ್ವರೂಪರೂಪಂ ಮನೋವೃತ್ತಿರೂಪಂ ಚ ಜ್ಞಾನದ್ವಯಂ ಗೃಹ್ಯತೇ । ಅಸೌ ಅವಿದ್ಯಾ । ಇತಿ ಹೇತೋಃ ॥ ೪೧೮-೪೨೦ ॥

**ಜ್ಞಾನದ್ವಯಮರುಂಧತ್ಯಾ ಸ್ಥಿತಯಾ ಗತಯಾ ಚ ಕಿಮ್ ।**
**ಕುಡ್ಯಾವರಣವದ್ದ್ರಷ್ಟುಃ ಕಿಂ ವ್ಯೋಮಾವರಣಾದ್ಭಯಮ್ ॥ ೪೨೧ ॥**

**ಅರ್ಥ-** ಜ್ಞಾನದ್ವಯಂ= ಸ್ವರೂಪಜ್ಞಾನ ಮತ್ತು ಅಂತಃಕರಣಪರಿಣಾಮರೂಪವಾದ ಜ್ಞಾನ ಈ ಎರಡು ಜ್ಞಾನಗಳನ್ನು, ಅರುಂಧತ್ಯಾ= ತಡೆಯದಿರುವ (ಅವಿದ್ಯೆಯ), ಸ್ಥಿತಯಾ= ಇರುವಿಕೆಯಿಂದ, ಚ= ಮತ್ತು, ಗತಯಾ= ಹೋಗುವಿಕೆಯಿಂದ, ಕಿಂ= ಏನು ಪ್ರಯೋಜನ, ಕುಡ್ಯಾವರಣವತ್= ಗೋಡೆಯ ತಡೆಯಿರುವ ವಸ್ತುವನ್ನು, ದ್ರಷ್ಟುಃ= ನೋಡುವವನಿಗೆ, ವ್ಯೋಮಾವರಣಾತ್= ಆಕಾಶರೂಪ ಆವರಣದಿಂದ, ಕಿಂ ಭಯಂ= ಹೆದರಿಕೆಯೇನು?

**ಅನುವಾದ -** ನೀವು ಹೇಳುವ ಅಜ್ಞಾನವು ಸ್ವರೂಪಜ್ಞಾನವನ್ನೂ ತಡೆಯುವುದಿಲ್ಲ, ಮಾನಸವಾದ ಬ್ರಹ್ಮಾಪರೋಕ್ಷ ಜ್ಞಾನವನ್ನೂ ತಡೆಯುವುದಿಲ್ಲ. ಏಕೆಂದರೆ, ಅಜ್ಞಾನವಿದ್ದರೂ ಈ ಎರಡೂ ಜ್ಞಾನಗಳು ಇದ್ದೇ ಇರುತ್ತದೆ. ಗೋಡೆಯಿಂದ ತಡೆ ಇರುವ ವಸ್ತುಗಳನ್ನು ಒಬ್ಬ ನೋಡಬಲ್ಲ ಎಂದಾದರೆ ಆ ವಸ್ತುವಿಗೆ ಆಕಾಶವು ಆವರಕವಾಗಿದೆ ಎಂದರೆ ಯಾವ ಶಂಕೆಯೂ ಇಲ್ಲದೇ ಆ ವಸ್ತುವನ್ನು ನೋಡಬಲ್ಲ. ಆದುದರಿಂದ ಈ ಅಜ್ಞಾನವು ಇದ್ದರೂ, ಹೋದರೂ ಯಾವ ತೊಂದರೆಯೂ ಇಲ್ಲ.

**ಭಾವವಿಲಾಸಿನೀ–** ಅರುಂಧತ್ಯಾ ನಿರೋಧಮಕುರ್ವತ್ಯಾ । ದ್ರಷ್ಟುಃ ಘಟಾದಿದ್ರಷ್ಟುಃ ॥ ೪೨೧ ॥

**ದುರ್ಘಟಂ ಘಟಯಂತೀ ಚೇತ್ ಸ್ವಸ್ಥಿತೌ ಮುಕ್ತತಾಮಪಿ ।**
**ಘಟಯೇದೇವ ಸಾ ಸಾಧ್ವೀ ಕಿಂ ತಯಾ ಹತಯಾ ತವ ॥ ೪೨೨ ॥**

**ಅರ್ಥ-** (ಅವಿದ್ಯೆಯು) ದುರ್ಘಟಂ= ಕೂಡಲಾರದ್ದನ್ನು, ಘಟಯಂತೀ ಚೇತ್= ಕೂಡಿಸುವುದಾದರೆ, ಸ್ವಸ್ಥಿತೌ= (ತಾನು) ಅಜ್ಞಾನವಿರುವಾಗಲೇ, ಮುಕ್ತತಾಮ್ ಅಪಿ= ಮುಕ್ತ್ಯವಸ್ಥೆಯನ್ನೂ ಕೂಡ, ಸಾಧ್ವೀ= ಸಾಧುವಾದ, ಸಾ= ಆ ಅವಿದ್ಯೆಯು, ಘಟಯೇತ್ ಏವ= ಕೂಡಿಸಲೇಬೇಕು. (ಆದುದರಿಂದ) ಹತಯಾ= ನಾಶವಾಗುವ, ತಯಾ= ಆ ಅಜ್ಞಾನದಿಂದ, ಕಿಂ= ಏನು ಪ್ರಯೋಜನ?

**ಅನುವಾದ -** ಯಾವುದು ಯಾವುದು ಅಸಾಧ್ಯವೋ ಅದೆಲ್ಲವನ್ನೂ ಸಾಧಿಸುವುದು ಅಜ್ಞಾನ ಎಂದು ಒಪ್ಪುವುದಾದರೆ, ಅಜ್ಞಾನವಿದ್ದಾಗಲೇ ಮುಕ್ತಿಯನ್ನೂ ಏಕೆ ಒಪ್ಪಬಾರದು? ಎಲ್ಲವನ್ನೂ ಸಾಧಿಸುವ ಅವಿದ್ಯೆಯು ಇದನ್ನು ಸಾಧಿಸಲಾರದೇ? ಆದುದರಿಂದ ಅಜ್ಞಾನ ನಿವೃತ್ತಿಯನ್ನು ಮುಕ್ತಿ ಎಂದು ಒಪ್ಪುವ ನಿಮಗೆ ಏಕೆ ಅಜ್ಞಾನ ನಾಶವಾಗಬೇಕು? ಅಜ್ಞಾನನಾಶದಿಂದ ನಿಮಗೇನು ಪ್ರಯೋಜನ?

**ಭಾವವಿಲಾಸಿನೀ–** ಸಾ ಅವಿದ್ಯಾ । ಪರಪ್ರಯೋಜನಾಘಾತಕತ್ವಾತಾತ್ ಸಾಧ್ವೀತ್ಯುಕ್ತಮ್॥

**ಯಸ್ಮಿನ್ ಸತ್ಯೇವ ಯಜ್ಜನ್ಮ ಯಸ್ಮಿನ್ ಸತ್ಯೇವ ಯತ್ಸ್ಥಿತಿಃ ।**
**ನ ಮೃತಿರ್ನಾಪಸರಣಂ ನಾಪಕಾರೋಽಪಿ ಕಶ್ಚನ ॥ ೪೨೩ ॥**

**ಕಾರ್ಯಕಾರಣಭಾವೇನ ಯೇ ಚಾಭಿನ್ನೇ ಪರಸ್ಪರಮ್ ।**
**ಅಪಧ್ಯಘಾತಿನೀ ಸಾಕಂ ಸ್ಥಿತೇ ಕಸ್ಮಾದ್ ವಿರೋಧಿನೀ ॥ ೪೨೪ ॥**

**ಅರ್ಥ-** ಯಸ್ಮಿನ್= ಯಾವ ಅಜ್ಞಾನವು, ಸತ್ಯೇವ= ಇರುವಾಗಲೇ, ಯಜ್ಜನ್ಮ= ಯಾವ ಮಾನಸ ಅಪರೋಕ್ಷದ ಉತ್ಪತ್ತಿ ಆಗುತ್ತದೆಯೋ, ಯಸ್ಮಿನ್= ಯಾವ ಅಜ್ಞಾನವು, ಸತ್ಯೇವ= ಇರುವಾಗಲೇ, ಯತ್ಸ್ಥಿತಿಃ= ಯಾವ ಸ್ವರೂಪ ಜ್ಞಾನದ ಇರುವಿಕೆಯು ಆಗುತ್ತದೆಯೋ, ಯಸ್ಯ= ಯಾವ ಅಜ್ಞಾನಕ್ಕೆ, ನ ಮೃತಿಃ= (ಸ್ವರೂಪಜ್ಞಾನ ಮತ್ತು ಮಾನಸಾಪರೋಕ್ಷ ಜ್ಞಾನ ಕಾಲದಲ್ಲಿ) ಮರಣವಿಲ್ಲದಿರುವಿಕೆ ಇದೆಯೋ (ಮತ್ತು) ನ ಅಪಸರಣಂ= ಬದಿಗೆ ಸರಿಯದಿರುವಿಕೆಯು ಇದೆಯೋ, ಯಸ್ಮಾತ್= ಯಾವ ಅಜ್ಞಾನದಿಂದ, ಕಶ್ಚನ= ಯಾವುದೇ ರೀತಿಯ, ಅಪಕಾರಃ ಅಪಿ=- ಅಪಕಾರವೂ ಕೂಡ, ನ= ಇರುವುದಿಲ್ಲವೋ, ಯೇ= ಯಾವ ಜ್ಞಾನ ಅಜ್ಞಾನಗಳು, ಕಾರ್ಯಕಾರಣಭಾವೇನ= ಕಾರ್ಯಕಾರಣಭಾವವಿರುವುದರಿಂದ, ಪರಸ್ಪರಂ= ಪರಸ್ಪರವಾಗಿ ಅಭಿನ್ನೇ= ಅಭಿನ್ನವೋ, ಚ= ಮತ್ತು, ಅವಧ್ಯಘಾತಿನೀ= ನಾಶ್ಯನಾಶಕಭಾವವಿಲ್ಲದವುಗಳಾಗಿ, ಸಾಕಂ ಸ್ಥಿತೇ= ಒಟ್ಟಿಗೆ ಇವೆಯೋ, ಇಂತಹ ಜ್ಞಾನಅಜ್ಞಾನಗಳು, ಕಸ್ಮಾತ್= ಯಾವ ಕಾರಣದಿಂದ, ವಿರೋಧಿನೀ= ವಿರೋಧಿಗಳಾಗುತ್ತವೆ?

**ಅನುವಾದ - ಅಜ್ಞಾನವಿದ್ದಾಗಲೇ ಮಾನಸ ಅಪರೋಕ್ಷ ಜ್ಞಾನವು ಹುಟ್ಟುತ್ತದೆ. ಆದುದರಿಂದ ಜ್ಞಾನ-ಅಜ್ಞಾನಗಳಿಗೆ ಉತ್ಪತ್ತಿಯಲ್ಲಿ ವಿರೋಧವಿಲ್ಲ. ಅಜ್ಞಾನವಿರುವಾಗಲೇ ಸ್ವರೂಪ ಜ್ಞಾನವೂ ಇರುತ್ತದೆ. ಆದುದರಿಂದ ಸ್ಥಿತಿಯಲ್ಲಿಯೂ ವಿರೋಧವಿಲ್ಲ. ಸ್ವರೂಪ ಜ್ಞಾನದಿಂದಾಗಲೀ, ಮಾನಸಾಪರೋಕ್ಷ ದಿಂದಾಗಲೀ ಅಜ್ಞಾನದ ನಾಶವೂ ಇಲ್ಲ. ಜ್ಞಾನ- ಅಜ್ಞಾನಗಳಿಗೆ ಕಾರ್ಯಕಾರಣ ಭಾವವಿರುವುದರಿಂದ ಇವೆರಡು ಅಭಿನ್ನ. ನಾಶ್ಯ ನಾಶಕ ಭಾವವಿಲ್ಲದಿರುವುದರಿಂದ ಒಟ್ಟಿಗೆ ಇವೆ. ಹೀಗಾಗಿ ಜ್ಞಾನ-ಅಜ್ಞಾನಗಳಿಗೆ ಯಾವುದೇ ರೀತಿಯ ವಿರೋಧವನ್ನೂ ಹೇಳಲು ಬರುವುದಿಲ್ಲ.**

**ಭಾವವಿಲಾಸಿನೀ–** ಯಜ್ಜನ್ಮ ಯಸ್ಯ ಮಾನಸಜ್ಞಾನಸ್ಯ ಜನ್ಮ । ಯತ್ಸ್ಥಿತಿಃ ಸ್ವರೂಪಜ್ಞಾನಸ್ಥಿತಿಃ । ನ ಮೃತಿರ್ನಾಪಸರಣಂ ಯಸ್ಯಾಜ್ಞಾನಸ್ಯ ಮೃತಿರಪಸರಣಂ ಚ ಪೂರ್ವೋಕ್ತಜ್ಞಾನದ್ವಯದಶಾಯಾಂ ದ್ರಷ್ಟವ್ಯಂ ನಾಪಕಾರೋ ಯಸ್ಮಾತ್ । ಯೇ ಜ್ಞಾನಾಜ್ಞಾನೇ । ಅವಧ್ಯಾಘಾತಿನೀ ಸಾಕಂಸ್ಥಿತೇ ಜ್ಞಾನಾಜ್ಞಾನೇ ॥ ೪೨೩-೪೨೪ ॥

**ಯಾಂ ಸಪಕ್ಷಪ್ರಸೂರೇವ ಸುಖಂ ನ ಸುಷುವೇ ಪುರಾ ।**
**ಸಾ ವ್ಯಾಪ್ತಿಕನ್ಯಾ ತ್ವನ್ನ್ಯಾಯಾತ್ ಪಕ್ಷಂ ಪತ್ಯುರ್ಗೃಹಂ ಜಹೌ ॥ ೪೨೫ ॥**

**ಅರ್ಥ-** ಯಾಂ= ಜ್ಞಾನಂ ಅಜ್ಞಾನಸ್ಯೈವ ನಿವರ್ತಕಂ ಎಂಬ ವ್ಯಾಪ್ತಿಯನ್ನು ಸಪಕ್ಷಪ್ರಸೂಃ ಏವ= ಸಪಕ್ಷ ಎಂದರೆ ಘಟಜ್ಞಾನ ಮೊದಲಾದ ದೃಷ್ಟಾಂತವೆಂಬ ತಾಯಿಯೇ, ಪುರಾ= ಮೊದಲು, ಸುಖಂ= ಸುಲಭವಾಗಿ, ನ ಸುಷುವೇ= ಹುಟ್ಟಿಸಲಿಲ್ಲವೋ, ಸಾ= ಆ, ವ್ಯಾಪ್ತಿಕನ್ಯಾ= ವ್ಯಾಪ್ತಿ ಎಂಬ ಕನ್ಯೆಯು, ಪಕ್ಷಂ= ಪಕ್ಷವೆಂಬ, ಪತ್ಯುಃ= ಗಂಡನ ಗೃಹಂ= ಮನೆಯನ್ನು, ತ್ವನ್ನ್ಯಾಯಾತ್= ನೀನು ಅಂಗೀಕರಿಸಿದ ನ್ಯಾಯದಿಂದ, ಜಹೌ= ಬಿಟ್ಟಳು.

**ಅನುವಾದ -** ಬ್ರಹ್ಮಜ್ಞಾನದಿಂದ ಬಂಧವು ನಿವೃತ್ತಿಯಾಗುತ್ತದೆ ಎಂದು ಶ್ರುತಿಯು ಹೇಳುತ್ತಿದೆ. ಈ ಬಂಧವು ಅಜ್ಞಾನಕಲ್ಪಿತವಲ್ಲದಿದ್ದರೆ, ಶ್ರುತ್ಯರ್ಥವು ಸರಿಹೊಂದುವುದಿಲ್ಲ. ಏಕೆಂದರೆ 'ಜ್ಞಾನಂ ಅಜ್ಞಾನಸ್ಯೈವ ನಿವರ್ತಕಂ ಎಂಬ ವ್ಯಾಪ್ತಿ ಇರುವುದರಿಂದ. ಹೀಗಾಗಿ ಈ ಜಗತ್ತು ಅಜ್ಞಾನ ಕಲ್ಪಿತ ಎಂದು ಅದ್ವೈತಿಗಳು ಸಾಧಿಸಿದ್ದಾರೆ. ಹೀಗಾಗಿ 'ಬ್ರಹ್ಮಜ್ಞಾನಂ ಅಜ್ಞಾನನಿವರ್ತಕಂ, ಜ್ಞಾನತ್ವಾತ್ ಘಟಜ್ಞಾನವತ್' ಘಟಜ್ಞಾನವು ಅಜ್ಞಾನಕ್ಕೆ ನಿವರ್ತಕವಾಗಿದೆ. ಅದರಂತೆ ಬ್ರಹ್ಮಜ್ಞಾನವೂ ಜ್ಞಾನವಾದುದರಿಂದ ಅಜ್ಞಾನಕ್ಕೆ ನಿವರ್ತಕ ಎಂದು ಅನುಮಾನದಿಂದ ಸಾಧಿಸಬೇಕು. ಆದರೆ ಈ ವ್ಯಾಪ್ತಿ ಸರಿಯಲ್ಲ ಎಂದು ಲೌಕಿಕ ದೃಷ್ಟಾಂತದಿಂದ ಇಲ್ಲಿ ಸಮರ್ಥನೆ ಮಾಡಲಾಗಿದೆ. ತಾಯಿಯು ಮಗಳಿಗೆ ಸುಲಭವಾಗಿ ಜನ್ಮ ಕೊಟ್ಟು, ನಂತರ ಮದುವೆ ಮಾಡಿ ಗಂಡನ ಮನೆಗೆ ಕಳುಹಿಸುತ್ತಾಳೆ. ಅಲ್ಲಿ ಅವಳು ಗಂಡನ ಜೊತೆಗೆ ಸುಖವಾಗಿ ಇರುತ್ತಾಳೆ. ಇಲ್ಲಿ ಮಗಳು - ವ್ಯಾಪ್ತಿ, ತಾಯಿ - ದೃಷ್ಟಾಂತ (ದೃಷ್ಟಾಂತದಿಂದ ವ್ಯಾಪ್ತಿ ಸ್ವರೂಪ ಅಭಿವ್ಯಕ್ತವಾಗುವುದರಿಂದ) ಗಂಡನ ಮನೆ ಪಕ್ಷ (ದೃಷ್ಟಾಂತದಿಂದ ಸಿದ್ಧವಾದ ವ್ಯಾಪ್ತಿಯನ್ನು ಪಕ್ಷದಲ್ಲಿ ಹೇತುವಿನ ಜೊತೆಗೆ ಸೇರಿಸುವುದರಿಂದ) ಈಗ ದೃಷ್ಟಾಂತವೇ ಸರಿಯಲ್ಲ, ಜ್ಞಾನವು ಅಜ್ಞಾನಕ್ಕೆ ನಿವರ್ತಕ ಎಂದು ಹೇಳಬೇಕು. ಆದರೆ ಜ್ಞಾನ ಎಂದರೆ ಜ್ಞಾನಾಭಾವನಿವೃತ್ತಿರೂಪ. ಆದುದರಿಂದ ಅದು ನಿವರ್ತಕವಾಗಲು ಸಾಧ್ಯವಿಲ್ಲ. ಆದುದರಿಂದ ದೃಷ್ಟಾಂತದಿಂದ ವ್ಯಾಪ್ತಿಯೇ ಮೊದಲೇ ಸುಲಭವಾಗಿ ಸಿದ್ಧವಾಗಿಲ್ಲ. ಹಾಗಿದ್ದರೂ ಆ ವ್ಯಾಪ್ತಿಯನ್ನು ಇಟ್ಟುಕೊಂಡು ಬ್ರಹ್ಮಜ್ಞಾನವು ಅಜ್ಞಾನಕ್ಕೆ ನಿವಾರಕ ಎಂದು ಸಾಧಿಸುತ್ತಿದ್ದೀರಿ. ಈಗ ನಿಮ್ಮ ನಿಯಮದಂತೆ ಅಜ್ಞಾನರೂಪ ಆವರಣವಿದ್ದಾಗಲೇ ಸ್ವರೂಪಜ್ಞಾನ ಮತ್ತು ಬ್ರಹ್ಮಾಪರೋಕ್ಷಜ್ಞಾನವನ್ನು ಒಪ್ಪಿರುವುದರಿಂದ ಈ ವ್ಯಾಪ್ತಿ ಕನ್ಯೆಗೆ ಗಂಡನ ಮನೆಯಂತಿರುವ ಪಕ್ಷವಾದ ಬ್ರಹ್ಮಜ್ಞಾನದಲ್ಲೇ ಅವಕಾಶ ಇಲ್ಲದಂತಾಯಿತು. ಹೀಗಾಗಿ ಗಂಡನ ಮನೆಯನ್ನೇ ಬಿಡುವ ಪ್ರಸಂಗ ಬಂದಿದೆ.

**ಭಾವವಿಲಾಸಿನೀ–** ಏವಮಂಗೀಕುರ್ವತೋ ಮಾಯಾವಾದಿನೋ ವ್ಯಾಪ್ತಿಂ ಸಾಹಿತ್ಯಮುದ್ರಯಾಽಪಹಸತಿ ॥ **ಯಾಮಿತಿ** ॥ ಯಾಂ ವ್ಯಾಪ್ತಿಮ್ । ಸಪಕ್ಷಪ್ರಸೂಃ ಸಪಕ್ಷಾಖ್ಯಮಾತಾ । ವ್ಯಾಪ್ತಿನಿದರ್ಶನಸ್ಯ ಪ್ರಥಮಸ್ಥಾನತ್ವಾತ್ ಪ್ರಸೂರಿತ್ಯುಕ್ತಮ್ । ತತ್ರ ಜ್ಞಾನಸ್ಯ ಜ್ಞಾನಾಭಾವನಿವೃತ್ತಿರೂಪತ್ವೇನ ನಿವರ್ತಕತ್ವಾಭಾವತ್ಸುಖಂ ನ ಸುಷುವ ಇತ್ಯುಕ್ತಮ್ । ತನ್ನ್ಯಾಯಾತ್ ಅಜ್ಞಾನಾವರಣೇ ಸತ್ಯೇವ ಜ್ಞಾನದ್ವಯಸ್ಯಾಪ್ಯಂಗೀಕಾರಾದಿತ್ಯರ್ಥಃ । ಪಕ್ಷಂ ಬ್ರಹ್ಮಜ್ಞಾನಮ್ । ಸಪಕ್ಷಸಂಭೂತವ್ಯಾಪ್ತಿಮಾನೀಯ ಪಕ್ಷೇ ಹೇತುನಾ ಸಹ ಸಂಯೋಜನಾತ್ ಪತ್ಯುರ್ಗೃಹಮಿತ್ಯುಕ್ತಮ್ ॥ ೪೨೫ ॥

> **ಅತಃ ಶ್ರುತಿಗೃಹಾವಾಪ್ತ ಭಿಕ್ಷಾನ್ನೇನ ಜಿಜೀವಿಷೇತ್ ।**
> **ವೃಥಾದ್ಯ ಮಾ ಕೃಥಾ ಮಾತುಃ ಶಯನೀಯೇ ಪದೋದ್ಯಮಮ್ ॥ ೪೨೬ ॥**

**ಅರ್ಥ-** ಅತಃ= ವ್ಯಾಪ್ತಿಗೆ ಭಂಗವಿರುವುದರಿಂದ, ಶ್ರುತಿಗೃಹಾವಾಪ್ತಭಿಕ್ಷಾನ್ನೇನ= ಶ್ರುತಿ ಎಂಬ ಮನೆಯಲ್ಲಿ ಸಿಕ್ಕಿದ ಭಿಕ್ಷೆಯ ಅನ್ನದಿಂದ, ಜಿಜೀವಿಷೇತ್= ಬದುಕಲು ಬಯಸುತ್ತದೆ, ಅದ್ಯ= ಈಗ, ಮಾತುಃ= ತಾಯಿಯ ಸ್ಥಾನದಲ್ಲಿರುವ ಶ್ರುತಿಯ, ಶಯನೀಯೇ= ಪ್ರತಿಪಾದ್ಯ ಅರ್ಥದಲ್ಲಿ, ವೃಥಾ= ವ್ಯರ್ಥವಾಗಿ, ಪದೋದ್ಯಮಂ= ಕಾಲಿಡುವಿಕೆ ರೂಪವಾದ ನಿರಾಕರಣೆಯನ್ನು, ಮಾ ಕೃಥಾಃ= ಮಾಡಬೇಡ.

**ಅನುವಾದ -** 'ಜ್ಞಾನಂ ಅಜ್ಞಾನಸ್ಯೈವ ನಿವರ್ತಕಂ' ಎಂಬ ವ್ಯಾಪ್ತಿಯನ್ನು ಯಾವ ರೀತಿಯಲ್ಲಿಯೂ ಹೊಂದಿಸಲು ಬರುವುದಿಲ್ಲ. ಆದುದರಿಂದ ಶ್ರುತಿಯು ಯಾವ ಅರ್ಥವನ್ನು ನಿರೂಪಿಸುತ್ತದೆಯೋ ಆ ಅರ್ಥವನ್ನು ಒಪ್ಪಿಕೊಂಡೇ ಬದುಕುವುದನ್ನು ಕಲಿಯಬೇಕು. ಎಲ್ಲರಿಗೂ ಅತ್ಯಂತ ವಿಶ್ವಾಸನೀಯವಾದ ಪ್ರಮಾಣ ಶ್ರುತಿ. ಆದುದರಿಂದ ಅದು ತಾಯಿಯಂತೆ. ಆ ವೇದವು ಬ್ರಹ್ಮಜ್ಞಾನದಿಂದ ಈ ಬಂಧ ನಿವೃತ್ತಿಯಾಗುತ್ತದೆ ಎಂದು ಹೇಳುತ್ತಿದೆ. ಅದನ್ನು ನಿರಾಕರಣೆ ಮಾಡುವ ವ್ಯರ್ಥ ಪ್ರಯತ್ನ ಮಾಡಬೇಡ. ಆದುದರಿಂದ ಬಂಧ ಸತ್ಯವಾದರೂ ಅದಕ್ಕೆ ಬ್ರಹ್ಮಜ್ಞಾನದಿಂದ ನಿವೃತ್ತಿಯನ್ನು ಒಪ್ಪಲು ಬರುವುದರಿಂದ ಜಗತ್ತು, ಬಂಧ ಎಲ್ಲವೂ ಸತ್ಯವೇ. ಯಾವುದನ್ನೂ ಮಿಥ್ಯಾ, ಕಲ್ಪಿತ ಎಂದು ಒಪ್ಪುವ ಅಗತ್ಯ ಇಲ್ಲ.

**ಭಾವವಿಲಾಸಿನೀ–** ಅತಃ ಉಭಯಥಾಪಿ ವ್ಯಾಪ್ತೇರ್ಭಂಗಾತ್ । ಶ್ರುತಿಗೃಹಾವಾಪ್ತಭಿಕ್ಷಾನ್ನೇನ ಜಿಜೀವಿಷೇತ್ ಶ್ರುತಿಬಲೇನೈವ ನಿವರ್ತ್ಯನಿವರ್ತಕಭಾವಮಂಗೀಕೃತ್ಯ ಜಿಜೀವಿಷೇತ್ । ವ್ಯಾಪ್ತೇರೇವ ಸ್ವಗೃಹತಯಾ ಪೂರ್ವೈರುಕ್ತತ್ವಾತ್ ಭಿಕ್ಷಾನ್ನೇನೇತ್ಯುಕ್ತಮ್ । ಸ್ವಸ್ಯಾಪ್ಯಂತತಃ ಶ್ರೌತಪ್ರಕ್ರಿಯಾಯಾ ಏವೋಪಜೀವ್ಯತ್ವಾದನ್ನೇನೇತ್ಯುಕ್ತಮ್ । ಮಾತುಃ ಸ್ವೋಪಜೀವ್ಯ-ಭೂತಾಯಾಃ ಶ್ರುತೇಃಶಯನೀಯೇ ಸಾ ಯಸ್ಮಿನ್ನರ್ಥೇ ತಿಷ್ಠತಿ ತಸ್ಮಿನ್ನಿತ್ಯರ್ಥಃ । ಪದೋದ್ಯಮಂ ಪಾದದಾನಪ್ರಯತ್ನಮ್ । ನಿರಾಕರಣಮಿತ್ಯರ್ಥಃ । ಶ್ರುತ್ಯುಕ್ತಂ ಜ್ಞಾನಸ್ಯೈವ ಬಂಧನಿವರ್ತಕತ್ವಂ

ನ ನಿರಾಕುರ್ವಿತ್ಯರ್ಥಃ । ಸ್ವರೂಪಜ್ಞಾನಾವಿರೋಧಿನೋಽಜ್ಞಾನಸ್ಯಾನಾದಿನಿತ್ಯೇ ತಸ್ಮಿನ್ನಾವರಣತ್ವಸ್ಯ ದುರ್ವಚತ್ವಾತ್ ಮನೋವೃತ್ತಿ ಜ್ಞಾನಂ ಪ್ರತ್ಯೇವ ಸಂಭಾವಿತಮುತ್ಪತ್ತಿಪ್ರತಿಬಂಧಕತ್ವರೂಪಮಾವರಣತ್ವಂ ವಕ್ತವ್ಯಮ್ । ತೇನೈವ ಚ ತನ್ನಿವೃತ್ತಾವನ್ಯೋನ್ಯಾಶ್ರಯಸ್ಯ ದುಷ್ಪರಿಹಾರತ್ವಾಚ್ಛ್ರುತಿಸೂತ್ರಾಭಿಮತಂ ಬಂಧನಿವರ್ತಕತ್ವಮೇವ ಬ್ರಹ್ಮಜ್ಞಾನಸ್ಯ ವಕ್ತವ್ಯಮಿತಿ ಭಾವಃ ॥ ೪೨೬ ॥

ಕಿಂಚಾಜ್ಞ ಭವದಾಚಾರ್ಯಚಾತುರ್ಯಂ ತ್ವಂ ವಿಚಾರಯ ।
ಯೋಽವಿದ್ಯಾಸ್ತಮಯೋ ಮೋಕ್ಷಃ ಸಾ ಸಂಸಾರ ಉದಾಹೃತಃ॥ ೪೨೭ ॥

ಇತ್ಯಾಹ ಸೋಧುನಾ ಶ್ರುತ್ಯಾ ಪ್ರೋಕ್ತಾರ್ಥಂ ಚೋತ್ಸಿಸೃಕ್ಷತಿ ।
ಸ್ವಯಂ ಕಿಂ ವಕ್ತಿ ಸಾ ವಾಣೀ ಕಿಂ ವಕ್ತೀತಿ ವಿಚಾರ್ಯತಾಂ ॥ ೪೨೮ ॥

**ಅರ್ಥ –** ಕಿಂಚ= ಅದಲ್ಲದೇ, ಅಜ್ಞ= ಅಜ್ಞಾನಿಯೇ, ತ್ವಂ= ನೀನು, ಭವದಾಚಾರ್ಯ ಚಾತುರ್ಯಂ= ನಿನ್ನ ಮತದ ಆಚಾರ್ಯರ ಜಾಣತನವನ್ನು, ವಿಚಾರಯ= ವಿಚಾರ ಮಾಡು, ಯಃ= ನಿನ್ನ ಮತದ ಯಾವ ಆಚಾರ್ಯನು, ಅವಿದ್ಯಾಸ್ತಮಯಃ= ಅವಿದ್ಯೆಯ ನಾಶವೇ ಮೋಕ್ಷಃ= ಮೋಕ್ಷವು, ಚ= ಮತ್ತು , ಸಾ= ಆ ಅವಿದ್ಯೆಯು, ಸಂಸಾರಃ= ಸಂಸಾರವು, ಇತಿ= ಎಂದು, ಆಹ= ಹೇಳಿದನೋ, ಸಃ= ಆಚಾರ್ಯನು, ಅಧುನಾ= ಈಗ, ಶ್ರುತ್ಯಾ= ವೇದದಿಂದ, ಪ್ರೋಕ್ತಾರ್ಥಂ= ಹೇಳಲ್ಪಟ್ಟ ಅರ್ಥವನ್ನಾದರೂ, ಉತ್ಸಿಸೃಕ್ಷತಿ= ಪರಿತ್ಯಜಿಸಲು ಉದ್ಯುಕ್ತವಾಗಿದ್ದಾನೆ, ಸ್ವಯಂ= ತಾನು (ನಿನ್ನ ಮತದ ಆಚಾರ್ಯನು) ಕಿಂ= ಏನನ್ನು, ವಕ್ತಿ= ಹೇಳುತ್ತಾನೆ, ಚ= ಮತ್ತು, ಸಾ= ಆ, ವಾಣೀ= ವೇದವಾಕ್ಯವು, ಕಿಂ= ಏನನ್ನು, ವಕ್ತಿ= ಹೇಳುತ್ತದೆ, ಇತಿ= ಎಂದು, ತ್ವಯಾ= ನಿನ್ನಿಂದ, ಸ್ವಯಂ= ತಾನಾಗಿಯೇ, ವಿಚಾರ್ಯತಾಂ= ವಿಚಾರ ಮಾಡಲ್ಪಡಲಿ.

**ಅನುವಾದ -** ಸ್ವರೂಪಜ್ಞಾನವು ಅಜ್ಞಾನಕ್ಕೆ ವಿರೋಧಿಯಲ್ಲ, ಆದ್ದರಿಂದ ಅಜ್ಞಾನವೂ ಸ್ವರೂಪಜ್ಞಾನಕ್ಕೆ ಆವರಣವಾಗಲಾರದು. ಏಕೆಂದರೆ ಇಲ್ಲಿ ಅಜ್ಞಾನಕ್ಕೆ ಪ್ರಕಾಶಪ್ರತಿ ಬಂಧಕತ್ವರೂಪವಾದ ಆವರಣತ್ವವನ್ನು ಹೇಳಬೇಕು. ಆದರೆ ಸ್ವರೂಪಜ್ಞಾನದ ಪ್ರಕಾಶವು ಅನಾದಿನಿತ್ಯವಾದುದು. ಆದ್ದರಿಂದ ಅಜ್ಞಾನವು ಸ್ವರೂಪಜ್ಞಾನಕ್ಕೆ ಆವರಣವಾಗುವುದಿಲ್ಲ. ಆದರೆ ವೃತ್ತಿಜ್ಞಾನಕ್ಕೆ ಆವರಣವಾಗುತ್ತದೆ ಎಂದು ಹೇಳಬೇಕು. ವೃತ್ತಿಜ್ಞಾನವು ಉತ್ಪತ್ತಿವಿನಾಶಗಳನ್ನುಳ್ಳದ್ದಾದ್ದರಿಂದ ಉತ್ಪತ್ತಿಪ್ರತಿಬಂಧ ಕತ್ವರೂಪವಾದ ಆವರಣತ್ವವನ್ನು ಹೇಳಬೇಕು. ಆಗ ವೃತ್ತಿಜ್ಞಾನದಿಂದಲೇ ಅಜ್ಞಾನನಾಶವನ್ನು ಒಪ್ಪಿದರೆ ಅನ್ಯೋನ್ಯಾಶ್ರಯದೋಷವು ಬರುತ್ತದೆ. ಅಜ್ಞಾನವು ವೃತ್ತಿಜ್ಞಾನದ ಉತ್ಪತ್ತಿಗೆ ಪ್ರತಿಬಂಧಕವಾಗಿರುವುದರಿಂದ, ಪ್ರತಿಬಂಧಕನಿವೃತ್ತಿಯ ನಂತರವೇ ಕಾರ್ಯವು ಉತ್ಪತ್ತಿಯಾಗುವುದರಿಂದ, ಅಜ್ಞಾನನಿವೃತ್ತಿಯ ನಂತರವೇ ವೃತ್ತಿಜ್ಞಾನದ ಉತ್ಪತ್ತಿ ಎಂದು ಹೇಳಬೇಕು. ಆದರೆ ವೃತ್ತಿಜ್ಞಾನವೇ ಅಜ್ಞಾನ

ನಿವರ್ತಕವಾದ್ದರಿಂದ ಮೊದಲು ವೃತ್ತಿಜ್ಞಾನ ಮತ್ತು ಅನಂತರ ಅಜ್ಞಾನನಿವೃತ್ತಿ ಎಂದು ಒಪ್ಪಬೇಕು. ಆ ಕಾರಣದಿಂದ ಅನ್ಯೋನ್ಯಾಶ್ರಯದೋಷವು ಬರುತ್ತದೆ. ಅಲ್ಲದೇ ಎಲೈ ಅಜ್ಞನೇ, ನಿಮ್ಮ ಆಚಾರ್ಯರ ಚಾತುರ್ಯವನ್ನು ವಿಮರ್ಶೆಮಾಡು. ಅವರು ಅವಿದ್ಯಾನಾಶವೇ ಮೋಕ್ಷ, ಅವಿದ್ಯೆಯೇ ಸಂಸಾರ ಎಂದು ಹೇಳಿದ್ದಾರೆ. ಹೀಗೆ ಹೇಳಿದ ಅವರು ಸ್ವತಃ ಶ್ರುತಿಯು ಹೇಳಿದ ಅರ್ಥವನ್ನು ಬಿಟ್ಟಿದ್ದಾರೆ - ನಿಮ್ಮ ಆಚಾರ್ಯರು ಏನು ಹೇಳುತ್ತಾರೆ ಮತ್ತು ಶ್ರುತಿಯು ಏನು ಹೇಳುತ್ತದೆ ಎಂದು ವಿಚಾರಮಾಡು.

**ಭಾವವಿಲಾಸಿನೀ**– ಪ್ರಕಾರಾಂತರೇಣಾಪಿ ಪರಾಕೌಶಲಂ ಪ್ರದರ್ಶಯತಿ ॥ **ಕಿಂಚೇತಿ** ॥ ಪ್ರೋಕ್ತಾರ್ಥಂ ಜ್ಞಾನಸ್ಯ ಸಾಕ್ಷಾದ್ಬಂಧನಿವರ್ತಕತ್ವಮ್ ॥ ೪೨೭-೪೨೮ ॥

**ವಿವರಣೆ** - ಶ್ರುತಿಯು ಜ್ಞಾನಕ್ಕೆ ಸಾಕ್ಷಾತ್ ಬಂಧನಿವರ್ತಕತ್ವವನ್ನು ಹೇಳಿದೆ. ನಿಮ್ಮ ಆಚಾರ್ಯರು ಅವಿದ್ಯೆಯನ್ನೇ ಬಂಧ ಎಂದು ಒಪ್ಪಿದುದರಿಂದ ಜ್ಞಾನದಿಂದ ಸಾಕ್ಷಾತ್ ಅವಿದ್ಯಾನಿವೃತ್ತಿಯನ್ನು ಹೇಳುತ್ತಾರೆ. ಆ ಕಾರಣದಿಂದಲೂ ನಿಮ್ಮ ಆಚಾರ್ಯರ ಅಕೌಶಲವು ವ್ಯಕ್ತವಾಗುವುದು.

ಸಾ ಚಾಜ್ಞಾನಸ್ಯ ಬಂಧಸ್ಯ ಚ್ಛೇತ್ರ ಜ್ಞಾನಮಚೀಕಥತ್।
ಏವಂ ಸತಿ ಕಿಮಾಕ್ಷೇಪ್ಯಂ ಕಿಂ ವಾಽಽಕ್ಷೇಪಕಮುಚ್ಯತಾಂ ॥ ೪೨೯ ॥

**ಅರ್ಥ** – ಸಾ ಚ= ಆ ಶ್ರುತಿಯಾದರೂ, ಅಜ್ಞಾನಾಖ್ಯಬಂಧಸ್ಯ= ಅಜ್ಞಾನ ರೂಪವಾದ ಬಂಧಕ್ಕೆ, ಜ್ಞಾನಂ= ಜ್ಞಾನವನ್ನು, ಛೇತ್ರ= ನಾಶಕವೆಂದು, ಅಚೀಕಥತ್= ಹೇಳಿದೆ, ಏವಂ ಸತಿ= ಹೀಗಾದರೆ, ಆಕ್ಷೇಪ್ಯಂ= ಆಕ್ಷೇಪ್ಯವಾದದ್ದು, ಕಿಂ= ಯಾವುದು, ವಾ= ಮತ್ತು, ಆಕ್ಷೇಪಕಂ= ಆಕ್ಷೇಪವಾದದ್ದು, ಕಿಂ= ಯಾವುದು, ಇತಿ= ಎಂಬುದಾಗಿ, ವಿಚಾರ್ಯತಾಂ= ವಿಚಾರ ಮಾಡಲ್ಪಡಲಿ.

**ಅನುವಾದ** - ಶ್ರುತಿಯಾದರೂ ಅಜ್ಞಾನರೂಪವಾದ ಬಂಧಕ್ಕೆ ಜ್ಞಾನದಿಂದ ನಿವೃತ್ತಿಯನ್ನು ಹೇಳಿದೆ ಹಾಗಾದರೆ ಯಾವುದು ಆಕ್ಷೇಪಕ, ಯಾವುದು ಆಕ್ಷೇಪ್ಯ ಎಂದು ಹೇಳು. ಬಂಧವು ಜ್ಞಾನದಿಂದ ನಿವೃತ್ತವಾಗುವುದಾದರೆ ಜ್ಞಾನವು ಅಜ್ಞಾನಕ್ಕೆ ಮಾತ್ರ ನಿವರ್ತಕ ಎಂಬ ವ್ಯಾಪ್ತಿ ಇರುವುದರಿಂದ, ಬಂಧವು ಅಜ್ಞಾನಕಾರ್ಯವಾದರೆ ಜ್ಞಾನವು ಅಜ್ಞಾನವನ್ನು ನಿವೃತ್ತಿಮಾಡಿ ಆ ಮೂಲಕ ಜ್ಞಾನಕಾರ್ಯವಾದ ಬಂಧವನ್ನೂ ನಿವೃತ್ತಿ ಮಾಡುತ್ತದೆ ಎಂದು ಹೇಳಬೇಕು. ಆದ್ದರಿಂದ ಜ್ಞಾನದಿಂದ ನಿವೃತ್ತಿಹೊಂದುವ ಬಂಧವು ಆಕ್ಷೇಪಕ. ಅಜ್ಞಾನವು ಆಕ್ಷೇಪ್ಯ. ಆದರೆ ಅಜ್ಞಾನವೇ ಬಂಧವಾದರೆ ಆಗ ಆಕ್ಷೇಪಕ ಯಾವುದು? ಆಕ್ಷೇಪ್ಯ ಯಾವುದು? ಆಕ್ಷೇಪಕ ಮತ್ತು ಆಕ್ಷೇಪ್ಯ ಯಾವಾಗಲೂ ಭಿನ್ನವಾಗಿರಬೇಕಷ್ಟೇ?

**ಭಾವವಿಲಾಸಿನೀ–** ಏವಂ ಸತಿ ಬಂಧಸ್ಯೈವಾಜ್ಞಾನತ್ವೇ ಸತಿ । ಆಕ್ಷೇಪಕಸ್ಯ ಬಂಧಸ್ಯಾಪ್ಯಜ್ಞಾನ-ರೂಪತ್ವಾತ್ತಸ್ಯೈವಾಕ್ಷೇಪ್ಯತ್ವಾಚ್ಚ ಕಿಮಾಕ್ಷೇಪ್ಯಮ್ । ಕಿಮಾಕ್ಷೇಪಕಮಿತ್ಯರ್ಥಃ ॥ ೪೨೯ ॥

**ಕಿಂ ವಾತ್ರಾಯುಕ್ತತಾ ನಾಮ ಕಸ್ಯೋಪಾದಾನಮಜ್ಞತಾ ।**
**ವ್ಯಾಪ್ತಿಃ ಕಸ್ಯಾಪಕಾರಾಯ ಚಿತ್ರಂ ಶಾಸ್ತ್ರಪ್ರವರ್ತನಮ್ ॥ ೪೩೦ ॥**

**ಅರ್ಥ –** ಅತ್ರ= ಈ ವಿಷಯದಲ್ಲಿ, ಅಯುಕ್ತತಾ ನಾಮ= ಅನುಪಪತ್ತಿ ಎಂಬುದು, ಕಾ= ಎಂತಹದು? ವಾ= ಮತ್ತು, ಅಜ್ಞತಾ= ಅಜ್ಞಾನವು, ಕಸ್ಯ= ಯಾವುದಕ್ಕೆ, ಉಪಾದಾನಂ= ಉಪಾದಾನಕಾರಣವು? ವ್ಯಾಪ್ತಿಃ= ಯಾವುದು ಜ್ಞಾನವೊ ಅದು ಅಜ್ಞಾನಕ್ಕೆ ನಿವರ್ತಕವೆಂಬ ವ್ಯಾಪ್ತಿಯು, ಕಸ್ಯ= ಯಾರಿಗೆ, ಅಪಕಾರಾಯ ಭವತಿ= ಪ್ರತಿಕೂಲವಾಗುತ್ತದೆ? ತವ= ನಿನ್ನ, ಶಾಸ್ತ್ರ ಪ್ರವರ್ತನಂ= ಶಾಸ್ತ್ರವನ್ನು ನಿರೂಪಿಸುವ ರೀತಿಯು, ಚಿತ್ರಂ= ವಿಚಿತ್ರವಾಗಿದೆ.

**ಅನುವಾದ -** ಜ್ಞಾನವು ಬಂಧನಿವರ್ತಕ ಎಂಬ ವಿಷಯದಲ್ಲಿ ಏನು ಅನುಪಪತ್ತಿ ಇದೆ? ಅಜ್ಞಾನವು ಯಾವುದಕ್ಕೆ ಉಪಾದಾನವಾಗುತ್ತದೆ? ಜ್ಞಾನವು ಅಜ್ಞಾನಕ್ಕೆ ನಿವರ್ತಕವೆಂಬ ವ್ಯಾಪ್ತಿಯು ಯಾರಿಗೆ ಪ್ರತಿಕೂಲವಾಗುತ್ತದೆ? ನೀನು ಶಾಸ್ತ್ರ ವನ್ನು ನಿರೂಪಿಸುವ ರೀತಿ ವಿಚಿತ್ರವಾಗಿದೆ.

**ಭಾವವಿಲಾಸಿನೀ–ಅಜ್ಞತಾ ಅಜ್ಞಾನಮ್ । ಕಸ್ಯೋಪಾದಾನಂ ಬಂಧಸ್ಯೈವಾಜ್ಞಾನತ್ವಾನ್ನ ಕಸ್ಯಾಪೀತ್ಯರ್ಥಃ। ಕಸ್ಯಾಪಕಾರಾಯ । ಬಂಧಸ್ಯೈವಾಜ್ಞಾನತ್ವಾದ್ಬಂಧನಿವರ್ತಕತ್ವಸ್ಯೈವೋಪಪಾದಕತ್ವೇನ ನ ಕಸ್ಯಾಪ್ಯಪಕಾರಾಯೇತ್ಯರ್ಥಃ ॥೪೩೦॥**

**ವಿವರಣೆ -** ಶ್ರುತಿಯು ಜ್ಞಾನಕ್ಕೆ ಬಂಧನಿವರ್ತಕತ್ವವನ್ನು ಹೇಳುತ್ತದೆ. ಇದರಲ್ಲಿ ಏನಾದರೂ ಅನುಪಪತ್ತಿ ಇದ್ದರೆ ಅದನ್ನು ಪರಿಹಾರಮಾಡಲು ಅಜ್ಞಾನವನ್ನು ಕಲ್ಪನೆ ಮಾಡಬೇಕು. ಅಜ್ಞಾನವೂ ಮತ್ತು ಬಂಧವೂ ಒಂದೇ ಆದರೆ ಜ್ಞಾನವು ಅಜ್ಞಾನಕ್ಕೆ ನಿವರ್ತಕ ಎಂಬ ವ್ಯಾಪ್ತಿಯಿಂದ ಪ್ರತಿಕೂಲವಾಗುವುದಿಲ್ಲ. ಏಕೆಂದರೆ ಜ್ಞಾನವು ಬಂಧಕ್ಕೆ ನಿವರ್ತಕ ಎಂದು ಶ್ರುತಿಯ ಅಭಿಪ್ರಾಯವನ್ನೇ ಹೇಳಿದಂತಾಗುತ್ತದೆ. ಇದರಲ್ಲಿ ಏನೂ ವಿರೋಧವಿಲ್ಲ. ಆದ್ದರಿಂದ ಬಂಧಕ್ಕೆ ಉಪಾದಾನಕಾರಣವಾಗಿ ಮಿಥ್ಯಾಭೂತವಾದ ಅಜ್ಞಾನವನ್ನು ಕಲ್ಪನೆ ಮಾಡಬೇಕಾದ ಅಗತ್ಯವಿಲ್ಲ. ಶ್ರುತಿಬಲದಿಂದ ಸತ್ಯವಾದ ಬಂಧವಾದರೂ ಜ್ಞಾನದಿಂದ ನಿವೃತ್ತಿಯನ್ನು ಹೊಂದುತ್ತದೆ ಎಂದು ಒಪ್ಪು.

**ಪೂರ್ವೋತ್ತರಾಪರಿಜ್ಞಾನೋಪಾದಾನಂ ಶಾಸ್ತ್ರಮೇವ ತತ್ ॥ ೪೩೧ ॥**

**ಅರ್ಥ–** ತತ್= ಆದ್ದರಿಂದ, ತವ= ನಿನ್ನ, ಶಾಸ್ತ್ರಂ= ಶಾಸ್ತ್ರವು, ಪೂರ್ವೋತ್ತರಾಪರಿಜ್ಞಾನೋಪಾದಾನಂ ಏವ= ಪೂರ್ವೋತ್ತರದ ಪರಿಜ್ಞಾನ ಮೂಲಕವೇ ಆಗಿದೆ.

**ಅನುವಾದ** - ಆದ್ದರಿಂದ ಪೂರ್ವೋತ್ತರ ಅಪರಿಜ್ಞಾನಮೂಲಕವಾದುದು ನಿನ್ನ ಶಾಸ್ತ್ರವೇ ಸರಿ.

**ಭಾವವಿಲಾಸಿನೀ**– ಪೂರ್ವೋತ್ತರಾಪರಿಜ್ಞಾನೋಪಾದಾನಂ ಪೂರ್ವೋತ್ತರಾ-ಪರಿಜ್ಞಾನಮೇವೋಪಾದಾನಂ ಮೂಲಕಾರಣಂ ಯಸ್ಯ ತತ್ । ಯಸ್ಮಾತ್ ಅನ್ಯತ್ರ ಸ್ವೇನೈವೋಕ್ತಂ ಬಂಧಸ್ಯೈವಾಜ್ಞಾನಾತ್ಮಕತ್ವಂ ವಿಸ್ಮೃತ್ಯೇದಾನೀಂ ಜ್ಞಾನಂ ಬಂಧಸ್ಯಾನಿವರ್ತಕಂ ಕಿಂತ್ವಜ್ಞಾನ-ಸ್ಯೈವೇತಿ ಭಾಷ್ಯಟೀಕಾಕಾರಾದಿಭಿರಾಘೋಷ್ಯತೇ । ಅತ ಉನ್ಮತ್ತಪ್ರಲಪಿತಮೇವೇದಂ ಶಾಸ್ತ್ರಮಿತಿಭಾವಃ ॥ ೪೩೧ ॥

**ವಿವರಣೆ** - ಸತ್ಯವಾದ ಬಂಧವು ಜ್ಞಾನದಿಂದ ನಿವೃತ್ತವಾಗಬಹುದು. ಬಂಧವು ಮಿಥ್ಯೆಯಾದರೆ ಮಾತ್ರ ಅದಕ್ಕೆ ಉಪಾದಾನವಾದ ಮಿಥ್ಯಾಭೂತವಾದ ಅಜ್ಞಾನವನ್ನು ಕಲ್ಪನೆಮಾಡಬೇಕು. ಈ ಅನುಪಪತ್ತಿ ಇಲ್ಲದೇ ಅಜ್ಞಾನವನ್ನು ಕಲ್ಪನೆಮಾಡಿರುವುದರಿಂದ ನಿನ್ನ ಶಾಸ್ತ್ರವೇ ಪೂರ್ವೋತ್ತರಾಜ್ಞಾನಮೂಲಕವಾದುದು. (ಅಜ್ಞಾನೋಪಾದಾನಕ-ವಾದುದು).

ನಿಮ್ಮ ಆಚಾರ್ಯರು (ಶಂಕರಾಚಾರ್ಯರು) ಅಜ್ಞಾನವೇ ಬಂಧ ಎಂದು ಹೇಳಿರುವುದನ್ನು ಮರೆತು ಅದಕ್ಕೆ ವ್ಯಾಖ್ಯಾನಮಾಡುವವರು ಜ್ಞಾನವು ಬಂಧಕ್ಕೆ ನಿವರ್ತಕವಾಗುವುದಿಲ್ಲ, ಅಜ್ಞಾನಕ್ಕೆ ಮಾತ್ರ ನಿವರ್ತಕವಾಗುತ್ತದೆ ಎಂದು ಹೇಳುತ್ತಾರೆ. ಆದ್ದರಿಂದ ತಮ್ಮ ಪೂರ್ವಾಚಾರ್ಯರ ಮಾತಿನ ಅರ್ಥ ತಿಳಿಯದೆ ಹೀಗೆ ಹೇಳುವುದರಿಂದ ನಿಮ್ಮ ಶಾಸ್ತ್ರವೇ ಅಜ್ಞಾನಮೂಲಕವಾದುದು ಎಂದು ಅಭಿಪ್ರಾಯ.

**ಅಪಿ ಚಾನ್ಯಾಂ ಕಥಾಂ ಮೋಕ್ಷಪಥಾರೋಹೇ ಶ್ರುತಾಂ ಶೃಣು ॥ ೪೩೨ ॥**

**ಅರ್ಥ** – ಅಪಿ ಚ= ಅದಲ್ಲದೇ, ಮೋಕ್ಷಪಥಾರೋಹೇ= ಮೋಕ್ಷಮಾರ್ಗದ ಸಾಧನದ ವಿಷಯದಲ್ಲಿ, ಶ್ರುತಾಂ= ಕೇಳಲ್ಪಟ್ಟ, ಅನ್ಯಾಂ= ಮತ್ತೊಂದು, ಕಥಾಂ= ವಿಷಯವನ್ನು, ಶೃಣು= ಕೇಳು.

**ಅನುವಾದ** - ಅಲ್ಲದೆ ಮೋಕ್ಷಸಾಧನವಿಷಯದಲ್ಲಿ ಶ್ರುತಿಯಲ್ಲಿ ಹೇಳಲ್ಪಟ್ಟ ಇನ್ನೊಂದು ವಿಷಯವನ್ನು ಕೇಳು.

**ಭಾವವಿಲಾಸಿನೀ**– ಕಿಂಚ ಜ್ಞಾನೋತ್ತರಕಾಲೀನಜೀವನ್ಮುಕ್ತಿದಶಾಯಾಮಾಮೋಕ್ಷಂ ದೇವ - ಋಷ್ಯಾದ್ಯನಂತಾನಂತಾಪರೋಕ್ಷಜ್ಞಾನಿನಾಂ ವಿದ್ಯಮಾನೇಷ್ವನಂತಾನಂತಬಾಹ್ಯದೇಹ-ಗೇಹಾದಿಷ್ವಾಂತರಲಿಂಗದೇಹೇಷು ಚ ಶ್ರವಣಮನನೋಪೋದ್ಬಲಿತ ಪ್ರಾಚೀನಾಪರೋಕ್ಷ-ಜ್ಞಾನಸ್ಯ ಸಾಕ್ಷಾನ್ನಾಶಕತ್ವಾಯೋಗಾತ್ ಔತ್ತರಕಾಲೀನತದುಪಾದಾನಾಜ್ಞಾನಂ ಪ್ರತಿ ಚಿರನಷ್ಟಪ್ರಾಚೀನಜ್ಞಾನಸ್ಯ ನಾಶಕತ್ವಾದರ್ಶನೇನ ಸ್ವಪ್ರಕ್ರಿಯಯೈವಾಜ್ಞಾನನಾಶದ್ವಾರಾಪಿ

**ನಾಶಕತ್ವಾಯೋಗಾತ್ ದ್ವಾರಾಂತರಮೇವಾನು ಸರಣೀಯಮ್ । ಸಾಚ ಭಗವದ್ಭಕ್ತಿರೇವ । ಅತೋ ಜ್ಞಾನೋದಿತಭಕ್ತ್ಯಾ ಪ್ರಶಂಸನೇನ ಭಗವತ್ಯೈವ ತೇಷಾಂ ನಿವೃತ್ತಿರಿತಿ ಜ್ಞಾನಂ ಭಕ್ತಿದ್ವಾರೈವ ಬಂಧನಿವರ್ತಕವಮ್ । ನತ್ವಜಾನನಾಶದ್ವಾರಾ । ಅತೋಽಪಿ ಪೂರ್ವೋತ್ತರ ವಿರುದ್ಧಂ ಚ ಪರಕೀಯಭಾಷ್ಯಮಿತ್ಯಾಹ – ಅಪಿ ಚೇತಿ ॥ ಯಾ ಮಹಾಽವಿದ್ಯಾ ॥ ೪೩೨-೪೩೩ ॥**

**ವಿವರಣೆ** - ಮಾಯಾವಾದಿಗಳು ಕೂಡ ಜೀವನ್ಮುಕ್ತಿದಶೆಯನ್ನು ಒಪ್ಪುತ್ತಾರೆ. ಅಪರೋಕ್ಷಜ್ಞಾನವಾದ ಮೇಲೆ ಮೋಕ್ಷವಾಗುವವರೆಗೂ ಇರುವ ಅವಸ್ಥೆಗೆ ಜೀವನ್ಮುಕ್ತಿದಶೆ ಎಂದು ಹೆಸರು. ಜ್ಞಾನವನ್ನು ಹೊಂದಿ ಜೀವನ್ಮುಕ್ತರಾದ ಅನೇಕ ದೇವತೆಗಳೂ ಋಷಿಗಳೂ ಇದ್ದಾರೆಂದು ಅವರಿಗೂ ಸಮ್ಮತ. ಹಾಗಾದರೆ ಆ ಜೀವನ್ಮುಕ್ತರಿಗೆಲ್ಲಾ ಬಾಹ್ಯವಾದ ಸ್ಥೂಲದೇಹವೂ, ಆಂತರಿಕವಾದ ಲಿಂಗದೇಹವೂ ಇರುತ್ತದೆ. ಆ ದೇಹಗಳು ಶ್ರವಣಮನನಾದಿಗಳಿಂದ ಬಲಿಷ್ಠವಾದ, ಮುಂಚೆಯೇ ಉಂಟಾಗಿರುವ, ಅವರ ಅಪರೋಕ್ಷಜ್ಞಾನದಿಂದ ನಿವೃತ್ತವಾಗಲಿಲ್ಲ. ಜೀವನ್ಮುಕ್ತಿದಶೆಯಿಂದ ಮೋಕ್ಷಕ್ಕೆ ಹೋಗುವ ಸಂದರ್ಭದಲ್ಲಿ ಆ ದೇಹಗಳು ನಿವೃತ್ತವಾಗಬೇಕು. ಆದರೆ ನಿವರ್ತಕವಾದ ಮೊದಲಿನ ಅಪರೋಕ್ಷಜ್ಞಾನವು ಎಂದೋ ನಿವೃತ್ತವಾಗಿ ಹೋಗಿದೆ. ಆದ್ದರಿಂದ ಅವರ ಪ್ರಕ್ರಿಯೆಯಂತೆಯೇ ಅಜ್ಞಾನವು ನಾಶವಾದರೂ ಅಜ್ಞಾನದ ಕಾರ್ಯವಾದ ಸ್ಥೂಲದೇಹ ಮತ್ತು ಲಿಂಗದೇಹಗಳು ನಾಶವಾಗಿಲ್ಲ. ಆದ್ದರಿಂದ ಈಗ ಮೋಕ್ಷಕ್ಕೆ ಹೋಗುವ ಸಂದರ್ಭದಲ್ಲಿ ಅವು ನಾಶಹೊಂದಬೇಕಾದರೆ ಆ ಅಪರೋಕ್ಷಜ್ಞಾನಕ್ಕೆ ಇನ್ನೊಂದು ದ್ವಾರವು ಬೇಕು. ಆದ್ವಾರವನ್ನು ಭಗವತ್ಪ್ರಸಾದವೆಂದು ಅಂಗೀಕರಿಸು. ಅಪರೋಕ್ಷಜ್ಞಾನದಿಂದುಂಟಾದ ಭಕ್ತಿಯಿಂದ ಭಗವತ್ಪ್ರಸಾದವುಂಟಾಗುತ್ತದೆ. ಅದು ಬಂಧವನ್ನು ನಿವೃತ್ತಿ ಮಾಡುತ್ತದೆ ಎಂದು ಕಲ್ಪನೆ ಮಾಡು. ಹೊರತು ಜ್ಞಾನವು ಅಜ್ಞಾನನಾಶದ್ವಾರಾ ಬಂಧವನ್ನು ನಿವೃತ್ತಿಮಾಡುತ್ತದೆ ಎಂದು ಕಲ್ಪನೆ ಮಾಡಬೇಡ ಎಂದು ಹೇಳುತ್ತಾರೆ.

(ಅದ್ವೈತಿಗೆ ಅಪರೋಕ್ಷಜ್ಞಾನವೆಂದರೆ ಬ್ರಹ್ಮಾತ್ಮೈಕ್ಯಜ್ಞಾನ ಎಂದು ತಿಳಿಯಬೇಕು.)

**ಯದಾ ಸ್ಯಾತ್ ಪರಮೋ ಮೋಕ್ಷೋ ಲಿಂಗಭಂಗಸ್ತದಾ ಕಿಲ ।**
**ಮಹಾಽವಿದ್ಯಾನಿವೃತ್ತಿಶ್ಚ ತದೈವ ಸ್ಯಾನ್ಮುಮುಕ್ಷತಾಂ ।**
**ಅನಲ್ಪಕಲ್ಪಪರ್ಯಂತಂ ಸಂಸಾರಯತಿ ಯಾ ಬುಧಾನ್ ॥ ೪೩೩ ॥**

**ಅರ್ಥ** – ಯದಾ= ಯಾವಾಗ, ಪರಮಃ= ಕೊನೆಯದಾದ, ಮೋಕ್ಷಃ= ಮುಕ್ತಿಯು, ಸ್ಯಾತ್= ಆಗುತ್ತದೋ, ತದಾ= ಆಗ, ಲಿಂಗಭಂಗಃ= ಲಿಂಗಶರೀರದ ನಾಶವು, ಸ್ಯಾತ್= ಆಗುತ್ತದೆ, ಯಾ= ಯಾವ ಅಜ್ಞಾನವು, ಬುಧಾನ್ ಅಪಿ= ಜ್ಞಾನಿಗಳನ್ನು ಕೂಡ, ಅನಲ್ಪಕಲ್ಪ ಪರ್ಯಂತಂ= ಅನೇಕ ಕಲ್ಪಗಳವರೆಗೆ, ಸಂಸಾರಯತಿ= ಸಂಸಾರದಲ್ಲಿ ತಿರುಗಾಡಿಸುವುದೋ, ಅಂತಹ ಮುಮುಕ್ಷತಾಂ= ಮೋಕ್ಷವನ್ನು ಅಪೇಕ್ಷಿಸುವ ಜೀವರ ಮಹಾವಿದ್ಯಾನಿವೃತ್ತಿಃ ಚ= ಅಂತಹ ಮಹಾ ಅಜ್ಞಾನದ ನಾಶವೂ ಕೂಡ, ತದಾ ಏವ= ಆಗಲೇ, ಸ್ಯಾತ್= ಆಗುತ್ತದೆ.

**ಅನುವಾದ** - ಪರಮಮೋಕ್ಷವಾಗುವಾಗಲೇ ಲಿಂಗದೇಹಭಂಗವಾಗುತ್ತದಷ್ಟೇ? ಜ್ಞಾನಿಗಳನ್ನು ಸಹ ಅನೇಕಕಲ್ಪಗಳವರೆಗೆ ಸಂಸಾರದಲ್ಲಿ ತೊಳಲಾಡಿಸುವ ಮಹಾ ಅವಿದ್ಯೆಯ ನಿವೃತ್ತಿಯು ಆಗಲೇ ಆಗುವುದಷ್ಟೇ?

ನಶ್ಯನ್ನಶ್ಯನ್ನಯಂ ದೇಹೋ ನ ತಥಾ ಬಂಧನಂ ನೃಣಾಂ ।
ಯಥಾನಾದಿರ್ಲಿಂಗದೇಹೋ ಯೋ ಜ್ಞಾನಘನಮಗ್ರಸೀತ್ ॥ ೪೩೪ ॥

**ಅರ್ಥ** – ಯಃ= ಯಾವುದು, ಜ್ಞಾನಘನಂ= ಜ್ಞಾನಸ್ವರೂಪನೇ ಆದ, ಜೀವಂ= ಜೀವನನ್ನು, ಅಗ್ರಸೀತ್= ನುಂಗಿಹಾಕಿದೆಯೋ, ಸಃ= ಅಂತಹ, ಅನಾದಿಃ= ಅನಾದಿಯಾದ, ಲಿಂಗದೇಹಃ= ಲಿಂಗದೇಹವು, ಯಥಾ= ಹೇಗೆ, ನೃಣಾಂ= ಜೀವರಿಗೆ, ಬಂಧನಂ= ಬಂಧಕವಾಗಿದೆಯೋ, ತಥಾ= ಹಾಗೆ, ನಶ್ಯನ್ನಶ್ಯನ್= ಮತ್ತೆ ಮತ್ತೆ ನಾಶವಾಗುವ, ಅಯಂ= ಈ ದೇಹಃ= ಸ್ಥೂಲದೇಹವು, ನೃಣಾಂ= ಜೀವರಿಗೆ, ನ ಬಂಧನಂ= ಬಂಧಕವಾಗಿಲ್ಲ.

**ಅನುವಾದ** - ಮತ್ತೆ ಮತ್ತೆ ನಾಶಹೊಂದುವ ಈ ಸ್ಥೂಲದೇಹಗಳು ಜೀವನಿಗೆ ಅಂತಹ ಬಂಧನವಲ್ಲ. ಲಿಂಗದೇಹವಾದರೋ ಜ್ಞಾನಘನನಾದ ಜೀವನನ್ನೇ ನುಂಗಿ ಸಂಸಾರದಲ್ಲಿ ತೊಳಲಿಸುವುದರಿಂದ ಮಹಾಬಂಧಕವಾಗುತ್ತದೆ.

ಸೈವಾವಿದ್ಯಾನಿತಿಮಹತೀ ಯಾ ನ ಜ್ಞಾನೇಪ್ಯನಶ್ಯತ ।
ನಾನಾಭೋಗಸ್ಯ ದೇಹಸ್ಯ ಜೀವನ್ಮುಕ್ತೌ ಚ ಸಾಧಿಕಾ ॥ ೪೩೫ ॥

**ಅರ್ಥ** – ಯಾ= ಯಾವುದು, ಜ್ಞಾನೇ ಅಪಿ= ಅಪರೋಕ್ಷಜ್ಞಾನ ಬಂದಾಗಲೂ ಕೂಡ, ನ ಅನಶ್ಯತ= ನಾಶವಾಗಲಿಲ್ಲವೊ, ಸಾ ಏವ= ಆ ಲಿಂಗದೇಹವೇ, ಅತಿ ಮಹತೀ= ಅತಿ ದೊಡ್ಡ ಅವಿದ್ಯಾ= ಅಜ್ಞಾನವು ಆಗಿದೆ, ಚ= ಮತ್ತು, ಸಾ= ಅದು, ಜೀವನ್ಮುಕ್ತೌ= ಜೀವನ್ಮುಕ್ತಿ ದಶೆಯಲ್ಲೂ, ದೇಹಸ್ಯ= ಅನೇಕ ದೇಹಗಳಿಗೆ, ಚ= ಮತ್ತು, ನಾನಾಬೋಗಸ್ಯ= ವಿವಿಧ ರೀತಿಯ ಭೋಗಗಳಿಗೆ, ಸಾಧಿಕಾ= ಕಾರಣವಾಗುತ್ತದೆ.

**ಅನುವಾದ** - ಅಪರೋಕ್ಷಜ್ಞಾನ ಬಂದಾಗಲೂ ನಾಶವಾಗದಿದ್ದ ಲಿಂಗದೇಹವೇ ದೊಡ್ಡ ಅವಿದ್ಯೆ. ಅದೇ ಜೀವನ್ಮುಕ್ತಿದಶೆಯಲ್ಲಿ ಅನೇಕ ದೇಹಗಳಿಗೆ ಮತ್ತು ಅನೇಕ ಭೋಗಗಳಿಗೆ ಸಾಧಕವಾಗುತ್ತದೆ.

**ವಿವರಣೆ** - ಅವಿದ್ಯೆ ಎಂದರೆ ಅವಿದ್ಯೆಯ ಕಾರ್ಯವಾದ ಬಂಧ ಎಂದು ಇಟ್ಟು ಕೊಳ್ಳಬೇಕು.

ಜ್ಞಾನೋದಯಾದಾವಿಮೋಕ್ಷಂ ಜೀವನ್ಮುಕ್ತಿದಶಾ ಕಿಲ ॥ ೪೩೬ ॥

**ಅರ್ಥ** – ಜ್ಞಾನೋದಯಾತ್= ಅಪರೋಕ್ಷಜ್ಞಾನವಾದ ಬಳಿಕ ಆ, ವಿಮೋಕ್ಷಂ= ಮೋಕ್ಷಪ್ರಾಪ್ತಿಯವರೆಗೆ, ಜೀವನ್ಮುಕ್ತಿದಶಾ= ಜೀವನ್ಮುಕ್ತಾವಸ್ಥೆಯು, ಕಿಲ= ಇರುತ್ತದಷ್ಟೆ.

**ಅನುವಾದ** - **ಅಪರೋಕ್ಷಜ್ಞಾನವುಂಟಾದಾಗಿನಿಂದ ಮೋಕ್ಷಪ್ರಾಪ್ತಿಯವರೆಗೆ ಇರುವ ಅವಸ್ಥೆಯೇ ಜೀವನ್ಮುಕ್ತಿದಶೆಯಷ್ಟೇ?**

ಏವಂ ಚ ಲಿಂಗದೇಹಾಸ್ತೇ ಸಾಽವಿದ್ಯಾ ತನ್ನಿಮಿತ್ತಕಾಃ ।
ಪುತ್ರಮಿತ್ರಕಲತ್ರಾದ್ಯಾ ದೇಹಗೇಹಧನಾದಯಃ ॥ ೪೩೭ ॥

**ಅರ್ಥ** – ಏವಂ ಚ= ಹೀಗಿರುವುದರಿಂದ, ತೇ= ಆ, ಲಿಂಗದೇಹಾಃ= ಲಿಂಗದೇಹಗಳು, ಸಾ= ಆ ಅವಿದ್ಯಾ= ಅವಿದ್ಯಾ ಸ್ವರೂಪಗಳಾಗಿವೆ, ಪುತ್ರಮಿತ್ರಕಲತ್ರಾದ್ಯಾಃ= ಮಕ್ಕಳು, ಸ್ನೇಹಿತರು, ಹೆಂಡತಿ ಮೊದಲಾದ ಬಂಧುಗಳು, ದೇಹಗೇಹಧನಾದಯಃ= ಶರೀರ, ಮನೆ, ಧನ ಮೊದಲಾದ ಸಂಪತ್ತುಗಳು, ತನ್ನಿಮಿತ್ತಕಾಃ= ಆ ಲಿಂಗದೇಹವೆಂಬ ಅಜ್ಞಾನದಿಂದಲೇ ಹುಟ್ಟಿದವುಗಳಾಗಿವೆ.

**ಅನುವಾದ** - **ಆದ್ದರಿಂದ ಲಿಂಗದೇಹವೇ ದೊಡ್ಡ ಅವಿದ್ಯೆ, ತನ್ನಿಮಿತ್ತವಾಗಿಯೇ ಪುತ್ರಮಿತ್ರಕಳತ್ರಾದಿಗಳೂ ದೇಹಗೇಹಧನಾದಿಗಳೂ ಉಂಟಾಗುತ್ತವೆ.**

ಅನಂತಾ ಮುಕ್ತಿಪರ್ಯಂತಾ ಹೇತೂಪೋದ್ಬಲಿತಾದಪಿ ।
ಪೂರ್ವಜ್ಞಾನಾದಪ್ರನಷ್ಟಾ ನ ಜ್ಞಾನಸ್ಯ ವಿರೋಧಿನಃ ॥ ೪೩೮ ॥

**ಅರ್ಥ** – ಅನಂತಾಃ= ಅನಂತ ಸಂಖ್ಯೆಯಲ್ಲಿರುವ, ಮುಕ್ತಿಪರ್ಯಂತಾಃ= ಮೋಕ್ಷದವರೆಗೂ ಇರುವ, ಹೇತೂಪೋದ್ಬಲಿತಾತ್= ಶ್ರವಣಾದಿ ಸಾಧನಗಳಿಂದ ಸಹಿತವಾದ, ಪೂರ್ವಜ್ಞಾನಾತ್ ಅಪಿ= ಅಪರೋಕ್ಷಜ್ಞಾನದಿಂದಲೂ, ಅಪ್ರನಷ್ಟಾಃ= ನಾಶಹೊಂದದ ಆ ಲಿಂಗದೇಹಗಳು, ಜ್ಞಾನಸ್ಯ= ಜ್ಞಾನಕ್ಕೆ, ನ ವಿರೋಧಿನಃ= ವಿರೋಧಿಗಳಲ್ಲ.

**ಅನುವಾದ** - **ಆ ಲಿಂಗದೇಹಗಳು ಒಬ್ಬೊಬ್ಬ ಜೀವನಿಗೆ ಒಂದೊಂದರಂತೆ ಅನಂತವಾಗಿವೆ. ಶ್ರವಣ ಮನನಾದಿಸಹಿತವಾದ ಮೊದಲನೆಯ (ಹಿಂದಿನ) ಅಪರೋಕ್ಷಜ್ಞಾನದಿಂದ ನಿವೃತ್ತವಾಗಿಲ್ಲ, ಆದ್ದರಿಂದ ಅವುಗಳು ಜ್ಞಾನವಿರೋಧಿಗಳಲ್ಲ.**

ಪುನರ್ಜ್ಞಾನಶತೇನಾಪಿ ನಿವರ್ತ್ಯಾ ನೇತಿ ಮೇ ಮತಿಃ ।
ದಾವಾಗ್ನಿನಾ ಯೋ ನ ದಗ್ಧಃ ಕಿಂ ತದ್ದಾಹೋ ಗೃಹಾಗ್ನಿನಾ ॥ ೪೩೯ ॥

**ಅರ್ಥ** – ತೇ= ಆ ಲಿಂಗದೇಹಗಳು, ಪುನರ್ಜ್ಞಾನ ಶತೇನ ಅಪಿ= ಮತ್ತೆ ಮತ್ತೆ ಹುಟ್ಟುವ ನೂರು ಜ್ಞಾನಗಳಿಂದಲೂ, ನ ನಿವರ್ತ್ಯಾಃ= ನಾಶವಾಗತಕ್ಕವುಗಳಲ್ಲವೆಂದು, ಮೇ= ನನ್ನ,

ಮತಿಃ= ಅಭಿಪ್ರಾಯವು, ಯಃ= ಯಾವ ಪದಾರ್ಥವು, ದಾವಾಗ್ನಿ ನಾ= ಕಾಡ್ಗಿಚ್ಚಿನಿಂದ, ನ ದಗ್ಧಃ= ಸುಡಲ್ಪಡಲಿಲ್ಲವೋ, ತದ್ದಾಹಃ= ಆ ವಸ್ತುವಿನ ದಾಹವು, ಗೃಹಾಗ್ನಿನಾ= ಮನೆಯ ಬೆಂಕಿಯಿಂದ, ಸ್ಯಾತ್ ಕಿಂ= ಆಗುವುದೇನು?

**ಅನುವಾದ** - ಪುನಃ ಉಂಟಾಗುವ ನೂರುಜ್ಞಾನಗಳಿಂದಲೂ ಅವು ನಿವೃತ್ತವಗಾವುದಿಲ್ಲ ಎಂದು ನನ್ನ ಅಭಿಪ್ರಾಯ. ಕಾಳ್ಗಿಚ್ಚಿನಿಂದ ಸುಡದಿದ್ದುದು ಮನೆಯ ಬೆಂಕಿಯಿಂದ ಹೇಗೆ ಸುಡುತ್ತದೆ?

**ಭಾವವಿಲಾಸಿನೀ**— ಹೇತೂಪೋದ್ಬಲಿತಾತ್ ಶ್ರವಣಮನನಾನಿದಿಧ್ಯಾಸನಾಖ್ಯ-ಹೇತುಭಿರುಪೋದ್ಬಲಿತಾತ್ । ಜ್ಞಾನಸ್ಯ ಪೂರ್ವಜ್ಞಾನಸ್ಯ ॥ ೪೩೭-೪೩೯ ॥

**ವಿವರಣೆ** - ಮೊದಲು ಉಂಟಾಗುವ ಅಪರೋಕ್ಷಜ್ಞಾನಕ್ಕೆ ಶ್ರವಣಮನನಾದಿಗಳ ಸಹಕಾರವಿರುವುದರಿಂದ ಅದು ಕಾಳ್ಗಿಚ್ಚಿನಂತೆ ಪ್ರಬಲ. ಅನಂತಹ ಬರುವ ಜ್ಞಾನಗಳಿಗೆ ಶ್ರವಣಾದಿಗಳ ಸಹಕಾರ ಇಲ್ಲದಿರುವುದರಿಂದ ಅವು ಮನೆಯ ಅಗ್ನಿಯಂತೆ ದುರ್ಬಲ ಎಂದು ಅಭಿಪ್ರಾಯ.

ಬಹುಕಾಲವ್ಯವಹಿತಂ ಸ್ವಭಾವಾದನಿವರ್ತಕಂ ।
ಶ್ರುತ್ಯುಕ್ತಂ ಸಾಧನಂ ಜ್ಞಾನಂ ದ್ವಾರಮನ್ಯದಪೇಕ್ಷತೇ ॥ ೪೪೦ ॥

**ಅರ್ಥ** – ಬಹುಕಾಲ ವ್ಯವಹಿತಂ= ಬಹಳ ಸಮಯದ ವ್ಯವಧಾನವುಳ್ಳ, ಸ್ವಭಾವಾತ್= ಸ್ವಾಭಾವಿಕವಾಗಿಯೇ, ಅನಿವರ್ತಕಂ= ದೇಹಾದಿಗಳಿಗೆ ನಿವರ್ತಕವಲ್ಲದ, ಶ್ರುತ್ಯುಕ್ಯಂ= ವೇದೋಕ್ತವಾದ, ಸಾಧನಂ= ಸಾಧನವಾದ ಜ್ಞಾನವು, ಅನ್ಯತ್= ಬೇರೆಯ, ದ್ವಾರಂ= ಸಾಧನವನ್ನು, ಅಪೇಕ್ಷತೇ= ಬಯಸುತ್ತದೆ (ಅವಲಂಬಿಸುತ್ತದೆ).

**ಅನುವಾದ** - ಅಪರೋಕ್ಷಜ್ಞಾನವು ಬಹಳ ಹಿಂದೆ ಬಂದಿದೆ. ಜ್ಞಾನವು ಸ್ವಭಾವತಃ ಮೂರುಕ್ಷಣಮಾತ್ರ ಇರುತ್ತದೆಂದು ಅಂಗೀಕರಿಸಿರುವುದರಿಂದ ಅದು ಆಗಲೇ ನಷ್ಟವಾಗಿರುವುದರಿಂದ ದೇಹಾದಿಗಳಿಗೆ ನಿವರ್ತಕವಾಗುವುದಿಲ್ಲ. ಶ್ರುತಿಯು ಮೋಕ್ಷಕ್ಕೆ ಜ್ಞಾನವು ಸಾಧನ ಎಂದು ಹೇಳಿರುವುದರಿಂದ ಮೊದಲು ಉಂಟಾದ ಅ ಪರೋಕ್ಷಜ್ಞಾನವು ಅಜ್ಞಾನನಾಶವನ್ನಲ್ಲದೆ ಬೇರೆ ಇನ್ನೊಂದು ದ್ವಾರವನ್ನು ಅಪೇಕ್ಷಿಸುತ್ತದೆ.

**ಭಾವವಿಲಾಸಿನೀ**— ಸ್ವಭಾವಾತ್ ತ್ರಿಕ್ಷಣಾವಸ್ಥಾಯಿತ್ವಸ್ವಭಾವಾತ್ ॥ ೪೪೦ ॥

**ವಿವರಣೆ** - ಯಾಗವು ಸ್ವರ್ಗಕ್ಕೆ ಸಾಧನವೆಂದು ಶ್ರುತಿಯು ಹೇಳುತ್ತದೆ. ಆದರೆ ಯಾಗವು ಎಂದೋ ನಷ್ಟವಾಗಿರುವುದರಿಂದ ಸ್ವರ್ಗಕ್ಕಿಂತ ತಕ್ಷಣ ಹಿಂದೆ ಯಾಗ ಇರುವುದಿಲ್ಲ. ಕಾರ್ಯದ ಉತ್ಪತ್ತಿಗಿಂತ ಹಿಂದಿನ ಕ್ಷಣದಲ್ಲಿ ಕಾರಣವು ಇರಲೇಬೇಕೆಂಬ

ನಿಯಮವಿದೆ. ಯಾಗವು ಆ ಕ್ಷಣದಲ್ಲಿ ಇಲ್ಲದ ಕಾರಣ ಯಾಗದಿಂದ ಅಪೂರ್ವ (ಪುಣ್ಯವು) ಉಂಟಾಗುತ್ತದೆ. ಅದು ಸ್ವರ್ಗಪ್ರಾಪ್ತಿಯ ಹಿಂದಿನ ಕ್ಷಣದಲ್ಲಿದೆ ಎಂದು ಒಪ್ಪುತ್ತಾರೆ. ಈ ಅಪೂರ್ವ ಅಥವಾ ಅದೃಷ್ಟವನ್ನು ಯಾಗದ ದ್ವಾರ ಎಂದು ಕರೆಯುತ್ತಾರೆ. ಹಾಗೆಯೇ ಇಲ್ಲಿ ಅಪರೋಕ್ಷಜ್ಞಾನವು ಎಂದೋ ನಷ್ಟವಾಗಿರುವುದರಿಂದ ಮೋಕ್ಷಪ್ರಾಪ್ತಿಯ ಹಿಂದಿನ ಕ್ಷಣದಲ್ಲಿ ಇರುವುದಿಲ್ಲ. ಆದ್ದರಿಂದ ಮೋಕ್ಷಪ್ರಾಪ್ತಿಯ ಹಿಂದಿನ ಕ್ಷಣದಲ್ಲಿರುವಂತಹ, ಅಪರೋಕ್ಷಜ್ಞಾನದಿಂದ ಜನ್ಯವಾದಂತಹ ಒಂದು ಪದಾರ್ಥವನ್ನು ಒಪ್ಪಬೇಕು. ಅದು ಅಪರೋಕ್ಷಜ್ಞಾನಕ್ಕೆ ದ್ವಾರವಾಗುತ್ತದೆ. ಅವಿದ್ಯಾನಾಶವು ಉಂಟಾಗಿಲ್ಲವಾದ್ದರಿಂದ ಬೇರೆ ಇನ್ನೊಂದು ದ್ವಾರವನ್ನು ಅಂಗೀಕಾರ ಮಾಡಬೇಕಾಗುತ್ತದೆ ಎಂದು ಅಭಿಪ್ರಾಯ.

ಅನಷ್ಟಾಜ್ಞಾನನಾಶಾಖ್ಯದ್ವಾರಂ ಪೂರಿತಮೇವ ತೇ ।
ಅತೋ ದ್ವಾರವತೀನಾಥಂ ದ್ವಾರಸಿದ್ಧ್ಯೈ ಭಜ ಪ್ರಭುಂ ॥ ೪೪೧ ॥

ಮಯಿ ಭಕ್ತಿರ್ಹಿ ಲೋಕಾನಾಮಮೃತತ್ವಾಯ ಕಲ್ಪತೇ ।
ಇತಿ ಭಾಗವತೇ ಯೋಽಸೌ ಮುಕ್ತೇರ್ದ್ವಾರಮಬೂಬುಧತ್ ॥ ೪೪೨ ॥

**ಅರ್ಥ –** ಅನಷ್ಟ= ಹಿಂದಿನ ಜ್ಞಾನದಿಂದ ನಾಶವಾಗದ, ಅಜ್ಞಾನ= ಮುಂದಿನ ಪ್ರಬಲ ಅಜ್ಞಾನದ, ನಾಶಾಖ್ಯ= ನಾಶವೆಂಬ, ದ್ವಾರಂ= ಬಾಗಿಲು, ತೇ= ನಿನ್ನ ಪಾಲಿಗೆ ಪೂರಿತಂ ಏವ= ಮುಚ್ಚಲ್ಪಟ್ಟಿದೆ. ಅತಃ= ಆದ್ದರಿಂದ, ದ್ವಾರಸಿದ್ಧ್ಯೈ= ಮಾರ್ಗವು ದೊರೆಯುವುದಕ್ಕಾಗಿ (ಬಾಗಿಲು ತೆರೆಯುವುದಕ್ಕಾಗಿ) ಯಃ ಅಸೌ= ಯಾವ ಈತನು, ಭಾಗವತೇ= ಭಾಗವತದಲ್ಲಿ, ಮಯಿ= ನನ್ನಲ್ಲಿ, ಭಕ್ತಿಃ= ಭಕ್ತಿಯು, ಲೋಕಾನಾಂ= ಜೀವರ ಅಮೃತತ್ವಾಯ= ಮೋಕ್ಷಕ್ಕೆ, ಕಲ್ಪತೇ= ಕಾರಣವಾಗುತ್ತದೆ, ಇತಿ= ಎಂದು, ಮುಕ್ತೇಃ= ಮೋಕ್ಷದ, ದ್ವಾರಂ= ದ್ವಾರವನ್ನು, ಅಬೂಬುಧತ್ ಹಿ= ತಿಳಿಸಿಕೊಟ್ಟನೋ, ತಂ= ಆ, ಪ್ರಭುಂ= ಸರ್ವಸಮರ್ಥನಾದ, ದ್ವಾರವತೀನಾಥಂ= ದ್ವಾರಕಾಧೀಶನಾದ ಕೃಷ್ಣನನ್ನು, ಭಜ= ಭಜಿಸು.

**ಅನುವಾದ** - ಅಪರೋಕ್ಷಜ್ಞಾನವು ಮೂರುಕ್ಷಣಮಾತ್ರ ಇರುವುದರಿಂದ ಮೋಕ್ಷಪ್ರಾಪ್ತಿಯವರೆಗೆ ಇರುವ ಅಜ್ಞಾನವು ನಾಶಹೊಂದದೆ ಇರುವುದರಿಂದ ಅಪರೋಕ್ಷಜ್ಞಾನಕ್ಕೆ ಅವಿದ್ಯಾನಾಶವೆಂಬ ದ್ವಾರವು ದೊರೆಯುವುದೇ ಇಲ್ಲ. ಆದ್ದರಿಂದ ದ್ವಾರಸಿದ್ಧಿಗಾಗಿ ದ್ವಾರಾವತೀನಾಯಕನಾದ ಶ್ರೀಕೃಷ್ಣನನ್ನು ಭಜಿಸು.

ದ್ವಾರವತೀನಾಯಕನಾದ ಕೃಷ್ಣನೇ ಭಾಗವತದಲ್ಲಿ ನನ್ನಲ್ಲಿ ಮಾಡುವ ಭಕ್ತಿಯು ಮೋಕ್ಷವನ್ನು ದೊರಕಿಸಿಕೊಡುತ್ತದೆ ಎಂದು ಹೇಳಿ ಜ್ಞಾನದಿಂದ ಉಂಟಾಗುವ ಭಕ್ತಿಯು ದ್ವಾರವೆಂದು ತಿಳಿಸಿದ್ದಾನೆ.

**ಭಾವವಿಲಾಸಿನೀ–** ಅನಷ್ಟಾಜ್ಞಾನನಾಶಾಖ್ಯದ್ವಾರಂ ಅನಷ್ಟಸ್ಯ ಪೂರ್ವಜ್ಞಾನೇನಾನಷ್ಟಸ್ಯ ಅಜ್ಞಾನಸ್ಯ ಔತ್ತರಪ್ರಬಲಾಜ್ಞಾನಸ್ಯ ನಾಶಾಖ್ಯದ್ವಾರಂ ಪೂರಿತಮೇವ ಪಿಹಿತಮೇವ । ತನ್ನಾಶಸ್ಯೋಕ್ತರೀತ್ಯಾ ಪ್ರಾಚೀನಜ್ಞಾನೇನಾಸಂಪಾದಿತತ್ವಾತ್ ನಾಸೌ ಜ್ಞಾನಸ್ಯ ದ್ವಾರಮಿತ್ಯರ್ಥಃ । ದ್ವಾರವತೀನಾಥ-ಮಿತಿ ತಸ್ಯೈವ ದ್ವಾರಸಂಪಾದಕತ್ವೇ ಹೇತುಗರ್ಭಂ ವಿಶೇಷಣಮ್ । ಯಃ ದ್ವಾರಾವತೀನಾಥಃ ॥

**ವಿವರಣೆ -** ಅಪರೋಕ್ಷಜ್ಞಾನದಿಂದ ಅಜ್ಞಾನನಾಶವಾಗುವುದಿಲ್ಲವಾದ್ದರಿಂದ ಅದು ದ್ವಾರವಾಗುವುದಿಲ್ಲ. ಅಪರೋಕ್ಷಜ್ಞಾನಕ್ಕೆ ಒಂದು ದ್ವಾರವು ಬೇಕೇ ಬೇಕು. ಆದ್ದರಿಂದ ಅಪರೋಕ್ಷಜ್ಞಾನದಿಂದ ಉಂಟಾದ ವಿಶೇಷಭಕ್ತಿಯಿಂದ ಮಾಡಿದ ಭಗವತ್ಸೇವೆಯಿಂದ ಉಂಟಾದ ಭಗವತ್ಪ್ರಸಾದವೇ ದ್ವಾರವೆಂದು ಅಂಗೀಕರಿಸು. ಮಿಥ್ಯಾತ್ವವಾದದ ಆಗ್ರಹವನ್ನು ಬಿಡು ಎಂದು ಅಭಿಪ್ರಾಯ. ಕೃಷ್ಣನು ದ್ವಾರವತೀನಾಯಕ. ಆದ್ದರಿಂದ ಅವನಲ್ಲಿ ದ್ವಾರವಿರುವುದು ಉಚಿತ. ಮೂಲಶ್ಲೋಕದಲ್ಲಿ ಭಕ್ತಿಯು ದ್ವಾರವೆಂದು ತೋರಿದರೂ ಭಕ್ತಿಯಿಂದುಂಟಾಗುವ ಭಗವತ್ಪ್ರಸಾದವೇ ದ್ವಾರವೆಂದು ತಿಳಿಯಬೇಕು.

**ಅಜ್ಞಾನಾನುಸೃತಿಸ್ತಸ್ಮಾದಜ್ಞಾನಾದೇವ ಕೇವಲಂ ।**
**ನೋಪಾದಾನಮನಾದೇರ್ಯನ್ನಾಪಿ ಜ್ಞಾನಾನ್ನ್ಯಲೀಯತ ॥ ೪೪೩ ॥**

**ಅರ್ಥ –** ತಸ್ಮಾತ್= ಆದ್ದರಿಂದ, ಯತ್= ಯಾವುದು, ಅನಾದೇಃ= ಅನಾದಿಯಾದ ಸಂಸಾರಕ್ಕೆ, ನ ಉಪಾದಾನಂ= ಉಪಾದಾನಕಾರಣವಲ್ಲವೋ, ಜ್ಞಾನಾತ್= ಜ್ಞಾನದಿಂದ, ನ ನ್ಯಲೀಯತ= ನಾಶವೂ ಆಗಲಿಲ್ಲವೋ, ಅಜ್ಞಾನಾಮಸ್ಮೃತಿಃ= ಅಂತಹ ಅಜ್ಞಾನವನ್ನು ಅಂಗೀಕರಿಸುವುದು ಕೇವಲಂ ಅಜ್ಞಾನಾತ್ ಏವ= ಅಜ್ಞಾನದಿಂದಲೇ ಆಗಿದೆ.

**ಅನುವಾದ -** ಆದ್ದರಿಂದ ಸಂಸಾರಕ್ಕೆ ಉಪಾದಾನಕಾರಣವೂ ಅಲ್ಲದ ಮತ್ತು ಜ್ಞಾನದಿಂದ ನಿವೃತ್ತಿಯನ್ನೂ ಹೊಂದದ ಅಜ್ಞಾನವನ್ನು ಅನುಸರಿಸುವ ನಿಮ್ಮ ಪ್ರಕ್ರಿಯೆಯು ಕೇವಲ ಅಜ್ಞಾನಮೂಲಕವೇ ಸರಿ.

**ಭಾವವಿಲಾಸಿನೀ –** ತಸ್ಮಾದಿತ್ಯಸ್ಯೈವ ವಿವರಣಂ ನೋಪಾದಾನಮಿತಿ । ಯತ್ ಅಜ್ಞಾನಮ್ ॥

**ವಿವರಣೆ -** ಸಂಸಾರವು ಅನಾದಿಯಾದುದರಿಂದ ಅದಕ್ಕೆ ಉಪಾದಾನಕಾರಣದ ಆವಶ್ಯಕತೆ ಇಲ್ಲ. ಆದ್ದರಿಂದ ಸಂಸಾರೋಪಾದಾನಕಾರಣವಾಗಿ ಅಜ್ಞಾನವನ್ನು ಕಲ್ಪನೆ ಮಾಡಬೇಕಾಗಿಲ್ಲ. ಹಿಂದೆ ಹೇಳಿದಂತೆ ಜೀವನ್ಮುಕ್ತಿಯ ದಶೆಯಲ್ಲಿ ಅನುವೃತ್ತವಾಗುವ ಸಂಸಾರವು ಜ್ಞಾನದಿಂದ ನಾಶ್ಯವೂ ಇಲ್ಲ. ಆದ್ದರಿಂದಲೂ ಅಜ್ಞಾನವನ್ನು ಕಲ್ಪನೆ ಮಾಡುವ ಕಾರಣವಿಲ್ಲ.

**ಕಿಂಚಾಧಿಷ್ಠಾನಚೈತನ್ಯಸ್ಯಾಜ್ಞಾನಾವರಣೇ ಸತಿ ।**
**ಅರ್ಥಾನುಲ್ಲೇಖಿತಾಖ್ಯಂ ಸ್ಯಾದ್ ವೈಕಲ್ಯಂ ಭವತೋ ಮತೇ ॥ ೪೪೪ ॥**

**ಅರ್ಥ** – ಕಿಂಚ= ಅದಲ್ಲದೆ, ಭವತಃ= ನಿನ್ನ, ಮತೇ= ಮತದಲ್ಲಿ, ಅಧಿಷ್ಠಾನ ಚೈತನ್ಯಸ್ಯ= ಅಧಿಷ್ಠಾನ ಚೈತನ್ಯಕ್ಕೆ, ಅಜ್ಞಾನಾವರಣೇ= ಅಜ್ಞಾನದ ಆವರಣವು, ಸತಿ= ಇದ್ದರೆ, ಅರ್ಥಾನುಲ್ಲೇಖಿತಾಖ್ಯಂ= ಅರ್ಥಾಪ್ರಕಾಶರೂಪವಾದ, ವೈಕಲ್ಯಂ= ದೋಷವು, ಸ್ಯಾತ್= ಬರುತ್ತದೆ.

**ಅನುವಾದ** - ಮತ್ತು ಅಧಿಷ್ಠಾನಚೈತನ್ಯಕ್ಕೆ ಅಜ್ಞಾನಾವರಣವಿದ್ದರೆ ಅರ್ಥಾಪ್ರಕಾಶ ರೂಪವಾದ ವೈಕಲ್ಯವು ಬರುವುದೆಂದು ನಿನ್ನ ಮತವಷ್ಟೇ?

**ಭಾವವಿಲಾಸಿನೀ**– ಅಪಿ ಚ ಪರಮತೇ ಆವರಣವಿಕ್ಷೇಪಾಖ್ಯಶಕ್ತಿದ್ವಯವತೀ ಅವಿದ್ಯಾಸ್ವಾವರಣಶಕ್ತ್ಯಾ ಅಧಿಷ್ಠಾನಚೈತನ್ಯೇ ಜ್ಞಾನಂ ಪ್ರತಿರುಧ್ಯ ಅತದಾಕಾರ ಪರಿಣಾಮಾಖ್ಯ ಸ್ವವಿಕ್ಷೇಪಶಕ್ತ್ಯಾ ಆದಾವತದಾಕಾರಾತ್ಮಕಜಗದ್ಬ್ರಹ್ಮಣಿ ಪರಿಣಾಮಯೇದೇವ । ನತು ಜಗದಧಿಷ್ಠಾನಚೈತನ್ಯಸ್ಯ ತದುಲ್ಲೇಖಾಖ್ಯಂ ಭ್ರಮಮಪಿ ತದೈವ ಸಂಪಾದಯೇತ್ । ಪ್ರಮಾಣವೈಕಲ್ಯಾದೇವ ತದಗ್ರಹಣೋಪಪತ್ತೇರಿತಿ ವಿವರಣ ಏವೋಕ್ತತ್ವೇನ ಪ್ರಮಾಣಸ್ಯಾಧಿಷ್ಠಾನ ಚೈತನ್ಯಸ್ಯಾಜ್ಞಾನಾವರಣಾಖ್ಯವೈಕಲ್ಯೇ ಸತಿ ಜಗದ್ಗ್ರಹಣಸ್ಯೈವಾಯುಕ್ತತ್ವಾತ್ । ಏವಂಚ ಪರಪ್ರಕ್ರಿಯಯೈವಾನಾರೋಪಿತವಸ್ತುತ್ವಾತ್ ಜಗತಸ್ತತ್ಸಿಧಿರಿತ್ಯಾಹ – **ಕಿಂಚೇತಿ** ॥ ಅಧಿಷ್ಠಾನಚೈತನ್ಯಸ್ಯ । ಘಟಾದ್ಯಧಿಷ್ಠಾನಚೈತನ್ಯಸ್ಯ । ಪ್ರಮಾಣವೈಕಲ್ಯಾದೇವ ತದಗ್ರಹಣೋಪಪತ್ತೇರಿತಿ ವಿವರಣೋಕ್ತೇರ್ಮತ ಇತ್ಯುಕ್ತಮ್ । ಪ್ರಮಾಣಸ್ಯಾಧಿಷ್ಠಾನಚೈತನ್ಯಸ್ಯ ವೈಕಲ್ಯಾತ್ ಅವಿದ್ಯಾವರಣ ನಿಮಿತ್ತವೈಕಲ್ಯಾದೇವ ತೇಷಾಂ ಘಟಾದಿಜಡಪದಾರ್ಥಾನಾಮಗ್ರಹಣೋಪಪತ್ತೇರ್ಪೃಥಕ್ ಜಡೇಷು ಭಾವರೂಪಮಜ್ಞಾನಮಪೇಕ್ಷಿತಮಿತಿ ತತ್ತ್ವದೀಪನೇ ವ್ಯಾಖ್ಯಾತತ್ವಾತ್ ಅಯಮೇವ ವಾಕ್ಯಾರ್ಥ ಇತಿ ದ್ರಷ್ಟವ್ಯಮ್ ॥ ೪೪೪ ॥

**ವಿವರಣೆ** - ಪರಮತದಲ್ಲಿ ಅವಿದ್ಯೆಗೆ ಆವರಣಶಕ್ತಿ ಮತ್ತು ವಿಕ್ಷೇಪಶಕ್ತಿಗಳೆಂಬ ಎರಡು ಶಕ್ತಿಗಳಿವೆ. ಅವಿದ್ಯೆಯು ತನ್ನ ಆವರಣಶಕ್ತಿಯಿಂದ ಅಧಿಷ್ಠಾನಚೈತನ್ಯದಲ್ಲಿ ಜ್ಞಾನವನ್ನು ಪ್ರತಿಬಂಧಿಸಿ ವಿಕ್ಷೇಪಶಕ್ತಿಯಿಂದ ಎಂದರೆ ತನ್ನ ಆಕಾರವಲ್ಲದೆ ಬೇರೆ ಆಕಾರವನ್ನು ಹೊಂದುವಂತೆ ಮಾಡುವ ಶಕ್ತಿಯಿಂದ ಬ್ರಹ್ಮನಲ್ಲಿ ಜಗದ್ರೂಪವಾದ ಪರಿಣಾಮವನ್ನುಂಟು ಮಾಡುತ್ತದೆ. ಆಗಲೇ ಜಗತ್ತಿನ ಭ್ರಾಂತಿಯನ್ನುಂಟುಮಾಡುವುದಿಲ್ಲ. ಏಕೆಂದರೆ ಭ್ರಾಂತಿಯು ಉಂಟಾಗಬೇಕಾದರೆ ಅಧಿಷ್ಠಾನದ ಜ್ಞಾನ ಬೇಕು. ಅವಿದ್ಯೆಯು ತನ್ನ ಆವರಣಶಕ್ತಿಯಿಂದ ಜ್ಞಾನವನ್ನು ಪ್ರತಿಬಂಧಿಸಿರುವುದರಿಂದ ಅಧಿಷ್ಠಾನಜ್ಞಾನವಿಲ್ಲ. ಆದ್ದರಿಂದ ಭ್ರಾಂತಿ ಇಲ್ಲ. ಪ್ರಮಾಣವೈಕಲ್ಯಾದೇವ ತದಗ್ರಹಣೋಪಪತ್ತೇಃ ಎಂಬ ವಿವರಣಕಾರರ ವಾಕ್ಯವೂ ಇದನ್ನು ಸಮರ್ಥಿಸುತ್ತದೆ.

ತತ್ವದೀಪನ ಎಂಬ ಗ್ರಂಥದಲ್ಲಿ ಅವಿದ್ಯಾವರಣದಿಂದುಂಟಾದ ವೈಕಲ್ಯದಿಂದಲೇ ಘಟಾದಿಗಳ ಅಪ್ರಕಾಶವನ್ನು ಸಮರ್ಥಿಸಲು ಬರುವುದರಿಂದ ಘಟಾದಿಜಡವಸ್ತುಗಳಲ್ಲಿ ಭಾವರೂಪಾಜ್ಞಾನವನ್ನು ಅಂಗೀಕರಿಸುವುದಿಲ್ಲ ಎಂದು ವ್ಯಾಖ್ಯಾನಮಾಡಿದ್ದಾರೆ. ಆದ್ದರಿಂದ ಜಗದಾಕಾರಪರಿಣಾಮವುಂಟಾಗಿದೆ ಮತ್ತು ಅದರ ಭ್ರಾಂತಿಯು ಬರಲಿಲ್ಲವೆಂಬ ಕಾರಣದಿಂದಾಗಿ ನಿನ್ನ ಪ್ರಕ್ರಿಯೆಯಿಂದಲೇ ಜಗತ್ತು ಸತ್ಯವೆಂದು ಸಿದ್ಧವಾಯಿತೆಂದು ಅಭಿಪ್ರಾಯ.

ಅನಾದ್ಯೇವ ತದಜ್ಞಾನಂ ನಾಂತರಾಗಂತುಕಂ ಕಿಲ ।
ನಚೇದಜ್ಞಾತತಾಽರ್ಥಸ್ಯ ಕಥಂ ಸ್ಯಾಜ್ಜಡವಸ್ತುನಃ ॥ ೪೪೫ ॥

**ಅರ್ಥ –** ತತ್= ಆ, ಅಜ್ಞಾನಂ= ಅಜ್ಞಾನವು, ಅನಾದಿ ಏವ= ಅನಾದಿಯೇ ಆಗಿದೆ. ಅಂತಃ= ಮಧ್ಯದಲ್ಲಿ, ಆಗಂತುಕಂ= ಬಂದದ್ದು, ನ ಕಿಲ= ಅಲ್ಲವಷ್ಟೆ? ನ ಚೇತ್= ಹಾಗಲ್ಲದಿದ್ದರೆ, ಜಡವಸ್ತುನಃ= ಅಚೇತನ ವಸ್ತುವಿಗೆ, ಅಜ್ಞಾತತಾ= ಅಜ್ಞಾತತ್ವವು, ಕಥಂ= ಹೇಗೆ, ಸ್ಯಾತ್= ಸಿದ್ಧವಾಗುತ್ತದೆ.

**ಅನುವಾದ -** ಆ ಅಜ್ಞಾನವು ಅನಾದಿಯಾದುದು. ಮಧ್ಯೆ ಬಂದುದಲ್ಲ. ಹಾಗಲ್ಲದಿದ್ದರೆ ಜಡವಸ್ತುಗಳಿಗೆ ಅನಾದಿಯಾದ ಅಜ್ಞಾತತ್ವವು ಹೇಗೆ ಸಿದ್ಧವಾಗುತ್ತದೆ?

**ಭಾವವಿಲಾಸಿನೀ–** ತದರ್ಥಾನುಲ್ಲೇಖಿತ್ವಾಖ್ಯವೈಕಲ್ಯ ಸಂಪಾದಕಮ್ । ನಚೇತ್ ಚೈತನ್ಯ-ವೈಕಲ್ಯಾದೇವ ಘಟಾದ್ಯಗ್ರಹಣಂ ನಚೇತ್ ॥ ೪೪೫ ॥

**ವಿವರಣೆ -** ಪರವಾದಿಗಳು ಜಡದಲ್ಲಿ ಅನಾದಿಕಾಲದಿಂದ ಅಜ್ಞಾತತ್ವವಿದೆ ಎಂದು ಒಪ್ಪುತ್ತಾರೆ. ಅಜ್ಞಾತತ್ವವು ಇರಬೇಕಾದರೆ ತದುಲ್ಲೇಖಿಚೈತನ್ಯವೈಕಲ್ಯ ಇರಬೇಕು. ಎಂದರೆ ಜಡವನ್ನು ಉಲ್ಲೇಖಿಸುವ ಚೈತನ್ಯವಿರಬಾರದು ಎಂದರ್ಥ. ಸುಲಭವಾಗಿ ಹೇಳುವುದಾದರೆ ಜಡವನ್ನು ಪ್ರಕಾಶಿಸುವ ಜ್ಞಾನವಿರಬಾರದು ಎಂದರ್ಥ. ಆದ್ದರಿಂದ ತದುಲ್ಲೇಖಿಚೈತನ್ಯವು ಅನಾದಿಯಿಂದಲೂ ಇಲ್ಲ. ಇಂತಹ ಚೈತನ್ಯ ಇರಲು ಅಜ್ಞಾನದ ಆವರಣಶಕ್ತಿಯಿಂದ ಅದು ಪ್ರತಿಬದ್ಧವಾಗಿರುವುದೇ ಕಾರಣ. ಆದ್ದರಿಂದ ಅಂತಹ ಆವರಣಶಕ್ತಿಯುಳ್ಳ ಅಜ್ಞಾನವೂ ಅನಾದಿಕಾಲದಿಂದಲೇ ಇರಬೇಕು.

ಚಿದ್ವೈಕಲ್ಯಾದೇವ ತೇಷಾಮಜ್ಞಾತತ್ವಂ ಮತೇ ತವ ।
ನ ಹಿ ಪ್ರಾತೀತಿಕಃ ಸರ್ವೋ ಘಟಾದಿರಪಿ ತೇ ಮತೇ ॥ ೪೪೬ ॥

**ಅರ್ಥ –** ತವ= ನಿನ್ನ, ಮತೇ= ಮತದಲ್ಲಿ, ತೇಷಾಂ= ಆ ಜಡವಸ್ತುಗಳಿಗೆ ಚಿದ್ವೈಕಲ್ಯಾದೇವ= ಚಿದ್ವೈಕಲ್ಯದಿಂದಲೇ, ಅಜ್ಞಾತತ್ವಂ= ಅಜ್ಞಾತತ್ವವು ಇದೆ. ತೇ= ನಿನ್ನ,

ಮತೇ= ಮತದಲ್ಲಿ, ಘಟಾದಿಃ= ಘಟವೇ ಮೊದಲಾದ, ಸರ್ವಃ ಅಪಿ= ಎಲ್ಲ ವಸ್ತುಗಳ ಸಮುದಾಯವು, ಪ್ರಾತೀತಿಕಃ= ಪ್ರಾತಿಭಾಸಿಕವು ನ ಹಿ= ಅಲ್ಲವಷ್ಟೆ?

**ಅನುವಾದ** - ಚಿದ್ವೈಕಲ್ಯದಿಂದಲೇ ಜಡಕ್ಕೆ ಅಜ್ಞಾತತ್ವವನ್ನು ನಿನ್ನ ಮತದಲ್ಲಿ ಹೇಳಬೇಕು. ಘಟಾದಿಗಳೆಲ್ಲವೂ ನಿನ್ನ ಮತದಲ್ಲಿ ಪ್ರಾತಿಭಾಸಿಕವಲ್ಲ.

**ಭಾವವಿಲಾಸಿನೀ–** ಪ್ರಾತೀತಿಕಃ ಪ್ರತೀತಿದಶಾಯಾಮೇವ ವಿದ್ಯಮಾನೋऽನ್ಯದಾऽವಿದ್ಯಮಾನಶ್ಚ ॥ ೪೪೬ ॥

ಅತೋऽಪ್ರತೀತತಾ ತೇಷಾಮಧಿಷ್ಠಾನಾವೃತೇಃ ಪರಂ ।
ಭ್ರಮಾನುಕೂಲಂ ಪೂರ್ವಂ ಚೇತ್ತಂ ರುಣದ್ಧಿ ಪುನಃ ಕಥಂ ॥ ೪೪೭ ॥

**ಅರ್ಥ–** ಅತಃ= ಆದ್ದರಿಂದ, ತೇಷಾಂ= ಘಟಾದಿ ಜಡಗಳಿಗೆ, ಅಧಿಷ್ಠಾನಾವೃತೇಃ= ಅಧಿಷ್ಠಾನವು ಆವೃತವಾಗಿರುವುದರಿಂದ, ಪೂರ್ವಂ= ಮೊದಲು, ಭ್ರಮಾನುಕೂಲಂ ಚೇತ್= ಭ್ರಮೋತ್ಪತ್ತಿಗೆ ಅನುಕೂಲವಾಗುವುದಾದರೆ, ಪುನಃ= ಮತ್ತೆ ಸೃಷ್ಟಿಯಾದನಂತರ, ಕಥಂ= ಹೇಗೆ, ತಂ= ಭ್ರಮವನ್ನು, ರುಣದ್ಧಿ= ಪ್ರತಿಬಂಧಿಸುತ್ತದೆ.

**ಅನುವಾದ** - ಅಧಿಷ್ಠಾನವನ್ನು ಆವರಣಮಾಡುವ ಕಾರಣದಿಂದಾಗಿ ಅಜ್ಞಾತತ್ವವು ಆದಿ ಸೃಷ್ಟಿಯಲ್ಲಿ ಜಗತ್ತಿನ ಭ್ರಮೆಗೆ ಅನುಕೂಲವಾಗುವುದಾದರೆ ಅನಂತರ (ಈಗ) ಜಗದ್ಭ್ರಮವನ್ನು ಹೇಗೆ ಪ್ರತಿಬಂಧಿಸುತ್ತದೆ?

**ಭಾವವಿಲಾಸಿನೀ–** ಪೂರ್ವಮ್ ಆದಿಸೃಷ್ಟೌ । ಭ್ರಮಾನುಕೂಲಂ ಜಗದ್ಭ್ರಮಾನುಕೂಲಮ್ । ತಂ ಭ್ರಮಮ್ । ಪುನಃ ಘಟಪಟಾದಿಭ್ರಮದಶಾಯಾಮ್ ॥ ೪೪೭ ॥

**ವಿವರಣೆ** - ಈಗ ವಿಯದಾದಿ ಮತ್ತು ಘಟಾದಿ ಜಗತ್ತು ಇದೆ. ಅವುಗಳ ಜ್ಞಾನ ಒಮ್ಮೊಮ್ಮೆ ಬರುತ್ತದೆ. ಒಮ್ಮೊಮ್ಮೆ ಬರುವುದಿಲ್ಲ. ಬರದಿರುವುದಕ್ಕೆ ಕಾರಣವೇನೆಂದು ಕೇಳಿದರೆ ಅಧಿಷ್ಠಾನಚೈತನ್ಯವು ಅಜ್ಞಾನದಿಂದ ಆವೃತವಾಗಿರುವುದರಿಂದ, ಎಂದರೆ ಪ್ರಮಾಣವೈಕಲ್ಯವಿರುವುದರಿಂದ ಅವುಗಳ ಜ್ಞಾನ ಇಲ್ಲ ಎಂದು ಹೇಳಬೇಕು. ಯದ್ಯಪಿ ಅವುಗಳ ಜ್ಞಾನವು ಭ್ರಮರೂಪವೇ. ಆದ್ದರಿಂದ ಅವುಗಳ ಭ್ರಮಕ್ಕೆ ಪ್ರತಿಬಂಧಕವಾದುದು ಅಜ್ಞಾನಾವರಣ ಎಂದು ಹೇಳಬೇಕು. ಆದರೆ ಆದಿಸೃಷ್ಟಿಯಲ್ಲಿ ಅಜ್ಞಾತತ್ವವು ಎಂದರೆ ಅಜ್ಞಾನದ ಆವರಣವು ಭ್ರಮಕ್ಕೆ ಅನುಕೂಲ ಎಂದು ಒಪ್ಪಿದ್ದೀರಿ. ಹಾಗಾದರೆ ಈಗ ಮಾತ್ರ ಅದು ಜಗದ್ಭ್ರಮಕ್ಕೆ ಹೇಗೆ ಪ್ರತಿಕೂಲವಾಗುತ್ತದೆ ಎಂದು ಅಭಿಪ್ರಾಯ.

ಪಶ್ಚಾತ್ತು ತನ್ನಿರೋಧಾಯ ಕಿಮಜ್ಞಾನಂ ತಪೋऽತಪತ್।
ಮಧ್ಯೇऽಜ್ಞಾನಾಂತರೋತ್ಪತ್ತಾವನಾದಿತ್ವಕಥಾ ಗತಾ ॥ ೪೪೮ ॥

**ಅರ್ಥ** – ಪಶ್ಚಾತ್ ತು= ಅನಂತರವಾದರೂ, ತನ್ನಿರೋಧಾಯ= ಈ ಘಟಪಟಾದಿರೂಪ ಜಗತ್ತಿನ ಭ್ರಮದ ಪ್ರತಿರೋಧಕ್ಕಾಗಿ, ಅಜ್ಞಾನಂ= ಅಜ್ಞಾನವು, ತಪಃ= ತಪಸ್ಸನ್ನು, ಅತಪತ್ ಕಿಂ= ಆಚರಿಸಿತೇನು? ಮಧ್ಯೇ= ಮಧ್ಯದಲ್ಲಿ, ಅಜ್ಞಾನಾಂತರೋತ್ಪತ್ತೌ= ಬೇರೊಂದು ಅಜ್ಞಾನದ ಉತ್ಪತ್ತಿಯು ಆಗುವುದಾದರೆ ಅನಾದಿತ್ವಕಥಾ= ಅಜ್ಞಾನವು ಅನಾದಿ ಎಂಬ ವಿಚಾರವು, ಗತಾ= ಬಿದ್ದುಹೋಯಿತು.

**ಅನುವಾದ** - ಅನಂತರ ಈಗ ಜಗದ್ಭ್ರಮವನ್ನು ಪ್ರತಿರೋಧಮಾಡಲು ಅಜ್ಞಾನವು ಏನಾದರೂ ತಪಸ್ಸನ್ನು ಆಚರಿಸಿತೇ? ಮೊದಲಿನ ಅಜ್ಞಾನ ಬೇರೆ, ಈಗಿನ ಅಜ್ಞಾನ ಬೇರೆ ಎಂದು ಹೇಳಿದರೆ ಅಜ್ಞಾನವು ಅನಾದಿ ಎಂಬ ಮಾತು ಬಿದ್ದುಹೋಯಿತು.

ಭಾವವಿಲಾಸಿನೀ– ತನ್ನಿರೋಧಾಯ ಘಟಪಟಾದಿಭ್ರಮನಿರೋಧಾಯ ಅನಾದಿತ್ವಕಥಾ ಅಜ್ಞಾನಾನಾದಿತ್ವಕಥಾ ॥ ೪೪೮ ॥

**ವಿವರಣೆ** - ಸರ್ಗಾದಿಯಲ್ಲಿ ಅಜ್ಞಾನವು ಭ್ರಮಕ್ಕೆ ಅನುಕೂಲವಾದರೆ ಈಗೇಕೆ ಪ್ರತಿಕೂಲವಾಗುತ್ತದೆ? ಸ್ವಭಾವ ಬದಲಾಗುವುದಿಲ್ಲವಷ್ಟೇ. ಅಥವಾ ಅಜ್ಞಾನವು ತನ್ನ ಸ್ವಭಾವವನ್ನು ಬದಲಾಯಿಸಿಕೊಳ್ಳಲು ಏನಾದರೂ ತಪಸ್ಸನ್ನು ಮಾಡಿ ಸಿದ್ಧಿಯನ್ನು ಪಡೆಯಿತೇ? ಅದಕ್ಕೆ ಬೇರೆ ಬೇರೆ ಸ್ವಭಾವದ ಅಜ್ಞಾನಗಳೇ ಬೇರೆ ಎಂದು ಹೇಳಿದರೆ ಅಜ್ಞಾನವು ಅನಾದಿ ಎಂಬ ವಾದವು ಬಿದ್ದುಹೋಗುತ್ತದೆ.

ಮುಕ್ತಾವಪಿ ತದುತ್ಪತ್ತ್ಯಾ ಸ್ಯಾನ್ಮುಕ್ತಸ್ಯ ಪುನರ್ಭವಃ ।
ತಸ್ಮಾದಾವೃತಚೈತನ್ಯಂ ನಾರ್ಥಜ್ಞಾನಂ ಭವೇತ್ತವ ॥ ೪೪೯ ॥

**ಅರ್ಥ** – ಮುಕ್ತೌ ಅಪಿ= ಮೋಕ್ಷದಲ್ಲಿಯೂ ಕೂಡ, ತುದುತ್ಪತ್ತ್ಯಾ= ಇನ್ನೊಂದು ಅಜ್ಞಾನವು ಹುಟ್ಟುವ ಸಾಧ್ಯತೆಯಿರುವುದರಿಂದ, ಮುಕ್ತಸ್ಯ= ಮುಕ್ತಜೀವನಿಗೆ, ಪುನರ್ಭವಃ= ಪುನರ್ಜನ್ಮವು, ಸ್ಯಾತ್= ಬಂದೀತು, ತಸ್ಮಾತ್= ಆದ್ದರಿಂದ, ತವ= ನಿನ್ನ, ಮತೇ= ಮತದಲ್ಲಿ, ಆವೃತಚೈತನ್ಯಂ= ಆವೃತಚೈತನ್ಯವು, ಅರ್ಥಜ್ಞಾನಂ= ಅರ್ಥಜ್ಞಾನವಾಗಿ, ನ ಭವೇತ್= ಆಗಲಾರದು.

**ಅನುವಾದ** - ಮುಕ್ತಿಯಲ್ಲಿಯೂ ಇನ್ನೊಂದು ಅಜ್ಞಾನವು ಉತ್ಪತ್ತಿಯಾಗುವ ಸಾಧ್ಯತೆ ಇರುವುದರಿಂದ ಮುಕ್ತನಿಗೆ ಪುನಃ ಸಂಸಾರವು ಉಂಟಾಗಬೇಕಾಗುತ್ತದೆ. ಆದ್ದರಿಂದ ಆವೃತಚೈತನ್ಯವು ಅರ್ಥಜ್ಞಾನವೆಂದು ನೀನು ಒಪ್ಪಲು ಸಾಧ್ಯವಿಲ್ಲ.

ಭಾವವಿಲಾಸಿನೀ–ಸಾಧ್ಯಜ್ಞಾನಾಂಗೀಕಾರೇ ಬಾಧಮಾಹ–ಮುಕ್ತಾವಿತಿ ॥ ತದುತ್ಪತ್ತ್ಯಾ ಅಜ್ಞಾನೋತ್ಪತ್ತ್ಯಾ । ತಸ್ಮಾತ್ ಪಶ್ಚಾತ್ ಭ್ರಮವಿರೋಧ್ಯಜ್ಞಾನಸ್ಯಾನಾದಿತ್ವೇನಾದಿಸೃಷ್ಟಾವಪಿ ಸತ್ತ್ವಾ ತ್ ॥ ೪೪೯ ॥

**ವಿವರಣೆ** - ಘಟಕ್ಕೆ ಅಧಿಷ್ಠಾನವಾದ ಚೈತನ್ಯದ ಪ್ರಕಾಶವೇ ಘಟಪ್ರಕಾಶ. ಅದೇ ಘಟಜ್ಞಾನ. ಆದರೆ ಘಟಾಧಿಷ್ಠಾನಚೈತನ್ಯವು ಅಜ್ಞಾನದಿಂದ ಆವೃತವಾಗಿರುವುದರಿಂದ ಅದಕ್ಕೆ ಪ್ರಕಾಶವಿಲ್ಲ. ಹೀಗಿರುವಾಗ ಘಟಪ್ರಕಾಶರೂಪವಾದ ಘಟಜ್ಞಾನವು ಹೇಗೆ ಉತ್ಪತ್ತಿಯಾಗುತ್ತದೆ? ಆದ್ದರಿಂದ ಅಧಿಷ್ಠಾನಚೈತನ್ಯವು ಅರ್ಥಜ್ಞಾನರೂಪವವಾದುದು ಎಂಬ ವಾದವನ್ನು ಬಿಡು.

**ಅತದಾಕಾರವಿಕೃತಿರಧಿಷ್ಠಾನಾವೃತಿಸ್ತಥಾ ।**
**ದ್ವೇ ಶಕ್ತೀ ಕಿಲ ತೇಽಜ್ಞಾನೇ ವೈಕಲ್ಯಸ್ಯೈವ ಕರ್ತೃ ತತ್ ॥ ೪೫೦ ॥**

**ಅರ್ಥ** – ತೇ= ನಿನ್ನ, ಅಜ್ಞಾನೇ= ಅಜ್ಞಾನದಲ್ಲಿ, ಅತದಾಕಾರವಿಕೃತಿಃ= ಭಿನ್ನರೂಪ ಪರಿಣಾಮವು, ತಥಾ= ಮತ್ತು, ಅಧಿಷ್ಠಾನಾವೃತಿಃ= ಅಧಿಷ್ಠಾನಾವರಣವು ಎಂಬುದಾಗಿ, ದ್ವೇ= ಎರಡು, ಶಕ್ತೀ= ಶಕ್ತಿಗಳು, ಸ್ತಃ ಕಿಲ= ಇವೆಯಷ್ಟೇ? ತತ್= ಆದ್ದರಿಂದ, ತತ್= ಅಜ್ಞಾನವು, ವೈಕಲ್ಯಸ್ಯ= ಪ್ರಮಾಣ ವೈಕಲ್ಯಕ್ಕೇ, ಏವ ಕರ್ತೃ= ಕಾರಣವಾಗಿದೆ.

**ಅನುವಾದ** - ಅಜ್ಞಾನಕ್ಕೆ ಅಧಿಷ್ಠಾನಾವರಣ ಮತ್ತು ಭಿನ್ನರೂಪಪರಿಣಾಮ ಎಂಬ ಎರಡೇ ಶಕ್ತಿಯಷ್ಟೇ. ಆದ್ದರಿಂದ ಅಜ್ಞಾನವು ಪ್ರಮಾಣವೈಕಲ್ಯಕ್ಕೇ ಕಾರಣವಾದುದು.

**ಭಾವವಿಲಾಸಿನೀ**– ವೈಕಲ್ಯಸ್ಯ ಚೈತನ್ಯವೈಕಲ್ಯಸ್ಯ । ತದಜ್ಞಾನಮ್ ॥ ೪೫೦ ॥

**ಅತೋಽಜ್ಞಾನೋದ್ಭವಂ ವಿಶ್ವಂ ತದಾ ಬ್ರಹ್ಮ ನ ವೀಕ್ಷತೇ ।**
**ಉತ್ಪತ್ತಿಸಮಯೇ ತಸ್ಮಾದನಾರೋಪಿತಮೇವ ತತ್ ॥ ೪೫೧ ॥**

**ಅರ್ಥ** – ಅತಃ= ಅಧಿಷ್ಠಾನ ಚೈತನ್ಯವು ಅಜ್ಞಾನಾವೃತವಾಗಿರುವುದರಿಂದ, ಅಜ್ಞಾನೋದ್ಭವಂ= ಅಜ್ಞಾನಕಾರ್ಯವಾದ, ವಿಶ್ವಂ= ಪ್ರಪಂಚವನ್ನು, ತದಾ= ಉತ್ಪತ್ತಿ ಸಮಯದಲ್ಲಿ, ಬ್ರಹ್ಮ= ಪರಬ್ರಹ್ಮವು, ನ ವೀಕ್ಷತೇ= ನೋಡುವುದಿಲ್ಲ, ಅತಃ= ಆದ್ದರಿಂದ, ಉತ್ಪತ್ತಿ ಸಮಯೇ= ಹುಟ್ಟುವ ಸಮಯದಲ್ಲಿ, ತತ್= ಆ, ಸರ್ವಂ= ಎಲ್ಲ, ಜಗತ್= ಪ್ರಪಂಚವು, ಅನಾರೋಪಿತಂ ಏವ= ಅನಾರೋಪಿತವೇ ಆಗಿದೆ.

**ಅನುವಾದ** - ಆದ್ದರಿಂದ ಅಜ್ಞಾನಕಾರ್ಯವಾದ ಜಗತ್ತಿನ ಉತ್ಪತ್ತಿಕಾಲದಲ್ಲಿ ಬ್ರಹ್ಮನು ಜಗತ್ತನ್ನು ನೋಡುವುದಿಲ್ಲ, ಆದ್ದರಿಂದ ಜಗತ್ತು ಅನಾರೋಪಿತವಾದುದು.

**ಭಾವವಿಲಾಸಿನೀ**– ಅತಃ ಅಜ್ಞಾನಾವೃತತ್ವಾತ್ । ತದಾ ಉತ್ಪತ್ತಿಕಾಲೇ । ತತ್ ತಸ್ಮಾತ್ ॥೪೫೧॥

**ವಿವರಣೆ** - ಉತ್ಪತ್ತಿಯ ಸಮಯದಲ್ಲಿ ಅಧಿಷ್ಠಾನಚೈತನ್ಯವು ಅಜ್ಞಾನಾವೃತವಾಗಿರುವುದರಿಂದ ಅಧಿಷ್ಠಾನಪ್ರಕಾಶವೇ ಇಲ್ಲ. ಎಂದರೆ ಬ್ರಹ್ಮನಿಗೆ ಜಗತ್ತಿನ ಜ್ಞಾನವೇ ಇಲ್ಲ. ಹೀಗಿರುವಾಗ ಬ್ರಹ್ಮನಿಗೆ ಜಗತ್ತಿನ ಜ್ಞಾನವಿದೆ ಎಂದು ಕಲ್ಪಿಸಿ ಆ ಜ್ಞಾನವು

ಭ್ರಮರೂಪವಾದುದರಿಂದ ಜಗತ್ತು ಆರೋಪಿತ ಎಂದು ಹೇಗೆ ಪ್ರತಿಪಾದನೆ ಮಾಡುತ್ತೀರಿ ಎಂದು ಅಭಿಪ್ರಾಯ.

ವೃತ್ತ್ಯಾಽಜ್ಞಾನನಿವೃತ್ತೌ ಹಿ ಬ್ರಹ್ಮ ತತ್ತದ್ಭ್ರಮಸ್ತವ ।
ಅಪರೋಕ್ಷಾತು ಯಾ ವೃತ್ತಿಃ ಸೈವಾಜ್ಞಾನನಿವರ್ತಿಕಾ ॥ ೪೫೨ ॥

**ಅರ್ಥ–** ವೃತ್ತ್ಯಾ= ವೃತ್ತಿಯಿಂದ, ಅಜ್ಞಾನನನಿವೃತ್ತೌ= ಅಜ್ಞಾನವು ನಿವೃತ್ತವಾದರೆ, ತವ= ನಿನಗೆ, ಬ್ರಹ್ಮ= ಬ್ರಹ್ಮನು, ತತ್ತದ್ಭ್ರಮಃ ಹಿ= ಆಯಾಭ್ರಮರೂಪನಾಗುತ್ತಾನಷ್ಟೆ?

**ಅನುವಾದ -** ವೃತ್ತಿಯಿಂದ ಅಜ್ಞಾನವು ನಿವೃತ್ತವಾದರೆ ಮಾತ್ರ ಆಗ ವಸ್ತುವಿನ ಜ್ಞಾನವು ಬರುತ್ತದೆ. ಆ ಜ್ಞಾನವು ಭ್ರಮರೂಪ. ಮತ್ತು ಬ್ರಹ್ಮರೂಪ. ಅಪರೋಕ್ಷವೃತ್ತಿಯೇ ಅಜ್ಞಾನನಿವರ್ತಕ.

**ಭಾವವಿಲಾಸಿನೀ–** ಉತ್ಪತ್ತಿಪರ್ಯಾಲೋಚನಯಾ ಪ್ರಾಗಾರೋಪಾಸಂಭವ ಉಕ್ತಃ ॥೪೫೨॥

**ವಿವರಣೆ -** ಇದುವರೆಗೆ ವಸ್ತುವಿನ ಉತ್ಪತ್ತಿಯನ್ನು ವಿಮರ್ಶೆಮಾಡಿ ಆರೋಪವನ್ನು ಅಂಗೀಕರಿಸಲು ಸಾಧ್ಯವಿಲ್ಲ ಎಂದು ಹೇಳಿದ್ದಾಯಿತು. ಇನ್ನು ವಸ್ತುವಿನ ಪ್ರತೀತಿಯನ್ನು ವಿಮರ್ಶೆಮಾಡಿದರೂ ಆರೋಪವು ಸಾಧ್ಯವಿಲ್ಲವೆಂದು ಹೇಳುತ್ತಾರೆ. ಸಾವಯವವಾದ ತೈಜಸವಾದ ಅಂತಃಕರಣವು ಚಕ್ಷುರಾದಿಇಂದ್ರಿಯದ್ವಾರಾ ಹೊರಗೆ ಬಂದು ವಿಷಯದ ಸಂಪರ್ಕವನ್ನು ಹೊಂದಿ ವಿಷಯಾಕಾರವಾಗಿ ಪರಿಣಾಮ ಹೊಂದುತ್ತದೆ. ಈ ಪರಿಣಾಮಕ್ಕೆ ವೃತ್ತಿ ಎಂದು ಹೆಸರು. ಇದು ಅದ್ವೈತಿಗಳ ಪ್ರಕ್ರಿಯೆ.

ಸಾ ಚಾರ್ಥೇಂದ್ರಿಯಸಂಯೋಗೇ ಸತ್ಯೇವ ಸ್ಯಾನ್ನ ಚಾನ್ಯಥಾ ।
ಸನ್ನಿಕರ್ಷಶ್ಚ ಸಂಬಂಧಿದ್ವಯಸತ್ವೇ ಪರಂ ಭವೇತ್ ॥ ೪೫೩ ॥

**ಅರ್ಥ–** ಸಾ ಚ= ಆ ಅಪರೋಕ್ಷ ವೃತ್ತಿಯಾದರೂ, ಅರ್ಥೇಂದ್ರಿಯ ಸಂಯೋಗೇ ಸತಿ ಏವ= ವಸ್ತುವಿಗೂ ಮತ್ತು ಇಂದ್ರಿಯಕ್ಕೂ ಸಂಯೋಗವಿದ್ದಾಗ ಮಾತ್ರ ಸ್ಯಾತ್= ಹುಟ್ಟುತ್ತದೆ, ಅನ್ಯಥಾ ಚ= ಆ ಸಂಯೋಗವಿಲ್ಲದಿದ್ದಾಗ, ನ ಸ್ಯಾತ್= ಹುಟ್ಟುವುದಿಲ್ಲ, ಸಂನಿಕರ್ಷಃ ಚ= ಸಂಯೋಗವಾದರೂ ಸಂಬಂಧಿದ್ವಯ ಸತ್ವೇ= ಎರಡು ಸಂಬಂಧಿಗಳು ಇದ್ದಾಗ ಮಾತ್ರ ಆಗುತ್ತದೆ.

**ಅನುವಾದ -** ಅಪರೋಕ್ಷವೃತ್ತಿಯಾದರೋ ಇಂದ್ರಿಯಕ್ಕೂ ಮತ್ತು ವಸ್ತುವಿಗೂ ಸಂಯೋಗ ಉಂಟಾದರೆ ಮಾತ್ರ ಉತ್ಪತ್ತಿಯಾಗುತ್ತದೆ. ಎರಡು ವಸ್ತುಗಳಿಗೆ ಯಾವುದೇ ಸನ್ನಿಕರ್ಷವಾಗಬೇಕಾದರೆ ಆ ವಸ್ತುಗಳು ಆ ಸನ್ನಿಕರ್ಷಕ್ಕಿಂತ ಮೊದಲೇ ಇದ್ದರೆ ಮಾತ್ರ ಸಾಧ್ಯ.

ಅತೋ ಭ್ರಮಾತ್ ಪೂರ್ವಮೇವ ಸರ್ವಮೇತಚ್ಚರಾಚರಂ ।
ಜಗದಸ್ತೀತಿ ಕಿಂ ವಾ ತೇ ಭವೇದಾರೋಪಿತಂ ವದ ॥ ೪೫೪ ॥

**ಅರ್ಥ–** ಅತಃ= ಆದ್ದರಿಂಧ, ಭ್ರಮಾತ್ ಪೂರ್ವಂ ಏವ= ಜಗತ್ತಿನ ಭ್ರಮವು ಬರುವುದಕ್ಕಿಂತ ಮುಂಚೆಯೇ, ಏತತ್= ಈ, ಸರ್ವಂ= ಎಲ್ಲ, ಚರಾಚರಾತ್ಮಕಂ= ಜಂಗಮ ಸ್ಥಾವರಾತ್ಮಕವಾದ, ಜಗತ್= ಪ್ರಪಂಚವು, ಅಸ್ತಿ= ಇದೆ.

**ಅನುವಾದ -** ಆದ್ದರಿಂದ ಜಗತ್ತಿನ ಭ್ರಮೆ ಬರುವುದಕ್ಕಿಂತ ಮೊದಲೇ ಚರಾಚರಾತ್ಮಕವಾದ ಜಗತ್ತು ಇದೆ ಎಂದು ಸಿದ್ಧವಾಯಿತು. ಹೀಗಿರುವಾಗ ಯಾವುದು ಆರೋಪಿತವಾಗಲು ಸಾಧ್ಯ ಎಂದು ಹೇಳು.

**ಭಾವವಿಲಾಸಿನೀ–** ಪ್ರತೀತಿ ಪರ್ಯಾಲೋಚನಯಾಪಿ ತಮಾಹ – ವೃತ್ಯೇತಿ ॥ ೪೫೪ ॥

ತಸ್ಮಾದಭ್ರಮಸಿದ್ಧತ್ವಾದ್‌ಬ್ರಹ್ಮವತ್ ಪರಮಾರ್ಥಸತ್ ।
ಪರಪ್ರಕ್ರಿಯಯೈವಾಭೂಚ್ಚರಾಚರಮಿದಂ ಜಗತ್ ॥ ೪೫೫ ॥

**ಅರ್ಥ –** ತಸ್ಮಾತ್= ಆ ಕಾರಣದಿಂದ, ಅಭ್ರಮಸಿದ್ಧತ್ವಾತ್= ಭ್ರಮಸಿದ್ಧ (ಭ್ರಮ ವಿಷಯ) ವಲ್ಲವಾದ್ದರಿಂದ, ಇದಂ= ಈ ಚರಾಚರಾತ್ಮಕ ಜಂಗಮ ಸ್ಥಾವರಾತ್ಮಕವಾದ, ಜಗತ್= ಪ್ರಪಂಚವು, ಪರಪ್ರಕ್ರಿಯಯಾ ಏವ= ಅದ್ವೈತಿಗಳ ಪ್ರಕ್ರಿಯೆಗನುಸಾರವಾಗಿಯೇ, ಬ್ರಹ್ಮವತ್= ಪರಬ್ರಹ್ಮನಂತೆ, ಪರಮಾರ್ಥಸತ್= ಪಾರಮಾರ್ಥಿಕ ಸತ್ಯವು, ಅಭೂತ್= ಆಯಿತು.

**ಅನುವಾದ -** ಆದ್ದರಿಂದ ಚರಾಚರಾತ್ಮಕವಾದ ಈ ಜಗತ್ತು ಭ್ರಮಸಿದ್ಧ-ವಾಗಲಿಲ್ಲವಾದ್ದರಿಂದ ಬ್ರಹ್ಮನಂತೆ ಪಾರಮಾರ್ಥಿಕಸತ್ಯವೆಂದು ಮಾಯಾವಾದಿಗಳ ಪ್ರಕ್ರಿಯೆಯಿಂದಲೇ ಸಿದ್ಧವಾಯಿತು.

**ಭಾವವಿಲಾಸಿನೀ–** ತಸ್ಮಾತ್ ಉಕ್ತ ಪ್ರಕಾರದ್ವಯಾತ್ ॥ ೪೫೫ ॥

**ವಿವರಣೆ -** ಜಗತ್ತಿನ ಉತ್ಪತ್ತಿಯನ್ನು ವಿಮರ್ಶೆಮಾಡಿದರೂ ಅಥವಾ ಪ್ರತೀತಿಯನ್ನು ವಿಮರ್ಶೆಮಾಡಿದರೂ ಸಹ ಜಗತ್ತು ಭ್ರಮಕ್ಕಿಂತ ಮೊದಲೇ ಸಿದ್ಧವಾಗಿರುವುದರಿಂದ ಜಗತ್ತಿನ ಆರೋಪವು ಉಪಪನ್ನವಾಗುವುದಿಲ್ಲ ಎಂದು ಅಭಿಪ್ರಾಯ.

ಬ್ರಹ್ಮಚಿನ್ನ ಘಟಾರೋಪೋ ಯದಜ್ಞಾನನಿವರ್ತನಂ ।
ಸಾಽಪೇಕ್ಷತೇ ತಚ್ಚ ಸಾಕ್ಷಾತ್ಕಾರಿವೃತ್ತಿಮಸೌ ಪುರಾ ॥ ೪೫೬ ॥

ಅವಶ್ಯಮರ್ಥಸಂಬಂಧಂ ಸ ಚಾರ್ಥಾನಾಮವಸ್ಥಿತಿಂ ।
ಏವಂ ಚ ಪ್ರಾಕ್ ಸತೋಽರ್ಥಸ್ಯ ಕಥಂ ಸ್ಯಾದಂತ್ಯಜಾಜ್ಜನಿಃ ॥ ೪೫೭ ॥

**ಅರ್ಥ** – ಯತ್= ಯಾವ ಕಾರಣದಿಂದ, ಬ್ರಹ್ಮಚಿತ್= ಬ್ರಹ್ಮಚೈತನ್ಯವು, ಅಜ್ಞಾನ ನಿವರ್ತನಂ= ಅಜ್ಞಾನ ನಿವೃತ್ತಿಯನ್ನು, ಅಪೇಕ್ಷತೇ= ಅಪೇಕ್ಷಿಸುತ್ತಿದೆಯೋ, ತತ್= ಆ ಕಾರಣದಿಂದ, ಸಾ= ಆ ಬ್ರಹ್ಮಚೈತನ್ಯವು, ಘಟಾರೋಪಃ= ಘಟಾರೋಪರೂಪವಾದದ್ದು, ನ= ಅಲ್ಲ, ತತ್ ಚ= ಆ ಅಜ್ಞಾನ ನಿವೃತ್ತಿಯಾದರೂ, ಸಾಕ್ಷಾತ್ಕಾರಿವೃತ್ತಿಂ= ಅಪರೋಕ್ಷ ವೃತ್ತಿಯನ್ನು, ಅಪೇಕ್ಷತೇ= ಅಪೇಕ್ಷಿಸುತ್ತದೆ, ಅಸೌ= ಈ ಅಪರೋಕ್ಷವೃತ್ತಿಯು, ಪುರಾ= ತನಗಿಂತ ಮೊದಲು, ಅವಶ್ಯಂ= ಅವಶ್ಯಕವಾಗಿರುವ, ಅರ್ಥಸಂಬಂಧಂ= ಅರ್ಥದ ಸನ್ನಿಕರ್ಷವನ್ನು, ಅಪೇಕ್ಷತೇ= ಬಯಸುತ್ತದೆ, ಸಃ ಚ= ಆ ಅರ್ಥಸನ್ನಿಕರ್ಷವಾದರೂ, ಪುರಾ= ತನಗಿಂತ ಮುಂಚೆ, ಅರ್ಥಾನಾಂ= ವಸ್ತುಗಳ, ಅವಸ್ಥಿತಿಂ= ಉಪಸ್ಥಿತಿಯನ್ನು, ಅಪೇಕ್ಷತೇ= ಬಯಸುತ್ತದೆ, ಏವಂ ಚ= ಹೀಗಿರುವಾಗ, ಪ್ರಾಕ್= ಮೊದಲೇ, ಸತಃ= ಇರುವ, ಅರ್ಥಸ್ಯ= ವಸ್ತುವಿನ, ಜನಿಃ= ಉತ್ಪತ್ತಿಯು, ಅಂತ್ಯಜಾತ್= ಅನಂತರ ಉತ್ಪನ್ನವಾಗುವ ಭ್ರಮದಿಂದ, ಕಥಂ= ಹೇಗೆ, ಸ್ಯಾತ್= ಆಗುತ್ತದೆ?

**ಅನುವಾದ** - ಬ್ರಹ್ಮಚೈತನ್ಯವು ಘಟಾರೋಪರೂಪವಾದದ್ದಲ್ಲ, ಏಕೆಂದರೆ ಬ್ರಹ್ಮ-ಚೈತನ್ಯವು ಪ್ರಕಾಶಹೊಂದಲು ಅಜ್ಞಾನನಿವೃತ್ತಿಯನ್ನು ಅಪೇಕ್ಷಿಸುತ್ತದೆ. ಅಜ್ಞಾನ ನಿವೃತ್ತಿಯು ಅಪರೋಕ್ಷವೃತ್ತಿಯನ್ನು ಅಪೇಕ್ಷಿಸುತ್ತದೆ. ಅಪರೋಕ್ಷವೃತ್ತಿಯು ಸನ್ನಿಕರ್ಷವನ್ನು ಅಪೇಕ್ಷಿಸುತ್ತದೆ. ಸನ್ನಿಕರ್ಷವು ತನಗಿಂತ ಮೊದಲು ವಸ್ತುವಿನ ಸ್ಥಿತಿಯನ್ನು ಅಪೇಕ್ಷಿಸುತ್ತದೆ.ಹೀಗಿರುವಾಗ ಮೊದಲೇ ಸಿದ್ಧವಾದ ಚರಾಚರಾತ್ಮಕವಾದ ವಿಶ್ವವು ಅನಂತರ ಉತ್ಪನ್ನವಾಗುವ ಭ್ರಮದಿಂದ ಹೇಗೆ ಉತ್ಪನ್ನವಾಗುವುದು?

**ಭಾವವಿಲಾಸಿನೀ**– ಪಕ್ಷದ್ವಯೋಕ್ತಪ್ರಮೇಯಂ ಸಂಗೃಹ್ಯಾಹ – **ಬ್ರಹ್ಮಚಿದಿತಿ** ॥ ಸಾ ಬ್ರಹ್ಮಚಿತ್ । ತದಜ್ಞಾನನಿವರ್ತನವ್ । ಸಃ ಅರ್ಥಸಂಬಂಧಃ ಅಂತ್ಯಜಾತ್ ಅರ್ಥಸತ್ತಾ ದುತ್ತರ ಕಾಲೀನಸಂಬಂಧಜಾತ್ ॥ ೪೫೬-೫೭ ॥

ಮತ್ರ್ಯಾಪರೋಕ್ಷವೃತ್ತಿಶ್ಚ ತತ್ ತೇಭೂನ್ನ ಜಗದ್ಭ್ರಮಃ ।
ಯತೋರ್ಥಸನ್ನಿಕರ್ಷೋತ್ಥಾ ಸಾ ಸರ್ವತ್ರ ವಿಚಾರಣೇ ॥ ೪೫೮ ॥

**ಅರ್ಥ** – ಯತಃ= ಯಾವ ಕಾರಣದಿಂದ, ವಿಚಾರಣೆ= ವಿಚಾರ ಮಾಡಿದಾಗ, ಸರ್ವತ್ರ= ಎಲ್ಲ ಕಡೆಯೂ, ಅಪರೋಕ್ಷವೃತ್ತಿಃ= ಅಪರೋಕ್ಷ ವೃತ್ತಿಯು, ಅರ್ಥಸನ್ನಿಕರ್ಷೋತ್ಥಾ= ಅರ್ಥ ಸನ್ನಿಕರ್ಷದಿಂದಲೇ ಜನಿಸಿದ್ದು ಆಗಿದೆಯೋ, ತತಃ= ಆದ್ದರಿಂದ, ತೇ= ನಿನ್ನ, ಮತೇ= ಮತದಲ್ಲಿ, ಸಾ= ಆ ಮತ್ರ್ಯಾಪರೋಕ್ಷವೃತ್ತಿಃ ಚ= ವಿನಾಶಶಾಲಿಯಾದ ಅಪರೋಕ್ಷ ವೃತ್ತಿಯಾದರೂ, ಜಗದ್ಭ್ರಮಃ= ಜಗತ್ತಿನ ಭ್ರಮರೂಪವಾದದ್ದು, ನ ಅಭೂತ್= ಆಗಲಿಲ್ಲ.

**ಅನುವಾದ** - ಆ ಕಾರಣದಿಂದ ವಿನಾಶಶಾಲಿಯಾದ ಅಪರೋಕ್ಷವೃತ್ತಿಯು ಜಗದ್ ಭ್ರಮರೂಪವಾಗಲು ಸಾಧ್ಯವಿಲ್ಲ. ಏಕೆಂದರೆ ವಿಚಾರಮಾಡಿದರೆ ಅಪರೋಕ್ಷ-ವೃತ್ತಿಯು ಸರ್ವತ್ರ ಅರ್ಥಸನ್ನಿಕರ್ಷದಿಂದಲೇ ಜನಿಸುತ್ತದೆ.

**ಭಾವವಿಲಾಸಿನೀ**–ಮತ್ಯಾಪರೋಕ್ಷವೃತ್ತಿಶ್ಚೇತ್ಯತ್ರ ಚ ಶಬ್ದೇನ ಚೈತನ್ಯರೂಪಂ ಜ್ಞಾನಂ ಸಮುಚ್ಚೀಯತೇ। ತತ್ ತಸ್ಮಾತ್ ಚೈತನ್ಯಸ್ಯಾಜ್ಞಾನಾವರಣವಶೇನ ಜಗತ್ ಭ್ರಮತ್ವಾಯೋಗಾತ್ ಅಜ್ಞಾನನಿವರ್ತಕಾಪರೋಕ್ಷವೃತ್ತೇಶ್ಚ ಸ್ವಜನಕಸನ್ನಿಕರ್ಷಾಯ ಪ್ರಾಗೇವ ಜಗತ್ ಸತ್ತ್ವಸಾಪೇಕ್ಷತ್ವಾತ್ ನೋಭಯೋರಪಿ ಜಗತ್ ಭ್ರಮತ್ವಮಿತಿ ಭಾವಃ ॥ ೪೫೮ ॥

**ವಿವರಣೆ** - ಚೈತನ್ಯವು ಜಗದ್ಭ್ರಮವಾಗಲು ಸಾಧ್ಯವಿಲ್ಲ. ಏಕೆಂದರೆ ಅದಕ್ಕೆ ಅಜ್ಞಾನಾವರಣವಿದೆ. ಅಪರೋಕ್ಷವೃತ್ತಿಯೂ ಜಗದ್ಭ್ರಮವಾಗಲು ಸಾಧ್ಯವಿಲ್ಲ. ಏಕೆಂದರೆ ಅಪರೋಕ್ಷವೃತ್ತಿಗಿಂತ ಮೊದಲೇ ಜಗತ್ತು ಸಿದ್ಧವಾಗಿದೆ ಎಂದು ಅಭಿಪ್ರಾಯ.

ಮಾಯಾಮಯಸ್ಯ ಚಾರೋಪೋ ದ್ರಷ್ಟೄಣಾಂ ದುಷ್ಟಚಕ್ಷುಷಾ ।
ಅಮಾಯಿಕೇನೈವ ಭವೇದ್ ರಜತಸ್ಯೇವ ಸ ಭ್ರಮಃ ।
ದೋಷಶಕ್ತ್ಯೈವ ಸರ್ವತ್ರ ನಾಕ್ಷಯೋಗಮಪೇಕ್ಷತೇ ॥ ೪೫೯ ॥

**ಅರ್ಥ** – ಮಾಯಾಮಯಸ್ಯ= ಮಾಯಾಮಯವಾದ ವಸ್ತುವಿನ, ಆರೋಪಃ ಚ= ಆರೋಪವಾದರೂ, ದ್ರಷ್ಟೄಣಾಂ= ನೋಡುವವರ, ದುಷ್ಟ ಚಕ್ಷುಷಾ= ದೋಷಪೂರ್ಣವಾದ ಚಕ್ಷುರಿಂದ್ರಿಯದಿಂದ, ಭವೇತ್= ಆಗುತ್ತದೆ, ರಜತಸ್ಯ= ಶುಕ್ತಿರಜತದ, ಭ್ರಮಃ ಇವ= ಭ್ರಮದಂತೆ, ಸಃ= ಆ, ಭ್ರಮಃ= ಜಗತ್ತಿನ ಭ್ರಮವೂ ಕೂಡ, ಅಮಾಯಿಕೇನ ಏವ= ಮಾಯೆಯಿಂದ ನಿರ್ಮಿತವಲ್ಲದ, ದುಷ್ಟಚಕ್ಷುಷಾ= ದುಷ್ಟವಾದ ಚಕ್ಷುರಿಂದ್ರಿಯದಿಂದಲೇ, ಭವೇತ್= ಹುಟ್ಟುತ್ತದೆ, ಭ್ರಮಃ= ಭ್ರಮವು, ಸರ್ವತ್ರ= ಎಲ್ಲೆಡೆಯಲ್ಲಿಯೂ ಕೂಡ ದೋಷಶಕ್ತ್ಯಾ ಏವ= ದೋಷದ ಸಾಮರ್ಥ್ಯದಿಂದಲೇ, ಭವತಿ= ಹುಟ್ಟುತ್ತದೆ, ಅಕ್ಷಯೋಗಂ= ಇಂದ್ರಿಯ ಸನ್ನಿಕರ್ಷವನ್ನು, ನ ಅಪೇಕ್ಷತೇ= ಅಪೇಕ್ಷಿಸುವುದಿಲ್ಲ.

**ಅನುವಾದ** - ಮಾಯಾಮಯವಾದ ವಸ್ತುಗಳ ಆರೋಪರೂಪವಾದ ದರ್ಶನವು ನೋಡುವವರ ದುಷ್ಟಚಕ್ಷುಸ್ಸಿನಿಂದ ಉಂಟಾಗುತ್ತದೆ. ಆ ಚಕ್ಷುಸ್ಸು ರಜತಭ್ರಮದಲ್ಲಿ ಹೇಗೆ ಮಾಯಾಮಯವಲ್ಲವೋ ಹಾಗೆಯೇ ಜಗದ್ಭ್ರಮದಲ್ಲಿಯೂ ಮಾಯಾ ಮಯವಲ್ಲ. ಮಾಯಾಮಯವಾದ ವಸ್ತುವಿನ ಜ್ಞಾನವು ಸನ್ನಿಕರ್ಷವಿಲ್ಲದಿದ್ದರೂ ದೋಷದ ಬಲದಿಂದಲೇ ಉಂಟಾಗುತ್ತದೆ.

**ಭಾವವಿಲಾಸಿನೀ**– ಈಶ್ವರಮಾಯಾಸೃಷ್ಟತ್ವಾತ್ ಜಗದಾರೋಪಸ್ಸ್ಯಾದಿತಿಶಂಕಾಂ ನಿರಾಕರೋತಿ॥ **ಮಾಯಾಮಯಸ್ಯೇತಿ** ॥ ಮಾಯಾಮಯಸ್ಯ ಕರಿತುರಗಾದೇಃ । ದುಷ್ಟಚಕ್ಷುಷಾ ಮಾಯಾವಿನೋ

ಮಂತ್ರೌಷಧಾದಿನಾ ಭ್ರಮಾನುಕೂಲೀಕೃತ ಚಕ್ಷುಷಾ । ಅಮಾಯಿಕೇನ ಮಾಯಾವಿನೋ ಮಾಯಯಾಽನಿರ್ಮಿತೇನ ಸತ್ಯಭೂತಚಕ್ಷುಷೇತ್ಯರ್ಥಃ। ಸಃ ಮಾಯಿಕಪದಾರ್ಥವಿಷಯಃ ॥೪೫೯॥

**ವಿವರಣೆ** - ಐಂದ್ರಜಾಲಿಕನು ಸೃಷ್ಟಿಮಾಡಿದ ಕರಿತುರಗಾದಿಗಳ ದರ್ಶನವು ನೋಡುವವರಿಗೆ ಉಂಟಾಗುತ್ತದೆ. ಆ ದರ್ಶನವು ಭ್ರಾಂತಿರೂಪವಾದುದು. ಅಲ್ಲಿ ಕರಿತುರಗಾದಿಗಳಷ್ಟೇ ಮಾಯಾಮಯವಾದುವು. ಚಕ್ಷುಸ್ಸು ಮಾಯಾಮಯವಲ್ಲ. ಐಂದ್ರಜಾಲಿಕನ ವಿದ್ಯೆಯಿಂದ ಚಕ್ಷುಸ್ಸಿಗೆ ಭ್ರಮಾನುಕೂಲಶಕ್ತಿಯುಂಟಾಗುತ್ತದೆ. ಕರಿತುರಗಾದಿಗಳು ಅಸತ್ತಾದ್ದರಿಂದ ಎಂದರೆ ಇಲ್ಲದೇ ಇರುವುದರಿಂದ ಅಲ್ಲಿ ಚಕ್ಷುಸ್ಸಿಗೂ ಮತ್ತು ಅವುಗಳಿಗೂ ಸನ್ನಿಕರ್ಷವೇ ಇಲ್ಲ. ಆದರೆ ಐಂದ್ರಜಾಲಿಕನ ಮಾಯೆಯಿಂದ ಉಂಟಾದ ಚಕ್ಷುಸ್ಸಿನ ದೋಷವು ಸನ್ನಿಕರ್ಷಸ್ಥಾನದಲ್ಲಿದ್ದು ಸನ್ನಿಕರ್ಷದ ಕಾರ್ಯವನ್ನು ಮಾಡುತ್ತದೆ.

**ಸರ್ವಂ ಮಾಯಾಮಯಂ ಯಸ್ಯ ತಸ್ಯ ದೇಹೇಂದ್ರಿಯಾದಿಕಂ ।**
**ಕಸ್ಯ ವಾ ಮಾಯಯಾ ಸೃಷ್ಟಂ ನ ಹಿ ಮಾಯಾವಿನಿ ಭ್ರಮಃ ॥ ೪೬೦ ॥**

**ಅರ್ಥ–** ಸರ್ವಂ= ಎಲ್ಲ ಜಗತ್ತು, ಯಸ್ಯ= ಯಾರ ಮಾಯಾಮಯಂ= ಮಾಯೆಯಿಂದ ನಿರ್ಮಿತವಾಗಿದೆಯೋ, ತಸ್ಯ= ಆ ಜಗದೀಶ್ವರನ, ದೇಹೇಂದ್ರಿಯಾದಿಕಂ= ದೇಹ ಇಂದ್ರಿಯ ಮೊದಲಾದವುಗಳು, ಕಸ್ಯ= ಯಾರ, ಮಾಯಾಯಾ= ಮಾಯೆಯಿಂದ, ಸೃಷ್ಟಂ= ಸೃಷ್ಟಿಸಲ್ಪಟ್ಟಿದೆ, ಮಾಯಾವಿನಿ= ಇಂದ್ರಜಾಲವನ್ನು ಸೃಷ್ಟಿಸಿದವನಿಗೆ, ಭ್ರಮಃ= ಭ್ರಮವು, ನ ಹಿ= ಇಲ್ಲವಷ್ಟೆ?

**ಅನುವಾದ** - ಎಲ್ಲವೂ ಮಾಯಾಮಯ ಎಂದು ಹೇಳಿದರೆ ಮಾಯಾವಿಯ ದೇಹೇಂದ್ರಿಯಾದಿಗಳು ಯಾರ ಅಥವಾ ಯಾವ ಮಾಯೆಯಿಂದ ಸೃಷ್ಟವಾಗಿದೆ ಎಂದು ಹೇಳಬೇಕಾಗುತ್ತದೆ. ಐಂದ್ರಜಾಲಿಕನಿಗೇ ಭ್ರಮವಿಲ್ಲವಷ್ಟೇ?

**ವಿವರಣೆ** - ಐಂದ್ರಜಾಲಿಕನು ಮಾಯಾಮಯಪದಾರ್ಥದ ಸೃಷ್ಟಿಯನ್ನು ಮಾಡಿದರೆ ಆ ಪದಾರ್ಥವಷ್ಟೇ ಮಾಯಾಮಯ. ನೋಡುವವನ ದೇಹವಾಗಲೀ, ಚಕ್ಷುಸ್ಸಾಗಲೀ ಅಥವಾ ಐಂದ್ರಜಾಲಿಕನ ದೇಹಾದಿಗಳಾಗಲೀ ಮಾಯಾಮಯವಲ್ಲ. ಈ ಸಮಸ್ತ ಜಗತ್ತೇ ಮಾಯಾಮಯ ಎಂದು ಹೇಳಿದರೆ ನೋಡುವವನ ದೇಹಾದಿಗಳೂ ಮಾಯಾಮಯ ವಾಗಬೇಕಾಗುತ್ತದೆ. ಲೋಕದೃಷ್ಟಾಂತದಂತೆ ಪದಾರ್ಥಗಳ ಸೃಷ್ಟಿಗೆ ಕಾರಣವಾದ ಮಾಯೆಗಿಂತ ಭಿನ್ನವಾದ ಇನ್ನೊಂದು ಮಾಯೆಯನ್ನು ದೇಹಾದಿಗಳಿಗೆ ಕಾರಣ ಎಂದು ಒಪ್ಪಬೇಕಾಗುತ್ತದೆ. ಇದು ಅನುಭವವಿರುದ್ಧವಾಗುತ್ತದೆ ಎಂದು ಅಭಿಪ್ರಾಯ.

ಭಾವವಿಲಾಸಿನೀ– ತಸ್ಯ ಜಗದೀಶ್ವರಸ್ಯ ॥ ೪೬೦ ॥

**ಮಾಯಾವಿನೋ ಮಹೇಶಸ್ಯ ಯದಿ ಭ್ರಾಂತಿರ್ನಿಗದ್ಯತೇ ।**
**ತರ್ಹಿ ಮಾಯಾ ನ ಸಾ ತಸ್ಯಾಪ್ಯಾಸೀದಜ್ಞಾನಮೇವ ತತ್ ॥ ೪೬೧ ॥**

**ಅರ್ಥ –** ಮಾಯಾವಿನಃ= ಮಾಯಾವಿಯಾದ, ಮಹೇಶಸ್ಯ= ಜಗದೀಶ್ವರನಿಗೆ, ಯದಿ= ಒಂದು ಪಕ್ಷದಲ್ಲಿ, ಭ್ರಾಂತಿಃ= ಜಗದ್ಭ್ರಮವು, ನಿಗದ್ಯತೇ= ಹೇಳಲ್ಪಟ್ಟರೆ, ತರ್ಹಿ ಅಪಿ= ಆ ಪಕ್ಷದಲ್ಲಿಯೂ ಕೂಡ, ತಸ್ಯ= ಅವನಿಗೆ, ಸಾ= ಅದು, ಮಾಯಾ= ಮಾಯೆಯು, ನ ಆಸೀತ್= ಆಗಲಿಲ್ಲ, ಪರಂ ತು= ಹೊರತಾಗಿ, ತತ್= ಅದು, ಅಜ್ಞಾನಂ ಏವ= ಅಜ್ಞಾನವೇ ಆಗಿದೆ.

**ಅನುವಾದ -** ಮಾಯಾವಿಯಾದ ಈಶ್ವರನಿಗೇ ಜಗತ್ತಿನ ಭ್ರಾಂತಿಯನ್ನು ಹೇಳುವು- ದಾದರೆ ಅದು ಅವನಿಗೆ ಮಾಯೆಯೇ ಅಲ್ಲ, ಅಜ್ಞಾನವೇ ಆಗುತ್ತದೆ.

**ಭಾವವಿಲಾಸಿನೀ–** ಸಾ ಜಗದ್ಧೇತುಭೂತಮಾಯಾ । ತಸ್ಯ ಜಗದೀಶ್ವರಸ್ಯ ಮಾಯಾ ನ । ಮಾಯಾಯಾಃಸ್ವಾಶ್ರಯಾವ್ಯಾಮೋಹಕತ್ವ ನಿಯಮಾತ್ । ತತ್ ತಸ್ಮಾತ್ ಸ್ವಾಶ್ರಯ- ವ್ಯಾಮೋಹಕತ್ವಾತ್ ॥ ೪೬೧ ॥

**ವಿವರಣೆ -** ಅದ್ವೈತಿಗಳು ಮಾಯೆಗೂ ಅಜ್ಞಾನ (ಅವಿದ್ಯಾ)ಕ್ಕೂ ವೈಲಕ್ಷಣ್ಯವನ್ನು ಹೇಳುತ್ತಾರೆ. ಅಜ್ಞಾನವು ಸ್ವಾಶ್ರಯವ್ಯಾಮೋಹಕರೀ ಎಂದರೆ ಅಜ್ಞಾನಕ್ಕೆ ಆಶ್ರಯವಾದುದು ಯಾವುದಿದೆಯೋ ಅದಕ್ಕೆ ಅಜ್ಞಾನದ ಕಾರ್ಯವಾದ ಭ್ರಾಂತಿಯನ್ನುಂಟುಮಾಡುತ್ತದೆ. ಉದಾಹರಣೆಗೆ ಶುಕ್ತ್ಯಜ್ಞಾನವು ಚೈತ್ರನಿಗೆ ಇದ್ದರೆ ಚೈತ್ರನಿಗೆ ರಜತಭ್ರಾಂತಿಯು ಉಂಟಾಗುತ್ತದೆ, ಮೈತ್ರನಿಗಲ್ಲ. ಆದರೆ ಮಾಯೆಯು ಮಾತ್ರ ಪರ ವ್ಯಾಮೋಹಕರೀ- ತನ್ನ ಆಶ್ರಯಕ್ಕೆ ಭ್ರಾಂತಿಯನ್ನುಂಟುಮಾಡುವುದಿಲ್ಲ. ಇನ್ನೊಂದು ವ್ಯಕ್ತಿಗೆ ಭ್ರಾಂತಿಯನ್ನುಂಟುಮಾಡುತ್ತದೆ. ಉದಾಹರಣೆಗೆ ಐಂದ್ರಜಾಲಿಕನ ಮಾಯೆ. ಆದರಿಂದ ನೋಡುವವನಿಗೆ ಮಾತ್ರ ಕರಿತುರಗಾದಿಭ್ರಾಂತಿಯುಂಟಾಗುತ್ತದೆ. ಐಂದ್ರಜಾಲಿಕನಿಗಾದರೂ ಮೊದಲಿನಂತೆ ಕಲ್ಲು ಮಣ್ಣುಗಳಾಗಿಯೇ ಕಾಣುತ್ತವೆ. ಪ್ರಕೃತ ಮಾಯೆಗೆ ಆಶ್ರಯನಾದವನು ಈಶ್ವರ ಎಂದು ಹೇಳಿದರೆ ಮಾಯೆಯು ಪರವ್ಯಾ ಮೋಹಕರೀ ಎಂದು ಹೇಳಿದ್ದರಿಂದ ಈಶ್ವರನಿಗೆ ಜಗದ್ಭ್ರಾಂತಿಯು ಬರಬಾರದು. ಆದರೆ ಬರುತ್ತದೆ. ಇಲ್ಲದಿದ್ದರೆ ಈಶ್ವರನು ಜಗತ್ತಿನ ಸೃಷ್ಟಿಸ್ಥಿತಿಲಯಗಳನ್ನೇ ಮಾಡಲು ಸಾಧ್ಯವಿಲ್ಲ. ಹೀಗೆ ಈಶ್ವರನಿಗೆ ಭ್ರಾಂತಿಯನ್ನು ಒಪ್ಪಿದರೆ ಅದು ಸ್ವಾಶ್ರಯವ್ಯಾಮೋಹಕ ವಾಗುವುದರಿಂದ ಮಾಯೆಯೇ ಅಲ್ಲ, ಅಜ್ಞಾನವೇ ಆಗುತ್ತದೆ ಎಂದು ಅಭಿಪ್ರಾಯ.

ಏವಂ ಚಾಜ್ಞಾನಾಪ್ತಿವೈಕಲ್ಯಾಖ್ಯಶಲ್ಯೋದ್ಧೃತೇಃ ಪುರಾ ।
ನೋಲ್ಲಿಖೇದೈಶ್ವರೀ ವಾ ಚಿದ್ ಬ್ರಾಹ್ಮೀ ಚಿದ್ವಾ ಜಗತ್ರಯಂ ।
ಚಿನ್ಮಾತ್ರೇಪ್ಯಸ್ತಿ ವೈಕಲ್ಯಂ ನ ಚೇಜ್ಜೀವಚಿತೋಽಪಿ ನ ॥ ೪೬೨ ॥

**ಅರ್ಥ –** ಏವಂ ಚ= ಆದ್ದರಿಂದ, ಐಶ್ವರೀ= ಈಶ್ವರನ ಸಂಬಂಧಿಯಾದ, ಚಿತ್ ವಾ= ಚೈತನ್ಯವಾಗಲೀ, ಬ್ರಾಹ್ಮೀ= ಬ್ರಹ್ಮನ ಸಂಬಂಧಿಯಾದ, ಚಿತ್ ವಾ= ಚೈತನ್ಯವಾಗಲೀ, ಜಗತ್‌ತ್ರಯಂ= ಮೂರು ಲೋಕಗಳನ್ನೂ, ನ ಉಲ್ಲಿಖೇತ್= ಉಲ್ಲೇಖಿಸಲಾರದು, ವೈಕಲ್ಯಂ= ಅಜ್ಞಾನದ ಅವರಣವು, ಚಿನ್ಮಾತ್ರೇ ಅಪಿ= ಎಲ್ಲ ಚೈತನ್ಯಗಳಿಗೂ, ಅಸ್ತಿ= ಇದೆ, ನ ಚೇತ್= ಇಲ್ಲವಾದರೆ, ಜೀವ ಚಿತಃ ಅಪಿ= ಜೀವ ಚೈತನ್ಯಕ್ಕೂ, ನ= ಅಜ್ಞಾನಾವರಣವು ಇಲ್ಲ.

**ಅನುವಾದ -** ಆದ್ದರಿಂದ ಅಜ್ಞಾನದ ಆವರಣಶಕ್ತಿರೂಪವಾದ ಶಲ್ಯವನ್ನು ತೆಗೆಯುವುದಕ್ಕಿಂತ ಮೊದಲು ಈಶ್ವರಚಿತ್ತಾಗಲೀ, ಬ್ರಹ್ಮಚಿತ್ತಾಗಲೀ ಜಗತ್ತನ್ನು ಉಲ್ಲೇಖಿಸಲಾರದು. ಎಲ್ಲಾ ಚಿತ್ತಿಗೂ ಅಜ್ಞಾನಾವರಣವು ಇದ್ದೇ ಇದೆ. ಇಲ್ಲದಿದ್ದರೆ ಜೀವಚೈತನ್ಯಕ್ಕೂ ಅಜ್ಞಾನಾವರಣವನ್ನು ಒಪ್ಪುವುದು ಬೇಡ.

**ಭಾವವಿಲಾಸಿನೀ–** ಪುರಾ ಪೂರ್ವಮ್ । ಉಕ್ತವಿಧಯಾ ಉಭಯೋರಪ್ಯಜ್ಞಾನಾಖ್ಯ ದೋಷೇಣ ಶಕ್ತಿವಿಕಲತ್ವಾದಿತಿ ಭಾವಃ । ಚಿನ್ಮಾತ್ರೇ ಸರ್ವಸ್ಯಾಂ ಚಿತಿ । ಜೀವಚಿತಃ ಜೀವಜ್ಞಾನತ್ವೇನಾಭಿಮತ ಘಟಾದ್ಯಧಿಷ್ಠಾನ ಚೈತನ್ಯಸ್ಯ ॥ ೪೬೨ ॥

**ವಿವರಣೆ -** ಜಗತ್ತಿನ ಜ್ಞಾನಬರುವುದು ಯಾರಿಗೆ? ಈಶ್ವರನಿಗೋ, ಬ್ರಹ್ಮನಿಗೋ ಅಥವಾ ಜೀವನಿಗೋ? ಈಶ್ವರನಿಗಾಗಲೀ, ಬ್ರಹ್ಮನಿಗಾಗಲೀ ಜಗಜ್‌ಜ್ಞಾನವು ಬರಬೇಕಾದರೆ ಜಗತ್ತಿನ ಆರೋಪಕ್ಕೆ ಅಧಿಷ್ಠಾನವಾದ ಚೈತನ್ಯಕ್ಕಿರುವ ಅಜ್ಞಾನಾವರಣವು ನಾಶವಾಗಬೇಕು. ಪ್ರಮಾಣವೈಕಲ್ಯಾದೇವ ತದಗ್ರಹೋಪಪತ್ತೇಃ ಎಂಬ ವಿವರಣವಾಕ್ಯಕ್ಕೆ ಇದೇ ಅಭಿಪ್ರಾಯವಷ್ಟೇ? ಅಜ್ಞಾನಾವರಣನಾಶವಾಗುವುದಕ್ಕಿಂತ ಮುಂಚೆ ಈಶ್ವರನಿಗಾಗಲೀ, ಬ್ರಹ್ಮನಿಗಾಗಲೀ ಜಗಜ್‌ಜ್ಞಾನ ಬರಲು ಸಾಧ್ಯವಿಲ್ಲ. ಆದ್ದರಿಂದ ಅವರ ಜ್ಞಾನ ಅನಿತ್ಯ ಎಂದು ಒಪ್ಪಬೇಕಾಗುತ್ತದೆ. ಜೀವನಿಗೂ ಅಜ್ಞಾನಾವರಣವಿರುವವರೆಗೆ ಜಗತ್ತಿನ ಜ್ಞಾನವು ಬರಲು ಸಾಧ್ಯವಿಲ್ಲ. ಏಕೆಂದರೆ ಎಲ್ಲಾ ಚಿತ್ತಿಗೂ ಅಜ್ಞಾನಾವರಣವು ಇದ್ದೇ ಇದೆ. ಇದು ಚೈತನ್ಯವೇ ಜಗದ್ಭ್ರಮ ಎಂಬ ಪಕ್ಷದಲ್ಲಿ ಹೇಳಿದ ದೋಷ. ಜಗದ್ಭ್ರಮವು ವೃತ್ತಿರೂಪವಾದುದು ಎಂಬ ಪಕ್ಷದಲ್ಲಿ ದೋಷವನ್ನು ಮುಂದಿನ ಶ್ಲೋಕದಲ್ಲಿ ಹೇಳುತ್ತಾರೆ.

ದೃಗ್ದೃಶ್ಯಯೋಗಾಯೋಗೇನ ವೃತ್ತಿಶ್ಚ ನ ಜಗದ್ಭ್ರಮಃ ।
ಯತ್ಸಾಽರ್ಥಯೋಗವತ್ಸಾಭಾ ತಸ್ಮಾಚ್ಚ ನ ಜಗದ್ಭ್ರಮಃ ।
ತಸ್ಮಾನ್ನಾರೋಪಯೇದೈಶೀ ಬ್ರಾಹ್ಮೀ ವಾ ಚಿಜ್ಜಗನ್ಮಮ ॥ ೪೬೩ ॥

**ಅರ್ಥ –** ದೃಗ್ದೃಶ್ಯಯೋಗಾಯೋಗೇನ= ದೃಕ್ ಮತ್ತು ದೃಶ್ಯಗಳ ನಡುವಣ ಸಂಬಂಧವು ಕೂಡುವುದಿಲ್ಲವಾದ್ದರಿಂದ, ವೃತ್ತಿಃ ಚ= ವೃತ್ತಿಯೂ ಕೂಡ, ಜಗದ್ಭ್ರಮಃ= ಜಗತ್ತಿನ ಭ್ರಾಂತಿಯ ರೂಪವಾದದ್ದು, ನ= ಆಗುವುದಿಲ್ಲ, ಯತ್= ಯಾವ ಕಾರಣದಿಂದ, ಸಾ= ಆ ವೃತ್ತಿಯು

ಅರ್ಥಯೋಗವತ್ತ್ವಾಭಾ= ಅರ್ಥ ಸನ್ನಿಕರ್ಷಜನ್ಯವಾಗಿದೆಯೋ, ತಸ್ಮಾತ್ ಚ= ಆ ಕಾರಣದಿಂದಲೂ, ಜಗದ್ಭ್ರಮಃ= ಜಗತ್ತಿನ ಭ್ರಮವು, ನ ಸ್ಯಾತ್= ಹುಟ್ಟಲಾರದು, ತಸ್ಮಾತ್= ಆದ್ದರಿಂದ, ಐಶೀ= ಈಶ್ವರನಿಗೆ ಸಂಬಂಧಿಸಿದ, ಚಿತ್= ಚೈತನ್ಯವು, ವಾ= ಅಥವಾ, ಬ್ರಾಹ್ಮೀ ಚಿತ್= ಬ್ರಹ್ಮನಿಗೆ ಸಂಬಂಧಿಸಿದ ಚೈತನ್ಯವು, ಮಮ= ನನ್ನ, ಜಗತ್= ಪ್ರಪಂಚವನ್ನು, ನ ಆರೋಪಯೇತ್= ಆರೋಪಿಸಲಾರದು.

**ಅನುವಾದ** - ದೃಕ್ ಮತ್ತು ದೃಶ್ಯಗಳಿಗೆ ಸನ್ನಿಕರ್ಷವು ಕೂಡವುದಿಲ್ಲವಾದಕಾರಣ ವೃತ್ತಿಯೂ ಜಗದ್ಭ್ರಮವಾಗಲಾರದು. ಏಕೆಂದರೆ ವೃತ್ತಿಯು ಅರ್ಥಸನ್ನಿಕರ್ಷ ಜನ್ಯವಾದುದು. ಆದ್ದರಿಂದ ಈಶ್ವರಚಿತ್ತಾಗಲೀ, ಬ್ರಹ್ಮಚಿತ್ತಾಗಲೀ ನನ್ನ ಜಗತ್ತನ್ನು ಆರೋಪಿಸಲಾರದು.

**ಭಾವವಿಲಾಸಿನೀ**– ದೃಗ್ದೃಶ್ಯಯೋಗಾಯೋಗೇನ ದೃಶ ಆಂತರವಮಾನಸಜ್ಞಾನಸ್ಯ ದೃಶ್ಯಸ್ಯ ಬಾಹ್ಯಘಟಾದೇಃ । ಯೋಗಾಯೋಗೇನ ಸಂಯೋಗಸಮವಾಯವಿಷಯ ವಿಷಯಿಭಾವಾದಿ ಸಂಬಂಧಾಯೋಗೇನ । ವೃತ್ತಿರ್ಮಾನಸಾಪರೋಕ್ಷವೃತ್ತಿಃ । ಯತ್ ಯಸ್ಮಾತ್ । ಸಾ ಅಪರೋಕ್ಷವೃತ್ತಿಃ । ಅರ್ಥಯೋಗವತ್ತ್ವಾಭಾ ಅರ್ಥಸನ್ನಿಕರ್ಷಸ್ಯ ವತ್ಸಸದೃಶೀ ಅರ್ಥಸನ್ನಿಕರ್ಷಜನ್ಯೇತ್ಯರ್ಥಃ । ತಸ್ಮಾತ್ ಪಕ್ಷದ್ವಯೇಽಪ್ಯುಕ್ತವಿಧಯಾ ದೋಷಸ್ಯ ಜಾಗರೂಕತ್ವಾತ್ । ಚಿದಿತ್ಯುಪಲಕ್ಷಣಮ್ । ವೃತ್ತಿರಪಿ ಗ್ರಾಹ್ಯಾ ॥ ೪೬೩ ॥

**ವಿವರಣೆ** - ವೃತ್ತಿಯು ಅರ್ಥಸನ್ನಿಕರ್ಷಜನ್ಯವಾದ್ದರಿಂದ ಅದರ ವತ್ಸ(ಮರಿ)ದಂತೆ. ಸನ್ನಿಕರ್ಷವುಂಟಾಗಬೇಕಾದರೆ ಮೊದಲೇ ಅರ್ಥಸತ್ವವಿರಬೇಕು. ಆದ್ದರಿಂದ ಅನಂತರ ಹುಟ್ಟಿದ ವೃತ್ತಿಯು ಮೊದಲೇ ಇರುವ ಅರ್ಥವನ್ನು ಆರೋಪಿಸಲಾರದು. ಆದ್ದರಿಂದ ಚೈತನ್ಯದಿಂದ ಆರೋಪ ಮತ್ತು ವೃತ್ತಿಯಿಂದ ಆರೋಪ ಈ ಎರಡೂ ಪಕ್ಷಗಳಲ್ಲಿಯೂ ದೋಷವಿರುವುದರಿಂದ ಜಗತ್ತು ಆರೋಪಿತವಲ್ಲ ಎಂದು ಸಿದ್ಧವಾಗುತ್ತದೆ.

**ಮಾಯಾವಿನೋ ನ ಚೇದ್ ಭ್ರಾಂತಿರ್ವಿಶ್ವಮಾಸೀದನಾಕುಲಂ ।**
**ಮಾಯಾವಿನೋ ಯದಿ ಭ್ರಾಂತಿರ್ವಿಶ್ವಂ ನಾರೋಪಿತಂ ಮಮ ॥ ೪೬೪ ॥**

**ಅರ್ಥ** – ಮಾಯಾವಿನಃ= ಮಾಯಾವಿಯಾದ ಈಶ್ವರನಿಗೆ, ಭ್ರಾಂತಿಃ= ಭ್ರಮವು, ನ ಚೇತ್= ಇಲ್ಲದಿದ್ದರೆ, ವಿಶ್ವಂ= ಪ್ರಪಂಚವು, ಅನಾಕುಲಂ= ಅನಾರೋಪಿತವಾದದ್ದು, ಆಸೀತ್= ಆಯಿತು, ಮಾಯಾವಿನಃ= ಮಾಯಾವಿಯಾದ ಈಶ್ವರನಿಗೆ, ಯದಿ= ಒಂದು ಪಕ್ಷದಲ್ಲಿ, ಭ್ರಾಂತಿಃ= ಭ್ರಮವು, ಅಸ್ತಿ= ಇದೆಯೆಂದಾದರೆ, ತರ್ಹಿ ಚ=ಆ ಪಕ್ಷದಲ್ಲಿಯೂ ಕೂಡ, ಮಮ= ನನ್ನ, ವಿಶ್ವಂ= ಪ್ರಪಂಚವು, ನ ಆರೋಪಿತಂ= ಆರೋಪಿತವಾದದ್ದು ಆಗುವುದಿಲ್ಲ.

**ಅನುವಾದ** - ಮಾಯಾವಿಯಾದ ಈಶ್ವರನಿಗೆ ಭ್ರಾಂತಿಇಲ್ಲದಿದ್ದರೆ ವಿಶ್ವವು ಅನಾರೋಪಿತವಾಗುತ್ತದೆ. ಮಾಯಾವಿಯಾದ ಈಶ್ವರನಿಗೆ ಭ್ರಾಂತಿಯನ್ನು ಒಪ್ಪಿದರೂ ವಿಶ್ವವು ಅನಾರೋಪಿತವಾಗುತ್ತದೆ.

**ಭಾವವಿಲಾಸಿನೀ**– ಮಾಯಾವಿನೋ ಜಗದೀಶ್ವರಸ್ಯ ಭ್ರಾಂತಿರ್ನಚೇತ್ । ವಿಶ್ವಂ ಸರ್ವಜ್ಞಸ್ಯ ತಸ್ಯ ಪ್ರಮಾವಿಷಯೀಭೂತವಿಶ್ವಮ್ । ತಥಾ ಚೋಭಯತಃ ಪಾಶಾರಜ್ಜುರಿತ್ಯಾಹ – ಮಾಯಾವಿನ ಇತಿ ॥ ಪ್ರಥಮಪಕ್ಷೇ ಮಾಯಾಯಾ ಅವಿದ್ಯಾತ್ವಾಪತೇನ ತದಾವೃತ್ತೇಶ್ವರಚೈತನ್ಯಸ್ಯೋಕ್ತವಿಧಯಾ ಜಗತ್ ಭ್ರಮತ್ವಾಯೋಗಾದಿತಿ ಭಾವಃ । ದ್ವಿತೀಯಪಕ್ಷಸ್ಯ ತು ಭಾವಃ ಪೂರ್ವಪದ್ಯ ಏವೋಕ್ತಃ ॥ ೪೬೪ ॥

**ವಿವರಣೆ** - ಈಶ್ವರನಿಗೆ ಭ್ರಾಂತಿ ಇಲ್ಲದಿದ್ದ ಪಕ್ಷದಲ್ಲಿ ಅವನು ಸರ್ವಜ್ಞನಾದ್ದರಿಂದ ಸರ್ವಜ್ಞನ ಪ್ರಮಾವಿಷಯವಾದ ಜಗತ್ತು ಸತ್ಯವೇ ಆಗುತ್ತದೆ. ಈಶ್ವರನಿಗೆ ಭ್ರಾಂತಿಯನ್ನು ಒಪ್ಪಿದರೆ ಭ್ರಾಂತಿಯು ಅರ್ಥಸನ್ನಿಕರ್ಷಜನ್ಯವಾದುದರಿಂದ ಭ್ರಾಂತಿಗೆ ಮೊದಲೇ ಅರ್ಥ ಸನ್ನಿಕರ್ಷವನ್ನೂ, ಅದಕ್ಕೋಸ್ಕರ ಅರ್ಥಸತ್ಯತ್ವವನ್ನೂ ಒಪ್ಪಬೇಕಾಗುವುದರಿಂದ ಜಗತ್ತು ಸತ್ಯವೇ ಆಗುತ್ತದೆ.

**ಕಿಂಚ ಮಾಯಾವಿನಃ ಸ್ಥೂಲದೇಹೇಂದ್ರಿಯಗುಣಾದಿಕಂ ।**
**ಬ್ರಹ್ಮಗಾಜ್ಞಾನಪರಿಣಾಮಾತ್ಮಕಂ ತೇನ ಚೇಷ್ಯತೇ ॥ ೪೬೫ ॥**

**ಅರ್ಥ** – ಕಿಂ ಚ= ಅದಲ್ಲದೆ, ಮಾಯಾವಿನಃ= ಮಾಯಾವಿಯಾದ ಈಶ್ವರನ ಸ್ಥೂಲದೇಹೇಂದ್ರಿಯ ಗುಣಾದಿಕಂ, ಸ್ಥೂಲ ದೇಹ= ಶರೀರವು, ಇಂದ್ರಿಯ= ಇಂದ್ರಿಯಗಳು, ಗುಣಾದಿಕಂ= ಗುಣಮೊದಲಾದವುಗಳು, ಬ್ರಹ್ಮಗಾಜ್ಞಾನಪರಿಣಾಮಾತ್ಮಕಂ= ಬ್ರಹ್ಮನಲ್ಲಿರುವ ಅಜ್ಞಾನದ ಪರಿಣಾಮ ರೂಪವೆಂದು, ತೇನ ಚ= ಮಾಯಾವಾದಿಯಿಂದಲೂ, ಚ ಇಷ್ಯತೇ= ಅಂಗೀಕರಿಸುತ್ತಾರೆ.

**ಅನುವಾದ** - ಅಲ್ಲದೆ ಮಾಯಾವಿಯಾದ ಈಶ್ವರನ ಸ್ಥೂಲದೇಹ ಮತ್ತು ಇಂದ್ರಿಯಾದಿಗಳು ಬ್ರಹ್ಮಾಶ್ರಿತಾಜ್ಞಾನಕಾರ್ಯವೆಂದು ಅವರು (ಮಾಯಾವಾದಿಗಳು) ಒಪ್ಪುತ್ತಾರೆ.

**ಭಾವವಿಲಾಸಿನೀ**– ದೂಷಣಾಂತರಂ ಚಾಹ – ಕಿಂಚೇತಿ ॥ ತೇನ ಮಾಯಾವಾದಿನಾ ॥ ೪೬೫॥

**ಏವಂ ಚೇಜ್ಜಗದೇತಚ್ಚ ಬ್ರಹ್ಮ ಸ್ವಾವಿದ್ಯಯಾ ಸೃಜೇತ್ ।**
**ಅತದಾಕಾರಪರಿಣಾಮಾಖ್ಯವಿಕ್ಷೇಪಶಕ್ತಯಾ ॥ ೪೬೬ ॥**

**ಅಜ್ಞಾನಾಪಗಮೇ ಚಾಧಿಷ್ಠಾನದೃಕ್ ಚಾಸ್ತು ತಸ್ಯ ದೃಕ್ ।**
**ಬಕಬಂಧಾಯ ನಿರ್ಬಂಧೋ ನಿರ್ನಿಬಂಧನ ಏವ ತೇ ॥ ೪೬೭ ॥**

**ಅರ್ಥ –** ಏವಂ ಚೇತ್= ಆದ್ದರಿಂದ, ಬ್ರಹ್ಮ= ಪರಬ್ರಹ್ಮನು, ಏತತ್= ಈ, ಜಗತ್ ಚ= ಜಗತ್ತನ್ನೂ ಕೂಡ, ಅತದಾಕಾರ ಪರಿಣಾಮಾಖ್ಯ ವಿಕ್ಷೇಪ ಶಕ್ತಯಾ= ಅನ್ಯಾಕಾರವನ್ನು ಹೊಂದುವಂತೆ ಮಾಡುವ ವಿಕ್ಷೇಪಶಕ್ತಿಯಿಂದ, ಸ್ವಾವಿದ್ಯಯಾ= ತನಗೆ ಆವರಕವಾದ ಅವಿದ್ಯೆಯಿಂದ, ಸೃಜೇತ್= ಸೃಷ್ಟಿ ಮಾಡಿಯಾನು.

ಅಜ್ಞಾನಾಪಗಮೇ ಚ= ಅಜ್ಞಾನದ ನಾಶವಾದರೆ, ಅಧಿಷ್ಠಾನದೃಕ್ ಚ= ಅಧಿಷ್ಠಾನ ಚೈತನ್ಯವೇ, ತಸ್ಯ= ಪರಬ್ರಹ್ಮನ, ದೃಕ್= ಚೈತನ್ಯವು, ಅಸ್ತು= ಆಗಲಿ, ತೇ= ನಿನ್ನ ಬಕಬಂಧಾಯ, ನಿರ್ಬಂಧಃ= ಬಕಬಂಧ ರೀತಿಯ ಅನುಸರಣವು, ನಿರ್ನಿಬಂಧನ ಏವ= ಕಾರಣರಹಿತವೇ, ಅಸ್ತಿ= ಆಗಿದೆ.

**ಅನುವಾದ - ಆದ್ದರಿಂದ ಬ್ರಹ್ಮನು ತನಗೆ ಆವರಕವಾದ ಅವಿದ್ಯೆಯ ಅತದಾಕಾರವಿಕ್ಷೇಪ ಶಕ್ತಿಯಿಂದ ಈ ಜಗತ್ತನ್ನು ಸೃಷ್ಟಿಸಲಿ. ಅಜ್ಞಾನನಾಶವಾದರೆ ಅಷ್ಠಾನ ಚೈತನ್ಯವೇ ಬ್ರಹ್ಮಚೈತನ್ಯವಾಗಲಿ. ಬಕಬಂಧರೀತಿಯನ್ನು ಅನುಸರಿಸಲು ಏನೂ ಕಾರಣವಿಲ್ಲ.**

**ತಸ್ಮಾದಜ್ಞಾನಕಲಿಲಂ ಬ್ರಹ್ಮ ವಾ ಮಾಯಯಾಽಽವೃತಃ ।**
**ಮಹೇಶ್ವರೋ ವಾ ಸರ್ವಾರ್ಥಾಂಸ್ತಯಾ ಪೂರ್ವಂ ದ್ವಿರೂಪಯಾ ॥೪೬೮॥**

**ಅತದಾಕಾರಪರಿಣಾಮಾಖ್ಯವಿಕ್ಷೇಪಶಕ್ತಯಾ ।**
**ಕರೋತ್ಯೇವ ತತಃಪಶ್ಚಾತ್ ಸನ್ನಿಕೃಷ್ಟೇಂದ್ರಿಯೈಃ ಶುಭೈಃ ।**
**ಪಶ್ಯಂತಿ ಸರ್ವೇ ಸರ್ವತ್ರೇತ್ಯೇವ ವಾಚ್ಯಂ ತ್ವಯಾಪಿ ಹಿ ॥ ೪೬೯ ॥**

**ಅರ್ಥ –** ತಸ್ಮಾತ್= ಆದ್ದರಿಂದ, ಅಜ್ಞಾನಕಲಿಲಂ ಬ್ರಹ್ಮ= ಅಜ್ಞಾನಾವೃತಬ್ರಹ್ಮನಾಗಲೀ, ಮಾಯಯೋಽವೃತಃ ಮಹೇಶ್ವರೋ ವಾ= ಮಾಯಾವಚ್ಛಿನ್ನ ಮಹೇಶ್ವರನಾಗಲೀ, ಸರ್ವಾರ್ಥಾನ್= ಸಕಲ ಪದಾರ್ಥಗಳನ್ನು, ದ್ವಿರೂಪಯಾ= ಆವರಣ ಮತ್ತು ವಿಕ್ಷೇಪ ಶಕ್ತಿಗಳ, ಪೂರ್ವಂ= ಮಧ್ಯದಲ್ಲಿ, ಅತದಾಕಾರಪರಿಣಾಮಾಖ್ಯ ವಿಕ್ಷೇಪಶಕ್ತಯಾ= ಅನ್ಯಾಕಾರವನ್ನು ಹೊಂದುವಂತೆ ಮಾಡುವ ವಿಕ್ಷೇಪ ಶಕ್ತಿಯಿಂದ, ಕರೋತ್ಯೇವ= ಜಗತ್ತನ್ನು ಸೃಷ್ಟಿಸುತ್ತಾನೆ. ತತಃ ಪಶ್ಚಾತ್= ಅನಂತರ, ಸರ್ವೇ= ಎಲ್ಲರೂ, ಶುಭೈಃ= ನಿರ್ದುಷ್ಟಗಳಾದ, ಸನ್ನಿಕೃಷ್ಟೇಂದ್ರಿಯೈಃ= ಅರ್ಥೇಂದ್ರಿಯ ಸನ್ನಿಕರ್ಷಗಳಿಂದ, ಸರ್ವತ್ರ= ಎಲ್ಲೆಡೆ, ಪಶ್ಯಂತಿ= ನೋಡುತ್ತಾರೆ. ಇತ್ಯೇವ= ಇದೇ ರೀತಿಯಾಗಿ, ತ್ವಯಾಪಿ= ನಿನ್ನಿಂದಲೂ, ವಾಚ್ಯಂ ಹಿ= ಹೇಳಲ್ಪಡಬೇಕಷ್ಟೇ!

**ಅನುವಾದ - ಆದ್ದರಿಂದ ಅಜ್ಞಾನಾವೃತಬ್ರಹ್ಮನಾಗಲೀ, ಮಾಯಾವಚ್ಛಿನ್ನಮಹೇಶ್ವರನಾಗಲೀ ಆವರಣ ಮತ್ತು ವಿಕ್ಷೇಪಶಕ್ತಿಗಳ ಮಧ್ಯೆ ಅತದಾಕಾರಪರಿಣಾಮ ರೂಪವಾದ ಅಜ್ಞಾನದ ವಿಕ್ಷೇಪಶಕ್ತಿಯಿಂದ ಜಗತ್ತನ್ನು ಸೃಷ್ಟಿಸುತ್ತಾನೆ. ಅನಂತರ**

ಎಲ್ಲರೂ ನಿರ್ದೋಷಾರ್ಥೇಂದ್ರಿಯಸನ್ನಿಕರ್ಷದಿಂದ ಎಲ್ಲಾ ವಸ್ತುಗಳನ್ನು ನೋಡು ತ್ತಾರೆ ಎಂದು ನೀನೂ ಸಹ ಒಪ್ಪಬೇಕು.

ಮಾಯಾರೂಪ್ಯಂ ಶುಕ್ತಿರೂಪ್ಯಂ ದೋಷಶಕ್ತ್ಯೈವ ಕೇವಲಂ ।
ದೃಷ್ಟಂ ಸ್ಯಾತ್ ಸನ್ನಿಕೃಷ್ಟತ್ವಂ ತತ್ರ ನೇಷ್ಟಂ ದ್ವಯೋರಪಿ ।
ಅತಸ್ತದಾರೋಪಿತಂ ಸ್ಯಾದ್ ದೋಷಯುಕ್ತೇನ ಚಕ್ಷುಷಾ ॥ ೪೭೦ ॥

ವ್ಯಾವಹಾರಿಕವಿಶ್ವಂ ತು ಸನ್ನಿಕರ್ಷೇಽಕ್ಷಗೋಚರಃ ।
ನೋಚೇನ್ನೇತಿ ಮತಂ ಯಸ್ಮಾತ್ ತವಾಪಿ ಚ ಮಮಾಪಿ ಚ ।
ತಸ್ಮಾದನಾರೋಪಿತತ್ವಂ ತತ್ತ್ವಮಾಸೀಜ್ಜಗತ್ತ್ರಯೇ ॥ ೪೭೧ ॥

**ಅರ್ಥ –** ವ್ಯಾವಹಾರಿಕ ವಿಶ್ವಂ ತು= ವ್ಯಾವಹಾರಿಕವಾದ ಜಗತ್ತಾದರೂ, ಸನ್ನಿಕರ್ಷೇ= ಅರ್ಥೇಂದ್ರಿಯ ಸನ್ನಿಕರ್ಷವಾದಾಗಲೇ ಅಕ್ಷಗೋಚರಂ= ಇಂದ್ರಿಯಕ್ಕೆ ಗೋಚರವಾಗುತ್ತದೆ, ನೋಚೇತ್= ಸನ್ನಿಕರ್ಷವಿಲ್ಲದಿದ್ದರೆ, ನ= ವ್ಯಾವಹಾರಿಕ ವಿಶ್ವವು ಇಂದ್ರಿಯಗೋಚರವಾಗಲಾರದು, ಇತಿ= ಎಂಬ, ಮತಂ= ಅಭಿಪ್ರಾಯವು, ಯಸ್ಮಾತ್= ಯಾವ ಕಾರಣದಿಂದ, ತವ ಅಪಿ ಚ= ನಿನಗೂ, ಮಮ ಅಪಿ ಚ= ನನಗೂ ಕೂಡ, ಅಸ್ತಿ= ಇದೆಯೋ, ತಸ್ಮಾತ್= ಆ ಕಾರಣದಿಂದ, ಜಗತ್ತ್ರಯೇ= ಮೂರು ಲೋಕಗಳಲ್ಲಿಯೂ, ಅನಾರೋಪಿತತ್ವಂ= ಆರೋಪಿಸಲ್ಪಡದಿರುವಿಕೆಯು (ಸತ್ಯತ್ವವು), ತತ್ತ್ವಂ= ಯಥಾರ್ಥವು, ಆಸೀತ್= ಆಯಿತು.

**ಅನುವಾದ -** ಮಿಥ್ಯಾಭೂತವಾದ ಶುಕ್ತಿರೂಪ್ಯವು ದುಷ್ಟ ಚಕ್ಷುಸ್ಸಿಗೆ ದೋಷಸಾಮರ್ಥ್ಯ ದಿಂದಲೇ ತೋರುತ್ತದೆ. ಅರ್ಥೇಂದ್ರಿಯಸನ್ನಿಕರ್ಷರೂಪವಾದ ಕಾರಣದಿಂದಲ್ಲ ಎಂಬುದು ನಮ್ಮಿಬ್ಬರಿಗೂ ಸಮ್ಮತ. ವ್ಯಾವಹಾರಿಕವಾದ ಜಗತ್ತು ಸನ್ನಿಕರ್ಷ ಇದ್ದರೆ ಮಾತ್ರ ತೋರುತ್ತದೆ ಎಂಬುದೂ ನಿನಗೂ ಮತ್ತು ನನಗೂ ಸಮ್ಮತ. ಆದ್ದರಿಂದ ಅನಾ ರೋಪಿತವಾದ ವಸ್ತುವು ಮೂರು ಜಗತ್ತಿನಲ್ಲಿಯೂ ಸತ್ಯವೇ ಆಯಿತು.

**ಭಾವವಿಲಾಸಿನೀ–** ತತ್ರ ರಜತಸೃಷ್ಟೌ ಮಾಯಾಸೃಷ್ಟೌ ಚ । ತನ್ಮಾಯಿಕಂ ಶುಕ್ತಿರಜತಾದಿಕಂ ಚ । ನೋಚೇತ್ ಸನ್ನಿಕರ್ಷೋ ನೋ ಚೇತ್ । ತಸ್ಮಾತ್ ಸನ್ನಿಕೃಷ್ಟಕರಣಗ್ರಾಹ್ಯತ್ವೇನಾರೋಪಿತ- ವೈಲಕ್ಷಣ್ಯಾತ್ । ಏವಂಚ ಜಗದನಾರೋಪಿತಂ ಸನ್ನಿಕೃಷ್ಟಕರಣಗ್ರಾಹ್ಯತ್ವಾತ್ । ವ್ಯತಿರೇಕೇಣ ಶುಚಿರೂಪವದಿತ್ಯನುಮಾನಮಪ್ಯನೇನ ಸೂಚಿತಮ್ । ಪ್ರಾಕ್ ಸನ್ನಿಕರ್ಷಲಬ್ಧಾರ್ಥಸತ್ತಯಾಽಽ-ರೋಪೋನೇತ್ಯುಕ್ತಮ್ । ಅಧುನಾ ಸನ್ನಿಕರ್ಷಬಲಾದೇವೇತಿ ವಿಶೇಷಃ । ಇದಮುಕ್ತಂ ಭವತಿ । ವಿವರಣೋಕ್ತರೀತ್ಯಾ ಬ್ರಹ್ಮಾಶ್ರಿತಾವಿದ್ಯಯಾ ಜಗತ್ ಸೃಷ್ಟಿಪಕ್ಷೇ ಮಹೀಮಹೀಧರಾದಿ ಜಗದಧಿಷ್ಠಾನಭೂತಬ್ರಹ್ಮಚೈತನ್ಯಸ್ಯ ಘಟಾದ್ಯಧಿಷ್ಠಾನಚೈತನ್ಯವನ್ಮಾನಸಾಪರೋಕ್ಷವೃತ್ತ್ಯಾಸ್ವಾವರ-

ಕಾಜ್ಞಾನಾಪಗಮಪರ್ಯಂತಂ ಜಗದ್ಭ್ರಮತ್ವಾಯೋಗಾತ್ ಅನಾರೋಪಿತಮೇವ ಜಗತ್ ಸ್ಯಾತ್ । ಅತ ಏವ ಹ್ಯವಿದ್ಯಾವೃತಶುಕ್ತ್ಯವಚ್ಛಿನ್ನಚೈತನ್ಯಸ್ಯ ಸ್ವಾವರಕಾವಿದ್ಯೋಪಾದಾನಕ ರಜತಭ್ರಮತ್ವಾನುಪಪತ್ತೇರಾಂತರಸಾಕ್ಷಿಚೈತನ್ಯಸ್ಯೈವ ತತ್ ಭ್ರಮತ್ವವರ್ಣನಂ ಮಾಯಾ-ವಾದಿನಾಂ ಘಟಾದ್ಯಧಿಷ್ಠಾನಚೈತನ್ಯೇಽಪ್ಯಜ್ಞಾನಾಪಗಮಾನುಸರಣಂ ಚ । ಏಕತ್ರಾವರಣ-ಸ್ಯಾಕಿಂಚಿತ್ಕರತ್ವೇಽನ್ಯತ್ರಾಪ್ಯಕಿಂಚಿತ್ ಕರತ್ವಸ್ಯಾಪರಿಹಾರಾತ್ ।

ಕಿಂಚ ಘಟಾದಿ ಚೈತನ್ಯಾನಾಮಪಿ ಸಾಕ್ಷಾತ್ ಬ್ರಹ್ಮಚೈತನ್ಯತ್ವೇನ ತತ್ ಭ್ರಮ ಪ್ರತಿರೋಧಕಸ್ಯಾಜ್ಞಾನಸ್ಯ ಕಥಂ ನ ಜಗತ್ ಭ್ರಮಪ್ರತಿರೋಧಕತ್ವಂ ಮಾಯಾಸೃಷ್ಟಿಪಕ್ಷೇಽಪಿ ಮಾಯಾಯಾಃ ಸ್ವಾಶ್ರಯಾವ್ಯಾಮೋಹಕತ್ವೇನ ಸರ್ವಜ್ಞೇಶ್ವರಸ್ಯ ಮಾಯಿಕತ್ವೇನಾಭಿಮತ ಜಗತ್ ಜ್ಞಾನಾಭಾವಪ್ರಸಂಗಾತ್ । ಸರ್ವಜ್ಞತ್ವರಕ್ಷಣಾಯ ಈಶ್ವರಜ್ಞಾನವಿಷಯತ್ವಾಂಗೀಕಾರೇ ಚ ಮಾಯಯಾಽವ್ಯಾಮುಗ್ಧತಯಾ ಪ್ರಮಾಭೂತದೃಗ್ವಿಷಯತ್ವೇನ ಸತ್ಯತ್ವಾ ಪರಿಹಾರಾಚ್ಚ ಈಶ್ವರದೇಹಗೇಹಾದೇರ್ದ್ರಷ್ಟ ಜೀವದೇಹೇಂದ್ರಿಯಾದೇಶ್ಚ ಸತ್ಯತ್ವಪ್ರಸಂಗಾತ್ । ಭಗವದ್ದೇಹಾದೇರ್ಜೀವದೇಹಾದೇಶ್ಚಾ ವಿದ್ಯಕತ್ವೇ ತತ್ ಕಲ್ಪಕತ್ವೇನಾಭಿಮತ ಬ್ರಹ್ಮಣೋಽಪಿ ಪೂರ್ವೋಕ್ತರೀತ್ಯಾ ತತ್ ಭ್ರಮತ್ವಾಯೋಗೇನ ತೇಷಾಂ ಸತ್ಯತ್ವಾಪರಿಹಾರಾತ್ । ಜಗತೋಽಪಿ ತದ್ವತ್ ಸೃಷ್ಟಿಸಂಭವೇನ ಕಲ್ಪನಾದ್ವಯವೈಯರ್ಥ್ಯಾಪಾತಾಚ್ಚ । ಮಾಯಿಕಕರಿತುರಗಾದಿವದ ಸನ್ನಿಕೃಷ್ಟಾನಾಮೇವ ಘಟಪಟಾದೀನಾಂ ದರ್ಶನಪ್ರಸಂಗಾತ್ ಪರೇಣಾಪಿ ಸನಿಕೃಷ್ಟಾನಾಮೇವೈಷಾಂ ದರ್ಶನಾಂಗೀಕಾರೇಣಾರೋಪಾತ್ ಪೂರ್ವಂ ಸನ್ನಿಕರ್ಷಘಟಕತಯಾ ಸತ್ತ್ವ ಪ್ರಸಂಗಾತ್ । ಸನ್ನಿಕೃಷ್ಟಕರಣಗ್ರಾಹ್ಯತ್ವಾಖ್ಯವ್ಯತಿರೇಕ್ಯನುಮಾನೇನ ಚ ಸತ್ಯತ್ವಪ್ರಸಂಗಾತ್ । ಮಾಯಾವಿನೋ ಜಗದೀಶ್ವರಸ್ಯಾಪಿ ಭ್ರಮಸಂಪಾದಕತ್ವೇ ಚ ಸ್ವಾಶ್ರಯಾವ್ಯಾಮೋಹಕ-ತ್ವಾಭಾವೇನಮಾಯಾಯಾ ಅಜ್ಞಾನತ್ವಾಪಾತೇನಾಜ್ಞಾನಪಕ್ಷೋಕ್ತದೋಷೇಣೈವ ದುಷ್ಟತ್ವ-ಪ್ರಸಂಗಾತ್ । ನಾಪಿ ಜಗದ್ದ್ರಷ್ಟೃನಾನಾಜೀವಾನಾಮಪರೋಕ್ಷವೃತ್ತಿರೇವ ತತ್ತದ್ಭ್ರಮಃ । ತಸ್ಯಾಃ ಚಕ್ಷುರಾದೀಂದ್ರಿಯ ಸನ್ನಿಕರ್ಷಜನ್ಯತ್ವನಿಯಮೇನ ಸನ್ನಿಕರ್ಷಘಟಕ- ಘಟಪಟಾದೀನಾಂ ಪ್ರಾಗೇವ ಸತ್ವಪ್ರಸಂಗಾತ್ । ದೃಗ್ ದೃಶ್ಯಯೋಗಾಯೋಗಂ ವದತಾ ಪರೇಣ ತಸ್ಯಾ ಜಗತ್ ಭ್ರಮತ್ವಾ-ನಂಗೀಕಾರಾಚ್ಚೇತಿ ॥ ೪೭೦-೪೭೧॥

**ವಿವರಣೆ** - ಇದರಿಂದ ಜಗತ್ತು ಅನಾರೋಪಿತವಾಗಿದೆ, ಸನ್ನಿಕೃಷ್ಟಕರಣ ಗ್ರಾಹ್ಯವಾದ್ದರಿಂದ, ವ್ಯತಿರೇಕೇಣ ಶುಕ್ತಿರೂಪ್ಯದಂತೆ ಎಂದು ಅನುಮಾನವು ಸೂಚಿತವಾಯಿತು. ಹಿಂದೆ ಸನ್ನಿಕರ್ಷವು ಆಗಬೇಕಾದರೆ ಅರ್ಥಸತ್ವವು ಮೊದಲೇ ಇರಬೇಕಾದ್ದರಿಂದ ಜಗತ್ತು ಅನಾರೊಪಿತ ಎಂದು ಹೇಳಲಾಯಿತು. ಈಗ ಸನ್ನಿಕರ್ಷ ಇರುವುದರಿಂದಲೇ ಜಗತ್ತು ಅನಾರೋಪಿತ ಎಂದು ಹೇಳುವುದರಿಂದ ಮೊದಲಿನ ಪಕ್ಷಕ್ಕೂ ಈ ಪಕ್ಷಕ್ಕೂ ಭೇದವಿದೆ.

ಒಟ್ಟು ಅಭಿಪ್ರಾಯವಿಷ್ಟು - ವಿವರಣಕಾರರ ರೀತ್ಯಾ ಬ್ರಹ್ಮಾಶ್ರಿತ ಅವಿದ್ಯೆಯಿಂದ ಜಗತ್ತಿನ ಸೃಷ್ಟಿಯನ್ನು ಒಪ್ಪಿದರೆ ಘಟಾದ್ಯಧಿಷ್ಠಾನಚೈತನ್ಯವು ಹೇಗೆ ಸ್ವಾಕಾರವಾದ, ಬಾಹ್ಯವಾದ ಅಪರೋಕ್ಷವೃತ್ತಿಯಿಂದ ಸ್ವಾವರಕವಾದ ಅಜ್ಞಾನವು ನಿವೃತ್ತವಾಗುವವರೆಗೆ ಘಟಭ್ರಮವಾಗುವುದಿಲ್ಲವೋ ಹಾಗೆ ಬ್ರಹ್ಮಚೈತನ್ಯವು ಸ್ವಾಕಾರವಾದ ಮಾನಸವಾದ ಅಪರೋಕ್ಷವೃತ್ತಿಯಿಂದ ತನಗೆ ಆವರಕವಾದ ಅಜ್ಞಾನವು ನಿವೃತ್ತಿಯಾಗುವವರೆಗೆ ಜಗದ್ಭ್ರಮವಾಗುವುದಿಲ್ಲ. ಆದ್ದರಿಂದ ಅಲ್ಲಿಯವರೆಗೆ ಇರುವ ಜಗತ್ತು ಅನಾರೋಪಿತವೆಂದೇ ಆಗುತ್ತದೆ. ಏಕೆಂದರೆ ಭ್ರಮವಿಷಯತ್ವ ಬಂದ ಮೇಲೆಯೇ ಆರೋಪಿತತ್ವವನ್ನು ಹೇಳಬೇಕು. ಆದ್ದರಿಂದಲೇ ಅವಿದ್ಯಾವೃತಶುಕ್ತ್ಯವಚ್ಛಿನ್ನ ಚೈತನ್ಯವು ಸ್ವಾವರಕಾವಿದ್ಯೋಪಾದಾನಕರಜತಭ್ರಮವಾಗುವುದಿಲ್ಲ ಎಂಬ ಕಾರಣದಿಂದಲೇ ಮಾಯಾವಾದಿಗಳು ಆಂತರಿಕವಾದ ಸಾಕ್ಷಿಚೈತನ್ಯವೇ ರಜತಭ್ರಮರೂಪವಾದುದು ಎಂದು ಒಪ್ಪಿ ಘಟಾದಿಸ್ಥಳದಲ್ಲಿ ಘಟಾದಿಚೈತನ್ಯಾವರಕವಾದ ಅಜ್ಞಾನದ ಅಪಗಮವನ್ನು ಒಪ್ಪಿ ಘಟಾಧಿಷ್ಠಾನಚೈತನ್ಯವೇ ಘಟಭ್ರಮರೂಪವಾದುದು ಎಂದು ಹೇಳುತ್ತಾರೆ. ಅದು ಸರಿಯಲ್ಲ. ಶುಕ್ತಿರಜತಸ್ಥಳದಲ್ಲಿ ಆವರಣವಿದ್ದರೂ ಪ್ರತಿಭಾಸವಿರುವುದರಿಂದ ಆವರಣವು ಅಪ್ರಯೋಜಕವಾಗುವುದಾದರೆ ಘಟಾದಿಸ್ಥಳದಲ್ಲಿಯೂ ಹಾಗೆಯೇ ಒಪ್ಪಬೇಕಾದೀತು.

ಘಟಾದ್ಯಧಿಷ್ಠಾನಚೈತನ್ಯವೂ ಬ್ರಹ್ಮಚೈತನ್ಯವೇ. ಆದ್ದರಿಂದ ಬ್ರಹ್ಮಾಶ್ರಿತಾಜ್ಞಾನವು ಬ್ರಹ್ಮಾವಭಾಸ (ಭ್ರಮ) ಕ್ಕೆ ಪ್ರತಿಬಂಧಕವಾಗುವುದಾದರೆ ಜಗದ್ಭ್ರಮಕ್ಕೆ ಏಕೆ ಪ್ರತಿಬಂಧಕವಾಗುವುದಿಲ್ಲ? ಅವಿದ್ಯೆಯನ್ನು ಬಿಟ್ಟು ಮಾಯಾದಿಂದ ಜಗತ್ಸೃಷ್ಟಿಪಕ್ಷವನ್ನು ಒಪ್ಪಿದರೆ ಮಾಯೆಯು ಸ್ವಾಶ್ರಯದಲ್ಲಿ ಭ್ರಾಂತಿಯನ್ನುಂಟುಮಾಡುವುದಿಲ್ಲವಾದ್ದರಿಂದ ಸರ್ವಜ್ಞನಾದ ಈಶ್ವರನಿಗೆ ಮಾಯಿಕವಾದ ಜಗತ್ತಿನ ಜ್ಞಾನವೇ ಇಲ್ಲ ಎಂದು ಒಪ್ಪ ಬೇಕಾಗುತ್ತದೆ. ಈಶ್ವರನ ಸರ್ವಜ್ಞತ್ವವನ್ನು ರಕ್ಷಿಸಲು ಈಶ್ವರನಿಗೆ ಜಗತ್ತಿನಜ್ಞಾನವನ್ನು ಒಪ್ಪಿದರೆ ಮಾಯೆಯು ಸ್ವಾಶ್ರಯದಲ್ಲಿ ಭ್ರಾಂತಿಯನ್ನು ಉಂಟುಮಾಡುವುದಿಲ್ಲವಾದ್ದರಿಂದ ಈಶ್ವರನ ಜ್ಞಾನವೂ ಪ್ರಮಾ ಎಂದೇ ಒಪ್ಪಬೇಕು. ತಥಾ ಚ ಪ್ರಮಾವಿಷಯವಾದ್ದರಿಂದ ಜಗತ್ತು ಸತ್ಯವೆಂದೇ ಒಪ್ಪಬೇಕಾಗುತ್ತದೆ. ಈಶ್ವರನ ದೇಹಾದಿಗಳೂ ಜೀವನ ದೇಹೇಂದ್ರಿಯಾದಿಗಳೂ ಸತ್ಯವೆಂದೇ ಒಪ್ಪಬೇಕಾಗುತ್ತದೆ. ಈಶ್ವರನ ದೇಹವೂ ಜೀವನ ದೇಹಾದಿಗಳೂ ಆವಿದ್ಯಕ ಎಂದು ಒಪ್ಪಿದರೆ ಅದರ ಕಲ್ಪಕನಾದ ಬ್ರಹ್ಮನಿಗೆ ಮೊದಲು ಹೇಳಿದಂತೆ ತದ್ಭ್ರಮತ್ವವು ಕೂಡುವುದಿಲ್ಲ. ಆದ್ದರಿಂದ ಈಶ್ವರಜೀವದೇಹಾದಿಗಳು ಸತ್ಯವೆಂದೇ ಒಪ್ಪಬೇಕಾಗುತ್ತದೆ. ಜಗತ್ತಿಗೂ ಈಶ್ವರದೇಹದಂತೆ ಸೃಷ್ಟಿಯು ಕೂಡುವುದರಿಂದ ಈಶ್ವರದೇಹದಲ್ಲಿ ಒಂದು ರೀತಿ, ಘಟಾದಿಜಗತ್ತಿನಲ್ಲಿ ಬೇರೆ ರೀತಿ ಕಲ್ಪನೆಮಾಡಬೇಕಾದ ಪ್ರಸಂಗವಿಲ್ಲ. ಮಾಯಿಕವಾದ ಕರಿತುರಗಾದಿಗಳು ಸನ್ನಿಕರ್ಷವಿಲ್ಲದೇ ಭಾಸವಾಗುವಂತೆ ಘಟಾದಿಗಳೂ ಸನ್ನಿಕ ರ್ಷವಿಲ್ಲದೇ ಭಾಸವಾಗಲಿ ಎಂಬ ಆಪತ್ತಿಯನ್ನು ಪರಿಹಾರಮಾಡುವುದಕ್ಕೆ ಸನ್ನಿಕೃಷ್ಟವಾದ ವಸ್ತುಗಳಿಗೆ ಮಾತ್ರ

ಭಾವವನ್ನು ಒಪ್ಪುವ ಮಾಯಾವಾದಿಗಳು ಸನ್ನಿಕರ್ಷಕ್ಕಿಂತ ಮೊದಲು ಸನ್ನಿಕರ್ಷಕ್ಕೆ ಕಾರಣವಾದ ಅರ್ಥಸತ್ವವನ್ನು ಒಪ್ಪಬೇಕಾಗುತ್ತದೆ. ಅಲ್ಲದೆ ಮೊದಲು ಹೇಳಿದ ಸನ್ನಿಕೃಷ್ಟಕರಣಗ್ರಾಹ್ಯತ್ವರೂಪವಾದ ವ್ಯತಿರೇಕವ್ಯಾಪ್ತಿಯುಳ್ಳ ಅನುಮಾನದಿಂದಲೂ ಜಗತ್‌ಸತ್ಯತ್ವವು ಸಿದ್ಧವಾಗುತ್ತದೆ.

ಮಾಯಾವಿಯಾದ ಈಶ್ವರನಿಗೂ ಭ್ರಮವನ್ನು ಒಪ್ಪುವುದಾದರೆ ಮಾಯೆಯು ಸ್ವಾಶ್ರಯ ವ್ಯಾಮೋಹಕವಲ್ಲವಾದ ಕಾರಣ ಅದು ಮಾಯೆಯಲ್ಲ, ಅಜ್ಞಾನ ಎಂದಾಯಿತು. ಆಗ ಅಜ್ಞಾನಪಕ್ಷದಲ್ಲಿ ಹೇಳಿದ ಮೊದಲಿನ ಎಲ್ಲಾ ದೋಷಗಳೂ ಬರುತ್ತವೆ.

ಅಥವಾ ಜಗತ್ತನ್ನು ನೋಡುವ ನಾನಾ ಜೀವರ ಅಪರೋಕ್ಷವೃತ್ತಿಯೇ ಜಗದ್ಭ್ರಮ ಎಂದು ಹೇಳಲೂ ಸಾಧ್ಯವಿಲ್ಲ. ಅಪರೋಕ್ಷವೃತ್ತಿಯು ನಿಯಮೇನ ಸನ್ನಿಕರ್ಷಜನ್ಯ-ವಾಗಿರುವುದರಿಂದ ದೃಕ್ ಮತ್ತು ದೃಶ್ಯಗಳಿಗೆ ಯಾವ ಸಂಬಂಧವೂ ಇಲ್ಲವೆಂದು ಹೇಳುವುದರಿಂದ ಜೀವರಜ್ಞಾನಕ್ಕೂ ಜಗದ್ಭ್ರಮತ್ವವನ್ನು ಅವರು ಒಪ್ಪುವುದಿಲ್ಲ.

**ಅತಸ್ತ್ವತ್ಪ್ರಕ್ರಿಯಾಂಬೈವ ಸೂತೇಽನಾರೋಪಿತಂ ಜಗತ್ ।**
**ಯಾ ಜಲಾಂಜಲಿನಾ ಸ್ವೇನೈವಾರೋಪಾಗ್ನಿಮಶೀಶಮತ್ ॥ ೪೭೨ ॥**

**ಅರ್ಥ –** ಅತಃ= ಆದ್ದರಿಂದ, ಯಾವ= ಯಾವಳು, ಸ್ವೇನ= ತನ್ನ, ಜಲಾಂಜಲಿನಾ= ಪ್ರಮೇಯವೆಂಬ ನೀರಿನ ಅಂಜಲಿಯಿಂದ, ಆರೋಪಾಗ್ನಿಂ= ಜಗದಾರೋಪವೆಂಬ ಅಗ್ನಿಯನ್ನು, ಅಶೀಶಮತ್= ಆರಿಸಿತೋ, ಸಾ= ಆ, ತತ್ತ್ವಕ್ರಿಯಾಂಬಾ ಏವ= ನಿನ್ನ ಪ್ರಕ್ರಿಯೆಯೆಂಬ ತಾಯಿಯೇ, ಅನಾರೋಪಿತಂ= ಆರೋಪಿತವಲ್ಲದ, ಜಗತ್= ಪ್ರಪಂಚವನ್ನು, ಸೂತೇ= ಪ್ರಸವಿಸುತ್ತದೆ.

**ಅನುವಾದ -** ಆದ್ದರಿಂದ ನಿನ್ನ ಪ್ರಕ್ರಿಯಾ ಎಂಬ ವನಿತೆಯೇ ಅನಾರೋಪಿತಜಗತ್ತನ್ನು ಹಡೆಯುತ್ತಾಳೆ. ಏಕೆಂದರೆ ಅವಳು ಪ್ರಮೇಯವೆಂಬ ನೀರಿನಿಂದ ಆರೋಪವೆಂಬ ಅಗ್ನಿಯನ್ನು ನಾಶಮಾಡಿದ್ದಾಳೆ.

**ಭಾವವಿಲಾಸಿನೀ–** ಆರೋಪಾನುಪಪತ್ತಿ ಕಥನಮುಪಸಂಹರತಿ ॥ **ಅತ ಇತಿ** ॥ ಯಾ ಪ್ರಕ್ರಿಯಾ । ಜಲಾಂಜಲಿನಾ ಪ್ರಮೇಯಾಖ್ಯಜಲಾಂಜಲಿನಾ । ಪೂರ್ವೋತ್ತರ ಪರ್ಯಾಲೋಚನಾಯಾಂ ತದೀಯಪ್ರಮೇಯಸ್ಯೈವಾರೋಪ ವಿರುದ್ಧತಯಾ ಜಗದ್ರಕ್ಷಣೋಪಯೋಗಿತ್ವಾತ್ ಜಲಾಂಜಲಿನೇತ್ಯುಕ್ತಮ್ ॥ ೪೭೨ ॥

**ವಿವರಣೆ -** ಆರೋಪವನ್ನು ಸಮರ್ಥನೆಮಾಡುವ ನಿನ್ನ ಪ್ರಕ್ರಿಯೆಯೇ ಪ್ರಮೇಯ ಸತ್ವವನ್ನು ವ್ಯವಸ್ಥೆಮಾಡುತ್ತದೆ. ಆದರೆ ಪ್ರಮೇಯಸತ್ವವು ಆರೋಪಕ್ಕೆ ವಿರೋಧಿ. ಆದ್ದರಿಂದ ಪ್ರಕ್ರಿಯಾವನಿತೆಯು ಆರೋಪಾಗ್ನಿಯನ್ನು ನಂದಿಸಿದ್ದಾಳೆ.

**ತದಧಿಷ್ಠಾನಚೈತನ್ಯಂ ಪ್ರಾಗ್ವಿಶ್ವಾಕಾರವಿಕ್ರಿಯಮ್ ।**
**ತತ್ ಕಲ್ಪಕಭ್ರಮತ್ವಂ ತು ತಸ್ಯ ನ ಸ್ಯಾತ್ ಕದಾಚನ ॥ ೪೭೩ ॥**

**ಅರ್ಥ–** ತತ್= ಆದ್ದರಿಂದ, ಪ್ರಾಕ್= ಮೊದಲು, ವಿಶ್ವಾಕಾರ ವಿಕ್ರಿಯಂ= ವಿಶ್ವಾಕಾರ ಪರಿಣಾಮವುಳ್ಳ, ಅಧಿಷ್ಠಾನ ಚೈತನ್ಯಂ= ಅಧಿಷ್ಠಾನ ಚೈತನ್ಯವು, ತಸ್ಯ= ಆ ಚೈತನ್ಯಕ್ಕೆ, ತತ್ಕಲ್ಪಕಭ್ರಮತ್ವಂತು= ವಿಶ್ವಕಲ್ಪಕ ಭ್ರಮತ್ವವಾದರೂ, ಕದಾಚನ= ಯಾವತ್ತೂ ಕೂಡ, ನ ಸ್ಯಾತ್= ಬರಲಾರದು.

**ಅನುವಾದ -** ಆದ್ದರಿಂದ ಮೊದಲು ವಿಶ್ವಾಕಾರಪರಿಣಾಮವುಳ್ಳ ಅಧಿಷ್ಠಾನಚೈತನ್ಯವು ಜಗದುಪಾದಾನವಾಗಿದೆ. ಅದು ಎಂದೂ ವಿಶ್ವಕಲ್ಪಕಭ್ರಮವಾಗಲಾರದು.

**ಭಾವವಿಲಾಸಿನೀ–** ಮೂಲಸ್ಯ ಜಗತ್ಸೃಷ್ಟೇಃ ॥ ೪೭೩ ॥

**ಅತೋ ಮೂಲಸ್ಯ ಶೋಧೇ ತು ಮಿಥ್ಯಾತ್ವೇ ನಾಸ್ತಿ ಕಾರಣಮ್ ।**
**ಸತ್ಯತ್ವಸಾಧಕಾನ್ಯೇವ ಸಂದೃಶ್ಯಂತೇ ಸಹಸ್ರಶಃ ॥ ೪೭೪ ॥**

**ಅರ್ಥ–** ಅತಃ= ಆದ್ದರಿಂದ, ಮೂಲಸ್ಯ= ಜಗತ್ಸೃಷ್ಟಿಯ ಮೂಲದ, ಶೋಧೇ= ವಿಮರ್ಶವನ್ನು ಮಾಡಿದಾಗ, ಮಿಥ್ಯಾತ್ವೇ= ಜಗನ್ಮಿಥ್ಯಾತ್ವದ ವಿಷಯದಲ್ಲಿ, ಕಾರಣಂ ತು= ಕಾರಣವಾದರೂ, ನಾಸ್ತಿ= ಇಲ್ಲ, ಸತ್ಯತ್ವಸಾಧಕಾನಿ= ಜಗತ್ಸತ್ಯತ್ವವನ್ನು ಸಾಧಿಸುವ ಕಾರಣಾನಿ ಏವ= ಕಾರಣಗಳೇ, ಸಹಸ್ರಶಃ= ಸಾವಿರಗಟ್ಟಲೆ, ಸಂದೃಶ್ಯಂತೇ= ಕಾಣುತ್ತವೆ.

**ಅನುವಾದ -** ಆದ್ದರಿಂದ ಜಗತ್ಸೃಷ್ಟಿಯಮೂಲವನ್ನು ವಿಮರ್ಶಿಸಿದಾಗ ಜಗತ್ತು ಆರೋಪಿತ ಎಂದು ಹೇಳಲು ಯಾವ ಕಾರಣವೂ ಇಲ್ಲ. ಅದಕ್ಕೆ ಬದಲಾಗಿ ಜಗತ್ತು ಸತ್ಯ ಎಂದು ಸಾಧನೆಮಾಡುವ ಪ್ರಮಾಣಗಳು ಸಾವಿರಾರು ಇವೆ.

**ಭಾವವಿಲಾಸಿನೀ–** ತತ್ ತಸ್ಮಾತ್ । ಪ್ರಾಕ್ ಸೃಷ್ಟಿದಶಾಯಾಮ್ । ವಿಶ್ವಾಕಾರವಿಕ್ರಿಯಂ ವಿಶ್ವಾಕಾರೇಣ ವಿಕ್ರಿಯಾಽವಿದ್ಯಾಪರಿಣಾಮೋ ಯಸ್ಮಿನ್ ತತ್ತಥೋಕ್ತಮ್ । ತಸ್ಯ ಜಗದುಪಾದಾನಾವಿದ್ಯಾವೃತಬ್ರಹ್ಮಣಃ ॥ ೪೭೪ ॥

**ವೃತ್ತಿಶ್ಚ ಸನ್ನಿಕೃಷ್ಟಾರ್ಥಭವಾ ಸಿದ್ಧಸ್ಯ ವೇದನಂ ।**
**ತತ್ಕಲ್ಪಕಭ್ರಮತ್ವಂ ಚ ತಸ್ಯಾ ಅಪಿ ನ ಕರ್ಹಿಚಿತ್ ॥ ೪೭೫ ॥**

**ಅರ್ಥ–** ವೃತ್ತಿಃ ಚ= ವೃತ್ತಿಯೂ ಕೂಡ, ಸನ್ನಿಕೃಷ್ಟಾರ್ಥಭವಾ= ಇಂದ್ರಿಯ ಸನ್ನಿಕೃಷ್ಟವಾದ ವಸ್ತುವಿನಿಂದ ಜನ್ಯವಾಗಿದೆ. ಅತಃ= ಆದ್ದರಿಂದ, ಸಾ= ಆ ವೃತ್ತಿಯು, ಸಿದ್ಧಸ್ಯ= ಸನ್ನಿಕರ್ಷಕ್ಕಿಂತ ಮೊದಲೇ ಸಿದ್ಧವಾದ ವಸ್ತುವಿನ, ವೇದನಂ= ಜ್ಞಾನರೂಪವಾಗಿರುತ್ತದೆ, ಅತಃ= ಆದ್ದರಿಂದ,

ತಸ್ಯ ಅಪಿ= ಆ ವೃತ್ತಿಗೂ ಕೂಡ, ತತ್ಕಲ್ಪಕಭ್ರಮತ್ವಂ ಚ= ಜಗತ್ಕಲ್ಪಕ ಭ್ರಮತ್ವವಾದರೂ, ಕರ್ಹಿಚಿತ್ ಅಪಿ= ಯಾವ ರೀತಿಯಲ್ಲಿ ಕೂಡ, ನ ಸ್ಯಾತ್= ಬರಲಾರದು.

**ಅನುವಾದ** - ವೃತ್ತಿಯು ಸನ್ನಿಕರ್ಷಜನ್ಯವಾದುದು. ಆದ್ದರಿಂದ ವೃತ್ತಿಯು ಸನ್ನಿಕರ್ಷಕ್ಕಿಂತ ಮೊದಲೇ ಸಿದ್ಧವಾದ ವಸ್ತುವಿನ ಜ್ಞಾನರೂಪವಾಗಿರುತ್ತದೆ. ಆದ್ದರಿಂದ ವೃತ್ತಿಯೂ ಕೂಡ ಯಾವ ರೀತಿಯಲ್ಲೂ ಜಗತ್ಕಲ್ಪಕಭ್ರಮವಾಗಲಾರದು.

**ಭಾವವಿಲಾಸಿನೀ**– ಸನ್ನಿಕೃಷ್ಟಾರ್ಥಭವಾ ಇಂದ್ರಿಯಾರ್ಥಸನ್ನಿಕರ್ಷಜನ್ಯೇತ್ಯರ್ಥಃ । ತಸ್ಯಾಃ ವೃತ್ತೇಃ॥೪೭೫॥

**ತಸ್ಮಾದಭ್ರಮಸಿದ್ಧತ್ವಂ ಸತ್ಯತಾಸಾಧಕಂ ದೃಢಮ್ ॥ ೪೭೬ ॥**

**ಅರ್ಥ**– ತಸ್ಮಾತ್= ಆದ್ದರಿಂದ, ಅಭ್ರಮಸಿದ್ಧತ್ವಂ= ಭ್ರಮವಲ್ಲದ (ಯಥಾರ್ಥ) ಜ್ಞಾನಕ್ಕೆ ವಿಷಯತ್ವವು, ದೃಢಂ= ಪ್ರಬಲವಾದ ಸತ್ಯತಾ ಸಾಧಕಂ= ಜಗತ್ಸತ್ಯತ್ವವನ್ನು ಸಾಧಿಸುವ ಪ್ರಮಾಣವಾಗಿದೆ.

**ಅನುವಾದ** - ಆದ್ದರಿಂದ ಪ್ರಮಾಸಿದ್ಧತ್ವವು ಜಗತ್ಸತ್ಯತ್ವಸಾಧನೆಗೆ ಪ್ರಬಲವಾದ ಯುಕ್ತಿ.

**ಭಾವವಿಲಾಸಿನೀ**– ಸ್ವಸಾಧಿತಪ್ರಮೇಯಸ್ಯ ಪ್ರಕೃತೋಪಯೋಗಂ ದರ್ಶಯತಿ ॥ **ತಸ್ಮಾದಿತಿ**॥ ೪೭೬॥

**ತತ್ರ ತತ್ರ ಸ್ಥಿತಂ ಬ್ರಹ್ಮ ಸ್ವಾಜ್ಞಾನಕಲಿಲಂ ಕಿಲ ।**
**ಘಟೋಽಹಮಿತ್ಯಾದಿರೂಪೈರ್ಭ್ರಾಂತಂ ಸರ್ವತ್ರ ಸರ್ವದಾ ।**
**ಇತ್ಥಂ ತದ್‌ಭ್ರಾಂತಿಮಾತ್ರಸ್ಯ ವಿವರ್ತೋಽಯಂ ಭವಃ ಕಿಲ ॥ ೪೭೭ ॥**

**ಅರ್ಥ** – ತತ್ರ ತತ್ರ= ಎಲ್ಲ ಅಪರೋಕ್ಷವೃತ್ತಿ ಸ್ಥಳಗಳಲ್ಲಿ, ಸ್ಥಿತಂ= ಇರುವ, ಬ್ರಹ್ಮ= ಬ್ರಹ್ಮನು, ಸ್ವಾಜ್ಞಾನ= ತನ್ನ ಅಜ್ಞಾನದಿಂದ, ಕಲಿಲಂ= ದುಷ್ಟವಾಗಿ ಘಟ ಅಹಂ ಇತ್ಯಾದಿ ರೂಪೈಃ= ಘಟಃ ಅಹಂ ಇವೇ ಮೊದಲಾದ ರೂಪಗಳಿಂದ, ಸರ್ವತ್ರ= ಎಲ್ಲೆಡೆ, ಸರ್ವದಾ= ಯಾವಾಗಲೂ, ಭ್ರಾಂತಂ= ಭ್ರಾಂತಿಯುಳ್ಳದ್ದಾಗಿದೆ, ಇತ್ಥಂ= ಈ ರೀತಿಯಾಗಿ, ತದ್ಭ್ರಾಂತಿ ಮಾತ್ರಸ್ಯ= ಆ ಭ್ರಾಂತಿಗಳ ರೂಪದಲ್ಲಿ, ವಿವರ್ತಃ= ಪರಿವರ್ತನವೇ, ಅಯಂ= ಈ, ಭವಃ= ಸಂಸಾರವೇ, ಅಸ್ತಿ ಕಿಲ= ಆಗಿದೆಯಷ್ಟೆ?

**ಅನುವಾದ** - ಅಲ್ಲಲ್ಲಿ (ಎಲ್ಲಾ ಅಪರೋಕ್ಷವೃತ್ತಿಸ್ಥಳದಲ್ಲಿ) ಇರುವ ಬ್ರಹ್ಮನು ತನ್ನ ಅಜ್ಞಾನದಿಂದ ಘಟೋಽಹಂ ಇತ್ಯಾದಿ ಭ್ರಾಂತಿಯುಳ್ಳದ್ದಷ್ಟೆ? ಅಂತಹ ಭ್ರಾಂತಿಸಿದ್ಧ ವಿಪರೀತಾಕಾರಗಳ ಸಮೂಹವೇ ಜಗತ್ತಷ್ಟೇ?

**ಭಾವವಿಲಾಸಿನೀ**– ಪುನರಪಿ ಕಿಂಚಿನ್ಮೂಲಂ ಸಂಶೋಧ್ಯಸತ್ಯತಾಮನುಭಾವಯತಮ್ ॥೪೭೭॥

**ವಿವರಣೆ** - ವೃತ್ತಿಸ್ಥಳದಲ್ಲಿ ಬ್ರಹ್ಮನಿಗೆ ಭ್ರಾಂತಿಬರುವುದಾದರೆ ಚೈತನ್ಯಕ್ಕೆ ಬರುವ ಭ್ರಾಂತಿಯಲ್ಲಿ ಯಾವಾಗಲೂ ಅಹಂ ಎಂದು ಉಲ್ಲೇಖವಿರುವುದರಿಂದ, ಭ್ರಾಂತಿಯ ಆಕಾರ ಅಹಂ ಘಟಃ (ನಾನು ಘಟ) ಎಂದಾಗಬೇಕು. ಹೊರತು ಅಯಂ ಘಟಃ (ಇದು ಘಟ) ಎಂಬ ಭ್ರಾಂತಿಯ ಆಕಾರವು ಕೂಡುವುದಿಲ್ಲ.

**ಯದಿ ಸ್ವಾಜ್ಞಾನತೋ ಬ್ರಹ್ಮ ಘಟಂ ಕಲ್ಪಯತಿ ಭ್ರಮಾತ್ ।**
**ಕುಲಾಲಮೃತ್ತಿಕಾದಂಡಚಕ್ರಾದ್ಯೈಃ ಕಿಂ ಪ್ರಯೋಜನಮ್ ॥ ೪೭೮ ॥**

**ಅರ್ಥ** – ಯದಿ= ಒಂದು ಪಕ್ಷ, ಬ್ರಹ್ಮ= ಬ್ರಹ್ಮನು, ಸ್ವಾಜ್ಞಾನತಃ= ತನ್ನ ಅಜ್ಞಾನದಿಂದ, ಭ್ರಮಾತ್= ಭ್ರಮದಿಂದ (ಅಯಥಾರ್ಥರೂಪದಿಂದ), ಘಟಂ= ಗಡಿಗೆಯನ್ನು, ಕಲ್ಪಯತಿ= ಕಲ್ಪಿಸಿಕೊಳ್ಳುತ್ತಾನೆಂದಾದರೆ, ತರ್ಹಿ= ಆ ಪಕ್ಷದಲ್ಲಿ, ಕುಲಾಲಮೃತ್ತಿಕಾದಂಡ ಚಕ್ರಾದ್ಯೈಃ= ಕುಂಬಾರ, ಮಣ್ಣು, ಕೋಲು, ಚಕ್ರ ಇವೇ ಮೊದಲಾದ ವಸ್ತುಗಳಿಂದ, ಘಟೋತ್ಪತ್ತೌ= ಘಟದ ಹುಟ್ಟಿನಲ್ಲಿ, ಕಿಂ= ಏನು, ಪ್ರಯೋಜನಂ= ಉಪಯೋಗವಿದೆ?

**ಅನುವಾದ** - ಬ್ರಹ್ಮನೇ ತನ್ನ ಅಜ್ಞಾನದಿಂದ ಭ್ರಾಂತಿಯಿಂದ ಘಟವನ್ನು ಕಲ್ಪಿಸುವುದಾದರೆ ಕುಂಬಾರ, ಮೃತ್ತಿಕೆ, ದಂಡ, ಚಕ್ರಗಳ ಆವಶ್ಯಕತೆ ಏನು?

**ಭಾವವಿಲಾಸಿನೀ**– ಮುದ್ಗರಾದಿಜನ್ಯ ಜಗದಗ್ರರೂಪಸಂಹಾರಶೋಧನೇಽಪಿ ಸತ್ಯತ್ವ- ಮೇವೇತ್ಯಾಹ– **ತತ್ರ ತತ್ರೇತಿ** ॥ ಯತ್ರ ಯತ್ರ ಯದಾ ಯದಾಽಪರೋಕ್ಷವೃತ್ತಿಸ್ತತ್ರ ಸರ್ವತ್ರ ಸರ್ವದೇತ್ಯರ್ಥಃ । ಚೈತನ್ಯಸ್ಯ ಸ್ವಸ್ಮಿನ್ನಹಮಿತ್ಯೇವೋಲ್ಲೇಖಸಂಭವೇನಾಯಂ ಘಟತ ಇತಿ ಭ್ರಮಕಾರೋ ನಸ್ಯಾದಿತ್ಯಭಿನವಂ ಮೂಲಶೋಧನಮ್ । ವಿವರ್ತಃ ವಿಪರೀತಾಕಾರ - ಪರಿವರ್ತನಮ್ । ಭ್ರಾಂತಿಸಿದ್ಧಿವಿಪರೀತಾಕಾರ ಇತ್ಯರ್ಥಃ । ಭವಃ ಸಂಸಾರಃ ॥ ೪೭೮ ॥

**ಕಿಂ ಕಾರುದಾರ್ವಪೇಕ್ಷಾಸ್ತಿ ಗಂಧರ್ವಪುರಸರ್ಜನೇ ।**
**ಕಿಂ ವಾ ಸರ್ಪಸ್ಯ ಮಿಥುನಾದ್ರಜ್ಜುಸರ್ಪಜನಿಸ್ತವ ॥ ೪೭೯ ॥**

**ಅರ್ಥ** – ಗಂಧರ್ವಪುರ ಸರ್ಜನೇ= ಗಂಧರ್ವನಗರ ನಿರ್ಮಾಣಕ್ಕೆ, ಕಾರು= ಬಡಗಿ, ದಾರು= ಮರಗಳ, ಅಪೇಕ್ಷಾ= ಆವಶ್ಯಕತೆಯು, ಅಸ್ತಿ ಕಿಂ= ಇದೆಯೇನು? ತವ= ನಿನ್ನ, ಮತೇ= ಮತದಲ್ಲಿ, ಸರ್ಪಸ್ಯ= ಹಾವಿನ, ಮಿಥುನಾತ್= ಮೈಥುನದಿಂದ, ರಜ್ಜು ಸರ್ಪ= ಹಗ್ಗದಲ್ಲಿ ಕಂಡ ಹಾವಿನ, ಜನಿಃ= ಉತ್ಪತ್ತಿಯು, ಸ್ಯಾತ್= ಆಗುತ್ತದೇನು?

**ಅನುವಾದ** - ಗಂಧರ್ವನಗರನಿರ್ಮಾಣಕ್ಕೆ ಬಡಗಿ ಮತ್ತು ಮರಗಳ ಆವಶ್ಯಕತೆ ಇದೆಯೇ? ಅಥವಾ ನಿನ್ನ ಮತದಲ್ಲಿ ರಜ್ಜುಸರ್ಪವು ಎರಡು ಸರ್ಪಗಳ ಮೈಥುನಕ್ರಿಯೆಯಿಂದ ಹುಟ್ಟುತ್ತದೆಯೇ?

**ಭಾವವಿಲಾಸಿನೀ– ಪ್ರಯೋಜನಾಭಾವಮೇವ ದೃಷ್ಟಾಂತಮುಖೇನ ದರ್ಶಯತಿ ।। ಕಿಂಕಾರ್ವಿತಿ।। ತವಮತೇ । ಇದಮಪ್ಯಭಿನವಂ ಮೂಲಶೋಧನಮ್ ।। ೪೭೯ ।।**

**ಮುದ್ಗರಸ್ಯ ಪ್ರಹಾರೇಣ ಭ್ರಮಂ ಮುಂಚತಿ ನಾನ್ಯಥಾ ।**
**ಅಹೋ ದುರ್ಜನಸಂಗತ್ಯಾ ದೌರ್ಜನ್ಯಂ ಬ್ರಹ್ಮಣೋಽಪ್ಯಭೂತ್ ।।೪೮೦।।**

**ಅರ್ಥ** – ಬ್ರಹ್ಮ= ಪರಬ್ರಹ್ಮನು ಮುದ್ಗರಸ್ಯ= ದೊಣ್ಣೆಯ, ಪ್ರಹಾರೇಣ= ಏಟಿನಿಂದ, ಭ್ರಮಂ= ಘಟಭ್ರಮವನ್ನು, ಮುಂಚತಿ= ಕಳೆದುಕೊಳ್ಳುತ್ತಾನೆ; ಅನ್ಯಥಾ= ಬೇರೆ ಯಾವ ಮಾರ್ಗದಿಂದಲೂ, ನ= ಅವನು ಭ್ರಮವನ್ನು ಕಳೆದುಕೊಳ್ಳುವುದಿಲ್ಲ, ದುರ್ಜನ ಸಂಗತ್ಯಾ= ಮೂರ್ಖರಾದ ಅದ್ವೈತಿಗಳ ಸಹವಾಸದಿಂದ, ಬ್ರಹ್ಮಣಃ ಅಪಿ= ಬ್ರಹ್ಮನಿಗೂ ಕೂಡ, ದೌರ್ಜನ್ಯಂ= ಮೂರ್ಖತ್ವವು, ಅಭೂತ್= ಬಂದೊದಗಿತು.

**ಅನುವಾದ - ಘಟಕ್ಕೆ ಮುದ್ಗರಪ್ರಹಾರವಾದಾಗ ಮಾತ್ರ ಘಟಭ್ರಮವು ನಾಶವಾಗುತ್ತದೆ. ನಿನ್ನ ಬ್ರಹ್ಮನು ಭ್ರಮಮುಕ್ತನಾಗುತ್ತಾನೆ. ಆಶ್ಚರ್ಯ. ದುರ್ಜನರ ಸಹವಾಸದಿಂದ ಬ್ರಹ್ಮನಿಗೂ ದೌರ್ಜನ್ಯವುಂಟಾಯಿತು.**

**ಭಾವವಿಲಾಸಿನೀ–** ಪರಪ್ರಕ್ರಿಯಾಮುಪಹಸನ್ನಗ್ರಮಪಿ ಶೋಧಯತಿ ।। **ಮುದ್ಗರಸ್ಯೇತಿ** ।। ಬ್ರಹ್ಮಣೋಭ್ರಮೇ ಸತಿ ಘಟನಾಶಾಯೋಗಾತ್ ಮುದ್ಗರಪ್ರಹಾರೇ ಚ ಘಟನಾಶದರ್ಶನಾತ್ ಬ್ರಹ್ಮಾಪಿ ಭ್ರಮಂ ಮುಂಚತೀತ್ಯುಕ್ತಮ್ ।। ೪೮೦ ।।

**ವಿವರಣೆ** - ಅಜ್ಞಾನವೆಂಬ ದುರ್ಜನನ ಸಹವಾಸದಿಂದ ಬ್ರಹ್ಮನಿಗೂ ಭ್ರಮವೆಂಬ ದೌರ್ಜನ್ಯವುಂಟಾಯಿತು. ದೊಣ್ಣೆಯಿಂದ ಘಟವನ್ನು ಒಡೆದರೆ ಘಟವು ಪ್ರಕಾಶಿಸುವುದಿಲ್ಲವಾದ ಕಾರಣ ಬ್ರಹ್ಮನಿಗೆ ಘಟಭ್ರಮನಿವೃತ್ತಿಯಾಯಿತು ಎಂದು ಪರಿಹಾಸ.

ವಿಪರೀತಪ್ರಮಾಬಾಧ್ಯೋ ಭ್ರಮಃ ಸರ್ವತ್ರ ದೃಶ್ಯತೇ ।
ಮುದ್ಗರೇಣ ಭ್ರಮೋಚ್ಛೇದಸ್ತ್ವದ್ಭ್ರಮಸ್ಯಾನುಮಾಪಕಃ ।। ೪೮೧ ।।

**ಅರ್ಥ** – ಸರ್ವತ್ರ= ಎಲ್ಲ ಕಡೆ, ಭ್ರಮಃ= ಅಯಥಾರ್ಥಜ್ಞಾನವು, ವಿಪರೀತ ಪ್ರಮಾಬಾಧ್ಯಃ= ವಿರುದ್ಧವಾದ ಯಥಾರ್ಥಜ್ಞಾನದಿಂದ ಬಾಧ್ಯವಾಗಿರುವುದು, ದೃಶ್ಯತೇ= ಕಾಣಲ್ಪಡುವುದು. ಮುದ್ಗರೇಣ= ದೊಣ್ಣೆಯಿಂದ, ಭ್ರಮೋಚ್ಛೇದಃ= ಭ್ರಮನಿವೃತ್ತಿಯು, ತ್ವದ್ಭ್ರಮಸ್ಯ= ನಿನ್ನ ಭ್ರಮಕ್ಕೆ, ಅನುಮಾಪಕಃ= ಅನುಮಾಪಕವಾಗಿದೆ.

**ಅನುವಾದ - ಎಲ್ಲಾ ಕಡೆಯಲ್ಲಿಯೂ ಭ್ರಮವು ವಿರುದ್ಧವಾದ ಪ್ರಮೆಯಿಂದ ನಾಶ ಹೊಂದುತ್ತದೆ. ದೊಣ್ಣೆಯ ಏಟಿನಿಂದ ಭ್ರಮವು ನಿವೃತ್ತವಾಗುತ್ತದೆಂದು ಒಪ್ಪಿದರೆ ನಿನ್ನ ಭ್ರಾಂತಿಯೇ ಅನುಮಿತವಾಗುತ್ತದೆ.**

**ಭಾವವಿಲಾಸಿನೀ–** ಅಸ್ತುಮುದ್ಗರೇಣ ಭ್ರಮನಾಶಃ ಕೋ ದೋಷ ಇತ್ಯತ ಆಹ–ವಿಪರೀತೇತಿ॥೪೮೧॥

**ವಿವರಣೆ** - ನಿನ್ನ ಭ್ರಾಂತಿ ಎಂದರೆ ಅಜ್ಞಾನವು ಜ್ಞಾನನಾಶ್ಯ ಎಂಬ ಭ್ರಾಂತಿ. ಮುದ್ಗರದಿಂದ ಅವಿದ್ಯೋಪಾದಾನಕವಾದ ಘಟವು ನಾಶವಾದರೆ ಉಪಾದಾನವಾದ ಅವಿದ್ಯೆಯ ನಾಶವನ್ನೂ ಒಪ್ಪಬೇಕಾಗುವುದರಿಂದ ಬಾಧವೇ ಇಲ್ಲದೆ ಮುದ್ಗರವೇ ಘಟಭ್ರಮವನ್ನು ವಿನಾಶಮಾಡುವುದಾದರೆ ಬಾಧವಿಲ್ಲದ ಕಾರಣ ಘಟಾದಿಗಳು ಅಬಾಧ್ಯವಾದ್ದರಿಂದ ಸತ್ಯವೆಂದು ಸಿದ್ಧವಾಗುತ್ತದೆ. ಮತ್ತು ಜ್ಞಾನದಿಂದಲೇ ಅಜ್ಞಾನನಾಶವೆಂಬ ಪರಮತವೂ ನಿರಾಕೃತವಾಗುತ್ತದೆ.

ಅಜ್ಞಾನೇ ಜ್ಞಾನನಾಶ್ಯತ್ವಭ್ರಮಂ ಚ ತವ ಮುದ್ಗರಃ ।
ಮೋಚಯಾಮಾಸ ತದ್ವಾದೀ ಮುದ್ಗರಸ್ತತ್ವವಾದಿನಾಂ ॥ ೪೮೨ ॥

**ಅರ್ಥ–** ತವ= ನಿನ್ನ, ಮುದ್ಗರಃ= ದೊಣ್ಣೆಯು, ಅಜ್ಞಾನೇ= ಅಜ್ಞಾನದಲ್ಲಿ, ಜ್ಞಾನಾನಾಶ್ಯತ್ವ ಭ್ರಮಂ ಚ= ಜ್ಞಾನದಿಂದ ನಾಶ್ಯವೆಂಬ ಭ್ರಮವನ್ನೂ ಕೂಡ, ಮೋಚಯಾಮಾಸ= ಬಿಡಿಸಿತು, ತದ್= ಆದ್ದರಿಂದ, ತತ್ತ್ವವಾದಿನಾಂ= ತತ್ತ್ವವಾದಿಗಳ, ಮುದ್ಗರಃ ಚ= ದೊಣ್ಣೆಯೂ ಕೂಡ, ವಾದೀ= ವಾದಿಯಾಗಿದೆ.

**ಅನುವಾದ** - ನಿನ್ನ ಮುದ್ಗರವೇ ಅಜ್ಞಾನವು ಜ್ಞಾನನಾಶ್ಯವೆಂಬ ಭ್ರಮವನ್ನು ನಿರಾಕರಣೆಮಾಡಿತು. ಆದ್ದರಿಂದ ತತ್ತ್ವವಾದಿಗಳ ಮುದ್ಗರವೂ ಸಹ ವಾದಿಯೇ ಸರಿ. (ಮುದ್ಗರವೂ ತತ್ವವಾದಿಗಳ ವಾದಿಯೇ ಆಗಿದೆ).

**ಭಾವವಿಲಾಸಿನೀ–** ತವಾಜ್ಞಾನೇ ಜ್ಞಾನನಾಶ್ಯತ್ವಭ್ರಮಮಿತಿ ಸಂಬಂಧಃ । ಮುದ್ಗರೇಣಾ-ಜ್ಞಾನೋಪಾದಾನಕಘಟನಾಶೇ ಉಪಾದಾನಭೂತಾಜ್ಞಾನನಾಶಸ್ಯಾಪ್ಯಾವಶ್ಯಕತ್ವಾದಿತಿ ಭಾವಃ । ತತ್ ತಸ್ಮಾತ್ ಬಾಧಂ ವಿನಾ ಘಟಭ್ರಮಂ ಮೋಚಯತಾ ಮುದ್ಗರೇಣ ಘಟಾದಾವಬಾಧ್ಯತ್ವ-ರೂಪಸತ್ಯತ್ವಸಾಧನಾತ್ ಜ್ಞಾನೇನೈವಾಜ್ಞಾನನಾಶ ಇತಿ ಪರಮತದೂಷಣಾಚ್ಚೇತ್ಯರ್ಥಃ ॥೪೮೨॥

ನಷ್ಟಸ್ಯಾಪಿ ಪುನರ್ಜ್ಞಾನೇನಾಪಿ ನಾಶೋ ಯದೀಷ್ಯತೇ ।
ತದಾ ನಾಶಸ್ಯ ನಾಶೇನ ಜಗದುನ್ಮಜ್ಜನಂ ಭವೇತ್ ॥ ೪೮೩ ॥

**ಅರ್ಥ–** ನಷ್ಟಸ್ಯ ಅಪಿ= ಮುದ್ಗರ ಪ್ರಹಾರದಿಂದ ನಾಶಹೊಂದಿದ್ದರೂ, ಘಟಸ್ಯ= ಗಡಿಗೆಗೆ, ಜ್ಞಾನೇನ ಅಪಿ= ಜ್ಞಾನದಿಂದಲೂ, ಪುನಃ= ಮತ್ತೊಮ್ಮೆ, ನಾಶಃ= ನಾಶವು, ಯದಿ= ಒಂದು ಪಕ್ಷದಲ್ಲಿ, ಇಷ್ಯತೇ= ಅಂಗೀಕರಿಸಲ್ಪಟ್ಟರೆ, ತದಾ= ಆ ಪಕ್ಷದಲ್ಲಿ, ನಾಶಸ್ಯ= ಜಗತ್ತಿನ ನಾಶಕ್ಕೆ, ನಾಶೇನ= ನಾಶವಾಗುವುದರಿಂದ, ಜಗತ್= ಪ್ರಪಂಚದ, ಉನ್ಮಜ್ಜನಂ= ಪುನಃ ಹುಟ್ಟುವಿಕೆಯು, ಭವೇತ್= ಆಗಬೇಕಾದೀತು.

**ಭಾವವಿಲಾಸಿನೀ–** ಪ್ರಯೋಜನಾಭಾವಮೇವ ದೃಷ್ಟಾಂತಮುಖೇನ ದರ್ಶಯತಿ ॥ **ಕಿಂಕಾರ್ವಿತಿ**॥ ತವಮತೇ । ಇದಮಪ್ಯಭಿನವಂ ಮೂಲಶೋಧನಮ್ ॥ ೪೭೯ ॥

ಮುದ್ಗರಸ್ಯ ಪ್ರಹಾರೇಣ ಭ್ರಮಂ ಮುಂಚತಿ ನಾನ್ಯಥಾ ।
ಅಹೋ ದುರ್ಜನಸಂಗತ್ಯಾ ದೌರ್ಜನ್ಯಂ ಬ್ರಹ್ಮಣೋऽಪ್ಯಭೂತ್ ॥೪೮೦॥

**ಅರ್ಥ** – ಬ್ರಹ್ಮ= ಪರಬ್ರಹ್ಮನು ಮುದ್ಗರಸ್ಯ= ದೊಣ್ಣೆಯ, ಪ್ರಹಾರೇಣ= ಏಟಿನಿಂದ, ಭ್ರಮಂ= ಘಟಭ್ರಮವನ್ನು, ಮುಂಚತಿ= ಕಳೆದುಕೊಳ್ಳುತ್ತಾನೆ; ಅನ್ಯಥಾ= ಬೇರೆ ಯಾವ ಮಾರ್ಗದಿಂದಲೂ, ನ= ಅವನು ಭ್ರಮವನ್ನು ಕಳೆದುಕೊಳ್ಳುವುದಿಲ್ಲ, ದುರ್ಜನ ಸಂಗತ್ಯಾ= ಮೂರ್ಖರಾದ ಅದ್ವೈತಿಗಳ ಸಹವಾಸದಿಂದ, ಬ್ರಹ್ಮಣಃ ಅಪಿ= ಬ್ರಹ್ಮನಿಗೂ ಕೂಡ, ದೌರ್ಜನ್ಯಂ= ಮೂರ್ಖತ್ವವು, ಅಭೂತ್= ಬಂದೊದಗಿತು.

**ಅನುವಾದ** - ಘಟಕ್ಕೆ ಮುದ್ಗರಪ್ರಹಾರವಾದಾಗ ಮಾತ್ರ ಘಟಭ್ರಮವು ನಾಶವಾಗುತ್ತದೆ. ನಿನ್ನ ಬ್ರಹ್ಮನು ಭ್ರಮಮುಕ್ತನಾಗುತ್ತಾನೆ. ಆಶ್ಚರ್ಯ. ದುರ್ಜನರ ಸಹವಾಸದಿಂದ ಬ್ರಹ್ಮನಿಗೂ ದೌರ್ಜನ್ಯವುಂಟಾಯಿತು.

**ಭಾವವಿಲಾಸಿನೀ–** ಪರಪ್ರಕ್ರಿಯಾಮುಪಹಸನ್ನಗ್ರಮಪಿ ಶೋಧಯತಿ ॥ **ಮುದ್ಗರಸ್ಯೇತಿ** ॥ ಬ್ರಹ್ಮಣೋಭ್ರಮೇ ಸತಿ ಘಟನಾಶಾಯೋಗಾತ್ ಮುದ್ಗರಪ್ರಹಾರೇ ಚ ಘಟನಾಶದರ್ಶನಾತ್ ಬ್ರಹ್ಮಾಪಿ ಭ್ರಮಂ ಮುಂಚತೀತ್ಯುಕ್ತಮ್ ॥ ೪೮೦ ॥

**ವಿವರಣೆ** - ಅಜ್ಞಾನವೆಂಬ ದುರ್ಜನನ ಸಹವಾಸದಿಂದ ಬ್ರಹ್ಮನಿಗೂ ಭ್ರಮವೆಂಬ ದೌರ್ಜನ್ಯವುಂಟಾಯಿತು. ದೊಣ್ಣೆಯಿಂದ ಘಟವನ್ನು ಒಡೆದರೆ ಘಟವು ಪ್ರಕಾಶಿಸುವುದಿಲ್ಲವಾದ ಕಾರಣ ಬ್ರಹ್ಮನಿಗೆ ಘಟಭ್ರಮನಿವೃತ್ತಿಯಾಯಿತು ಎಂದು ಪರಿಹಾಸ.

ವಿಪರೀತಪ್ರಮಾಬಾಧ್ಯೋ ಭ್ರಮಃ ಸರ್ವತ್ರ ದೃಶ್ಯತೇ ।
ಮುದ್ಗರೇಣ ಭ್ರಮೋಚ್ಛೇದಸ್ತ್ವದ್ಭ್ರಮಸ್ಯಾನುಮಾಪಕಃ ॥ ೪೮೧ ॥

**ಅರ್ಥ** – ಸರ್ವತ್ರ= ಎಲ್ಲ ಕಡೆ, ಭ್ರಮಃ= ಅಯಥಾರ್ಥಜ್ಞಾನವು, ವಿಪರೀತ ಪ್ರಮಾಬಾಧ್ಯಃ= ವಿರುದ್ಧವಾದ ಯಥಾರ್ಥಜ್ಞಾನದಿಂದ ಬಾಧ್ಯವಾಗಿರುವುದು, ದೃಶ್ಯತೇ= ಕಾಣಲ್ಪಡುವುದು. ಮುದ್ಗರೇಣ= ದೊಣ್ಣೆಯಿಂದ, ಭ್ರಮೋಚ್ಛೇದಃ= ಭ್ರಮನಿವೃತ್ತಿಯು, ತ್ವದ್ಭ್ರಮಸ್ಯ= ನಿನ್ನ ಭ್ರಮಕ್ಕೆ, ಅನುಮಾಪಕಃ= ಅನುಮಾಪಕವಾಗಿದೆ.

**ಅನುವಾದ** - ಎಲ್ಲಾ ಕಡೆಯಲ್ಲಿಯೂ ಭ್ರಮವು ವಿರುದ್ಧವಾದ ಪ್ರಮೆಯಿಂದ ನಾಶ ಹೊಂದುತ್ತದೆ. ದೊಣ್ಣೆಯ ಏಟಿನಿಂದ ಭ್ರಮವು ನಿವೃತ್ತವಾಗುತ್ತದೆಂದು ಒಪ್ಪಿದರೆ ನಿನ್ನ ಭ್ರಾಂತಿಯೇ ಅನುಮಿತವಾಗುತ್ತದೆ.

**ಭಾವವಿಲಾಸಿನೀ**– ಅಸ್ತುಮುದ್ಗರೇಣ ಭ್ರಮನಾಶಃ ಕೋ ದೋಷ ಇತ್ಯತ ಆಹ–ವಿಪರೀತೇತಿ॥೪೮೧॥

**ವಿವರಣೆ** - ನಿನ್ನ ಭ್ರಾಂತಿ ಎಂದರೆ ಅಜ್ಞಾನವು ಜ್ಞಾನನಾಶ್ಯ ಎಂಬ ಭ್ರಾಂತಿ. ಮುದ್ಗರದಿಂದ ಅವಿದ್ಯೋಪಾದಾನಕವಾದ ಘಟವು ನಾಶವಾದರೆ ಉಪಾದಾನವಾದ ಅವಿದ್ಯೆಯ ನಾಶವನ್ನೂ ಒಪ್ಪಬೇಕಾಗುವುದರಿಂದ ಬಾಧವೇ ಇಲ್ಲದೆ ಮುದ್ಗರವೇ ಘಟಭ್ರಮವನ್ನು ವಿನಾಶಮಾಡುವುದಾದರೆ ಬಾಧವಿಲ್ಲದ ಕಾರಣ ಘಟಾದಿಗಳು ಅಬಾಧ್ಯವಾದ್ದರಿಂದ ಸತ್ಯವೆಂದು ಸಿದ್ಧವಾಗುತ್ತದೆ. ಮತ್ತು ಜ್ಞಾನದಿಂದಲೇ ಅಜ್ಞಾನನಾಶವೆಂಬ ಪರಮತವೂ ನಿರಾಕೃತವಾಗುತ್ತದೆ.

ಅಜ್ಞಾನೇ ಜ್ಞಾನನಾಶ್ಯತ್ವಭ್ರಮಂ ಚ ತವ ಮುದ್ಗರಃ ।
ಮೋಚಯಾಮಾಸ ತದ್ವಾದೀ ಮುದ್ಗರಸ್ತತ್ವವಾದಿನಾಂ ॥ ೪೮೨ ॥

**ಅರ್ಥ**– ತವ= ನಿನ್ನ, ಮುದ್ಗರಃ= ದೊಣ್ಣೆಯು, ಅಜ್ಞಾನೇ= ಅಜ್ಞಾನದಲ್ಲಿ, ಜ್ಞಾನಾನಾಶ್ಯತ್ವ ಭ್ರಮಂ ಚ= ಜ್ಞಾನದಿಂದ ನಾಶ್ಯವೆಂಬ ಭ್ರಮವನ್ನೂ ಕೂಡ, ಮೋಚಯಾಮಾಸ= ಬಿಡಿಸಿತು, ತದ್= ಆದ್ದರಿಂದ, ತತ್ತ್ವವಾದಿನಾಂ= ತತ್ತ್ವವಾದಿಗಳ, ಮುದ್ಗರಃ ಚ= ದೊಣ್ಣೆಯೂ ಕೂಡ, ವಾದೀ= ವಾದಿಯಾಗಿದೆ.

**ಅನುವಾದ** - ನಿನ್ನ ಮುದ್ಗರವೇ ಅಜ್ಞಾನವು ಜ್ಞಾನನಾಶ್ಯವೆಂಬ ಭ್ರಮವನ್ನು ನಿರಾಕರಣೆಮಾಡಿತು. ಆದ್ದರಿಂದ ತತ್ತ್ವವಾದಿಗಳ ಮುದ್ಗರವೂ ಸಹ ವಾದಿಯೇ ಸರಿ. (ಮುದ್ಗರವೂ ತತ್ವವಾದಿಗಳ ವಾದಿಯೇ ಆಗಿದೆ).

**ಭಾವವಿಲಾಸಿನೀ**– ತವಾಜ್ಞಾನೇ ಜ್ಞಾನನಾಶ್ಯತ್ವಭ್ರಮಮಿತಿ ಸಂಬಂಧಃ । ಮುದ್ಗರೇಣಾಜ್ಞಾನೋಪಾದಾನಕಘಟನಾಶೇ ಉಪಾದಾನಭೂತಾಜ್ಞಾನನಾಶಸ್ಯಾಪ್ಯಾವಶ್ಯಕತ್ವಾದಿತಿ ಭಾವಃ । ತತ್ ತಸ್ಮಾತ್ ಬಾಧಂ ವಿನಾ ಘಟಭ್ರಮಂ ಮೋಚಯತಾ ಮುದ್ಗರೇಣ ಘಟಾದಾವಬಾಧ್ಯತ್ವರೂಪಸತ್ಯತ್ವಸಾಧನಾತ್ ಜ್ಞಾನೇನೈವಾಜ್ಞಾನನಾಶ ಇತಿ ಪರಮತದೂಷಣಾಚ್ಚೇತ್ಯರ್ಥಃ ॥೪೮೨॥

ನಷ್ಟಸ್ಯಾಪಿ ಪುನರ್ಜ್ಞಾನೇನಾಪಿ ನಾಶೋ ಯದೀಷ್ಯತೇ ।
ತದಾ ನಾಶಸ್ಯ ನಾಶೇನ ಜಗದುನ್ಮಜ್ಜನಂ ಭವೇತ್ ॥ ೪೮೩ ॥

**ಅರ್ಥ**–ನಷ್ಟಸ್ಯ ಅಪಿ= ಮುದ್ಗರ ಪ್ರಹಾರದಿಂದ ನಾಶಹೊಂದಿದ್ದರೂ, ಘಟಸ್ಯ= ಗಡಿಗೆಗೆ, ಜ್ಞಾನೇನ ಅಪಿ= ಜ್ಞಾನದಿಂದಲೂ, ಪುನಃ= ಮತ್ತೊಮ್ಮೆ, ನಾಶಃ= ನಾಶವು, ಯದಿ= ಒಂದು ಪಕ್ಷದಲ್ಲಿ, ಇಷ್ಯತೇ= ಅಂಗೀಕರಿಸಲ್ಪಟ್ಟರೆ, ತದಾ= ಆ ಪಕ್ಷದಲ್ಲಿ, ನಾಶಸ್ಯ= ಜಗತ್ತಿನ ನಾಶಕ್ಕೆ, ನಾಶೇನ= ನಾಶವಾಗುವುದರಿಂದ, ಜಗತ್= ಪ್ರಪಂಚದ, ಉನ್ಮಜ್ಜನಂ= ಪುನಃ ಹುಟ್ಟುವಿಕೆಯು, ಭವೇತ್= ಆಗಬೇಕಾದೀತು.

**ಅನುವಾದ -** ಮುದ್ಗರನಾಶದಿಂದ ಮೊದಲು ನಾಶವಾದ ಘಟಕ್ಕೆ ಪುನಃ ಜ್ಞಾನದಿಂದ ನಾಶವನ್ನು ಒಪ್ಪಿದರೆ ನಾಶಕ್ಕೆ ನಾಶವಿದೆ ಎಂದಾಯಿತು. ನಾಶಕ್ಕೆ ನಾಶವಿರುವುದಾದರೆ ಮುಕ್ತಿಯಲ್ಲಿ ಜಗನ್ನಾಶವು ನಾಶಹೊಂದುವುದರಿಂದ ಪುನಃ ಜಗತ್ತು ಇರಲಿ ಎಂಬ ಆಪತ್ತಿಯು ಬರುತ್ತದೆ.

**ಭಾವವಿಲಾಸಿನೀ–** ಬಾಧಾಭಾವೇ ಯುಕ್ತ್ಯಂತರಂ ಚಾಹ – **ನಷ್ಟಸ್ಯೇತಿ ॥** ಇಷ್ಯತೇ ಮುಕ್ತಿ-ಕಾಲೇ॥೪೮೩॥

**ದಗ್ಧೇ ಪಟೇ ಕಾರಣೇನ ಸಹ ಕಾರ್ಯಂ ವಿನಶ್ಯತಿ ।**
**ಏವಂ ನಿಶ್ಶೇಷನಷ್ಟಸ್ಯ ಪುನರ್ನಾಶೋऽಷ್ಟಮೋ ರಸಃ ॥ ೪೮೪ ॥**

**ಅರ್ಥ –** ಪಟೇ= ಬಟ್ಟೆಯು, ದಗ್ಧೇ= ಸುಡಲ್ಪಟ್ಟಾಗ, ಕಾರಣೇನ ಸಹ= ಕಾರಣವಾದ ತಂತುಗಳೊಂದಿಗೆ, ಕಾರ್ಯಂ ಅಪಿ= ಕಾರ್ಯವಾದ ಬಟ್ಟೆಯೂ, ವಿನಶ್ಯತಿ= ನಾಶ ಹೊಂದುತ್ತದೆ, ಏವಂ= ಈ ರೀತಿಯಾಗಿ, ನಿಃಶೇಷನಷ್ಟಸ್ಯ= ಪೂರ್ಣವಾಗಿ ನಾಶ ಹೊಂದಿದ ವಸ್ತುವಿಗೆ, ಪುನಃ= ಮತ್ತೊಮ್ಮೆ, ನಾಶಃ= ನಾಶವು, ಅಷ್ಟಮಃ= ಎಂಟನೆಯ, ರಸಃ= ರಸವಾಗಿದೆ (ರಸದಂತೆ ಅಸಂಭಾವಿತವಾಗಿದೆ).

**ಅನುವಾದ -** ಬಟ್ಟೆಯನ್ನು ಸುಟ್ಟರೆ ಅದಕ್ಕೆ ಕಾರಣವಾದ ತಂತುಗಳೂ ಸುಡುತ್ತವೆ. ಆದ್ದರಿಂದ ನಿಶ್ಶೇಷವಾಗಿ ನಾಶಹೊಂದಿದ ವಸ್ತುವಿಗೆ ಪುನಃ ನಾಶವನ್ನು ಕಲ್ಪಿಸುವುದು ಎಂಟನೆಯ ರಸವನ್ನು ಅಂಗೀಕಾರಮಾಡಿದಂತೆ.

**ಭಾವವಿಲಾಸಿನೀ–** ನಿಃಶೇಷನಷ್ಟಸ್ಯ ಕಾರಣಶೇಷಂ ವಿನಾ ನಷ್ಟಸ್ಯ ॥ ೪೮೪ ॥

**ಅತೋ ಜ್ಞಾನಾವಿನಾಶ್ಯತ್ವಾತ್ ಸತ್ಯಾ ಘಟಪಟಾದಯಃ ।**
**ಸತ್ಯತ್ವಾದೇವ ನಾರೋಪ್ಯಾಃ ಸರ್ವೇ ಬ್ರಹ್ಮವದೇವ ಹಿ ॥ ೪೮೫ ॥**

**ಅರ್ಥ –** ಅತಃ= ಆದ್ದರಿಂದ, ಜ್ಞಾನಾವಿನಾಶ್ಯತ್ವಾತ್= ಜ್ಞಾನದಿಂದ ನಾಶ ಹೊಂದುವುದಿಲ್ಲವಾದ್ದರಿಂದ, ಘಟಪಟಾದಯಃ= ಘಟಪಟ ಮೊದಲಾದ ಪ್ರಪಂಚದ ವಸ್ತುಗಳು, ಸತ್ಯಾಃ= ಯಥಾರ್ಥಗಳಾಗಿವೆ. ತೇ= ಆ, ಸರ್ವೇ= ಎಲ್ಲವಸ್ತುಗಳೂ, ಸತ್ಯತ್ವಾತ್ ಏವ= ಸತ್ಯಗಳಾಗಿರುವುದರಿಂದಲೇ, ಬ್ರಹ್ಮವತ್ ಏವ= ಬ್ರಹ್ಮನಂತೆಯೇ, ನ ಆರೋಪ್ಯಾಃ ಹಿ= ಆರೋಪಿತಗಳಲ್ಲವಷ್ಟೆ?

**ಅನುವಾದ -** ಆದ್ದರಿಂದ ಘಟಾದಿಗಳು ಜ್ಞಾನನಾಶ್ಯವಲ್ಲವಾದ್ದರಿಂದ ಸತ್ಯವಾದುವು. ಸತ್ಯವಾದ ಕಾರಣದಿಂದಲೇ ಬ್ರಹ್ಮನು ಹೇಗೆ ಆರೋಪಿತನಲ್ಲವೋ ಹಾಗೆ ಘಟಾದಿಗಳೂ ಆರೋಪಿತವಲ್ಲ.

**ಭಾವವಿಲಾಸಿನೀ–** ಅತಃ ನಷ್ಟಸ್ಯ ಪುನರ್ನಾಶಾಯೋಗಾತ್ ॥ ೪೮೫ ॥

**ಯಾ ಚಕ್ಷುಃಪ್ರಭವಾ ವೃತ್ತೀ ರೂಪವದ್ಘಟಗೋಚರಾ ।**
**ನೀರೂಪಬ್ರಹ್ಮಗಾಜ್ಞಾನಂ ಸಾ ನಿವರ್ತಯತೇ ಕಥಂ ॥ ೪೮೬ ॥**

**ಅರ್ಥ** – ಚಕ್ಷುಃ ಪ್ರಭವಾ= ಚಕ್ಷುರಿಂದ್ರಿಯದಿಂದ ಹುಟ್ಟಿದ ರೂಪವದ್ ಘಟಗೋಚರಾ= ರೂಪವುಳ್ಳ ಘಟವನ್ನು ವಿಷಯೀಕರಿಸುವ, ಯಾ= ಯಾವ, ವೃತ್ತಿಃ= ವೃತ್ತಿಯಿದೆಯೋ, ಸಾ= ಅದು, ನೀರೂಪ= ರೂಪರಹಿತವಾದ, ಬ್ರಹ್ಮ= ಬ್ರಹ್ಮನಲ್ಲಿ, ಗ= ಇರುವ, ಅಜ್ಞಾನಂ= ಅಜ್ಞಾನವನ್ನು, ಕಥಂ= ಹೇಗೆ, ನಿವರ್ತಯತೇ= ನಾಶ ಮಾಡುತ್ತದೆ.

**ಅನುವಾದ** - ಚಕ್ಷುರಿಂದ್ರಿಯ ಜನ್ಯವಾದ ರೂಪವನ್ನುಳ್ಳ ಘಟದ ವೃತ್ತಿಯು ರೂಪರಹಿತವಾದ ಬ್ರಹ್ಮನನ್ನು ಆಶ್ರಯಿಸಿದ ಅಜ್ಞಾನವನ್ನು ಹೇಗೆ ನಿವೃತ್ತಿಮಾಡುತ್ತದೆ?

**ಭಾವವಿಲಾಸಿನೀ**– ಘಟವೃತ್ತ್ಯಾ ಘಟಾವಚ್ಛಿನ್ನಚೈತನ್ಯಾಜ್ಞಾನೇ ನಿವೃತ್ತೇ ತದಧಿಷ್ಠಾನಚೈತನ್ಯಮೇವ ಘಟಭ್ರಮಃ । ಏವಂ ಪಟಭ್ರಮಾದಯೋಽಪಿ । ಅತಃ ಸರ್ವಸ್ಯ ಚೈತನ್ಯಾರೋಪಿತತ್ವಸಾಮ್ಯೇಽಪಿ ಯದಜ್ಞಾನನಿವೃತ್ತೌ ಸತ್ಯಾಂ ಯಚ್ಚೈತನ್ಯಂ ಯದುಲ್ಲಿಖತಿ । ಸ ಏವ ತಸ್ಯ ವಿಷಯೋ ನಾಪರ ಇತಿ ಪರಕೀಯ ಪ್ರತಿಕರ್ಮವ್ಯವಸ್ಥಾ । ತತ್ರ ಘಟಾದಿಜ್ಞಾನೇನ ಚೈತನ್ಯಾಜ್ಞಾನನಿವೃತ್ತಿಸ್ತಾವದನುಪಪನ್ನೇತ್ಯಾಹ – **ಯಾ ಚಕ್ಷುರಿತಿ** ॥ ತದ್ವಿಷಯಕಜ್ಞಾನಸ್ಯೈವ ತದಜ್ಞಾನನಿವರ್ತಕತ್ವಾತ್ ಚಾಕ್ಷುಷಘಟವೃತ್ತೇಶ್ಚ ರೂಪವದ್ದ್ರವ್ಯವಿಷಯತ್ವನಿಯಮೇನ ನೀರೂಪಬ್ರಹ್ಮಾಖ್ಯದ್ರವ್ಯಗೋಚರತ್ವಾಯೋಗಾದಿತಿ ಭಾವಃ॥೪೮೬॥

**ವಿವರಣೆ** - ಘಟಾಕಾರವೃತ್ತಿಯಿಂದ ಘಟಾವಚ್ಛಿನ್ನಚೈತನ್ಯದ ಅಜ್ಞಾನವು ನಿವೃತ್ತವಾದರೆ ಘಟಾವಚ್ಛಿನ್ನಚೈತನ್ಯವೇ (ಇದೇ ಘಟಾಧಿಷ್ಠಾನಚೈತನ್ಯ) ಘಟಭ್ರಮ ಎನಿಸುತ್ತದೆ. ಹೀಗೆಯೇ ಘಟಭ್ರಮವೂ ಕೂಡ. ಆದ್ದರಿಂದ ಎಲ್ಲವೂ ಚೈತನ್ಯದಲ್ಲಿಯೇ ಆರೋಪಿತವಾಗಿದ್ದರೂ ಯಾವ ಅಜ್ಞಾನವು ನಿವೃತ್ತವಾದಾಗ ಯಾವ ಚೈತನ್ಯವು ಏನನ್ನು ಉಲ್ಲೇಖಿಸುತ್ತದೆಯೋ ಆ ವಸ್ತುವೇ ಆ ಚೈತನ್ಯಕ್ಕೆ ವಿಷಯ, ಇನ್ನೊಂದು ವಸ್ತುವಲ್ಲ ಎಂದು ಮಾಯಾವಾದಿಗಳು ಪ್ರತಿಕರ್ಮವ್ಯವಸ್ಥೆಯನ್ನು ಮಾಡುತ್ತಾರೆ. ಪ್ರತಿಕರ್ಮವ್ಯವಸ್ಥೆ ಎಂದರೆ ಈ ಜ್ಞಾನಕ್ಕೆ ಇದೇ ವಿಷಯ, ಇನ್ನೊಂದಲ್ಲ ಎಂಬ ವ್ಯವಸ್ಥೆ. ಇದಕ್ಕೆ ಶ್ರೀರಾಜರು ಘಟಾದಿವೃತ್ತಿಯಿಂದ ಚೈತನ್ಯಾಜ್ಞಾನನಿವೃತ್ತವಾಗುವುದಿಲ್ಲ ಎಂದು ಮೊದಲು ಹೇಳುತ್ತಾರೆ. ಏಕೆಂದರೆ ಚಕ್ಷುರಿಂದ್ರಿಯದಿಂದ ಘಟಾದಿಜ್ಞಾನವುಂಟಾಗುತ್ತದೆ. ಚಕ್ಷುರಿಂದ್ರಿಯವು ರೂಪವುಳ್ಳ ವಸ್ತುಗಳನ್ನು ಮಾತ್ರಗ್ರಹಿಸಲು ಸಾಧ್ಯ. ಹೀಗಿರುವಾಗ ರೂಪರಹಿತನಾದ ಬ್ರಹ್ಮನು ಚಕ್ಷುರಿಂದ್ರಿಯಕ್ಕೆ ಯೋಗ್ಯನೇ ಅಲ್ಲದ ಕಾರಣ ಅವನ ಜ್ಞಾನವೇ ಬರುವುದಿಲ್ಲ. ಹೀಗಿರುವಾಗ ಚೈತನ್ಯಾವರಕವಾದ ಅಜ್ಞಾನವು ನಿವೃತ್ತವಾಗುವುದು ಹೇಗೆ?

**ತಪ್ತವಾರಿಸ್ಥಿತಸ್ಯಾಗ್ನೇರಜ್ಞಾನಂ ಕಿಂ ತಯಾ ಗತಂ ।**
**ಘಟಸ್ಥರಸಗಂಧಾದೇರಜ್ಞಾನಂ ವಾ ತತೋ ಗತಂ ॥ ೪೮೭ ॥**

**ಅರ್ಥ–** ತಪ್ತ= ಕಾಯಿಸಲ್ಪಟ್ಟ, ವಾರಿ= ನೀರಿನಲ್ಲಿ, ಸ್ಥಿತಸ್ಯ= ಇರುವ, ಅಗ್ನೇಃ= ಅಗ್ನಿಯ, ಅಜ್ಞಾನಂ= ಅಜ್ಞಾನವು, ತಯಾ= ಆ ಚಾಕ್ಷುಷ ವೃತ್ತಿಯಿಂದ, ಗತಂ ಕಿಂ= ಹೋಯಿತೇನು? ಘಟಸ್ಥ= ಘಟದಲ್ಲಿರುವ, ರಸಗಂಧಾದೇಃ= ರಸಗಂಧ ಮೊದಲಾದ ಗುಣಗಳ ಅಜ್ಞಾನಂ ವಾ= ಅಜ್ಞಾನವಾದರೂ, ತತಃ= ಆ ಚಕ್ಷುರಿಂದ್ರಿಯದಿಂದ ಹುಟ್ಟಿದ ಘಟಜ್ಞಾನದಿಂದ, ಗತಂ ಕಿಂ= ನಾಶ ಹೊಂದಿತೇನು?

**ಅನುವಾದ** - ಬಿಸಿನೀರಿನ್ನು ನೋಡಿದ ಮಾತ್ರದಿಂದಲೇ ಬಿಸಿನೀರಿನಲ್ಲಿ ಅಭಿಭೂತವಾದ ಅಗ್ನಿಯ ಅಜ್ಞಾನವು ನಾಶವಾಗುತ್ತದೆಯೇ? ಅಥವಾ ಘಟಜ್ಞಾನದಿಂದ ಘಟದಲ್ಲಿರುವ ರಸಗಂಧಾದಿಗಳ ಅಜ್ಞಾನವು ನಾಶವಾಗುತ್ತದೆಯೇ?

**ಭಾವವಿಲಾಸಿನೀ–ಚಕ್ಷುಷೋ** ರೂಪಪುರಸ್ಕಾರೇಣೈವ ದ್ರವ್ಯಗ್ರಹಣಮನುಭಾವಯತಿ ॥ **ತಪ್ತೇತಿ॥** ತಯಾ ತಪ್ತವಾರಿವಿಷಯಕಚಾಕ್ಷುಷವೃತ್ತ್ಯಾ । ರೂಪಾಭಿಭವಮಾತ್ರೇಣಾಪಿ ಸ್ವಯೋಗ್ಯಂ ತೇಜೋಽಗೃಹ್ಣದತ ಏವ ತದಜ್ಞಾನಂ ಚಾನಿವರ್ತಯಚ್ಚಕ್ಷುಃ ಸರ್ವಥಾರೂಪರಹಿತಮ್ ಅತ ಏವ ಸ್ವಾಯೋಗ್ಯಂ ಚ ಬ್ರಹ್ಮಕಥಂ ಗೃಹ್ಣೀಯಾತ್ । ಕಥಂ ಚ ತದಜ್ಞಾನಂ ನಿವರ್ತಯೇದಿತಿ ಭಾವಃ । ಅಯೋಗ್ಯಸ್ಯಾಪಿ ಬ್ರಹ್ಮಣೋ ಯೋಗ್ಯಘಟಾವಚ್ಛಿನ್ನತ್ವಾತ್ ಚಕ್ಷುಷಾ ದರ್ಶನಮಿತಿ ಶಂಕಾಂ ಚ ಪೂರ್ವದೃಷ್ಟಾಂತೇನೈವ ದೂಷಿತಾಮಪಿ ದೃಷ್ಟಾಂತಾಂತರಮುಖೇನ ನಿರಾಕರೋತಿ ॥ **ಘಟಸ್ಥೇತಿ** ॥ ತತಃ ಚಕ್ಷುಷಃ ॥ ೪೮೭ ॥

**ವಿವರಣೆ** - ಬಿಸಿನೀರಿನಲ್ಲಿ ಅಗ್ನಿ ಇದೆ. ಆದ್ದರಿಂದಲೇ ಸುಡುತ್ತದೆ. ಅಗ್ನಿಯು ಕಣ್ಣಿಗೆ ಕಾಣುವುದಿಲ್ಲ. ಆದರೆ ಕೈಗೆ ಉಷ್ಣಸ್ಪರ್ಶವುಂಟಾಗುತ್ತದೆ. ಅಗ್ನಿಗೆ ಯದ್ಯಪಿ ರೂಪ, ಸ್ಪರ್ಶ, ಎರಡೂ ಇವೆ. ಬಿಸಿನೀರಿನಲ್ಲಿ ರೂಪವು ಅಭಿಭೂತವಾಗಿರುತ್ತದೆ. ಸ್ಪರ್ಶಮಾತ್ರ ಉದ್ಭೂತ ಎಂದು ಶಾಸ್ತ್ರದ ಪ್ರಕ್ರಿಯೆ ಮತ್ತು ಎಲ್ಲರ ಅನುಭವ. ರೂಪವಿದ್ದರೂ ಅಭಿಭೂತವಾಗಿದ್ದಾಗ ಅಗ್ನಿಯನ್ನು ವಿಷಯೀಕರಿಸದ ಚಕ್ಷುರಿಂದ್ರಿಯವು ಎಂದೂ ರೂಪವಿಲ್ಲದ ಬ್ರಹ್ಮನನ್ನು ಹೇಗೆ ವಿಷಯೀಕರಿಸುತ್ತದೆ? ಅದಾದ ಮೇಲಷ್ಟೇ ಆವರಕವಾದ ಅಜ್ಞಾನದ ನಾಶ. ಎರಡನೆಯ ದೃಷ್ಟಾಂತವನ್ನು ಮುಂದಿನ ಶ್ಲೋಕದಲ್ಲಿ ಗ್ರಂಥಕರ್ತೃಗಳೇ ವಿವರಿಸುತ್ತಾರೆ.

ಯೋಗ್ಯಾವಚ್ಛೇದಕಬಲಾದಯೋಗ್ಯಸ್ಯಾಪಿ ದರ್ಶನಂ ।
ಇತಿ ಪಕ್ಷೋಽಪಿ ನೈವ ಸ್ಯಾದ್ರಸಾದೌ ತದದರ್ಶನಾತ್ ॥ ೪೮೮ ॥

**ಅರ್ಥ** – ಯೋಗ್ಯಾವಚ್ಛೇದಕ ಬಲಾತ್= ಯೋಗ್ಯವಾದ ಅವಚ್ಛೇದಕ ವಸ್ತು ವಿನಸಾಮರ್ಥ್ಯದಿಂದ ಅಯೋಗ್ಯಸ್ಯ ಅಪಿ= ಅಯೋಗ್ಯ ವಸ್ತುವಿನದ್ದೂ ಕೂಡ, ದರ್ಶನಂ= ಜ್ಞಾನವು, ಭವತಿ= ಆಗುತ್ತದೆ, ಇತಿ= ಎಂಬ, ಪಕ್ಷಃ ಅಪಿ= ಅಭಿಪ್ರಾಯವೂ ಕೂಡ, ರಸಾದೌ= ರಸಗಂಧಗಳಲ್ಲಿ, ತದದರ್ಶನಾತ್= ಜ್ಞಾನವುಂಟಾಗುವುದು ಕಂಡಿಲ್ಲವಾದ್ದರಿಂದ, ನ ಸ್ಯಾತ್ ಏವ= ಯುಕ್ತವಾಗುವುದಿಲ್ಲ.

**ಅನುವಾದ -** ಅವಚ್ಛೇದಕವು ಯೋಗ್ಯವಾಗಿದ್ದರೆ ಚಕ್ಷುಸ್ಸಿಗೆ ಅಯೋಗ್ಯವಸ್ತುವಿನ ಚಾಕ್ಷುಷಜ್ಞಾನವೂ ಉಂಟಾಗುತ್ತದೆ ಎಂಬ ಪಕ್ಷವು ಸರಿಯಲ್ಲ. ಏಕೆಂದರೆ ಘಟವು ಯೋಗ್ಯವಾಗಿದ್ದರೂ ಘಟದ ಜ್ಞಾನ ಬಂದಾಗ ಚಕ್ಷುಸ್ಸಿಗೆ ಅಯೋಗ್ಯವಾದ ರಸಗಂಧಗಳ ಜ್ಞಾನವುಂಟಾಗುವುದಿಲ್ಲ. ಅವುಗಳ ಅಜ್ಞಾನವೂ ನಾಶವಾಗುವುದಿಲ್ಲ.

**ಭಾವವಿಲಾಸಿನೀ–ದೃಷ್ಟಾಂತಾಂತರಕಥನಸ್ಯ ಭಾವಂ ಸ್ವಯಮೇವ ದರ್ಶಯತಿ ॥ ಯೋಗ್ಯೇತಿ ॥೪೮೮॥**

**ವಿವರಣೆ -** ಬ್ರಹ್ಮನು ಚಕ್ಷುಸ್ಸಿಗೆ ಅಗೋಚರನಾದರೂ ಘಟವು ಯೋಗ್ಯವಾದ್ದರಿಂದ ಘಟಜ್ಞಾನವುಂಟಾಗುವಾಗ ಘಟದ ಸಂಬಂಧವಿರುವುದರಿಂದ ಬ್ರಹ್ಮಜ್ಞಾನವೂ ಉಂಟಾಗಿ ಬ್ರಹ್ಮಾಜ್ಞಾನವು ನಾಶವಾಗುತ್ತದೆಂದು ಹೇಳುವುದು ಸರಿಯಲ್ಲ. ಹಾಗಾಗುವುದಾದರೆ ಘಟಚಕ್ಷುಸ್ಸಿಗೆ ಯೋಗ್ಯವಾದ್ದರಿಂದ ರೂಪಜ್ಞಾನಬರುವಾಗ ರೂಪದ ಸಂಬಂಧವಿರುವುದರಿಂದ ರಸಗಂಧಗಳ ಜ್ಞಾನವೂ ಬಂದು ಅವುಗಳ ಅಜ್ಞಾನವೂ ನಿವೃತ್ತಿಯಾಗಬೇಕಾದೀತು ಎಂದು ಆಪತ್ತಿಯನ್ನು ಇಲ್ಲಿ ಹೇಳುತ್ತಾರೆ - ಮುಂದಿನ ಶ್ಲೋಕದಲ್ಲಿಯೂ ವಿವರಿಸುತ್ತಾರೆ.

**ಚಕ್ಷುರ್ಯೋಗ್ಯಘಟಸ್ಥೋಽಪಿ ಕಿಂ ರಸಶ್ಚಕ್ಷುಷೇಕ್ಷ್ಯತೇ ।**
**ಅತಃ ಸ್ವಾವಿಷಯಾಜ್ಞಾನಂ ಕಥಂ ವೃತ್ತ್ಯಾ ನಿವರ್ತ್ಯತಾಂ ॥ ೪೮೯ ॥**

**ಅರ್ಥ –** ಚಕ್ಷುರ್= ಚಕ್ಷುರಿಂದ್ರಿಯಕ್ಕೆ, ಯೋಗ್ಯ= ಗ್ರಾಹ್ಯವಾದ, ಘಟ= ಗಡಿಗೆಯಲ್ಲಿ, ಸ್ಥಃ ಅಪಿ= ಇರುವಂತಹದಾದರೂ, ರಸಃ= ರಸವು, ಚಕ್ಷುಷಾ= ಚಕ್ಷುರಿಂದ್ರಿಯದಿಂದ, ಈಕ್ಷ್ಯತೇ ಕಿಂ= ಕಾಣಲ್ಪಡುವುದೇನು? ಅತಃ= ಆದ್ದರಿಂದ, ಸ್ವ= ವೃತ್ತಿಗೆ, ಅವಿಷಯ= ವಿಷಯವಲ್ಲದ ವಸ್ತುವಿನ (ಬ್ರಹ್ಮನ) ಅಜ್ಞಾನಂ= ಅಜ್ಞಾನವು, ವೃತ್ತ್ಯಾ= ವೃತ್ತಿಯಿಂದ, ಕಥಂ= ಹೇಗೆ, ನಿವರ್ತ್ಯತಾಂ= ನಾಶಪಡಿಸಲ್ಪಡಲು ಸಾಧ್ಯ ?

**ಅನುವಾದ -** ಘಟವು ಯೋಗ್ಯವಾಗಿದ್ದರೂ ಚಕ್ಷುಸ್ಸಿನಿಂದ ಘಟಜ್ಞಾನವು ಬರುವಾಗ ರಸದ ಜ್ಞಾನವೂ ಬರುತ್ತದೆಯೇ? ಆದ್ದರಿಂದ ವೃತ್ತಿಗೆ ವಿಷಯವಲ್ಲದುದರ (ಬ್ರಹ್ಮನ) ಅಜ್ಞಾನವು ವೃತ್ತಿಯಿಂದ ಹೇಗೆ ನಿವೃತ್ತವಾಗುತ್ತದೆ?

**ಭಾವವಿಲಾಸಿನೀ– ಅತಃ ರಸಾದೌ ಚ ಚಕ್ಷುಷಾಽಜ್ಞಾನನಿವೃತ್ತ್ಯದರ್ಶನಾತ್ ॥ ೪೮೯ ॥**

ಏಕಸ್ಯ ಭ್ರಮನಾಶಃ ಸ್ಯಾದೇಕಾಜ್ಞಾನವಿನಾಶನೇ ।
ತತ್ರೈವ ಪುನರನ್ಯೇಷಾಂ ಸ್ವಸ್ವಾಜ್ಞಾನೈಃ ಭ್ರಮಃ ಕಿಲ ॥ ೪೯೦ ॥

ಏವಂ ಚ ತತ್ತದ್ಭ್ರಾಂತ್ಯರ್ಥಂ ಬಹ್ವಜ್ಞಾನಪ್ರಕಲ್ಪನೇ ।
ಅತಿಸ್ಥಿರತರೇ ವಸ್ತುನ್ಯನಂತಾಜ್ಞಾನಕಲ್ಪನಾ ॥ ೪೯೧ ॥

ಏಕಾಜ್ಞಾನವಿನಾಶನೇ= ಒಂದು ಅಜ್ಞಾನದ ನಾಶವಾದರೆ, ಏಕಸ್ಯ= ಒಬ್ಬನ, ಭ್ರಮನಾಶಃ= ಭ್ರಾಂತಿಯ ನಾಶವು, ಸ್ಯಾತ್= ಆದೀತು, ತತ್ರ ಏವ= ಅದೇ ವಸ್ತುವಿನ ವಿಷಯದಲ್ಲಿ, ಅನ್ಯೇಷಾಂ= ಬೇರೆಯವರಿಗೆ, ಸ್ವಾಸ್ವಾಜ್ಞಾನೈಃ= ತಮ್ಮ ತಮ್ಮ ಅಜ್ಞಾನಗಳಿಂದ, ಪುನಃ= ಮತ್ತೆ, ಭ್ರಮಃ= ಭ್ರಾಂತಿಯು, ಸ್ಯಾತ್ ಕಿಲ= ಆಗುತ್ತದೆಯಷ್ಟೆ? ಏವಂ ಚ= ಹೀಗೆ, ತತ್ತದ್ಭ್ರಾಂತ್ಯರ್ಥಂ= ಆಯಾ ವ್ಯಕ್ತಿಗಳ ಭ್ರಾಂತಿಗಳಿಗಾಗಿ, ಬಹು= ಅನೇಕ, ಅಜ್ಞಾನ ಪ್ರಕಲ್ಪನೇ= ಕಲ್ಪನವನ್ನು ಮಾಡಿದರೆ, ಅತಿಸ್ಥಿರತರೇ= ಬಹಳ ಕಾಲ ಉಳಿಯುವ, ವಸ್ತುನಿ= ವಸ್ತುವಿನಲ್ಲಿ, ಅನಂತಾಜ್ಞಾನ-ಕಲ್ಪನಾ= ಅನೇಕಾಜ್ಞಾನಗಳ ಕಲ್ಪನವು, ಕರ್ತವ್ಯಾ ಸ್ಯಾತ್= ಮಾಡಲ್ಪಡಬೇಕಾದೀತು.

**ಅನುವಾದ** - ಒಂದು ಅಜ್ಞಾನವು ನಾಶವಾದರೆ ಒಬ್ಬನಿಗೆ ಭ್ರಮೆಯು ನಾಶವಾದೀತು. ಅದೇ ವಿಷಯದಲ್ಲಿ ಬೇರೆಬೇರೆಯವರಿಗೆ ತಮ್ಮ ತಮ್ಮ ಅಜ್ಞಾನದಿಂದ ಪುನಃ ಭ್ರಮೆಯು ಉಂಟಾಗುವುದಷ್ಟೆ. ಹೀಗೆ ಅವರವರ ಆವರಣವನ್ನು ಒಂದೇ ವಸ್ತುವಿಗೆ ಕಲ್ಪನೆ ಮಾಡಿದರೆ ಬಹಳಕಾಲ ಉಳಿಯುವ ವಸ್ತುವಿನಲ್ಲಿ ಅನಂತಾಜ್ಞಾನಗಳನ್ನು ಕಲ್ಪನೆ ಮಾಡಬೇಕಾಗುತ್ತದೆ.

**ಭಾವವಿಲಾಸಿನೀ**– ಕಿಂಚ ಘಟಾದಾವವಿದ್ಯಾನಿವೃತ್ತಾವಾವಿದ್ಯಕಘಟಾದೀನಾಂ ಸಾಕ್ಷಾಚ್ಚಾವಿದ್ಯಕಭೂಧರಾದೀನಾಂ ಚ ಭ್ರಮ ಏವ ಭವತಿ ಕಿಲ । ಶುಕ್ತಿರಜತಾದಾವವಿದ್ಯಾ-ನಿವೃತ್ತಾವಾ ವಿದ್ಯಾಕರಜಾತಾದೀನಾಂ ಭ್ರಮನಿವೃತ್ತಿಃ ಸ್ಯಾದಿತಿ ಯತ್ಪರೋ ವಕ್ತಿ ತದಪಿ ಪೂರ್ವೋತ್ತರವಿರುದ್ಧಮಿತಿ ಸೂಚಯಿತುಂ ತಮಪಿ ಭ್ರಮಮತ್ರೈವ ಪ್ರಸಂಜಯನ್ನುಭಯತ್ರಾಪಿ ತತ್ತದ್ವ್ಯಕ್ತಿನಿವರ್ತ್ಯಾನಂತಾಜ್ಞಾನಪಕ್ಷೇ ದೋಷಮಾಹ – ಏಕಸ್ಯೇತಿ ॥ ಭ್ರಮನಾಶ ಇತ್ಯು-ಪಲಕ್ಷಣಮ್ । ಘಟಾದೌ ಭ್ರಮಾನುವೃತ್ತಿಶ್ಚ ಗ್ರಾಹ್ಯಾ । ಉತ್ತರತ್ರಾಪಿ ಭ್ರಮಪದಂ ಘಟಾದೌ ಭ್ರಮಾಭಾವಸ್ಯಾಪ್ಯುಪಲಕ್ಷಣಮ್ । ಭ್ರಾಂತ್ಯರ್ಥಂ ಭ್ರಾಂತ್ಯಭಾವಾರ್ಥಂ ಚ । ಕಲ್ಪನಾऽ-ಪೇಕ್ಷಿತಾ । ಅನ್ಯಥಾ ಏಕಾಜ್ಞಾನನಾಶೇऽಪಸರಣೇ ವಾ ಸರ್ವೇಷಾಮಪಿ ಭ್ರಮಪ್ರಸಂಗಾತ್ ಭ್ರಮನಿವೃತ್ತಿಪ್ರಸಂಗಾಚ್ಚ ॥ ೪೯೦ ॥

ನಚ ತತ್ರದ್ವೃತ್ತ್ಯಭಾವಾನ್ನ ಸರ್ವೇಷಾಂ ಭ್ರಮಾದಿಕಮಿತಿ ವಾಚ್ಯಮ್ । ಅವಿದ್ಯಾನಿವೃತ್ತ್ಯರ್ಥಮೇವ ಹಿ ವೃತ್ತ್ಯನುಸರಣಮ್ । ಅವಿದ್ಯಾಯಾಶ್ಚ ಏಕತ್ವೇ ಏಕಸ್ಯ ವೃತ್ತ್ಯಾ ಚ ತನ್ನಿವೃತ್ತೌ ಕಥಂ ನ ಸರ್ವೇಷಾಂ ಭ್ರಮಃ । ನಹಿ ದೇವದತ್ತಗೃಹದೀಪೇನಾಂಧಕಾರನಾಶೇ ತಸ್ಯೈವ ಘಟ-ಪ್ರತೀತಿರ್ನಾನ್ಯಸ್ಯೇತ್ಯಸ್ತಿ । ನಚ ತತ್ತಚ್ಚಿತ್ತಾಮಭೇದಘಟನಾಯ ತತ್ತದ್ವೃತ್ತ್ಯುಪಯೋಗಃ । ಘಟನ-ಶಬ್ದಸ್ಯ ಸಂಪತ್ತ್ಯರ್ಥಕತ್ವೇऽಭೇದ ಸಂಪತ್ತೇರನಾದಿತ್ವೇನ ವೃತ್ತೇರನುಪಯೋಗಾತ್ । ಉಪಸ್ಥಿತ್ಯ-ರ್ಥತ್ವೇ ಘಟವೃತ್ತೇಶ್ಚಿತಶ್ಚಿದಂತರಾಭೇದಾವಿಷಯಕತ್ವೇನ ಘಟವ್ಯವಸಾಯಸ್ಯ ಪಟಂ ಪ್ರತೀವ ಜ್ಞಾನಸ್ಯ ಸ್ವಾವಿಷಯೇ ಉಪಸ್ಥಾಪಕತ್ವಸ್ಯೈವಾಯೋಗೇನ ಪುನವೃತ್ತೇರ್ವೈಯರ್ಥ್ಯಾತ್ । ಚಿದ್ರೂಪಚಿದಂತರಾಭೇದಬೋಧಸ್ಯಾಪ್ಯನಾದಿತ್ವೇನ ತದ್ದೇತುತಯಾಪಿವೃತ್ತೇರನುಪಯೋಗಾ-

ದಾವರಣ ನಿವರ್ತಕತಯೈವೋಪಯೋಗೋ ವಾಚ್ಯಃ। ಸ ಚಾಜ್ಞಾನೈಕತ್ವಪಕ್ಷೇ ಏಕವೃತ್ತ್ಯಾ ಜಾತ ಏವೇತಿ ಕಥಂ ನ ತದಧಿಷ್ಠಾನಚೈತನ್ಯಂ ಸರ್ವೇಷಾಂ ಭ್ರಮಃ। ಸೌಭರ್ಯಾದಿಯೋಗಿನಾಮೇಕ್ಯೈಕತ್ರ ಸ್ಥಿತಾನಾಂ ಬಹುದೂರಸ್ಥನಾನಾದೇಹಗಸ್ವಾಂಶೈರಭೇದಾನುಭವದರ್ಶನೇನ ವಿದ್ಯಮಾನಾಭೇದಾನುಭವಾಯ ತತ್ರ ತತ್ರ ಗಮನಸ್ಯಾನಪೇಕ್ಷಿತತ್ವಾಚ್ಚ ನವೃತ್ತೇರುಪಯೋಗಃ। ಸರ್ವಗತ ಜೀವಪಕ್ಷೇ ತು ನಿತರಾಮನುಪಯೋಗಃ ತಸ್ಮಾತ್ ತತ್ತದ್ವೃತ್ತಿನಿವರ್ತ್ಯಾನೇಕಾಜ್ಞಾನಪಕ್ಷ ಏವ ಪರೇಣಾದರಣೀಯಃ॥೯೧॥

**ವಿವರಣೆ** - ಘಟವು ಆವಿದ್ಯಕ. ಘಟಾವಚ್ಛಿನ್ನಚೈತನ್ಯಾವರಣವಾದ ಅಜ್ಞಾನವು ನಿವೃತ್ತವಾದರೆ ಘಟವು ಪ್ರಕಾಶಿಸುತ್ತದೆ. ಆ ಘಟಪ್ರಕಾಶವೂ ಭ್ರಮರೂಪವೇ. ಆದ್ದರಿಂದ ಅಲ್ಲಿ ಅವಿದ್ಯಾನಿವೃತ್ತಿಯ ನಂತರವೂ ಭ್ರಮೆಯು ಮುಂದುವರಿಯತ್ತದೆ. ಶುಕ್ತಿರಜತಾದಿ ಸ್ಥಳದಲ್ಲಿ ಅವಿದ್ಯೆಯು ನಿವೃತ್ತವಾಗಿ ಆವಿದ್ಯಕರಜತಭ್ರಮವು ನಿವೃತ್ತಿಯಾಗುತ್ತದೆ ಎಂದು ಪರರು ಹೇಳುತ್ತಾರೆ. ಅದೂ ಕೂಡ ಪೂರ್ವೋತ್ತರವಿರುದ್ಧವಾದ್ದರಿಂದ ಸರಿಯಲ್ಲ ಎಂದು ಹೇಳಲು ಎರಡು ಭ್ರಮಗಳನ್ನು ಪ್ರಸ್ತಾಪಿಸಿ ಒಂದೇ ವಸ್ತುವಿನಲ್ಲಿ ಬೇರೆ ಬೇರೆ ವೃತ್ತಿಗಳಿಂದ ನಿವರ್ತ್ಯವಾದ ಅನಂತ ಅಜ್ಞಾನಗಳಿವೆ ಎಂಬ ಪಕ್ಷದಲ್ಲಿ ಇಲ್ಲಿ ದೋಷವನ್ನು ಹೇಳುತ್ತಾರೆ. ಇಲ್ಲದಿದ್ದರೆ ಒಂದೇ ಒಂದು ಅಜ್ಞಾನವಿದೆ ಎಂಬ ಪಕ್ಷದಲ್ಲಿ ಘಟಾದಿಸ್ಥಳದಲ್ಲಿ ಆ ಅಜ್ಞಾನವು ನಾಶವಾದಾಗ ಎಲ್ಲರಿಗೂ ಘಟಪ್ರಕಾಶರೂಪವಾದ ಘಟಭ್ರಮವೂ, ಶುಕ್ತಿರಜತಸ್ಥಳದಲ್ಲಿ ಒಂದು ಅಜ್ಞಾನವು ನಾಶವಾದಾಗ ಇನ್ನೆಂದೂ ಯಾರಿಗೂ ರಜತ ಭ್ರಮವೂ ಬರಲಿಕ್ಕಿಲ್ಲವೆಂದೂ ಆಗುತ್ತದೆ. ಯಾರ ವೃತ್ತಿಯಿಂದ ಅಜ್ಞಾನವು ನಿವೃತ್ತಿಯಾಗುತ್ತದೆಯೋ ಅವನಿಗೆ ಮಾತ್ರ ಭ್ರಮ ಅಥವಾ ಭ್ರಮಾಭಾವ ಎಂದು ಹೇಳಲು ಬರುವುದಿಲ್ಲ, ಏಕೆಂದರೆ ಅವಿದ್ಯಾನಿವೃತ್ತಿಗೋಸ್ಕರವೇ ವೃತ್ತಿಯನ್ನು ಆಶ್ರಯಿಸಿರುವುದು. ಅವಿದ್ಯೆಯು ಒಂದೇ ಆದರೆ ಒಂದು ವೃತ್ತಿಯಂದ ಆ ಅವಿದ್ಯೆಯು ನಾಶವಾದ ಮೇಲೆ ಇನ್ನೊಬ್ಬರಿಗೆ ಹೇಗೆ ಭ್ರಮಾದಿಗಳು ಬರಲು ಸಾಧ್ಯ? ದೇವದತ್ತನ ದೀಪದಿಂದ ಅಂಧಕಾರ ನಾಶವಾದರೆ ಆ ಮನೆಯಲ್ಲಿರುವ ಘಟವು ದೇವದತ್ತನಿಗೆ ಮಾತ್ರ ಪ್ರಕಾಶಿಸುತ್ತದೆ, ಯಜ್ಞದತ್ತನಿಗೆ ಪ್ರಕಾಶಿಸುವುದಿಲ್ಲ ಎಂದು ಹೇಳಲು ಬರುವುದಿಲ್ಲವಷ್ಟೇ? ಜ್ಞಾತೃಚೈತನ್ಯಕ್ಕೂ ವಿಷಯಾವಚ್ಛಿನ್ನಚೈತನ್ಯಕ್ಕೂ ಅಭೇದವನ್ನು ಸಂಘಟಿಸುವುದೇ ವೃತ್ತಿಯ ಉಪಯೋಗ ಎಂದು ಹೇಳಲೂ ಬರುವುದಿಲ್ಲ, ಏಕೆಂದರೆ ಸಂಘಟನೆ ಎಂದರೇನು? ಅಭೇದದ ಸಂಪತ್ತಿಯೋ ಅಥವಾ ಅಭೇದದ ಉಪಸ್ಥಿತಿಯೋ? ಸಂಪತ್ತಿಯನ್ನು ಹೇಳಲು ಬರುವುದಿಲ್ಲ, ಏಕೆಂದರೆ ಅಭೇದದ ಸಂಪತ್ತಿಯು ಅನಾದಿಯಾದುದರಿಂದ ಈ ಕಲ್ಪದಲ್ಲಿ ವೃತ್ತಿಯ ಉಪಯೋಗವಿಲ್ಲವೆಂದಾಗುತ್ತದೆ. ಉಪಸ್ಥಿತಿ ಎಂಬ ಅರ್ಥವನ್ನೂ ಹೇಳಲು ಬರುವುದಿಲ್ಲ. ಏಕೆಂದರೆ ಈ ಪಕ್ಷದಲ್ಲಿ ಘಟವೃತ್ತಿಯು ಘಟಚೈತನ್ಯಕ್ಕೂ ಜ್ಞಾತೃಚೈತನ್ಯಕ್ಕೂ ಅಭೇದವನ್ನು

ವಿಷಯೀಕರಿಸಬೇಕಾಗುತ್ತದೆ. ಇದು ಅನುಭವವಿರುದ್ಧವಾಗುತ್ತದೆ. ಏಕೆಂದರೆ ಘಟವೃತ್ತಿಯು ಹೇಗೆ ಪಟವನ್ನು ವಿಷಯೀಕರಿಸುವುದಿಲ್ಲವೋ ಹಾಗೆ ಚೈತನ್ಯವನ್ನೂ ವಿಷಯೀಕರಿಸುವುದಿಲ್ಲ. ಆದ್ದರಿಂದ ಈ ಪಕ್ಷದಲ್ಲಿಯೂ ವೃತ್ತಿಯು ವ್ಯರ್ಥವೇ ಆಗುತ್ತದೆ. ಚಿದಂತರಾಭೇದಬೋಧವು ಬರುವುದೆಂದು ಒಪ್ಪಿದರೂ ಆ ಬೋಧವೂ ಚಿದ್ರೂಪ-ವಾಗಿರುವುದರಿಂದ ಅದೂ ಅನಾದಿಯೇ ಆಗಿರುವುದರಿಂದ ವೃತ್ತಿಯ ಉಪಯೋಗವಿಲ್ಲ ವೆಂದಾಗುತ್ತದೆ. ಆದ್ದರಿಂದ ಆವರಣನಿವೃತ್ತಿಯೇ ವೃತ್ತಿಯ ಪ್ರಯೋಜನ ಎಂದು ಹೇಳಬೇಕು. ತಥಾಚ ಒಂದು ವೃತ್ತಿಯಿಂದ ಆ ಆವರಣನಿವೃತ್ತಿಯಾದಾಗ ಸರ್ವರಿಗೂ ಭ್ರಮಾದಿಗಳು ಏಕೆ ಉಂಟಾಗುವುದಿಲ್ಲ? ಸೌಭರ್ಯಾದಿ ಋಷಿಗಳು ಒಂದೇ ಕಡೆಯಲ್ಲಿ ಇದ್ದರೂ ದೂರದೂರದಲ್ಲಿದ್ದ ಅವರ ಇತರ ಶರೀರಗಳಲ್ಲಿರುವ ಚೈತನ್ಯಾಂಶಗಳಿಗೆ ಅಭೇದಬೋಧವು ಬರುವಂತೆ ಮಾಡುತ್ತದೆ ಎಂದೂ ಹೇಳಲು ಬರುವುದಿಲ್ಲ. ಆದ್ದರಿಂದ ವೃತ್ತಿಗೆ ಸರ್ವಥಾಪ್ರಯೋಜನ ವಿಲ್ಲವೆಂದಾಯಿತು. ಏಕೆಂದರೆ ಈ ಕಲ್ಪದಲ್ಲಿ ವಿದ್ಯಮಾನ ಅಭೇದ ಬೋಧಕ್ಕಾಗಿ ಎಲ್ಲರೂ ಘಟದೇಶಕ್ಕೆ ಬರಬೇಕಾದ ಅವಶ್ಯಕತೆ ಇಲ್ಲ.

ಭಾವರೂಪಂ ಚ ತೇಽಜ್ಞಾನಂ ತೇನ ಸ್ಯಾದಣುರದ್ರಿವತ್ ॥ ೪೯೨ ॥

**ಅರ್ಥ –** ತೇ= ನಿನ್ನ ಅಭಿಪ್ರಾಯದಲ್ಲಿ ಭಾವರೂಪವಾದ, ಅಜ್ಞಾನಂ= ಅಜ್ಞಾನವು, ಭಾವರೂಪಂ= ಭಾವರೂಪವಾದದು, ತೇನ= ಆ ಕಾರಣದಿಂದ, ಅಣುಃ= ಪರಮಾಣವು, ಅದ್ರಿವತ್= ಪರ್ವತದಂತೆ, ಸ್ಯಾತ್= ಆದೀತು.

**ಅನುವಾದ -** ಅನೇಕ ಭಾವರೂಪಾಜ್ಞಾನಗಳನ್ನು ಒಪ್ಪಿದರೆ ಒಂದು ಪರಮಾಣುವು ಅನೇಕಾನೇಕ ಭಾವರೂಪವಾದ ಆವರಣಗಳಿಂದ ಕೂಡಿ ಬೆಟ್ಟದಂತಾಗ ಬೇಕಾಗುತ್ತದೆ.

**ಭಾವವಿಲಾಸಿನೀ– ಸೋಽಪ್ಯಯುಕ್ತ ಇತ್ಯಾಹ – ಭಾವರೂಪಮಿತಿ** ॥ ತೇನ ಭಾವರೂಪ-ನಿಬಿಡಾವಯವಾನಂತಾಜ್ಞಾನೈರಾವೃತತ್ವೇನ ॥ ೪೯೨ ॥

ಬಹಿಷ್ಠಂ ತದ್ಧಿ ಚೈತನ್ಯಂ ಜೀವಸ್ತ್ವಂತಃಸ್ಥಿತಃ ಸದಾ ।
ಜ್ಞಾತ್ರನ್ಯದ್ ವ್ಯವಹರ್ತಾಽನ್ಯಸ್ತಸ್ಮಾತ್ ಕಿಂ ಕೇನ ಸಂಗತಂ ॥ ೪೯೩ ॥

**ಅರ್ಥ–** ತತ್= ಆ, ಚೈತನ್ಯಂ= ವಿಷಯ ಚೈತನ್ಯವು, ಬಹಿಷ್ಠಂ= ಹೊರಗೆ ಇರುವಂಥದಾಗಿದೆ, ಜೀವಃ ತು= ಜೀವನಾದರೂ ಸದಾ= ಯಾವಾಗಲೂ, ಅಂತಃಸ್ಥಿತಃ= ಒಳಗೆ ಇರುವಂಥವನಾಗಿದ್ದಾನೆ, ಅತಃ= ಆದ್ದರಿಂದ, ಕಿಂ= ಯಾವುದು, ಕೇನ= ಯಾವುದರಿಂದ, ಸಂಗತಂ= ಸಂಗತವಾಗುತ್ತದೆ.

**ಅನುವಾದ -** ವಿಷಯಚೈತನ್ಯವು ಬಹಿಷ್ಠವಾಗಿದೆ. (ಹೊರಗೆ ಇದೆ). ವ್ಯವಹಾರ ಮಾಡುವ ಚೇತನವು ಶರೀರದೊಳಗಿದ್ದು ವ್ಯವಹರ್ತೃ ಎನಿಸಿತ್ತದೆ. ಯಾವನು

**ಜ್ಞಾತೃವೋ ಅವನೇ ವ್ಯವಹರ್ತೃ. ಜ್ಞಾತೃ ಒಂದು ಕಡೆ ಇನ್ನೊಂದು ಕಡೆ ವ್ಯವಹರ್ತೃಎಂದು ಹೇಳುವುದು ತುಂಬಾ ಅಸಂಗತವಾದುದು.**

**ವಿವರಣೆ -** ಅಧಿಷ್ಠಾನಚೈತನ್ಯವೇ ಘಟಪ್ರಕಾಶಕ ಎಂದು ಒಪ್ಪಿದರೆ ಈ ಶ್ಲೋಕದಲ್ಲಿ ಬೇರೆ ದೋಷವನ್ನು ಹೇಳುತ್ತಾರೆ. ಜೀವಚೈತನ್ಯವೇ ಸ್ವಚ್ಛವಾದ ಅಪರೋಕ್ಷವೃತ್ತಿಯಲ್ಲಿ ಪ್ರತಿಫಲಿತವಾಗಿ ಘಟದ ಸಮೀಪಕ್ಕೆ ಹೋಗಿ ಘಟಾಧಿಷ್ಠಾನಚೈತನ್ಯದಿಂದ ಜೊತೆಯಲ್ಲಿ ಏಕೀಭಾವವನ್ನು ಹೊಂದಿ ಘಟಾಧಿಷ್ಠಾನಚೈತನ್ಯದ ಅನುಭವವನ್ನೇ ತನ್ನ ಅನುಭವವನ್ನಾಗಿ ಮಾಡಿಕೊಳ್ಳುತ್ತದೆ ಎಂಬ ಪರರ ಪ್ರಕ್ರಿಯೆಯೂ ಸರಿಯಲ್ಲ. ಕಾಲವು ಕನ್ನಡಿಯಲ್ಲಿ ಹೇಗೆ ಪ್ರತಿಫಲಿತವಾಗುವುದಿಲ್ಲವೋ ಹಾಗೆ ರೂಪರಹಿತದ್ರವ್ಯವಾದ ಆತ್ಮನು ವೃತ್ತಿಯಲ್ಲಿ ಪ್ರತಿಫಲಿತನಾಗುವುದಿಲ್ಲ. ಅಲ್ಲದೆ ರೂಪವುಳ್ಳ ದರ್ಪಣವೇ ಪ್ರತಿಫಲನೋಪಾಧಿಯಾಗುತ್ತದೆ. ರೂಪರಹಿತವಾದ ವೃತ್ತಿಯು ಪ್ರತಿಫಲನೋಪಾಧಿಯೂ ಆಗವುದಿಲ್ಲ. ಇಲ್ಲದಿದ್ದರೆ ವೃತ್ತಿಗೆ ಅಭಿಮುಖವಾಗಿರುವ ಕಣ್ಣು, ಮೂಗು ಮೊದಲಾದುವುಗಳೂ ವೃತ್ತಿಯಲ್ಲಿ ಪ್ರತಿಫಲಿತವಾಗಲಿ ಎಂಬ ಆಪತ್ತಿಯು ಬರುತ್ತದೆ. ಅಲ್ಲದೆ ಜೀವನು ಶರೀರ, ಇಂದ್ರಿಯಗೋಲಕಗಳ ಒಳಗೆ ಅಡಗಿಕೊಂಡಿದ್ದಾನೆ, ಹೀಗೆ ಶರೀರಾದಿಗಳ ವ್ಯವಧಾನವುಳ್ಳ ಜೀವನು ವೃತ್ತಿಯಲ್ಲಿ ಹೇಗೆ ಪ್ರತಿಬಿಂಬಿತನಾಗುತ್ತಾನೆ? ಹಾಗಿಲ್ಲದಿದ್ದರೆ ಗೋಡೆಯ ವ್ಯವಧಾನವಿದ್ದರೂ ಘಟವು ದರ್ಪಣದಲ್ಲಿ ಪ್ರತಿಫಲಿತವಾಗಬೇಕಾದೀತು. ಚೈತನ್ಯಕ್ಕೆ ಮಹಾಪ್ರಕಾಶ ಇರುವುದರಿಂದ ವ್ಯವಧಾನವಿದ್ದರೂ ಪ್ರತಿಫಲನವಿದೆ ಎಂದೂ ಹೇಳಬಾರದು. ಮಹಾಪ್ರಕಾಶ ಇರುವ ಸೂರ್ಯನಿಗೆ ಮರ,ಬಳ್ಳಿ,ಎಲೆಗಳ ವ್ಯವಧಾನವಿರುವಾಗಲೂ ಜಲದಲ್ಲಿ ಸೂರ್ಯನ ಪ್ರತಿಫಲನವುಂಟಾಗಲಿ ಎಂಬ ಆಪತ್ತಿಯು ಬರುತ್ತದೆ. ಅಲ್ಲದೆ ವೃತ್ತಿಪ್ರತಿಫಲಿತಚೈತನ್ಯವು ವೃತ್ತಿವಿಶಿಷ್ಟಚೈತನ್ಯವೇ ಆಗುತ್ತದೆ. ಹಾಗೆಯೇ ಘಟಾಧಿಷ್ಠಾನಚೈತನ್ಯವು ಘಟವಿಶಿಷ್ಟವೇ ಆಗುತ್ತದೆ. ಆದ್ದರಿಂದ ವಿಶಿಷ್ಟಚೈತನ್ಯಗಳಿಗೆ ಐಕ್ಯವೂ ಎಂದೂ ಕೂಡುವುದಿಲ್ಲವಷ್ಟೇ? ಉಪಾಧಿಗೆ ಪ್ರತಿಬಿಂಬ ಪಕ್ಷಪಾತಿತ್ವಸ್ವಭಾವವಿರುವುದರಿಂದ ದರ್ಪಣವು ಹೇಗೆ ಬಿಂಬವಾದ ಮುಖದಲ್ಲಿ ತನ್ನ ಮಾಲಿನ್ಯವನ್ನುಂಟುಮಾಡುವುದಿಲ್ಲವೋ, ಹಾಗೆಯೇ ಪ್ರತಿಫಲಿತಚೈತನ್ಯವು ತನ್ನ ಕಾರ್ಯವಾದ ಘಟವ್ಯವಹಾರವನ್ನು ಬಿಂಬಚೈತನ್ಯದಲ್ಲಿ ಉಂಟುಮಾಡಲಾರದು.

**ಐಕ್ಯಾತ್ತೇನೈವ ದೃಷ್ಟೇಽರ್ಥೇ ಯದ್ಯಸ್ಯ ವ್ಯವಹರ್ತೃತಾ ।**
**ಯಜ್ಞದತ್ತೇನ ದೃಷ್ಟಾರ್ಥವ್ಯವಹಾರಂ ತಥೈವ ಹಿ ॥ ೪೯೪ ॥**

**ದೇವದತ್ತೋಽಪಿ ತದ್ದ್ರಾಷ್ಟ್ರಮಾತ್ರದರ್ಶೀ ಕರೋತ್ವಯಂ ।**
**ವ್ಯಾವಹಾರಿಕಭೇದಾದೇರೈಕ್ಯಸ್ಯ ಚ ಸಮತ್ವತಃ ॥ ೪೯೫ ॥**

**ಅರ್ಥ–** ಐಕ್ಯಾತ್= ಜೀವಚೈತನ್ಯ ಮತ್ತು ಅಧಿಷ್ಠಾನಚೈತನ್ಯಗಳಿಗೆ ಅಭೇದವಿರುವುದರಿಂದ, ತೇನ ಏವ= ಆ ಅಧಿಷ್ಠಾನ ಚೈತನ್ಯದಿಂದಲೇ, ದೃಷ್ಟೇ= ಕಾಣಲ್ಪಟ್ಟ, ಅರ್ಥೇ= ವಸ್ತುವಿನ

ವಿಷಯದಲ್ಲಿ, ಅಸ್ಯ= ಈ ಜೀವಚೈತನ್ಯಕ್ಕೆ, ಯದಿ= ಒಂದು ಪಕ್ಷದಲ್ಲಿ, ವ್ಯವಹರ್ತೃತಾ= ವ್ಯವಹರ್ತೃತ್ವವು, ತರ್ಹಿ= ಆ ಪಕ್ಷದಲ್ಲಿ,ಯಜ್ಞದತ್ತೇನ= ಯಜ್ಞದತ್ತನಿಂದ, ದೃಷ್ಟ= ನೋಡಲ್ಪಟ್ಟ, ಅರ್ಥ= ವಸ್ತುವಿನ, ವ್ಯವಹಾರಂ= ವ್ಯವಹಾರವನ್ನು, ವ್ಯಾವಹಾರಿಕ ಭೇದಾದೇಃ= ವ್ಯಾವಹಾರಿಕ ಭೇದ ಮೊದಲಾದವುಗಳ, ಚ= ಮತ್ತು, ಐಕ್ಯಸ್ಯ= ಅಭೇದದ, ಸಮತ್ವತಃ= ಸಮಾನತೆಯಿರುವುದರಿಂದ, ಅಯಂ= ಈ, ತತ್= ಆ ಯಜ್ಞದತ್ತನ, ಗಾತ್ರಮಾತ್ರ= ಮುಖಾದಿ ಶರೀರವನ್ನು ಮಾತ್ರ, ದರ್ಶೀ= ನೋಡಿದ, ದೇವದತ್ತಃ ಅಪಿ= ದೇವದತ್ತನೂ ಕೂಡ, ತಥಾ ಏವ= ಯಜ್ಞದತ್ತನಂತೆಯೇ, ಕರೋತು ಹಿ= ಮಾಡಲಿ.

**ಅನುವಾದ -** ಎರಡು ಚೈತನ್ಯಗಳಿಗೂ ಅಭೇದವಿರುವುದರಿಂದ ಜ್ಞಾತೃವೂ ಮತ್ತು ವ್ಯವಹರ್ತೃವೂ ಒಂದೇ ಎಂದು ಹೇಳುವುದಾದರೆ, ಯಜ್ಞದತ್ತನಿಂದ ದೃಷ್ಟವಾದ ವಿಷಯದಲ್ಲಿ ದೇವದತ್ತನು ವ್ಯವಹಾರವನ್ನು ಮಾಡಲಿ ಎಂಬ ಆಪತ್ತಿಬರುತ್ತದೆ. ಐಕ್ಯವೂ ಮತ್ತು ವ್ಯಾವಹಾರಿಕಭೇದವೂ ಎರಡುಕಡೆಗಳಲ್ಲಿಯೂ ಸಮಾನವಾಗಿದೆ.

**ಭಾವವಿಲಾಸಿನೀ—** ಅಧಿಷ್ಠಾನಚೈತನ್ಯಸ್ಯ ಘಟಪ್ರಕಾಶತ್ವೇ ದೋಷಾಂತರಂ ಚಾಹ —**ಬಹಿಷ್ಠಮಿತಿ ॥** ತದ್ ಘಟಾದ್ಯಧಿಷ್ಠಾನಚೈತನ್ಯಮ್ । ನಚ ವಾಚ್ಯಮ್ ಜೀವಚೈತನ್ಯಮೇವ ಸ್ವಷ್ಟಾಯಾಮಪರೋಕ್ಷ-ವೃತ್ತೌ ಪ್ರತಿಫಲಿತಂ ಸದ್ಘಟನಿಕಟಂ ಗತ್ವಾಽಧಿಷ್ಠಾನ ಚೈತನ್ಯೇನೈಕೀಭೂಯ ತದನುಭವಮೇವ ಸ್ವಾನುಭವೀಕರೋತಿ। ಅರೂಪದ್ರವ್ಯಸ್ಯಾತ್ಮನಃ ಕಾಲಸ್ಯ ದರ್ಪಣ ಇವ ಪ್ರತಿಫಲನ-ಸ್ಯೈವಾಯೋಗಾತ್ । ರೂಪವತಿ ದರ್ಪಣಾದೇವ ಪ್ರತಿಫಲನದರ್ಶನೇನ ಅರೂಪಾಯಾಶ್ಚ ವೃತ್ತೇಃ ಪ್ರತಿಫಲನೋಪಾಧಿತ್ವಾಯೋಗಾಚ್ಚ । ಅನ್ಯಥಾ ವೃತ್ತ್ಯಭಿಮುಖನಯನಾದೇರಪಿ ಪ್ರತಿಫಲನ ಪ್ರಸಂಗಾತ್। ಕಿಂಚ ಲಿಂಗದೇಹನಯನಗೋಲಕಾದಿನಾ ಮಧ್ಯೇ ಪ್ರತಿರುದ್ಧಸ್ಯಾತ್ಮನಃ ಕಥಂ ತತ್ರ ಪ್ರತಿಫಲನಮ್ । ನಹಿ ಕುಡ್ಯವ್ಯವಹಿತ ಮುಖಸ್ಯ ಬಹಿಷ್ಠದರ್ಪಣೇ ಪ್ರತಿಫಲನಂ ದೃಷ್ಟಮ್ । ನ ವಾ ಮಹಾಪ್ರಕಾಶಸ್ಯ ಸೂರ್ಯಸ್ಯ ತರುಪತ್ರಾದಿನಾ ಪ್ರತಿರುದ್ಧಸ್ಯ ಜಲೇ ಪ್ರತಿಫಲನಂ ದೃಷ್ಟಮ್ । ವೃತ್ತಿಪ್ರತಿಫಲಿತಚೈತನ್ಯಸ್ಯ ವೃತ್ತಿವಿಶಿಷ್ಟತಯಾ ಘಟಾಧಿಷ್ಠಾನ ಚೈತನ್ಯಸ್ಯ ಘಟವಿಶಿಷ್ಟತಯಾ ವಿಶಿಷ್ಟಯೋಸ್ತಯೋರೈಕ್ಯಾಯೋಗಾಚ್ಚ । ಉಪಾಧೇಃ ಪ್ರತಿಬಿಂಬ-ಪಕ್ಷಪಾತಿತ್ವೇನ ಪ್ರತಿಮುಖಗತಮಾಲಿನ್ಯಸ್ಯ ಮುಖ ಇವ ಪ್ರತಿಫಲಿತ ಚೈತನ್ಯಸ್ಯ ಬಿಂಬಭೂತಚೈತನ್ಯೇ ಸ್ವಕಾರ್ಯಾಸಮರ್ಪಕತ್ವಾಚ್ಚ । ಘಟಾಧಿಷ್ಠಾನ ಚೈತನ್ಯೇಽನಾರೋಪಿತವೃತ್ತೇರಸ್ತದಜ್ಞಾನ-ನಿವರ್ತಕತ್ವಾಯ ತ್ವಯಾಪಿ ಕಸ್ಮಿಂಶ್ಚಿತ್ ಸಂಬಂಧೇ ವಕ್ತವ್ಯೇ ತೇನೈವ ಸರ್ವಸಾಮಂಜಸ್ಯಾತ್ ಬಕಬಂಧಸ್ಯಾಸ್ಯ ನಿರ್ನಿಬಂಧನಾತ್ವಾಪಾತಾಚ್ಚ॥ ಪ್ರಬಲಂ ದೂಷಣಾಂತರಂ ಚಾಹ—**ಐಕ್ಯಾದಿತಿ॥** ತೇನ ಅಧಿಷ್ಠಾನಚೈತನ್ಯೇನ । ಅಸ್ಯ ಜೀವಸ್ಯ । ತದ್ಗಾತ್ರಮಾತ್ರದರ್ಶೀ ಅತ್ರ ಮಾತ್ರ-ಪದೇನ ತದನುಭೂತಸುಖದುಃಖಾದೇಸ್ತದ್ವಚನದ್ವಾರಾ ಶ್ರವಣಂ ವ್ಯವಚ್ಛಿದ್ಯತೇ ॥೪೯೩-೯೫॥

ಅವಚ್ಛೇದಕಭೇದಶ್ಚ ತತ್ರಾತ್ರಾಪಿ ಚ ಯತ್ಸಮಃ ।
ವೃತ್ತಿದ್ವಾರಾ ಬಹಿರ್ಯಾತ್ರಾ ತೈನ್ಯೈಕ್ಯಂ ಚಾಪಿ ಯತ್ಸಮಮ್ ॥ ೪೯೬ ॥

**ಅರ್ಥ–** ಯತ್= ಯಾವ ಕಾರಣದಿಂದ, ತತ್ರ= ಜೀವಚೈತನ್ಯ ಮತ್ತು ಅಧಿಷ್ಠಾನ ಚೈತನ್ಯಗಳ ಸ್ಥಳದಲ್ಲಿ, ಅಪಿ ಚ= ಹಾಗೂ, ಅತ್ರ= ಯಜ್ಞದತ್ತ ಮತ್ತು ದೇವದತ್ತರ ಸ್ಥಳದಲ್ಲಿ, ಅವಚ್ಛೇದಕ ಭೇದಃ ಚ= ಅವಚ್ಛೇದಕ ಭೇದವಾದರೂ, ಸಮಃ= ಸಮಾನವಾಗಿದೆಯೋ, ಅಪಿ ಚ= ಅದಲ್ಲದೇ, ಯತ್= ಯಾವ ಕಾರಣದಿಂದ, ವೃತ್ತಿದ್ವಾರಾ= ವೃತ್ತಿಯ ಮೂಲಕ ಬಹಿರ್ಯಾತ್ರಾ= ಹೊರಬರುವಿಕೆಯು, ತೇನ= ಅಧಿಷ್ಠಾನ ಚೈತನ್ಯದಿಂದ, ಐಕ್ಯಂ ಚ= ಅಭೇದವೂ ಕೂಡ, ಸಮಂ= ಸಮಾನವಾಗಿದೆಯೋ, ತತ್= ಆ ಕಾರಣದಿಂದ, ಯಜ್ಞದತ್ತನು ನೋಡಿದ ವಸ್ತುವಿನ ವಿಷಯದಲ್ಲಿ ವ್ಯವಹಾರವನ್ನು ದೇವದತ್ತನೂ ಮಾಡಲಿ.

**ಅನುವಾದ -** ಅವಚ್ಛೇದಕಭೇದವು ಎರಡು ಕಡೆಗಳಲ್ಲಿಯೂ ಸಮಾನವಾಗಿದೆ. ವೃತ್ತಿಯ ಮೂಲಕ ಬಹಿರ್ಗತವಾದ ಚೈತನ್ಯದಿಂದ ಐಕ್ಯವೂ ಎರಡುಕಡೆಗಳಲ್ಲಿಯೂ ಸಮಾನವಾಗಿದೆ.

**ಭಾವವಿಲಾಸಿನೀ–** ಯತ್ ಯಸ್ಮಾತ್ । ನಚ ವಾಚ್ಯಂ ದೇಹವ್ಯವಹಿತತ್ವಾತ್ ನ ದೇಹವೃತ್ತ್ಯಾ ಯಜ್ಞದತ್ತಚೈತನ್ಯಾನುಭವ ಇತಿ । ಘಟವ್ಯವಹಿತಚೈತನ್ಯೇಽಪಿ ಸಾಮ್ಯಾತ್ । ಯೋಗ್ಯಘಟವೃತ್ತ್ಯಾಽಯೋಗ್ಯಸ್ಯಾಪಿ ಘಟಾವಚ್ಛಿನ್ನಚೈತನ್ಯಸ್ಯೋಲ್ಲೇಖೇ ಯೋಗ್ಯದೇಹವೃತ್ತ್ಯಾ ದೇಹಾವಚ್ಛಿನ್ನ ಚೈತನ್ಯೋಲ್ಲೇಖಸ್ಯಾಪಿ ಸಂಭವಾತ್ । ನಹಿ ವೃತ್ತೇಃ ಪಕ್ಷಪಾತೋಽಸ್ತಿ । ಪ್ರತ್ಯುತಯಜ್ಞ-ದತ್ತೋಽಯಮಿತಿ ವೃತ್ತೇರುಪನೀತಜೀವಸಹಿತದೇಹೋಲ್ಲೇಖಿತ್ವಸ್ಯಾಯಂ ಘಟ ಇತಿ ವೃತ್ತೌ ಚೈತನ್ಯಾರಹಿತ ಘಟಮಾತ್ರೋಲ್ಲೇಖಿತ್ವಸ್ಯ ಚ ಸರ್ವಾನುಭವಸಿದ್ಧತ್ವೇನ ವೈಪರೀತ್ಯಸ್ಯೈವ ವಕ್ತುಂ ಶಕ್ಯತ್ವಾಚ್ಚ ॥ ೪೯೬ ॥

**ವಿವರಣೆ -** ಘಟಾಧಿಷ್ಠಾನಚೈತನ್ಯ ಮತ್ತು ವೃತ್ತ್ಯವಚ್ಛಿನ್ನಚೈತನ್ಯಸ್ಥಳದಲ್ಲಿ ಘಟ ಮತ್ತು ವೃತ್ತಿರೂಪ ಅವಚ್ಛೇದಕಗಳು ಬೇರೆಬೇರೆಯಾಗಿವೆ. ಆ ಚೈತನ್ಯಗಳಿಗೆ ವ್ಯಾವಹಾರಿಕ ಭೇದವಿದ್ದರೂ ಸ್ವರೂಪೈಕ್ಯವಿದೆ. ಯಜ್ಞದತ್ತ ದೇವದತ್ತ ಎಂಬ ಅವಚ್ಛೇದಕಗಳು ಇಲ್ಲಿಯೂ ಭಿನ್ನವಾಗಿವೆ ಮತ್ತು ಯಜ್ಞದತ್ತಚೈತನ್ಯಕ್ಕೂ ದೇವದತ್ತಚೈತನ್ಯಕ್ಕೂ ವ್ಯಾವಹಾರಿಕ ಭೇದವೂ, ಸ್ವರೂಪೈಕ್ಯವೂ ಇದೆ. ದೇಹದ ವ್ಯವಧಾನವಿರುವುದರಿಂದ ದೇಹವೃತ್ತಿಯಿಂದ ವ್ಯವಹಿತವಾದ ಯಜ್ಞದತ್ತಚೈತನ್ಯಾನುಭವವು ದೇವದತ್ತನಿಗೆ ಬರುವುದಿಲ್ಲ ಎಂದು ಹೇಳುವುದು ಸರಿಯಲ್ಲ. ಘಟವ್ಯವಧಾನವಿರುವುದರಿಂದ ವೃತ್ತಿಫಲಿತಚೈತನ್ಯಕ್ಕೆ ಅಧಿಷ್ಠಾನ ಚೈತನ್ಯದ ಐಕ್ಯಾನುಭವವು ಬಾರದೆ ಹೋಗಲಿ ಎಂಬ ಆಪತ್ತಿಯು ಇಲ್ಲಿಯೂ ಇದೆ. ಚೈತನ್ಯವು ಅಯೋಗ್ಯವಾದರೂ ಘಟವು ಯೋಗ್ಯವಾದ್ದರಿಂದ ವೃತ್ತಿಯು ಘಟಾವಚ್ಛಿನ್ನ ಚೈತನ್ಯದ ಉಲ್ಲೇಖವನ್ನು ಮಾಡುವುದೆಂದಾರೆ ಚೈತನ್ಯವು ಅಯೋಗ್ಯವಾದರೂ ದೇಹವು ಯೋಗ್ಯವಾದ್ದರಿಂದ ಯೋಗ್ಯದೇಹವೃತ್ತಿಯಿಂದ ದೇಹಾವಚ್ಛಿನ್ನಚೈತನ್ಯದ ಉಲ್ಲೇಖವು ಬರಬಹುದಷ್ಟೇ? ವೃತ್ತಿಗೆ ಪಕ್ಷಪಾತವಿಲ್ಲವಷ್ಟೇ? ವಸ್ತುತಃ ಅಯಂ ಯಜ್ಞದತ್ತಃ (ಇವನು ಯಜ್ಞದತ್ತ) ಎಂಬ ವೃತ್ತಿಗೆ ಉಪನಯಮರ್ಯಾದೆಯಿಂದ ಭಾಸಮಾನಜೀವವಿಶಿಷ್ಟದೇಹ

ವಿಷಯತ್ವವೂ, ಅಯಂ ಘಟಃ ಎಂಬ ವೃತ್ತಿಗೆ ಚೈತನ್ಯಾವಿಷಯಕತ್ವವೂ ಅನುಭವ ಸಿದ್ಧವಾಗುವುದರಿಂದ ಯಜ್ಞದತ್ತವೃತ್ತಿಗೇ ಚೈತನ್ಯವಿಷಯಕತ್ವವನ್ನೂ ಘಟವೃತ್ತಿಗೆ ಕೇವಲ ಘಟವಿಷಯಕತ್ವವನ್ನೂ ಒಪ್ಪಬೇಕು.

ಘಟೋಪಸ್ಥಾಪಿಕಾ ವೃತ್ತಿರ್ಬ್ರಹ್ಮೋಪಸ್ಥಾಪಿಕೈವ ನ ।
ತದುಲ್ಲೇಖಪ್ರಕಾರಸ್ಯ ನತರಾಂ ಸ್ಥಾಪಿಕಾ ಹಿ ಸಾ ॥ ೪೯೭ ॥

**ಅರ್ಥ** – ಘಟೋಪಸ್ಥಾಪಿಕಾ= ಘಟವನ್ನು ಪ್ರಕಾಶಿಸುವ ವೃತ್ತಿಃ= ವೃತ್ತಿಯು, ಬ್ರಹ್ಮೋಪಸ್ಥಾಪಿಕಾ= ಚೈತನ್ಯವನ್ನು ಪ್ರಕಾಶಿಸುವಂತಹದು, ನ ಏವ= ಅಲ್ಲವೇ ಅಲ್ಲ, ಸಾ= ಆ ಘಟೋಪಸ್ಥಾಪಕವೃತ್ತಿಯು, ತದುಲ್ಲೇಖ ಪ್ರಕಾರಸ್ಯ= ಚೈತನ್ಯೋಲ್ಲೇಖ ಕಾರ್ಯಕ್ಕೆ, ಸಾ= ಅದು, ನತರಾಂ ಸ್ಥಾಪಿಕಾ ಹಿ= ಖಂಡಿತವಾಗಿ ಉಪಸ್ಥಾಪಕವಲ್ಲವಷ್ಟೆ?

**ಅನುವಾದ** - ಘಟವನ್ನು ಪ್ರಕಾಶಿಸುವ ವೃತ್ತಿಯು ಚೈತನ್ಯವನ್ನು ಪ್ರಕಾಶಿಸುವುದೇ ಇಲ್ಲ (ಚೈತನ್ಯೋಪಸ್ಥಾಪಕವೇ ಅಲ್ಲ). ಹೀಗಿರುವಾಗ ಚೈತನ್ಯೋಪಸ್ಥಾಪನ ಕಾರ್ಯವಾದ ವ್ಯವಹಾರವನ್ನು ಅದು ಎಂದೂ ಉಂಟುಮಾಡುವುದಿಲ್ಲ.

**ಭಾವವಿಲಾಸಿನೀ**– ಅಸ್ತುತರ್ಹಿ ವೃತ್ತಿರೇವಾಧಿಷ್ಠಾನಚೈತನ್ಯವಿಷಯಿಣೀ ಸತೀ ತದ್ದೃಷ್ಟಂ ಸರ್ವಂ ಸ್ವಸ್ವಾಮಿಜೀವಸ್ಯೋಪಸ್ಥಾಪಯತೀತಿ ಶಂಕಾಮುಕ್ತವಿಧಯಾ ದೂಷಿತಾಮಪಿ ದೋಷಾಂತರೇಣ ದೂಷಯಿತುಮಾಹ – **ಘಟೋಪಸ್ಥಾಪಿಕೇತಿ** ॥ ಘಟವಿಷಯಕೋಽಪಿ ಹಿ ವ್ಯವಸಾಯೋ ಘಟಮಾತ್ರಮುಪಸ್ಥಾಪಯೇನ್ನತು ತತ್ಕಾರ್ಯಂ ಜಲಾಹರಣಾದಿಕಮ್ । ಯಸ್ಯ ತದುಲ್ಲೇಖೇಽಪಿ ಸಂದೇಹಃ ಕಿಮು ವಾಚ್ಯಂ ತಸ್ಯ ತತ್ಕಾರ್ಯಾನುಪಸ್ಥಾಪಕತ್ವಮಿತಿ ಭಾವಃ ॥ ೪೯೭ ॥

**ವಿವರಣೆ** - ವೃತ್ತಿಯೇ ಅಧಿಷ್ಠಾನಚೈತನ್ಯವಿಷಯವಾಗಲಿ, ವೃತ್ತಿಯು ತಾನು ವಿಷಯೀಕರಿಸಿದ್ದೆಲ್ಲವನ್ನೂ ತನ್ನ ಸ್ವಾಮಿಯಾದ ಜೀವನಜ್ಞಾನಕ್ಕೆ ಒದಗಿಸಿಕೊಡುತ್ತದೆಂಬ ಶಂಕೆಯನ್ನು ಹಿಂದೆಯೇ ನಿವಾರಣೆಮಾಡಿದ್ದರೂ ದೋಷಾಂತರವನ್ನು ಹೇಳಲು ಇನ್ನೊಮ್ಮೆ ಇಲ್ಲಿ ಅನುವಾದ ಮಾಡುತ್ತಾರೆ. ಘಟವಿಷಯಕವಾದ ವ್ಯವಸಾಯವು ಘಟವನ್ನು ಮಾತ್ರ ಉಪಸ್ಥಾಪನೆಮಾಡಿಕೊಡುತ್ತದೆ. ಘಟದ ಕಾರ್ಯವಾದ ಜಲಾಹರಣವನ್ನು ಎಂದೂ ಉಪಸ್ಥಾಪನೆಮಾಡಿಕೊಡುವುದಿಲ್ಲ. ವೃತ್ತಿಯು ಚೈತನ್ಯವನ್ನು ಉಲ್ಲೇಖಿಸುವ ವಿಷಯದಲ್ಲಿಯೇ ಸಂಶಯವಿರುವಾಗ ಚೈತನ್ಯೋಲ್ಲೇಖದ ಕಾರ್ಯವನ್ನು ಉಪಸ್ಥಾಪನೆ ಮಾಡಿಕೊಡುವುದಿಲ್ಲ ಎಂದು ಮತ್ತೊಮ್ಮೆ ಹೇಳಬೇಕಾಗಿಲ್ಲ.

ಯದ್ಯಧಿಷ್ಠಾನಚೈತನ್ಯಂ ತಸ್ಯ ತಸ್ಯ ಭ್ರಮಸ್ತವ ।
ಘಟೋಽಹಮಿತಿ ವಾ ತಸ್ಯಾಕಾರೋಽಯಂ ಘಟ ಇತ್ಯುತ ॥ ೪೯೮ ॥

**ಅರ್ಥ** – ತವ= ನಿನ್ನ, ಮತೇ= ಮತದಲ್ಲಿ, ಯದಿ= ಒಂದು ಪಕ್ಷದಲ್ಲಿ, ಅಧಿಷ್ಠಾನ ಚೈತನ್ಯಂ= ಘಟಾದಿಗಳ ಅಧಿಷ್ಠಾನಚೈತನ್ಯವೇ, ತಸ್ಯ ತಸ್ಯ= ಆಯಾ ವಸ್ತುವಿನ, ಭ್ರಮಃ=

ಭ್ರಾಂತಿಯು ಆಗುವುದಾದರೆ, ತರ್ಹಿ= ಆ ಪಕ್ಷದಲ್ಲಿ, ತಸ್ಯ= ಆ ಭ್ರಮದ ಆಕಾರಃ= ಆಕಾರವು, ಘಟಃ ಅಹಂ ಇತಿ= ಘಟಃ ಅಹಂ ಎಂಬುದಾಗಿರುತ್ತದೆಯೋ, ಉತ= ಅಥವಾ ಘಟಃ ಅಯಂ ಇತಿ ವಾ= ಘಟಃ ಅಯಂ ಎಂಬುದಾಗಿ ಇರುತ್ತದೆಯೋ ಎಂಬ ಪ್ರಶ್ನೆ ಬರುತ್ತದೆ.

**ಅನುವಾದ - ಘಟಾಧಿಷ್ಠಾನಚೈತನ್ಯವೇ ಘಟದ ಭ್ರಮವಾಗುವುದಾದರೆ ಆ ಭ್ರಮದ ಆಕಾರವೇನು? ಅಹಂ ಘಟಃ - (ನಾನು ಘಟ) ಎಂದೇ? ಅಥವಾ ಅಯಂ ಘಟಃ (ಇದು ಘಟ) ಎಂದೇ?**

**ಭಾವವಿಲಾಸಿನೀ– ದೂಷಣಾಂತರಂ ಚಾಹ – ಯದೀತಿ ॥ ೪೯೮ ॥**

**ಆದ್ಯೇ ಕಿಂ ತೇನ ದೇಹಸ್ಥವ್ಯವಹರ್ತುಃ ಪ್ರಯೋಜನಮ್ ॥ ೪೯೯ ॥**

**ಅರ್ಥ –** ಆದ್ಯೇ= ಅಹಂ ಘಟಃ ಎಂಬ ಆಕಾರ ಎನ್ನುವ ಮೊದಲ ಪಕ್ಷದಲ್ಲಿ, ತೇನ= ಆ ಜ್ಞಾನದಿಂದ, ದೇಹಸ್ಥ ವ್ಯವಹರ್ತುಃ= ದೇಹದಲ್ಲಿರುವ ಜೀವ ಚೈತನ್ಯನೆಂಬ ವ್ಯವಹರ್ತೃವಿಗೆ, ಕಿಂ= ಏನು ಪ್ರಯೋಜನಂ= ಪ್ರಯೋಜನವಿದೆ?

**ಅನುವಾದ - ಅಹಂ ಘಟಃ ಎಂದು ಆಕಾರ ಎಂಬ ಮೊದಲನೆಯ ಪಕ್ಷದಲ್ಲಿ ಆ ಜ್ಞಾನದಿಂದ ವ್ಯವಹಾರಮಾಡುವ ಜೀವನಿಗೆ ಏನು ಪ್ರಯೋಜನ?**

**ಭಾವವಿಲಾಸಿನೀ–ತಸ್ಯ ಭ್ರಮಸ್ಯ । ತೇನ ಜ್ಞಾನೇನ । ಪರೇಣಾಪಿ ವ್ಯಾವಹಾರಿಕ- ಭೇದಾಂಗೀಕಾರೇಣ ಜೀವಚೈತನ್ಯಸ್ಯ ತತೋ ಭಿನ್ನತ್ವಾದಿತಿ ಭಾವಃ ॥೪೯೯॥**

**ವಿವರಣೆ** – ಅಧಿಷ್ಠಾನಚೈತನ್ಯಕ್ಕೂ ಜೀವಚೈತನ್ಯಕ್ಕೂ ವ್ಯಾವಹಾರಿಕ ಭೇದವಿರುವುದರಿಂದ ಆ ಜ್ಞಾನ ಮತ್ತು ಜ್ಞಾನಕಾರ್ಯ ಎರಡಕ್ಕೂ ವೈಯಾಧಿಕರಣ್ಯ ಬರುವುದರಿಂದ ಅಂತಹ ಜ್ಞಾನವನ್ನು ಒಪ್ಪುವುದರಿಂದ ಪ್ರಯೋಜನವಿಲ್ಲ.

**ವೃತ್ತಿದ್ವಾರಾ ಬಹಿರ್ಗತ್ವಾ ತೇನೈಕೀಭಾವಮೇತ್ಯಯಮ್ ।**
**ಅತಸ್ತಜ್ಞಾನಮೇವಾಸ್ಯ ಜ್ಞಾನಂ ವ್ಯವಹೃತಿರ್ಯದಿ ।**
**ದೇಹಾಂತಸ್ತರ್ಹಿ ಜೀವಸ್ಯಾಭಾವಾನ್ನಿರ್ಜೀವತಾ ತನೋಃ ॥ ೫೦೦ ॥**

**ಅರ್ಥ–** ಯದಿ= ಒಂದು ಪಕ್ಷದಲ್ಲಿ, ಅಯಂ= ಈ ಜೀವಚೈತನ್ಯವು, ವೃತ್ತಿದ್ವಾರಾ= ವೃತ್ತಿಯ ಮೂಲಕ, ಬಹಿಃ= ಹೊರಗೆ, ಗತ್ವಾ= ಹೋಗಿ, ತೇನ= ಅಧಿಷ್ಠಾನ ಚೈತನ್ಯದೊಂದಿಗೆ, ಏಕೀಭಾವಂ= ಐಕ್ಯವನ್ನು, ಏತಿ= ಪಡೆಯುತ್ತದೆ, ಅತಃ= ಆದ್ದರಿಂದ, ತರ್ಹಿ= ಆ ಪಕ್ಷದಲ್ಲಿ, ದೇಹಾಂತಃ= ದೇಹದ ಒಳಗಡೆ, ಜೀವಸ್ಯ= ಚೇತನನ, ಅಭಾವಾತ್=

ಅಸ್ತಿತ್ವವಿಲ್ಲದಿರುವುದರಿಂದ, ತನೋಃ= ಶರೀರಕ್ಕೆ, ನಿರ್ಜೀವತಾ= ಜೀವರಾಹಿತ್ಯವು (ಮೃತತ್ವವು) ಸ್ಯಾತ್= ಬಂದೀತು.

**ಅನುವಾದ** - ವೃತ್ತಿಯದ್ವಾರಾ ಜೀವ (ಜ್ಞಾತೃ)ಚೈತನ್ಯವೇ ಹೊರಗೆ ಹೋಗಿ ಅಧಿಷ್ಠಾನಚೈತನ್ಯದಿಂದ ಏಕೀಭಾವವನ್ನು ಹೊಂದುವುದರಿಂದ ಜ್ಞಾನ ಮತ್ತು ವ್ಯವಹಾರಗಳಿಗೆ ವೈಯಧಿಕರಣ್ಯವಿಲ್ಲವೆಂದು ಹೇಳುವುದಾದರೆ ವೃತ್ತಿದ್ವಾರಾ ಜೀವನು ಹೊರಗೆ ಹೋದಾಗ ದೇಹದಲ್ಲಿ ಜೀವವಿಲ್ಲವಾದ್ದರಿಂದ ದೇಹವು ಶವವಾಗಬೇಕಾಗುತ್ತದೆ.

**ಭಾವವಿಲಾಸಿನೀ**— ಚೈತನ್ಯಪ್ರತಿಫಲನಸ್ಯ ದೂಷಿತತ್ವಾತ್ ಪಕ್ಷಾಂತರಮಾಶಂಕತೇ ॥ ವೃತ್ತೀತಿ ॥ ಅಯಂ ದೇಹಸ್ಥೋ ಜೀವಃ । ಸ್ವಯಮೇವ ನತು ಪ್ರತಿಫಲನಮುಖೇನ । ಉಪಲಕ್ಷಣಂ ಚೈತತ್ । ವೃತ್ತೇರ್ಮೃತ್ಯುದೂತತ್ವಾಭಾವೇ ಜೀವಾಪಕರ್ಷಕತ್ವಾಸಂಭವಾಚ್ಚೇತ್ಯಪಿ ದ್ರಷ್ಟವ್ಯಮ್॥೫೦೦-೦೧ ॥

**ವಿವರಣೆ** - ಪ್ರತಿಪಕ್ಷದಲ್ಲಿ ದೋಷವಿರುವುದರಿಂದ ಪರವಾದಿಗಳು ಸ್ವತಃ ಗಮನ ಪಕ್ಷವನ್ನು ಆಶ್ರಯಿಸಿದರೆ ಈ ಶ್ಲೋಕದಲ್ಲಿ ದೋಷವನ್ನು ಹೇಳುತ್ತಾರೆ. ಮೇಲೆ ಶ್ಲೋಕದಲ್ಲಿ ಹೇಳಿದ್ದೇ ಅಲ್ಲದೆ ವೃತ್ತಿಯು ಮೃತ್ಯುದ್ಯೂತವಲ್ಲದ್ದರಿಂದ ಜೀವನನ್ನು ದೇಹದಿಂದ ಹೊರಗೆ ಎಳೆಯಲು ಸಾಧ್ಯವಿಲ್ಲ ಎಂಬ ದೋಷವನ್ನೂ ಇಟ್ಟುಕೊಳ್ಳಬೇಕು.

ಅಣುರ್ನಿರಂಶೋ ಜೀವೋಽಯಂ ಕಥಮಂತರ್ಬಹಿಶ್ಚರೇತ್ ।
ದೂರಸ್ಥಸೂರ್ಯಚಂದ್ರಾಪ್ತಿರ್ಮರಣಾದತಿರಿಚ್ಯತೇ ॥ ೫೦೧ ॥

**ಅರ್ಥ** – ಅಣುಃ= ಅಣುಸ್ವರೂಪನಾದ, ನಿರಂಶಃ= ಅಂಶರಹಿತನಾದ, ಅಯಂ= ಈ, ಜೀವಃ= ಜೀವನು, ಅಂತಃ= ಒಳಗೆ, ಬಹಿಃ= ಹೊರಗಡೆ, ಕಥಂ= ಹೇಗೆ, ಚರೇತ್= ಸಂಚರಿಸಿಯಾನು? ಅಪಿ ಚ= ಅದಲ್ಲದೇ, ದೂರಸ್ಥ= ದೂರದಲ್ಲಿರುವ, ಸೂರ್ಯ= ಸೂರ್ಯನ, ಚಂದ್ರ= ಚಂದ್ರನ, ಆಪ್ತಿಃ= ಸಮೀಪ ಹೋಗುವಿಕೆಯು, ಮರಣಾತ್= ಸಾವಿಗಿಂತ, ಅತಿರಿಚ್ಯತೇ= ಹೆಚ್ಚಿನದಾಗಿದೆ.

**ಅನುವಾದ** - ಅಣುವಾದ ಜೀವನು ಒಂದೇ ಕಾಲದಲ್ಲಿ ದೇಹದ ಒಳಗೂ ಮತ್ತು ಹೊರಗೂ ಇರಲು ಹೇಗೆ ಸಾಧ್ಯ? ಜೀವನು ದೂರದಲ್ಲಿರುವ ಚಂದ್ರಸೂರ್ಯರವರೆಗೂ ಸ್ವತಃ ಹೋಗುವುದಾದರೆ ದೇಹದ ಅವಸ್ಥೆಯು ಮರಣಾವಸ್ಥೆಗಿಂತ ಹೀನವಾಗುತ್ತದೆ.

ಕಿಂಚೈವಂ ಸತಿ ದೇಹಾಂತಃ ಪುನರಾಗತ್ಯ ದೇಹಿನಃ ।
ಘಟೋಽಹಮಿತ್ಯೇವ ತೇನ ಜನ್ಯಾ ವ್ಯವಹೃತಿರ್ಭವೇತ್ ॥ ೫೦೨ ॥

**ಕುತೋ ಘಟೋಽಯಮಿತ್ಯೇವಮಾಕಾರಾ ಸಾ ಪ್ರಜಾಯತೇ ।**
**ಜಲಸ್ಯಾನಯನಾರ್ಥಂ ಚ ಸ್ವೋದರೇ ಪೂರಯೇಜ್ಜಲಂ ॥ ೫೦೩ ॥**

**ಅರ್ಥ –** ಕಿಂಚ= ಅದಲ್ಲದೇ, ಏವಂ ಸತಿ= ಜೀವನಿಗೆ ಒಳಗೆ ಹೊರಗೆ ಸಂಚಾರವನ್ನು ಒಪ್ಪಿದರೆ, ಪುನಃ= ಮತ್ತೊಮ್ಮೆ, ದೇಹಾಂತಃ= ದೇಹದ ಒಳಗಡೆ, ಆಗತ್ಯ= ಬಂದು, ದೇಹಿನಃ= ಜೀವನಿಗೆ, ತೇನ= ಆ ಜ್ಞಾನದಿಂದ, ಘಟಃ ಅಹಂ ಇತಿ ಏವ= ಘಟವು ನಾನಾಗಿದ್ದೇನೆ ಎಂಬುದಾಗಿಯೇ, ವ್ಯವಹೃತಿಃ= ವ್ಯವಹಾರವು, ಜನ್ಯಾಭವೇತ್= ಹುಟ್ಟಬೇಕಾದೀತು, ಸಾ= ಆ ವ್ಯವಹಾರವು, ಘಟಃ ಅಯಂ ಇತಿ ಏವ= ಇದು ಘಟವಾಗಿದೆಯೆಂಬುದಾಗಿಯೇ, ಕುತಃ= ಏಕೆ, ಪ್ರಜಾಯತೇ= ಹುಟ್ಟುತ್ತದೆ? ಏವಂ ಚ= ತಾನೇ ಘಟವೆಂದಾದ ಮೇಲೆ, ಜ್ಞಾತಾ= ಜ್ಞಾತೃವು, ಜಲಸ್ಯ= ನೀರಿನ, ಆನಯನಾರ್ಥಂ= ತರುವಿಕೆಗಾಗಿ, ಜಲಂ= ನೀರನ್ನು, ಸ್ವೋದರೇ= ತನ್ನ ಹೊಟ್ಟೆಯಲ್ಲಿ, ಪೂರಯೇತ್= ತುಂಬಿಸಿಕೊಳ್ಳಬೇಕಾದೀತು.

**ಅನುವಾದ -** ಬಹಿರ್ಗಮನವನ್ನು ಒಪ್ಪಿದರೆ ಜೀವನು ಪುನಃ ಶರೀರಕ್ಕೆ ಬಂದು ಅಹಂ ಘಟಃ ಎಂಬ ವ್ಯವಹಾರವನ್ನೇ ಮಾಡಬೇಕಾಗುತ್ತದೆ. ಅಯಂ ಘಟಃ ಎಂಬ ವ್ಯವಹಾರವು ಹೇಗೆ ಉಂಟಾಗುತ್ತದೆ? ನೀರನ್ನು ತರಲು ಹೊರಟವನು ತನ್ನ ಹೊಟ್ಟೆಯಲ್ಲಿಯೇ ನೀರನ್ನು ತುಂಬಿಕೊಳ್ಳುವದಿಲ್ಲವಷ್ಟೇ?

**ಭಾವವಿಲಾಸಿನೀ–** ವೃತ್ತಿದ್ವಾರಾ ಬಹಿರ್ಗಮನಮೇವಾಸಂಭಾವಿತಮಿತ್ಯುಕ್ತಮ್ । ಗಮನೇಽಪಿ ದೋಷಮಾಹ–**ಕಿಂಚೇತಿ** ॥ ಏವಂ ಸತಿ ಘಟೋಽಹಮಿತಿ ಜ್ಞಾನೇ ಸತಿ । ತೇನ ಜ್ಞಾನೇನ । ಸಾ ವ್ಯವಹೃತಿಃ। ಅಪಹಸತಿ ॥ **ಜಲಸ್ಯೇತಿ** ॥ ಸ್ವಸ್ಯೈವ ಘಟತ್ವಾದಿತಿ ಭಾವಃ ॥೫೦೨-೦೩॥

**ವಿವರಣೆ** - ವೃತ್ತಿದ್ವಾರಾ ಬಹಿರ್ಗಮನವೇ ಕೂಡುವುದಿಲ್ಲವೆಂದಾಯಿತು. ಬಹಿರ್ಗಮನವನ್ನು ಒಪ್ಪಿ ಅಹಂ ಘಟಃ ಎಂಬ ಭ್ರಮೆಯನ್ನು ಒಪ್ಪುವುದರಿಂದ ನೀರನ್ನು ಘಟದಲ್ಲಿಯೇ ತುಂಬಬೇಕಾದ್ದರಿಂದ ಮತ್ತು ತಾನೇ ಘಟವಾದ್ದರಿಂದ ತನ್ನ ಉದರದಲ್ಲೇ ತುಂಬಿಕೊಳ್ಳಬೇಕಾಗುತ್ತದೆಂದು ಅಪಹಾಸವನ್ನು ಸೂಚಿಸಿದ್ದಾರೆ.

**ಅನುಭೂತ್ಯನುಸಾರೇಣ ವ್ಯವಹಾರಾದಿ ಜಾಯತೇ ।**
**ನ ಚೈವಂ ವ್ಯವಹಾರೋಽಸ್ತಿ ತಸ್ಮಾದನುಭವೋಽಪಿ ನ ।**
**ಅತೋ ನೈತಾದೃಶಾರೋಪ ಇತ್ಯನಾರೋಪಿತಂ ಜಗತ್ ॥ ೫೦೪ ॥**

**ಅರ್ಥ –** ಅನುಭೂತ್ಯನುಸಾರೇಣ= ಅನುಭವಕ್ಕೆ ಅನುಸಾರವಾಗಿ, ವ್ಯವಹಾರಾದಿ= ಶಬ್ದ ವ್ಯವಹಾರ ಮೊದಲಾದದ್ದು, ಜಾಯತೇ= ಉಂಟಾಗುತ್ತದೆ, ಕಿಂ ತು= ಆದರೆ, ಏವಂ ಚ= ಘಟವೇ ನಾನೆಂಬ, ವ್ಯವಹಾರಃ ಚ= ವ್ಯವಹಾರವಾದರೂ, ನ ಅಸ್ತಿ= ಇಲ್ಲ, ತಸ್ಮಾತ್= ಆದ್ದರಿಂದ, ಅನುಭವಃ ಅಪಿ= ಘಟವೇ ನಾನು ಎಂಬ ಜ್ಞಾನವೂ, ನ ಅಸ್ತಿ= ಇಲ್ಲ, ಅತಃ=

ಆದ್ದರಿಂದ, ಏತಾದೃಶಾರೋಪಃ= ಬ್ರಹ್ಮನೇ ಜಗತ್ ಎಂಬ ಆರೋಪವು, ನ ಇತಿ= ಇಲ್ಲವೆಂಬ ಕಾರಣದಿಂದ, ಜಗತ್= ಪ್ರಪಂಚವು, ಅನಾರೋಪಿತಂ= ಆರೋಪಿತವಾದದ್ದು ಅಲ್ಲ.

**ಅನುವಾದ -** ಅನುಭವಕ್ಕೆ ಅನುಸಾರವಾಗಿ ವ್ಯವಹಾರವು ಉಂಟಾಗುತ್ತದೆ. ಆದರೆ ಅಹಂ ಘಟಃ ಎಂಬ ವ್ಯವಹಾರವೂ ಇಲ್ಲ. ಆದ್ದರಿಂದ ಅಂತಹ ಅನುಭವವೂ ಇಲ್ಲ. ಆದ್ದರಿಂದ ಇಂತಹ ಆರೋಪವಿಲ್ಲದ ಕಾರಣ ಜಗತ್ತು ಅನಾರೋಪಿತವೆಂದೇ ಸಿದ್ಧವಾಗುತ್ತದೆ.

**ಭಾವವಿಲಾಸಿನೀ–** ಏವಂ ವ್ಯವಹಾರಃ ಘಟೋಽಹಮಿತಿ ವ್ಯವಹಾರಃ । ಅನುಭವಃ ಘಟೋಽಹಮಿತ್ಯನುಭವಃ । ಇತಿ ಹೇತೋಃ ॥೫೦೪॥

ದ್ವಿತೀಯೇ ತ್ವಿದಮಂಶೇಸ್ಮಿನ್ನಾಧಿಷ್ಠಾನಪ್ರತೀತಿತಾ ।
ಸ್ವಾತ್ಮಾನಮಹಮಿತ್ಯೇವ ಹ್ಯುಲ್ಲಿಖೇತ್ ಸಾಕ್ಷಿಚಿತ್ ಸದಾ ।
ಅಯಮಿತ್ಯುಲ್ಲಿಖನ್ನಂಶಂ ತಂ ಪೃಥಕ್ಕುರುತೇ ಸ್ವತಃ ॥ ೫೦೫ ॥

**ಅರ್ಥ –** ದ್ವಿತೀಯೇತು= 'ಘಟಃ ಅಯಂ' ಎಂಬುದೇ ಭ್ರಮದ ಆಕಾರವಾದರೆ, ಅಸ್ಮಿನ್= ಈ, ಇದಂ ಅಂಶೇ= ಅಯಂ ಎಂಬ ಅಂಶದಲ್ಲಿನ, ನ ಅಧಿಷ್ಠಾನ ಪ್ರತೀತಿತಾ= ಅಧಿಷ್ಠಾನ ಜ್ಞಾನತ್ವವಿಲ್ಲ, ಸಾಕ್ಷಿಚಿತ್= ಸಾಕ್ಷಿ ಚೈತನ್ಯವು, ಸದಾ= ಯಾವಾಗಲೂ, ಸ್ವಾತ್ಮಾನಂ= ತನ್ನನ್ನು, ಅಹಂ ಇತಿ ಏವ= ನಾನು ಎಂದೇ, ಉಲ್ಲಿಖನ್= ಉಲ್ಲೇಖಿಸುತ್ತಾ, ತಂ ಅಂಶಂ= ಅಯಂ ಘಟಃ ಎಂಬ ಜ್ಞಾನದ ಮೊದಲ ಅಂಶವನ್ನು, ಅಯಂ ಇತಿ= ಇದು ಎಂಬುದಾಗಿ, ಉಲ್ಲಿಖನ್= ಉಲ್ಲೇಖಿಸುತ್ತಾ, ಸ್ವತಃ= ತನ್ನಿಂದ, ಪೃಥಕ್ ಕುರುತೇ= ಪ್ರತ್ಯೇಕಿಸುತ್ತದೆ.

**ಅನುವಾದ -** ಅಯಂ ಘಟಃ ಎಂದು ಆಕಾರ ಎಂಬ ಎರಡನೆಯಪಕ್ಷದಲ್ಲಿ ಇದು (ಅಯಂ ಎಂಬ ಅಂಶವು) ಅಧಿಷ್ಠಾನಜ್ಞಾನವೇ ಅಲ್ಲ. ಸಾಕ್ಷಿಚೈತನ್ಯವು ತನ್ನನ್ನು ಯಾವಾಗಲೂ (ಅಹಂ) ನಾನು ಎಂದು ಉಲ್ಲೇಖಮಾಡುತ್ತದೆ. ಅಯಂ ಎಂದು ಉಲ್ಲೇಖಮಾಡಿದ ಸಾಕ್ಷಿಯು ಅಯಂ ಎಂಬ ಆ ಅಂಶವನ್ನು ತನ್ನಿಂದ ಭಿನ್ನವಾಗಿಯೇ ಉಲ್ಲೇಖ ಮಾಡುತ್ತದೆ.

**ಭಾವವಿಲಾಸಿನೀ–** ಅಸ್ಮಿನ್ ಅಯಮಿತ್ಯುಲ್ಲಿಖ್ಯಮಾನೇ । ಅಯಮಿತ್ಯುಲ್ಲೇಖೋ ಅಧಿಷ್ಠಾನೋಲ್ಲೇಖೋ ನ ಭವತೀತ್ಯರ್ಥಃ । ಕುತ ಇತ್ಯತ ಆಹ – **ಸ್ವಾತ್ಮಾನಮಿತಿ** ॥ ಸಾಕ್ಷಿಚಿತ್ ಸರ್ವಸಾಕ್ಷಿಭೂತಾ ಬ್ರಹ್ಮಚಿತ್ । ಬ್ರಹ್ಮಚಿದಿತ್ಯೇವ ವಕ್ತವ್ಯೇ ಸಾಕ್ಷಿಚಿದಿತಿ ವಚನಂ ಅಹಮಿತ್ಯುಲ್ಲೇಖ-ಮನುಭಾವಯಿತುಮ್ । ಅಂಶಂ ಅಯಂ ಘಟ ಇತಿ ಪ್ರತೀತೇಃ ಪ್ರಥಮಾಂಶಮ್ । ಸ್ವತಃ ಸ್ವಸ್ಮಾತ್ ಅಧಿಷ್ಠಾನಚೈತನ್ಯಾದಿತ್ಯರ್ಥಃ । ಅಯಮಿತ್ಯುಲ್ಲಿಖ್ಯಮಾನಃ ಅಂಶಃ ನಾಧಿಷ್ಠಾನ ಚೈತನ್ಯಮ್ । ತಸ್ಯ ಸ್ವಸ್ವರೂಪೇಽಹಮಿತ್ಯುಲ್ಲೇಖಸ್ಯೈವೋಚಿತತ್ವಾತ್ । ನ ಹ್ಯನಿದಂಪದಾರ್ಥ- ಭೂತಮಾತ್ಮಚೈತನ್ಯಂ ಸ್ವೇನೈವ ಸ್ವಯಮಿದಮಿತ್ಯುಲ್ಲಿಖ್ಯಮಾನಂ ಕ್ವಾಪಿ ದೃಷ್ಟಮಿತಿಭಾವಃ॥೫೦೫॥

**ಸ್ವಯಮೇವ ಹ್ಯಧಿಷ್ಠಾನಂ ನಾಸಾವಂಶೋಽಪಿ ಯಃ ಪೃಥಕ್ ।**
**ಅಧಿಷ್ಠಾನೋಲ್ಲೇಖಶೂನ್ಯಂ ಘಟಜ್ಞಾನಂ ನ ತದ್ಭ್ರಮಃ ।**
**ನಿರಧಿಷ್ಠಾನಕಭ್ರಾಂತಿರ್ಬಾಹ್ಯಾನಾಮೇವ ನಾವಯೋಃ ॥ ೫೦೬ ॥**

**ಅರ್ಥ –** ಸ್ವಯಂ ಏವ= ಸಾಕ್ಷಿ ಚೈತನ್ಯವೇ, ಅಧಿಷ್ಠಾನಂ ಹಿ= ಅಧಿಷ್ಠಾನವಷ್ಟೆ, ಯಃ= ಯಾವ, ಅಸಾವಂಶಃ= ಇದು ಎಂಬ ಅಂಶವು, ಪೃಥಕ್= ಭಿನ್ನವಾಗಿದೆಯೋ, ನ= ಅದೂ ಅಧಿಷ್ಠಾನವಲ್ಲ. ತತ್= ಅಧಿಷ್ಠಾನವನ್ನು ಉಲ್ಲೇಖ ಮಾಡುವುದಿಲ್ಲವಾದ್ದರಿಂದ, ಘಟಜ್ಞಾನಂ= ಘಟಜ್ಞಾನವು, ಭ್ರಮಃ ನ= ಭ್ರಾಂತಿಯಲ್ಲ, ನಿರಧಿಷ್ಠಾನ ಭ್ರಾಂತಿಃ= ಅಧಿಷ್ಠಾನದ, ಉಲ್ಲೇಖವಿಲ್ಲದ ಭ್ರಾಂತಿಯು, ಬಾಹ್ಯಾನಾಂ= ವೇದಬಾಹ್ಯರಾದ ಬೌದ್ಧರ, ಮತೇ ಏವ= ಮತದಲ್ಲಿಯೇ, ಅಸ್ತಿ= ಇದೆ, ಆವಯೋಃ= ನಮ್ಮಿಬ್ಬರ, ಮತೇ= ಮತದಲ್ಲಿ, ನ ಅಸ್ತಿ=ಇಲ್ಲ.

**ಅನುವಾದ –** ಸಾಕ್ಷಿಚೈತನ್ಯವೇ ಅಧಿಷ್ಠಾನ. ಅಯಂ ಎಂದು ತೋರುವ ಅಂಶ. ಅದಕ್ಕಿಂತ ಭಿನ್ನವಾದುದು. ಅದು ಅಧಿಷ್ಠಾನಚೈತನ್ಯವಲ್ಲ. ಅದು ಅಧಿಷ್ಠಾನಚೈತನ್ಯವನ್ನು ಉಲ್ಲೇಖಮಾಡುವುದಿಲ್ಲ. ಅಧಿಷ್ಠಾನವನ್ನು ಉಲ್ಲೇಖಮಾಡದಿದ್ದರೆ ಘಟಜ್ಞಾನವು ಭ್ರಮವೇ ಆಗುವುದಿಲ್ಲ. ನಾವಿಬ್ಬರೂ ಅಧಿಷ್ಠಾನೋಲ್ಲೇಖವಿಲ್ಲದ ಭ್ರಮವನ್ನು ಒಪ್ಪುವುದಿಲ್ಲ.

**ಭಾವವಿಲಾಸಿನೀ–** ಅಸೌ ಅಯಮಿತ್ಯುಲ್ಲಿಖ್ಯಮಾನಃ । ಅಂಶಃ ದೇಹಕಾಲರೂಪಃ । ಯಃ ಅಂಶಃ । ಪೃಥಕ್ ಅಹಮಿತ್ಯುಲ್ಲಿಖ್ಯಮಾನಚೈತನ್ಯಾದನ್ಯತ್ । ತತ್ ತಸ್ಮಾತ್ । ಅಯಮಿತ್ಯಂಶಸ್ಯಾಧಿಷ್ಠಾನ-ಚೈತನ್ಯಾನುಲ್ಲೇಖಿತ್ವಾತ್ ॥ ೫೦೬ ॥

**ವಿವರಣೆ –** ಬೌದ್ಧರು ಅಧಿಷ್ಠಾನವಿಲ್ಲದೆ ಭ್ರಮವನ್ನು ಒಪ್ಪುತ್ತಾರೆ. ವೇದಾಂತಿಗಳು ಅದನ್ನು ನಿರಾಕರಿಸಿ ಅಧಿಷ್ಠಾನವು ಬೇಕೇ ಬೇಕೆಂದು ಸಮರ್ಥಿಸುತ್ತಾರೆ. ಅಧಿಷ್ಠಾನದ ಉಲ್ಲೇಖವಿಲ್ಲದೆ ಭ್ರಾಂತಿಯು ಬರುವುದಿಲ್ಲವೆಂದು ಇಬ್ಬರಿಗೂ ಸಮ್ಮತ. ಆದ್ದರಿಂದ ಅಯಂ ಘಟಃ ಎಂಬ ಜ್ಞಾನವು ಅಯಂ ಎಂಬಲ್ಲಿ ದೇಶ, ಕಾಲ ಸಂಬಂಧವನ್ನು ಉಲ್ಲೇಖಿಸುವುದರಿಂದ ಅಧಿಷ್ಠಾನವನ್ನು ಉಲ್ಲೇಖಿಸುವುದಿಲ್ಲವಾದ್ದರಿಂದ ಭ್ರಾಂತಿಯಲ್ಲ ಎಂದು ಅಭಿಪ್ರಾಯ.

**ಅಥವೃತ್ತಿರಿಯಂ ತರ್ಹಿ ಘಟಾರೋಪಕಥಾ ಗತಾ ।**
**ಘಟಾಪರೋಕ್ಷವೃತ್ತಿಃ ಸ್ಯಾದ್ಘಟಸ್ಯೇಂದ್ರಿಯಯೋಗತಃ ।**
**ಘಟಸ್ಯೇಂದ್ರಿಯಯೋಗಶ್ಚ ಘಟೇ ಸತ್ಯೇವ ನಾನ್ಯಥಾ ॥ ೫೦೭ ॥**

**ಅರ್ಥ –** ಅಥ= ಒಂದು ಪಕ್ಷದಲ್ಲಿ, ಇಯಂ= ಅಯಂ ಘಟಃ ಎನ್ನುವ, ವೃತ್ತಿಃ= ಘಟದ ಅಪರೋಕ್ಷ ವೃತ್ತಿಯು ಎಂದು ಹೇಳಿದರೆ, ತರ್ಹಿ= ಆ ಪಕ್ಷದಲ್ಲಿ, ಘಟಾರೋಪ ಕಥಾ=

ಘಟವು ಆರೋಪಿತವಾಗಿದೆ ಎಂಬ ವಾದವು, ಗತಾ= ಬಿದ್ದುಹೋಯಿತು, ಘಟಾಪರೋಕ್ಷವೃತ್ತಿಃ= ಘಟದ ಅಪರೋಕ್ಷ ವೃತ್ತಿಯು, ಘಟಸ್ಯ= ಘಟಕ್ಕೆ, ಇಂದ್ರಿಯಯೋಗತಃ= ಇಂದ್ರಿಯ ಸನ್ನಿಕರ್ಷದಿಂದ, ಸ್ಯಾತ್= ಹುಟ್ಟುತ್ತದೆ, ಘಟಸ್ಯ= ಘಟಕ್ಕೆ, ಇಂದ್ರಿಯ ಯೋಗಃ ಚ= ಇಂದ್ರಿಯ ಸಂಯೋಗವಾದರೂ, ಘಟೇ ಸತಿ ಏವ= ಘಟವಿದ್ದಾಗಲೇ ಹುಟ್ಟುತ್ತದೆ, ಅನ್ಯಥಾ= ಸಂಯೋಗವಿಲ್ಲದಿದ್ದರೆ, ನ= ಹುಟ್ಟುವುದಿಲ್ಲ.

**ಅನುವಾದ -** ಅಯಂ ಘಟಃ ಎನ್ನುವುದು ಘಟಜ್ಞಾನವಲ್ಲ, ಘಟದ ಅಪರೋಕ್ಷವೃತ್ತಿಯು ಮಾತ್ರ ಎಂದು ಹೇಳಿದರೆ ಘಟವು ಆರೋಪಿತ ಎಂಬ ವಾದವು ಬಿದ್ದುಹೋಗುತ್ತದೆ. ಅಪರೋಕ್ಷವೃತ್ತಿಯುಂಟಾಗಬೇಕಾದರೆ ಇಂದ್ರಿಯಸನ್ನಿಕರ್ಷಬೇಕು. ಇಂದ್ರಿಯಸನ್ನಿಕರ್ಷವುಂಟಾಗಬೇಕಾದರೆ ಮೊದಲು ಘಟಾದಿಗಳ ಸತ್ಯತೆ ಇರಬೇಕು. ಬೇರೆ ರೀತಿಯಿಂದ ಸಾಧ್ಯವಿಲ್ಲ.

**ವಿವರಣೆ** - ಅಯಂ ಘಟಃ ಎಂಬುದು ಚೈತನ್ಯರೂಪವಾದರೆ ಅದು ಭ್ರಾಂತಿಯಾಗಲು ಸಾಧ್ಯವಿಲ್ಲ, ಪ್ರಮೆಯೇ ಆಗಬೇಕೆಂದು ಸಮರ್ಥಿಸಿ ಅದು ವೃತ್ತಿ ಎಂದು ಒಪ್ಪಿದರೂ ಎರಡು ರೀತಿಯಿಂದ ಅದಕ್ಕೆ ಪ್ರಮಾತ್ವವನ್ನು ಒಪ್ಪಬೇಕಾಗುತ್ತದೆ ಎಂದು ಹೇಳುತ್ತಾರೆ.

**ಅತೋ ವೃತ್ತೇಃ ಪುರಾ ಸನ್ನಿಕರ್ಷಸ್ಯ ಘಟಕೋ ಘಟಃ ।**
**ಅಸ್ತ್ಯೇವೇತಿ ಕಥಂ ತಸ್ಯ ವೃತ್ತ್ಯಾ ಸ್ಯಾತ್ ಕಲ್ಪನಾ ವದ ॥ ೫೦೮ ॥**

**ಅರ್ಥ –** ಅತಃ= ಆದ್ದರಿಂದ, ಘಟಃ= ಘಟವು, ವೃತ್ತೇಃ= ಘಟದ ಅಪರೋಕ್ಷ ವೃತ್ತಿಗೆ, ಪುರಾ= ಮುಂಚೆಯೇ, ಸನ್ನಿಕರ್ಷಸ್ಯ= ಇಂದ್ರಿಯಾರ್ಥಸನ್ನಿಕರ್ಷದಲ್ಲಿ, ಘಟಕಃ= ಸಂಪಾದಕವಾಗಿ ಸೇರಿಕೊಂಡಿರುವಂತಹದು, ಅಸ್ತಿ ಏವ= ಆಗಿಯೇ ಇದೆ, ಇತಿ= ಎಂಬ ಕಾರಣದಿಂದ, ತಸ್ಯ= ಆ ಘಟಕ್ಕೆ, ವೃತ್ತ್ಯಾ= ವೃತ್ತಿಯಿಂದ, ಕಲ್ಪನಾ= ಆರೋಪವು, ಕಥಂ= ಹೇಗೆ, ಸ್ಯಾತ್= ಆದೀತು, ಇತಿ= ಎಂದು, ವದ= ಹೇಳು.

**ಅನುವಾದ -** ಆದ್ದರಿಂದ ವೃತ್ತಿಗೆ ಮುಂಚೆಯೇ ಸನ್ನಿಕರ್ಷಸಂಪಾದಕವಾಗಿ ಸತ್ಯವಾಗಿರುವ ಘಟವು ಅನಂತರ ಬಂದ ವೃತ್ತಿಯಿಂದ ಆರೋಪಿತವಾಗುವುದು ಹೇಗೆ? ಹೇಳು.

**ಭಾವವಿಲಾಸಿನೀ–** ಅಯಂ ಘಟ ಇತಿ ಪ್ರತೀತೇಶ್ಚೈತನ್ಯರೂಪತ್ವಪಕ್ಷೇ ಪ್ರಮಾತ್ವಂ ಪ್ರಸಾಧ್ಯ ವೃತ್ತಿರೂಪತ್ವಪಕ್ಷೇಽಪಿ ದ್ವೇಧಾ ತತ್ಸಾಧಯತಿ ॥ **ಅಥೇತಿ** ॥ ೫೦೭-೦೮॥

**ವೃತ್ತೇರ್ಭ್ರಮತ್ವೇ ದೃಶ್ಯಸ್ಯ ತತ್ರಾರೋಪೋ ನ ತೇ ಮತೇ ।**
**ಯದ್ವಾಶೋಽನ್ಯತ್ರ ನಾರೋಪ ಇತ್ಯನಾರೋಪಿತಂ ಜಗತ್ ॥ ೫೦೯ ॥**

**ಅರ್ಥ –** ತೇ= ನಿನ್ನ, ಮತೇ= ಮತದಲ್ಲಿ, ವೃತ್ತೇಃ= ವೃತ್ತಿಗೆ, ಭ್ರಮತ್ವೇ= ಭ್ರಮತ್ವವಿದ್ದರೆ, ದೃಶ್ಯಸ್ಯ= ದೃಶ್ಯ ವಸ್ತುವಿಗೆ, ತತ್ರ= ಆ ವೃತ್ತಿಯಲ್ಲಿ, ಆರೋಪಃ= ಆರೋಪವು, ನ= ಇಲ್ಲ, ಯತ್= ಯಾವ ಕಾರಣದಿಂದ, ದೃಶಃ ಅನ್ಯತ್ರ= ದೃಕ್‌ಗಿಂತ ಹೊರತಾಗಿ ಬೇರೆ ಕಡೆಯಲ್ಲಿ, ಆರೋಪಃ= ದೃಶ್ಯದ ಆರೋಪವು, ನ= ಇಲ್ಲವೋ, ಇತಿ= ಆ ಕಾರಣದಿಂದ, ಜಗತ್= ಪ್ರಪಂಚವು, ಅನಾರೋಪಿತಂ= ಅನಾರೋಪಿತವಾಯಿತು.

**ಅನುವಾದ** - ವೃತ್ತಿಯು ಭ್ರಮವಾದರೆ ನಿನ್ನ ಮತರೀತ್ಯಾ ದೃಶ್ಯವು ವೃತ್ತಿಯಲ್ಲಿ ಆರೋಪಿತವಲ್ಲ, ಏಕೆಂದರೆ ದೃಕ್‌ನ ಹೊರತು ಬೇರೆ ಕಡೆ ದೃಶ್ಯವು ಆರೋಪಿತ-ವಾಗುವುದಿಲ್ಲ, ಆದ್ದರಿಂದ ಜಗತ್ತು ಅನಾರೋಪಿತವೆಂದೇ ಸಿದ್ಧವಾಯಿತು.

**ಭಾವವಿಲಾಸಿನೀ–** ಯತ್ ಯಸ್ಮಾತ್ । ದೃಶ್ಯಸ್ಯ ದೃಶಿ ಆರೋಪೇಣ ಹಿ ಮಿಥ್ಯಾತ್ವಮುಚ್ಯತೇ ಪರೇಣ । ಅಯಂ ಘಟ ಇತಿ ದೃಶಶ್ಚ ವೃತ್ತಿರೂಪತ್ವೇ ತದಾರೋಪಸ್ಯ ಪರೇಣಾಪ್ಯನಂಗೀಕಾರಾತ್ ಘಟಾದೇರನಾರೋಪಿತತ್ವಮಿತಿ ಭಾವಃ ॥ ೫೨೯ ॥

**ವಿವರಣೆ** - ವೃತ್ತಿಯು ಭ್ರಮವಾದರೆ ಅದು ಆರೋಪಿತವಾಯಿತು. ಆರೋಪಿತ-ವಾದುದು ಅಧಿಷ್ಠಾನವಾಗಲಾರದು. ಆದ್ದರಿಂದ ದೃಕ್ ಒಂದೇ ಸತ್ಯ. ವೃತ್ತಿಯಲ್ಲಿ ಘಟಾದಿಜಗತ್ತಿನ ಆರೋಪವು ಕೂಡುವುದಿಲ್ಲವಾದ್ದರಿಂದ ಜಗತ್ತು ಅನಾರೋಪಿತ ಎಂದು ಸಿದ್ಧವಾಗುತ್ತದೆ.

ದೃಗ್ದೃಶ್ಯಯೋಗಾಯೋಗೇನ ಮಿಥ್ಯಾತ್ವಾಶಾಪಿ ತೇ ಗತಾ ॥ ೫೩೦ ॥

**ಅರ್ಥ –** ದೃಗ್‌ದೃಶ್ಯಯೋಗಾಯೋಗೇನ= ದೃಕ್ ಮತ್ತು ದೃಶ್ಯಗಳಿಗೆ ಸಂಬಂಧವು ಕೂಡುವುದಿಲ್ಲವಾದ್ದರಿಂದ, ತೇ= ನಿನ್ನ, ಮಿಥ್ಯಾತ್ವಾಶಾಪಿ= ಜಗನ್ಮಿಥ್ಯಾತ್ವ ಆಶೆಯು, ಗತಾ= ಹೊರಟು ಹೋಯಿತು.

**ಅನುವಾದ** - ದೃಕ್ ಮತ್ತು ದೃಶ್ಯಗಳಿಗೆ ಸಂಬಂಧವು ಕೂಡುವುದಿಲ್ಲವಾದ್ದರಿಂದ ಜಗತ್ತು ಮಿಥ್ಯಾ ಆಗಬೇಕು ಎಂಬ ನಿನ್ನ ಆಶೆಯೂ ಹೋಯಿತು.

**ಭಾವವಿಲಾಸಿನೀ–** ದೋಷಾಂತರಂ ಚಾಹ – **ದೃಗ್‌ದೃಶ್ಯೇತಿ** ॥ ಉಪಲಕ್ಷಣಂ ಚೇದವ್ । ವೃತ್ತ್ಯಾSಯಮಿತ್ಯುಲ್ಲಿಖ್ಯಮಾನಯೋರ್ದೇಶಕಾಲಯೋರಧಿಷ್ಠಾನತ್ವಾನಂಗೀಕಾರಾತ್ ನಿರಧಿಷ್ಠಾನಭ್ರಮಸ್ಯಾಯೋಗಾಚ್ಚ ನ ವೃತ್ತೇರ್ಭ್ರಮತ್ವಮಿತ್ಯಪಿ ದ್ರಷ್ಟವ್ಯಮ್ । ನನ್ವಯಮಿತಿ ನ ಕಾಲಾದೇರುಲ್ಲೇಖಃ । ಕಿಂತು ಅಧಿಷ್ಠಾನ ಚೈತನ್ಯಸ್ಯಾತೋ ನೈಷ ದೋಷ ಇತಿ ಚೇನ್ನ । ಪ್ರಾಗುಕ್ತದೋಷತ್ರಯಸ್ಯಾಪರಿಹಾರಾತ್ । ಸರ್ವಾನುಭವವಿರೋಧಾತ್ । ಕ್ಷಣಿಕತ್ವವಾದಿನಂ ಪ್ರತಿ ಘಟಾದೇಃ ಸ್ಥೈರ್ಯಸಾಧಕಪ್ರತ್ಯಭಿಜ್ಞಾಭಾವಪ್ರಸಂಗಾಚ್ಚ ॥ ೫೩೦ ॥

**ವಿವರಣೆ** - ವೃತ್ತಿಗೆ ಜ್ಞಾನತ್ವವನ್ನು ಒಪ್ಪಿ ಘಟವೃತ್ತಿಯು ಘಟಜ್ಞಾನವೆಂದು ಒಪ್ಪಿ ಜ್ಞಾನದಲ್ಲಿ ಘಟವು ಆರೋಪಿತ, ಏಕೆಂದರೆ ಬೇರೆ ಯಾವ ಸಂಬಂಧವನ್ನೂ ಹೇಳಲು ಬರುವುದಿಲ್ಲವೆಂದು ಹೇಳಿ ಮಿಥ್ಯಾತ್ವವನ್ನು ಸಿದ್ಧಮಾಡಬೇಕು. ವೃತ್ತಿಯಲ್ಲಿ ಘಟದ ಆರೋಪವೇ ಸಾಧ್ಯವಿಲ್ಲವೆಂದು ಸಮರ್ಥನೆ ಮಾಡಿದಾಗ ಘಟದ ಸತ್ಯತ್ವವೇ ಸಿದ್ಧವಾಯಿತು. ಮಿಥ್ಯಾತ್ವದ ಆಶೆ ನಾಶವಾಯಿತು.

**ನ ಚೇಯಂ ವೃತ್ತಿರೇವಾಸ್ಮಿನ್ ಘಟೇ ತದ್ಬ್ರಹ್ಮತಾಭ್ರಮಃ ।**
**ಚಕ್ಷುರ್ವೃತ್ತಾವರೂಪಸ್ಯ ಚೈತನ್ಯಸ್ಯಾಪ್ರಕಾಶನಾತ್ ॥ ೫೧೧ ॥**

**ಅರ್ಥ** – ಅರೂಪಸ್ಯ= ರೂಪರಹಿತನಾದ, ಚೈತನ್ಯಸ್ಯ= ಬ್ರಹ್ಮನಿಗೆ, ವೃತ್ತೌ= ಚಾಕ್ಷುಷವೃತ್ತಿಯಲ್ಲಿ, ಅಪ್ರಕಾಶನಾತ್= ಪ್ರಕಾಶವಿಲ್ಲದಿರುವುದರಿಂದ, ಅಸ್ಮಿನ್= ಈ, ಘಟೇ= ಘಟವಿಷಯದಲ್ಲಿ, ಇಯಂ= ಈ, ವೃತ್ತಿಃ ಏವ= ವೃತ್ತಿಯೇ, ತದ್ ಬ್ರಹ್ಮತಾಭ್ರಮಃ, ನ= ಅಧಿಷ್ಠಾನ ಚೈತನ್ಯವಾದ ಬ್ರಹ್ಮಾಭೇದದ ಭ್ರಮವಲ್ಲ.

**ಅನುವಾದ** - ಘಟವಿಷಯಕವಾದ ಆ ವೃತ್ತಿಯೇ ಘಟದಲ್ಲಿ ಅಧಿಷ್ಠಾನಚೈತನ್ಯ ರೂಪವಾದ ಬ್ರಹ್ಮಾಭೇದಭ್ರಮವಲ್ಲ. ಏಕೆಂದರೆ ಚಾಕ್ಷುಷವೃತ್ತಿಯಲ್ಲಿ ರೂಪಾದಿ ಹೀನನಾದ ಬ್ರಹ್ಮನು ಪ್ರಕಾಶಿಸಲು ಸಾಧ್ಯವಿಲ್ಲ.

**ಭಾವವಿಲಾಸಿನೀ**– ವೃತ್ತೌ ಚೈತನ್ಯೋಲ್ಲೇಖೋಽಪ್ಯಯಮನುಪಪನ್ನ ಇತ್ಯಾಹ – **ನಚೇತಿ** ॥ ತತ್ ಬ್ರಹ್ಮತಾಭ್ರಮಃ ಅಧಿಷ್ಠಾನಚೈತನ್ಯಾಖ್ಯಬ್ರಹ್ಮಾಭೇದಭ್ರಮಃ । ಅಯಮಿತ್ಯಧಿಷ್ಠಾನಚೈತನ್ಯಮುಲ್ಲಿಖ್ಯ ತಸ್ಯ ಘಟ ಇತಿ ಘಟರೂಪತ್ವಂ ನ ವೃತ್ತಿರುಲ್ಲಿಖತೀತಿ ಭಾವಃ ॥ ೫೧೧ ॥

**ವಿವರಣೆ** - ಅಯಂ ಘಟಃ ಎಂಬ ವೃತ್ತಿಯು ಅಯಂ ಎಂದು ಅಧಿಷ್ಠಾನಚೈತನ್ಯವನ್ನು ಉಲ್ಲೇಖಿಸಿ ಘಟಃ ಎಂಬ ಅಂಶದಿಂದ ಅದಕ್ಕೆ ಘಟರೂಪತ್ವವನ್ನು (ಘಟಾಭೇದವನ್ನು) ವಿಷಯೀಕರಿಸುತ್ತದೆ ಎಂದು ಹೇಳಬೇಕು. ಆದರೆ ಅಯಂ ಎಂಬುದು ಚೈತನ್ಯೋಲ್ಲೇಖವೇ ಆಗುವುದಿಲ್ಲವಾದ್ದರಿಂದ ಈ ಕಲ್ಪನೆಯು ಸರಿಯಲ್ಲ.

**ನ ಹೀದಮಿತಿ ವಾ ಗಂಧರಸಾದ್ಯಂ ಭಾಸತೇ ದೃಶಿ ।**
**ಅತೋಧಿಷ್ಠಾನವಿಜ್ಞಾನಶೂನ್ಯೋಽಯಂ ಸ್ಯಾದ್ಕಥಂಭ್ರಮಃ ॥ ೫೧೨ ॥**

**ಅರ್ಥ** – ಗಂಧರಸಾದ್ಯಂ= ಗಂಧರಸ ಮೊದಲಾದದ್ದು, ದೃಶಿ= ಚಾಕ್ಷುಷ ಜ್ಞಾನದಲ್ಲಿ, ಇದಂ ಇತಿ= ಇದು ಎಂಬುದಾಗಿ, ನ ಹಿ ಭಾಸತೇ ವಾ= ತೋರುವುದೂ ಇಲ್ಲವಷ್ಟೆ? ಅತಃ= ಆದ್ದರಿಂದ, ಅಯಂ= ಈ, ಅಧಿಷ್ಠಾನ ವಿಜ್ಞಾನ ಶೂನ್ಯಃ= ಅಧಿಷ್ಠಾನಜ್ಞಾನರಹಿತವಾದ, ಅಯಂ= ಇದು ಘಟ ಎಂಬ ವೃತ್ತಿಯು, ಭ್ರಮಃ= ಘಟಭ್ರಮವು, ಕಥಂ= ಹೇಗೆ, ಸ್ಯಾತ್= ಬಂದೀತು?

**ಅನುವಾದ - ಚಾಕ್ಷುಷಜ್ಞಾನದಲ್ಲಿ ಇದಂ ಅಂಶದಿಂದ ಘಟದ ಗಂಧರಸಾದಿಗಳು ಭಾಸಮಾನವಾಗುವುದಿಲ್ಲ. (ಏಕೆಂದರೆ ಗಂಧರಸಾದಿಗಳು ಚಕ್ಷುರಿಂದ್ರಿಯಕ್ಕೆ ಅಯೋಗ್ಯ) ಆದ್ದರಿಂದ ಅಧಿಷ್ಠಾನಜ್ಞಾನರಹಿತವಾದ ಅಯಂ ಘಟಃ ಎಂಬ ವೃತ್ತಿಯು ಘಟವಿಷಯಕಭ್ರಮವಾಗುವುದು ಹೇಗೆ?**

**ಭಾವವಿಲಾಸಿನೀ– ದೃಶಿ ಚಾಕ್ಷುಷಜ್ಞಾನೇ ॥ ೫೧೨ ॥**

ಘಟಾಕ್ಷಸನ್ನಿಕರ್ಷೋತ್ಥಾ ಯಾ ವೃತ್ತಿಸ್ತಂ ಘಟಂ ಹಿ ಸಾ ।
ಪ್ರಾಗೇವ ಸಂತಮನ್ಯತ್ರ ಸ್ವಸ್ಮಿನ್ ವಾ ಕಲ್ಪಯೇತ್ ಕಥಂ ॥ ೫೧೩ ॥

**ಅರ್ಥ –** ಯಾ= ಯಾವುದು ಘಟಾಕ್ಷಸಂನಿಕರ್ಷೋತ್ಥಾ ಹಿ= ಘಟ ಮತ್ತು ಇಂದ್ರಿಯ ಸಂನಿಕರ್ಷದಿಂದ ಹುಟ್ಟಿದೆಯೋ, ಸಾ= ಆ, ವೃತ್ತಿಃ= ವೃತ್ತಿಯು, ಪ್ರಾಕ್ ಏವ= ಮೊದಲೇ, ಸಂತಂ= ಇರುವ, ತಂ= ಆ, ಘಟಂ= ಗಡಿಗೆಯನ್ನು, ಅನ್ಯತ್ರ= ಬೇರೆ ಕಡೆ, ಸ್ವಸ್ಮಿನ್ ವಾ= ತನ್ನಲ್ಲಾಗಲೀ, ಕಥ= ಹೇಗೆ, ಕಲ್ಪಯೇತ್= ಕಲ್ಪಿಸೀತು.

**ಅನುವಾದ - ಘಟಚಕ್ಷುಸ್ಸನ್ನಿಕರ್ಷಜನ್ಯವಾದ ಆ ವೃತ್ತಿಯು ವೃತ್ತಿಗಿಂತ ಮೊದಲೇ ಸಿದ್ಧ ವಾದ ಘಟವನ್ನು ತನ್ನಲ್ಲಾಗಲೀ, ಬೇರೆಕಡೆಯಲ್ಲಾಗಲೀ ಕಲ್ಪಿಸುವುದು ಹೇಗೆ?**

**ಭಾವವಿಲಾಸಿನೀ– ಅಸ್ಮಿನ್ನಪಿ ಪಕ್ಷೇ ಪ್ರಾಗುಕ್ತದೋಷದ್ವಯಂ ಚ ಸ್ಮಾರಯತಿ ॥ ಘಟೇತಿ ॥೫೧೩॥**

ವೃತ್ತ್ಯಾಽಜ್ಞಾನೇ ವಿನಷ್ಟೇ ಹಿ ಸ್ಯಾದಧಿಷ್ಠಾನದೃಗ್ ಭ್ರಮಃ ।
ವೃತ್ತಿಶ್ಚೋಕ್ತಪ್ರಕಾರೇಣ ಘಟೇ ಸತ್ಯೇವ ನಾನ್ಯಥಾ ।
ಭ್ರಮಾತ್ಪೂರ್ವಂ ಚ ಸನ್ನರ್ಥೋ ಬ್ರಹ್ಮವನ್ನ ಭ್ರಮೋದ್ಭವಃ ॥ ೫೧೪ ॥

**ಅರ್ಥ –** ವೃತ್ತ್ಯಾ= ವೃತ್ತಿಯಿಂದ, ಅಜ್ಞಾನೇ= ಅಜ್ಞಾನವು, ವಿನಷ್ಟೇ= ನಾಶ ಹೊಂದಿದ ಬಳಿಕವೇ, ಅಧಿಷ್ಠಾನ ದೃಗ್‌ಭ್ರಮಃ= ಅಧಿಷ್ಠಾನದ ಭ್ರಮವು, ಸ್ಯಾತ್ ಹಿ= ಬರುತ್ತದಷ್ಟೆ. ವೃತ್ತಿಃ ಚ= ವೃತ್ತಿಯಾದರೂ, ಉಕ್ತಪ್ರಕಾರೇಣ= ಹಿಂದೆ ಹೇಳಿದಂತೆ, ಘಟೇ= ಘಟವು, ಸತಿ ಏವ= ಇದ್ದರೆ ಮಾತ್ರ, ಉತ್ಪದ್ಯತೇ= ಹುಟ್ಟುತ್ತದೆ, ಅನ್ಯಥಾ= ಇಲ್ಲದಿದ್ದರೆ, ನ= ಹುಟ್ಟುವುದಿಲ್ಲ, ಚ= ಮತ್ತು, ಭ್ರಮಾತ್= ಭ್ರಮಕ್ಕಿಂತ, ಪೂರ್ವಂ= ಮುಂಚೆ, ಸನ್= ಇರುವ, ಅರ್ಥಃ= ವಸ್ತುವು, ಬ್ರಹ್ಮವತ್= ಬ್ರಹ್ಮನಂತೆ, ಭ್ರಮೋದ್ಭವಂ= ಭ್ರಮಜನ್ಯವಲ್ಲ.

**ಅನುವಾದ - ವೃತ್ತಿಯಿಂದ ಅಜ್ಞಾನವು ನಾಶಹೊಂದಿದರೆ ಮಾತ್ರ ಅಧಿಷ್ಠಾನಜ್ಞಾನ ಉಂಟಾಗುತ್ತದೆ. ಅದು ಭ್ರಮರೂಪ ಎಂದು ಹೇಳಬೇಕು. ಹಿಂದೆ ಹೇಳಿದ ರೀತಿಯಿಂದ ಘಟವು ಮೊದಲೇ ಇದ್ದರೆ ಮಾತ್ರ ಘಟವೃತ್ತಿಯು ಉಂಟಾಗುತ್ತದೆ. ಭ್ರಮಕ್ಕೆ ಪೂರ್ವದಲ್ಲಿಯೇ ಇರುವ ವಸ್ತುವು ಭ್ರಮಜನ್ಯವಲ್ಲ, ಭ್ರಮಕ್ಕಿಂತ**

ಪೂರ್ವದಲ್ಲಿಯೇ ಇರುವ ಬ್ರಹ್ಮನು ಹೇಗೆ ಭ್ರಮಜನ್ಯವಲ್ಲವೋ ಅದೇ ರೀತಿ ಈ ವಸ್ತುವೂ ಸಹ.

**ಭಾವವಿಲಾಸಿನೀ**– ಚೈತನ್ಯಭ್ರಮಪಕ್ಷೇಽಪ್ಯೇನಂ ದೋಷಮುಪಪಾದಯತಿ ॥ ವೃತ್ತ್ಯೇತಿ ॥ ಉಕ್ತಃ ವೃತ್ತಿಭ್ರಮಪಕ್ಷೇ ॥ ೫೧೪ ॥

**ಕಿಂಚಾಹಂ ಘಟ ಇತ್ಯೇವ ಚೈತನ್ಯಂ ಚೇದ್ಘಟಭ್ರಮಃ ।**
**ಗೌರೋಽಹಮಿತಿವತ್ತರ್ಹಿ ಭ್ರಾಂತಿಃ ಸಾ ಪ್ರಾತಿಭಾಸಿಕೀ ॥ ೫೧೫ ॥**

**ನ ಚೇತನೋ ಘಟ ಇತಿ ಬಾಧಸ್ಯಾದ್ಯೈವ ದರ್ಶನಾತ್ ।**
**ವ್ಯಾವಹಾರಿಕತಾ ತಸ್ಮಾದ್ಘಟಾದೇರ್ಜಗತೋ ಗತಾ ॥ ೫೧೬ ॥**

**ಅರ್ಥ** – ಕಿಂ ಚ= ಅದಲ್ಲದೇ, ಅಹಂ ಘಟಃ ಇತಿ= ಅಹಂ ಘಟಃ ಎಂಬ ಚೈತನ್ಯಂ, ಏವ= ಚೈತನ್ಯವೇ, ಘಟ ಭ್ರಮಃ ಚೇತ್= ಘಟಭ್ರಮವಾಗುವುದಾದರೆ, ತರ್ಹಿ= ಆ ಪಕ್ಷದಲ್ಲಿ, ಅದ್ಯ ಏವ= ಈಗಲೇ (ಶೀಘ್ರದಲ್ಲಿಯೇ), ಚೇತನಃ ನ ಘಟಃ ಇತಿ= ಚೇತನವು ಘಟವಲ್ಲ ಎಂಬ, ಬಾಧಸ್ಯ ದರ್ಶನಾತ್= ಬಾಧಜ್ಞಾನವು ಇರುವುದರಿಂದ, ಸಾ= ಆ, ಭ್ರಾಂತಿಃ= ಅಹಂ ಘಟಃ ಎಂಬ ಭ್ರಾಂತಿಯು, ಗೌರಃ ಅಹಂ ಇತಿ ವತ್= ನಾನು ಬೆಳ್ಳಗಿದ್ದೇನೆ ಎಂಬ ಭ್ರಮದಂತೆ, ಪ್ರಾತಿಭಾಸಿಕೇ= ಪ್ರಾತಿಭಾಸಿಕವು, ಸ್ಯಾತ್= ಆದೀತು, ತಸ್ಮಾತ್= ಆದ್ದರಿಂದ, ಘಟಾದೇಃ= ಗಡಿಗೆ ಮೊದಲಾದ, ಜಗತಃ= ಪ್ರಪಂಚದ, ವ್ಯಾವಹಾರಿಕತಾ= ವ್ಯಾವಹಾರಿಕತ್ವವು, ಗತಾ= ಹೊರಟು ಹೋಯಿತು.

**ಅನುವಾದ** - ಅಲ್ಲದೇ ಅಯಂ ಘಟಃ ಎಂಬ ಚೈತನ್ಯವೇ ಘಟಭ್ರಮವಾಗುವುದಾದರೆ ಆ ಭ್ರಮವು ಗೌರೋಽಹಂ (ನಾನು ಬೆಳ್ಳಗಿದ್ದೇನೆ) ಎಂಬ ಭ್ರಮದಂತೆ ಪ್ರಾತಿಭಾಸಿಕವೇ ಆಗಬೇಕು. ಏಕೆಂದರೆ ಚೇತನವು ಘಟವಲ್ಲ ಎಂಬ ಬಾಧಜ್ಞಾನವು ಈಗಲೇ ಇದೆ. ಆದ್ದರಿಂದ ಜಗತ್ತಿನ ವ್ಯಾವಹಾರಿಕತ್ವವು ಹೊರಟು ಹೋಯಿತು.

**ಭಾವವಿಲಾಸಿನೀ**– ಚೈತನ್ಯಭ್ರಮಪಕ್ಷೇ ದೋಷಾಂತರಂ ಚಾಹ – **ಕಿಂಚೇತಿ** ॥ ಸಾ ಅಹಂ ಘಟ ಇತ್ಯಾದಿರೂಪಾ । ಘಟಶ್ಚೇತನೋ ನೇತಿಸಂಬಂಧಃ ಅದ್ಯೈವ ಬ್ರಹ್ಮಜ್ಞಾನಾತ್ ಪೂರ್ವಮೇವ ಇತ್ಯರ್ಥಃ । ತಸ್ಮಾತ್ ಇದಾನೀಮೇವ ಬಾಧಿತಭ್ರಾಂತಿವಿಷಯತ್ವಾತ್ ॥ ೫೧೫-೫೧೬ ॥

**ವಿವರಣೆ** -ಬ್ರಹ್ಮಜ್ಞಾನದಿಂದ ಮಾತ್ರ ಬಾಧ್ಯವಾದರೆ ಆ ಭ್ರಮವು ವ್ಯಾವಹಾರಿಕ. ಬ್ರಹ್ಮಜ್ಞಾನವನ್ನು ಬಿಟ್ಟು ಬೇರೆ ಜ್ಞಾನದಿಂದ ಬಾಧ್ಯವಾದರೆ ಆ ಭ್ರಮೆಯು ಪ್ರಾತಿಭಾಸಿಕ ಎಂದು ಅದ್ವೈತಮತ. ಚೇತನವು ಘಟವಲ್ಲ ಎಂಬ ಜ್ಞಾನವು ಅವನಿಗೆ ಅಭಿಮತವಾದ ಬ್ರಹ್ಮಜ್ಞಾನಕ್ಕಿಂತ ಭಿನ್ನವಾದುದು. ಆದ್ದರಿಂದ ಬಾಧ್ಯವಾದ ಘಟಾದಿ ಜಗತ್ತು

ಪ್ರಾತಿಭಾಸಿಕವೇ ಆಗಬೇಕಾಗುತ್ತದೆ. ಅದು ವ್ಯಾವಹಾರಿಕ ಎಂಬ ಅದ್ವೈತಸಿದ್ಧಾಂತವು ಬಿದ್ದುಹೋಗುತ್ತದೆ.

ಇದಮಿತ್ಯನ್ಯದುಲ್ಲಿಖ್ಯ ತದಭೇದಂ ಘಟೇ ಯದಿ ।
ಉಲ್ಲಿಖೇತ್ ಬ್ರಹ್ಮಚೈತನ್ಯಂ ಸಾ ಭ್ರಾಂತಿರಪಿ ಪೂರ್ವವತ್ ।
ನಾಸಾವಯಮಿತಿ ಸ್ಪಷ್ಟಂ ಬಾಧಸ್ಯೈವಾದ್ಯದರ್ಶನಾತ್ ॥ ೫೧೭ ॥

**ಅರ್ಥ** – ಬ್ರಹ್ಮ ಚೈತನ್ಯಂ= ಬ್ರಹ್ಮಚೈತನ್ಯವು, ಇದಂ ಇತಿ= ಇದು ಎಂಬುದಾಗಿ, ಅನ್ಯತ್= ಬೇರೆಯ ವಸ್ತುವನ್ನು, ಉಲ್ಲಿಖ್ಯ= ಉಲ್ಲೇಖ ಮಾಡಿ, ತದಭೇದಂ= ಆ ವಸ್ತುವಿನ ಅಭೇದವನ್ನು, ಘಟೇ= ಘಟದಲ್ಲಿ, ಉಲ್ಲಿಖೇತ್= ಉಲ್ಲೇಖ ಮಾಡುವುದಾದರೆ, ತರ್ಹಿ= ಆ ಪಕ್ಷದಲ್ಲಿ, ಅಸೌ= ಘಟವು, ಅಯಂ ನ= ಆ ಇನ್ನೊಂದು ವಸ್ತುವಲ್ಲ, ಇತಿ= ಎಂಬ, ಬಾಧಸ್ಯ= ಬಾಧದ (ಬಾಧವು), ಅದ್ಯ ಏವ= ಈಗಲೇ, ಸ್ಪಷ್ಟಂ= ಸ್ಪಷ್ಟವಾಗಿ, ದರ್ಶನಾತ್= ಅನುಭವವಿರುವುದರಿಂದ, ಸಾ= ಆ, ಭ್ರಾಂತಿಃ ಅಪಿ= ಭ್ರಮವೂ ಕೂಡ, ಪೂರ್ವವತ್= ಹಿಂದಿನಂತೆ ಪ್ರಾತಿಭಾಸಿಕವೇ, ಸ್ಯಾತ್= ಆದಿತು.

**ಅನುವಾದ** - ಇದಂ ಎಂದು ಬೇರೆ ಜಡವನ್ನಾಗಲೀ ಅಥವಾ ಚೈತನ್ಯವನ್ನಾಗಲೀ ಉಲ್ಲೇಖಿಸಿ ಅದರ ಅಭೇದವನ್ನು ಬ್ರಹ್ಮಚೈತನ್ಯವು ಘಟದಲ್ಲಿ ಉಲ್ಲೇಖಿಸುವುದಾದರೆ, ಆ ಭ್ರಾಂತಿಯೂ ಕೂಡ ಹಿಂದೆ ಹೇಳಿದಂತೆ ಪ್ರಾತಿಭಾಸಿಕವೇ ಆಗುತ್ತದೆ. ಏಕೆಂದರೆ ಆ ವಸ್ತುವು ಘಟವಲ್ಲ ಎಂಬ ಬ್ರಹ್ಮಜ್ಞಾನೇತರ ಬಾಧಜ್ಞಾನವು ಈಗಲೇ ಇದೆ.

**ಭಾವವಿಲಾಸಿನೀ**– ಅನ್ಯಜ್ಜಡಾಂತರಂ ಚೈತನ್ಯಾಂತರಂ ವಾ । ಸಾ ಭ್ರಾಂತಿಃ ಅಧಿಷ್ಠಾನ ಚೈತನ್ಯರೂಪಾ ಅಯಂ ಘಟ ಇತಿ ಭ್ರಾಂತಿಃ । ಪೂರ್ವವತ್ ಪ್ರಾತಿಭಾಸಿಕೀತ್ಯರ್ಥಃ । ಅಸೌ ಅಯಮಿತ್ಯುಲ್ಲಿಖ್ಯಮಾನೋ ದೇಶಕಾಲಾದಿಃ । ಅಯಂ ಘಟಃ ॥ ೫೧೭॥

ತಸ್ಮಿನ್ ವಾ ದೇಶಕಾಲೇ ವಾ ಘಟೋऽಸ್ತೀತ್ಯುಲ್ಲಿಖೇದ್ ಯದಿ ।
ನಾಯಂ ತರ್ಹಿ ಘಟಾರೋಪಃ ಪ್ರಾಕ್‌ಸಿದ್ಧಸ್ಯ ವಿಶಿಷ್ಟಧೀಃ ॥ ೫೧೮ ॥

**ಅರ್ಥ** – ಬ್ರಹ್ಮಚೈತನ್ಯವು= ಬ್ರಹ್ಮಚೈತನ್ಯವು, ಸ್ವಸ್ಮಿನ್ ವಾ= ತನ್ನಲ್ಲಿಯಾಗಲೀ, ದೇಶಕಾಲೇವಾ= ದೇಶಕಾಲಗಳಲ್ಲಿಯಾಗಲೀ, ಘಟಃ ಅಸ್ತಿ ಇತಿ= ಘಟವು ಇದೆ ಎಂಬುದಾಗಿ, ಯದಿ= ಒಂದು ಪಕ್ಷದಲ್ಲಿ, ಉಲ್ಲಿಖೇತ್= ಉಲ್ಲೇಖಿಸುವುದಾದರೆ, ತರ್ಹಿ= ಆ ಪಕ್ಷದಲ್ಲಿ, ಅಯಂ= ಈ ಜ್ಞಾನವು, ಘಟಾರೋಪಃ= ಘಟದ ಭ್ರಾಂತಿಯು, ನ= ಅಲ್ಲ, ಪರಂ ತು= ಹೊರತಾಗಿ, ಪ್ರಾಕ್ ಸಿದ್ಧಸ್ಯ= ಮೊದಲೇ ಜ್ಞಾತವಾದ ಘಟದ ವಿಶಿಷ್ಟಧೀಃ= ಸ್ವವೃತ್ತಿತ್ವ ಅಥವಾ ದೇಶಕಾಲಾದಿ ವೃತ್ತಿತ್ವಗಳನ್ನು, ವಿಷಯೀಕರಿಸುವ ಜ್ಞಾನವಾಗಿದೆ.

**ಅನುವಾದ** - ಅಧಿಷ್ಠಾನಚೈತನ್ಯರೂಪವಾದ ಜ್ಞಾನವು ತನ್ನಲ್ಲಾಗಲೀ, ದೇಶಕಾಲ-ಗಳಲ್ಲಾಗಲೀ ಘಟವು ಇರುವುದೆಂದು ಉಲ್ಲೇಖಿಸುವುದಾದರೆ, ಈ ಜ್ಞಾನವು ಭ್ರಾಂತಿಯೇ ಇಲ್ಲ. ಮೊದಲೇ ಸಿದ್ಧವಾದ ಘಟದ ವೈಶಿಷ್ಟ್ಯವನ್ನು ತನ್ನಲ್ಲಾಗಲೀ, ದೇಶದಲ್ಲಾಗಲೀ,ಅಥವಾ ಕಾಲದಲ್ಲಾಗಲೀ ವಿಷಯೀಕರಿಸುತ್ತದೆ.

**ಭಾವವಿಲಾಸಿನೀ**– ನನ್ವಧಿಷ್ಠಾನಚೈತನ್ಯಂ ಸ್ವಾಭೇದಮನ್ಯಾಭೇದಂ ವಾ ನೋಲ್ಲಿಖತಿ । ಕಿಂ ತ್ವಯಂ ದೇಶಕಾಲಸಂಬಂಧೀಮತ್ಸಂಬಂಧೀ ವೇತಿ ದೇಶಕಾಲಾದ್ಯಾಶ್ರಿತತ್ವಮೇವೋಲ್ಲಿಖತಿ । ತಚ್ಚೇದಾನೀಮ-ಬಾಧಿತಮೇವೇತಿ ಕಥಂ ಪ್ರಾತಿಭಾಸಿಕತ್ವಮಿತಿ ಚೇತ್ । ಸತ್ಯಮ್ । ಏವಂ ತರ್ಹಿ ಪ್ರಮಾತ್ವಮೇವ ಸ್ಯಾತ್ ನ ಭ್ರಾಂತಿತ್ವಮಿತ್ಯಾಹ – ಸ್ವಸ್ಮಿನ್ನಿತಿ ॥ ದೇಶಸಹಿತಃ ಕಾಲಃ ದೇಶಕಾಲಃ । ವಿಶಿಷ್ಟಧೀಃ ಮಯಿ ಮಕುಟಮಿತಿವತ್ ಭೂತಲೇ ಘಟ ಇತಿವದ್ವಾ ವಿಶಿಷ್ಟಮಾನಮೇವೇತ್ಯರ್ಥಃ ॥ ೫೧೮ ॥

**ವಿವರಣೆ** - ಅಧಿಷ್ಠಾನಚೈತನ್ಯವು ತನ್ನ ಅಭೇದವನ್ನಾಗಲೀ, ಅನ್ಯವಸ್ತುವಿನ ಅಭೇದವನ್ನಾಗಲೀ ಘಟದಲ್ಲಿ ವಿಷಯೀಕರಿಸುವುದಿಲ್ಲ. ಆದರೆ ಘಟವು ನನ್ನ ಸಂಬಂಧಿ ಅಥವಾ ದೇಶಕಾಲಸಂಬಂಧಿ ಎಂಬ ದೇಶಕಾಲಾದ್ಯಾಶ್ರಿತತ್ವವನ್ನೇ ಉಲ್ಲೇಖಿಸುತ್ತದೆ. ಅದಕ್ಕೆ ಈಗ ಬಾಧವಿರುವುದಿಲ್ಲ. ಆದ್ದರಿಂದ ಜಗತ್ತಿಗೆ ಪ್ರಾತಿಭಾಸಿಕತ್ವಾಪತ್ತಿ ಹೇಗೆ ಎಂಬ ಶಂಕೆಗೆ ಹಾಗಾದರೆ ಈ ಜ್ಞಾನವು ಪ್ರಮಾ ಆಗುತ್ತದೆಯೇ ಹೊರತು ಭ್ರಾಂತಿಯೇ ಅಲ್ಲ. ಆದ್ದರಿಂದ ಜಗತ್ತಿಗೆ ಮಿಥ್ಯಾತ್ವವು ಸಿದ್ಧವಾಗುವುದಿಲ್ಲ ಎಂದು ಇಲ್ಲಿ ಸಮಾಧಾನ ಹೇಳುತ್ತಾರೆ.

ಅಧಿಷ್ಠಾನೋಲ್ಲೇಖಶೂನ್ಯತ್ವಾಚ್ಚ ನಾಯಂ ಭ್ರಮಸ್ತವ ।
ನ ಹಿ ದೇಶಾದ್ಯಧಿಷ್ಠಾನಂ ನಾಪ್ಯತ್ರಾಯಮಿತಿ ಭ್ರಮಃ ॥ ೫೧೯ ॥

**ಅರ್ಥ** – ಅಯಂ= ಅಯಂ ಘಟಃ ಎಂಬ ಚೈತನ್ಯಾತ್ಮಕವಾದ ಜ್ಞಾನವು ಅಧಿಷ್ಠಾನೋಲ್ಲೇಖ ಶೂನ್ಯತ್ವಾತ್= ಅಧಿಷ್ಠಾನದ ಉಲ್ಲೇಖದಿಂದ ರಹಿತವಾಗಿರುವುದರಿಂದ, ತವ= ನಿನ್ನ ಮತದಲ್ಲಿ, ಭ್ರಮಃ= ಭ್ರಾಂತಿಯು, ನ= ಅಲ್ಲ, ಅತ್ರ= ಇಲ್ಲಿ, ದೇಶಾದಿ= ದೇಶ, ಕಾಲ, ಬ್ರಹ್ಮನು, ನ ಹಿ ಅಧಿಷ್ಠಾನಂ= ಅಧಿಷ್ಠಾನವಲ್ಲ. ಅಪಿ= ಮತ್ತು, ಅತ್ರ ಅಯಂ ಇತಿ= ಇಲ್ಲಿ ಇದು (ಎಂದು ಆಧಾರಾಧೇಯಗಳನ್ನು ವಿಷಯೀಕರಿಸುವ) ಎಂಬ ಜ್ಞಾನವು, ಭ್ರಮಃ ನ= ಭ್ರಮವಲ್ಲ.

**ಅನುವಾದ** - ಅಧಿಷ್ಠಾನದ ಉಲ್ಲೇಖವಿಲ್ಲದಿರುವುದರಿಂದ ಅಯಂ ಘಟಃ ಎಂಬ ಚೈತನ್ಯಾತ್ಮಕವಾದ ಜ್ಞಾನವು ಭ್ರಮವಲ್ಲ. ಇಲ್ಲಿ ದೇಶವಾಗಲೀ, ಕಾಲವಾಗಲೀ ಆಧಾರತಯಾ ತೋರುವ ಬ್ರಹ್ಮನಾಗಲೀ ಅಧಿಷ್ಠಾನವಲ್ಲ. ತತ್ಸಂಬಂಧವನ್ನು ವಿಷಯೀಕರಿಸುವ ಅಯಂ ಅಂಶವು ಭ್ರಾಂತಿಯೂ ಅಲ್ಲ.

**ಭಾವವಿಲಾಸಿನೀ–** ದೇಶಕಾಲಾದೀತ್ಯತ್ರಾದಿಪದೇನ ಆಧಾರತಯಾ ಪ್ರಮೀಯಮಾನಂ ಚೈತನ್ಯಂ ಚ ಗೃಹ್ಯತೇ । ಧರ್ಮಿಣಸ್ತಾದಾತ್ಮ್ಯಾರೋಪಂ ವದತಾ ಪರೇಣ ತಸ್ಯಾಪ್ಯಧಿಷ್ಠಾನತ್ವಾನಂಗೀಕಾರಾತ್।

**ವಿವರಣೆ-** ಪರರು ಧರ್ಮಿಯ ತಾದಾತ್ಮ್ಯಾರೋಪವನ್ನೇ ಆರೋಪಿತವಾದದ್ದರಲ್ಲಿ ಒಪ್ಪುವುದರಿಂದ ಇಲ್ಲಿ ಧರ್ಮಿಯು ಆಧಾರವಾಗಿ ತೋರುವುದರಿಂದ ದೇಶ, ಕಾಲ ಅಥವಾ ಬ್ರಹ್ಮರೂಪವಾದ ಧರ್ಮಿಯು ಅಧಿಷ್ಠಾನವಾಗಲಾರದು.

**ಅತಸ್ಮಿನ್ ತದಿತಿ ಜ್ಞಾನಂ ಭ್ರಮಃ ಕಿಲ ಭವನ್ಮತೇ ।**
**ಇದಂ ರಜತಮಿತ್ಯೇವ ಭ್ರಮಃ ಸರ್ವತ್ರ ದೃಶ್ಯತೇ ॥ ೫೨೦ ॥**

**ಅರ್ಥ –** ಭವನ್ಮತೇ= ನಿಮ್ಮ ಮತದಲ್ಲಿ, ಅತಸ್ಮಿನ್= ಒಂದು ವಸ್ತುವಿನವಿಲ್ಲದಿರುವ ಎರಡನೇ ವಸ್ತುವಿನಲ್ಲಿ, ತತ್ ಇತಿ= ಆ ವಸ್ತುವೆಂಬ, ಜ್ಞಾನಂ= ಜ್ಞಾನವು, ಭ್ರಮಃ ಕಿಲ= ಭ್ರಾಂತಿಯಷ್ಟೆ? ಸರ್ವತ್ರ= ಎಲ್ಲೆಡೆ ಇದಂ ರಜತಂ ಇತಿ ಏವ= ಇದಂ ರಜತಂ ಎಂಬುದಾಗಿಯೇ, ಭ್ರಮಃ= ಧರ್ಮಿಯ ಆರೋಪವು, ದೃಶ್ಯತೇ= ಕಾಣಲ್ಪಡುತ್ತದೆ.

**ಅನುವಾದ -** ತಾನು ಇಲ್ಲದಿರುವಲ್ಲಿ ತನ್ನನ್ನು ವಿಷಯೀಕರಿಸುವ ಜ್ಞಾನವು ನಿಮ್ಮ ಮತದಂತೆ ಭ್ರಮವಷ್ಟೆ? ಇದಂ ರಜತಂ (ಇದು ಬೆಳ್ಳಿ) ಎಂಬ ಧರ್ಮ್ಯಾರೋಪವೇ ಎಲ್ಲಾ ಸ್ಥಳದಲ್ಲಿಯೂ ಅನುಭವಕ್ಕೆ ಬರುತ್ತದೆ.

**ಭಾವವಿಲಾಸಿನೀ–** ಭ್ರಮಃ ಸರ್ವತ್ರ ದೃಶ್ಯತ ಇತ್ಯತ್ರ ಭ್ರಮಪದೇನ ಧರ್ಮ್ಯಾರೋಪೋ ಗ್ರಾಹ್ಯಃ॥೫೨೦॥

**ಅಥೇಯಂ ಮಾನಸೀವೃತ್ತಿರಧಿಷ್ಠಾನಚಿತಂ ಹಿ ತಾಂ ।**
**ಇದಮಿತ್ಯುಲ್ಲಿಖಂತ್ಯಸ್ಯಾ ಘಟಾಭೇದಂ ಚ ಪಶ್ಯತಿ ।**
**ಅಯಮೇವ ಘಟಾರೋಪಃ ಇತಿ ಪಕ್ಷೋ ನ ಶೋಭತೇ ॥ ೫೨೧ ।**

**ಅಧಿಷ್ಠಾನದೃಗೇವಾಧ್ಯಸ್ತಸ್ಯಾರೋಪೋ ಹಿ ತೇ ಮತೇ ।**
**ಅತೀಂದ್ರಿಯಂ ರೂಪಶೂನ್ಯಂ ಕಥಂ ಚಾಕ್ಷುಷಧೀಃ ಸ್ಪೃಶೇತ್ ॥ ೫೨೨ ॥**

**ಅರ್ಥ –** ಅಥ= ಅಥವಾ, ಮಾನಸೀವೃತ್ತಿಃ ಏವ= ಮಾನಸವೃತ್ತಿಯೇ, ತಾಂ= ಆ, ಅಧಿಷ್ಠಾನ ಚಿತಂ= ಅಧಿಷ್ಠಾನ ಚೈತನ್ಯವನ್ನು, ಇದಂ ಇತಿ= ಇದು ಎಂಬುದಾಗಿ, ಉಲ್ಲಿಖಂತೀ= ಉಲ್ಲೇಖ ಮಾಡುತ್ತಾ, ಅಸ್ಯಾಃ= ಈ ಅಧಿಷ್ಠಾನ ಚೈತನ್ಯಕ್ಕೆ, ಘಟಾಭೇದಂ ಚ= ಘಟದ ಅಭೇದವನ್ನೂ ಕೂಡ, ಪಶ್ಯತಿ= ವಿಷಯೀಕರಿಸುತ್ತದೆ, ಅಯಂ ಏವ= ಇದೇ, ಘಟಾರೋಪಃ= ಘಟದ ಆರೋಪ ಎಂಬ ಶಬ್ದದ ಅರ್ಥ, ಇತಿ ಪಕ್ಷಃ ಅಪಿ= ಎಂಬ

ಅಭಿಪ್ರಾಯವೂ ಕೂಡ, ನ ಶೋಭತೇ= ಉಚಿತವಾದದ್ದಲ್ಲ, ತೇ= ನಿನ್ನ, ಮತೇ= ಮತದಲ್ಲಿ, ಅಧಿಷ್ಠಾನದೃಕ್ ಏವ= ಅಧಿಷ್ಠಾನ ಚೈತನ್ಯವೇ, ಅಧ್ಯಸ್ತಸ್ಯ= ಅಧ್ಯಸ್ತ ವಸ್ತುವಿನ, ಆರೋಪಃ ಹಿ= ಆರೋಪವಾಗಿದೆಯಷ್ಟೆ? ಅತೀಂದ್ರಿಯಂ= ಇಂದ್ರಿಯಗಳಿಗೆ ನಿಲುಕದ, ರೂಪಶೂನ್ಯಂ= ರೂಪರಹಿತವಾದ ಅಧಿಷ್ಠಾನ ಚೈತನ್ಯವನ್ನು, ಚಾಕ್ಷುಷಧೀಃ= ಚಕ್ಷುರಿಂದ್ರಿಯದಿಂದ ಜನ್ಯವಾದ ಮಾನಸವೃತ್ತಿಯು, ಕಥಂ= ಹೇಗೆ, ಸ್ಪೃಶೇತ್= ಉಲ್ಲೇಖಿಸಲು ಸಾಧ್ಯ.

**ಅನುವಾದ** - ಅಥವಾ ಅಯಂ ಘಟಃ ಎಂಬ ಮಾನಸವೃತ್ತಿಯೇ ಅಧಿಷ್ಠಾನಚೈತನ್ಯವನ್ನು ಇದಂ (ಇದು) ಎಂದು ಉಲ್ಲೇಖಮಾಡಿ ಅದರಲ್ಲಿ ಘಟಾಭೇದವನ್ನು ವಿಷಯೀಕರಿಸುತ್ತದೆ. ಇದೇ ಘಟಾರೋಪ ಎಂಬ ಶಬ್ದಾರ್ಥ ಎಂದು ಹೇಳುವುದೂ ಸರಿಯಲ್ಲ. ಏಕೆಂದರೆ ಅಧಿಷ್ಠಾನಚೈತನ್ಯವೇ ಅಧ್ಯಸ್ತದ ಆರೋಪ ಎಂದು ನಿನ್ನ ಮತ. ಅತೀಂದ್ರಿಯವಾದ ರೂಪಹೀನವಾದ ಅಧಿಷ್ಠಾನಚೈತನ್ಯವನ್ನು ಚಕ್ಷುರ್ಜನ್ಯವಾದ ಮಾನಸವೃತ್ತಿಯು ಹೇಗೆ ಉಲ್ಲೇಖಿಸಲು ಸಾಧ್ಯ?

**ಭಾವವಿಲಾಸಿನೀ**– ಪ್ರಾತಿಭಾಸಿಕತ್ವದೋಷಂ ಪರಿಹರ್ತುಂ ಪುನರ್ವೃತ್ತಿಪಕ್ಷಮಾಲಂಬತೇ ॥ **ಅಥೇತಿ**॥ ಅಸ್ಯಾಃ ಅಧಿಷ್ಠಾನಚಿತಃ । ಸಾಮಾನ್ಯತ ಏವ ಚೈತನ್ಯಾಭೇದಗ್ರಹಣಾತ್ ನ ಪ್ರಾತಿಭಾಸಿಕತ್ವಮಿತಿ ಭಾವಃ॥೫೨೧-೫೨೨॥

ಯದಿ ಸ್ಪೃಶೇತ್ತದಾಽಜ್ಞಾನಂ ವಿನಾಶ್ಯ ಸ್ಪಷ್ಟಮೇವ ತತ್ ।
ಉಲ್ಲಿಖಂತೀ ಜಡಾಭೇದಂ ಚೇತನೇ ಕಥಮುಲ್ಲಿಖೇತ್ ॥ ೫೨೩ ॥

**ಅರ್ಥ** – ಯದಿ= ಒಂದು ಪಕ್ಷದಲ್ಲಿ, ಮಾನಸವೃತ್ತಿಯು ಅಧಿಷ್ಠಾನಚೈತನ್ಯವನ್ನು ಸ್ಪೃಶೇತ್= ಉಲ್ಲೇಖಿಸುತ್ತದೆಂದಾದರೆ, ತದಾ= ಆ ಪಕ್ಷದಲ್ಲಿ, ಅಜ್ಞಾನಂ= ಅಜ್ಞಾನವನ್ನು, ವಿನಾಶ್ಯ= ನಾಶಪಡಿಸಿ, ಸ್ಪಷ್ಟಂ= ಸ್ಪಷ್ಟವಾಗಿ, ತತ್ ಏವ= ಆ ಚೈತನ್ಯವನ್ನೇ, ಉಲ್ಲೇಖಂತೀ= ವಿಷಯೀಕರಿಸುತ್ತಿರುವ ಆ ಮಾನಸವೃತ್ತಿಯು, ಜಡಾಭೇದಂ= ಜಡಾಭೇದವನ್ನು, ಚೇತನೇ= ಚೇತನದಲ್ಲಿ, ಕಥಂ= ಹೇಗೆ, ಉಲ್ಲಿಖೇತ್= ಉಲ್ಲೇಖ ಮಾಡೀತು?

**ಅನುವಾದ** - ಒಂದು ಪಕ್ಷ ಚೈತನ್ಯವನ್ನು ಉಲ್ಲೇಖಿಸುವುದಾದರೆ ಅಜ್ಞಾನವನ್ನು ನಾಶ ಮಾಡಿ ಸ್ಪಷ್ಟವಾಗಿ ಚೈತನ್ಯವನ್ನು ವಿಷಯೀಕರಿಸುವುದರಿಂದ ಆ ಚೈತನ್ಯದಲ್ಲಿ ಜಡಾಭೇದವನ್ನು ಹೇಗೆ ವಿಷಯೀಕರಿಸುತ್ತದೆ?

**ಭಾವವಿಲಾಸಿನೀ**– ಅಸ್ಮಿನ್ನಪಿ ಪಕ್ಷೇ ಪ್ರಾಗುಕ್ತಂ ದೂಷಣದ್ವಯಂ ಸ್ಮಾರಯನ್ ಪ್ರಾತಿಭಾಸಿಕತ್ವಮೇವ ಸ್ಥಾಪಯತಿ ॥ **ಅಧಿಷ್ಠಾನೇತಿ** ॥ ಅಜ್ಞಾನಂ ಅಧಿಷ್ಠಾನಚೈತನ್ಯಾವರಕಾಜ್ಞಾನಮ್ । ತತ್ ಅಧಿಷ್ಠಾನಚೈತನ್ಯಮ್ ॥ ೫೨೩ ॥

**ಇದಾನೀಮೇವ ಬಾಧೇನ ಸ್ಯಾತ್ತದಾ ಪ್ರಾತಿಭಾಸಿಕೀ ।**
**ಏವಂ ಚ ಘಟಕುಡ್ಯಾದೇರ್ವ್ಯಾವಹಾರಿಕತಾ ಗತಾ ।**
**ಭಿಕ್ಷಾ ಜಿಘೃಕ್ಷಯಾ ಯಾಂತಂ ಶ್ವಾ ಜಗ್ರಾಹ ಪದೇ ಕಿಲ ॥ ೫೨೪ ॥**

**ಅರ್ಥ –** ತದಾ= ಆಗ, ಇಯಂ ಭ್ರಾಂತಿಃ= ಈ ಭ್ರಾಂತಿಯು, ಇದಾನೀಂ ಏವ= ಸದ್ಯದಲ್ಲಿಯೇ, ಬಾಧೇನ= ಬಾಧವಿರುವುದರಿಂದ, ಪ್ರಾತಿಭಾಸಿಕೀ= ಪ್ರಾತಿಭಾಸಿಕವು, ಸ್ಯಾತ್= ಆದೀತು, ಏವಂ ಚ= ಹೀಗಿರುವುದರಿಂದ, ಘಟಕುಡ್ಯಾದೇಃ= ಗಡಿಗೆ, ಗೋಡೆ ಮೊದಲಾದ ಜಗತ್ತಿಗೆ, ವ್ಯಾವಹಾರಿಕತಾ= ವ್ಯಾವಹಾರಿಕತ್ತ್ವವು, ಗತಾ= ಬಿದ್ದು ಹೋಯಿತು, ಭಿಕ್ಷಾಜಿಘೃಕ್ಷಯಾ= ಭಿಕ್ಷೆಯನ್ನು ಬೇಡುವ ಇಚ್ಛೆಯಿಂದ, ಯಾಂತಂ= ಹೋಗುತ್ತಿರುವ ವ್ಯಕ್ತಿಯನ್ನು, ಶ್ವಾ= ನಾಯಿಯು, ಪದೇ= ಕಾಲಿನಲ್ಲಿ, ಜಗ್ರಾಹ ಕಿಲ= ಹಿಡಿಯಿತಷ್ಟೆ.

**ಅನುವಾದ -** **ಈಗಲೇ ಬಾಧವಿರುವುದರಿಂದ ಇಂತಹ ಭ್ರಮಸಿದ್ಧವಾದ ಜಗತ್ತು ಪ್ರಾತಿಭಾಸಿಕವಾಗುತ್ತದೆ. ಘಟ, ಕುಡ್ಯ ಮೊದಲಾದುವುಗಳಿಗೆ ನಿನಗೆ ಅಭಿಮತವಾದ ವ್ಯಾವಹಾರಿಕತ್ವವು ಹೊರಟುಹೋಯಿತು. ಇದು ಭಿಕ್ಷೆ ಬೇಡಲು ಹೋದವನನ್ನು ನಾಯಿಯು ಕಾಲಿನಲ್ಲಿ ಕಚ್ಚಿ ಹಿಡಿಯಿತು ಎಂಬ ಗಾದೆಗೆ ಸಮವಾಯಿತು.**

**ಭಾವವಿಲಾಸಿನೀ–** ತದಾ ಸ್ಪಷ್ಟಂ ಚೈತನ್ಯಮುಲ್ಲಿಖ್ಯ ಘಟಾಭೇದಸ್ಯಾಪ್ಯುಲ್ಲೇಖೇ ನಹಿ ಸ್ವಪ್ನದೃಷ್ಟೇ ಶುನಿ ಅಯಮಶ್ವ ಇತಿ ಸಾಮಾನ್ಯತಃ ಪ್ರತೀತಾವಪಿ ಬಾಧೋ ನೇತ್ಯಸ್ತಿ । ಏವಂ ಚೇದಮಾಭಾಣಕಮಾಗತಂ ಪರಸ್ಯೇತ್ಯಾಹ –**ಭಿಕ್ಷೇತಿ** ॥ ವ್ಯಾವಹಾರಿಕತ್ವಾಖ್ಯೇಷ್ಟಲಾಭಾಯ ಪ್ರಯತಮಾನಸ್ಯ ಪ್ರಾತಿಭಾಸಿಕತ್ವಾಖ್ಯ-ಮಹಾದೋಷಪ್ರಾಪ್ತೇರಿತಿ ಭಾವಃ ॥೫೨೪॥

**ವಿವರಣೆ -** ಪರರು ಜಗತ್ತಿಗೆ ವ್ಯಾವಹಾರಿಕತ್ವರೂಪವಾದ ಮಿಥ್ಯಾತ್ವವನ್ನು ಸಾಧಿಸಬೇಕು. ಅದಕ್ಕಾಗಿ ಅವರು ಅಯಂಘಟಃ ಎಂಬ ಜ್ಞಾನಕ್ಕೆ ಭ್ರಮತ್ವವನ್ನು ಉಪಪಾದನೆಮಾಡಬೇಕು. ಈ ಭ್ರಮತ್ವವನ್ನು ಉಪಪಾದನೆ ಮಾಡುವ ಭರದಲ್ಲಿ ಜಗತ್ತು ಪ್ರಾತಿಭಾಸಿಕ ಎಂದು ಸಿದ್ಧವಾಗುವುದರಿಂದ ಅದು ಅವರಿಗೆ ಅನಿಷ್ಟವಾದುದು. ವ್ಯಾವಹಾರಿಕತ್ವರೂಪವಾದ ಭಿಕ್ಷೆಯನ್ನು ಬೇಡಲು ಹೋದವನಿಗೆ ಪ್ರಾತಿಭಾಸಿಕತ್ವ ರೂಪವಾದ ನಾಯಿಯು ಕಡಿದಂತಾಯಿತು.

**ಅತೋ ದೇಶೇ ಚ ಕಾಲೇ ಚ ಘಟೋಽಸ್ತೀತ್ಯೇವ ಸೋಲ್ಲಿಖೇತ್ ।**
**ಅಯಂ ಚ ನ ಘಟಾರೋಪಃ ಪ್ರಾಕ್‌ಸಿದ್ಧಸ್ಯ ವಿಶಿಷ್ಟಧೀಃ ॥ ೫೨೫ ॥**

**ಅರ್ಥ –** ಅತಃ= ಆದ್ದರಿಂದ, ಸಾ= ಅಯಂ ಘಟಃ ಎಂಬ ವೃತ್ತಿಯು, ಘಟಃ= ಗಡಿಗೆಯು, ದೇಶೇ= ದೇಶದಲ್ಲಿ, ಕಾಲೇ ಚ= ಕಾಲದಲ್ಲಿಯೂ ಕೂಡ, ಅಸ್ತಿ= ಇದೆ, ಇತಿ ಏವ= ಎಂಬುದಾಗಿಯೇ, ಉಲ್ಲಿಖೇತ್= ಉಲ್ಲೇಖ ಮಾಡೀತು, ಅಯಂ ಚ= ಇದಾದರೂ,

ಘಟಾರೋಪಃ= ಘಟದ ಆರೋಪವು, ನ= ಅಲ್ಲ, ಕಿಂ ತು= ಹೊರತಾಗಿ, ಪ್ರಾಕ್ಸಿದ್ಧಸ್ಯ= ಮೊದಲೇ ಇರುವ ವಸ್ತುವಿಗೆ, ವಿಶಿಷ್ಟಧೀಃ= ದೇಶಕಾಲ ವೈಶಿಷ್ಟ್ಯವನ್ನು ವಿಷಯೀಕರಿಸುವ ಜ್ಞಾನವಾಗಿದೆ.

**ಅನುವಾದ** - ಆದ್ದರಿಂದ ಆ ಜ್ಞಾನವು ದೇಶದಲ್ಲಿ ಮತ್ತು ಕಾಲದಲ್ಲಿ ಘಟವು ಇದೆ ಎಂದಿಷ್ಟೇ ಉಲ್ಲೇಖಿಸುತ್ತದೆ. ಇದು ಘಟಾರೋಪವಲ್ಲ ಮತ್ತೇನೆಂದರೆ ಮೊದಲೇ ಸಿದ್ಧವಾದ ಘಟದಲ್ಲಿ ದೇಶಕಾಲಗಳ ವೈಶಿಷ್ಟ್ಯವನ್ನು ವಿಷಯೀಕರಿಸುವ ವಿಶಿಷ್ಟ ವಸ್ತುವಿಷಯಕವಾದ ಜ್ಞಾನ.

**ಭಾವವಿಲಾಸಿನೀ**— ಸಾ ಅಯಂ ಘಟ ಇತಿ ವೃತ್ತಿಃ ॥ ೫೨೫ ॥

ಯದ್ಯಜ್ಞಾನಾನ್ನ ವೈಕಲ್ಯಂ ಬ್ರಹ್ಮಣಸ್ತರ್ಹಿ ನ ಭ್ರಮಃ ।
ಯದ್ಯಜ್ಞಾನೇನ ವೈಕಲ್ಯಂ ಬ್ರಹ್ಮಣಸ್ತರ್ಹಿ ನ ಭ್ರಮಃ ॥ ೫೨೬ ॥

ಪ್ರಮಾಣಸ್ಯ ಹ್ಯವೈಕಲ್ಯೇ ದೋಷಾಭಾವಾದ್ಗ್ರಹಃ ಪ್ರಮಾ ।
ಪ್ರಮಾಣಸ್ಯ ಹಿ ವೈಕಲ್ಯಾತ್ ಘಟಸ್ಯಾಗ್ರಹಣಂ ತವ ॥ ೫೨೭ ॥

**ಅರ್ಥ** — ಯದಿ= ಒಂದು ಪಕ್ಷದಲ್ಲಿ, ಬ್ರಹ್ಮಣಃ= ಬ್ರಹ್ಮನಿಗೆ, ಅಜ್ಞಾನಾತ್= ಅಜ್ಞಾನದಿಂದ, ವೈಕಲ್ಯಂ= ವೈಕಲ್ಯವು, ನ= ಇಲ್ಲದಿದ್ದರೆ, ತರ್ಹಿ= ಆ ಪಕ್ಷದಲ್ಲಿ, ಅಧಿಷ್ಠಾನ ಚೈತನ್ಯವು, ಭ್ರಮಃ= ಭ್ರಾಂತಿಯು, ನ= ಆಗಲಾರದು, ಯದಿ= ಒಂದು ಪಕ್ಷದಲ್ಲಿ, ಬ್ರಹ್ಮಣಃ= ಬ್ರಹ್ಮನಿಗೆ, ಅಜ್ಞಾನೇನ= ಅಜ್ಞಾನದಿಂದ, ವೈಕಲ್ಯಂ= ವೈಕಲ್ಯವು ಬರುವುದಾದರೆ, ತರ್ಹಿ= ಆ ಪಕ್ಷದಲ್ಲಿಯೂ ಕೂಡ, ಅರ್ಥಗ್ರಹಣ ಶಕ್ತಿಯಿಲ್ಲದಿರುವುದರಿಂದ, ನ ಭ್ರಮಃ= ಅಧಿಷ್ಠಾನ ಚೈತನ್ಯವು ಭ್ರಮವಾಗುವುದಿಲ್ಲ.

ಪ್ರಮಾಣಸ್ಯ= ಪ್ರಮಾಣಕ್ಕೆ, ಅವೈಕಲ್ಯೇ= ವೈಕಲ್ಯವುಂಟಾಗದಿದ್ದರೆ, ದೋಷಾಭಾವಾತ್= ಅಪ್ರಾಮಾಣ್ಯಕಾರಣವಾದ ದೋಷವೇ ಇಲ್ಲದಿರುವುದರಿಂದ, ಗ್ರಹಃ= ಅಯಂ ಘಟಃ ಎಂಬ ಜ್ಞಾನವು, ಪ್ರಮಾ= ಯಥಾರ್ಥಜ್ಞಾನವೇ ಆಗುತ್ತದೆ, ಪ್ರಮಾಣಸ್ಯ= ಪ್ರಮಾಣಕ್ಕೆ, ವೈಕಲ್ಯಾತ್= ವೈಕಲ್ಯವಿರುವುದರಿಂದ, ತವ= ನಿನಗೆ, ಘಟಸ್ಯ= ಘಟದ, ಅಗ್ರಹಣಂ ಹಿ= ಅಗ್ರಹಣ (ಪ್ರಕಾಶಾಭಾವ) ವಷ್ಟೆ.

**ಅನುವಾದ** - ಅಜ್ಞಾನದಿಂದ ಬ್ರಹ್ಮನಿಗೆ ವೈಕಲ್ಯವುಂಟಾಗದಿದ್ದರೆ ದೋಷವಿಲ್ಲದಿರುವುದರಿಂದ ಅಧಿಷ್ಠಾನಚೈತನ್ಯವು ಭ್ರಮವಾಗಲಾರದು. ಅಜ್ಞಾನದಿಂದ ಬ್ರಹ್ಮನಿಗೆ ವೈಕಲ್ಯವುಂಟಾದರೆ ಅರ್ಥಗ್ರಹಣಶಕ್ತಿ ಇಲ್ಲದಿರುವದರಿಂದ ಅಧಿಷ್ಠಾನಚೈತನ್ಯವು ಭ್ರಮವಾಗುವುದಿಲ್ಲ, ಪ್ರಮಾಣಕ್ಕೆ ವೈಕಲ್ಯವುಂಟಾಗದಿದ್ದರೆ,

ವೈಕಲ್ಯವೇ ದೋಷವಾದ ಕಾರಣ, ಪ್ರಮಾಣಕ್ಕೆ ದೋಷವಿಲ್ಲದಿರುವುದರಿಂದ, ಅದು ಭ್ರಮವಾಗಲಾರದು. ಪ್ರಮಾಣಕ್ಕೆ ವೈಕಲ್ಯವುಂಟಾದರೆ ಅದಕ್ಕೆ ಅರ್ಥವನ್ನು ಗ್ರಹಿಸುವ ಸಾಮರ್ಥ್ಯವೇ ಇರುವುದಿಲ್ಲವಾದ್ದರಿಂದ ಆಗಲೂ ಅದು ಭ್ರಮವಾಗಲಾರದು.

**ಭಾವವಿಲಾಸಿನೀ–** ಉಭಯತಃ ಪಾಶಾರಜ್ಜ್ವಾ ಚ ಭ್ರಮಂ ವಾರಯತಿ ।। **ಯದೀತಿ** ।। ಏತದೇವೋಪಪಾದಯತಿ ।। **ಪ್ರಮಾಣಸ್ಯೇತಿ** ।। ಘಟಪ್ರಮಾಣಭೂತಾಧಿಷ್ಠಾನ ಚೈತನ್ಯಸ್ಯೇತ್ಯರ್ಥಃ । ಅವೈಕಲ್ಯೇ ಅಜ್ಞಾನೇನ ವೈಕಲ್ಯಾಭಾವೇ । ದೋಷಭಾವಾತ್ ಅಪ್ರಾಮಾಣ್ಯಕಾರಣೇಭೂತದೋಷಾಭಾವಾತ್ । ಗ್ರಹ ಅಯಂ ಘಟ ಇತಿ ಜ್ಞಾನಮ್ । ಪ್ರಮಾ ಪ್ರಮೈವ ಸ್ಯಾತ್ ನ ಭ್ರಮಃ । ಅಪ್ರಾಮಾಣ್ಯಪರತಸ್ತ್ವಾದಿನಾ ತ್ವಯಾಪಿ ದೋಷಾದೇವ ಜಗದ್ಭ್ರಮ ಇತಿ ವಕ್ತವ್ಯಮ್ । ದೋಷಶ್ಚಾಜ್ಞಾನಮೇವ ತೇನ ಚಾಧಿಷ್ಠಾನಚೈತನ್ಯಸ್ಯ ವೈಕಲ್ಯಾಭಾವೇನಾಸೌ ತಸ್ಯ ದೋಷ ಇತಿ ತಚ್ಚೈತನ್ಯಂ ಘಟಾದಿಪ್ರಮೈವ ಸ್ಯಾತ್ ನ ಭ್ರಮ ಇತಿ ಭಾವಃ । ಪ್ರಮಾಣಸ್ಯಾಧಿಷ್ಠಾನಚೈತನ್ಯಸ್ಯ । ವೈಕಲ್ಯಾತ್ ಅಜ್ಞಾನಕೃತವೈಕಲ್ಯಾತ್ । ತವ ಮತೇ ಪ್ರಮಾಣವೈಕಲ್ಯಾತ್ ಘಟಾದೀನಾಮಗ್ರಹಣಂ ವದತೋ ಮತೇ ವೈಕಲ್ಯೇ ಸತಿ ಕಥಂ ಘಟಾದಿ ಗ್ರಹಣರೂಪೋ ಭ್ರಮಃ ಸ್ಯಾತ್ ಏವಂ ಚ ಪ್ರಮಾಣಸ್ಯಾಜ್ಞಾನಕೃತವೈಕಲ್ಯಾಭಾವೇ ದೋಷಾಭಾವಾನ್ನ ಭ್ರಮಃ । ವೈಕಲ್ಯೇ ಚಾರ್ಥಗ್ರಹಣಶಕ್ತ್ಯಭಾವಾನ್ನ ಭ್ರಮ ಇತಿ ನೋಭಯಥಾಪಿ ಜಗದ್ಭ್ರಮ ಇತಿ ಭಾವಃ।।

**ವಿವರಣೆ -** ಪ್ರಮಾಣ ಎಂದರೆ ಅಧಿಷ್ಠಾನಚೈತನ್ಯ. ವೈಕಲ್ಯ ಎಂದರೆ ಅಜ್ಞಾನಕೃತವಾದ ಆವರಣ. ಪ್ರಾಮಾಣ್ಯಸ್ವತಸ್ತ್ವವನ್ನು ಒಪ್ಪಿದವರಿಗೆ ಜ್ಞಾನವು ಸ್ವತಃ ಪ್ರಮಾಣ, ದೋಷವಿದ್ದಾಗ ಮಾತ್ರ ಅಪ್ರಮಾಣ ಎಂದು ನಿಯಮವಿದೆ. ವೈಕಲ್ಯವು ಒಂದು ದೋಷ. ವೈಕಲ್ಯವಿಲ್ಲದಿದ್ದರೆ ಆ ಜ್ಞಾನವು ಪ್ರಮಾಣವೇ ಆಗಬೇಕು. ಆದ್ದರಿಂದ ಅಧಿಷ್ಠಾನ ಚೈತನ್ಯವು ಭ್ರಮವಾಗುವುದಿಲ್ಲ. ವೈಕಲ್ಯವು ಉಂಟಾದರೆ ಆವರಣ ಪ್ರಯುಕ್ತವಾಗಿ ಅಧಿಷ್ಠಾನಚೈತನ್ಯಕ್ಕೆ ಅರ್ಥಗ್ರಹಣಸಾಮರ್ಥ್ಯವೇ ಇರುವುದಿಲ್ಲ. ಭ್ರಾಂತಿಯಲ್ಲಿಯೂ ಅರ್ಥಗ್ರಹಣವು ಇದ್ದೇ ಇರಬೇಕು. ವೈಕಲ್ಯದುಷ್ಟವಾದ ಚೈತನ್ಯಕ್ಕೆ ಅರ್ಥಗ್ರಹಣ ಸಾಮರ್ಥ್ಯವೇ ಇಲ್ಲದಿರುವುದರಿಂದ ಆಗಲೂ ಅದು ಭ್ರಮವಾಗಲು ಸಾಧ್ಯವಿಲ್ಲ.

**ಯದ್ಯಾರೋಪಂ ವಿನಾಪಿ ಸ್ಯಾದ್ ಘಟಾದೀನಾಮವಸ್ಥಿತಿಃ ।**
**ತರ್ಹ್ಯನಾರೋಪಿತಂ ಸರ್ವಂ ಜಗದ್‌ಬ್ರಹ್ಮವದೇವ ಹಿ ।। ೫೨೮ ।।**

**ಅರ್ಥ –** ಯದಿ= ಒಂದು ಪಕ್ಷದಲ್ಲಿ, ಆರೋಪಂ ವಿನಾ ಅಪಿ= ಆರೋಪವಿಲ್ಲದೆಯೂ, ಘಟಾದೀನಾಂ= ಘಟ ಮೊದಲಾದ ವಸ್ತುಗಳಿಗೆ, ಅವಸ್ಥಿತಿಃ= ಅಸ್ತಿತ್ವವು ಇರುವುದಾದರೆ, ತರ್ಹಿ= ಆ ಪಕ್ಷದಲ್ಲಿ, ಸರ್ವಂ ಜಗತ್= ಸಂಪೂರ್ಣ ಪ್ರಪಂಚವು, ಬ್ರಹ್ಮವತ್ ಏವ= ಬ್ರಹ್ಮನಂತೆಯೇ, ಅನಾರೋಪಿತಂ ಸ್ಯಾತ್= ಆರೋಪಿತವಲ್ಲದ್ದೇ ಆದೀತು.

**ಅನುವಾದ** - ಆರೋಪವಿಲ್ಲದೆಯೂ ಘಟಾದಿಗಳಿಗೆ ಅವಸ್ಥಿತಿ ಇರುವುದಾದರೆ ಘಟಾದಿ ಜಗತ್ತು ಬ್ರಹ್ಮನಂತೆ ಅನಾರೋಪಿತವೇ ಸರಿ.

**ಭಾವವಿಲಾಸಿನೀ** – ಪ್ರಕರಣಾಂತರೇಣಾಪ್ಯುಭಯತಃ ಪಾಶಾರಜ್ಜುವಮಾಹ – ಯದ್ಯಾರೋಪಮಿತಿ॥೩೨೮ ॥

**ವಿವರಣೆ** - ಘಟಾದಿಜಗತ್ತು ಅನಾರೋಪಿತ, ಭ್ರಮಕ್ಕಿಂತಲೂ ಪೂರ್ವದಲ್ಲಿಯೇ ಇರುವುದರಿಂದ ಬ್ರಹ್ಮನಂತೆ ಎಂಬ ಅನುಮಾನವನ್ನು ಇಲ್ಲಿ ಸೂಚಿಸುತ್ತಾರೆ.

ಯದ್ಯಾರೋಪಂ ವಿನಾ ನ ಸ್ಯಾತ್ ಸರ್ವಂ ಪ್ರಾತೀತಿಕಂ ಭವೇತ್ ।
ಪ್ರಮಾಣಸ್ಯ ಹಿ ವೈಕಲ್ಯಾತ್ ಕಸ್ಯಾಗ್ರಹಣಮುಚ್ಯತೇ ।
ಅಜ್ಞಾನಾದ್ಯೇವ ತಸ್ಮಾತ್ತೇ ಪ್ರಾತೀತಿಕಮಭೂನ್ಮತೇ ॥ ೩೨೯ ॥

**ಅರ್ಥ** – ಯದಿ= ಒಂದು ಪಕ್ಷದಲ್ಲಿ, ಜಗತ್= ಪ್ರಪಂಚವು, ಆರೋಪಂ ವಿನಾ= ಆರೋಪವಿಲ್ಲದೆಯೇ, ನ ಸ್ಯಾತ್= ಇರುವುದಿಲ್ಲವೆಂದಾದರೆ, ತರ್ಹಿ= ಆ ಪಕ್ಷದಲ್ಲಿ, ಸರ್ವಂ= ಎಲ್ಲವೂ, ಪ್ರಾತೀತಿಕಂ= ಪ್ರಾತಿಭಾಸಿಕವು, ಭವೇತ್= ಆದೀತು, ಪ್ರಮಾಣಸ್ಯ= ಪ್ರಮಾಣದ, ವೈಕಲ್ಯಾತ್= ವೈಕಲ್ಯದಿಂದ, ಕಸ್ಯ= ಯಾವ ವಸ್ತುವಿನ, ಅಗ್ರಹಣಂ= ವಿಷಯೀಕರಿಸದಿರುವಿಕೆಯು, ಭವತಾ= ನಿನ್ನಿಂದ, ಉಚ್ಯತೇ= ಹೇಳಲ್ಪಡುತ್ತದೆ, ಅಪಿ ಚ= ಅದಲ್ಲದೇ, ತೇ= ನಿನ್ನ, ಮತೇ= ಮತದಲ್ಲಿ, ಅಜ್ಞಾನಾದಿ ಏವ= ಅಜ್ಞಾನ ಮೊದಲಾದದ್ದು ಮಾತ್ರ, ತಸ್ಮಾತ್= ಆ ಕಾರಣದಿಂದ, ಪ್ರಾತೀತಿಕಂ= ಪ್ರಾತಿಭಾಸಿಕವು, ಅಭೂತ್= ಆಯಿತು?

**ಅನುವಾದ** - ಘಟಾದಿ ಜಗತ್ತು ಆರೋಪವಿಲ್ಲದೆಯೇ ಇಲ್ಲವೆಂದಾದರೆ ಎಲ್ಲವೂ ಪ್ರಾತಿಭಾಸಿಕವಾಗಬೇಕಾಗುತ್ತದೆ. ಪ್ರಮಾಣವೈಕಲ್ಯವಿರುವುದರಿಂದ ಯಾವುದನ್ನೂ ವಿಷಯೀಕರಿಸುವುದಿಲ್ಲ ಎಂಬ ನಿನ್ನ ಮತದಲ್ಲಿ ಯಾವುದನ್ನೂ ಎಂದರೆ ಏನು ಅರ್ಥ? ಆದ್ದರಿಂದ ನಿನ್ನ ಮತದಲ್ಲಿ ಅಜ್ಞಾನಾದಿಗಳೇ ಪ್ರಾತಿಭಾಸಿಕವಾಗುತ್ತವೆ (ಎಂಬ ಆಪತ್ತಿ ಬರುತ್ತದೆ.)

**ಭಾವವಿಲಾಸಿನೀ**– ಪ್ರತೀತಿಕಂ ಪ್ರತೀತಿದಶಾಯಾಮೇವ ವಿದ್ಯಮಾನಮ್ ॥ ೩೨೯ ॥

ಆರೋಪಕುಂಠನಂ ಚೇತ್ ಸ್ಯಾತ್ತದಾ ಘಟನಿವರ್ತನೇ ।
ನಿರ್ಘಟಂ ಜಗದೇತತ್ಸ್ಯಾತ್ ಸನ್ನಿಕರ್ಷಾದ್ಯಸಂಭವಾತ್ ॥ ೩೩೦ ॥

ಚಕ್ಷುರ್ವೃತ್ತೇರಯೋಗೇನ ಕುಂಠನೇ ನಾಸ್ತಿ ಕುಂಠನಮ್ ।
ಅತಃ ಪುನರ್ಭ್ರಮಾಯೋಗಾದಘಟಂ ಭೂತಲಂ ಭವೇತ್ ॥ ೩೩೧ ॥

**ಅರ್ಥ –** ಯದಿ= ಒಂದು ಪಕ್ಷದಲ್ಲಿ, ಆರೋಪಕುಂಠನಂ= ಆರೋಪದ ಕುಂಠಿತತ್ತ್ವವು, ಸ್ಯಾತ್ ಚೇತ್= ಇರುವುದಾದರೆ, ತದಾ= ಆ ಪಕ್ಷದಲ್ಲಿ, ಘಟನಿವರ್ತನೇ= ಆರೋಪಿತವಾದ ಒಂದು ಘಟವು ನಿವೃತ್ತವಾದಾಗ ಸನ್ನಿಕರ್ಷಾದ್ಯಸಂಭವಾತ್= ಸನ್ನಿಕರ್ಷ ಮೊದಲಾದದ್ದು ಇರಲು ಸಾಧ್ಯವಿಲ್ಲವಾದ್ದರಿಂದ, ಚಕ್ಷುರ್ವೃತ್ತೇಃ= ಚಾಕ್ಷುಷವೃತ್ತಿಯ, ಅಯೋಗೇನ= ಸಾಧ್ಯತೆಯು ಇಲ್ಲವಾದ್ದರಿಂದ, ಏತತ್= ಈ ಪ್ರಪಂಚವು ನಿರ್ಘಟಂ= ಘಟರಹಿತವು, ಸ್ಯಾತ್= ಆದೀತು, ಕುಂಠನೇ= ಕುಂಠನಕ್ಕೆ, ಕುಂಠನಂ= ಕುಂಠನವು, ನಾಸ್ತಿ= ಇಲ್ಲ. ಅತಃ= ಆದ್ದರಿಂದ, ಪುನಃ= ಮತ್ತೊಮ್ಮೆ, ಭ್ರಮಾಯೋಗಾತ್= ಭ್ರಾಂತಿಯು ಹುಟ್ಟುವ ಸಾಧ್ಯತೆಯು ಇಲ್ಲವಾದ್ದರಿಂದ, ಭೂತಲಂ= ಜಗತ್ತು, ಅಘಟಂ= ಘಟರಹಿತವು, ಭವೇತ್= ಆದೀತು.

**ಅನುವಾದ -** ಪ್ರಾತಿಭಾಸಿಕತ್ವರೂಪವಾದ ದೋಷವನ್ನು ಪರಿಹಾರಮಾಡಲು ಕ್ವಚಿತ್ ಆರೋಪವಿರುವುದಿಲ್ಲವೆಂದಾದರೆ, ಆರೋಪವು ಇಲ್ಲದಿರುವಾಗ ಆರೋಪಿತವೂ ಇಲ್ಲದಿರುವುದರಿಂದ, ಒಂದು ಸಲ ಘಟಾರೋಪವು ನಷ್ಟವಾದಾಗ ಘಟವೂ ನಷ್ಟವಾಗಿ ಜಗತ್ತಿನಲ್ಲಿ ಎಲ್ಲಿಯೂ ಘಟವಿಲ್ಲವೆಂದಾಗಬೇಕಾಗುತ್ತದೆ.

**ಭಾವವಿಲಾಸಿನೀ–** ಆರೋಪಕುಂಠನಂ ಪ್ರತೀತಿಕತ್ವಪರಿಹಾರಾಯ ಘಟಾದೀನಾಂ ಕದಾಚಿದಾರೋಪಾಭಾವ ಇತ್ಯರ್ಥಃ । ನಿರ್ಘಟಮ್ ಆರೋಪಾಭಾವದಶಾಯಾಮ್ ಆರೋಪಿತಸ್ಯಾಪ್ಯಭಾವಾವಶ್ಯಂಭಾವೇನ ಘಟರಹಿತಮ್ । ಕುಂಠನೇ ಆರೋಪಕುಂಠನೇ । ಕುಂಠನಂ ಪರಿಹಾರಃ । ಪ್ರತೀತಿಕತ್ವಪರಿಹಾರಾಯಾಂಗೀಕೃತಾರೋಪಕುಂಠನಸ್ಯ ಪುನರಾರೋಪೋಪಾಯಾಭಾವೇನ ಕದಾಪಿ ಪರಿಹಾರೋ ನ ಸ್ಯಾದಿತಿ ಭಾವಃ । ಅತಃ ಘಟಾಭಾವೇನ ಘಟಾಪರೋಕ್ಷವೃತ್ತಿಜನಕ ಸಂಯೋಗಸ್ಯಾಪ್ಯಭಾವಾತ್ ॥ ೫೩೦-೫೩೧ ॥

**ವಿವರಣೆ -** ಘಟಾರೋಪವಿಲ್ಲದಿದ್ದಾಗ ಆರೋಪಿತಘಟವೂ ಇಲ್ಲ, ಘಟಾಭಾವವೇ ಇದೆ, ಆದ್ದರಿಂದ ಘಟಾಪರೋಕ್ಷವೃತ್ತಿಜನಕವಾದ ಸಂಯೋಗವು ಚಕ್ಷುಸ್ಸಿಗೂ ಮತ್ತು ಘಟಕ್ಕೂ ಬರಲು ಸಾಧ್ಯವಿಲ್ಲ. ಆದ್ದರಿಂದ ಪುನಃ ಘಟಾರೋಪವಿಲ್ಲದಿರುವುದರಿಂದ ಜಗತ್ತು ನಿರ್ಘಟವಾಗಬೇಕಾದೀತು. ಆರೋಪವು ಒಮ್ಮೆ ಕುಂಠಿತವಾದ ಮೇಲೆ ಆ ಕುಂಠನಕ್ಕೆ ಮತ್ತೆ ನಾಶವಿಲ್ಲವಾದ್ದರಿಂದ ಪುನಃ ಎಂದೂ ಭೂತಲದಲ್ಲಿ ಘಟ ಪ್ರತ್ಯಯವು ಬರಲಾರದು.

**ಆರೋಪಕುಂಠನೇ ಚೇತ್ ಸ್ಯಾತ್ತರ್ಹ್ಯನಾರೋಪಿತೋ ಘಟಃ ।**
**ನಾರೋಪಿತೋ ಹಿ ಸೋಽಶ್ವಃ ಸ್ಯಾದ್ಯೋಽಶ್ವಾಭಾವೇಽಪಿ ತಿಷ್ಠತಿ ॥ ೫೩೨ ॥**

**ಅರ್ಥ –** ಆರೋಪಕುಂಠನೇ ಅಪಿ= ಆರೋಪವು ಕುಂಠಿತವಾದ ಬಳಿಕವೂ ಕೂಡ, ಘಟಃ= ಘಟವು, ಸ್ಯಾತ್ ಚೇತ್= ಇರುತ್ತದೆ ಎಂದಾದರೆ, ತರ್ಹಿ= ಆ ಪಕ್ಷದಲ್ಲಿ, ಸಃ= ಆ ಘಟವು ಅನಾರೋಪಿತಃ= ಆರೋಪಿತವಲ್ಲದ್ದು, ಸ್ಯಾತ್= ಆದೀತು, ಯಃ= ಯಾವುದು,

ಅಶ್ವಾಭಾವೇ ಅಪಿ= ಅಶ್ವಾಭಾವವಿರುವಾಗಲೂ, ತಿಷ್ಠತಿಃ= ಇರುತ್ತದೋ, ಸಃ= ಆ, ಅಶ್ವಃ= ಕುದುರೆಯು, ಆರೋಪಿತಃ= ಆರೋಪಿತವಾದದ್ದು, ನ ಸ್ಯಾತ್ ಹಿ= ಆಗುವುದಿಲ್ಲವಷ್ಟೆ (ಯಥಾರ್ಥವೇ ಆಗುವುದಷ್ಟೆ?)

**ಅನುವಾದ** - ಆರೋಪಕುಂಠನವಾದಮೇಲೆಯೂ ಘಟವು ಇರುವುದಾದರೆ ಘಟವು ಅನಾರೋಪಿತವೆಂದೇ ಆಗುತ್ತದೆ. ಅಶ್ವಾಭಾವವಿರುವಾಗಲೂ ಇರುವ ಅಶ್ವವು ಅನಾರೋಪಿತವಾದುದಷ್ಟೇ?

**ಭಾವವಿಲಾಸಿನೀ**— ಆರೋಪಕುಂಠನೇ ಆರೋಪಕುಂಠನದಶಾಯಾಮಪಿ । ಸ್ಯಾತ್ ಘಟಸ್ಯಾಚ್ಚೇದಿತ್ಯರ್ಥಃ । ಆರೋಪಾಭಾವೇ ಸ್ಥಿತಸ್ಯಾನಾರೋಪಿತತ್ವಮೇವೇತ್ಯತ್ರ ದೃಷ್ಟಾಂತಮಾಹ – **ನಚೇತಿ** ॥ ಅಶ್ವಾಭಾವೇ ಅಶ್ವಾರೋಪಾಭಾವೇ ॥ ೫೩೨ ॥

ಘಟೋಽಜ್ಞಾನೇನ ಜನ್ಯಶ್ಚೇತ್ತರ್ಹೀದಂಪೂರ್ವತಾ ಕುತಃ ।
ಅಜ್ಞಾನಸ್ಯ ಬ್ರಹ್ಮಣಶ್ಚ ಸದಾ ಸರ್ವತ್ರ ವರ್ತನಾತ್ ॥ ೫೩೩ ॥

**ಅರ್ಥ** – ಘಟಃ= ಘಟವು, ಅಜ್ಞಾನೇನ= ಅಜ್ಞಾನದಿಂದ, ಜನ್ಯಃ ಚೇತ್= ಜನ್ಯವಾಗುವುದಾದರೆ, ತರ್ಹಿ= ಆ ಪಕ್ಷದಲ್ಲಿ, ಅಜ್ಞಾನಸ್ಯ= ಅಜ್ಞಾನಕ್ಕೆ, ಬ್ರಹ್ಮಣಃ ಚ= ಬ್ರಹ್ಮನಿಗೂ ಕೂಡ, ಸದಾ= ಯಾವಾಗಲೂ, ಸರ್ವತ್ರ= ಎಲ್ಲೆಡೆಯೂ, ವರ್ತನಾತ್= ಅಸ್ತಿತ್ವವು ಇರುವುದರಿಂದ, ತಸ್ಯ= ಆ ಘಟಕ್ಕೆ, ಇದಂ ಪೂರ್ವತಾ= ಇದಂ ಪೂರ್ವತ್ವವು (ಹೊಸತನವು), ಕುತಃ= ಹೇಗೆ ಬಂದಿತು?

**ಅನುವಾದ** - ಘಟವು ಅಜ್ಞಾನದಿಂದ ಜನ್ಯವಾದರೆ ಘಟಕ್ಕೆ ಇದಂಪೂರ್ವತಾ ಏಕೆ? ಅಜ್ಞಾನವೂ ಮತ್ತು ಬ್ರಹ್ಮನೂ ಯಾವಾಗಲೂ ಎಲ್ಲಾ ಕಡೆಯಲ್ಲಿಯೂ ಇರುವುದರಿಂದ ಯಾವಾಗಲೂ ಘಟೋತ್ಪತ್ತಿಯಾಗಲಿ.

**ಭಾವವಿಲಾಸಿನೀ**—ಘಟಸ್ಯ ಭ್ರಮಜನ್ಯತ್ವೇ ದೋಷಾಂತರಮಪ್ಯಾಹ—**ಘಟ ಇತಿ** ॥ ಅಜ್ಞಾನೇನ ಜ್ಞಾನೇನ ಚೇತಿ ದ್ವೇಧಾಪದಚ್ಛೇದಃ । ಜ್ಞಾನೇನ ಬ್ರಹ್ಮಜ್ಞಾನೇನ । ಘಟಾದೀನಾಮಜ್ಞಾನಸಹಿತಬ್ರಹ್ಮಭ್ರಮಮಾತ್ರಸಂಭೂತತ್ವೇ ತಯೋರುಭಯೋರಪ್ಯನಾದಿತ್ವಾತ್ ಘಟಾದೀನಾಮಪ್ಯನಾದಿತ್ವಂ ಸ್ಯಾದಿತ್ಯರ್ಥಃ ॥ ೫೩೩ ॥

**ವಿವರಣೆ** - ಘಟವು ಅಜ್ಞಾನಕಾರ್ಯ ಎಂದು ಒಪ್ಪಿದರೆ ಇಲ್ಲಿ ಬೇರೆ ದೋಷವನ್ನು ಹೇಳುತ್ತಾರೆ. ಅಜ್ಞಾನವೂ ಅನಾದಿ, ಬ್ರಹ್ಮನೂ ಅನಾದಿ, ಆದ್ದರಿಂದ ಅಜ್ಞಾನದಿಂದ ಆರೋಪಿತವಾಗಿ ಜನ್ಯವಾದ ಘಟವು ಈ ದಿನವೇ ಏಕೆ ಹುಟ್ಟಿತು, ಮೊದಲು ಏಕೆ ಹುಟ್ಟಲಿಲ್ಲ?

**ಮೃದಾದ್ಯಭಾವಾನ್ನಾಭೂಚ್ಚೇತ್ತತ್ಕಿಮಜ್ಞಾನಜಂ ನ ತೇ ।**
**ಯದಿ ತತ್ಸರ್ವಮನ್ಯಸ್ಮಾದ್ ಘಟಸ್ತಸ್ಮಾದ್ ಭವಿಷ್ಯತಿ ॥ ೫೩೪ ॥**

**ಅರ್ಥ –** ಘಟಃ= ಘಟವು, ಮೃದಾದ್ಯ ಭಾವಾತ್= ಮಣ್ಣು ಮೊದಲಾದ ಕಾರಣಗಳು ಇರಲಿಲ್ಲವಾದ್ದರಿಂದ, ಪೂರ್ವಂ= ಮೊದಲು ನ ಅಭೂತ್ ಚೇತ್= ಇರಲಿಲ್ಲವೆಂದು ಹೇಳುವುದಾದರೆ, ತೇ= ನಿನ್ನ, ಮತೇ= ಮತದಲ್ಲಿ, ತತ್= ಆ ಮಣ್ಣು ಮೊದಲಾದದ್ದು, ಅಜ್ಞಾನಜಂ= ಅಜ್ಞಾನದಿಂದ ಜನ್ಯವಾದದ್ದು, ನ ಕಿಂ= ಅಲ್ಲವೇನು? ಯದಿ= ಒಂದು ಪಕ್ಷದಲ್ಲಿ, ತತ್ ಸರ್ವಂ= ಆ ಮಣ್ಣು ಮುಂತಾದುದೆಲ್ಲವೂ, ಅನ್ಯಸ್ಮಾತ್= ಅಜ್ಞಾನ, ಬ್ರಹ್ಮಗಳಿಗಿಂತ ಭಿನ್ನಗಳಾದ, ಕುಲಾಲಾದಿಗಳಿಂದ, ಜಾಯತೇ ಚೇತ್= ಹುಟ್ಟುತ್ತದಾದರೆ, ಘಟಃ ಅಪಿ= ಘಟವೂ ಕೂಡ, ತಸ್ಮಾತ್ ಏವ= ಆ ಕಾರಣದಿಂದಲೇ, ಭವಿಷ್ಯತಿ= ಹುಟ್ಟುತ್ತದೆ.

**ಅನುವಾದ -** ಮೊದಲು ಮೃತ್ತಿಕೆ ಮೊದಲಾದವುಗಳು ಇರಲಿಲ್ಲವಾದ್ದರಿಂದ ಘಟವು ಜನಿಸಲಿಲ್ಲ ಎಂದು ಹೇಳಿದರೆ ನಿನ್ನ ಮತದಲ್ಲಿ ಮೃತ್ತಿಕೆ ಮೊದಲಾದುವುಗಳೆಲ್ಲವೂ ಅಜ್ಞಾನ ಕಾರ್ಯವಷ್ಟೇ. ಅವೆಲ್ಲವೂ ಬೇರೆಯ ಕುಲಾಲಾದಿಕಾರಣದಿಂದ ಜನಿಸುವುದಾದರೆ ಘಟವೂ ಅದರಿಂದಲೇ ಜನಿಸುತ್ತದೆ.

**ಭಾವವಿಲಾಸಿನೀ–** ತನ್ಮೃದಾದಿಕಂ । ತೇ ಮತೇ । ಘಟಾದಿವತ್ ಮೃದಾದೀನಾಮಪ್ಯಜ್ಞಾನ-ಬ್ರಹ್ಮಭ್ರಮಮಾತ್ರಜನ್ಯತ್ವೇನ ತೇಽಪ್ಯನಾದಿಕಾಲಮಾರಭ್ಯಸ್ಯುರಿತಿ ಭಾವಃ । ಅನ್ಯಸ್ಮಾತ್ ಅಜ್ಞಾನಬ್ರಹ್ಮವ್ಯತಿರೇಕಾತ್ ಕುಲಾಲಾದೇಃ ॥ ೫೩೪ ॥

**ವಿವರಣೆ -** ಮೃತ್ತಿಕೆ ಮೊದಲಾದುವುಗಳೆಲ್ಲವೂ ಘಟದಂತೆ ಅಜ್ಞಾನ ಮತ್ತು ಬ್ರಹ್ಮ ಇವೆರಡು ಮಾತ್ರದ ಕಾರ್ಯ. ಇವೆರಡೂ ಯಾವಾಗಲೂ ಇರುವುದರಿಂದ ಮೃತ್ತಿಕಾದಿಗಳೂ ಘಟವೂ ಯಾವಾಗಲೂ ಉಂಟಾಗಲಿ ಎಂಬ ಆಪತ್ತಿಯು ಇದೆ. ಮೃತ್ತಿಕಾದಿಗಳಿಗೆ ಅಜ್ಞಾನ, ಬ್ರಹ್ಮ ಇವೆರಡನ್ನು ಬಿಟ್ಟ ಕುಲಾಲಾದಿಗಳು ಕಾರಣ ಎಂದು ಒಪ್ಪುವುದಾದರೆ ಘಟಕ್ಕೂ ಅದೇ ಕಾರಣವಾಗುತ್ತದೆ. ಅದು ಅಜ್ಞಾನ ಕಾರ್ಯವಲ್ಲವಾದ್ದರಿಂದ ಘಟವನ್ನು ಸತ್ಯವೆಂದೇ ಒಪ್ಪು ಎಂದು ತಾತ್ಪರ್ಯ.

**ಯದ್ಯಜ್ಞಾನೇನ ತೇ ಬ್ರಹ್ಮ ಘಟಂ ಭ್ರಾಂತ್ಯೈವ ಕಲ್ಪಯೇತ್ ।**
**ಮಠಾಂತರ್ಘಟಸಂತಾನೈಃ ಕುತೋ ನಾಪೂರ್ಯತೇ ಸ್ಥಲೀ ॥ ೫೩೫ ॥**

**ಅರ್ಥ-** ಯದಿ= ಒಂದು ಪಕ್ಷ, ತೇ ಬ್ರಹ್ಮ= ನಿನ್ನ ಬ್ರಹ್ಮನು, ಅಜ್ಞಾನೇನ= ಅಜ್ಞಾನದಿಂದ, ಘಟಂ= ಘಟವನ್ನು, ಭ್ರಾಂತ್ಯಾ ಏವ= ಭ್ರಾಂತಿಯಿಂದಲೇ, ಕಲ್ಪಯೇತ್= ಕಲ್ಪಿಸುವುದಾದರೆ, ಮಠಾಂತಃ= ಮಠದ ಒಳಗಿರುವ, ಸ್ಥಲೀ= ಪ್ರದೇಶವು, ಘಟಸಂತಾನೈಃ= ಘಟಪರಂಪರೆಯಿಂದ, ಕುತಃ= ಏಕೆ, ನಾಪೂರ್ಯತೇ= ತುಂಬಿಹೋಗುವುದಿಲ್ಲ?

**ಅನುವಾದ** - ಒಂದು ಪಕ್ಷ ನಿನ್ನ ಬ್ರಹ್ಮನು ಅಜ್ಞಾನದಿಂದ ಘಟವನ್ನು ಭ್ರಾಂತಿಯಿಂದಲೇ ಕಲ್ಪಿಸುವುದಾದರೆ (ಸೃಷ್ಟಿಸುವುದಾದರೆ) ಮಠದ ಒಳಪ್ರದೇಶವೆಲ್ಲವೂ ಘಟ ಪರಂಪರೆಯಿಂದ ಏಕೆ ತುಂಬಿಹೋಗುವುದಿಲ್ಲ?

**ಭಾವವಿಲಾಸಿನೀ**– ಬಾಧಕಾಂತರಂ ಚಾಹ – ಯದೀತಿ ॥ ಮಠಾಂತಃ ಮಾಯಿಮಠಾಂತಃ । ಬ್ರಹ್ಮಭ್ರಮಜನ್ಯತ್ವಸ್ಯ ತೈರೇವಾಘೋಷಿತತ್ವಾದಿತಿ ಭಾವಃ ॥ ೫೩೫ ॥

**ವಿವರಣೆ** - ಮೃದಾದಿ ಸಾಮಗ್ರಿಯನ್ನು ಅಪೇಕ್ಷಿಸದೇ ಕೇವಲ ಅಜ್ಞಾನವನ್ನೇ ಉಪಾದಾನವನ್ನಾಗಿ ಮಾಡಿಕೊಂಡು ಬ್ರಹ್ಮನು ಸೃಷ್ಟಿಸುತ್ತಾನೆ ಎಂಬ ಪಕ್ಷದಲ್ಲಿ ಇಲ್ಲಿ ದೋಷವನ್ನು ಹೇಳುತ್ತಾರೆ. ಘಟಸೃಷ್ಟಿಯಾದ ಮೇಲೆಯೂ ಉಪಾದಾನವಾದ ಅಜ್ಞಾನವು ಮತ್ತು ಕಲ್ಪಕನಾದ ಬ್ರಹ್ಮನು ಇರುವುದರಿಂದ ಘಟಪರಂಪರೆಯೇ ಉಂಟಾಗಲಿ ಎಂದು ಆಪಾದನೆಯ ಅಭಿಪ್ರಾಯ.

ಕಿಂ ಕುಲಾಲಸ್ಯ ಶಾಲೈವ ಬ್ರಹ್ಮಣಃ ಕ್ಷೀರಸಾಗರಃ ।
ಕಿಂ ದೀರ್ಘಾದೀರ್ಘಬಾಧಾಭ್ಯಾಂ ವಿಶೇಷೋ ಬಾಧ್ಯವಸ್ತುನೋಃ ॥೫೩೬॥

**ಅರ್ಥ**- ಕುಲಾಲಸ್ಯ ಶಾಲೈವ= ಕುಂಬಾರನ ಮನೆಯೇ, ಬ್ರಹ್ಮಣಃ= ಬ್ರಹ್ಮನ, ಕ್ಷೀರಸಾಗರಃ ಕಿಂ= ಕ್ಷೀರಸಾಗರವೇನು? ಬಾಧ್ಯವಸ್ತುನೋಃ= ಬಾಧ್ಯವಾದ ಎರಡು ವಸ್ತುಗಳಿಗೆ, ದೀರ್ಘಾದೀರ್ಘಬಾಧಾಭ್ಯಾಂ= ಅಲ್ಪಕಾಲದಲ್ಲಿಯೇ ಬಾಧ ಮತ್ತು ಚಿರಕಾಲದ ನಂತರ ಬಾಧಗಳಿಂದ, ವಿಶೇಷಃ ಕಿಂ= ಯಾವ ವಿಶೇಷವಿದೆ?

**ಅನುವಾದ** - ಕುಲಾಲನ ಮನೆಯೇ ಬ್ರಹ್ಮನ ಕ್ಷೀರಸಾಗರವೇ? ಅಲ್ಪಕಾಲೀನವಾದ ಬಾಧ ಮತ್ತು ದೀರ್ಘಕಾಲೀನವಾದ ಬಾಧಗಳಿಂದ ಆರೋಪ್ಯವಾದ ವಸ್ತುವಿನಲ್ಲಿ ಏನಾದರೂ ವಿಶೇಷ ಉಂಟಾಗುತ್ತದೆಯೇ?

**ಭಾವವಿಲಾಸಿನೀ**– ಸ್ವಾಜ್ಞಾನೇನ ಸ್ವಭ್ರಮೇಣ ಚ ಘಟಶರಾವೋದಂಚನಾದಿಕಂ ಕುಲಾಲಶಾಲಯಾಮೇವ ಸೃಜತೀತಿ ಪರೇಣಾಂಗೀಕಾರಾತ್ತಮಪಿ ಹಸತಿ ॥ ಕಿಮಿತಿ ॥ ಬ್ರಹ್ಮಣಃ ಪರಕೀಯಬ್ರಹ್ಮಣಃ । ಮಾಯಿಮತೇ ಪ್ರಾತಿಭಾಸಿಕಸ್ಥಲೀಯಸ್ಯ ಸರ್ವಸ್ಯ ಭ್ರಮಜತ್ವೇಽಪಿ ಪ್ರಾತಿಭಾಸಿಕಂ ಯತ್ರಾಜ್ಞಾನಂ ತತ್ರೈವ ಸೃಜತಿ । ನತು ವ್ಯಾವಹಾರಿಕಮಿತಿ ಮಂದಾಶಂಕಾಂ ಪರಿಹರತಿ ॥ ಕಿಂ ದೀರ್ಘೇತಿ॥ ಬಾಧೇ ಚಿರಕಾಲೀನತ್ವಾಲ್ಪಕಾಲೀನತ್ವ ವಿಶೇಷ ಸದ್ಭಾವೇಽಪ್ಯಾರೋಪ್ಯಸ್ಯೋಭಯತ್ರಸಾಮ್ಯಾತ್ ಸೃಷ್ಟೌ ಸಾಮ್ಯಮ- ಪರಿಹಾರ್ಯಮೇವೇತಿ ಭಾವಃ ॥ ೫೩೬ ॥

**ವಿವರಣೆ** - ಬ್ರಹ್ಮನು ತನ್ನ ಅಜ್ಞಾನದಿಂದ ಮತ್ತು ತನ್ನ ಭ್ರಾಂತಿಯಿಂದ ಘಟಶರಾವಾದಿಗಳನ್ನು ಕುಲಾಲಶಾಲೆಯಲ್ಲಿಯೇ ಕಲ್ಪಿಸುತ್ತಾನೆ ಎಂಬ ಪರರ ಅಭಿಪ್ರಾಯವನ್ನು

ಇಲ್ಲಿ ಅಪಹಾಸ ಮಾಡುತ್ತಾರೆ. ಅದ್ವೈತ ಮತದಲ್ಲಿ ಪ್ರಾತಿಭಾಸಿಕವಾದ ಎಲ್ಲವೂ ಭ್ರಮಜನ್ಯವು. ಪ್ರಾತಿಭಾಸಿಕವಾದ ಅಜ್ಞಾನವು ಎಲ್ಲಿದೆಯೋ, ಅಲ್ಲಿಯೇ ಪ್ರಾತಿಭಾಸಿಕ ವಸ್ತುವಿನ ಸೃಷ್ಟಿ. ಅಲ್ಲಿ ವ್ಯಾವಹಾರಿಕ ವಸ್ತುವಿನ ಸೃಷ್ಟಿ ಇಲ್ಲ ಎಂಬ ಮಂದಾಶಂಕೆಯನ್ನು ಇಲ್ಲಿ ಪರಿಹರಿಸುತ್ತಾರೆ. ಅಲ್ಪಕಾಲದಲ್ಲಿ ಬಾಧ ಬಂದರೂ ಚಿರಕಾಲದಲ್ಲಿ ಬಾಧ ಬಂದರೂ ಎರಡು ಕಡೆಯಲ್ಲಿಯೂ ಆರೋಪವು ಸಮಾನವಾಗಿರುವುದರಿಂದ ಸೃಷ್ಟಿಯಲ್ಲಿಯೂ ಸಾಮ್ಯವನ್ನು ಅವಶ್ಯವಾಗಿ ಅಂಗೀಕರಿಸಬೇಕು ಎಂದು ಅಭಿಪ್ರಾಯ.

ಅನ್ವಯವ್ಯತಿರೇಕಾಭ್ಯಾಂ ದೃಷ್ಟಂ ಕಾರಣಚಕ್ರತಃ ।
ತತ್ತತ್ಕಾರ್ಯಸ್ಯ ಜನ್ಮಾಸ್ತು ತೇऽಜ್ಞಾನಂ ತವ ತಿಷ್ಠತು ॥ ೫೩೭ ॥

**ಅರ್ಥ-** ಅನ್ವಯವ್ಯತಿರೇಕಾಭ್ಯಾಂ= ಅನ್ವಯ ಮತ್ತು ವ್ಯತಿರೇಕಗಳಿಂದ, ಕಾರಣಚಕ್ರತಃ= ಕಾರಣ ಸಮೂಹದಿಂದ, ದೃಷ್ಟಂ= ದೃಷ್ಟವಾದ, ತತ್ತತ್ಕಾರ್ಯಸ್ಯ ಜನ್ಮ= ಆಯಾ ಕಾರ್ಯಗಳ ಜನ್ಮವು, ಅಸ್ತು= ಇರಲಿ, ತೇ ಅಜ್ಞಾನಂ= ನಿನ್ನ ಅಜ್ಞಾನವು, ತವ ತಿಷ್ಠತು= ನಿನಗೇ ಇರಲಿ.

**ಅನುವಾದ -** ಕಾರಣ ಸಮೂಹದಿಂದ ಆಯಾ ಕಾರ್ಯಗಳ ಉತ್ಪತ್ತಿಯು ಅನ್ವಯ ವ್ಯತಿರೇಕಗಳಿಂದ ಎಲ್ಲ ಕಡೆಯೂ ದೃಷ್ಟವಾಗಿದೆ. ಅದನ್ನು ಹಾಗೆಯೇ ಅಂಗೀಕರಿಸು. ಉಪಾದಾನವೆಂದು ನೀನು ಕಲ್ಪಿಸುವ ಅಜ್ಞಾನವು ನಿನ್ನ ಬಳಿಯಲ್ಲಿಯೇ ಇರಲಿ.

**ಭಾವವಿಲಾಸಿನೀ–** ದೃಷ್ಟಂ ಜನ್ಮೇತಿ ಸಂಬಂಧಃ । ಅನ್ವಯವ್ಯತಿರೇಕಾಭ್ಯಾಮಿತಿ ವದತಾऽऽಜ್ಞಾನಸ್ಯ ಘಟದೌ ತದದರ್ಶನಾತ್ತಸ್ಮಾದಜನ್ಮ ಚ ಸೂಚಯತಿ ॥ ೫೩೭ ॥

**ವಿವರಣೆ -** ದಂಡಚಕ್ರಾದಿ ಕಾರಣ ಸಮೂಹದಿಂದ ಘಟಾದಿಗಳ ಉತ್ಪತ್ತಿಯು ಅನುಭವ ಸಿದ್ಧವಾಗಿದೆ. ಅಜ್ಞಾನದಿಂದ ಘಟಾದಿಗಳ ಉತ್ಪತ್ತಿಯ ವಿಷಯದಲ್ಲಿ ಯಾವ ಅನ್ವಯ ವ್ಯತಿರೇಕಗಳೂ ಅನುಭವ ಸಿದ್ಧವಾಗಿಲ್ಲ. ಆದ್ದರಿಂದ ಅಜ್ಞಾನದಿಂದ ಘಟದ ಉತ್ಪತ್ತಿಯ ಕಲ್ಪನೆಯು ಅಪ್ರಾಮಾಣಿಕವಾದುದು ಎಂದು ಅಭಿಪ್ರಾಯ.

ಯದೀದಮಂಶೋ ಬ್ರಹ್ಮ ಸ್ಯಾದನಿದಂರೂಪತಾ ಕಥಂ ।
ಸ್ಥೈರ್ಯಾಸಿದ್ಧಿಃ ಪದಾರ್ಥಾನಾಂ ದೇಶಕಾಲಾವಿವಕ್ಷಣೇ ॥ ೫೩೮ ॥

**ಅರ್ಥ-** ಯದಿ= ಒಂದು ಪಕ್ಷ, ಇದಮಂಶಃ= ಅಯಂ ಘಟಃ ಎಂಬಲ್ಲಿ ತೋರುವ ಇದಂ ಅಂಶವು, ಬ್ರಹ್ಮಸ್ಯಾತ್= ಬ್ರಹ್ಮನೇ ಆದರೆ ಬ್ರಹ್ಮನಿಗೆ, ಅನಿದಂರೂಪತಾ= ಇದಂರೂಪತ್ವಾಭಾವವು (ಪ್ರತ್ಯಕ್ತ್ವವು), ಕಥಂ= ಹೇಗೆ ಉಪಪನ್ನವಾಗುತ್ತದೆ, ದೇಶಕಾಲಾವಿವಕ್ಷಣೇ= ಇದಂ ಅಂಶದಿಂದ ದೇಶಕಾಲಗಳ ಪ್ರತೀತಿ ಇಲ್ಲವೆಂದಾದರೆ, ಪದಾರ್ಥಾನಾಂ= ಪದಾರ್ಥಗಳಿಗೆ, ಸ್ಥೈರ್ಯಾಸಿದ್ಧಿಃ= ಸ್ಥಿರತ್ವವೇ ಸಿದ್ಧವಾಗುವುದಿಲ್ಲ.

**ಅನುವಾದ -** ಅಯಂ ಘಟಃ ಎಂಬ ಜ್ಞಾನದಲ್ಲಿ ತೋರುವ ಇದಂ ಅಂಶವು ಬ್ರಹ್ಮನೇ ಆದರೆ ಬ್ರಹ್ಮನಿಗೆ ಅನಿದಂ ರೂಪತ್ವವು (ಪ್ರತ್ಯಕ್ತ್ವವು) ಹೇಗೆ ಉಪಪನ್ನವಾಗುತ್ತದೆ? ಇದಂ ಶಬ್ದವು ದೇಶಕಾಲಗಳನ್ನು ಉಲ್ಲೇಖಿಸದಿದ್ದರೆ ಪದಾರ್ಥಗಳಿಗೆ ಸ್ಥಿರತ್ವವೇ ಸಿದ್ಧವಾಗುವುದಿಲ್ಲ.

**ಭಾವವಿಲಾಸಿನೀ–** ಅಯಂ ಘಟ ಇತಿ ಜ್ಞಾನಸ್ಯೇದಂಶೇನ ಚೈತನ್ಯೋಲ್ಲೇಖಾಂಗೀಕಾರೇ ಪುನರಪಿ ದೂಷಣದ್ವಯಮಾಹ – ಯದಿತಿ ॥ ಬ್ರಹ್ಮಣಃ ಪರೇಣಾಂಗೀಕೃತಮನಿದಂ ಪದಾರ್ಥತ್ವಮ್ । ಸೋಽಯಂ ಘಟ ಇತಿ ಪ್ರತ್ಯಭಿಜ್ಞಯಾ ತದ್ದೇಶಕಾಲಸ್ಥಿತಸ್ಯೈವೇತದ್ದೇಶಕಾಲೇಽಪಿ ಸ್ಥಿತಿ- ಬೋಧನಾತ್ । ಘಟಾದೀನಾಂ ಸ್ಥೈರ್ಯಮಿತಿ ಕ್ಷಣಿಕತ್ವವಾದಿನಂ ಪ್ರತಿ ಪರೇಣಾಪ್ಯುಚ್ಯತೇ । ತದಪಿ ನ ಸ್ಯಾದಿತಿ ಭಾವಃ ॥ ೫೩೮ ॥

**ವಿವರಣೆ -** ಅಯಂ ಘಟಃ ಎಂಬ ಜ್ಞಾನದಲ್ಲಿ ತೋರುವ ಇದಮಂಶವು ಬ್ರಹ್ಮನೇ ಎಂಬ ವಿಷಯದಲ್ಲಿ ಇಲ್ಲಿ ಎರಡು ದೋಷಗಳನ್ನು ಹೇಳುತ್ತಾರೆ. ಪರರು ಪರಾಕ್ ಪ್ರಪಂಚಕ್ಕೆ ಇದಂ ರೂಪತ್ವವನ್ನೂ, ಪ್ರತ್ಯಗ್ರೂಪವಾದ ಬ್ರಹ್ಮನಿಗೆ ಅಹಂ ರೂಪತ್ವವನ್ನು (ಅನಿದಂ ರೂಪತ್ವವನ್ನೂ) ಒಪ್ಪುತ್ತಾರೆ. ಆದರೆ ಅಯಂ ಘಟಃ ಎಂಬಲ್ಲಿ ಇದಂ ಅಂಶದಿಂದ ಬ್ರಹ್ಮನೇ ತೋರುವುದಾದರೆ ಅವನಿಗೆ ಅನಿದಂ ರೂಪತ್ವವು ಕೂಡುವುದಿಲ್ಲ ಎಂಬುದು ಒಂದು ದೋಷ. ಸೋಯಂ ಘಟಃ ಎಂಬ ಪ್ರತ್ಯಭಿಜ್ಞೆಯಲ್ಲಿ ಪೂರ್ವದೇಶಕಾಲ ಸಂಬದ್ಧವಾದ ಘಟಕ್ಕೂ, ಏತದ್ದೇಶಕಾಲಸಂಬದ್ಧವಾದ ಘಟಕ್ಕೂ ಅಭೇದವು ತೋರುವುದರಿಂದ ಪದಾರ್ಥಗಳಿಗೆ ಸ್ಥೈರ್ಯವು ಸಿದ್ಧವಾಗುತ್ತದೆ ಎಂದೇ ಅದ್ವೈತಿಗಳೂ ಸಹಕ್ಷಣಿಕತ್ವವಾದವನ್ನು ನಿರಾಕರಿಸಬೇಕು. ಆದರೆ ಸಃ ಅಯಂ ಎಂಬಲ್ಲಿ ಘಟಾದಿಯು ವಿಷಯೀಕೃತವಾಗದೇ ಬ್ರಹ್ಮನೇ ವಿಷಯೀಕೃತವಾದರೆ ಘಟಾದಿಗಳ ಸ್ಥೈರ್ಯವು ಸಿದ್ಧವಾಗುವುದಿಲ್ಲ ಎನ್ನುವುದು ಇನ್ನೊಂದು ದೋಷ.

ಘಟಂ ತಾಡಯತಾ ದಂಡೈಃ ಪ್ರಾಯೋ ಬ್ರಹ್ಮಾಪಿ ತಾಡಿತಂ ।
ಯದೌಪನಿಷದತ್ವೇ ಸ್ವೇ ಛಲಂ ತ್ಯಕ್ತ್ವೈವ ದೃಶ್ಯತೇ ॥ ೫೩೯ ॥

**ಅರ್ಥ-** ದಂಡೈಃ= ದಂಡಗಳಿಂದ, ಘಟಂ= ಘಟವನ್ನು, ತಾಡಯತಾ= ಬಡಿಯುವ ಕುಂಬಾರನಿಂದ, ಪ್ರಾಯಃ= ಪ್ರಾಯಿಕವಾಗಿ, ಬ್ರಹ್ಮಾಪಿ= ಬ್ರಹ್ಮನೂ ಕೂಡ, ತಾಡಿತಂ= ಬಡಿಯಲ್ಪಡುತ್ತಾನೆ, ಯತ್= ಯಾವ ಬ್ರಹ್ಮನು, ಸ್ವೇ= ತನ್ನ, ಔಪನಿಷದತ್ವೇ= ಶಬ್ದೈಕ ವೇದ್ಯತ್ವದಲ್ಲಿ, ಛಲಂ= ಆಗ್ರಹವನ್ನು, ತ್ಯಕ್ತ್ವೈವ= ಪರಿತ್ಯಜಿಸಿಯೇ, ದೃಶ್ಯತೇ= ವಿಷಯೀಕರಿಸಲ್ಪಡುತ್ತಾನಷ್ಟೇ ?

**ಅನುವಾದ -** ಘಟವನ್ನು ದಂಡಗಳಿಂದ ಬಡಿಯುವ ಕುಂಬಾರನು ಬ್ರಹ್ಮನನ್ನೂ ಬಡಿಯುತ್ತಾನಷ್ಟೇ! ಆ ಬ್ರಹ್ಮನಾದರೂ ತನ್ನ ಉಪನಿಷದೇಕಗಮ್ಯತ್ವ ಸ್ವಭಾವವನ್ನು ಪರಿತ್ಯಜಿಸಿ ಚಾಕ್ಷುಷಜ್ಞಾನದಲ್ಲಿಯೂ ವಿಷಯನಾಗುತ್ತನಷ್ಟೇ!

**ಭಾವವಿಲಾಸಿನೀ–** ಘಟೋತ್ಪತ್ತಿಸಮಯೇ ಘಟಂ ಭ್ರಾಂತ್ಯಾಪಶ್ಯನ್ ಕುಂಭಕಾರೋ-ಽಧಿಷ್ಠಾನಭೂತಂ ಬ್ರಹ್ಮಾಪ್ಯಯಮಿತಿ ಪಶ್ಯತೀತಿ ಪರಸ್ಯ ಪ್ರಕ್ರಿಯಾ । ತತ್ರ ಬ್ರಹ್ಮಣೋ ನೀರೂಪದ್ರವ್ಯತ್ವಾತ್ ನ ಚಾಕ್ಷುಷತ್ವಮಿತಿ ದೂಷಣಂ ಪ್ರಾಗುಕ್ತಮ್ ಔಪನಿಷದತ್ವಾಚ್ಚ ತಸ್ಯ ನ ಚಾಕ್ಷುಷತ್ವಮಿತಿ ಸಾಹಿತ್ಯಮುದ್ರಯಾಽಽಹ – **ಘಟಮಿತಿ** ॥ ತಾಡಯತಾ ಕುಲಾಲೇನ ॥೫೩೯॥

**ವಿವರಣೆ** - ಘಟೋತ್ಪತ್ತಿ ಸಮಯದಲ್ಲಿ ಭ್ರಾಂತಿಯಿಂದ ಘಟವನ್ನು ನೋಡುವ ಕುಂಬಾರನು ಇದಂ ಶಬ್ದದಿಂದ ಉಲ್ಲಿಖಿತವಾದ ಬ್ರಹ್ಮನನ್ನು ಅಧಿಷ್ಠಾನವನ್ನಾಗಿ ನೋಡುತ್ತಾನೆ ಎಂಬುದು ಪರರ ಪ್ರಕ್ರಿಯೆ. ಬ್ರಹ್ಮನು ರೂಪರಹಿತನಾದ್ದರಿಂದ ಚಾಕ್ಷುಷಜ್ಞಾನದಲ್ಲಿ ವಿಷಯನಾಗುವುದಿಲ್ಲ ಎಂದು ಮೊದಲು ಹೇಳಿದ ದೋಷವು ಒಂದು. ಉಪನಿಷದೇಕ ಪ್ರತಿಪಾದ್ಯನಾದ ಬ್ರಹ್ಮನು ಚಾಕ್ಷುಷಜ್ಞಾನಕ್ಕೆ ವಿಷಯನಾಗುವುದಿಲ್ಲ ಎಂಬುದು ಇನ್ನೊಂದು. ಹೀಗೆ ಇಲ್ಲಿ ಎರಡು ದೋಷಗಳನ್ನು ಹೇಳುತ್ತಾರೆ.

**ಕಿಂ ಲೋಕಾನುಭವಃ ಸೂತ್ರಂ ಯೇನ ಭಾಷ್ಯಮಪೇಕ್ಷತೇ ।**
**ದೇಶಕಾಲಸ್ಥಮೇವೇದಂ ತದಿತ್ಯಾಹುರ್ಹಿ ಲೌಕಿಕಾಃ ॥ ೫೪೦ ॥**

**ಅರ್ಥ-** ಲೋಕಾನುಭವಃ= ಲೋಕಾನುಭವವು, ಯೇನ= ಯಾವ ಕಾರಣದಿಂದ, ಭಾಷ್ಯಂ= ನಿನ್ನ ವ್ಯಾಖ್ಯಾನವನ್ನು, ಅಪೇಕ್ಷತೇ= ಅಪೇಕ್ಷಿಸುತ್ತದೆಯೋ ಅಂತಹ, ಸೂತ್ರಂ ಕಿಂ= ಸೂತ್ರವೇನು? ಲೌಕಿಕಾಃ= ಲೌಕಿಕರು, ದೇಶಕಾಲಸ್ಥಮೇವ= ದೇಶಕಾಲಸಂಬದ್ಧ-ವಾದುದನ್ನೇ, ಇದಂ ತದಿತಿ= ಇದು, ಅದು ಎಂದು, ಆಹುಃ ಹಿ= ಹೇಳುತ್ತಾರಷ್ಟೇ ?

**ಅನುವಾದ** - **ಲೋಕಾನುಭವವು ನಿನ್ನ ವ್ಯಾಖ್ಯಾನವನ್ನು ಅಪೇಕ್ಷಿಸುವಂತಹ ಸೂತ್ರವೇ? ಲೌಕಿಕರು ದೇಶಕಾಲಸಂಬದ್ಧವಾದ ವಸ್ತುವನ್ನೇ ಇದು, ಅದು ಎಂದು ಹೇಳುತ್ತಾರೆ.**

**ಭಾವವಿಲಾಸಿನೀ–** ಅಯಂ ಘಟ ಇತ್ಯತ್ರೇದಮಂಶಸ್ಯ ಬ್ರಹ್ಮಪರತ್ವೇ ಸಾರ್ವಜನೀನಾನುಭವ-ವಿರೋಧಾಖ್ಯದೋಷಂ ಚ ಸಾಹಿತ್ಯಮುದ್ರಯಾಽಽಹ –**ಕಿಮಿತಿ** ॥ ಸೂತ್ರಂ ಸೂತ್ರ- ಸ್ಥಾನೀಯಮ್ । ಯಥಾ ಸೂತ್ರಸ್ಯ ಭಾಷ್ಯೇಣ ವ್ಯಾಖ್ಯಾನಂ ಕ್ರಿಯತೇ ತಥಾನುಭವಸ್ಯಾಪಿ ಕುತೋ ವ್ಯಾಖ್ಯಾನಂ ಕ್ರಿಯತ ಇತಿ ಭಾವಃ ॥ ೫೪೦ ॥

**ವಿವರಣೆ** - ಅಯಂ ಘಟಃ ಎಂಬಲ್ಲಿ ಇದಮಂಶದಿಂದ ಬ್ರಹ್ಮನು ತೋರುತ್ತಾನೆಂದು ಹೇಳಿದರೆ ಸರ್ವಲೋಕಾನುಭವವಿರೋಧರೂಪವಾದ ದೋಷವನ್ನು ಇಲ್ಲಿ ಹೇಳುತ್ತಾರೆ. ಲೋಕಾನುಭವವನ್ನು ವ್ಯಾಖ್ಯಾನ ಮಾಡಬಾರದು. ಅನುಭವವನ್ನು ಹಾಗೆಯೇ ಅಂಗೀಕರಿಸಬೇಕು ಎಂದು ಅಭಿಪ್ರಾಯ.

**ಘಟೋಽಯಮಿತಿ ಧೀರ್ಭ್ರಾಂತಿಃ ಕಿಲ ಲೋಕಸ್ಯ ಸಂಮತಾ ।**
**ಯದ್ ಬ್ರಹ್ಮಘಟತಾದಾತ್ಮ್ಯಧೀತ್ವಂ ತಸ್ಯಾಃ ಪರೋ ವದೇತ್ ॥ ೫೪೧ ॥**

**ಅರ್ಥ-** ಘಟೋಯಮಿತಿ= ಅಯಂ ಘಟಃ ಎಂಬ ಜ್ಞಾನವು, ಲೋಕ ಸಂಮತಾ= ಲೋಕಸಂಮತವಾದ, ಭ್ರಾಂತಿಃ ಕಿಲ= ಭ್ರಾಂತಿಯಷ್ಟೇ, ಯತ್= ಏಕೆಂದರೆ, ತಸ್ಯಾಃ= ಆ ಜ್ಞಾನಕ್ಕೆ, ಬ್ರಹ್ಮಘಟತಾದಾತ್ಮ್ಯಧೀತ್ವಂ= ಘಟದಲ್ಲಿ ಚಿತ್ತಾದಾತ್ಮ್ಯ ವಿಷಯತ್ವವನ್ನು, ಪರಃ= ಅದ್ವೈತಿಯು, ವದೇತ್= ಹೇಳುತ್ತಾನೆ.

**ಅನುವಾದ - ಅಯಂ ಘಟಃ ಎಂಬ ಜ್ಞಾನದಲ್ಲಿ ಅದ್ವೈತಿ ರೀತ್ಯಾ ಘಟದಲ್ಲಿ ಚಿತ್ತಾದಾತ್ಮ್ಯವು ತೋರುವುದರಿಂದ ಅಯಂ ಘಟಃ ಎಂಬ ಜ್ಞಾನವು ಲೋಕಸಮ್ಮತವಾದ ಭ್ರಮವಷ್ಟೇ!**

**ಭಾವವಿಲಾಸಿನೀ– ಪ್ರಕಾರಾಂತರೇಣಾಪ್ಯನುಭವವಿರೋಧಮಾಹ – ಘಟ ಇತಿ ॥ ಯತ್ ಯಸ್ಮಾತ್ । ತಸ್ಯಾಃ ಘಟೋಽಯಮಿತಿ ಧಿಯಃ ॥ ೫೪೧ ॥**

**ವಿವರಣೆ** - ಅಯಂ ಘಟಃ ಎಂಬ ಜ್ಞಾನದಲ್ಲಿ ಬ್ರಹ್ಮನು ವಿಷಯನಾಗುತ್ತಾನೆ ಎಂದು ಹೇಳಿದರೆ ಪುನಃ ಇಲ್ಲಿ ಅನುಭವವಿರೋಧವನ್ನು ಹೇಳುತ್ತಾರೆ.

**ಘಟೇ ನಾಯಂ ಘಟ ಇತಿ ಯಾ ಭ್ರಾಂತಿಃ ಸಾ ಪ್ರಮಾ ಕಿಲ ।**
**ಯದ್ಘಟೋ ಬ್ರಹ್ಮನೇತ್ಯರ್ಥಸ್ತಸ್ಯಾಃ ಪರಮತೇ ಭವೇತ್ ॥ ೫೪೨ ॥**

**ಅರ್ಥ-** ಘಟೇ= ಘಟದಲ್ಲಿ, ನಾಯಂ ಘಟ ಇತಿ= ಇದು ಘಟವಲ್ಲ ಎಂಬ, ಯಾ ಭ್ರಾಂತಿಃ= ಯಾವ ಭ್ರಾಂತಿಯಿದೆಯೋ, ಸಾ= ಅದು, ಪ್ರಮಾ ಕಿಲ= ಪ್ರಮೆಯಷ್ಟೇ, ಯತ್= ಏಕೆಂದರೆ, ತಸ್ಯಾಃ= ಆ ಜ್ಞಾನಕ್ಕೆ, ಪರಮತೇ= ಪರಮತದಲ್ಲಿ, ಘಟಃ= ಘಟವು, ಬ್ರಹ್ಮ ನ= ಬ್ರಹ್ಮನಲ್ಲ, ಇತ್ಯರ್ಥಃ= ಎಂಬ ಅರ್ಥವು, ಭವೇತ್= ಆಗುತ್ತದೆ.

**ಅನುವಾದ - ಘಟದಲ್ಲಿ (ಘಟದ ವಿಷಯದಲ್ಲಿ) ಉಂಟಾಗುವ ನಾಯಂ ಘಟಃ ಎಂಬ ಜ್ಞಾನವು ಪರರೀತಿಯಿಂದ ಪ್ರಮೆಯಾಗಬೇಕಷ್ಟೇ? ಏಕೆಂದರೆ ಪರಮತ ರೀತ್ಯಾ ಆ ಜ್ಞಾನಕ್ಕೆ ಘಟವು ಬ್ರಹ್ಮನಲ್ಲ ಎಂದೇ ಅರ್ಥವಷ್ಟೇ?**

**ಭಾವವಿಲಾಸಿನೀ– ಘಟೇ ಪುರೋವರ್ತಿನಿ ತಸ್ಮಿನ್ ಘಟೇ । ಯತ್ ಯಸ್ಮಾತ್ । ತಸ್ಯಾಃ ನಾಯಂ ಘಟ ಇತಿ ಪ್ರತೀತೇಃ ॥ ೫೪೧ ॥**

**ವಿವರಣೆ** - ಅಯಂ ಘಟಃ ಎಂಬ ಜ್ಞಾನಕ್ಕೆ ಭ್ರಾಂತಿತ್ವವು, ನಾಯಂ ಘಟಃ ಎಂಬ ಜ್ಞಾನಕ್ಕೆ ಪ್ರಮಾತ್ವವು ಲೋಕಾನುಭವವಿರುದ್ಧವಾದುದು ಎಂದು ಇಲ್ಲಿ ಹೇಳುತ್ತಾರೆ.

**ಯಸ್ಯ ಹ್ಯಭ್ರಮಕಾಲೇಪಿ ಸಿದ್ಧಿಃ ಸ್ವಮತಸಂಮತಾ ।**
**ಅನಾರೋಪಿತಮೇವೇದಂ ಬ್ರಹ್ಮವದ್ಧಿ ಘಟಾದಿಕಮ್ ॥ ೫೪೩ ॥**

**ಅರ್ಥ-** ಯಸ್ಯ= ಯಾವ ವಸ್ತುವಿಗೆ, ಅಭ್ರಮಕಾಲೇಪಿ= ಭ್ರಮಕಾಲ ಭಿನ್ನಕಾಲದಲ್ಲಿಯೂ, ಸಿದ್ಧಿಃ= ಸ್ವರೂಪಸತ್ತ್ವವು, ಸ್ವಮತಸಂಮತಾ= ಮಾಯಿ ಮತದಂತೆಯೇ ಸಂಮತವಾಗಿದೆಯೋ, ಅಂತಹ, ಇದಂ ಘಟಾದಿಕಂ= ಈ ಘಟಾದಿ ಪ್ರಪಂಚವು, ಬ್ರಹ್ಮವತ್= ಬ್ರಹ್ಮನಂತೆ, ಅನಾರೋಪಿತಮೇವ ಹಿ= ಅನಾರೋಪಿತವೇ ಆಗುತ್ತದೆಯಷ್ಟೇ.

**ಅನುವಾದ - ಯಾವ ಘಟಾದಿ ಪ್ರಪಂಚವು ಭ್ರಮಕ್ಕಿಂತಲೂ ಪೂರ್ವದಲ್ಲಿಯೇ ಅದ್ವೈತ ಮತದಂತೆಯೇ ಸಿದ್ಧವಾಗಿದೆಯೋ ಅದು ಬ್ರಹ್ಮನಂತೆ ಅನಾರೋಪಿತವೇ ಆಗುವುದಷ್ಟೇ ?**

**ಭಾವವಿಲಾಸಿನೀ–ಸನ್ನಿಕರ್ಷಘಟಕತಯಾ ಘಟಾದೀನಾಂ ಪ್ರಾಕ್‌ಸತ್ತ್ವಮಿತಿ ಪೂರ್ವ- ಮುಕ್ತಮ್। ಇದಾನೀಂ ಘಟಾದೇರಪ್ರಾತೀತಿಕತ್ವಮಂಗೀಕುರ್ವತಃ ಪರಸ್ಯ ಪ್ರಕ್ರಿಯಯೈವ ಸಿದ್ಧಮಿತ್ಯಾಹ –ಯಸ್ಯೇತಿ ॥ ಯಸ್ಯ ಘಟಾದೇಃ। ಸ್ವಮತಸಂಮತಾ ಮಾಯಾವಾದಿಮತಸಂಮತಾ। ಅಜ್ಞಾನಸುಖಾದಿವತ್ ಘಟಾದೇಃ ಪ್ರಾತೀತಿಕತ್ವಾನಂಗೀಕಾರಾದಿತಿ ಭಾವಃ ॥೫೪೩॥**

**ವಿವರಣೆ -** ಸನ್ನಿಕರ್ಷ ಸಂಪಾದಕವಾಗಿ ಘಟಾದಿಗಳು ಜ್ಞಾನಕ್ಕಿಂತಲೂ ಪೂರ್ವದಲ್ಲಿಯೇ ಇರಬೇಕೆಂದು ಹಿಂದೆ ನಿರೂಪಿಸಲಾಗಿದೆ. ಈಗ ಪರರು ಘಟಾದಿಗಳಿಗೆ ಪ್ರಾತಿಭಾಸಿಕತ್ವವನ್ನು ಅಂಗೀಕರಿಸದಿರುವುದರಿಂದ ಘಟಾದಿಗಳಿಗೆ ಬ್ರಹ್ಮನಂತೆ ಸತ್ಯತ್ವವೇ ಸಿದ್ಧವಾಗುತ್ತದೆ ಎಂದು ಹೇಳುತ್ತಾರೆ. ಪರರು ಅಜ್ಞಾನಸುಖಾದಿಗಳಿಗೆ ಮಾತ್ರ ಪ್ರಾತೀತಿಕತ್ವವನ್ನು ಅಂಗೀಕರಿಸುತ್ತಾರೆ. ಘಟಾದಿಗಳಿಗೆ ಪ್ರಾತೀತಿಕತ್ವವನ್ನು ಅಂಗೀಕರಿಸುವುದಿಲ್ಲವೆಂಬುದು ಪ್ರಸಿದ್ಧವಾದ ವಿಷಯ.

**ಅನಾನುಭವಿಕಂ ಸ್ವಸ್ಯ ಸರ್ವಾನುಭವಬಾಧಿತಮ್ ।**
**ಮಿಥ್ಯಾತ್ವೇ ಬಹು ಕಲ್ಪ್ಯಂ ಸ್ಯಾತ್ತತಃ ಸತ್ಯಮಿದಂ ಜಗತ್ ॥ ೫೪೪ ॥**

**ಅರ್ಥ-** ಮಿಥ್ಯಾತ್ವೇ= ಮಿಥ್ಯಾತ್ವವನ್ನು ಅಂಗೀಕರಿಸಿದರೆ, ಸ್ವಸ್ಯ= ತನಗೆ, ಅನಾನುಭವಿಕಂ= ಅನುಭವಕ್ಕೆ ಬರದೇ ಇರುವ ಮತ್ತು, ಸರ್ವಾನುಭವಬಾಧಿತಂ= ಸರ್ವಾನುಭವ ವಿರುದ್ಧವಾದ, ಬಹು= ಅನೇಕ ಪ್ರಮೇಯಗಳು, ಕಲ್ಪ್ಯಂ ಸ್ಯಾತ್= ಕಲ್ಪಿಸಲ್ಪಡಬೇಕಾಗುತ್ತವೆ, ತತಃ= ಆದ್ದರಿಂದ, ಇದಂ ಜಗತ್= ಈ ಜಗತ್ತು, ಸತ್ಯಂ= ಸತ್ಯವೆಂದು ಸಿದ್ಧವಾಗುತ್ತದೆ.

**ಅನುವಾದ - ಜಗತ್ತಿಗೆ ಮಿಥ್ಯಾತ್ವವನ್ನು ಅಂಗೀಕರಿಸಿದರೆ ತನ್ನ ಅನುಭವಕ್ಕೆ ಬರದಿರುವ ಮತ್ತು ಸರ್ವಲೋಕಾನುಭವಕ್ಕೆ ವಿರುದ್ಧವಾದ ಅನೇಕ ಪ್ರಮೇಯಗಳನ್ನು ಕಲ್ಪಿಸಬೇಕಾಗುತ್ತದೆ. ಸತ್ಯತ್ವವನ್ನು ಅಂಗೀಕರಿಸಿದರೆ ಏನನ್ನೂ ಕಲ್ಪಿಸಬೇಕಾಗುವುದಿಲ್ಲ. ಆದ್ದರಿಂದ ಲಾಘವ ರೂಪ ತರ್ಕದಿಂದ ಜಗತ್ತಿಗೆ ಸತ್ಯತ್ವವೇ ಸಿದ್ಧವಾಗುತ್ತದೆ.**

**ಭಾವವಿಲಾಸಿನೀ–** ಕಿಂಚ ಮಿಥ್ಯಾತ್ವಾಂಗೀಕಾರೇ ಸರ್ವಾನುಭವವಿರುದ್ಧಂ ಬಹುಪ್ರಮೇಯಂ ಕಲ್ಪನೀಯಮ್ । ಸತ್ಯತ್ವಾಂಗೀಕಾರೇ ತು ನ ಕಾಪಿ ಕಲ್ಪನಾ । ಅತೋ ಲಾಘವಾಖ್ಯತರ್ಕಾನುಗೃಹೀತತ್ವಾತ್ ಸತ್ಯತ್ವಪ್ರಮಾಣಾನ್ಯೇವ ಸುದೃಢಾನೀತ್ಯಾಹ – **ಅನಾನುಭವಿಕಮಿತಿ** ॥ ತತಃ ಕಲ್ಪನಾಗೌರವಾಭಾವಾತ್ ॥ ೫೪೪ ॥

ಪ್ರಧಾನಸದೃಶಾಕಾರವರ್ಣಾಧಿಷ್ಠಾನದರ್ಶನೇ ।
ತಥಾ ತಥಾ ಭ್ರಮೋಪಿ ಸ್ಯಾನ್ನಾನ್ಯಥಾ ಯತ್ರ ಕುತ್ರಚಿತ್ ॥ ೫೪೫ ॥

**ಅರ್ಥ-** ಪ್ರಧಾನಸದೃಶಾಕಾರವರ್ಣಾಧಿಷ್ಠಾನದರ್ಶನೇ= ಪ್ರಧಾನಕ್ಕೆ ಸದೃಶವಾದ ಆಕಾರ ಮತ್ತು ವರ್ಣಗಳನ್ನುಳ್ಳ ಅಧಿಷ್ಠಾನದ ದರ್ಶನವುಂಟಾದರೆ, ತಥಾ ತಥಾ= ಆಯಾ ರೀತಿಯಲ್ಲಿ, ಭ್ರಮೋಪಿ= ಭ್ರಮವೂ, ಸ್ಯಾತ್= ಉಂಟಾಗುತ್ತದೆ, ಅನ್ಯಥಾ= ಇಲ್ಲದಿದ್ದರೆ, ಯತ್ರ ಕುತ್ರಚಿತ್= ಎಲ್ಲಿಯೂ ಸಹ, ನ= ಭ್ರಮವುಂಟಾಗುವುದಿಲ್ಲ.

**ಅನುವಾದ -** ಪ್ರಧಾನಕ್ಕೆ ಸದೃಶವಾದ ಆಕಾರ ಮತ್ತು ವರ್ಣಗಳನ್ನುಳ್ಳ ಅಧಿಷ್ಠಾನದ ಜ್ಞಾನವು ಉಂಟಾದರೆ ಮಾತ್ರ ಆಯಾ ಭ್ರಮಗಳು ಉಂಟಾಗುತ್ತದೆ. ಬೇರೆ ರೀತಿಯಲ್ಲಿ ಉಂಟಾಗುವುದಿಲ್ಲ.

**ಭಾವವಿಲಾಸಿನೀ–** ಪರಪಕ್ಷೇ ಕಲ್ಪನಾಗೌರವಮೇವ ಪ್ರದರ್ಶಯತಿ ॥ **ಪ್ರಧಾನೇತಿ** ॥ ಪ್ರಧಾನಂ ಸತ್ಯರಜತಸರ್ಪಾದಿಕಮ್ । ಸರ್ಪಘಟಾದಿಭ್ರಮೇ ಆಕಾರಸಾದೃಶ್ಯಸ್ಯಾಪ್ಯಪೇಕ್ಷಿತತ್ವಾತ್ ಸೋऽಪಿ ಗೃಹೀತಃ । ಪ್ರಧಾನಸದೃಶಾಕಾರ ವರ್ಣಂ ಯದಧಿಷ್ಠಾನಂ ಶುಕ್ತಿರಜ್ಜ್ವಾದಿ । ತದ್ದರ್ಶನೇ । ತಥಾ ತಥಾ ಭ್ರಮಃ । ರಜತಸಾಮ್ಯೇ ರಜತ ಭ್ರಮಃ । ರಜ್ಜ್ವಾದಿಸಾಮ್ಯೇ ರಜ್ಜ್ವಾದಿಭ್ರಮಃ ॥ ೫೪೫ ॥

**ವಿವರಣೆ -** ಮಿಥ್ಯಾತ್ವವನ್ನು ಅಂಗೀಕರಿಸಿದರೆ ಹಿಂದಿನ ಶ್ಲೋಕದಲ್ಲಿ ಹೇಳಿದ ಕಲ್ಪನಾ ಗೌರವವನ್ನು ಇನ್ನು ಕೆಲವು ಶ್ಲೋಕಗಳಿಂದ ಉಪಪಾದನೆ ಮಾಡುತ್ತಾರೆ.

ಪೃಥುಬುಧ್ನೋದರಾಕಾರಘಟವರ್ಣಶಿವಾದಿಕೇ ।
ಘಟಭ್ರಮಸ್ತಥೈವೋರ್ಧ್ವೇ ಸ್ಥಾಣ್ವಾದೌ ಪುರುಷಭ್ರಮಃ ।
ರಜತಾಕಾರಸದೃಶವರ್ಣೇ ತು ರಜತಭ್ರಮಃ ॥ ೫೪೬ ॥

**ಅರ್ಥ-** ಪೃಥುಬುಧ್ನೋದರಾಕಾರಘಟವರ್ಣಶಿವಾದಿಕೇ= ಘಟದ ಆಕಾರವಾದ ಪೃಥುಬುಧ್ನೋದರಾಕಾರ ಮತ್ತು ಘಟದ ವರ್ಣವಿರುವ ಇನ್ನೊಂದು ವಸ್ತುವಿನಲ್ಲಿ, ಘಟಭ್ರಮಃ= ಘಟಭ್ರಮವು ಉಂಟಾಗುತ್ತದೆ, ತಥೈವ= ಅದರಂತೆಯೇ, ಊರ್ಧ್ವೇ= ಎತ್ತರವಾದ, ಸ್ಥಾಣ್ವಾದೌ= ಸ್ಥಾಣ್ವಾದಿಗಳಲ್ಲಿ, ಪುರುಷಭ್ರಮಃ= ಪುರುಷಭ್ರಮ ಉಂಟಾಗುತ್ತದೆ, ರಜತಾಕಾರಸದೃಶವರ್ಣೇ ತು= ರಜತಕ್ಕೆ ಸಮಾನವಾದ ಆಕಾರ ಮತ್ತು ವರ್ಣವನ್ನು ಹೊಂದಿರುವ ಶುಕ್ತಿಯಲ್ಲಿ, ರಜತಭ್ರಮಃ= ರಜತಭ್ರಮ ಉಂಟಾಗುತ್ತದೆ.

**ಅನುವಾದ -** ಘಟದಂತೆ ಪೃಥುಬುಧ್ನೋದರಾಕಾರ ಮತ್ತು ವರ್ಣವುಳ್ಳ ಇನ್ನೊಂದು ವಸ್ತುವಿನಲ್ಲಿ ಘಟಭ್ರಮ ಉಂಟಾಗುತ್ತದೆ. ಅದರಂತೆ ಎತ್ತರವಾದ ಇನ್ನೊಂದು ವಸ್ತುವಾದ ಸ್ಥಾಣ್ವಾದಿಗಳಲ್ಲಿ ಪುರುಷಭ್ರಮವು ಉಂಟಾಗುತ್ತದೆ. ರಜತಕ್ಕೆ ಸಮಾನವಾದ ವರ್ಣ ಮತ್ತು ಆಕಾರವುಳ್ಳ ಶುಕ್ತಿಯಲ್ಲಿ ರಜತಭ್ರಮವು ಉಂಟಾಗುತ್ತದೆ.

**ಭಾವವಿಲಾಸಿನೀ–** ತದೇವ ದರ್ಶಯತಿ ॥ ಪೃಥ್ವಿತಿ ॥ ೫೪೬ ॥

**ವಿವರಣೆ -** ಹಿಂದಿನ ಶ್ಲೋಕದಲ್ಲಿ ಹೇಳಿದ ವಿಷಯವನ್ನೇ ಇಲ್ಲಿ ಉಪಪಾದನೆ ಮಾಡುತ್ತಾರೆ.

ವಿಚಿತ್ರಾಕಾರವರ್ಣಾನಾಮನಂತಾನಂತಧರ್ಮಿಣಾಂ ।
ಶುದ್ಧಬ್ರಹ್ಮಣ್ಯಧಿಷ್ಠಾನೇ ವಿಶ್ವವಿಭ್ರಮಸಿದ್ಧಯೇ ।
ಸ್ವಭಾವಸಿದ್ಧಾ ಸಿದ್ಧಾಭೂಜ್ಜಗದಾಕಾರವರ್ಣತಾ ॥ ೫೪೭ ॥

**ಅರ್ಥ-** ಶುದ್ಧಬ್ರಹ್ಮಣಿ= ಶುದ್ಧಬ್ರಹ್ಮರೂಪವಾದ, ಅಧಿಷ್ಠಾನೇ= ಅಧಿಷ್ಠಾನದಲ್ಲಿ, ವಿಚಿತ್ರಾಕಾರವರ್ಣಾನಾಂ= ವಿಚಿತ್ರವಾದ ಆಕಾರ ಮತ್ತು ವರ್ಣಗಳುಳ್ಳ, ಅನಂತಾನಂತಧರ್ಮಿಣಾಂ= ಅನಂತಾನಂತ ಧರ್ಮಿಗಳ, ವಿಶ್ವವಿಭ್ರಮಸಿದ್ಧಯೇ= ಸಮಸ್ತ ಭ್ರಾಂತಿಯ ಸಿದ್ಧಿಗೋಸ್ಕರವಾಗಿ, ಸ್ವಭಾವಸಿದ್ಧಾ= ಅನಾರೋಪಿತವಾದ, ಜಗದಾಕಾರವರ್ಣತಾ= ಜಗದಾಕಾರ ಮತ್ತು ವರ್ಣಗಳು, ಸಿದ್ಧಾಭೂತ್= ಅಧಿಷ್ಠಾನವಾದ ಶುದ್ಧಬ್ರಹ್ಮನಲ್ಲಿಸಿದ್ಧವಾದವು.

**ಅನುವಾದ -** ಶುದ್ಧಬ್ರಹ್ಮರೂಪವಾದ ಅಧಿಷ್ಠಾನದಲ್ಲಿ ವಿಚಿತ್ರಾಕಾರ ವರ್ಣಗಳುಳ್ಳ ಅನಂತಾನಂತ ಧರ್ಮಿಗಳ ಎಲ್ಲಾ ಭ್ರಾಂತಿಗಳ ಸಿದ್ಧಿಗೋಸ್ಕರವಾಗಿ ಬ್ರಹ್ಮನಲ್ಲಿ ಅನಾರೋಪಿತವಾದ ಜಗದಾಕಾರ ಮತ್ತು ವರ್ಣವು ಸಿದ್ಧವಾಯಿತು.

**ಭಾವವಿಲಾಸಿನೀ–** ಅಸ್ತ್ವಧಿಷ್ಠಾನಸ್ಯ ಪ್ರಧಾನಸದೃಶಾಕಾರವರ್ಣತಾ । ಪ್ರಕೃತೇ ಕಿಮಾಗತಮಿತ್ಯತ ಆಹ – **ವಿಚಿತ್ರೇತಿ** ॥ ಅನಂತಾನಂತವರ್ಣಾನಾಮನಂತಾನಂತ ಧರ್ಮಿಣಾಂ ಮಹೀಮಹೀಧರ-ಸರಿತ್ಸಮುದ್ರಘಟಪಟಾದಿಧರ್ಮಿಣಾಮ್ ಅಧಿಷ್ಠಾನೇ ಆರೋಪಾಧಿಷ್ಠಾನ ಇತಿ ಸಂಬಂಧಃ । ಸ್ವಭಾವಸಿದ್ಧಾ ಅನಾರೋಪಿತಾ । ಜಗದಾಕಾರವರ್ಣತಾ ಜಗತಃ ಆರೋಪ್ಯಮಾಣ ಜಗತಃ ತತ್ ಪ್ರಧಾನಭೂತ ಜಗದಂತರಸ್ಯ ವಾ ಯೋಯಮ್ ಆಕಾರೋವರ್ಣಶ್ಚ ತತ್ ಸಮಾನಾಕಾರ-ವರ್ಣತೇತ್ಯರ್ಥಃ । ಅನಂತಾನಂತಜಗದಾರೋಪಸ್ಯಾಧಿಷ್ಠಾನಭೂತಂ ಬ್ರಹ್ಮಪರಮಾರ್ಥತ ಏವ ಜಗತ್ ಸದೃಶಾನಂತಾನಂತವರ್ಣಾಕಾರಭರಿತಂ ಭವೇದಿತಿ ಭಾವಃ ॥ ೫೪೭ ॥

**ವಿವರಣೆ -** ಪ್ರಕೃತದಲ್ಲಿ ಬ್ರಹ್ಮನು ವಿಚಿತ್ರವಾದ ವರ್ಣಾಕಾರಗಳುಳ್ಳ ಜಗತ್ತಿನ ಭ್ರಮೆಗೆ ಅಧಿಷ್ಠಾನನಾಗಿದ್ದಾನೆ. ಆದ್ದರಿಂದ ಈ ಭ್ರಮೆಗೆ ಕಾರಣವಾದ ಪ್ರಧಾನವಾದ ಇಂತಹ

ಆಕಾರವರ್ಣಗಳನ್ನು ಹೊಂದಿರುವ ಅನಾರೋಪಿತವಾದ ಇನ್ನೊಂದು ಜಗತ್ತನ್ನು ಮತ್ತು ಅಧಿಷ್ಠಾನನಾದ ಬ್ರಹ್ಮನಲ್ಲಿ ಅಂತಹ ಜಗತ್ತಿಗೂ ಮತ್ತು ಆರೋಪಿತವಾದ ಜಗತ್ತಿಗೂ ಸದೃಶವಾದ ಆಕಾರ ವರ್ಣಗಳನ್ನು ಅನಾರೋಪಿತವೆಂದೇ ಅಂಗೀಕರಿಸಬೇಕು ಎಂದು ಅಭಿಪ್ರಾಯ.

ಅಧಿಷ್ಠಾನಮನಾರೋಪ್ಯಂ ತವೈವಾವಶ್ಯಕಂ ಮತೇ ।
ಬ್ರಹ್ಮಣಃ ಪಾರಮಾರ್ಥ್ಯಂ ಹಿ ನ ಸಿದ್ಧ್ಯೇದನ್ಯಥಾ ತವ ॥ ೫೪೮ ॥

ನಿರಧಿಷ್ಠಾನಕಭ್ರಾಂತಿವಾದಿತಾ ಚ ಭವೇದ್ ಧ್ರುವಂ ।
ಅಧಿಷ್ಠಾನಂ ಹಿ ಶುದ್ಧಂ ತೇ ವ್ಯಾವಹಾರಿಕವಿಭ್ರಮೇ ॥ ೫೪೯ ॥

**ಅರ್ಥ-** ತವೈವ ಮತೇ= ನಿನ್ನ ಮತದಲ್ಲಿಯೇ, ಅಧಿಷ್ಠಾನಂ= ಅಧಿಷ್ಠಾನವು, ಆವಶ್ಯಕಂ= ಅವಶ್ಯಕವಾಗಿ, ಅನಾರೋಪ್ಯಂ= ಅನಾರೋಪಿತವಾದುದಷ್ಟೇ, ಅನ್ಯಥಾ= ಇಲ್ಲದಿದ್ದರೆ, ತವ= ನಿನಗೆ, ಬ್ರಹ್ಮಣಃ= ಬ್ರಹ್ಮನ, ಪಾರಮಾರ್ಥ್ಯಂ= ಪಾರಮಾರ್ಥಿಕತ್ವವು, ನ ಸಿದ್ಧ್ಯೇತ್= ಸಿದ್ಧವಾಗುವುದಿಲ್ಲ. ಅನ್ಯಥಾ= ಇಲ್ಲದಿದ್ದರೆ, ತವ= ನಿನಗೆ, ನಿರಧಿಷ್ಠಾನಕಭ್ರಾಂತಿವಾದಿತಾ= ನಿರಧಿಷ್ಠಾನಕಭ್ರಾಂತಿವಾದಿತ್ವವು, ಧ್ರುವಂ= ನಿಶ್ಚಯವಾಗಿ, ಭವೇತ್= ಉಂಟಾಗುತ್ತದೆ, ತೇ= ನಿನಗೆ, ವ್ಯಾವಹಾರಿಕವಿಭ್ರಮೇ= ವ್ಯಾವಹಾರಿಕ ವಸ್ತು ವಿಷಯದ ಭ್ರಾಂತಿಯಲ್ಲಿ, ಅಧಿಷ್ಠಾನಂ= ಅಧಿಷ್ಠಾನವಾದುದು, ಶುದ್ಧಂ ಹಿ= ಶುದ್ಧ ಚೈತನ್ಯವಷ್ಟೇ.

**ಅನುವಾದ** - ನಿನ್ನ ಮತದಲ್ಲಿಯೂ ಸಹ ಅಧಿಷ್ಠಾನವು ಅವಶ್ಯಕವಾಗಿ ಅನಾರೋಪಿತವೇ ಆಗಬೇಕಷ್ಟೇ? ಇಲ್ಲದಿದ್ದರೆ ನಿನಗೂ ಸಹ ಬ್ರಹ್ಮನ ಪಾರಮಾರ್ಥಿಕತ್ವವೇ ಸಿದ್ಧವಾಗುವುದಿಲ್ಲ ಮತ್ತು ಅಧಿಷ್ಠಾನಭ್ರಾಂತಿಯನ್ನು ಒಪ್ಪುವ ಬೌದ್ಧಮತದ ಪ್ರವೇಶ ಪ್ರಸಂಗವು ಉಂಟಾಗುತ್ತದೆ. ವ್ಯಾವಹಾರಿಕ ವಿಷಯಕ ಭ್ರಮದಲ್ಲಿ ಅಧಿಷ್ಠಾನವಾದುದು ನಿನ್ನಂತೆಯೂ ಕೂಡ ಶುದ್ಧಚೈತನ್ಯವಷ್ಟೇ?

**ಭಾವವಿಲಾಸಿನೀ–** ಅಧಿಷ್ಠಾನವರ್ಣಾಕಾರಾದೇಃ ಪಾರಮಾರ್ಥ್ಯಮ್ ಅಧಿಷ್ಠಾನ-ಸತ್ಯತ್ವವಾದಿನಸ್ತವೈವಾಪೇಕ್ಷಿತಮ್ । ಅತೋ ನಾತ್ರಾಸ್ಮಾಭಿಃ ಪೃಥಕ್ ಪ್ರಯತಿತವ್ಯಮಿತ್ಯಾಹ – **ಅಧಿಷ್ಠಾನಮಿತಿ** ॥ ಅನ್ಯಥಾ ಅಧಿಷ್ಠಾನಸ್ಯಾಪ್ಯಾರೋಪಿತತ್ವೇ ನಿರಧಿಷ್ಠಾನಕಭ್ರಾಂತಿವಾದಿತಾ ಬೌದ್ಧತೇತ್ಯರ್ಥಃ । ವ್ಯಾವಹಾರಿಕ ವಿಭ್ರಮೇ ವ್ಯಾವಹಾರಿಕಸ್ಯವಿಭ್ರಮೇ । ಹಿಶಬ್ದೇನ ಶುಕ್ತ್ಯಾದಿಸವಿಕಲ್ಪಕಪ್ರಮಾಬಾಧ್ಯಸ್ಯ ಪ್ರಾತಿಭಾಸಿಕಸ್ಯ ವ್ಯಾವಹಾರಿಕಾಧಿಷ್ಠಾನತ್ವಸಂಭವೇಽಪಿ ಬ್ರಹ್ಮಪ್ರಮೈಕಬಾಧ್ಯಸ್ಯ ವ್ಯಾವಹಾರಿಕಸ್ಯ ನಿರ್ವಿಕಲ್ಪಕರೂಪಚರಮಪ್ರಮಾವಿಷಯೀಭೂತಂ ಶುದ್ಧಂ ಬ್ರಹ್ಮೈವಾಧಿಷ್ಠಾನಮಿತಿ ಪರಪ್ರಸಿದ್ಧಿಂ ಸೂಚಯತಿ ॥ ೫೪೮-೫೪೯ ॥

**ವಿವರಣೆ -** ಅಧಿಷ್ಠಾನವು ಅನಾರೋಪಿತವೆಂದು ಒಪ್ಪದಿದ್ದರೆ ನಿರಧಿಷ್ಠಾನ ಭ್ರಾಂತಿಯನ್ನು ಒಪ್ಪುವ ಬೌದ್ಧರ ಗುಂಪಿಗೆ ಸೇರಬೇಕಾಗುತ್ತದೆ ಎಂದು ಒಂದು ದೋಷ. ಪ್ರಾತಿಭಾಸಿಕ ವಿಷಯಕ ಭ್ರಾಂತಿಯಲ್ಲಿ ವ್ಯಾವಹಾರಿಕವಾದ ಶುಕ್ತ್ಯಾದಿಗಳು ಅಧಿಷ್ಠಾನವಾದರೂ, ವ್ಯಾವಹಾರಿಕ ಘಟಾದಿಗಳ ಭ್ರಾಂತಿಯಲ್ಲಿ ಶುದ್ಧ ಬ್ರಹ್ಮನೇ ಅಧಿಷ್ಠಾನವೆಂದು ಅದ್ವೈತಿಗಳ ಅಂಗೀಕಾರವಿದೆ. ಆದ್ದರಿಂದ ಶುದ್ಧಬ್ರಹ್ಮನಲ್ಲಿ ವ್ಯಾವಹಾರಿಕ ಘಟಾದಿಗಳ ಆಕಾರ ವರ್ಣಗಳಿಗೆ ಸದೃಶವಾದ ಅನಾರೋಪಿತವಾದ ಆಕಾರವರ್ಣಗಳನ್ನು ಅಂಗೀಕರಿಸಬೇಕಾಗುತ್ತದೆ ಎಂದು ಅಭಿಪ್ರಾಯ.

**ಸೋಪಾಧಿಕಭ್ರಮೇಪಿ ಸ್ಯಾದುಪಾಧೇಸ್ತಾದೃಗಾತ್ಮತಾ ।**
**ಪೀತಃ ಪೀತೇನ ಪಿತ್ತೇನ ತಿಕ್ತಸ್ತಿಕ್ತೇನ ತೇನ ಹಿ ॥ ೫೫೦ ॥**

**ಅರ್ಥ-** ಸೋಪಾಧಿಕಭ್ರಮೇಪಿ= ಸೋಪಾಧಿಕ ಭ್ರಮದಲ್ಲಿಯೂ ಕೂಡ, ಉಪಾಧೇಃ= ಉಪಾಧಿಗೆ, ತಾದೃಗಾತ್ಮತಾ= ಆರೋಪ್ಯಸದೃಶ ಆಕಾರವರ್ಣಗಳು ಇರುತ್ತವೆ, ಪೀತೇನ= ಹಳದಿ ಬಣ್ಣದ, ಪಿತ್ತೇನ= ಪಿತ್ತರಸದಿಂದ, ಪೀತಃ= ಶಂಖವು ಹಳದಿಯಾಗಿ ಕಾಣುತ್ತದೆ, ತಿಕ್ತೇನ= ಕಹಿಯಾದ, ತೇನ= ಆ ಪಿತ್ತರಸದಿಂದ, ತಿಕ್ತಃ ಹಿ= ಗುಡವು ಕಹಿಯಾಗಿ ಕಾಣುತ್ತದೆಯಷ್ಟೇ.

**ಅನುವಾದ -** ಸೋಪಾಧಿಕಭ್ರಮಸ್ಥಳದಲ್ಲಿಯೂ ಕೂಡ ಉಪಾಧಿಗೆ ಆರೋಪ್ಯ ಮಾಣವಾದ ಆಕಾರವರ್ಣಗಳಿಗೆ ಸದೃಶವಾದ ಆಕಾರವರ್ಣಗಳು ಇದ್ದೇ ಇರುತ್ತವೆ. ಶಂಖವು ಪಿತ್ತರಸದ ಹಳದಿಯ ಬಣ್ಣದಿಂದ ಹಳದಿಯಾಗಿ ಕಾಣುತ್ತದೆ. ಬೆಲ್ಲವು ಪಿತ್ತರಸದ ಕಹಿ ರಸದಿಂದ ಕಹಿಯಾಗಿ ಕಾಣುತ್ತದೆ.

**ಭಾವವಿಲಾಸಿನೀ–** ಸೋಪಾಧಿಕಭ್ರಮತ್ವಾಂಗೀಕಾರೇಽಪಿ ಬ್ರಹ್ಮಣೋ ಜಗದಾಕಾರತ್ವಂ ನ ಮುಂಚತೀತ್ಯಾಹ – **ಸೋಪಾಧಿಕೇತಿ** ॥ ತಾದೃಗಾತ್ಮತಾ ಭ್ರಮಪ್ರಕಾರೀ ಭೂತಾಕಾರಗುಣ-ಸದೃಶಾಕಾರಗುಣವತ್ತೇತ್ಯರ್ಥಃ। ಪೀತಃ ಶಂಖೇ ಪೀತ ಇತಿ ಭ್ರಮ ಇತ್ಯರ್ಥಃ। ಪೀತೇನ ಪೀತವರ್ಣೇನ । ಪಿತ್ತೇನ ಪಿತ್ತಾಖ್ಯೋಪಾಧಿನಾ ಭವತೀತ್ಯರ್ಥಃ। ತಿಕ್ತಃ ಗುಡಸ್ತಿಕ್ತ ಇತಿ ಭ್ರಮಃ। ತಿಕ್ತೇನ ತಿಕ್ತರಸಯುಕ್ತೇನ । ತೇನ ಪಿತ್ತೇನ ॥ ೫೫೦ ॥

**ವಿವರಣೆ -** ಸೋಪಾಧಿಕ ಭ್ರಮಸ್ಥಳದಲ್ಲಿಯೂ ಉಪಾಧಿಯಲ್ಲಿ ಆರೋಪ್ಯಮಾಣವಾದ ಆಕಾರವರ್ಣಗಳಿಗೆ ಸದೃಶವಾದ ಅನಾರೋಪಿತವಾದ ಆಕಾರವರ್ಣಗಳಿರುತ್ತವೆ ಎಂದು ಇಲ್ಲಿಸಮರ್ಥನೆ ಮಾಡುತ್ತಾರೆ. ಪೀತಃ ಶಂಖಃ ಎಂಬಲ್ಲಿ ಪಿತ್ತರಸವು ಉಪಾಧಿ. ಅದರಲ್ಲಿರುವ ಪೀತವರ್ಣವು ಅನಾರೋಪಿತವಾದುದು. ತಿಕ್ತೋಗುಡಃ ಎಂಬಲ್ಲಿಯೂ ತಿಕ್ತರಸವು ಉಪಾಧಿ ಅದರಲ್ಲಿರುವ ತಿಕ್ತರಸವು ಅನಾರೋಪಿತವಾದುದೇ. ಆದ್ದರಿಂದ ಜಗದ್ಭ್ರಮವು ಸೋಪಾಧಿಕವೆಂದು ಅಂಗೀಕರಿಸಿದರೂ, ಬ್ರಹ್ಮನಲ್ಲಿ ಅನಾರೋಪಿತವಾದ ಉಪಾಧಿಸದೃಶ ಆಕಾರವರ್ಣಗಳನ್ನು ಅಂಗೀಕರಿಸಬೇಕು ಎಂದು ಅಭಿಪ್ರಾಯ.

ತವೋಪಾಧಿರವಿದ್ಯೈವ ತತ್ರಾಕಾರಾದಿ ಕಲ್ಪಿತಂ ।
ಉಪಾಧ್ಯಂತರಶೂನ್ಯತ್ವಾನ್ನಿರುಪಾಧಿಕಮೇವ ತತ್ ॥ ೫೫೧ ॥

**ಅರ್ಥ-** ತವೋಪಾಧಿಃ= ನಿನ್ನ ಉಪಾಧಿಯಾದರೂ, ಅವಿದ್ಯೈವ= ಅವಿದ್ಯೆಯೇ ಆಗಿದೆ, ತತ್ರ= ಅಲ್ಲಿ, ಕಲ್ಪಿತಂ= ಕಲ್ಪಿತವಾದ, ಆಕಾರಾದಿ ತತ್= ಆ ಆಕಾರ ಮೊದಲಾದವುಗಳೆಲ್ಲವೂ, ಉಪಾಧ್ಯಂತರಶೂನ್ಯತ್ವಾತ್= ಇನ್ನೊಂದು ಉಪಾಧಿ ಇಲ್ಲದಿರುವುದರಿಂದ, ನಿರುಪಾಧಿಕಮೇವ= ನಿರುಪಾಧಿಕವೇ ಆಗಿದೆ.

**ಅನುವಾದ -** ನಿನಗೆ ಅಭಿಮತವಾದ ಉಪಾಧಿಯಾದರೂ ಅವಿದ್ಯೆಯೇ ಆಗಿದೆ. ಅವಿದ್ಯೆಯಲ್ಲಿ ಇರುವ ಆಕಾರವರ್ಣಾದಿಗಳು ಅದಕ್ಕೆ ಇನ್ನೊಂದು ಉಪಾಧಿ ಇಲ್ಲದಿರುವುದರಿಂದ ನಿರುಪಾಧಿಕವೇ ಆಗಿದೆ.

**ಭಾವವಿಲಾಸಿನೀ–** ತವ ಮತೇ ಉಪಾಧಿಃ ಜಗದಾರೋಪೋಪಾಧಿಃ । ತತ್ರ ಅವಿದ್ಯಾ- ಯಾಮ್ । ಅವಿದ್ಯಾಯಾ ಏವ ಕಲ್ಪಿತತ್ವಾದಿತಿ ಭಾವಃ । ತತ್ ಅವಿದ್ಯಾಯಾಂ ಕಲ್ಪಿತಮಾಕಾರ- ವರ್ಣಾದಿಕಮ್॥ ೫೫೧ ॥

**ವಿವರಣೆ -** ಪರಮತದಂತೆ ಅವಿದ್ಯೆಯೇ ಉಪಾಧಿ. ಆ ಅವಿದ್ಯೆಯಲ್ಲಿರುವ ಆಕಾರಾದಿಗಳು ಆರೋಪಿತವೆಂದು ಅಂಗೀಕರಿಸಿದರೆ ಅದಕ್ಕೆ ಕಾರಣವಾದ ಇನ್ನೊಂದು ಉಪಾಧಿಯನ್ನು ಅಂಗೀಕರಿಸಬೇಕಾಗುತ್ತದೆ. ಹೀಗೆ ಅನವಸ್ಥಾ ದೋಷವು ಬರುತ್ತದೆ. ಆದ್ದರಿಂದ ಅವಿದ್ಯೆಯಲ್ಲಿರುವ ಆಕಾರಾದಿಗಳನ್ನು ನಿರುಪಾಧಿಕವೆಂದೇ ಅಂಗೀಕರಿಸಬೇಕು ಎಂದು ಅಭಿಪ್ರಾಯ.

ತನ್ನಿಷ್ಠನಿಯತಾಕಾರಭ್ರಾಂತ್ಯೈ ಬ್ರಹ್ಮಭವೇತ್ತಥಾ ।
ಅತೋ ಜಗದ್ಭ್ರಮಾಯಾಭೂದ್ ಬ್ರಹ್ಮೈವ ಜಗದಂತರಂ ॥ ೫೫೨ ॥

**ಅರ್ಥ-** ತನ್ನಿಷ್ಠನಿಯತಾಕಾರಭ್ರಾಂತ್ಯೈ= ಅವಿದ್ಯಾನಿಷ್ಠವಾದ ನಿಯತಾಕಾರ ಭ್ರಾಂತಿಯ ಸಲುವಾಗಿ, ಬ್ರಹ್ಮ= ಬ್ರಹ್ಮನೇ, ತಥಾ= ಅಂತಹ ಅನೇಕ ನಿಯತಾಕಾರವುಳ್ಳವನಾಗಿ, ಭವೇತ್= ಆಗಬೇಕು, ಅತಃ= ಆದ್ದರಿಂದ, ಜಗದ್ಭ್ರಮಾಯ= ಜಗತ್ತಿನ ಭ್ರಮೆಯನ್ನು ಉಪಪಾದನೆ ಮಾಡಲು, ಬ್ರಹ್ಮೈವ= ಬ್ರಹ್ಮನೇ, ಜಗದಂತರಂ ಅಭೂತ್= ಇನ್ನೊಂದು ಜಗತ್ತಾದನು.

**ಅನುವಾದ -** ಅವಿದ್ಯಾನಿಷ್ಠವಾದ ನಿಯತಾಕಾರದ ಭ್ರಾಂತಿಗಾಗಿ ಬ್ರಹ್ಮನೇ ಅಂತಹ ಆಕಾರವುಳ್ಳವನಾಗಬೇಕು. ಆದ್ದರಿಂದ ಜಗತ್ತಿನ ಭ್ರಮೆಯನ್ನು ಕೂಡಿಸಲು ಬ್ರಹ್ಮನೇ ಇನ್ನೊಂದು ಜಗತ್ತಾಗಬೇಕಾಗುತ್ತದೆ.

**ಭಾವವಿಲಾಸಿನೀ–** ತನ್ನಿಷ್ಠನಿಯತಾಕಾರಭ್ರಾಂತ್ಯೈ ಅವಿದ್ಯಾನಿಷ್ಠನಿರುಪಾಧಿಕನಿಯತ ಜಗದ್-ಭ್ರಮುಹೇತುಭೂತನಾನಾಕಾರವರ್ಣರಸಾದಿ ಭ್ರಾಂತ್ಯೈ । ತಥಾ ಆರೋಪ್ಯಮಾಣಾವಿದ್ಯಾ-ನಿಷ್ಠಾಕಾರಾದಿ ಸದೃಶಾಕಾರಾದಿ ಪ್ರಧಾನೀಭೂತ ಜಗದಂತರ ಸದೃಶಾಕಾರವತ್ತೇತ್ಯರ್ಥಃ । ನಿರುಪಾಧಿಕಭ್ರಮೇ ಅಧಿಷ್ಠಾನಸ್ಯೈವ ಪ್ರಧಾನಸಾದೃಶ್ಯನಿಯಮಾತ್ ಜಗದ್‌ಭ್ರಮಸ್ಯ ಔಪಾಧಿಕತ್ವೇಽಪಿ ತತ್ ಭ್ರಮಸಿದ್ಧ್ಯರ್ಥಮುಕ್ತರೀತ್ಯಾ ಯದುಪಾಧೌ ಜಗದಂಗೀಕಾರ್ಯಂ ತಸ್ಯ ನಿರುಪಾಧಿಕ-ಭ್ರಮಸಿದ್ಧತ್ವೇನಾಂತತಃ ತತ್‌ಭ್ರಾಂತ್ಯರ್ಥಮೇವಾಧಿಷ್ಠಾನಭೂತೇ ಬ್ರಹ್ಮಣಿ ಪಾರಮಾರ್ಥಿಕ ಜಗದಂತರಂ ಪ್ರಧಾನೀಭೂತಜಗದಂತರಂ ಚಾಂಗೀಕಾರ್ಯಮ್ । ಏವಂಚ ಸೋಪಾಧಿಕ-ಭ್ರಮತ್ವಾಂಗೀಕಾರೇಽಪಿ ಪರಸ್ಯ ಜಗಚ್ಚತುಷ್ಟಯಕಲ್ಪನಯಾ ಕಲ್ಪನಾಗೌರವವ್ । ಬಕಬಂಧಪ್ರಯಾಸಶ್ಚಾಧಿಕೋಽಭೂತ್ । ಅಸ್ಮದುಕ್ತದೋಷಪರಿಜಿಹೀರ್ಷಾ ತು ಶೀರ್ಷಾಪಗಮೇಽಪಿ ನ ಭವತೀತಿ ಭಾವಃ । ಅತಃ ದ್ವಿಪ್ರಕಾರಕಭ್ರಮೇಽಪಿ ಬ್ರಹ್ಮಣಿ ಜಗದಂತರ-ಸ್ಯಾವಶ್ಯಕತ್ವಾತ್ ॥ ೫೫೨ ॥

**ವಿವರಣೆ** - ಜಗತ್ತೇ (ಜಗತ್‌ಜ್ಞಾನವೇ) ಭ್ರಮರೂಪವಾಗಿದೆ. ಈ ಭ್ರಮದಲ್ಲಿ ನಿಯತವಾದ ನಾನಾ ವರ್ಣಗಳೂ, ನಾನಾ ಆಕಾರಗಳೂ ಮತ್ತು ನಾನಾ ರಸಗಳೂ ತೋರುತ್ತದೆ. ಈ ಜಗದ್ಭ್ರಮವು ಸೋಪಾಧಿಕವೆಂದು ಅಂಗೀಕರಿಸಿದರೆ ಅವಿದ್ಯೆಯೇ ಉಪಾಧಿಯಷ್ಟೇ? ಆಗ ಜಗತ್ತಿನಲ್ಲಿರುವ ನಾನಾವರ್ಣಾಕಾರಗಳಿಗೆ ಸದೃಶವಾದ ವರ್ಣಾಕಾರ ರಸಾದಿಗಳನ್ನು ಅವಿದ್ಯೆಯಲ್ಲಿ ಒಪ್ಪಬೇಕು. ಏಕೆಂದರೆ ಸೋಪಾಧಿಕ ಭ್ರಮದಲ್ಲಿ ಉಪಾಧಿಯಲ್ಲಿರುವ ಧರ್ಮಗಳೇ ಬೇರೆ ವಸ್ತುವಿನಲ್ಲಿ ಆರೋಪಿಸಲ್ಪಡುತ್ತವೆಯಷ್ಟೇ? ಆದ್ದರಿಂದ ಎಲ್ಲರಿಗೂ ತೋರುವುದು ಒಂದು ಜಗತ್ತು. ಅದಕ್ಕೆ ಸದೃಶವಾದ ಅವಿದ್ಯಾನಿಷ್ಠವಾದ ಇನ್ನೊಂದು ಜಗತ್ತನ್ನು ಅಂಗೀಕರಿಸಬೇಕು. ಹೀಗೆ ಎರಡು ಜಗತ್ತಾಯಿತು. ಅವಿದ್ಯಾನಿಷ್ಠವಾದ ಜಗತ್ತಾದರೂ ನಿರುಪಾಧಿಕ ಭ್ರಮಸಿದ್ಧವೆಂದು ಹೇಳಬೇಕು. ಇಲ್ಲದಿದ್ದರೆ ಅನವಸ್ಥಾ ದೋಷವು ಬರುತ್ತದೆ. ಅವಿದ್ಯೆಯೂ ಸಹ ತನ್ನ ಧರ್ಮಗಳೊಂದಿಗೆ ಬ್ರಹ್ಮನಲ್ಲಿ ಆರೋಪಿತವಷ್ಟೇ? ಈ ನಿರುಪಾಧಿಕ ಭ್ರಮಕ್ಕೆ ಸದೃಶವಾದ ಒಂದು ಪ್ರಧಾನವು ಮತ್ತು ಸದೃಶವಾದ ಅಧಿಷ್ಠಾನವು ಇರಬೇಕು. ಜಗತ್ತಿಗೆ ಜಗತ್ತೇ ಸದೃಶವಾಗುವುದರಿಂದ ಈ ಆರೋಪಕ್ಕೆ ಪ್ರಧಾನವಾದ ಮೂರನೆಯ ಜಗತ್ತನ್ನು ಒಪ್ಪಬೇಕು. ಅಧಿಷ್ಠಾನವೂ ಸಹ ಸದೃಶವೇ ಆಗಬೇಕಾದ್ದರಿಂದ ಅಧಿಷ್ಠಾನವಾದ ಶುದ್ಧ ಚೈತನ್ಯದಲ್ಲಿ ಈ ಜಗತ್ತಿಗೆ ಸದೃಶವಾದ ಇನ್ನೊಂದು ಜಗತ್ತು ಎಂದೇ ಒಪ್ಪಬೇಕು. ಇದು ನಾಲ್ಕನೆಯ ಜಗತ್ತು. ಹೀಗೆ ಜಗದ್ಭ್ರಮವು ಸೋಪಾದಿಕ ಭ್ರಮವೆಂದು ಅಂಗೀಕರಿಸಿದರೆ ನಾಲ್ಕು ಜಗತ್ತನ್ನು ಅಂಗೀಕರಿಸಬೇಕಾದ ಪ್ರಸಂಗವು ಬರುತ್ತದೆ.

ಜಗದ್ಭ್ರಮವು ನಿರುಪಾಧಿಕವೆಂದು ಅಂಗೀಕರಿಸಿದರೆ ಆರೋಪಕ್ಕೆ ಪ್ರಧಾನವಾದ ಒಂದು ಜಗತ್ತನ್ನೂ ಮತ್ತು ಅಧಿಷ್ಠಾನದಲ್ಲಿ ಸದೃಶವಾದ ಇನ್ನೊಂದು ಜಗತ್ತನ್ನೂ ಅಂಗೀಕರಿಸಬೇಕಾಗಿ ಬರುತ್ತದೆ. ಹೀಗೆ ಈ ಕಲ್ಪದಲ್ಲಿ ಎರಡು ಜಗತ್ತನ್ನು ಅಂಗೀಕರಿಸಬೇಕಾಗುತ್ತದೆ. ಅಲ್ಲದೇ, ಆರೋಪ್ಯಮಾನವಾದ ನಾನಾಕಾರ ಯುಕ್ತವಾದ ಜಗತ್ತಿಗೆ ಸದೃಶವಾದ ದೋಷವು ಅಂತಹ

ನಾನಾಕಾರಯುಕ್ತವಾದ ಅಧಿಷ್ಠಾನವೆಂದು ಒಪ್ಪಬೇಕಾಗುವುದರಿಂದ ಬ್ರಹ್ಮನನ್ನೇ ಜಗತ್ತು ಎಂದು ಅಂಗೀಕಾರ ಮಾಡಬೇಕಾಗುತ್ತದೆ. ಹೀಗೆ ಸೋಪಾಧಿಕಭ್ರಮವನ್ನು ಅಂಗೀಕರಿಸಿದರೂ ಅಥವಾ ನಿರುಪಾಧಿಕಭ್ರಮವನ್ನು ಅಂಗೀಕರಿಸಿದರೂ ಕಲ್ಪನಾಗೌರವ ದೋಷವು ಬರುತ್ತದೆ. ಅಲ್ಲದೇ, ನಾವು ಹೇಳಿರುವ ದೋಷಗಳನ್ನು ಪರಿಹಾರ ಮಾಡಲು ಸಾಧ್ಯವಿಲ್ಲ. ಸತ್ಯತ್ವ ಪಕ್ಷದಲ್ಲಿ ಕಲ್ಪನಾ ಲಾಘವವು ಇದೆ ಮತ್ತು ಯಾವ ದೋಷವೂ ಇಲ್ಲ ಎಂದು ಅಭಿಪ್ರಾಯ.

ಮಮಾಸ್ತು ತಜ್ಜಗತ್ ಸತ್ಯಂ ಮನೋರಥರಥೋಪಮಂ ।
ಇದಂ ಜಗತ್ ತವೈವಾಸ್ತು ಮಿಥ್ಯಾ ಮಿಥ್ಯಾತ್ವವಾದಿನಃ ॥ ೫೫೩ ॥

**ಅರ್ಥ-** ಮಮ= ನನಗಾದರೂ, ತಜ್ಜಗತ್= ಬ್ರಹ್ಮನಲ್ಲಿ ನೀನು ಅಂಗೀಕರಿಸಬೇಕಾಗುವ ಜಗತ್ತು, ಅಸ್ತು= ಇರಲಿ, ಮನೋರಥರಥೋಪಮಂ= ಮನೋರಥದಲ್ಲಿ ಕಾಣುವ ರಥದಂತಿರುವ, ಇದಂ ಮಿಥ್ಯಾಜಗತ್= ಈ ಮಿಥ್ಯಾಭೂತವಾದ ಜಗತ್ತು, ಮಿಥ್ಯಾವಾದಿನಃ= ಮಿಥ್ಯಾತ್ವವನ್ನು ಹೇಳುವ, ತವೈವ= ನಿನಗೇ, ಅಸ್ತು= ಇರಲಿ.

**ಅನುವಾದ -** ಹಿಂದಿನ ಶ್ಲೋಕದಲ್ಲಿ ಹೇಳಿದಂತೆ ಬ್ರಹ್ಮನಲ್ಲಿ ಅಂಗೀಕರಿಸಲ್ಪಡಬೇಕಾದ ಸತ್ಯವಾದ ಜಗತ್ತು ನನಗೇ ಇರಲಿ. ಮನೋರಥದಲ್ಲಿ ತೋರುವ ರಥದಂತಿರುವ ಈ ಮಿಥ್ಯಾಭೂತವಾದ ಜಗತ್ತು ಮಿಥ್ಯಾತ್ವವಾದಿಯಾದ ನಿನಗೇ ಇರಲಿ.

**ಭಾವವಿಲಾಸಿನೀ–** ತಜ್ಜಗತ್ ಬ್ರಹ್ಮಣಿ ತ್ವಯಾಂಗೀಕೃತಂ ಜಗತ್ । ಮನೋರಥರಥೋಪಮಂ ಇದಂ ಜಗತ್ । ಅತ ಏವ ಮಿಥ್ಯಾ ಮಿಥ್ಯಾಭೂತಮ್ । ತವೈವಾಸ್ತ್ವಿತಿ ಸಂಬಂಧಃ । ಮಿಥ್ಯಾತ್ವವಾದೇ ಬ್ರಹ್ಮಣಿ ಸತ್ಯಜಗದಂತರಸ್ಯಾಂಗೀಕರ್ತವ್ಯತ್ವಾತ್ ಕಲ್ಪನಾಗೌರವಮ್ । ಸತ್ಯತ್ವವಾದೇ ತು ಬ್ರಹ್ಮಣಿ ಜಗದಂತರಸ್ಯಾಕಲ್ಪ್ಯತ್ವಾತ್ । ಮಮಾಸ್ತು ತಜ್ಜಗದಿತಿ ತು ಪರಪರಿಹಾಸಾಯ ವಾ ಅಸ್ಯೈವ ಜಗತಃ ವಿಶ್ವರೂಪಸ್ಯ ಹರೇಃ ಪಾದಾದ್ಯವಯವಲೋಮನ- ಖಾದ್ಯಾಶ್ರಿತತ್ವಾದ್ವೋಕ್ತಮಿತಿ ಭಾವಃ ॥ ೫೫೩ ॥

**ವಿವರಣೆ -** ಜಗತ್ತಿನ ಮಿಥ್ಯಾತ್ವಸಿದ್ಧಿಗಾಗಿ ಬ್ರಹ್ಮನಲ್ಲಿ ಸತ್ಯವಾದ ಇನ್ನೊಂದು ಜಗತ್ತನ್ನು ಅಂಗೀಕಾರ ಮಾಡಬೇಕಾಗಿ ಬರುವುದೆಂದು ಹಿಂದೆ ಉಪಪಾದನೆ ಮಾಡಿರುವುದರಿಂದ ಆ ಜಗತ್ತು ನನಗಿರಲಿ. ಅಥವಾ ವಿಶ್ವರೂಪನಾದ ಬ್ರಹ್ಮನಲ್ಲಿ ಪಾದಾದಿ ಅವಯವವನ್ನು ಆಶ್ರಯಿಸಿಕೊಂಡಿರುವ ಜಗತ್ತು ನನಗಿರಲಿ ಎಂದು ಪರಪರಿಹಾಸರೂಪವಾಗಿಯಾಗಲೀ ಅಥವಾ ಇದೇ ಜಗತ್ತೇ ವಿಶ್ವರೂಪನಾದ ಹರಿಯ ಅಂಗಾಂಗಗಳನ್ನು ಆಶ್ರಯಿಸಿಕೊಂಡಿರುವ ದೃಷ್ಟಿಯಿಂದಾಗಲೀ ಗ್ರಂಥಕಾರರು ಇಲ್ಲಿ ಹೇಳುತ್ತಾರೆ.

ಪಟಸ್ಥಲೇ ಘಟಭ್ರಾಂತಿರ್ಘಟದೇಶೇ ಪಟಭ್ರಮಃ ।
ನ ಕ್ವಾಪಿ ವಿದ್ಯತೇ ವಸ್ತುವ್ಯತ್ಯಾಸೋ ವಿಭ್ರಮಸ್ಯ ಹಿ ॥ ೫೫೪ ॥

**ಅರ್ಥ-** ಪಟಸ್ಥಲೇ= ಪಟಪ್ರದೇಶದಲ್ಲಿ, ಕ್ವಾಪಿ= ಎಂದೂ, ಘಟಭ್ರಾಂತಿಃ= ಘಟಭ್ರಾಂತಿಯು, ನ ವಿದ್ಯತೇ= ಬರುವುದಿಲ್ಲ, ಘಟದೇಶೇ= ಘಟದೇಶದಲ್ಲಿಯೂ, ಪಟಭ್ರಮಃ= ಪಟ ಭ್ರಮವು, ಕ್ವಾಪಿ= ಎಲ್ಲಿಯೂ, ನ ವಿದ್ಯತೇ= ಬರುವುದಿಲ್ಲ, ವಿಭ್ರಮಸ್ಯ= ಭ್ರಾಂತಿಯಲ್ಲಾದರೂ, ವಸ್ತುವ್ಯತ್ಯಾಸೋ ಹಿ= ವಸ್ತುವಿನ ವ್ಯತ್ಯಾಸವಿರುವುದಷ್ಟೇ.

**ಅನುವಾದ** - ಪಟ ಪ್ರದೇಶದಲ್ಲಿ ಘಟಭ್ರಾಂತಿಯಾಗಲೀ, ಘಟಪ್ರದೇಶದಲ್ಲಿ ಪಟಭ್ರಾಂತಿಯಾಗಲೀ ಎಂದೂ ಬರುವುದಿಲ್ಲ. ಭ್ರಾಂತಿಯ ಸ್ಥಳದಲ್ಲಿ ಇಂತಹ ನಿಯಮವು ಇರುವುದಿಲ್ಲವಷ್ಟೇ? ವ್ಯತ್ಯಾಸವೇ ಇರುವುದಷ್ಟೇ?

**ಭಾವವಿಲಾಸಿನೀ–** ಪ್ರತೀತಿನಿಯಮಾನ್ಯಥಾನುಪಪತ್ತ್ಯಾಪಿ ಬ್ರಹ್ಮಣಿ ನಿಯತಾಕಾರೋ ವಾ ಜಗತ್ ಸತ್ಯತ್ವಂ ವಾಚ್ಯಮಿತ್ಯಾಹ –**ಪಟೇತಿ** ॥ ವಸ್ತುವ್ಯತ್ಯಾಸಃ ಉಕ್ತವಿಧಯಾ ವಸ್ತುವ್ಯತ್ಯಾಸಃ ॥೫೫೪॥

**ವಿವರಣೆ** - ಜಗತ್ ಪ್ರತೀತಿಗೆ ನಿಯತಾಕಾರವಿರುವುದರಿಂದ ತದನ್ಯಥಾನುಪಪತ್ತಿಯಿಂದ ಬ್ರಹ್ಮನಿಗೆ ಜಗದಾಕಾರವನ್ನಾಗಲೀ ಅಥವಾ ಜಗತ್ತಿಗೆ ಸತ್ಯತ್ವವನ್ನಾಗಲೀ ಅಂಗೀಕರಿಸಬೇಕೆಂದು ಇಲ್ಲಿ ಹೇಳುತ್ತಾರೆ. ಭ್ರಾಂತಿ ಸ್ಥಳದಲ್ಲಿ ಒಂದು ವಸ್ತುವು ಮೊದಲು ಇನ್ನೊಂದು ವಸ್ತುವಾಗಿ ತೋರಿ ಅನಂತರ ಮತ್ತೊಂದು ವಸ್ತುವಾಗಿ ತೋರಬಹುದು, ಎಂದರೆ ರಜ್ಜುವನ್ನು ನೋಡಿ ಪುಷ್ಪಮಾಲೆ ಎಂದು ಅಥವಾ ಸರ್ಪವೆಂದು ತಿಳಿಯಬಹುದು. ಒಂದೇ ಆಕಾರದ ನಿಯಮವಿರುವುದಿಲ್ಲ. ಭ್ರಾಂತಿಯಲ್ಲಾದರೆ ಘಟದೇಶದಲ್ಲೇ ಯಾವಾಗಲೂ ಘಟಾಕಾರ ಪ್ರತೀತಿಯೇ ಬರುತ್ತದೆ. ಅದರಂತೆ ಪಟದೇಶದಲ್ಲಿಯೂ ಯಾವಾಗಲೂ ಪಟಾಕಾರ ಪ್ರತೀತಿಯೇ ಬರುತ್ತದೆ. ಇಂತಹ ಪ್ರತೀತಿಯ ನಿಯತಾಕಾರತ್ವವನ್ನು ಕೂಡಿಸಬೇಕಾದರೆ ಬ್ರಹ್ಮನಿಗೆ ಅಲ್ಲಲ್ಲಿ ಆಯಾ ಆಕಾರಗಳಿದೆ ಎಂದು ಒಪ್ಪಬೇಕು ಅಥವಾ ಜಗತ್ತು ಸತ್ಯವೆಂದು ಒಪ್ಪಬೇಕು ಎಂದು ಅಭಿಪ್ರಾಯ.

ತತ್ತದಾ ಸ್ಯಾದ್ ಯದಿ ಬ್ರಹ್ಮ ತತ್ರ ತತ್ರೈವ ತಾದೃಶಂ ।
ಸ್ವಯಮಸ್ತಿ ನ ಚಾನ್ಯತ್ರ ತತೋ ಭ್ರಾಂತಿಶ್ಚ ತಾದೃಶೀ ॥ ೫೫೫ ॥

ಅಧಿಷ್ಠಾನಾನುಸಾರೇಣ ತತ್ರ ತತ್ರೈವ ಜಾಯತೇ ।
ಇತಿ ವಾ ಸ್ವಸ್ವಹೇತೂತ್ಥಾಃ ಪದಾರ್ಥಾಸ್ತತ್ರ ತತ್ರ ಹಿ ॥ ೫೫೬ ॥

ಸಂತಿ ಸ್ವಭಾವತಸ್ತಸ್ಮಾತ್ ತತ್ರ ತತ್ರೈವ ತಾದೃಶೀ ।
ಮತಿರ್ವ್ಯತ್ಯಾಸತೋ ನೇತಿ ವ್ಯವಸ್ಥಾಶ್ರಯಣೇನ ವಾ ।
ಇತಸ್ತೃತೀಯಃ ಪಂಥಾಸ್ತು ನ ಮುರಾರೇಶ್ಚ ವಿದ್ಯತೇ ॥ ೫೫೭ ॥

**ಅರ್ಥ-** ಯದಿ= ಒಂದು ಪಕ್ಷ, ಬ್ರಹ್ಮ= ಬ್ರಹ್ಮನು, ತತ್ರ ತತ್ರೈವ= ಅಲ್ಲಲ್ಲಿಯೇ, ತಾದೃಶಂ= ಅಂತಹ ಆಕಾರವನ್ನು ಉಳ್ಳವನಾಗಿ, ಸ್ವಯಂ ಅಸ್ತಿ= ತಾನೇ ಇದ್ದಾನೆ, ಅನ್ಯತ್ರ= ಬೇರೆ

ಕಡೆಗಳಲ್ಲಿ, ನ ಚ= ಇಲ್ಲ ಎಂದಾದರೆ, ತದಾ= ಆಗ, ತತ್= ಪ್ರತೀತಿಯ ನಿಯತಾಕಾರತ್ವವು, ಸ್ಯಾತ್= ಉಪಪನ್ನವಾಗುತ್ತದೆ. ಅಧಿಷ್ಠಾನಾನುಸಾರೇಣ= ಅಧಿಷ್ಠಾನದ ಆಕಾರಕ್ಕೆ ಅನುಗುಣವಾಗಿ, ತತ್ರ ತತ್ರೈವ= ಅಲ್ಲಲ್ಲಿಯೇ, ತಾದೃಶೀ= ಅಂತ ಅಂತಹ ಆಕಾರಗಳನ್ನು ಉಲ್ಲೇಖಿಸುವ, ಭ್ರಾಂತಿಶ್ಚ= ಭ್ರಾಂತಿಯೂ ಕೂಡ, ಜಾಯತೇ= ಹುಟ್ಟುತ್ತದೆ, ಇತಿ ವಾ= ಎಂದಾಗಲೀ, ವಾ= ಅಥವಾ, ಸ್ವಸ್ವಹೇತೂತ್ಥಾಃ= ತಮ್ಮ ತಮ್ಮ ಕಾರಣಗಳಿಂದ ಜನ್ಯವಾದ, ಪದಾರ್ಥಾಃ= ಪದಾರ್ಥಗಳು, ತತ್ರ ತತ್ರ= ಅಲ್ಲಲ್ಲಿ, ಸ್ವಭಾವತಃ= ಸ್ವಾಭಾವಿಕವಾಗಿಯೇ, ಸಂತಿ= ಇವೆ, ತಸ್ಮಾತ್= ಆದ್ದರಿಂದ, ತತ್ರೈವ= ಅಲ್ಲಿಯೇ, ತಾದೃಶೀ ಮತಿಃ= ಅಂತಹ ಆಕಾರವನ್ನು ಉಲ್ಲೇಖಿಸುವ ಪ್ರತೀತಿಯು ಉಂಟಾಗುತ್ತದೆ, ವ್ಯತ್ಯಾಸತೋ ನ= ವ್ಯತ್ಯಾಸವಾಗಿ ಉಂಟಾಗುವುದಿಲ್ಲ, ಇತಿ= ಎಂದಾಗಲೀ, ವ್ಯವಸ್ಥಾಶ್ರಯಣೇನ= ವ್ಯವಸ್ಥೆಯನ್ನು ಮಾಡುವುದರಿಂದಲಾಗಲೀ ಉಪಪನ್ನವಾಗುತ್ತದೆ, ಇತಃ= ಇವೆರಡನ್ನು ಬಿಟ್ಟು, ತೃತೀಯ ಪಂಥಾಃ= ಮೂರನೆಯ ಮಾರ್ಗವು, ಮುರಾರೇಶ್ಚ= ಮುರಾರಿಗೂ ಕೂಡ, ನ ವಿದ್ಯತೇ= ಇರುವುದಿಲ್ಲ.

**ಅನುವಾದ** - ಒಂದು ಪಕ್ಷ ಬ್ರಹ್ಮನು ಅಲ್ಲಲ್ಲಿ ಅಂತಂತಹ ಆಕಾರವನ್ನು ಹೊಂದಿ ತಾನೇ ಇದ್ದಾನೆ, ಬೇರೆ ಕಡೆಯಲ್ಲಿ ಆ ಆಕಾರವನ್ನು ಹೊಂದಿಲ್ಲ. ಆದ್ದರಿಂದ ಭ್ರಾಂತಿಯೂ ಸಹ ಅಲ್ಲಲ್ಲಿ ಆಯಾ ಅಧಿಷ್ಠಾನದ ಆಕಾರಕ್ಕೆ ಅನುಗುಣವಾಗಿ ಉಂಟಾಗುತ್ತದೆ ಎಂದಾಗಲೀ ಪ್ರತೀತಿಯ ನಿಯತಾಕಾರತ್ವವನ್ನು ಕೂಡಿಸಬೇಕು ಅಥವಾ ತಮ್ಮ ತಮ್ಮ ಕಾರಣಗಳಿಂದ ಜನ್ಯವಾದ ಪದಾರ್ಥಗಳು ಸ್ವಾಭಾವಿಕವಾಗಿ ಅಲ್ಲಲ್ಲಿಯೇ ಇವೆ. ಆದ್ದರಿಂದ ಅಲ್ಲಲ್ಲಿಯೇ ಅಂತಹ ಆಕಾರವನ್ನು ಉಲ್ಲೇಖಿಸುವ ಬುದ್ಧಿಯು ಉಂಟಾಗುತ್ತದೆ. ವ್ಯತ್ಯಾಸದಿಂದ ಉಂಟಾಗುವುದಿಲ್ಲ ಎಂಬ ವ್ಯವಸ್ಥೆಯಿಂದಲಾಗಲೀ ಪ್ರತೀತಿಗೆ ನಿಯತಾಕಾರತ್ವವನ್ನು ಕೂಡಿಸಬೇಕು. ಇದನ್ನು ಬಿಟ್ಟು ಮೂರನೆಯ ಮಾರ್ಗವು ಮುರಾರಿಗೂ ದೊರೆಯುವುದಿಲ್ಲ.

**ಭಾವವಿಲಾಸಿನೀ**– ತದ್ವಸ್ತುವ್ಯತ್ಯಾಸಂ ವಿನಾ ತತ್ತತ್ ಪದಾರ್ಥಜ್ಞಾನಮ್ । ಬ್ರಹ್ಮಮಿಥ್ಯಾತ್ವ ಪಕ್ಷೇऽಧಿಷ್ಠಾನಭೂತಂ ಬ್ರಹ್ಮ । ತಾದೃಶಂ ಘಟ ಭ್ರಮಸ್ಥಲೇ ಘಟಸದೃಶಾಕಾರಮ್ । ಪಟಭ್ರಮಸ್ಥಲೇ ಪಟಸದೃಶಾಕಾರಮಿತ್ಯರ್ಥಃ । ತಾದೃಶೀ ಅಧಿಷ್ಠಾನಬ್ರಹ್ಮಸದೃಶೀ । ಸತ್ಯತ್ವಪಕ್ಷೇ ಸ್ವಸ್ವಹೇತೂತ್ಥಾಃ ತಂತುಮೃದಾದಿಸ್ವಕಾರಣ ಜಾತಾಃ । ತಸ್ಮಾತ್ ಘಟಪ್ರಮಾಸ್ಥಲೇ ಘಟಸ್ಯೈವ ವಿದ್ಯಮಾನತ್ವಾತ್ । ಪಟಪ್ರಮಾಸ್ಥಲೇ ಪಟಸ್ಯೈವ ವಿದ್ಯಮಾನತ್ವಾತ್ । ಇತಿ ವ್ಯವಸ್ಥಾಶ್ರಯಣೇನ ವಾ ಪ್ರತೀತಿ ನಿಯಮೋ ವ್ಯಕ್ತ ಇತ್ಯರ್ಥಃ । ಇತಃ ಮಿಥ್ಯಾತ್ವಪಕ್ಷೋಕ್ತಾಧಿಷ್ಠಾನ ಸಾರೂಪ್ಯನಿಯಮಾತ್ ಸತ್ಯತ್ವಪಕ್ಷೋಕ್ತಸ್ವಸ್ವಕಾರಣನಿಯತಕಾರ್ಯ ನಿಯಮಾಚ್ಚ । ಮುರಾರೇಸ್ತೃತೀಯಃ ಪಂಥಾ ಇತಿ ಲೋಕೇ ವದಂತಿ । ಅತಃ ನ ಮುರಾರೇರಿತ್ಯುಕ್ತಮ್ । ಮುರಾರಿನಾಮಾ ಕಶ್ಚಿನ್ಮಿಶ್ರಃ । ತೇನಾಪ್ಯತ್ರ ತೃತೀಯಪಕ್ಷೋನ್ನಯನಂ ಕರ್ತುಂ ನ ಶಕ್ಯಮಿತ್ಯರ್ಥಃ ।। ೫೫೫-೫೫೭ ।।

**ವಿವರಣೆ** - ಪ್ರತೀತಿಗೆ ನಿಯತಾಕಾರತ್ವವನ್ನು ಕೂಡಿಸಲು ಬ್ರಹ್ಮನಿಗೆ ಅಲ್ಲಲ್ಲಿ ನಿಯತಾಕಾರತ್ವವನ್ನು ಒಪ್ಪಬೇಕು ಅಥವಾ ಅಲ್ಲಲ್ಲಿ ನಿಯತಾಕಾರವಿರುವ ಸತ್ಯವಾದ ವಸ್ತುಗಳಿದೆ ಎಂದು ಒಪ್ಪಬೇಕು. ಇದನ್ನು ಬಿಟ್ಟು ಮೂರನೆಯ ಮಾರ್ಗವಿಲ್ಲ. ಮೀಮಾಂಸಾ ಶಾಸ್ತ್ರದಲ್ಲಿ ಮುರಾರಿಮಿಶ್ರನೆಂಬುವನು ಭಾಟ್ಟರ ಮತ್ತು ಪ್ರಭಾಕರರ ಮತವನ್ನು ಅಂಗೀಕರಿಸದೆ ಮೂರನೆಯ ಹಾದಿಯನ್ನು ತುಳಿಯುತ್ತಾನೆ. ಇದು ಶಾಸ್ತ್ರದಲ್ಲಿ ಮುರಾರೇಃ ತೃತೀಯಃ ಪಂಥಾಃ ಎಂಬ ಗಾದೆಯಾಗಿ ಪ್ರಸಿದ್ಧವಾಗಿದೆ. ಅದನ್ನು ಮನಸ್ಸಿನಲ್ಲಿ ಇಟ್ಟುಕೊಂಡು ಬೇರೆ ಗತ್ಯಂತರವಿಲ್ಲವೆಂದು ಇಲ್ಲಿ ಅಪಹಾಸ ಮಾಡುತ್ತಾರೆ.

ಪಕ್ಷದ್ವಯೇಽಪಿ ನಾಸ್ಮಾಕಂ ಹಾನಿರುಕ್ತಪ್ರಕಾರತಃ ।
ಶುದ್ಧಂ ಜಗತ್ ಪೂರ್ವಪಕ್ಷೇ ಜಡಂ ಪಕ್ಷಾಂತರೇ ಜಗತ್ ॥ ೫೫೮ ॥

**ಅರ್ಥ**- ಪಕ್ಷದ್ವಯೇಽಪಿ= ಎರಡು ಪಕ್ಷಗಳಲ್ಲಿಯೂ, ಉಕ್ತ ಪ್ರಕಾರತಃ= ಹಿಂದೆ ಹೇಳಿದ ರೀತಿಯಲ್ಲಿ, ಅಸ್ಮಾಕಂ= ನಮಗೆ, ನ ಹಾನಿಃ= ಯಾವ ಹಾನಿಯೂ ಇಲ್ಲ, ಪೂರ್ವಪಕ್ಷೇ= ಮೊದಲನೆಯ ಪಕ್ಷದಲ್ಲಿ (ಮಿಥ್ಯಾತ್ವ ಪಕ್ಷದಲ್ಲಿ), ಜಗತ್= ಜಗತ್ತು, ಶುದ್ಧಂ= ಶುದ್ಧಚೈತನ್ಯಾಭಿನ್ನವಾದುದು, ಪಕ್ಷಾಂತರೇ= ಎರಡನೆಯ ಸತ್ಯತ್ವ ಪಕ್ಷದಲ್ಲಿ, ಜಗತ್= ಜಗತ್ತು, ಜಡಂ= ಜಡವಾದುದು.

**ಅನುವಾದ** - ಎರಡು ಪಕ್ಷಗಳಲ್ಲಿಯೂ ಹಿಂದೆ ಹೇಳಿದ ರೀತಿಯಲ್ಲಿ ನಮಗೆ ಯಾವ ಹಾನಿಯೂ ಇಲ್ಲ. ಮಿಥ್ಯಾತ್ವವನ್ನು ಉಪಪಾದನೆ ಮಾಡಬೇಕಾದರೆ ಚೈತನ್ಯಾತ್ಮಕವಾದ ಜಗದಂತರವನ್ನೇ ಮೊದಲನೆಯ ಪಕ್ಷದಲ್ಲಿ ಅಂಗೀಕಾರ ಮಾಡಬೇಕಾಗುತ್ತದೆ. ಎರಡನೆಯ ಪಕ್ಷದಲ್ಲಿ ತಮ್ಮ ತಮ್ಮ ಕಾರಣದಿಂದ ಉತ್ಪನ್ನವಾದ ಜಗತ್ತು ಜಡವೆಂದು ಸಿದ್ಧವಾಗುತ್ತದೆ.

**ಭಾವವಿಲಾಸಿನೀ**– ಶುದ್ಧಂ ಶುದ್ಧಚೈತನ್ಯಾತ್ಮಕಮ್ । ಪೂರ್ವಪಕ್ಷೇ ಮಿಥ್ಯಾತ್ವಪಕ್ಷೇ । ಪಕ್ಷಾಂತರೇ ಸತ್ಯತ್ವಪಕ್ಷೇ। ಕಾರ್ಯನಿಯಮೇನೈವ ಪ್ರತೀತಿ ನಿಯಮಸ್ಯ ಸಿದ್ಧತ್ವೇನ ಬ್ರಹ್ಮಾತ್ಮಕ-ಜಗತೋಽನಪೇಕ್ಷಣಾದಿತ್ಯರ್ಥಃ॥೫೫೮ ॥

**ವಿವರಣೆ** - ಮೊದಲನೆಯ ಪಕ್ಷದಲ್ಲಿ ಪ್ರತೀತಿಯ ನಿಯತಾಕಾರತ್ವದಿಂದ ಚೈತನ್ಯಾತ್ಮಕವಾದ ಜಗತ್ತು ಸಿದ್ಧವಾಗುತ್ತದೆ. ಎರಡನೆಯ ಪಕ್ಷದಲ್ಲಿ ಪ್ರತೀತಿಯ ನಿಯತಾಕಾರವು ಕಾರ್ಯನಿಯಮದಿಂದ ಕೂಡುವುದರಿಂದ ಜಗತ್ತು ಬ್ರಹ್ಮಾತ್ಮಕವೆಂದು ಅಂಗೀಕರಿಸಬೇಕಾದ ಅವಶ್ಯಕತೆ ಇಲ್ಲದಿರುವುದರಿಂದ ಜಡವಾದ ಜಗತ್ತು ಸಿದ್ಧವಾಗುತ್ತದೆ.

ಮಿಥ್ಯಾಚೇತ್ ತದ್‌ಭವೇತ್ ಪ್ರಾತಿಭಾಸಿಕಂ ಕ್ಷಣಿಕತ್ವವತ್ ।
ಇದಾನೀಮೇವ ಬಾಧೇನ ತತ್ರಾರೋಪೋಽಪಿ ಬಾಧಿತಃ ।
ತದಾ ಸತ್ಯಂ ಜಗದಿದಂ ಭವೇನ್ಮಮ ನಿರಾಕುಲಮ್ ॥ ೫೫೯ ॥

**ಅರ್ಥ-** ಮಿಥ್ಯಾಚೇತ್= ಮಿಥ್ಯಾತ್ವವನ್ನು ಹೇಳಬೇಕೆಂಬ ಆಗ್ರಹವಿದ್ದರೆ, ತತ್= ಶುದ್ಧ ಚೈತನ್ಯಾತ್ಮಕವಾದ ಜಗತ್ತು, ಕ್ಷಣಿಕತ್ವವತ್= ಬ್ರಹ್ಮನಲ್ಲಿ ಆರೋಪಿತವಾದ ಕ್ಷಣಿಕತ್ವದಂತೆ, ಇದಾನೀಮೇವ ಬಾಧೇನ= ಈಗಲೇ ಬಾಧಿಸಲ್ಪಡುವುದರಿಂದ, ಪ್ರಾತಿಭಾಸಿಕಂ ಭವೇತ್= ಪ್ರಾತಿಭಾಸಿಕತ್ವರೂಪವಾದ ಮಿಥ್ಯಾತ್ವವುಳ್ಳದ್ದಾಗುತ್ತದೆ, ತತ್ರ= ಜಗದಾಕಾರಕ್ಕೆ ಸದೃಶನಾದ ಆಕಾರ ರಹಿತನಾದ ಬ್ರಹ್ಮನಲ್ಲಿ, ಆರೋಪಃ= ಜಡಜಗತ್ತಿನ ಆರೋಪವು, ಬಾಧಿತಃ= ಯುಕ್ತಿ ಬಾಧಿತವಾಗುತ್ತದೆ, ತದಾ= ಆಗ, ಇದಂ ಮಮ ಜಗತ್= ಈ ನನ್ನ ಜಗತ್ತು, ನಿರಾಕುಲಂ= ಯಾವ ಆತಂಕವೂ ಇಲ್ಲದೇ, ಸತ್ಯಂ ಭವೇತ್= ಸತ್ಯವಾಗುತ್ತದೆ.

**ಅನುವಾದ -** ಎರಡು ಜಗತ್ತುಗಳಲ್ಲಿ ಒಂದು ಜಗತ್ತಿಗೆ ಮಿಥ್ಯಾತ್ವವನ್ನು ಹೇಳಲೇಬೇಕೆಂಬ ಆಗ್ರಹವಿರುವುದಾದರೆ ಶುದ್ಧಚೈತನ್ಯಾತ್ಮಕವಾದ ಜಗತ್ತಿಗೆ ಮಿಥ್ಯಾತ್ವವನ್ನು ಹೇಳು. ಬ್ರಹ್ಮನಿಗೆ ಆರೋಪಿತವಾದ ಕ್ಷಣಿಕತ್ವದಂತೆ ಚೈತನ್ಯಾತ್ಮಕವಾದ ಜಗತ್ತು ಈಗಲೇ ಯುಕ್ತಿಯಿಂದ ಬಾಧಿಸಲ್ಪಡುವುದರಿಂದ ಆ ಮಿಥ್ಯಾತ್ವವು ಪ್ರಾತಿಭಾಸಿಕತ್ವ-ರೂಪವಾಗಲಿ. ಜಗದಾಕಾರಸದೃಶವಾದ ಆಕಾರರಹಿತವಾದ ಬ್ರಹ್ಮನಲ್ಲಿ ಜಡವಾದ ಜಗತ್ತಿನ ಆರೋಪವು ಈಗಲೇ ಯುಕ್ತಿಬಾಧಿತವಾಗುತ್ತದೆ. ಆದ್ದರಿಂದ ಆರೋಪವು ಬಾಧಿತವಾಗುವುದರಿಂದ ನನ್ನ ಜಗತ್ತು ನಿರಾತಂಕವಾಗಿ ಸತ್ಯವೆಂದು ಸಿದ್ಧವಾಗುತ್ತದೆ.

**ವಿವರಣೆ -** ಶುದ್ಧಚೈತನ್ಯವಾದ ಜಗತ್ತು ಈಗಲೇ ಯುಕ್ತಿಬಾಧಿತವಾದ್ದರಿಂದ ಅದು ವ್ಯಾವಹಾರಿಕವಾಗಲು ಸಾಧ್ಯವಿಲ್ಲ. ಆದ್ದರಿಂದ ಅದಕ್ಕೆ ಪ್ರಾತಿಭಾಸಿಕತ್ವರೂಪವಾದ ನೀಚವಾದ ಮಿಥ್ಯಾತ್ವವನ್ನು ಒಪ್ಪಬೇಕಾಗುತ್ತದೆ. ನನ್ನ ಜಗತ್ತಾದರೂ ಬ್ರಹ್ಮನಲ್ಲಿ ಆರೋಪಿಸಲ್ಪಡಲು ಸಾಧ್ಯವಿಲ್ಲವಾದ್ದರಿಂದ ಸತ್ಯವೆಂದು ಸಿದ್ಧವಾಗುತ್ತದೆ. ಹೀಗೆ ಹೇಳಿ ಗ್ರಂಥಕಾರರು ಎಲ್ಲ ಕಲ್ಪಗಳಲ್ಲಿಯೂ ತಮ್ಮ ಪಕ್ಷದಲ್ಲೇ ಪರ್ಯವಸಾನವನ್ನು ಮಾಡಿ ತಮ್ಮ ಕೌಶಲವನ್ನು ತೋರಿಸುತ್ತಾರೆ.

ಅಧಿಷ್ಠಾನಾಂತರಾಭಾವಾತ್ ಕಥಂ ಬ್ರಹ್ಮಣಿ ಕಲ್ಪಿತಮ್ ।
ಭವೇತ್ ತನ್ನ ಹ್ಯಧಿಷ್ಠಾನಪಾರಂಪರ್ಯಂ ಚ ತೇ ಮತೇ ॥ ೫೬೦ ॥

**ಅರ್ಥ-** ಅಧಿಷ್ಠಾನಾಂತರಾಭಾವಾತ್= ಬ್ರಹ್ಮನನ್ನು ಬಿಟ್ಟು ಬೇರೆ ಅಧಿಷ್ಠಾನವಿಲ್ಲದಿರುವುದರಿಂದ, ತತ್= ಚೈತನ್ಯಾತ್ಮಕವಾದ ಜಗತ್ತು, ಕಥಂ ಕಲ್ಪಿತಂ ಭವೇತ್= ಹೇಗೆ ಕಲ್ಪಿಸಲ್ಪಡುತ್ತದೆ? ತೇ ಮತೇ= ನಿನ್ನ ಮತದಲ್ಲಿ, ಅಧಿಷ್ಠಾನಪಾರಂಪರ್ಯಂ= ಅಧಿಷ್ಠಾನ ಪರಂಪರೆಯು, ನಹಿ= ಇಲ್ಲವಷ್ಟೇ.

**ಅನುವಾದ -** ಶುದ್ಧಚೈತನ್ಯಾತ್ಮಕವಾದ ಜಗತ್ತು ಕಲ್ಪಿತವೆಂದು ಹೇಳುವುದಾದರೆ ಅದನ್ನು ಇನ್ನೊಂದು ಅಧಿಷ್ಠಾನದಲ್ಲಿ ಆರೋಪ ಮಾಡಬೇಕಷ್ಟೇ? ಶುದ್ಧಬ್ರಹ್ಮನನ್ನು ಬಿಟ್ಟು ಬೇರೆ ಅಧಿಷ್ಠಾನವಿಲ್ಲ. ಹಾಗೆ ಅಧಿಷ್ಠಾನವನ್ನು ಕಲ್ಪನೆ ಮಾಡುತ್ತಾ ಹೋದರೆ

**ಅನವಸ್ಥಾ ದೋಷವು ಬರುತ್ತದೆ. ಆದ್ದರಿಂದ ಶುದ್ಧಚೈತನ್ಯಾತ್ಮಕವಾದ ಜಗತ್ತು ಅಪ್ರಾಮಾಣಿಕವೆಂದೇ ಅಂಗೀಕಾರ ಮಾಡಬೇಕು.**

**ಭಾವವಿಲಾಸಿನೀ–** ದ್ವಯೋರ್ಜಗತೋಃ ಸತ್ಯತ್ವಾಯೋಗಾತ್ ಏಕಸ್ಯ ಮಿಥ್ಯಾತ್ವಂ ವಕ್ತವ್ಯಮಿತಿ ಚೇತ್। ಸತ್ಯಮ್ । ತಥಾಪಿ ಜಡಜಗನ್ನ ಮಿಥ್ಯಾ ಕಿಂತು ಬ್ರಹ್ಮಾತ್ಮಕಂ ಜಗದೇವ ಮಿಥ್ಯಾ ಇತ್ಯತ್ರ ಯುಕ್ತಿಮಾಹ – **ಮಿಥ್ಯಾ ಚೇದಿತಿ** ॥ ತತ್ ಜಡಜಗತೋ ಮಿಥ್ಯಾತ್ವಾಯ ಕಲ್ಪ್ಯಮಾನಬ್ರಹ್ಮಾತ್ಮಕಂ ಜಗತ್ । ಕ್ಷಣಿಕತ್ವವತ್ ಬ್ರಹ್ಮಣ್ಯಾರೋಪಿತಕ್ಷಣಿಕತ್ವವತ್ । ಪ್ರಾತಿಭಾಸಿಕಂ ಭವೇತ್ । ಮಿಥ್ಯಾತ್ವೇಽಪಿ ಅಪಶದಮಿಥ್ಯಾತ್ವಯೋಗ್ಯಂ ಸ್ಯಾದಿತ್ಯರ್ಥಃ। ಇದಾನೀಂ ಸಂಸಾರದಶಾಯಾಂ ಬಾಧೇನ ತ್ವಯಾ ಮಯಾ ಕದಾಪಿ ನಾಸ್ತೀತಿ ನಿಷಿಧ್ಯಮಾನತ್ವೇನ । ತತ್ರ ಜಗದಾಕಾರಸದೃಶಾಕಾರಸಹಿತೇ ಬ್ರಹ್ಮಣಿ। ಆರೋಪಃ ಮದೀಯ ಜಡಜಗದಾರೋಪಃ । ಬಾಧಿತಃ ಯುಕ್ತಿಬಾಧಿತಃ । ಪ್ರಧಾನ ಸಾದೃಶ್ಯಾಭಾವಾತ್ ಭ್ರಮನಿಯಮಯೋಗ್ಯನಿಯತಾಕಾರಾಭಾವಾಚ್ಚಾನುಪಪನ್ನ ಇತ್ಯರ್ಥಃ । ಇದಮಸ್ಯ ಗ್ರಂಥಕಾರಸ್ಯ ಕೌಶಲಮ್ । ಯದ್ಬಹುವಿಧಚರ್ಚಾಯಾಮಪಿ ಸ್ವಾಭಿಮತ ಪಕ್ಷ ಏವ ಪರ್ಯವಸಾನಮ್ । ತದಾ ಆರೋಪಬಾಧೇ । ಅಧಿಷ್ಠಾನಾಂತರಾಭಾವಾತ್ ಏತತ್ ಬ್ರಹ್ಮಾತಿರಿಕ್ತಾಧಿಷ್ಠಾನಾಭಾವಾತ್ । ಅಗತ್ಯಾಽಧಿಷ್ಠಾನಾಂತರಾಂಗೀಕಾರೇಽಪಸಿದ್ಧಾಂತ ಇತ್ಯಾಹ – **ನ ಹೀತಿ** ॥ ೫೫೯-೫೬೦ ॥

**ಮಾಯಾಸೃಷ್ಟಿರ್ನ ನಿಯತಾ ಮಂತ್ರಶಕ್ತ್ಯೇವ ಸಾ ಯತಃ ।**
**ಫಣೀಕುರ್ಯಾನ್ಮಣೀಕುರ್ಯಾತ್ ತೃಣೀಕುರ್ಯಾಚ್ಚ ತತ್ ಪುನಃ ॥೫೬೦॥**

**ಅಯಂ ತು ನಿಯತಾರೋಪೋ ರೂಪ್ಯಸರ್ಪಭ್ರಮಾದಿವತ್ ।**
**ಉಕ್ತಾ ವ್ಯವಸ್ಥಾ ತತ್ ಪ್ರಾರ್ಥ್ಯಾ ಸುಸ್ಥೋಽನರ್ಥಸ್ತತಸ್ತವ ॥ ೫೬೨ ॥**

**ಅರ್ಥ-** ಮಾಯಾಸೃಷ್ಟಿಃ= ಮಾಯಾಸೃಷ್ಟಿಯಾದರೂ, ನ ನಿಯತಾ= ನಿಯತಾಕಾರವಾಗಿರುವುದಿಲ್ಲ, ಯತಃ= ಏಕೆಂದರೆ, ಸಾ= ಮಾಯಾಸೃಷ್ಟಿಯು, ಮಂತ್ರಶಕ್ತ್ಯೇವ= ಮಂತ್ರ ಶಕ್ತಿಯಿಂದ ಮಾಡಿದಂತೆ ಒಂದೇ ವಸ್ತುವನ್ನು, ಫಣೀಕುರ್ಯಾತ್= ಸರ್ಪವನ್ನಾಗಿ ತೋರಿಸಬಹುದು, ಮಣೀಕುರ್ಯಾತ್= ಮಣಿಯನ್ನಾಗಿ ತೋರಿಸಬಹುದು, ಪುನಃ= ಅನಂತರ, ತೃಣೀಕುರ್ಯಾತ್= ತೃಣವನ್ನಾಗಿ ತೋರಿಸಬಹುದು, ಅಯಂ ತು= ಈ ಜಗತ್ತಾದರೂ, ರೂಪ್ಯಸರ್ಪಭ್ರಮಾದಿವತ್= ಶುಕ್ತಿರಜತ ಭ್ರಾಂತಿಯಂತೆ ರಜ್ಜುಸರ್ಪದ ಭ್ರಾಂತಿಯಂತೆ ನಿಯತವಾದ ಆಕಾರವುಳ್ಳದ್ದಾಗಿದೆ, ತತ್= ಆದ್ದರಿಂದ, ಉಕ್ತಾ ವ್ಯವಸ್ಥಾ= ನಾವು ಹಿಂದೆ ಹೇಳಿದ ವ್ಯವಸ್ಥೆಯು, ಪ್ರಾರ್ಥ್ಯಾ= ಅಂಗೀಕರಿಸಲ್ಪಡಬೇಕು, ತತಃ= ಆದ್ದರಿಂದ, ತವ= ನಿನಗೆ, ಅನರ್ಥಃ= ಅನರ್ಥವು, ಸುಸ್ಥಃ= ಚೆನ್ನಾಗಿ ಪ್ರಾಪ್ತವಾಗುತ್ತದೆ.

**ಅನುವಾದ** - ಮಾಯಾಸೃಷ್ಟಿಯಲ್ಲಾದರೂ ನಿಯತಾಕಾರವಿರುವುದಿಲ್ಲ. ಮಂತ್ರಶಕ್ತಿಯ ಪ್ರಭಾವದಿಂದ ಮಾಡಿದಂತೆ ಒಂದೇ ವಸ್ತುವನ್ನು ಸರ್ಪವಾಗಿ ತೋರಿಸಬಹುದು, ಅನಂತರ ಮಣಿಯನ್ನಾಗಿ ತೋರಿಸಬಹುದು, ಅನಂತರ ತೃಣವನ್ನಾಗಿ ತೋರಿಸಬಹುದು. ಜಗದ್ಭ್ರಮವಾದರೂ ಆ ರೀತಿಯಾದುದಲ್ಲ. ಶುಕ್ತಿಯಲ್ಲಿಯೇ ರಜತಭ್ರಮವು ಬರುವಂತೆ, ರಜ್ಜುವಿನಲ್ಲಿಯೇ ಸರ್ಪದ ಭ್ರಮವು ಬರುವಂತೆ, ಘಟವಿದ್ದಲ್ಲಿಯೇ ಘಟಭ್ರಮವು, ಪಟವಿದ್ದಲ್ಲಿಯೇ ಪಟಭ್ರಮವು ಉಂಟಾಗುತ್ತದೆ ಎಂದು ನೀನು ಅಂಗೀಕರಿಸಬೇಕು. ಅದಕ್ಕಾಗಿ ನಾವು ಹಿಂದೆ ಹೇಳಿದ ವ್ಯವಸ್ಥೆಯನ್ನು ಅಂಗೀಕರಿಸಬೇಕು. ಆ ವ್ಯವಸ್ಥೆಯ ಎರಡು ಪಕ್ಷಗಳಲ್ಲಿ ಯಾವ ಪಕ್ಷವನ್ನು ಅಂಗೀಕರಿಸಿದರೂ ನಿನಗೆ ಅನರ್ಥವು ಪ್ರಾಪ್ತವಾಗುತ್ತದೆ?

**ಭಾವವಿಲಾಸಿನೀ**– ರಜತಸರ್ಪಾದಿಭ್ರಮವತ್ ಜಗದ್ಭ್ರಮಸ್ಯಾಪಿ ವ್ಯವಸ್ಥಿತಭ್ರಮತ್ವಾತ್ ಪ್ರಧಾನಾಧಿಷ್ಠಾನಸಾದೃಶ್ಯಾದಿನಿಯಮಃ । ಮಾಯಾಸೃಷ್ಟೇಸ್ತ್ವ ವ್ಯವಸ್ಥಿತ ಭ್ರಮತ್ವಾನ್ನ ತದಪೇಕ್ಷಣಮ್ ಅತೋಽಪಿ ನೇಯಂ ಮಾಯಾಸೃಷ್ಟಿರಿತ್ಯಾಹ – **ಮಾಯೇತಿ** ॥ ಸಾ ಮಾಯಾಸೃಷ್ಟಿಃ । ಮಂತ್ರಶಕ್ತೇತ್ಯುಪಲಕ್ಷಣಮ್। ಔಷಧಶಕ್ತಿಶ್ಚ ಗ್ರಾಹ್ಯಾ । ತತ್ ಮಾಯಾವಿನಾ ಪ್ರದರ್ಶಿತಮೌಷಧಾದಿಕಮ್। ಫಣೀಕುರ್ಯಾತ್ ಪೂರ್ವಂ ಸರ್ಪತ್ವೇನ ಪ್ರದರ್ಶಯೇತ್ । ಮಣೀಕುರ್ಯಾತ್ ಪುನಸ್ತದೇವ ಮಣಿತ್ವೇನ ಪ್ರದರ್ಶಯೇತ್। ತೃಣೀಕುರ್ಯಾತ್ ತೃಣತ್ವೇನ ಪ್ರದರ್ಶಯೇತ್ । ಏವಮನ್ಯದಪಿ ದ್ರಷ್ಟವ್ಯಮ್ । ಯತ ಏವಂ ಮಂತ್ರೌಷಧಬಲೋತ್ಪನ್ನತ್ವೇನ ಏಕತ್ರೈವ ನಾನಾಪ್ರಕಾರಾ । ಅತೋ ಮಾಯಾಸೃಷ್ಟಿರ್ನ ನಿಯತೇತಿ ಪೂರ್ವೇಣಾನ್ವಯಃ । ಅತಸ್ತತ್ರ ಸಾದೃಶ್ಯಾನಪೇಕ್ಷಣಂ ನ ದೋಷಾಯ ಜಗತ್ ಭ್ರಮಸ್ತೂಕ್ತವಿಧಯಾ ಪರಮತೇ ನಿಯತತ್ವಾತ್ ಅಧಿಷ್ಠಾನಸಾದೃಶ್ಯಾದೇವ ಭವತೀತಿ ಭಾವಃ । ಏತೇನ ಜಗತಃ ಸೃಷ್ಟಿರ್ನ ಮಾಯಾಸೃಷ್ಟಿಃ ನಿಯತಪ್ರತೀತಿಕಸೃಷ್ಟಿತ್ವಾತ್ । ಘಟಾದಿ ಸೃಷ್ಟಿವದಿತಿ ಮಾಯಾಸೃಷ್ಟತ್ವೇನಾಪಿ ನ ಮಿಥ್ಯಾತ್ವಮಿತಿ ಸೂಚಿತಮ್ ॥ ೫೬೧-೫೬೨ ॥

**ವಿವರಣೆ** - ಜಗದಾರೋಪದ ನಿಯತಾಕಾರವು ಬ್ರಹ್ಮನಿಗೆ ಅಲ್ಲಲ್ಲಿ ಆಯಾ ಆಕಾರವನ್ನು ಒಪ್ಪುವುದರಿಂದಲಾಗಲೀ ಅಥವಾ ಸ್ವಸ್ವಕಾರ್ಯ ಜನ್ಯವಾದ ಕಾರ್ಯಗಳ ನಿಯಮದಿಂದಾಗಲೀ ಉಪಪಾದನೆ ಮಾಡಬೇಕು. ಎರಡು ಪಕ್ಷಗಳೂ ನಿನಗೆ ಅನಿಷ್ಟವಾದವು ಎಂದು ಹಿಂದೆಯೇ ತಿಳಿಸಿದ್ದೇವೆ ಎಂದು ಅಭಿಪ್ರಾಯ.

ಅಧಿಷ್ಠಾನಂ ಪ್ರಧಾನಂ ಚ ಸಮಸತ್ತಾಕಮೇವ ಹಿ ।
ದೃಶ್ಯತೇ ರಜತಾರೋಪೇ ಸರ್ಪಾರೋಪಾದಿಕೇಷು ಚ ॥ ೫೬೩ ॥

**ಅರ್ಥ**- ರಜತಾರೋಪೇ= ಶುಕ್ತಿರಜತಾರೋಪದಲ್ಲಿಯೂ, ಸರ್ಪಾರೋಪಾದಿಕೇಷು ಚ= ರಜ್ಜು ಸರ್ಪಾದಿ ಆರೋಪದಲ್ಲಿಯೂ ಸಹ, ಅಧಿಷ್ಠಾನಂ ಪ್ರಧಾನಂ ಚ= ಅಧಿಷ್ಠಾನವು

ಮತ್ತು ಪ್ರಧಾನವು, ಸಮಸತ್ತಾಕಮೇವ= ಸಮಸತ್ತಾಕವಾಗಿಯೇ, ದೃಶ್ಯತೇ ಹಿ= ಕಾಣುವುದಷ್ಟೇ.

**ಅನುವಾದ -** ಶುಕ್ತಿರಜತಭ್ರಮದಲ್ಲಿಯೂ ಮತ್ತು ರಜ್ಜುಸರ್ಪಾದಿ ಭ್ರಮದಲ್ಲಿಯೂ ಅಧಿಷ್ಠಾನವು ಪ್ರಧಾನ ಸಮಸತ್ತಾಕವಾಗಿಯೇ ಕಂಡುಬರುವುದಷ್ಟೇ?

**ಭಾವವಿಲಾಸಿನೀ–** ಪ್ರಕಾರಾಂತರೇಣಾಪಿ ಮಿಥ್ಯಾತ್ವಮತೇಽಪಿ ಜಗತ್‌ಸತ್ಯತಾಂ ಸಾಧಯತಿ ॥ ಅಧಿಷ್ಠಾನಮಿತಿ ॥ ೫೬೩ ॥

ಸದೃಶಂ ಚ ತದನ್ಯೋನ್ಯಂ ನಿಯತಭ್ರಮಸಿದ್ಧಯೇ ।
ಅತ ಏವ ಪ್ರಧಾನಂ ತದಾರೋಪ್ಯಾದಧಿಕಂ ಯತಃ ॥ ೫೬೪ ॥

ತದ್ಬಾಧೇಪಿ ನ ತದ್ಬಾಧೋ ದೋಷಃ ಕಾಚಾದಿರೇವ ಚ ।
ತಥಾವಿಧೋ ಯತೋ ದೃಷ್ಟಸ್ತ್ರಿತಯಂ ತದ್ ಭ್ರಮೇಪಿ ಸತ್ ॥ ೫೬೫ ॥

ಇಯಂ ವಿಭ್ರಮಮರ್ಯಾದಾ ಸ್ವೀಕಾರ್ಯಾ ಲೋಕಸಂಮತಾ ।
ದೃಷ್ಟಸ್ಯಾಸ್ಯ ಪರಿತ್ಯಾಗೇ ಸ್ಯಾದದೃಷ್ಟಸ್ಯ ಕಲ್ಪನಾ ॥ ೫೬೬ ॥

**ಅರ್ಥ-** ತತ್= ಅಧಿಷ್ಠಾನ ಮತ್ತು ಪ್ರಧಾನಗಳು, ನಿಯತಭ್ರಮಸಿದ್ಧಯೇ= ಹಿಂದೆ ಹೇಳಿದಂತೆ ಅಲ್ಲಲ್ಲಿಯೇ ಆಯಾ ಭ್ರಮಗಳ ಸಿದ್ಧಿಗಾಗಿ, ಅನ್ಯೋನ್ಯಂ= ಪರಸ್ಪರವಾಗಿ, ಸದೃಶಂ= ಸದೃಶವಾಗಿರುತ್ತವೆ, ಅತ ಏವ= ಆ ಕಾರಣದಿಂದಲೇ, ತತ್ ಪ್ರಧಾನಂ= ಆ ಪ್ರಧಾನವು, ಆರೋಪ್ಯಾತ್= ಆರೋಪ್ಯಕ್ಕಿಂತಲೂ, ಅಧಿಕಂ= ಅಧಿಕಸತ್ತಾಕವಾಗಿದೆ, ಯತಃ= ಏಕೆಂದರೆ, ತದ್ಬಾಧೇಪಿ= ಆರೋಪ್ಯವು ಬಾಧಿತವಾದರೂ, ತದ್ಬಾಧಃ= ಪ್ರಧಾನದ ಬಾಧವು, ನ= ಇರುವುದಿಲ್ಲ, ಚ= ಮತ್ತು, ಯತಃ= ಯಾವ ಕಾರಣದಿಂದ, ಕಾಚಾದಿಃ ದೋಷಃ= ಕಾಚಾದಿ ದೋಷವು, ತಥಾವಿಧಃ= ಆರೋಪ್ಯಕ್ಕಿಂತಲೂ ಅಧಿಕಸತ್ತಾಕವಾಗಿ, ದೃಷ್ಟಃ= ನೋಡಲ್ಪಟ್ಟಿದೆಯೋ, ತತ್= ಆ ಕಾರಣದಿಂದ, ತ್ರಿತಯಂ= ಅಧಿಷ್ಠಾನ ಪ್ರಧಾನ ಮತ್ತು ದೋಷಗಳು, ಭ್ರಮೇಪಿ= ಭ್ರಮಸ್ಥಳದಲ್ಲಿಯೂ, ಸತ್= ಸತ್ಯವೇ ಆಗಿವೆ, ಲೋಕಸಂಮತಾ= ಸರ್ವಲೋಕಸಮ್ಮತವಾದ, ಇಯಂ= ಈ, ವಿಭ್ರಮಮರ್ಯಾದಾ= ಭ್ರಾಂತಿ ಮರ್ಯಾದೆಯು, ಸ್ವೀಕಾರ್ಯಾ= ಸ್ವೀಕರಿಸಲ್ಪಡಬೇಕು, ದೃಷ್ಟಸ್ಯ= ಅನುಭವ ಸಿದ್ಧವಾದ, ಅಸ್ಯ= ಈ ಮರ್ಯಾದೆಯನ್ನು, ಪರಿತ್ಯಾಗೇ= ಪರಿತ್ಯಾಗ ಮಾಡಿದರೆ, ಅದೃಷ್ಟ ಕಲ್ಪನಾ= ಅದೃಷ್ಟಕಲ್ಪನಾರೂಪವಾದ ದೋಷವು, ಸ್ಯಾತ್= ಉಂಟಾಗುತ್ತದೆ.

**ಅನುವಾದ -** ನಿಯತಭ್ರಮಸಿದ್ಧಿಗಾಗಿ ಅಧಿಷ್ಠಾನ ಮತ್ತು ಪ್ರಧಾನಗಳು ಪರಸ್ಪರವಾಗಿ ಸದೃಶವಾದವುಗಳೆಂದು ಅಂಗೀಕರಿಸಬೇಕು. ಯಾವ ಕಾರಣದಿಂದ ಆರೋಪ್ಯವು

ಬಾಧಿತವಾದರೂ ಪ್ರಧಾನವು ಬಾಧಿತವಾಗುವುದಿಲ್ಲವೋ, ಆ ಕಾರಣದಿಂದಲೇ ಪ್ರಧಾನವು ಆರೋಪ್ಯಕ್ಕಿಂತಲೂ ಅಧಿಕಸತ್ತಾಕವೆಂದು ಅಂಗೀಕರಿಸಬೇಕು. ಕಾಚಾದಿ ದೋಷಗಳು ಕೂಡ ಅದರಂತೆಯೇ ಆರೋಪ್ಯವು ಬಾಧಿತವಾದರೂ ಅಬಾಧಿತವಾಗಿಯೇ ದೃಷ್ಟವಾಗಿವೆ. ಆದ್ದರಿಂದ ಭ್ರಮಸ್ಥಳದಲ್ಲಿಯೂ ಅಧಿಷ್ಠಾನ, ಪ್ರಧಾನ ಮತ್ತು ದೋಷಗಳನ್ನು ಸತ್ಯವೆಂದೇ ಅಂಗೀಕರಿಸಬೇಕು. ಸರ್ವಾನುಭವ ಸಿದ್ಧವಾದ ಈ ಭ್ರಮದ ಮರ್ಯಾದೆಯನ್ನು ಸ್ವೀಕರಿಸಬೇಕು. ಇದನ್ನು ಪರಿತ್ಯಾಗ ಮಾಡಿದರೆ ಅದೃಷ್ಟಕಲ್ಪನಾರೂಪವಾದ ದೋಷವು ಬರುತ್ತದೆ.

**ಭಾವವಿಲಾಸಿನೀ**– ತದಧಿಷ್ಠಾನಂ ಪ್ರಧಾನಂ ಚ । ತತ್ ಆಪಣಸ್ಥರಜತಾದಿಕಮ್ । ತದ್ಬಾಧೇ ಆರೋಪಿತರಜತಬಾಧೇ । ನ ತದ್ಬಾಧಃ । ಅಧಿಷ್ಠಾನಪ್ರಧಾನಬಾಧೋ ನೇತ್ಯರ್ಥಃ । ತಥಾವಿಧಃ ಅಧಿಷ್ಠಾನಪ್ರಧಾನಸದೃಶಃ । ಆರೋಪ್ಯಮಾಣಾದಧಿಕಸತ್ತಾಕಃ ತತ್ ಬಾಧ್ಯೇಽಪ್ಯಬಾಧ್ಯ ಇತ್ಯರ್ಥಃ । ತ್ರಿತಯಮ್ । ಅಧಿಷ್ಠಾನ- ಪ್ರಧಾನದೋಷಾಖ್ಯಂ ಕಾರಣತ್ರಯಮ್ ॥೫೬೪-೬೬॥

ತದ್ ವಿಶ್ವಭ್ರಮಸಿದ್ಧ್ಯರ್ಥಂ ಪ್ರಧಾನಂ ಜಗದಂತರಂ ।
ಅಧಿಷ್ಠಾನಬ್ರಹ್ಮಸಮಸತ್ತಾಕಂ ಸ್ಯಾದನಿಚ್ಛತಃ ।
ದೋಷೋಽಪಿ ತಾದೃಕ್ ಕಲ್ಪ್ಯಃ ಸ್ಯಾದುಕ್ತೋ ದೋಷೋ ನ ಚೇದ್ ಭವೇತ್ ॥ ೫೬೭ ॥

**ಅರ್ಥ**- ತತ್= ಆ ಕಾರಣದಿಂದ, ವಿಶ್ವಭ್ರಮಸಿದ್ಧ್ಯರ್ಥಂ= ವಿಶ್ವಭ್ರಮದ ಸಿದ್ಧಿಗಾಗಿ, ಅಧಿಷ್ಠಾನ ಬ್ರಹ್ಮಸಮಸತ್ತಾಕಂ= ಅಧಿಷ್ಠಾನವಾದ ಬ್ರಹ್ಮನಿಗೆ ಸಮಾನವಾದ ಸತ್ತ್ವವನ್ನು ಹೊಂದಿರುವ, ಜಗದಂತರಂ= ಇನ್ನೊಂದು ಜಗದ್ರೂಪವಾದ, ಪ್ರಧಾನಂ= ಪ್ರಧಾನವು, ಅನಿಚ್ಛತಃ= ನಿನಗೆ ಇಷ್ಟವಿಲ್ಲದಿದ್ದರೂ, ಸ್ಯಾತ್= ಅಂಗೀಕರಿಸಲ್ಪಡಬೇಕು, ತಾದೃಕ್= ಅಂತಹ, ದೋಷೋಽಪಿ= ದೋಷವೂ ಸಹ, ಕಲ್ಪ್ಯಃ ಸ್ಯಾತ್= ಕಲ್ಪಿಸಲ್ಪಡಬೇಕು, ನ ಚೇತ್= ಹಾಗೆ ಮಾಡದಿದ್ದರೆ, ಉಕ್ತ ದೋಷಃ= ಅದೃಷ್ಟ ಕಲ್ಪನಾರೂಪವಾದ ಪೂರ್ವೋಕ್ತವಾದ ದೋಷವು, ಭವೇತ್= ಉಂಟಾಗುತ್ತದೆ.

**ಅನುವಾದ** - ಆದ್ದರಿಂದ ವಿಶ್ವಭ್ರಮಸಿದ್ಧಿಗಾಗಿ ಅಧಿಷ್ಠಾನಭೂತನಾದ ಬ್ರಹ್ಮನಿಗೆ ಸಮಾನ ಸತ್ತಾಕವಾದ ಪ್ರಧಾನವಾದ ಇನ್ನೊಂದು ಜಗತ್ತನ್ನು ನಿನಗೆ ಇಷ್ಟವಿಲ್ಲದಿದ್ದರೂ ನೀನು ಅಂಗೀಕರಿಸಬೇಕು. ಅದರಂತೆಯೇ ಅಂತಹ ದೋಷಗಳನ್ನೂ ಅಂಗೀಕರಿಸಬೇಕು. ಇಲ್ಲದಿದ್ದರೆ ಹಿಂದೆ ಹೇಳಿದ ಅದೃಷ್ಟಕಲ್ಪನಾ ರೂಪವಾದ ದೋಷವು ಬರುತ್ತದೆ.

**ಭಾವವಿಲಾಸಿನೀ**–ತತ್ ತಸ್ಮಾತ್ ಅಧಿಷ್ಠಾನಪ್ರಧಾನದೋಷಾಣಾಂ ಸಾಮ್ಯಸ್ಯ ಭ್ರಮಮಾತ್ರೇ ದೃಷ್ಟತ್ವೇನ ವೈಷಮ್ಯಕರಣಾಯೋಗಾತ್ । ನಚೇತ್ ಅಸ್ಯ ಪ್ರಮೇಯಸ್ಯ ಪರಿತ್ಯಾಗೇ । ತ್ರಯಾಣಾಂ ಮಧ್ಯೇ ಏಕಸ್ಯೈವ ಪಾರಮಾರ್ಥಿಕತ್ವಾಂಗೀಕಾರ ಇತ್ಯರ್ಥಃ ॥ ೫೬೭ ॥

**ವಿವರಣೆ -** ಮೂರರಲ್ಲಿ ಅಧಿಷ್ಠಾನಕ್ಕೆ ಮಾತ್ರ ಅಧಿಕಸತ್ತ್ವವನ್ನು ಒಪ್ಪಿ, ಉಳಿದೆರಡಕ್ಕೆ ಒಪ್ಪದಿದ್ದರೆ ಅದೃಷ್ಟಕಲ್ಪನಾರೂಪವಾದ ದೋಷವು ಬರುತ್ತದೆ ಎಂದು ಅಭಿಪ್ರಾಯ.

ವ್ಯಾವಹಾರ್ಯಂ ಪ್ರಧಾನಂ ಚೇದಧಿಷ್ಠಾನಂ ಚ ತಾದೃಶಂ ।
ಬಲಾತ್ ಸ್ಯಾತ್ ಸದೃಶೇ ತೇ ಹಿ ಕುತೋ ವಿಸದೃಶೇ ವದ ॥ ೫೬೮ ॥

ಅಧಿಷ್ಠಾನಾಂತರಂ ವಾಚ್ಯಮಧಿಷ್ಠಾನಭ್ರಮೇ ಯದಿ ।
ತದಾ ಪ್ರಧಾನಭ್ರಾಂತೌ ಚ ಸ್ಯಾತ್ ಪ್ರಧಾನಾಂತರಂ ತವ ॥ ೫೬೯ ॥

**ಅರ್ಥ-** ಪ್ರಧಾನಂ= ಪ್ರಧಾನವು, ವ್ಯಾವಹಾರ್ಯಂ ಚೇತ್= ವ್ಯಾವಹಾರಿಕವಾದರೆ, ಬಲಾತ್= ಹಿಂದೆ ಹೇಳಿದ ವ್ಯಾಪ್ತಿಯ ಬಲದಿಂದ, ಅಧಿಷ್ಠಾನಂ ಚ= ಅಧಿಷ್ಠಾನವೂ, ತಾದೃಶಂ ಸ್ಯಾತ್= ವ್ಯಾವಹಾರಿಕವೇ ಆಗಬೇಕು, ತೇ= ಅಧಿಷ್ಠಾನ ಮತ್ತು ಪ್ರಧಾನಗಳೆರಡೂ, ಸದೃಶೇ ಹಿ= ಸದೃಶವಾಗಿರುತ್ತವೆಯಷ್ಟೇ, ಕುತಃ= ಯಾವ ಕಾರಣದಿಂದ, ವಿಸದೃಶೇ= ವಿಸದೃಶವಾಗಿರುತ್ತವೆ ಎಂದು, ವದ= ಹೇಳು.

ಯದಿ= ಒಂದು ಪಕ್ಷ, ಅಧಿಷ್ಠಾನಭ್ರಮೇ= ಅಧಿಷ್ಠಾನವೂ ವ್ಯಾವಹಾರಿಕವೆಂದು ಅಂಗೀಕರಿಸಿದರೆ ಆ ಅಧಿಷ್ಠಾನಭ್ರಮದಲ್ಲಿ, ಅಧಿಷ್ಠಾನಾಂತರಂ= ಇನ್ನೊಂದು ಅಧಿಷ್ಠಾನವನ್ನು, ವಾಚ್ಯಂ= ಕಲ್ಪನೆ ಮಾಡಬೇಕಾಗುತ್ತದೆ ಎಂದು ಹೇಳಿದರೆ, ತದಾ= ಆಗ, ಪ್ರಧಾನಭ್ರಾಂತೌ= ಪ್ರಧಾನವು ವ್ಯಾವಹಾರಿಕವಾದರೆ ಆ ಪ್ರಧಾನಭ್ರಾಂತಿಯಲ್ಲಿ, ತವ= ನಿನಗೆ, ಪ್ರಧಾನಾಂತರಂ= ಇನ್ನೊಂದು ಪ್ರಧಾನವು, ಸ್ಯಾತ್= ಕಲ್ಪಿಸಲ್ಪಡಬೇಕಾಗುತ್ತದೆ.

**ಅನುವಾದ -** ಪ್ರಧಾನವು ವ್ಯಾವಹಾರಿಕವೆಂದು ಅಂಗೀಕರಿಸುವುದಾದರೆ ಅಧಿಷ್ಠಾನವು ಹಿಂದೆ ಹೇಳಿದ ವ್ಯಾಪ್ತಿಯ ಬಲದಿಂದ ವ್ಯಾವಹಾರಿಕವೇ ಆಗಬೇಕು. ಸದೃಶವಾಗಿರುವ ಅಧಿಷ್ಠಾನ ಪ್ರಧಾನಗಳು ಹೇಗೆ ವಿಸದೃಶವಾಗುತ್ತವೆ ಎಂದು ಹೇಳು. ಅಧಿಷ್ಠಾನವು ವ್ಯಾವಹಾರಿಕವೆಂದಾದರೆ ಆ ಅಧಿಷ್ಠಾನಭ್ರಮದಲ್ಲಿ ಇನ್ನೊಂದು ಅಧಿಷ್ಠಾನವನ್ನು ಕಲ್ಪನೆ ಮಾಡಬೇಕಾಗುತ್ತದೆ ಎಂದು ಹೇಳಿದರೆ ಆಗ ಪ್ರಧಾನವು ವ್ಯಾವಹಾರಿಕವೆಂದು ಅಂಗೀಕರಿಸಿದರೂ ಆ ಪ್ರಧಾನಭ್ರಮವನ್ನು ಉಪಪಾದನೆ ಮಾಡುವುದಕ್ಕೆ ಇನ್ನೊಂದು ಪ್ರಧಾನವನ್ನು ಅಂಗೀಕರಿಸಬೇಕಾಗುತ್ತದೆ ಎಂಬ ಪ್ರಸಂಗವು ಸಮಾನವಾಗಿರುತ್ತದೆ.

**ಭಾವವಿಲಾಸಿನೀ–** ನನು ಅಂಗೀಕ್ರಿಯತೇ ಪ್ರಧಾನಭೂತಂ ಜಗದಂತರಮ್ । ತದಪಿ ವ್ಯಾವಹಾರಿಕಮೇಮೇತಿ ಚೇತ್ । ನ । ತಸ್ಯಾಪ್ಯರೋಪೇ ಪುನಃ ಪ್ರಧಾನಾಂತರಸ್ಯಾಪೇಕ್ಷಿತತ್ವೇನಾನವಸ್ಥಾಪ್ರಸಂಗಾತ್ । ಜಗನ್ಮಿಥ್ಯಾತ್ವಸ್ಯಾದ್ಯಾಪ್ಯಸಿದ್ಧತ್ವೇನಾಪ್ರಾಮಾಣಿಕಾನವಸ್ಥಾಯಾ ದೋಷತ್ವಾತ್। ತಥಾಪಿ ಚಕ್ಷುಷೀನಿಮೀಲ್ಯ ವದಂತಂ ಪ್ರತ್ಯಾಹ – **ವ್ಯಾವಹಾರ್ಯಮಿತಿ** ॥ ೫೬೮-೫೬೯ ॥

**ವಿವರಣೆ** - ಅಧಿಷ್ಠಾನವು ವ್ಯಾವಹಾರಿಕವಾದರೆ ಅದೂ ಆರೋಪಿತವಾಗುವುದರಿಂದ ಆ ಆರೋಪಕ್ಕೆ ಇನ್ನೊಂದು ಅಧಿಷ್ಠಾನವನ್ನು ಕಲ್ಪನೆ ಮಾಡಬೇಕಾಗುತ್ತದೆ. ಹೀಗೆ ಅನವಸ್ಥಾ ದೋಷವು ಬರುತ್ತದೆ ಎಂದು ಹೇಳಿದರೆ ಪ್ರಧಾನವನ್ನು ವ್ಯಾವಹಾರಿಕವೆಂದು ಅಂಗೀಕರಿಸಿದರೂ ಅದರಂತೆಯೇ ಅನವಸ್ಥಾ ದೋಷವು ಬಂದೇ ಬರುತ್ತದೆ. ಆದ್ದರಿಂದ ಅಧಿಷ್ಠಾನವನ್ನಾಗಲೀ ಪ್ರಧಾನವನ್ನಾಗಲೀ ವ್ಯಾವಹಾರಿಕವೆಂದು ಹೇಳಬೇಡ ಎಂದು ಅಭಿಪ್ರಾಯ.

**ಪೂರ್ವಂ ಪೂರ್ವಂ ಪ್ರಧಾನಂ ಚೇತ್ ಕಾರ್ಯೇಕಾರ್ಯೇಮಮಾಪಿ ಹಿ ।**
**ಉಪಾದಾನಮಧಿಷ್ಠಾನಂ ತದ್ಭಾಗಾಸ್ತಸ್ಯ ತಸ್ಯ ಚ ॥ ೫೭೦ ॥**

**ಅರ್ಥ**- ಪೂರ್ವಂ ಪೂರ್ವಂ= ಪೂರ್ವ ಪೂರ್ವ ಜಗತ್ತು, ಪ್ರಧಾನಂ ಚೇತ್= ಜಗದ್‌ಭ್ರಮದಲ್ಲಿ ಪ್ರಧಾನವಾಗುವುದಾದರೆ, ಮಮಾಪಿ= ನನಗೂ ಕೂಡ, ಕಾರ್ಯೇಕಾರ್ಯೇ= ಪ್ರತಿಯೊಂದು ಕಾರ್ಯದಲ್ಲಿಯೂ, ಉಪಾದಾನಂ= ಆ ಕಾರ್ಯದ ಉಪಾದಾನವೇ, ಅಧಿಷ್ಠಾನಂ= ಅಧಿಷ್ಠಾನವಾಗುತ್ತದೆ, ತದ್ಭಾಗಾಃ= ಆ ಉಪಾದಾನದ ಭಾಗಗಳು, ತಸ್ಯ ತಸ್ಯ ಚ= ಆಯಾ ಉಪಾದೇಯಗಳಿಗೆ, ಅಧಿಷ್ಠಾನಂ= ಅಧಿಷ್ಠಾನವಾಗುತ್ತದೆ.

**ಅನುವಾದ** - ಪೂರ್ವಪೂರ್ವ ಜಗತ್ತು ಉತ್ತರೋತ್ತರ ಜಗತ್ತಿನ ಆರೋಪಕ್ಕೆ ಪ್ರಧಾನವಾಗುತ್ತದೆ ಎಂದು ಹೇಳುವುದಾದರೆ ನಾನೂ ಸಹ ಪ್ರತಿಯೊಂದು ಕಾರ್ಯದಲ್ಲಿಯೂ ಅದರ ಉಪಾದಾನವೇ ಅಧಿಷ್ಠಾನವಾಗುತ್ತದೆ. ಆ ಉಪಾದಾನಗಳಿಗೆ ಆ ಉಪಾದಾನಗಳ ಭಾಗಗಳು ಅಧಿಷ್ಠಾನವಾಗುತ್ತವೆ ಎಂದು ಹೇಳುತ್ತೇನೆ.

**ಭಾವವಿಲಾಸಿನೀ**– ಕಾರ್ಯೇ ಕಾರ್ಯೇ ಜಗತಿ । ಪೂರ್ವಂ ಪೂರ್ವಮ್ ಅತೀತಮತೀತಂ ಜಗತ್। ಪ್ರಧಾನಂ ಚೇದಿತಿ ಸಂಬಂಧಃ । ತದುಪಾದಾನಂ ತತ್ತತ್ ಕಾರ್ಯೋಪಾದಾನಂ ಕಪಾಲಾದಿಕಮ್ । ತದ್ಭಾಗಾಃ ತಸ್ಯ ಕಪಾಲಸ್ಯ ಪೂರ್ವಪೂರ್ವಭಾಗಾಃ । ತಸ್ಯ ತಸ್ಯ ಉತ್ತರೋತ್ತರ ಕಾರ್ಯಸ್ಯ ॥ ೫೬೯ ॥

ಇದಮೇವ ಹ್ಯಧಿಷ್ಠಾನಂ ಪ್ರತೀತೇರನುಸಾರತಃ ।
ನ ಬ್ರಹ್ಮ ನೇಹ ನಾನೇತಿ ತತ್ರ ವಿಶ್ವಾಪ್ರತೀತಿತಃ ॥ ೫೭೧ ॥

**ಅರ್ಥ**- ಇದಮೇವ= ಆ ಉಪಾದಾನದ ಭಾಗವೇ, ಪ್ರತೀತೇರನುಸಾರತಃ= ಪ್ರತೀತಿಗೆ ಅನುಗುಣವಾಗಿ, ಅಧಿಷ್ಠಾನಂ= ಅಧಿಷ್ಠಾನವಾಗುತ್ತದೆ, ಬ್ರಹ್ಮ= ಬ್ರಹ್ಮನು, ನ= ಅಧಿಷ್ಠಾನ ಆಗುವುದಿಲ್ಲ, ನೇಹ ನಾನೇತಿ= ನೇಹ ನಾನೇತಿ ಎಂಬ ವಾಕ್ಯದಿಂದ, ತತ್ರ= ಬ್ರಹ್ಮನಲ್ಲಿ, ವಿಶ್ವಾಪ್ರತೀತಿತಃ= ವಿಶ್ವವು ಇಲ್ಲವೆಂದು ಪ್ರತೀತಿಯು ಬರುವುದರಿಂದಲೂ ಬ್ರಹ್ಮನು ಅಧಿಷ್ಠಾನವಾಗುವುದಿಲ್ಲ.

**ಅನುವಾದ** - ಪ್ರತೀತಿಗೆ ಅನುಗುಣವಾಗಿ ಉಪಾದಾನಗಳೇ ಕಾರ್ಯಗಳಿಗೆ ಅಧಿಷ್ಠಾನವಾಗುತ್ತವೆ. ಬ್ರಹ್ಮನು ಅಧಿಷ್ಠಾನವಾಗುವುದಿಲ್ಲ. ನೇಹ ನಾನಾಸ್ತಿ ಕಿಂಚನ ಎಂಬ ಶ್ರುತಿಯಿಂದಲೂ ಸಹ ಬ್ರಹ್ಮನಲ್ಲಿ ವಿಶ್ವವು ಇಲ್ಲ ಎಂದು ತಿಳಿಯುವುದರಿಂದಲೂ ಬ್ರಹ್ಮನು ಅಧಿಷ್ಠಾನವಾಗುವುದಿಲ್ಲ.

**ಭಾವವಿಲಾಸಿನೀ**–ಪ್ರತೀತೇಃ ಸ್ವಸ್ವೋಪಾದಾನಾಭಿನ್ನತಯಾ ತಸ್ಯ ತಸ್ಯ ಕಾರ್ಯಸ್ಯ ಪ್ರತೀತೇಃ । ಬ್ರಹ್ಮ ನ ಘಟಾದ್ಯಾರೋಪಾಧಿಷ್ಠಾನಂ ನ । ತದಾತ್ಮಕತಯಾಽಪ್ರತೀತೇಃ । ನ ಹ್ಯಯಂ ಘಟ ಇತ್ಯುಕ್ತೇ ಬ್ರಹ್ಮಘಟ ಇತಿ ವಾ ಬ್ರಹ್ಮಣಿ ಘಟ ಇತಿ ವಾ ಕೋಽಪಿ ಲೋಕಃ ಪ್ರತ್ಯೇತಿ । ಮಮ ತ್ವಯಂ ಘಟ ಇತ್ಯುಕ್ತೇ ಏತತ್ ಕಪಾಲಾತ್ಮಕೋ ಘಟ ಇತಿ ವಾ ಕಪಾಲೇ ಘಟ ಇತಿ ವಾಽರ್ಥಃ ಸರ್ವಸ್ಯಾಪಿ ಸಂಮತಃ। ಯುಕ್ತ್ಯಂತರಂ ಚಾಹ–**ನೇಹೇತಿ** ॥ ತತ್ರ ಬ್ರಹ್ಮಣಿ । ಲಟಾ ಪರಾಭಿಮತ- ಭ್ರಮಕಾಲ ಏವ ಬ್ರಹ್ಮಣಿ ಜಗದಭಾವಸ್ಯೈವ ವ್ಯುತ್ಪನ್ನಸ್ಯ ಪ್ರತೀಯಮಾನತ್ವಾತ್ ॥ ೫೭೧ ॥

**ವಿವರಣೆ** - ಆರೋಪ್ಯವು ಯಾವಾಗಲೂ ಭ್ರಾಂತಿಯಲ್ಲಿ ಅಧಿಷ್ಠಾನಾಭಿನ್ನವಾಗಿಯೇ ತೋರುತ್ತದೆ. ಶುಕ್ತಿರಜತಾದಿ ಸ್ಥಳಗಳಲ್ಲಿ ಇದು ಕಂಡಿದೆ. ಘಟವು ಕಪಾಲದಿಂದ ಅಭಿನ್ನವಾಗಿ ತೋರುತ್ತದೆಯೇ ಹೊರತು, ಬ್ರಹ್ಮನಿಂದ ಅಭಿನ್ನವಾಗಿ ತೋರುವುದಿಲ್ಲ. ಆದ್ದರಿಂದ ಘಟವನ್ನು ಕುರಿತು ಕಪಾಲವು ಅಧಿಷ್ಠಾನವಾಗಬೇಕೇಹೊರತು ಬ್ರಹ್ಮನು ಅಧಿಷ್ಠಾನನಾಗಲು ಸಾಧ್ಯವಿಲ್ಲ. ಮತ್ತು ನೇಹ ನಾನಾಸ್ತಿ ಕಿಂಚನ ಎಂಬ ವಾಕ್ಯದಲ್ಲಿ ಲಟ್ ಪ್ರತ್ಯಯವು ನಿನಗೆ ಅಭಿಮತವಾದ ವರ್ತಮಾನ ಭ್ರಮಕಾಲದಲ್ಲಿಯೇ ಬ್ರಹ್ಮನಲ್ಲಿ ಜಗತ್ತನ್ನು ನಿಷೇಧ ಮಾಡುತ್ತಿರುವುದರಿಂದ ಜಗತ್ತು ಬ್ರಹ್ಮನಿಂದ ಅಭಿನ್ನವಾಗಿ ತೋರಲು ಸಾಧ್ಯವಿಲ್ಲ. ಆದ್ದರಿಂದಲೂ ಬ್ರಹ್ಮನು ಅಧಿಷ್ಠಾನನಾಗುವುದಿಲ್ಲ.

ಬ್ರಹ್ಮ ವಾ ವ್ಯಾವಹಾರ್ಯಂ ಸ್ಯಾದಧಿಷ್ಠಾನಂ ತದಂಶಕಃ ।
ತಸ್ಯ ಸ್ಯುಸ್ತತ್ತದಂಶಾಶ್ಚ ತಸ್ಯ ತಸ್ಯ ಪ್ರಧಾನವತ್ ॥ ೫೭೨ ॥

**ಅರ್ಥ**- ಬ್ರಹ್ಮ ವಾ= ಅಥವಾ ಬ್ರಹ್ಮನೇ, ವ್ಯಾವಹಾರ್ಯಂ= ವ್ಯಾವಹಾರಿಕವಾಗಿ, ಸ್ಯಾತ್= ಆಗಲಿ, ತದಂಶಕಃ= ಬ್ರಹ್ಮನ ಅಂಶವು, ಅಧಿಷ್ಠಾನಂ ಸ್ಯಾತ್= ಅಧಿಷ್ಠಾನವಾಗಲಿ, ತಸ್ಯ= ಆ ಅಂಶಕ್ಕೆ, ತತ್ತದಂಶಾಃ= ಆ ಅಂಶದ ಅಂಶಗಳು, ಪ್ರಧಾನವತ್= ಪ್ರಧಾನದಂತೆಯೇ, ಸ್ಯುಃ= ಅಧಿಷ್ಠಾನವಾಗಲಿ.

**ಅನುವಾದ** - ಅಥವಾ ಬ್ರಹ್ಮನೇ ವ್ಯಾವಹಾರಿಕವಾಗಲಿ, ಬ್ರಹ್ಮನ ಅಂಶಗಳೇ ಅಧಿಷ್ಠಾನವಾಗಲಿ. ಬ್ರಹ್ಮನ ಅಂಶಗಳಿಗೆ ಆ ಅಂಶಗಳ ಅಂಶಗಳು ಅಧಿಷ್ಠಾನವಾಗಲಿ. ಪ್ರಧಾನದಲ್ಲಿ ಹೇಗೆ ಪರಂಪರೆಯನ್ನು ಕಲ್ಪನೆ ಮಾಡುತ್ತೀಯೋ, ಅದರಂತೆ ಅಧಿಷ್ಠಾನವೂ ಆಗಲಿ.

**ಭಾವವಿಲಾಸಿನೀ**– ಪರಾಭಿಮತಾಧಿಷ್ಠಾನಸ್ಯೈವ ವ್ಯಾವಹಾರಿಕತ್ವಂ ತದರ್ಥಂ ಪರಂಪರಾಂ ಚೋಪಪಾದಯತಿ ॥ **ಬ್ರಹ್ಮೇತಿ** ॥ ಬ್ರಹ್ಮ ವಾ ವ್ಯಾವಹಾರ್ಯಮಧಿಷ್ಠಾನಂ ಸ್ಯಾದಿತಿ ಸಂಬಂಧಃ।

ತದಂಶಕಾಃ ಬ್ರಹ್ಮಾವಯವಾಃ । ತಸ್ಯ ಬ್ರಹ್ಮಣಃ ಸ್ಯುಃ । ಆರೋಪಾಧಿಷ್ಠಾನಮ್ । ತತ್ತದಂಶಾಃ ತಸ್ಯ ತಸ್ಯಾಂಶಸ್ಯಾಂಶಾಃ ಪೂರ್ವಪೂರ್ವಾಂಶಾಃ । ತಸ್ಯ ತಸ್ಯೋತ್ತರೋತ್ತರಾಂಶಸ್ಯ । ನಚ ಬ್ರಹ್ಮಣೋ ನಿರಂಶತ್ವಂ ವಾಚ್ಯಮ್ । ಸಹಸ್ರಶೀರ್ಷೇತ್ಯಾದಿನಾ ತಸ್ಯಾಪಿ ಸಾಂಶತ್ವಪ್ರತೀತೇಃ । ಸ ಭಗವಃ ಕಸ್ಮಿನ್ ಪ್ರತಿಷ್ಠಿತ ಇತಿ ಸ್ವೇ ಮಹಿಮ್ನೀತಿ ಹೋವಾಚೇತಿ ಶ್ರುತ್ಯಾ ಸ್ವಸ್ಯೈವ ಸ್ವಾಧಿಷ್ಠಾನತ್ವ ಪ್ರತಿಪಾದನಾಚ್ಚ ॥ ೫೭೨ ॥

**ವಿವರಣೆ** - ಪರಾಭಿಮತವಾದ ಅಧಿಷ್ಠಾನಕ್ಕೆ ವ್ಯಾವಹಾರಿಕತ್ವವನ್ನು ಮತ್ತು ವ್ಯಾವಹಾರಿಕತ್ವದಿಂದ ಉಂಟಾದ ಅಧಿಷ್ಠಾನಪರಂಪರೆಯನ್ನು ಇಲ್ಲಿ ಉಪಪಾದನೆಯನ್ನು ಮಾಡುತ್ತಾರೆ. ಬ್ರಹ್ಮನು ನಿರಂಶನಾದುದರಿಂದ ಬ್ರಹ್ಮನ ಅಂಶಗಳು ಅಧಿಷ್ಠಾನವಾಗುವುದಿಲ್ಲ ಎಂದು ಹೇಳಲು ಸಾಧ್ಯವಿಲ್ಲ. ಏಕೆಂದರೆ ಸಹಸ್ರಶೀರ್ಷಾ ಇತ್ಯಾದಿ ಮಂತ್ರಗಳು ಬ್ರಹ್ಮನಿಗೆ ಅಂಶಗಳನ್ನು ಹೇಳುತ್ತವೆ. ಮತ್ತು ಸ್ವೇ ಮಹಿಮ್ನಿ ಪ್ರತಿಷ್ಠಿತಃ ಎಂಬ ವೇದವಾಕ್ಯವು ಬ್ರಹ್ಮನಿಗೆ ಅಧಿಷ್ಠಾನವನ್ನೂ ಹೇಳುತ್ತದೆ. ಆದ್ದರಿಂದ ಬ್ರಹ್ಮನಿಗೆ ಇನ್ನೊಂದು ಅಧಿಷ್ಠಾನವನ್ನು ಮತ್ತು ಅಧಿಷ್ಠಾನದ ಪರಂಪರೆಯನ್ನು ಕಲ್ಪನೆಯನ್ನು ಮಾಡಬೇಕಾದ ಪ್ರಸಂಗವು ಬರುತ್ತದೆ ಎಂದು ಅಭಿಪ್ರಾಯ.

ನಿರಧಿಷ್ಠಾನತಾ ತು ಸ್ಯಾತ್ ಸರ್ವಥಾ ತಸ್ಯ ವರ್ಜನೇ ।
ಅನ್ಯಥಾ ನಿರಧಿಷ್ಠಾನೋ ಭ್ರಮಃ ಸ್ಯಾದ್ ರಜತಭ್ರಮಃ ॥ ೫೭೩ ॥

**ಅರ್ಥ**- ತಸ್ಯ ವರ್ಜನೇ= ಆ ಅಧಿಷ್ಠಾನವನ್ನು ಪರಿತ್ಯಾಗ ಮಾಡಿದರೆ, ಸರ್ವಥಾ= ಎಲ್ಲ ರೀತಿಯಿಂದಲೂ, ನಿರಧಿಷ್ಠಾನತಾ= ಅಧಿಷ್ಠಾನ ಶೂನ್ಯತ್ವವೇ, ಸ್ಯಾತ್= ಉಂಟಾಗುತ್ತದೆ, ಅನ್ಯಥಾ= ಮಿಥ್ಯಾಭೂತ ಪದಾರ್ಥಕ್ಕೆ ಅಧಿಷ್ಠಾನತ್ವವು ಇಲ್ಲದಿದ್ದರೆ, ರಜತಭ್ರಮಃ= ರಜತಭ್ರಮವು, ನಿರಧಿಷ್ಠಾನ ಭ್ರಮಃ ಸ್ಯಾತ್= ನಿರಧಿಷ್ಠಾನಕ ಭ್ರಾಂತಿಯಾಗುತ್ತದೆ.

**ಅನುವಾದ** - ಅಧಿಷ್ಠಾನವನ್ನು ಪರಿತ್ಯಾಗ ಮಾಡಿದರೆ ನಿರಧಿಷ್ಠಾನತ್ವವೇ ಉಂಟಾಗುತ್ತದೆ. ವ್ಯಾವಹಾರಿಕವಾದುದು ಅಧಿಷ್ಠಾನವಾಗುವುದಿಲ್ಲವೆಂದಾದರೆ ರಜತಭ್ರಮವು ನಿರಧಿಷ್ಠಾನಕವೇ ಆಗುತ್ತದೆ. ರಜತಭ್ರಮದಲ್ಲಿ ಶುಕ್ತಿಯು ಅಧಿಷ್ಠಾನ, ಶುಕ್ತಿಯು ವ್ಯಾವಹಾರಿಕವೇ ಆಗಿದೆ. ಆದರೂ ಅದು ಅಧಿಷ್ಠಾನವೇ. ಆದ್ದರಿಂದ ಬ್ರಹ್ಮನು ವ್ಯಾವಹಾರಿಕನಾದರೂ ಏಕೆ ಅಧಿಷ್ಠಾನವಾಗಬಾರದು ಎಂದು ಅಭಿಪ್ರಾಯ.

ಅಥವಾ ಜಡಮಾತ್ರಸ್ಯ ಬ್ರಹ್ಮಾಧಿಷ್ಠಾನಮಸ್ತು ತೇ ।
ಬ್ರಹ್ಮಣೋ ಜೀವ ಏವಾಸ್ತು ಯತ್ ಸೋಹಮಿತಿ ತೇ ಭ್ರಮಃ ॥ ೫೭೪॥

**ಅರ್ಥ**- ಅಥವಾ= ಅಥವಾ, ಜಡಮಾತ್ರಸ್ಯ= ಜಡಮಾತ್ರದ ಆರೋಪದಲ್ಲಿ, ತೇ= ನಿನಗೆ, ಬ್ರಹ್ಮ= ಬ್ರಹ್ಮನು, ಅಧಿಷ್ಠಾನಮಸ್ತು= ಅಧಿಷ್ಠಾನವಾಗಲಿ, ಬ್ರಹ್ಮಣಃ= ಬ್ರಹ್ಮನ

ಆರೋಪದಲ್ಲಿ, ಜೀವ ಏವ= ಜೀವನೇ, ಅಸ್ತು= ಅಧಿಷ್ಠಾನವಾಗಲಿ, ಯತ್= ಏಕೆಂದರೆ, ಸೋಹಂ= ಆ ಬ್ರಹ್ಮನೇ ನಾನು, ಇತಿ= ಎಂದು, ತೇ ಭ್ರಮಃ= ನಿನ್ನ ಭ್ರಾಂತಿಯ ಆಕಾರವಷ್ಟೇ.

**ಅನುವಾದ** - ಅಥವಾ ಜಡಮಾತ್ರಾರೋಪದಲ್ಲಿ ಬ್ರಹ್ಮನು ಅಧಿಷ್ಠಾನನಾಗಲಿ. ಬ್ರಹ್ಮಾರೋಪದಲ್ಲಿ ಜೀವನೇ ಅಧಿಷ್ಠಾನವಾಗಲಿ. ಏಕೆಂದರೆ ನಾನೇ ಬ್ರಹ್ಮ ಎಂಬುದೇ ನಿನಗೆ ಅಭಿಪ್ರೇತವಾದ ಭ್ರಮದ ಆಕಾರವಷ್ಟೇ.

**ವಿವರಣೆ** - ಭ್ರಾಂತಿಯಲ್ಲಿ ಆರೋಪ್ಯವು ಅಧಿಷ್ಠಾನಾಭಿನ್ನವಾಗಿ ತೋರುತ್ತದೆ. ಸೋऽಹಂ ಎಂಬ ಭ್ರಮವು ನಾನೇ ಆ ಬ್ರಹ್ಮನೆಂದು, ನಾನು ಎಂಬ ಅಹಮರ್ಥವಾದ ಜೀವನಿಂದ ಅಭಿನ್ನವಾಗಿಯೇ ಬ್ರಹ್ಮನನ್ನು ವಿಷಯೀಕರಿಸುತ್ತದೆ. ಆದ್ದರಿಂದ ಬ್ರಹ್ಮಭ್ರಮದಲ್ಲಿ ಜೀವನೇ ಅಧಿಷ್ಠಾನವಾಗಲಿ ಎಂದು ಅಭಿಪ್ರಾಯ.

ಮಿಥೋ ಜೀವೈಕ್ಯವಾದೇ ಚ ಜೀವೋ ಜೀವಾಂತರಸ್ಯ ಭೂಃ ।
ಏವಂ ಚಾನಂತಜೀವಾಸ್ತೇ ಭೂಯಾಸುರ್ಭ್ರಮಭೂಮಯಃ ॥ ೫೭೫ ॥

**ಅರ್ಥ**- ಮಿಥೋ ಜೀವೈಕ್ಯವಾದೇ ಚ= ಮತ್ತು ಪರಸ್ಪರ ಜೀವೈಕ್ಯವಾದದಲ್ಲಿ, ಜೀವಃ= ಒಬ್ಬ ಜೀವನು, ಜೀವಾಂತರಸ್ಯ= ಇನ್ನೊಬ್ಬನ ಜೀವನ ಆರೋಪಕ್ಕೆ, ಭೂಃ= ಅಧಿಷ್ಠಾನವಾಗಲಿ, ಏವಂ ಚ= ಈ ರೀತಿಯಾಗಿ, ಅನಂತಜೀವಾಃ= ಅನಂತ ಜೀವರು, ತೇ= ನಿನಗೆ, ಭ್ರಮ ಭೂಮಯಃ= ಭ್ರಮಾಧಿಷ್ಠಾನರಾಗಿ, ಭೂಯಾಸುಃ= ಆಗುತ್ತಾರೆ.

**ಅನುವಾದ** - ಬ್ರಹ್ಮಭ್ರಮದಲ್ಲಿ ಬ್ರಹ್ಮಾಂಶವನ್ನು ಬಿಟ್ಟು ಇಲ್ಲಿ ಬೇರೆ ಇನ್ನೊಂದು ಅಧಿಷ್ಠಾನವನ್ನು ಹೇಳುತ್ತಾರೆ. ಬ್ರಹ್ಮಾರೋಪವನ್ನು ಕುರಿತು ಜೀವನು ಅಧಿಷ್ಠಾನವಾಗಲಿ. ಆ ಜೀವಾರೋಪವನ್ನು ಕುರಿತು ಇನ್ನೊಬ್ಬ ಜೀವನು ಅಧಿಷ್ಠಾನ ನಾಗಲಿ. ಆ ಜೀವನನ್ನು ಕುರಿತು ಮತ್ತೊಬ್ಬ ಜೀವನು ಅಧಿಷ್ಠಾನನಾಗಲಿ. ಹೀಗೆ ಎಲ್ಲ ಜೀವರಿಗೂ ಭ್ರಮಾಧಿಷ್ಠಾನತ್ವವು ಬರಲಿ ಎಂದು ಅಭಿಪ್ರಾಯ.

**ಭಾವವಿಲಾಸಿನೀ**– ನನು ಕಪಾಲಾದೀನಾಂ ಮಿಥ್ಯಾತ್ವಾತ್ ಕಥಮಧಿಷ್ಠಾನತ್ವಮಿತ್ಯತ ಆಹ – ನಿರಧಿಷ್ಠಾನತೇತಿ ॥ ತಸ್ಯಾಧಿಷ್ಠಾನಸ್ಯ । ಅನ್ಯಥಾ ಮಿಥ್ಯಾಭೂತಸ್ಯಾಧಿಷ್ಠಾನತ್ವಂ ನಚೇತ್ ॥ ಅಧಿಷ್ಠಾನಾಂತರಮಪ್ಯಾಹ –**ಮಿಥ ಇತಿ** ॥ ಜಡಾನಾಂ ಜೀವೇ ಆರೋಪಃ । ಜೀವಸ್ಯ ತು ಜೀವಾಂತರೇ। ತಸ್ಯ ಪುನರ್ಜೀವಾಂತರೋ । ಏವಂ ವಾऽಧಿಷ್ಠಾನಪರಂಪರಾಸ್ಯಾದಿತಿ ಭಾವಃ । ಭ್ರಮಭೂಮಯಃ ಆರೋಪಾಧಿಷ್ಠಾನಾನಿ ॥ ೫೭೩-೫೭೫ ॥

ಯದಿ ಭೀರ್ಬ್ರಹ್ಮಹತ್ಯಾಯಾ ಭೀತೋ ಭವ ಜಗತ್‌ಕ್ಷಯಾತ್ ।
ಅಬ್ರಹ್ಮವಾದಿತಾಪೀಷ್ಟಾ ತವ ಭಾಟ್ಟಾನುಸಾರಿಣಃ ॥ ೫೭೬ ॥

**ತದಂಶಕಾಃ ಬ್ರಹ್ಮಾವಯವಾಃ । ತಸ್ಯ ಬ್ರಹ್ಮಣಃ ಸ್ಯುಃ । ಆರೋಪಾಧಿಷ್ಠಾನಮ್ । ತತ್ತದಂಶಾಃ ತಸ್ಯ ತಸ್ಯಾಂಶಸ್ಯಾಂಶಾಃ ಪೂರ್ವಪೂರ್ವಾಂಶಾಃ । ತಸ್ಯ ತಸ್ಯೋತ್ತರೋತ್ತರಾಂಶಸ್ಯ । ನಚ ಬ್ರಹ್ಮಣೋ ನಿರಂಶತ್ವಂ ವಾಚ್ಯಮ್ । ಸಹಸ್ರಶೀರ್ಷೇತ್ಯಾದಿನಾ ತಸ್ಯಾಪಿ ಸಾಂಶತ್ವಪ್ರತೀತೇಃ । ಸ ಭಗವಃ ಕಸ್ಮಿನ್ ಪ್ರತಿಷ್ಠಿತ ಇತಿ ಸ್ವೇ ಮಹಿಮ್ನೀತಿ ಹೋವಾಚೇತಿ ಶ್ರುತ್ಯಾ ಸ್ವಸ್ಯೈವ ಸ್ವಾಧಿಷ್ಠಾನತ್ವ ಪ್ರತಿಪಾದನಾಚ್ಚ ।। ೫೭೨ ।।**

**ವಿವರಣೆ -** ಪರಾಭಿಮತವಾದ ಅಧಿಷ್ಠಾನಕ್ಕೆ ವ್ಯಾವಹಾರಿಕತ್ವವನ್ನು ಮತ್ತು ವ್ಯಾವಹಾರಿಕತ್ವದಿಂದ ಉಂಟಾದ ಅಧಿಷ್ಠಾನಪರಂಪರೆಯನ್ನು ಇಲ್ಲಿ ಉಪಪಾದನೆಯನ್ನು ಮಾಡುತ್ತಾರೆ. ಬ್ರಹ್ಮನು ನಿರಂಶನಾದುದರಿಂದ ಬ್ರಹ್ಮನ ಅಂಶಗಳು ಅಧಿಷ್ಠಾನವಾಗುವುದಿಲ್ಲ ಎಂದು ಹೇಳಲು ಸಾಧ್ಯವಿಲ್ಲ. ಏಕೆಂದರೆ ಸಹಸ್ರಶೀರ್ಷಾ ಇತ್ಯಾದಿ ಮಂತ್ರಗಳು ಬ್ರಹ್ಮನಿಗೆ ಅಂಶಗಳನ್ನು ಹೇಳುತ್ತವೆ. ಮತ್ತು ಸ್ವೇ ಮಹಿಮ್ನಿ ಪ್ರತಿಷ್ಠಿತಃ ಎಂಬ ವೇದವಾಕ್ಯವು ಬ್ರಹ್ಮನಿಗೆ ಅಧಿಷ್ಠಾನವನ್ನೂ ಹೇಳುತ್ತದೆ. ಆದ್ದರಿಂದ ಬ್ರಹ್ಮನಿಗೆ ಇನ್ನೊಂದು ಅಧಿಷ್ಠಾನವನ್ನು ಮತ್ತು ಅಧಿಷ್ಠಾನದ ಪರಂಪರೆಯನ್ನು ಕಲ್ಪನೆಯನ್ನು ಮಾಡಬೇಕಾದ ಪ್ರಸಂಗವು ಬರುತ್ತದೆ ಎಂದು ಅಭಿಪ್ರಾಯ.

**ನಿರಧಿಷ್ಠಾನತಾ ತು ಸ್ಯಾತ್ ಸರ್ವಥಾ ತಸ್ಯ ವರ್ಜನೇ ।**
**ಅನ್ಯಥಾ ನಿರಧಿಷ್ಠಾನೋ ಭ್ರಮಃ ಸ್ಯಾದ್ ರಜತಭ್ರಮಃ ।। ೫೭೩ ।।**

**ಅರ್ಥ-** ತಸ್ಯ ವರ್ಜನೇ= ಆ ಅಧಿಷ್ಠಾನವನ್ನು ಪರಿತ್ಯಾಗ ಮಾಡಿದರೆ, ಸರ್ವಥಾ= ಎಲ್ಲ ರೀತಿಯಿಂದಲೂ, ನಿರಧಿಷ್ಠಾನತಾ= ಅಧಿಷ್ಠಾನ ಶೂನ್ಯತ್ವವೇ, ಸ್ಯಾತ್= ಉಂಟಾಗುತ್ತದೆ, ಅನ್ಯಥಾ= ಮಿಥ್ಯಾಭೂತ ಪದಾರ್ಥಕ್ಕೆ ಅಧಿಷ್ಠಾನತ್ವವು ಇಲ್ಲದಿದ್ದರೆ, ರಜತಭ್ರಮಃ= ರಜತಭ್ರಮವು, ನಿರಧಿಷ್ಠಾನ ಭ್ರಮಃ ಸ್ಯಾತ್= ನಿರಧಿಷ್ಠಾನಕ ಭ್ರಾಂತಿಯಾಗುತ್ತದೆ.

**ಅನುವಾದ -** ಅಧಿಷ್ಠಾನವನ್ನು ಪರಿತ್ಯಾಗ ಮಾಡಿದರೆ ನಿರಧಿಷ್ಠಾನತ್ವವೇ ಉಂಟಾಗುತ್ತದೆ. ವ್ಯಾವಹಾರಿಕವಾದುದು ಅಧಿಷ್ಠಾನವಾಗುವುದಿಲ್ಲವೆಂದಾದರೆ ರಜತಭ್ರಮವು ನಿರಧಿಷ್ಠಾನಕವೇ ಆಗುತ್ತದೆ. ರಜತಭ್ರಮದಲ್ಲಿ ಶುಕ್ತಿಯು ಅಧಿಷ್ಠಾನ, ಶುಕ್ತಿಯು ವ್ಯಾವಹಾರಿಕವೇ ಆಗಿದೆ. ಆದರೂ ಅದು ಅಧಿಷ್ಠಾನವೇ. ಆದ್ದರಿಂದ ಬ್ರಹ್ಮನು ವ್ಯಾವಹಾರಿಕನಾದರೂ ಏಕೆ ಅಧಿಷ್ಠಾನವಾಗಬಾರದು ಎಂದು ಅಭಿಪ್ರಾಯ.

**ಅಥವಾ ಜಡಮಾತ್ರಸ್ಯ ಬ್ರಹ್ಮಾಧಿಷ್ಠಾನಮಸ್ತು ತೇ ।**
**ಬ್ರಹ್ಮಣೋ ಜೀವ ಏವಾಸ್ತು ಯತ್ ಸೋಹಮಿತಿ ತೇ ಭ್ರಮಃ ।। ೫೭೪।।**

**ಅರ್ಥ-** ಅಥವಾ= ಅಥವಾ, ಜಡಮಾತ್ರಸ್ಯ= ಜಡಮಾತ್ರದ ಆರೋಪದಲ್ಲಿ, ತೇ= ನಿನಗೆ, ಬ್ರಹ್ಮ= ಬ್ರಹ್ಮನು, ಅಧಿಷ್ಠಾನಮಸ್ತು= ಅಧಿಷ್ಠಾನವಾಗಲಿ, ಬ್ರಹ್ಮಣಃ= ಬ್ರಹ್ಮನ

ಆರೋಪದಲ್ಲಿ, ಜೀವ ಏವ= ಜೀವನೇ, ಅಸ್ತು= ಅಧಿಷ್ಠಾನವಾಗಲಿ, ಯತ್= ಏಕೆಂದರೆ, ಸೋಹಂ= ಆ ಬ್ರಹ್ಮನೇ ನಾನು, ಇತಿ= ಎಂದು, ತೇ ಭ್ರಮಃ= ನಿನ್ನ ಭ್ರಾಂತಿಯ ಆಕಾರವಷ್ಟೇ.

**ಅನುವಾದ** - ಅಥವಾ ಜಡಮಾತ್ರಾರೋಪದಲ್ಲಿ ಬ್ರಹ್ಮನು ಅಧಿಷ್ಠಾನನಾಗಲಿ. ಬ್ರಹ್ಮಾರೋಪದಲ್ಲಿ ಜೀವನೇ ಅಧಿಷ್ಠಾನವಾಗಲಿ. ಏಕೆಂದರೆ ನಾನೇ ಬ್ರಹ್ಮ ಎಂಬುದೇ ನಿನಗೆ ಅಭಿಪ್ರೇತವಾದ ಭ್ರಮದ ಆಕಾರವಷ್ಟೇ.

**ವಿವರಣೆ** - ಭ್ರಾಂತಿಯಲ್ಲಿ ಆರೋಪ್ಯವು ಅಧಿಷ್ಠಾನಾಭಿನ್ನವಾಗಿ ತೋರುತ್ತದೆ. ಸೋಽಹಂ ಎಂಬ ಭ್ರಮವು ನಾನೇ ಆ ಬ್ರಹ್ಮನೆಂದು, ನಾನು ಎಂಬ ಅಹಮರ್ಥವಾದ ಜೀವನಿಂದ ಅಭಿನ್ನವಾಗಿಯೇ ಬ್ರಹ್ಮನನ್ನು ವಿಷಯೀಕರಿಸುತ್ತದೆ. ಆದ್ದರಿಂದ ಬ್ರಹ್ಮಭ್ರಮದಲ್ಲಿ ಜೀವನೇ ಅಧಿಷ್ಠಾನವಾಗಲಿ ಎಂದು ಅಭಿಪ್ರಾಯ.

ಮಿಥೋ ಜೀವೈಕ್ಯವಾದೇ ಚ ಜೀವೋ ಜೀವಾಂತರಸ್ಯ ಭೂಃ ।
ಏವಂ ಚಾನಂತಜೀವಾಸ್ತೇ ಭೂಯಾಸುರ್ಭ್ರಮಭೂಮಯಃ ॥ ೫೭೫ ॥

**ಅರ್ಥ**- ಮಿಥೋ ಜೀವೈಕ್ಯವಾದೇ ಚ= ಮತ್ತು ಪರಸ್ಪರ ಜೀವೈಕ್ಯವಾದದಲ್ಲಿ, ಜೀವಃ= ಒಬ್ಬ ಜೀವನು, ಜೀವಾಂತರಸ್ಯ= ಇನ್ನೊಬ್ಬನ ಜೀವನ ಆರೋಪಕ್ಕೆ, ಭೂಃ= ಅಧಿಷ್ಠಾನವಾಗಲಿ, ಏವಂ ಚ= ಈ ರೀತಿಯಾಗಿ, ಅನಂತಜೀವಾಃ= ಅನಂತ ಜೀವರು, ತೇ= ನಿನಗೆ, ಭ್ರಮ ಭೂಮಯಃ= ಭ್ರಮಾಧಿಷ್ಠಾನರಾಗಿ, ಭೂಯಾಸುಃ= ಆಗುತ್ತಾರೆ.

**ಅನುವಾದ** - ಬ್ರಹ್ಮಭ್ರಮದಲ್ಲಿ ಬ್ರಹ್ಮಾಂಶವನ್ನು ಬಿಟ್ಟು ಇಲ್ಲಿ ಬೇರೆ ಇನ್ನೊಂದು ಅಧಿಷ್ಠಾನವನ್ನು ಹೇಳುತ್ತಾರೆ. ಬ್ರಹ್ಮಾರೋಪವನ್ನು ಕುರಿತು ಜೀವನು ಅಧಿಷ್ಠಾನವಾಗಲಿ. ಆ ಜೀವಾರೋಪವನ್ನು ಕುರಿತು ಇನ್ನೊಬ್ಬ ಜೀವನು ಅಧಿಷ್ಠಾನ ನಾಗಲಿ. ಆ ಜೀವನನ್ನು ಕುರಿತು ಮತ್ತೊಬ್ಬ ಜೀವನು ಅಧಿಷ್ಠಾನನಾಗಲಿ. ಹೀಗೆ ಎಲ್ಲ ಜೀವರಿಗೂ ಭ್ರಮಾಧಿಷ್ಠಾನತ್ವವು ಬರಲಿ ಎಂದು ಅಭಿಪ್ರಾಯ.

**ಭಾವವಿಲಾಸಿನೀ– ನನು ಕಪಾಲಾದೀನಾಂ ಮಿಥ್ಯಾತ್ವಾತ್ ಕಥಮಧಿಷ್ಠಾನತ್ವಮಿತ್ಯತ ಆಹ – ನಿರಧಿಷ್ಠಾನತೇತಿ ॥ ತಸ್ಯಾಧಿಷ್ಠಾನಸ್ಯ । ಅನ್ಯಥಾ ಮಿಥ್ಯಾಭೂತಸ್ಯಾಧಿಷ್ಠಾನತ್ವಂ ನಚೇತ್ ॥ ಅಧಿಷ್ಠಾನಾಂತರಮಪ್ಯಾಹ –ಮಿಥ ಇತಿ ॥ ಜಡಾನಾಂ ಜೀವೇ ಆರೋಪಃ । ಜೀವಸ್ಯ ತು ಜೀವಾಂತರೇ। ತಸ್ಯ ಪುನರ್ಜೀವಾಂತರೋ । ಏವಂ ವಾಽಧಿಷ್ಠಾನಪರಂಪರಾಸ್ಯಾದಿತಿ ಭಾವಃ । ಭ್ರಮಭೂಮಯಃ ಆರೋಪಾಧಿಷ್ಠಾನಾನಿ ॥ ೫೭೩-೫೭೫ ॥**

ಯದಿ ಭೀರ್ಬ್ರಹ್ಮಹತ್ಯಾಯಾ ಭೀತೋ ಭವ ಜಗತ್ಕ್ಷಯಾತ್ ।
ಅಬ್ರಹ್ಮವಾದಿತಾಪೀಷ್ಟಾ ತವ ಭಾಟ್ಟಾನುಸಾರಿಣಃ ॥ ೫೭೬ ॥

**ಅರ್ಥ-** ಯದಿ= ಒಂದು ಪಕ್ಷ, ಬ್ರಹ್ಮಹತ್ಯಾಯಾಃ= ಪಾರಮಾರ್ಥಿಕ ಬ್ರಹ್ಮನನ್ನು ಒಪ್ಪದಿರುವುದರಿಂದ ಉಂಟಾದ ಬ್ರಹ್ಮಹತ್ಯೆಯ ದೋಷದಿಂದ, ಭೀಃ= ನಿನಗೆ ಭಯವಿರುವುದಾದರೆ, ಜಗತ್ ಕ್ಷಯಾತ್= ಪಾರಮಾರ್ಥಿಕ ಜಗತ್ತನ್ನು ಒಪ್ಪದಿರುವುದರಿಂದ ಉಂಟಾಗುವ ಜಗತ್ತಿನ ನಾಶದಿಂದಲೂ, ಭೀತೋ ಭವ= ಭಯಗ್ರಸ್ತನಾಗು, ಭಾಟ್ಟಾನುಸಾರಿಣಃ= ಭಾಟ್ಟರ ಪ್ರಕ್ರಿಯೆಯನ್ನು ಅನುಸರಿಸುವ, ತವ= ನಿನಗೆ, ಅಬ್ರಹ್ಮವಾದಿತಾಪಿ= ಬ್ರಹ್ಮನನ್ನು ಅಂಗೀಕರಿಸದೇ ಇರುವುದೂ, ಇಷ್ಟಾ= ಇಷ್ಟವೇ ಆಗಬೇಕಷ್ಟೇ.

**ಅನುವಾದ - ಬ್ರಹ್ಮನನ್ನು ಅಂಗೀಕರಿಸದೆ ಇರುವುದರಿಂದ ಉಂಟಾಗುವ ಬ್ರಹ್ಮಹತ್ಯೆಗೆ ಹೆದರುವುದಾದರೆ ಅದರಂತೆ ಜಗನ್ನಾಶಕ್ಕೂ ಹೆದರು. ಭಾಟ್ಟರ ಪ್ರಕ್ರಿಯೆಯನ್ನು ಅನುಸರಿಸುವ ನಿನಗೆ ಭಾಟ್ಟರು ನಿರೀಶ್ವರವಾದಿಗಳಾದುದರಿಂದ ಅಬ್ರಹ್ಮವಾದಿತ್ವವೂ ಕೂಡ ಇಷ್ಟವೇ ಆಗುತ್ತದೆ.**

**ಭಾವವಿಲಾಸಿನೀ–** ಉಭಯೋರಪಿ ದೋಷತ್ವಂ ಸ್ಫೋರಯಿತುಂ ಬ್ರಹ್ಮಾಹತ್ಯಾಯಾಃ ಜಗತ್ ಕ್ಷಯಾದಿತ್ಯುಕ್ತಮ್ ಭಾಟ್ಟಾನುಸಾರಿಣಃ ನಿರೀಶ್ವರಭಾಟ್ಟಾನುಸಾರಿಣಃ ॥ ೫೭೬॥

ಬ್ರಹ್ಮವಾದಾ ಜಗದ್ವಾದ್ಯೈಃ ಸಹ ಯಾಂತು ವನಾಂತರಂ ।
ಪ್ರಕಾರದ್ವಯತೋ ಲಘ್ವೀ ಸರ್ವತ್ರೈಕಪ್ರಕಾರತಾ ॥ ೫೭೭ ॥

**ಅರ್ಥ-** ಬ್ರಹ್ಮವಾದಾಃ= ವೇದದಲ್ಲಿರುವ ಬ್ರಹ್ಮಸತ್ಯತ್ವವಾಕ್ಯಗಳು, ಜಗದ್ವಾದ್ಯೈಃ ಸಹ= ವೇದದಲ್ಲಿರುವ ಜಗತ್ಸತ್ಯತ್ವ ವಾಕ್ಯಗಳ ಜೊತೆಯಲ್ಲಿ, ವನಾಂತರಂ= ಕಾಡಿಗೆ, ಯಾಂತು= ಹೋಗಲಿ, ಪ್ರಕಾರದ್ವಯತಃ= ಸತ್ಯತ್ವ ಮತ್ತು ಮಿಥ್ಯಾತ್ವರೂಪವಾದ ಎರಡು ಪ್ರಕಾರಗಳನ್ನು ಅಂಗೀಕರಿಸುವುದಕ್ಕಿಂತಲೂ, ಸರ್ವತ್ರ= ಎಲ್ಲ ಕಡೆಗಳಲ್ಲಿಯೂ, ಏಕಪ್ರಕಾರತಾ= ಒಂದೇ ಪ್ರಕಾರವನ್ನು ಅಂಗೀಕರಿಸುವುದು, ಲಘ್ವೀ= ಲಘುಭೂತವಾದುದು.

**ಅನುವಾದ - ಬ್ರಹ್ಮಸತ್ಯತ್ವವನ್ನು ಹೇಳುವ ವೇದವಾಕ್ಯಗಳು ಜಗತ್ಸತ್ಯತ್ವವನ್ನು ಹೇಳುವ ವೇದವಾಕ್ಯಗಳ ಜೊತೆಯಲ್ಲಿ ಕಾಡಿಗೆ ಹೋಗಲಿ. ಬ್ರಹ್ಮನು ಸತ್ಯ ಮತ್ತು ಜಗತ್ತು ಮಿಥ್ಯಾ ಎಂದು ಸತ್ಯತ್ವ ಮಿಥ್ಯಾತ್ವರೂಪವಾದ ಎರಡು ಪ್ರಕಾರಗಳನ್ನು ಅಂಗೀಕರಿಸುವುದಕ್ಕಿಂತಲೂ ಎಲ್ಲವೂ ಮಿಥ್ಯಾ ಎಂಬ ಒಂದೇ ಪ್ರಕಾರವನ್ನು ಅಂಗೀಕರಿಸುವುದು ಲಘುಭೂತವಾದುದು.**

**ಭಾವವಿಲಾಸಿನೀ–** ಬ್ರಹ್ಮಸತ್ಯತಾವಾದಸ್ಯ ಕಾ ಗತಿರಿತ್ಯತ ಆಹ – ಬ್ರಹ್ಮವಾದಾ ಇತಿ ॥ ಪ್ರಕಾರದ್ವಯತಃ ಬ್ರಹ್ಮಣಃಸತ್ಯತ್ವಂ ಜಗತೋ ಮಿಥ್ಯಾತ್ವಮಿತಿ ಪ್ರಕಾರದ್ವಯಾತ್ । ಸರ್ವತ್ರ ಬ್ರಹ್ಮಣಿ ಜಗತಿ ಚ । ಏಕ ಪ್ರಕಾರತಾ ಮಿಥ್ಯಾತ್ವಮ್ ॥ ೫೭೭ ॥

**ವಿವರಣೆ** - ಬ್ರಹ್ಮನೇ ಇಲ್ಲದಿದ್ದರೆ ಬ್ರಹ್ಮನನ್ನು ಪ್ರತಿಪಾದಿಸುವ ವೇದವಾಕ್ಯಗಳ ಗತಿಯೇನು ಎಂದು ಪ್ರಶ್ನೆಯನ್ನು ಮಾಡಿದರೆ ಜಗತ್ತಿಗೆ ಮಿಥ್ಯಾತ್ವವನ್ನು ಹೇಳಿ, ಜಗತ್ತನ್ನೇ ಇಲ್ಲವೆಂದು ಮಾಡಿದರೆ ಜಗತ್ಸತ್ಯತ್ವವನ್ನು ಹೇಳುವ ವೇದವಾಕ್ಯಗಳಿಗೆ ಏನು ಗತಿ ಎಂದು ನಮ್ಮ ಪ್ರಶ್ನೆ. ಎರಡು ವಾಕ್ಯಗಳಿಗೂ ಒಂದೇ ರೀತಿಯ ಗತಿಯಾಗಲಿ. ಬ್ರಹ್ಮನೂ ಸತ್ಯವಾಗಿರಲಿ, ಮತ್ತು ಜಗತ್ತೂ ಸತ್ಯವಾಗಿರಲಿ, ಇಲ್ಲದಿದ್ದರೆ ಬ್ರಹ್ಮನೂ ಇರುವುದು ಬೇಡ, ಮತ್ತು ಜಗತ್ತೂ ಇರುವುದು ಬೇಡ ಎಂದು ಅಭಿಪ್ರಾಯ.

**ಲೋಕೇ ಸತ್ತಾಸಾಮ್ಯದೃಷ್ಟೇರಧಿಷ್ಠಾನಪ್ರಧಾನಯೋಃ ।**
**ಕಲ್ಪ್ಯಮೇತತ್ ಸಮಸ್ತಂ ಚ ವಿಪರೀತೇ ವಿಪರ್ಯಯಃ ॥ ೫೭೮ ॥**

**ಅರ್ಥ-** ಲೋಕೇ= ಲೋಕದಲ್ಲಿ, ಅಧಿಷ್ಠಾನಪ್ರಧಾನಯೋಃ= ಅಧಿಷ್ಠಾನ ಮತ್ತು ಪ್ರಧಾನಗಳಿಗೆ, ಸತ್ತಾಸಾಮ್ಯದೃಷ್ಟೇಃ= ಸತ್ತಾಸಾಮ್ಯವು ಕಂಡಿರುವುದರಿಂದ, ಏತತ್ ಸಮಸ್ತಂ= ಈ ಎಲ್ಲವೂ, ಕಲ್ಪ್ಯಂ= ಕಲ್ಪಿಸಲ್ಪಡಬೇಕು, ವಿಪರೀತೇ= ವಿಪರೀತವಾಗಿ ಕಲ್ಪನೆಯನ್ನು ಮಾಡಿದರೆ, ವಿಪರ್ಯಯಃ= ಜಗತ್ತಿಗೂ ವಿಪರ್ಯಯವು ಸಿದ್ಧವಾಗುತ್ತದೆ.

**ಅನುವಾದ** - ಅಧಿಷ್ಠಾನವು ಸತ್ಯವಾದುದರಿಂದ ಅಧಿಷ್ಠಾನ ಪರಂಪರೆಯನ್ನು ಕಲ್ಪನೆ ಮಾಡುವುದಿಲ್ಲ ಎಂದು ಹೇಳಿದರೆ ಪ್ರಧಾನವಾದ ಜಗತ್ತು ಸತ್ಯವಾದುದರಿಂದ ಪ್ರಧಾನ ಪರಂಪರೆಯನ್ನು ಕಲ್ಪನೆ ಮಾಡುವುದು ಬೇಡ.

**ಭಾವವಿಲಾಸಿನೀ**– ಕುತ ಏವಮಧಿಷ್ಠಾನಪರಂಪರಾಕಲ್ಪನಮಿತ್ಯತ ಆಹ – **ಲೋಕ ಇತಿ** ॥ ಅಧಿಷ್ಠಾನಪ್ರಧಾನಯೋಃಸತ್ತಾಸಾಮ್ಯದೃಷ್ಟೇರಿತಿ ಸಂಬಂಧಃ । ಏತತ್ ಸಮಸ್ತಂ ಪ್ರಧಾನಪರಂಪರಾವತ್ ಅಧಿಷ್ಠಾನ ಪಾರಂಪರ್ಯಮ್ । ವಿಪರೀತೇ ಅಧಿಷ್ಠಾನಸ್ಯ ಸತ್ಯತ್ವೇನ ಪರಂಪರಾನಪೇಕ್ಷಣೇ । ವಿಪರ್ಯಯಃ ಜಗತೋಽಪಿ ತದನಪೇಕ್ಷಣಮಿತ್ಯರ್ಥಃ । ಅಪ್ರಾಮಾಣಿಕ-ಪ್ರಧಾನಪರಂಪರಾಮಾದಾಯ ಜಗತೋ ಮಿಥ್ಯಾತ್ವಕಲ್ಪನೇ ಬ್ರಹ್ಮಣೋಽಪ್ಯಧಿಷ್ಠಾನ-ಪರಂಪರಾಮಾದಾಯ ಮಿಥ್ಯಾತ್ವಂ ಕಲ್ಪ್ಯತೇ । ಉಭಯೋರಪಿ ಸತ್ತಾಸಾಮ್ಯಸ್ಯ ಲೋಕೇ ದೃಷ್ಟತ್ವಾತ್ । ಸತ್ಯತ್ವೇತು ದ್ವಯೋರಪಿ ಸತ್ಯತ್ವಂ ಸ್ಯಾತ್ । ವೈಷಮ್ಯ ಕಥನೇಽದೃಷ್ಟಕಲ್ಪನೇತಿ ಭಾವಃ ॥ ೫೭೮ ॥

**ವಿವರಣೆ** - ಅಪ್ರಾಮಾಣಿಕವಾದ ಪ್ರಧಾನ ಪರಂಪರೆಯನ್ನು ಕಲ್ಪನೆಯನ್ನು ಮಾಡಿ ಜಗತ್ತಿಗೆ ಮಿಥ್ಯಾತ್ವವನ್ನು ಸಾಧಿಸುವುದಾದರೆ ಅಧಿಷ್ಠಾನ ಪರಂಪರೆಯನ್ನು ಕಲ್ಪನೆ ಮಾಡಿ ಬ್ರಹ್ಮನಿಗೂ ಮಿಥ್ಯಾತ್ವವನ್ನು ಸಾಧಿಸು. ಏಕೆಂದರೆ ಅಧಿಷ್ಠಾನ ಮತ್ತು ಪ್ರಧಾನಗಳಿಗೆ ಸಮಸತ್ತಾಕತ್ವವೇ ಲೋಕದಲ್ಲಿ ಕಂಡಿದೆ. ವೈಷಮ್ಯವನ್ನು ಮಾಡಿದರೆ ಅದೃಷ್ಟ ಕಲ್ಪನಾರೂಪವಾದ ದೋಷವು ಬರುತ್ತದೆ ಎಂದು ಅಭಿಪ್ರಾಯ.

ಆರೋಪ್ಯಮಾಣಾದಧಿಕಸತ್ತಾಕತ್ವಂ ಯತಸ್ತ್ರಿಷು ।
ಲೋಕಸಿದ್ಧಂ ಭ್ರಮೇ ವ್ಯಾಪ್ತಂ ತದಭಾವೇ ತು ನ ಭ್ರಮಃ ।
ವ್ಯಾಪಕಸ್ಯ ನಿವೃತ್ತೌ ಚ ಕಿಂ ಸ್ಯಾದ್ ವ್ಯಾಪ್ಯಸ್ಯ ವರ್ತನಂ ॥ ೫೭೯ ॥

**ಅರ್ಥ-** ಯತಃ= ಯಾವ ಕಾರಣದಿಂದ, ತ್ರಿಷು= ಅಧಿಷ್ಠಾನ, ಪ್ರಧಾನ ಮತ್ತು ದೋಷಗಳಲ್ಲಿ, ಆರೋಪ್ಯಮಾಣಾತ್= ಆರೋಪ್ಯಮಾಣವಾದುದಕ್ಕಿಂತ, ಅಧಿಕಸತ್ತಾಕತ್ವಂ= ಅಧಿಕಸತ್ವವು, ಲೋಕಸಿದ್ಧಂ= ಲೋಕಸಿದ್ಧವಾಗಿದೆಯೋ, ಮತ್ತು, ಭ್ರಮೇ ವ್ಯಾಪ್ತಂ= ಭ್ರಮತ್ವವ್ಯಾಪಕ ವಾಗಿದೆಯೋ, ತದಭಾವೇ= ಅಂತಹ ವ್ಯಾಪಕವಾದ ಅಧಿಕಸತ್ತಾಕತ್ವವು ಇಲ್ಲದಿದ್ದರೆ, ನ ಭ್ರಮಃ= ಭ್ರಮವು ಉಂಟಾಗುವುದಿಲ್ಲ, ವ್ಯಾಪಕಸ್ಯ ನಿವೃತ್ತೌ ಚ= ವ್ಯಾಪಕವು ನಿವೃತ್ತವಾದರೆ, ವ್ಯಾಪ್ಯಸ್ಯ ವರ್ತನಂ= ವ್ಯಾಪ್ಯದ ಅನುವೃತ್ತಿಯು, ಸ್ಯಾತ್ ಕಿಂ= ಇರುತ್ತದೆಯೇ?

**ಅನುವಾದ** - ಅಧಿಷ್ಠಾನ, ಪ್ರಧಾನ ಮತ್ತು ದೋಷಗಳಲ್ಲಿ ಆರೋಪ್ಯಮಾಣ-ವಾದುದಕ್ಕಿಂತ ಅಧಿಕ ಸತ್ತಾಕತ್ವವು ಲೋಕಸಿದ್ಧವಾಗಿದೆ. ಆದ್ದರಿಂದ ಎಲ್ಲಿ ಭ್ರಮತ್ವವು ಇದೆಯೋ ಅಲ್ಲಿ ಈ ತ್ರಿತಯಕ್ಕೆ ಅಧಿಕಸತ್ತಾಕತ್ವವಿದೆ ಎಂಬ ವ್ಯಾಪ್ತಿ ಇದೆ. ಅಧಿಕಸತ್ತಾಕತ್ವ ಎಂಬುದು ವ್ಯಾಪಕ, ಭ್ರಮತ್ವವೆಂಬುದು ವ್ಯಾಪ್ಯ. ವ್ಯಾಪಕ ನಿವೃತ್ತಿಯಿಂದ ವ್ಯಾಪ್ತ ನಿವೃತ್ತಿಯು ಅವಶ್ಯವಾಗಿ ಆಗಲೇಬೇಕು. ನೀನು ಜಗದ್ಭ್ರಮದಲ್ಲಿ ತ್ರಿತಯ ಸಮಸತ್ತಾಕತ್ವವನ್ನು ಒಪ್ಪದೇ ಇರುವುದರಿಂದ ಭ್ರಮತ್ವವು ನಿವೃತ್ತವಾಗುತ್ತದೆ. ಆದ್ದರಿಂದ ಜಗತ್ ಪ್ರತೀತಿಯು ಭ್ರಮವಲ್ಲವೆಂದು ಸಿದ್ಧವಾಗುತ್ತದೆ.

**ಭಾವವಿಲಾಸಿನೀ**—ಏತದೇವ ವಿಶದಯತಿ ॥ **ಆರೋಪ್ಯಮಾಣಾದಿತಿ** ॥ ತ್ರಿಷು ಅಧಿಷ್ಠಾನಪ್ರಧಾನ-ದೋಷೇಷು । ನನು ಲೋಕೇಽಪಿ ಪ್ರಧಾನಾದೀನಾಂ ವ್ಯಾವಹಾರಿಕತ್ವಮೇವ ಮಮ ಮತೇ ತಂತ್ರಂ ನತ್ವಾರೋಪ್ಯಮಾಣಾದಧಿಕಸತ್ತಾಕತ್ವಮಿತಿ ಚೇತ್ ತರ್ಹ್ಯಧಿಷ್ಠಾನಶುಕ್ತಿಶಕಲಾದೇರಪಿ ತದೇವ ತವ ಮತೇ ತಂತ್ರಮಿತಿ ಜಗದಾರೋಪಾಧಿಷ್ಠಾನಂ ಬ್ರಹ್ಮಾಪಿ ವ್ಯಾವಹಾರ್ಯಂ ಸ್ಯಾತ್ । ತತ್ರಾಪ್ಯಧಿಷ್ಠಾನ-ಪರಂಪರಾಸೌಲಭ್ಯಂ ತೂಕ್ತಮೇವ । ಯದಿಚಾಧಿಷ್ಠಾನಭೂತಬ್ರಹ್ಮಣಃ ಪಾರಮಾರ್ಥ್ಯಾಯಾಧಿಷ್ಠಾನ-ಮಾತ್ರೇ ವ್ಯಾವಹಾರಿಕತ್ವಮಾತ್ರಂ ನಾಲಮ್ । ಕಿಂತ್ವಾರೋಪ್ಯಮಾಣಾದಧಿಕಸತ್ತಾಕತ್ವಮೇವ ಪ್ರಯೋಜಕಮಿತಿ ವದಸಿ । ತರ್ಹಿ ಪ್ರಧಾನಾದಾವಪಿ ತದೇವ ತಂತ್ರಂ ಸ್ಯಾತ್ । ವೈಷಮ್ಯಕರಣೇ ಕಾರಣಾಭಾವಾದಿತಿ ಭಾವನೋಕ್ತಮ್ ಆರೋಪ್ಯಮಾಣಾದಧಿಕಸತ್ತಾಕತ್ವಂ ಯತಸ್ತ್ರಿಷ್ವಿತಿ ॥ ೫೭೯ ॥

**ವಿವರಣೆ** - ಜಗತ್ ಪ್ರತೀತಿಯು ಭ್ರಮವಲ್ಲವೆಂದು ಸಿದ್ಧವಾದರೆ ಜಗತ್ತು ಸತ್ಯವೆಂದೇ ಸಿದ್ಧವಾಗುತ್ತದೆ ಎಂದು ಅಭಿಪ್ರಾಯ.

ಕಿಂಚ ದೋಷೋಪಿ ಕೋತ್ರ ಸ್ಯಾದಿತಿ ಚಿಂತ್ಯಂ ವಿವೇಕಿಭಿಃ ॥ ೫೮೦ ॥

**ಅರ್ಥ-** ಕಿಂಚ= ಮತ್ತು, ಅತ್ರ= ಈ ಜಗತ್ ಭ್ರಮದಲ್ಲಿ, ದೋಷೋಪಿ= ದೋಷವಾದರೂ, ಕಃ ಸ್ಯಾತ್= ಯಾವುದು ಆಗುತ್ತದೆ, ಇತಿ= ಎಂದು, ವಿವೇಕಿಭಿಃ= ವಿವೇಕಿಗಳಿಂದ, ಚಿಂತ್ಯಂ= ವಿಚಾರ ಮಾಡಲ್ಪಡಬೇಕು.

**ಅನುವಾದ - ಮತ್ತು ಈ ಜಗದ್ಭ್ರಮದಲ್ಲಿ ಯಾವುದು ದೋಷವಾಗುತ್ತದೆಂದು ವಿವೇಕಿಗಳಿಂದ ವಿಮರ್ಶೆ ಮಾಡಲ್ಪಡಬೇಕು.**

**ಭಾವವಿಲಾಸಿನೀ–**ಅಪಿ ಚ ದೋಷೇಣೈವ ಭ್ರಮೋ ನ ಸ್ವತ ಇತ್ಯಪ್ರಾಮಾಣ್ಯಪರತಸ್ತ್ವವಾದಿನಃ ಪರಸ್ಯಾಪಿ ಸಂಮತಮ್ । ದೋಷಶ್ಚ ಭಗವದ್ಭ್ರಮೇ ಪರಮತೇಽವಿದ್ಯೈವ । ತಸ್ಯಾಶ್ಚ ದೋಷತ್ವಂ ವಿಚಾರ್ಯಮಾಣೇ ನ ಯುಕ್ತಿಸಹಮ್ । ಏವಂಚ ದೋಷಮೂಲಜ್ಞಾನವಿಷಯತ್ವಾದಪಿ ಜಗತಸ್ಸತ್ಯತ್ವಮೇವ ನ್ಯಾಯಮಿತ್ಯಾಹ – ಕಿಂಚೇತಿ ॥ ಅತ್ರ ಜಗದ್ಭ್ರಮೇ ॥ ೫೮೦ ॥

**ಅವಿದ್ಯಮಾನಮೇವಾರ್ಥಂ ಭ್ರಮಕಾಲೇ ತು ಯಃ ಸ್ಥಿರಃ ।**
**ಪ್ರದರ್ಶಯತಿ ಲೋಕಸ್ಯ ಸ ದೋಷ ಇತಿ ಗೀಯತೇ ।**
**ಕರಣೇಷು ಯಥಾ ಕಾಚೋ ಯಥಾಽರ್ಥೇಷ್ವತಿದೂರತಾ ॥ ೫೮೧ ॥**

**ಅರ್ಥ-** ಯಃ= ಯಾವುದು, ಭ್ರಮಕಾಲೇ= ಭ್ರಮಕಾಲದಲ್ಲಿ, ಸ್ಥಿರಃ= ತಾನು ಇರುವುದಾಗಿ, ಲೋಕಸ್ಯ= ಜನರಿಗೆ, ಅವಿದ್ಯಮಾನಮೇವಾರ್ಥಂ= ಅವಿದ್ಯಮಾನವಾದ ಅರ್ಥವನ್ನೇ, ಪ್ರದರ್ಶಯತಿ= ತೋರಿಸುತ್ತದೆಯೋ, ಸಃ= ಅದು, ದೋಷ ಇತಿ= ದೋಷವೆಂದು, ಗೀಯತೇ= ಹೇಳಲ್ಪಡುತ್ತದೆ, ಯಥಾ= ಹೇಗೆ, ಕಾರಣೇಷು= ಚಕ್ಷುರಾದಿ ಕರಣಗಳಲ್ಲಿ, ಕಾಚಃ= ಕಾಚವೋ ಅದರಂತೆ, ಯಥಾ= ಹೇಗೆ, ಅರ್ಥೇಷು= ಅರ್ಥಗಳಲ್ಲಿ, ಅತಿ ದೂರತಾ= ಅತಿದೂರತ್ವವೋ ಅದರಂತೆ.

**ಅನುವಾದ - ಯಾವುದು ಭ್ರಮಕಾಲದಲ್ಲಿ ತಾನು ಸ್ಥಿರವಾಗಿದ್ದು ನೋಡುವವನಿಗೆ ಅವಿದ್ಯಮಾನವಾದ ಅರ್ಥವನ್ನೇ ತೋರಿಸುತ್ತದೆಯೋ ಅದು ದೋಷವೆಂದು ಹೇಳಲ್ಪಡುತ್ತದೆ. ಚಕ್ಷುಸ್ಸಿನ ಕಾಚ ದೋಷವಿದ್ದಂತೆ. ಚಂದ್ರನ ಅತಿದೂರತ್ವ ದೋಷವಿದ್ದಂತೆ.**

**ಭಾವವಿಲಾಸಿನೀ– ದೋಷಲಕ್ಷಣಮಾಹ – ಅವಿದ್ಯಮಾನಮಿತಿ ।** ಭ್ರಮಕಾಲ ಇತ್ಯಸ್ಯಾವಿದ್ಯ-ಮಾನಮಿತ್ಯತ್ರಾಪಿ ಸಂಬಂಧಃ ॥ ೫೮೧ ॥

**ವಿವರಣೆ -** ಯಾವುದು ದೋಷವೋ ಅದು ಭ್ರಮಕಾಲದಲ್ಲಿ ತಾನು ಇದ್ದು ನೋಡುವವನಿಗೆ ಅವಿದ್ಯಮಾನವಾದ ಅರ್ಥವನ್ನು ತೋರಿಸಬೇಕು. ಚಕ್ಷುಸ್ಸಿನಲ್ಲಿ ಕಾಚದೋಷವು ಇದ್ದು ಶುಕ್ತಿಯನ್ನು ರಜತವನ್ನಾಗಿ ತೋರಿಸುತ್ತದೆ. ಚಂದ್ರನಲ್ಲಿ ಅತಿದೂರತ್ವ ದೋಷವು ಇದ್ದು, ಅದು ಚಂದ್ರನ ಪ್ರಾದೇಶ ಪರಿಮಾಣವನ್ನು ತೋರಿಸುತ್ತದೆ. ಅದರಂತೆ

ಜಗತ್ ಪ್ರತೀತಿಯು ಭ್ರಮವಾಗುವುದಾದರೆ ಇಲ್ಲಿಯೂ ಅಂತಹ ಒಂದು ದೋಷವನ್ನು ಕಲ್ಪನೆ ಮಾಡಬೇಕು ಎಂದು ಅಭಿಪ್ರಾಯ.

**ಉಪಾದಾನಂ ತವಾಜ್ಞಾನಂ ತಂತುವತ್ ಕಾರ್ಯಕಾರಕಂ ।**
**ಭ್ರಮಕಾಲೇತು ಯನ್ನಶ್ಯೇತ್ ಕಃ ಪಶ್ಯೇತ್ ತಸ್ಯ ದೋಷತಾಂ ॥ ೫೮೨ ॥**

**ಅರ್ಥ-** ಉಪಾದಾನಂ= ಉಪಾದಾನವಾದ, ತವ ಅಜ್ಞಾನಂ= ನಿನ್ನ ಅಜ್ಞಾನವಾದರೂ, ತಂತುವತ್= ತಂತುವಿನಂತೆ, ಕಾರ್ಯಕಾರಕಂ= ಕಾರ್ಯನಿಷ್ಪತ್ತಿಯನ್ನು ಮಾಡುತ್ತದೆ, ಯತ್= ಯಾವ ಅಜ್ಞಾನವು, ಭ್ರಮಕಾಲೇತು= ಭ್ರಮಕಾಲದಲ್ಲಿಯೇ, ನಶ್ಯೇತ್= ನಾಶವನ್ನು ಹೊಂದುತ್ತದೆಯೋ, ತಸ್ಯ= ಆ ಅಜ್ಞಾನಕ್ಕೆ, ದೋಷತಾಂ= ದೋಷತ್ವವನ್ನು, ಕಃ ಪಶ್ಯೇತ್= ಯಾವನು ಅನುಸಂಧಾನ ಮಾಡುತ್ತಾನೆ.

**ಅನುವಾದ** - ನಿನಗೆ ಉಪಾದಾನವಾಗಿ ಅಭಿಮತವಾದ ಅಜ್ಞಾನವಾದರೂ ತಂತುವಿನಂತೆ ಕಾರ್ಯಸಾಧಕವಾಗಿದೆ ಮತ್ತು ಭ್ರಮಕಾಲದಲ್ಲಿ ನಾಶವನ್ನು ಹೊಂದುತ್ತದೆ. ಅಂತಹ ಅಜ್ಞಾನಕ್ಕೆ ಯಾವನು ದೋಷವನ್ನು ಹೇಳುತ್ತಾನೆ.

**ಭಾವವಿಲಾಸಿನೀ–** ಅಜ್ಞಾನಸ್ಯ ಜಗದುಪಾದಾನತ್ವಾತ್ ನದೋಷತ್ವಮಿತಿ ಸದೃಷ್ಟಾಂತಮ್ ಆಹ – **ಉಪಾದಾನಮಿತಿ ॥** ಉಪಾದಾನಂ ಜಗದುಪಾದಾನವಮ್ । ಏವಂಚ ಪ್ರಾಗವಿದ್ಯಮಾನಸ್ಯ ಜಗತಃ ಸತ್ತಾ ಸಂಬಂಧಾಖ್ಯೋತ್ಪತ್ತಿಹೇತುತ್ವಾತ್ ಭ್ರಮಕಾಲೇಽವಿದ್ಯಮಾನಾರ್ಥದರ್ಶಯಿತೃತ್ವಾಖ್ಯದೋಷಲಕ್ಷಣಮವಿದ್ಯಾಯಾಂ ನ ಘಟತ ಇತಿ ಭಾವಃ । ಅತ ಏವ ಭ್ರಮೋಪಾದಾನತ್ವೇಽಪಿ ಮನಸ ಇವ ನ ದೋಷತಾ । ಭ್ರಮಕಾಲೇಸ್ಥಿರತ್ವಭಾವಾಚ್ಚನ ದೋಷತ್ವಮಿತ್ಯಾಹ –**ಭ್ರಮಕಾಲ ಇತಿ ॥** ಘಟಪಟಾದಿಭ್ರಮಕಾಲ ಇತ್ಯರ್ಥಃ । ಯದಜ್ಞಾನಮ್ ॥ ೫೮೨ ॥

**ವಿವರಣೆ** - ಅಜ್ಞಾನವು ಜಗತ್ತಿಗೆ ಉಪಾದಾನಕಾರಣವಾದುದರಿಂದಲೂ ಅದು ದೋಷವಾಗುವುದಿಲ್ಲ ಎಂದು ಇಲ್ಲಿ ದೃಷ್ಟಾಂತಪೂರ್ವಕವಾಗಿ ಉಪಪಾದನೆ ಮಾಡುತ್ತಾರೆ. ಅಜ್ಞಾನವು ಉಪಾದಾನ ಕಾರಣವಾದುದರಿಂದ ಭ್ರಮಕಾಲದಲ್ಲಿ ವಿದ್ಯಮಾನವಾದ ತನ್ನ ಕಾರ್ಯವನ್ನೇ ತೋರಿಸುತ್ತದೆ. ಆದ್ದರಿಂದ ಅಜ್ಞಾನವು ದೋಷವಾಗುವುದಿಲ್ಲ ಮತ್ತು ಭ್ರಮಕಾಲದಲ್ಲಿ ಆವರಣವು ನಿವೃತ್ತವಾಗುವುದರಿಂದ ಅಜ್ಞಾನವು ನಾಶವನ್ನು ಹೊಂದುತ್ತದೆ. ಆ ಕಾರಣದಿಂದಲೂ ಅಜ್ಞಾನವು ದೋಷವಾಗುವುದಿಲ್ಲ ಎಂದು ಅಭಿಪ್ರಾಯ.

**ಯತ್ಪ್ರವೃತ್ತೌ ಭ್ರಮಸ್ಯಾಪಿ ಪ್ರವೃತ್ತಿಃ ಸ್ಯಾತ್ ಪದೇಪದೇ ।**
**ಯನ್ನಿವೃತ್ತೌ ನಿವೃತ್ತಿಶ್ಚ ಭ್ರಮಸ್ಯ ಸ ಹಿ ಪಂಡಿತೈಃ ॥ ೫೮೩ ॥**
**ದೋಷ ಇತ್ಯುಚ್ಯತೇಽನೀದೃಗಜ್ಞಾನಂ ತೇ ಜಗತ್ರಯೇ ।**
**ಕಥಂ ದೋಷೋ ಭವೇತ್ ಪಶ್ಯ ಪ್ರತಿಕರ್ಮವ್ಯವಸ್ಥಿತಿಮ್ ।**
**ನಚೇತ್ ತಂತುಃ ಪಟೇ ದೋಷೋ ಮೃದ್ ದೋಷೋ ಮೃನ್ಮಯೇ ಭವೇತ್ ॥ ೫೮೪ ॥**

**ಅರ್ಥ-** ಯತ್ಪ್ರವೃತ್ತೌ= ಯಾವುದು ಸಂಪನ್ನವಾದರೆ, ಪದೆ ಪದೇ= ಹೆಜ್ಜೆ ಹೆಜ್ಜೆಗೂ, ಭ್ರಮಸ್ಯಾಪಿ= ಭ್ರಮಕ್ಕೂ ಸಹ, ಪ್ರವೃತ್ತಿಃ ಸ್ಯಾತ್= ಸಂಪತ್ತಿ ಉಂಟಾಗುತ್ತದೆಯೋ, ಯನ್ನಿವೃತ್ತೌ= ಯಾವುದು ನಿವೃತ್ತವಾದರೆ, ಭ್ರಮಸ್ಯ= ಭ್ರಮಕ್ಕೂ, ನಿವೃತ್ತಿಶ್ಚ= ನಿವೃತ್ತಿಯು ಆಗುತ್ತದೆಯೋ, ಸಃ= ಅಂತಹ ಪದಾರ್ಥಗಳು, ಪಂಡಿತೈಃ= ಪಂಡಿತರಿಂದ, ದೋಷ ಇತಿ= ದೋಷವೆಂದು ಉಚ್ಯತೇ ಹಿ= ಹೇಳಲ್ಪಡುತ್ತದೆಯಷ್ಟೆ, ಅನೀದೃಗ್= ಇಂತಹದಲ್ಲದ, ತೇ ಅಜ್ಞಾನಂ= ನಿನ್ನ ಅಜ್ಞಾನವು, ಜಗತ್ರಯೇ= ಮೂರು ಲೋಕದಲ್ಲಿ, ಕಥಂ= ಹೇಗೆ, ದೋಷೋ ಭವೇತ್= ದೋಷವಾಗುತ್ತದೆ, ಪ್ರತಿಕರ್ಮವ್ಯವಸ್ಥಿತಿಂ= ಪ್ರತಿಕರ್ಮ ವ್ಯವಸ್ಥೆಯನ್ನು, ಪಶ್ಯ= ನೋಡು, ನಚೇತ್= ಇಲ್ಲದಿದ್ದರೆ, ತಂತುಃ= ತಂತುವು, ಪಟೇ= ಪಟದಲ್ಲಿ, ದೋಷಃ= ದೋಷವಾಗಲಿ, ಮೃಣ್ಮಯೇ= ಮೃಣ್ಮಯಪದಾರ್ಥದಲ್ಲಿ, ಮೃತ್= ಮಣ್ಣು, ದೋಷೋ ಭವೇತ್= ದೋಷವಾಗಲಿ (ದೋಷವಾಗುತ್ತದೆ).

**ಅನುವಾದ** - ಯಾವುದು ಸಂಪನ್ನವಾಗುತ್ತಿರಲು ಮತ್ತೆ ಮತ್ತೆ ಭ್ರಮವು ಉಂಟಾಗುತ್ತದೆಯೋ, ಯಾವುದು ನಿವೃತ್ತವಾಗುತ್ತಿರಲು ಭ್ರಮವೂ ನಿವೃತ್ತವಾಗುತ್ತದೆಯೋ ಅದು ಪಂಡಿತರಿಂದ ದೋಷವೆಂದು ಕರೆಯಲ್ಪಡುತ್ತದೆ. ನಿನ್ನ ಅಜ್ಞಾನವು ಇಂತಹದಲ್ಲ. ಮೂರು ಲೋಕದಲ್ಲಿಯಾದರೂ ಅದು ಹೇಗೆ ದೋಷವಾಗುತ್ತದೆ? ಪ್ರತಿಕರ್ಮವ್ಯವಸ್ಥೆಯನ್ನು ನೋಡು. ಇಲ್ಲದಿದ್ದರೆ ತಂತುವು ಪಟಕ್ಕೂ, ಮತ್ತು ಮಣ್ಣು ಘಟಕ್ಕೂ ದೋಷವಾದೀತು.

**ಭಾವವಿಲಾಸಿನೀ–** ನನು ಭ್ರಮಕಾಲೇ ಸ್ಥಿರತ್ವಾಭಾವೇ ಕುತೋ ನ ದೋಷತ್ವಮಿತ್ಯತ ಆಹ – **ಯತ್ ಪ್ರವೃತ್ತಾವಿತಿ ||** ಯಸ್ಯ ದೋಷಸ್ಯ ಪ್ರವೃತ್ತೌ ಸಂಪತ್ತಾವಿತ್ಯರ್ಥಃ। ತೇಽಜ್ಞಾನಮ್। ಜಗತ್ರಯೋ ಅನೀದೃಕ್ ಭ್ರಮಕಾಲೇ ಸಂಪತ್ತಿಮತ್ ನ । ಕಿಂತು ಭ್ರಮಕಾಲೇ ನಿವೃತ್ತಮುದೇವ । ಅತೋ ಭ್ರಮಾನುಪಯೋಗಿನಸ್ತಸ್ಯ ಕಥಂ ದೋಷತ್ವಮಿತಿ ಭಾವಃ। ನನು ಭ್ರಮಕಾಲೇಽಜ್ಞಾನಸ್ಯ ಕುತೋ ನಾಶ ಇತ್ಯತ ಆಹ – **ಪಶ್ಯೇತಿ ||** ಪ್ರತಿಕರ್ಮವ್ಯವಸ್ಥಿತಿಂ ಘಟವೃತ್ತ್ಯಾಘಟಾಧಿಷ್ಠಾನಚೈತನ್ಯಾವರಕಾಜ್ಞಾನನಿವೃತ್ತೌ ಸತ್ಯಾಂ ತತ್‌ಚೈತನ್ಯಂ ತಸ್ಯ ಘಟಸ್ಯಜ್ಞಾನಮಿತಿ ಯಾ ವಿಷಯವ್ಯವಸ್ಥಾಪಿಕಾ ಪ್ರಕ್ರಿಯಾ ತಾಮಿತ್ಯರ್ಥಃ। ಕರ್ಮಪದಸ್ಯ ವಿಷಯವಾಚಿತ್ವಾತ್ । ಅತ್ರ ಹ್ಯವಿದ್ಯಾನಿವೃತ್ತ್ಯುತ್ತರಕಾಲ ಏವ ಭ್ರಮ ಇತಿ ಸ್ಪಷ್ಟಂ ಪ್ರತೀಯತೇ। ತಸ್ಮಾನ್ನಾನುಕ್ತೋಪಾಲಂಭ ಇತಿ ಭಾವಃ। ನಚೇತ್ ಉಪಾದಾನಸ್ಯ ದೋಷತ್ವಾಭಾವೋ ನಚೇತ್ ||೫೮೩-೮೪||

**ವಿವರಣೆ** - ಭ್ರಮಕಾಲದಲ್ಲಿ ತಾನು ಇಲ್ಲದಿದ್ದರೂ ಏಕೆ ದೋಷವಾಗಬಾರದು ಎಂಬ ಶಂಕೆಗೆ ಇಲ್ಲಿ ಉತ್ತರವನ್ನು ಹೇಳುತ್ತಾರೆ. ನಿನಗೆ ಅಭಿಮತವಾದ ಅಜ್ಞಾನವು ಭ್ರಮಕಾಲದಲ್ಲಿ ಸಂಪತ್ತಿಯನ್ನು ಹೊಂದಿರುವುದಿಲ್ಲ. ನಿವೃತ್ತಿಯನ್ನೇ ಹೊಂದಿರುತ್ತದೆ. ಆದುದರಿಂದ ಅದು ಭ್ರಮೋಪಯೋಗಿಯಾದ ದೋಷವಾಗುವುದಿಲ್ಲ. ಭ್ರಮಕಾಲದಲ್ಲಿ ಅಜ್ಞಾನಕ್ಕೆ ನಿವೃತ್ತಿಯಾದರೂ ಏಕೆ ಎಂಬ ಪ್ರಶ್ನೆಗೆ ಪ್ರತಿಕರ್ಮವ್ಯವಸ್ಥೆಯನ್ನು ನೋಡು ಎಂದು ಉತ್ತರ.

ಘಟವೃತ್ತಿಯಿಂದ ಘಟಾಧಿಷ್ಠಾನ ಚೈತನ್ಯಕ್ಕೆ ಆವರಕವಾದ ಅಜ್ಞಾನವು ನಿವೃತ್ತಿಯಾದರೆ ಆಗ ಆ ಚೈತನ್ಯವು ಘಟಜ್ಞಾನವೆಂದು ಕರೆಯಲ್ಪಡುತ್ತದೆ ಎಂದು ನಿನ್ನ ಪ್ರಕ್ರಿಯೆಯಷ್ಟೇ. ಈ ಪ್ರಕ್ರಿಯೆಯಲ್ಲಿ ಅವಿದ್ಯಾನಿವೃತ್ತಿಯ ನಂತರವೇ ಘಟದ ಭ್ರಮವು ಉಂಟಾಗುವುದು ಸ್ಪಷ್ಟವಾಗಿ ಪ್ರತೀತವಾಗುತ್ತದೆ. ಆದ್ದರಿಂದ ನಮ್ಮ ಮಾತಿನಲ್ಲಿ ಅನುಕ್ತೋಪಾಲಂಭವೇನೂ ಇಲ್ಲ ಎಂದು ಅಭಿಪ್ರಾಯ.

ಕಿಂಚ ಕುಡ್ಯೇನ ವಸ್ತ್ರೇಣ ತಮಸಾ ವಾಽಽವೃತೇ ಘಟೇ ।
ಜ್ಞಾನಮಾತ್ರನಿರೋಧೇನ ನ ಪ್ರಮಾ ನಾಪಿ ಚಾಪ್ರಮಾ ॥ ೫೮೫ ॥

**ಅರ್ಥ-** ಕಿಂಚ= ಮತ್ತು, ಕುಡ್ಯೇನ= ಗೋಡೆಯಿಂದ, ವಸ್ತ್ರೇಣ= ವಸ್ತ್ರದಿಂದ, ತಮಸಾ ವಾ= ಅಥವಾ ತಮಸ್ಸಿನಿಂದ, ಆವೃತೇ= ಆವೃತವಾದ, ಘಟೇ= ಘಟದಲ್ಲಿ, ಜ್ಞಾನಮಾತ್ರ ನಿರೋಧೇನ= ಯಾವ ಜ್ಞಾನವೂ ಉಂಟಾಗುವುದಿಲ್ಲವಾದ್ದರಿಂದ, ನ ಪ್ರಮಾ= ಪ್ರಮೆಯೂ ಉಂಟಾಗುವುದಿಲ್ಲ, ಚ= ಮತ್ತು, ನ ಅಪ್ರಮಾ= ಭ್ರಾಂತಿಯೂ ಉಂಟಾಗುವುದಿಲ್ಲ.

**ಅನುವಾದ -** ಮತ್ತು ಗೋಡೆಯಿಂದಾಗಲೀ, ವಸ್ತುದಿಂದಾಗಲೀ, ಅಥವಾ ತಮಸ್ಸಿನಿಂದಾಗಲೀ ಆವೃತವಾದ ಘಟದ ವಿಷಯದಲ್ಲಿ ಯಾವ ಜ್ಞಾನವೂ ಉತ್ಪತ್ತಿಯಾಗುವುದಿಲ್ಲವಾದ್ದರಿಂದ ಪ್ರಮೆಯೂ ಉಂಟಾಗುವುದಿಲ್ಲ, ಭ್ರಾಂತಿಯೂ ಉಂಟಾಗುವುದಿಲ್ಲ.

**ಭಾವವಿಲಾಸಿನೀ–** ಆವರಣತ್ವೇಚಾಜ್ಞಾನಸ್ಯ ಭ್ರಮಪ್ರಮಾರೂಪಜ್ಞಾನಮಾತ್ರ ಪ್ರತಿ ಬಂಧಕತ್ವಮೇವ ನ್ಯಾಯ್ಯಮ್ । ಭ್ರಮಹೇತುತ್ವರೂಪದೋಷತ್ವಂ ಕಥಂ ಸ್ಯಾದಿತ್ಯಾಹ – **ಕಿಂಚೇತಿ।।೫೮೫।।**

ತಸ್ಮಾದಾವರಣಾಜ್ಞಾನಂ ಸ್ಯಾಜ್‌ಜ್ಞಾನಪ್ರತಿಬಂಧಕಂ ।
ಭ್ರಮಹೇತುಃ ಕಥಂ ದೋಷೋ ಭಾವಾಜ್ಞಾನಮಿದಂ ವದ ॥ ೫೮೬ ॥

**ಅರ್ಥ-** ತಸ್ಮಾತ್= ಆದ್ದರಿಂದ, ಆವರಣಾಜ್ಞಾನಂ= ಆವರಣವಾದ ಅಜ್ಞಾನವು, ಜ್ಞಾನ ಪ್ರತಿಬಂಧಕಂ= ಜ್ಞಾನಕ್ಕೆ ಪ್ರತಿಬಂಧಕವಾಗಿ, ಸ್ಯಾತ್= ಆಗಬಹುದು, ಇದಂ ಭಾವಾಜ್ಞಾನಂ= ಈ ಭಾವರೂಪವಾದ ಅಜ್ಞಾನವು, ಭ್ರಮಹೇತುಃ= ಭ್ರಮಕಾರಣವಾದ, ದೋಷಃ= ದೋಷವು, ಕಥಂ= ಹೇಗೆ ಆಗುತ್ತದೆ ಎಂದು, ವದ= ಹೇಳು.

**ಅನುವಾದ-** ಆದ್ದರಿಂದ ಆವರಣವಾದ ಅಜ್ಞಾನವು ಜ್ಞಾನಸಾಮಾನ್ಯಕ್ಕೆ ಪ್ರತಿಬಂಧಕವಾಗಬಹುದು. ಈ ಭಾವರೂಪ ಅಜ್ಞಾನವು ಭ್ರಮವನ್ನು ಕುರಿತು ಹೇಗೆ ಕಾರಣವಾಗುತ್ತದೆ ಎಂದು ಹೇಳು.

**ಭಾವವಿಲಾಸಿನೀ–** ತಸ್ಮಾತ್ ಆವರಣಸ್ಯ ಜ್ಞಾನಮಾತ್ರಪ್ರತಿಬಂಧಕತ್ವದರ್ಶನಾತ್ । ಭಾವಾಜ್ಞಾನಂ ಭಾವರೂಪಾಜ್ಞಾನಮ್ । ಜ್ಞಾನಪ್ರಾಗಭಾವರೂಪಸ್ಯಾಜ್ಞಾನಸ್ಯ ಜ್ಞಾನಹೇತುತ್ವ ದರ್ಶನಾಯೇತ್ಯುಕ್ತಮ್ ॥ ೫೮೬ ॥

**ವಿವರಣೆ -** ಆವರಣವಿದ್ದರೆ ಭ್ರಮವೂ ಉಂಟಾಗುವುದಿಲ್ಲ. ಪ್ರಮೆಯೂ ಉಂಟಾಗುವುದಿಲ್ಲ. ಆದ್ದರಿಂದ ಅಜ್ಞಾನವನ್ನು ಜ್ಞಾನಪ್ರತಿಬಂಧಕವೆಂದು ಹೇಳಬಹುದು. ಆದರೆ ನಾವು ಹಿಂದೆ ಹೇಳಿದ ಅನೇಕ ಯುಕ್ತಿಗಳಿಂದ ಭ್ರಮಹೇತುತ್ವರೂಪವಾದ ದೋಷತ್ವವನ್ನು ಹೇಳಲು ಮಾತ್ರ ಸಾಧ್ಯವಿಲ್ಲ ಎಂದು ಅಭಿಪ್ರಾಯ.

ತದದೋಷಸ್ಯ ದೋಷತ್ವಭ್ರಮೋ ಯಸ್ತವ ಚೇತಸಿ ।
ತತ್ರ ದೋಷೋ ಭವೇಚ್ಛಬ್ದಭಾವಾಜ್ಞಾನಂ ಪರಂ ತವ ॥ ೫೮೭ ॥

**ಅರ್ಥ-** ತತ್= ಆದ್ದರಿಂದ, ತವಚೇತಸಿ= ನಿನ್ನ ಮನಸ್ಸಿನಲ್ಲಿ, ಅದೋಷಸ್ಯ= ದೋಷವಲ್ಲದ್ದಕ್ಕೆ, ಯಃ ದೋಷತ್ವಭ್ರಮಃ= ಯಾವ ದೋಷತ್ವ ಭ್ರಮವಿದೆಯೋ (ದೋಷವೆಂಬ ಭ್ರಮವಿದೆಯೋ), ತತ್ರ= ಆ ಭ್ರಮದಲ್ಲಿ, ತವ= ನಿನ್ನ, ಶಬ್ದಭಾವಾಜ್ಞಾನಂ= ಶಬ್ದದ ಅಭಿಪ್ರಾಯದ ಅಜ್ಞಾನವು, ಪರಂ= ಮಾತ್ರ, ದೋಷೋಭವೇತ್= ದೋಷವಾಗುತ್ತದೆ.

**ಅನುವಾದ -** ಆದ್ದರಿಂದ ಅದೋಷವಾದ ಅಜ್ಞಾನವನ್ನು ದೋಷವೆಂದು ತಿಳಿಯುವ ನಿನ್ನ ಮನಸ್ಸಿನಲ್ಲಿರುವ ಭ್ರಮೆ ಏನಿದೆಯೋ, ಅದಕ್ಕೆ ನಿನ್ನಲ್ಲಿರುವ ಸಚ್ಛಾಸ್ತ್ರದ ಅಪರಿಜ್ಞಾನವು ಮಾತ್ರ ದೋಷವಾಗುತ್ತದೆ.

**ಭಾವವಿಲಾಸಿನೀ–** ತತ್ ತಸ್ಮಾತ್ ಉಕ್ತವಿಧಯಾಽಜ್ಞಾನಸ್ಯ ದೋಷತ್ವಾಯೋಗಾತ್ । ತತ್ರ ಅದೋಷಾಜ್ಞಾನಸ್ಯ ದೋಷತ್ವಭ್ರಮೇ । ಶಬ್ದಭಾವಾಜ್ಞಾನಮ್ ಆವರಣ- ಶಬ್ದಸ್ವಭಾವಾಜ್ಞಾನಮ್।

**ವಿವರಣೆ -** ಶಬ್ದಭಾವಾಜ್ಞಾನಂ ಎಂದರೆ ಶಬ್ದದ ಅಭಿಪ್ರಾಯದ ಅಜ್ಞಾನ ಮತ್ತು ಭಾವರೂಪವಾದ ಆವರಣದ ಕಾರ್ಯದ ಅಪರಿಜ್ಞಾನ ಎಂದೂ ಅರ್ಥವಾಗುತ್ತದೆ.

ತಸ್ಮಾದ್ಯೋಗ್ಯಪ್ರಧಾನಾದೇರಭಾವಾನ್ನ ಜಗನ್ಮೃಷಾ ॥ ೫೮೮ ॥

**ಅರ್ಥ-** ತಸ್ಮಾತ್= ಆದ್ದರಿಂದ, ಯೋಗ್ಯಪ್ರಧಾನಾದೇಃ= ಯೋಗ್ಯವಾದ ಪ್ರಧಾನ, ಅಧಿಷ್ಠಾನ ಮತ್ತು ದೋಷಗಳು, ಅಭಾವಾತ್= ಇಲ್ಲದಿರುವುದರಿಂದ, ಜಗತ್= ಜಗತ್ತು, ನ ಮೃಷಾ= ಮಿಥ್ಯಾಭೂತವಾದುದಲ್ಲ.

**ಅನುವಾದ** - ಆದ್ದರಿಂದ ಯೋಗ್ಯವಾದ ಪ್ರಧಾನ, ಅಧಿಷ್ಠಾನ ಮತ್ತು ದೋಷಗಳು ಇಲ್ಲದಿರುವುದರಿಂದ ಜಗತ್ತು ಮಿಥ್ಯಾಭೂತವಾದುದಲ್ಲ.

**ಭಾವವಿಲಾಸಿನೀ**– ಉಪಸಂಹರತಿ ॥ **ತಸ್ಮಾದಿತಿ** ॥ ಆದಿಪದೇನಾಧಿಷ್ಠಾನಂ ದೋಷಶ್ಚ ಗೃಹ್ಯತೇ ।

ಅತೀತಕಲ್ಪೇಽತೀತಂ ಯತ್ ಪ್ರಧಾನಂ ತಜ್ಜಗತ್ ತವ ।
ತತ್ಸಂಸ್ಕಾರೇಣ ಚೇದಾನೀಮಾರೋಪ್ಯಂ ತೇ ಘಟಾದಯಃ ।
ಇತಿ ವಾಚ್ಯಂ ನಷ್ಟದೃಷ್ಟೇರದೃಷ್ಟತ್ವಾದ್ ಭ್ರಮಾಂತರೇ ॥ ೫೪೯ ॥

**ಅರ್ಥ**- ಅತೀತಕಲ್ಪೇ= ಹಿಂದಿನ ಕಲ್ಪದಲ್ಲಿ, ಅತೀತಂ= ನಷ್ಟವಾದ, ಯತ್= ಯಾವ, ತವ= ನಿನಗೆ, ಪ್ರಧಾನಂ= ಪ್ರಧಾನವಾದ, ಜಗತ್= ಜಗತ್ತಿದೆಯೋ, ತತ್ಸಂಸ್ಕಾರೇಣ= ಅದರ ಸಂಸ್ಕಾರದಿಂದ, ಇದಾನೀಂ= ಈಗ, ಘಟಾದಯಃ= ಘಟಾದಿ ಪದಾರ್ಥಗಳು, ಆರೋಪ್ಯಂತೇ= ಆರೋಪಿಸಲ್ಪಡುತ್ತದೆ, ಇತಿ= ಎಂದು, ವಾಚ್ಯಂ= ಹೇಳಲ್ಪಡಬೇಕು. ನಷ್ಟದೃಷ್ಟೇಃ= ಕಲ್ಪಾಂತರದ ಜಗತ್‌ಜ್ಞಾನವು ನಾಶ ಹೊಂದಿದ ವ್ಯಕ್ತಿಗೆ, ಭ್ರಮಾಂತರೇ= ಕಲ್ಪಾಂತರ ಭ್ರಮದಲ್ಲಿ ಎಂದರೆ ಈ ಕಲ್ಪದ ಭ್ರಮದಲ್ಲಿ, ಅದೃಷ್ಟತ್ವಾತ್= ಗೃಹ್ಯಮಾಣಾರೋಪತ್ವವು ಕಂಡುಬರುವುದಿಲ್ಲವಾದ್ದರಿಂದ (ಈ ಅಂಗೀಕಾರವು ಯುಕ್ತವಲ್ಲ).

**ಅನುವಾದ** - ಅತೀತ ಕಲ್ಪದಲ್ಲಿ ಇದ್ದ ಅತೀತವಾದ ಜಗತ್ತು ಪ್ರಧಾನವೆಂದು ಹೇಳುವುದಾದರೆ ಈಗ ಅದರ ಸಂಸ್ಕಾರದಿಂದಲೇ ಘಟಾದಿಗಳ ಆರೋಪವನ್ನು ಹೇಳಬೇಕು. ಅತೀತ ಕಲ್ಪದ ಘಟಾದಿಜ್ಞಾನವು ಈಗ ನಷ್ಟವಾಗಿರುವುದರಿಂದ ಇದು ಗೃಹ್ಯಮಾಣಾರೋಪವಲ್ಲ. ಆದರೆ ಸಂಸ್ಕಾರದ ಉದ್ಬೋಧದಿಂದ ಸ್ಮರ್ಯಮಾಣಾರೋಪರೂಪವಾದುದು.

**ಭಾವವಿಲಾಸಿನೀ**– ಯುಕ್ತ್ಯಂತರೇಣಾಪಿ ಪ್ರಾಚೀನಜಗತಃ ಪ್ರಧಾನತ್ವಂ ದೂಷಯತಿ ॥ **ಅತೀತೇತಿ** ॥ ಪ್ರಾಚೀನಜಗತಃ ಪ್ರಧಾನತ್ವಂ ವದತಾ ತತ್‌ಸ್ಮೃತಿಜನ್ಯ ಏವಾಯಂ ಭ್ರಮೋ ವಕ್ತವ್ಯೋ ನತು ತದನುಭವಜನ್ಯಃ । ಕಲ್ಪಾಂತರೇ ನಷ್ಟಸ್ಯ ತಸ್ಯಾಸ್ಮಿನ್‌ಕಲ್ಪೇ ದ್ರಷ್ಟುಮಶಕ್ಯತ್ವಾತ್ ಇತ್ಯಾಹ – ತತ್ ಸಂಸ್ಕಾರೇಣೇತಿ ॥ ತಸ್ಯ ಪ್ರಾಚೀನ ಜಗತಃ ಸಂಸ್ಕಾರೇಣ ಸಂಸ್ಕಾರಜನ್ಯಸ್ಮೃತ್ಯೇತ್ಯರ್ಥಃ । ಇದಾನೀಮಸ್ಮಿನ್‌ಕಲ್ಪೇ । ನಷ್ಟದೃಷ್ಟೇಃ ನಷ್ಟಪ್ರಾಚೀನಕಲ್ಪೀಯಜಗತ್‌ದೃಷ್ಟೇಃ । ಭ್ರಮಾಂತರೇ ಕಲ್ಪಾಂತರಭ್ರಮೇ । ಏತತ್ ಕಲ್ಪೀಯ ಭ್ರಮ ಇತಿ ಯಾವತ್ । ಅದೃಷ್ಟತ್ವಾತ್ ಆದರ್ಶನಾತ್ । ಅಯುಕ್ತತ್ವಾದಿತ್ಯರ್ಥಃ ॥ ೫೪೯ ॥

ಯತೋನುಭೂಯಮಾನಸ್ಯ ನಾರೋಪೋಯಮಭೂನ್ನ ತೇ ।
ಭ್ರಮೋನ್ಯೋಯಂ ಪ್ರಧಾನಸ್ಯ ಸಂಸ್ಕಾರೋದ್ಬೋಧಜೋ ಧ್ರುವಂ ॥೫೫೦॥

**ಅರ್ಥ-** ಯತಃ= ಯಾವ ಕಾರಣದಿಂದ, ಅಯಂ ಆರೋಪಃ= ಈ ಜಗದಾರೋಪವು, ತೇ= ನಿನಗೆ, ಅನುಭೂಯಮಾನಸ್ಯ ಏವ ಆರೋಪಃ= ಅನುಭೂಯಮಾನವಾದ ಆರೋಪವೇ ಎಂದರೆ ಗೃಹ್ಯಮಾಣಾರೋಪವೇ, ನ ಅಭೂತ್= ಆಗಲಿಲ್ಲವೋ, ಆದ್ದರಿಂದ, ಅಯಂ ಅನ್ಯೋ ಭ್ರಮಃ= ಈ ಭಿನ್ನವಾದ ಭ್ರಮವು, ಧ್ರುವಂ= ನಿಶ್ಚಯವಾಗಿ, ಪ್ರಧಾನಸ್ಯ= ಪ್ರಧಾನದ, ಸಂಸ್ಕಾರೋದ್ಬೋಧಜಃ= ಸಂಸ್ಕಾರೋದ್ಬೋಧದಿಂದ ಉಂಟಾದುದು.

**ಅನುವಾದ - ಯಾವ ಕಾರಣದಿಂದ ಈಗಿನ ಜಗದಾರೋಪವು ನಿನ್ನ ರೀತಿಯಿಂದ ಗೃಹ್ಯಮಾಣಾರೋಪವಾಗಲಿಲ್ಲವೋ, ಆ ಕಾರಣದಿಂದ ಗೃಹ್ಯಮಾಣಾರೋಪಕ್ಕಿಂತ ಭಿನ್ನವಾದ ಈ ಜಗದಾರೋಪವನ್ನು ಪ್ರಧಾನಸಂಸ್ಕಾರದ ಉದ್ಬೋಧದಿಂದ ಉಂಟಾದ ಸ್ಮರ್ಯಮಾಣಾರೋಪವೆಂದೇ ಖಂಡಿತವಾಗಿ ಹೇಳಬೇಕು.**

**ಭಾವವಿಲಾಸಿನೀ– ಅಯಮಿದಾನೀಂತನಜಗದಾರೋಪಃ । ತತಃ ಅಯಂ ಭ್ರಮೋಽನ್ಯಃ ಅನುಭೂಯಮಾನಾರೋಪಾದನ್ಯಃ । ಕಸ್ತರ್ಹೀತ್ಯತ ಆಹ – ಪ್ರಧಾನಸ್ಯೇತಿ ॥ ಸ್ಮರ್ಯಮಾಣಾರೋಪ ಇತ್ಯರ್ಥಃ ॥ ೫೯೦ ॥**

**ಭ್ರಮಹೇತುಃ ಸ ಸಂಸ್ಕಾರೋ ಯದಿ ಜೀವೇಷು ಜೃಂಭತೇ ।**
**ಜಾತಿಸ್ಮರತ್ವಸಿದ್ಧ್ಯರ್ಥಂ ತಪಾಂಸ್ಯಾಸಂಸ್ತದಾ ವೃಥಾ ॥ ೫೯೧ ॥**

**ಅರ್ಥ-** ಯದಿ= ಒಂದು ಪಕ್ಷ, ಭ್ರಮಹೇತುಃ= ಈಗಿನ ಭ್ರಮಕ್ಕೆ ಕಾರಣವಾದ, ಸ ಸಂಸ್ಕಾರಃ= ಅತೀತಿ ಕಲ್ಪದಲ್ಲಿ ಉಂಟಾದ ಸಂಸ್ಕಾರವು, ಜೀವೇಷು= ಜೀವರಲ್ಲಿ, ಜೃಂಭತೇ= ಉದ್ಬುದ್ಧವಾಗುವುದಾದರೆ, ಜಾತಿಸ್ಮರತ್ವಸಿದ್ಧ್ಯರ್ಥಂ= ಜನ್ಮಾಂತರ ಸ್ಮರಣೆಯನ್ನು ಪಡೆಯುವುದಕ್ಕಾಗಿ, ತಪಾಂಸಿ= ತಪಸ್ಸುಗಳು, ತದಾ= ಆಗ, ವೃಥಾ ಆಸನ್= ವ್ಯರ್ಥವಾದವು.

**ಅನುವಾದ - ಕಲ್ಪಾಂತರದಲ್ಲಿ ಉಂಟಾದ ಸಂಸ್ಕಾರವು ಈ ಕಲ್ಪದಲ್ಲಿ ಉದ್ಬುದ್ಧವಾಗಿ ಭ್ರಮಕ್ಕೆ ಕಾರಣವಾಗುವುದಾದರೆ ಪೂರ್ವಜನ್ಮದ ಸ್ಮರಣೆಗಾಗಿ ತಪಸ್ಸನ್ನು ಮಾಡುವುದು ಆಗ ವ್ಯರ್ಥವಾಗುತ್ತದೆ.**

**ಭಾವವಿಲಾಸಿನೀ–ಸಃ ಕಲ್ಪಾಂತರಾತೀತಜಗದ್ವಿಷಯಕಃ ಜೃಂಭತೇ ಅಸ್ಮಿನ್‌ಕಾಲೇ ಉದ್ಬುಧ್ಯತೇ । ತದಾ ಕಲ್ಪಾಂತರೀಯ ಸಕಲ ಸಂಸ್ಕಾರಾಣಾಮಸ್ಮಿನ್‌ಕಲ್ಪೇ ಉದ್ಬೋಧೇ। ಕಲ್ಪಾಂತರೀಯಜಗತಃ ಪ್ರಧಾನತ್ವಮ್ ಅನುಭೂಯಮಾನಾರೋಪ ಸ್ಥಲೀಯ ರಜತಾದಿವದಪಿ ನ ಘಟತೇ । ಚಿರಕಾಲವಿನಷ್ಟಸ್ಯೇದಾನೀಂ ಚಕ್ಷುಷಾಽನುಭವಾಯೋಗಾತ್ । ನಾಪಿ ಸ್ಮರ್ಯಮಾಣಾರೋಪಸ್ಥಲೀಯಾಪಣಸ್ಥರಜತಾದಿವತ್ । ಜನ್ಮಾಂತರೀಯ ಸ್ಮರಣೇಽಪ್ಯಸಮರ್ಥಾನಾಂ ಜೀವಾನಾಂ ಕಲ್ಪಾಂತರೀಯ ಜಗತ್ ಸ್ಮರಣೇ ಸುತರಾಮಸಾಮರ್ಥ್ಯಾತ್ । ಅತೋ ದ್ವೇಧಾಽಪಿ ನ ತಸ್ಯ ಪ್ರಧಾನತ್ವಮಿತಿ ಭಾವಃ ॥ ೫೯೧ ॥**

**ವಿವರಣೆ** - ಜೀವರಿಗೆ ಜನ್ಮಾಂತರದ ಸ್ಮರಣೆಯು ಇರುವುದಿಲ್ಲ. ಆ ಸ್ಮರಣೆಯು ಸಹ ದೊಡ್ಡ ತಪಸ್ಸಿನಿಂದ ಸಾಧ್ಯವಾದುದು. ಹೀಗಿರುವಾಗ ಕಲ್ಪಾಂತರದ ಜಗತ್ತಿನ ಸ್ಮರಣೆಯಾಗಲೀ, ಆ ಸಂಸ್ಕಾರದ ಉದ್ಬೋಧವಾಗಲೀ ಸುತರಾಂ ಕೂಡುವುದಿಲ್ಲ. ಆದ್ದರಿಂದ ಕಲ್ಪಾಂತರೀಯ ಜಗತ್ತಿಗೆ ಯಾವ ರೀತಿಯಲ್ಲಿಯೂ ಪ್ರಧಾನತ್ವವು ಕೂಡುವುದಿಲ್ಲ ಎಂದು ಅಭಿಪ್ರಾಯ. ಜೊತೆಗೆ ಕಲ್ಪಾಂತರದ ಸಂಸ್ಕಾರವು ರಜತಾದಿ ಸ್ಥಳದಲ್ಲಿ ಉದ್ಬುದ್ಧವಾಗುವುದಾದರೆ ಎಲ್ಲ ಕಡೆಗಳಲ್ಲಿ ಉದ್ಬುದ್ಧವಾಗಲಿ ಎಂಬ ಆಪತ್ತಿಯು ಬರುತ್ತದೆ. ಕಲ್ಪಾಂತರೀಯ ಜಗತ್ತಿಗೆ ಪ್ರಧಾನತ್ವವು ದೃಶ್ಯಮಾನಾರೋಪ ಸ್ಥಳದ ರಜತದಂತೆಯೂ ಕೂಡುವುದಿಲ್ಲ. ಏಕೆಂದರೆ ಕಲ್ಪಾಂತರದ ಜ್ಞಾನವು ಯಾವಾಗಲೋ ನಷ್ಟವಾಗಿದೆ. ಸ್ಮರ್ಯಮಾಣಾರೋಪಸ್ಥಳದ ಆಪಣಸ್ಥ ರಜತದಂತೆಯೂ ಪ್ರಧಾನತ್ವವು ಕೂಡುವುದಿಲ್ಲ. ಜನ್ಮಾಂತರವನ್ನೇ ಸ್ಮರಣೆ ಮಾಡಲು ಸಾಧ್ಯವಿಲ್ಲದ ಜೀವರಿಗೆ ಕಲ್ಪಾಂತರದ ಸ್ಮರಣೆಯು ಬರಲು ಸಾಧ್ಯವಿಲ್ಲ. ಆದ್ದರಿಂದ ಯಾವ ರೀತಿಯಲ್ಲಿಯೂ ಅತೀತವಾದ ಜಗತ್ತಿಗೆ ಪ್ರಧಾನತ್ವವು ಕೂಡುವುದಿಲ್ಲ ಎಂದು ಅಭಿಪ್ರಾಯ.

**ಸಂಸ್ಕಾರಾಧಾರಮನಸೋಽಸತ್ತ್ವಾಚ್ಚ ನ ಸ ವರ್ತತೇ ।**
**ಘಟಾವಚ್ಛಿನ್ನಚೈತನ್ಯೇ ತತ್ಸಂಸ್ಕಾರಾತ್ ಕಥಂ ಭ್ರಮಃ ॥ ೫೯೨ ॥**

**ಅರ್ಥ**- ಸಂಸ್ಕಾರಾಧಾರಮನಸಃ= ಸಂಸ್ಕಾರಕ್ಕೆ ಆಧಾರವಾದ ಮನಸ್ಸು, ಅಸತ್ತ್ವಾಚ್ಚ= ಇಲ್ಲದಿರುವುದರಿಂದಲೂ ಸಹ, ಸಃ= ಆ ಸಂಸ್ಕಾರವು, ನ ವರ್ತತೇ= ಇರುವುದಿಲ್ಲ, ತತ್ಸಂಸ್ಕಾರಾತ್= ಆ ಸಂಸ್ಕಾರದಿಂದ, ಘಟಾವಚ್ಛಿನ್ನಚೈತನ್ಯೇ= ಘಟಾವಚ್ಛಿನ್ನ ಚೈತನ್ಯದಲ್ಲಿ, ಭ್ರಮಃ= ಭ್ರಮವು, ಕಥಂ= ಹೇಗೆ ಉಂಟಾಗುತ್ತದೆ.

**ಅನುವಾದ** - ಸಂಸ್ಕಾರಾಧಾರವಾದ ಮನಸ್ಸು ಇಲ್ಲದಿರುವುದರಿಂದಲೂ ಸಂಸ್ಕಾರವು ಇಲ್ಲ. ಆದ್ದರಿಂದ ಘಟಾವಚ್ಛಿನ್ನ ಚೈತನ್ಯದಲ್ಲಿ ಆ ಸಂಸ್ಕಾರದಿಂದ ಹೇಗೆ ಭ್ರಾಂತಿಯು ಉಂಟಾಗುತ್ತದೆ?

**ಭಾವವಿಲಾಸಿನೀ**– ಪ್ರಕಾರಾಂತರೇಣಾಪಿ ಪ್ರಧಾನಸ್ಮರಣಾಸಂಭವಮುಪಪಾದಯತಿ ॥ **ಸಂಸ್ಕಾರೇತಿ** ॥ ಸಃ ಸಂಸ್ಕಾರಃ । ತತ್ ತಸ್ಮಾತ್ । ಸಂಸ್ಕಾರಾಧಾರತ್ವಂ ಮನಸ ಏವೇತಿ ಸಂಮತಮ್। ಘಟಾವಚ್ಛಿನ್ನಚೈತನ್ಯಸ್ಯ ಚ ದೇಹಾಭಾವಾನ್ನ ಮನೋಽಪ್ಯಸ್ತಿ । ತದೇವ ಚ ಪರಮತೇ ಭ್ರಮಃ । ಅತಃ ಕಥಮಸೌ ಭ್ರಮಃ । ಸ್ಮರ್ಯಮಾಣಾರೋಪ ಇತಿ ಭಾವಃ ॥ ೫೯೨ ॥

**ವಿವರಣೆ** - ಪ್ರಕಾರಾಂತರದಿಂದ ಪ್ರಧಾನದ ಸ್ಮರಣೆಯು ಕೂಡುವುದಿಲ್ಲ ಎಂಬುದನ್ನು ಉಪಪಾದನೆ ಮಾಡುತ್ತಾರೆ. ಮನಸ್ಸೇ ಸಂಸ್ಕಾರಕ್ಕೆ ಆಧಾರವಾದುದು ಎಂದು ಎಲ್ಲರಿಗೂ ಸಮ್ಮತವಾದುದು. ಪೂರ್ವಕಲ್ಪದ ಮನಸ್ಸು ನಷ್ಟವಾಗಿರುವುದರಿಂದ ಆ ಮನಸ್ಸಿನಲ್ಲಿರುವ

ಸಂಸ್ಕಾರವು ನಷ್ಟವಾಗಿದೆ. ಇನ್ನು ಘಟಾವಚ್ಛಿನ್ನ ಚೈತನ್ಯಕ್ಕೆ ದೇಹವೇ ಇಲ್ಲದಿರುವುದರಿಂದ ಮನಸ್ಸು ಇಲ್ಲ. ಆದ್ದರಿಂದ ಅಲ್ಲಿಯೂ ಸಂಸ್ಕಾರವಿಲ್ಲ. ಹೀಗಿರುವಾಗ ಸಂಸ್ಕಾರದ ಬಲದಿಂದ ಸ್ಮರ್ಯಮಾಣಾರೋಪವನ್ನು ಕೂಡಿಸಲು ಸಾಧ್ಯವಿಲ್ಲ ಎಂದು ಅಭಿಪ್ರಾಯ.

**ಜ್ಞಾನೋಪಾದಾನಮನಸಃ ಸಂಸ್ಕಾರಾಧಾರತೋಚಿತಾ ।**
**ಅನ್ಯತ್ರಾನುಭವೋನ್ಯತ್ರ ಸಂಸ್ಕಾರ ಇತಿ ಕೋ ವದೇತ್ ॥ ೫೯೩ ॥**

**ಅರ್ಥ-** ಜ್ಞಾನೋಪಾದಾನಮನಸಃ= ಜ್ಞಾನಕ್ಕೆ ಉಪಾದಾನವಾದ ಮನಸ್ಸಿಗೆ, ಸಂಸ್ಕಾರಾಧಾರತಾ= ಸಂಸ್ಕಾರಾಶ್ರಯತ್ವವು, ಉಚಿತಾ= ಯೋಗ್ಯವಾಗಿರುತ್ತದೆ, ಅನುಭವಃ ಅನ್ಯತ್ರ= ಅನುಭವವು ಬೇರೆ ಕಡೆಯಲ್ಲಿ, ಸಂಸ್ಕಾರಃ ಅನ್ಯತ್ರ= ಸಂಸ್ಕಾರವು ಬೇರೆ ಕಡೆಯಲ್ಲಿ, ಇತಿ= ಎಂದು, ಕೋ ವದೇತ್= ಯಾವನು ಹೇಳುತ್ತಾನೆ.

**ಅನುವಾದ -** **ಜ್ಞಾನೋಪಾದಾನವಾದ ಮನಸ್ಸಿಗೆ ಸಂಸ್ಕಾರಾಧಾರತ್ವವನ್ನು ಹೇಳುವುದು ಯೋಗ್ಯವಾದುದು. ಅನುಭವ ಒಂದು ಕಡೆ, ಸಂಸ್ಕಾರವು ಇನ್ನೊಂದು ಕಡೆ ಎಂದು ಯಾವನು ಹೇಳುತ್ತಾನೆ?**

**ಭಾವವಿಲಾಸಿನೀ– ನನು ಮನಸ ಏವ ಸಂಸ್ಕಾರಾಧಾರತ್ವಂ ಕುತ ಇತ್ಯತ ಆಹ –ಜ್ಞಾನೇತಿ ॥ ೫೯೩॥**

**ವಿವರಣೆ -** ಮನಸ್ಸಿಗೆ ಏಕೆ ಸಂಸ್ಕಾರಾಶ್ರಯತ್ವವನ್ನು ಅಂಗೀಕರಿಸಬೇಕೆಂದು ಇಲ್ಲಿ ಹೇಳುತ್ತಾರೆ. ಜ್ಞಾನವು ಮನೋವೃತ್ತಿರೂಪವಾದುದು. ಜ್ಞಾನಕ್ಕೂ ಮನಸ್ಸಿಗೂ ಉಪಾದಾನ-ಉಪಾದೇಯ ಭಾವವಿರುವುದರಿಂದ ಜ್ಞಾನವು ಮನಸ್ಸಿನಲ್ಲಿಯೇ ಇರುತ್ತದೆ. ಸಂಸ್ಕಾರವು ಅನುಭವ ಜನ್ಯವಾದುದು. ಕಾರ್ಯಕಾರಣಗಳಿಗೆ ಸಾಮಾನಾಧಿಕರಣ್ಯವಿರಬೇಕು. ಆದ್ದರಿಂದ ಅನುಭವಕ್ಕೆ ಆಧಾರವಾದ ಮನಸ್ಸೇ ಸಂಸ್ಕಾರಕ್ಕೂ ಆಧಾರವಾಗುತ್ತದೆ ಎಂದು ಅಭಿಪ್ರಾಯ.

**ತತ್ಸಂಸ್ಕಾರಾದ್ಯಯೋಗೇನ ಸಂಸ್ಕಾರಸ್ಯ ತಿರಸ್ಕೃತೇಃ ।**
**ದೋಷಸ್ಯ ದೂಷಣಾಚ್ಚೈವ ಸತ್ಯಮಾಸೀಜ್ಜಗತ್ತ್ರಯಂ ॥ ೫೯೪ ॥**

**ಅರ್ಥ-** ತತ್= ಹಿಂದೆ ಹೇಳಿದ ನ್ಯಾಯಗಳಿಂದ, ಸಂಸ್ಕಾರಾದ್ಯಯೋಗೇನ= ಸಂಸ್ಕಾರವು ಕೂಡುವುದಿಲ್ಲವಾದ್ದರಿಂದ, ಸಂಸ್ಕಾರಸ್ಯ= ಸಂಸ್ಕಾರವನ್ನು, ತಿರಸ್ಕೃತೇಃ= ನಿರಾಕರಣೆ ಮಾಡಿರುವುದರಿಂದ, ದೋಷಸ್ಯ= ದೋಷ, ಅಧಿಷ್ಠಾನ ಮತ್ತು ಪ್ರಧಾನಗಳನ್ನು, ದೂಷಣಾತ್ ಚ= ನಿರಾಕರಣೆ ಮಾಡಿರುವುದರಿಂದಲೂ ಸಹ, ಜಗತ್ತ್ರಯಂ= ಅತೀತ, ವರ್ತಮಾನ ಮತ್ತು ಭವಿಷ್ಯತ್ ಜಗತ್ತುಗಳು, ಸತ್ಯಮೇವ ಆಸೀತ್= ಸತ್ಯವೇ ಆಗುತ್ತದೆ.

**ಅನುವಾದ -** **ಹಿಂದೆ ಹೇಳಿದ ನ್ಯಾಯಗಳಿಂದ ಸಂಸ್ಕಾರವು ಕೂಡುವುದಿಲ್ಲವಾದ್ದರಿಂದ, ಸಂಸ್ಕಾರವನ್ನು ನಿರಾಕರಣೆ ಮಾಡಿದ್ದಾಯಿತು. ಮತ್ತು ದೋಷ, ಅಧಿಷ್ಠಾನ ಮತ್ತು**

ಪ್ರಧಾನಗಳನ್ನು ನಿರಾಕರಣೆ ಮಾಡಿರುವುದರಿಂದಲೂ ಸಹ ಜಗತ್ತ್ರಯವು ಸತ್ಯವೇ ಎಂದು ಸಿದ್ಧವಾಗುತ್ತದೆ.

**ಭಾವವಿಲಾಸಿನೀ–** ಉಪಸಂಹರತಿ ॥ **ತದಿತಿ** ॥ ತತ್ ತಸ್ಮಾತ್ ಉಕ್ತನ್ಯಾಯಾತ್ ಸಂಸ್ಕಾರಸ್ಯ ತಿರಸ್ಕೃತೇ ನಿರಾಕರಣಾತ್ । ದೋಷಸ್ಯ ದೂಷಣಾತ್ । ಚ ಶಬ್ದೇನಾಧಿಷ್ಠಾನಖಂಡನಾಚ್ಚ । ಸಂಸ್ಕಾರಾದ್ಯಯೋಗೇನ ಪ್ರಧಾನ ಸಂಸ್ಕಾರಾಧಿಷ್ಠಾನದೋಷಾಣಾಮಯೋಗೇನ ಜಗತ್ತ್ರಯಂ ಸತ್ಯಮಾಸೀದಿತಿ ಯೋಜನಾ॥೫೪॥

ವಿಮತೋಽಯಂ ಪ್ರಪಂಚಸ್ತದನಾರೋಪಿತ ಏವ ಹಿ ।
ಆರೋಪಹೇತುಶೂನ್ಯತ್ವಾದ್ ಯಥಾ ಬ್ರಹ್ಮೇತಿ ಸಾಧ್ಯತೇ ॥ ೫೫ ॥

**ಅರ್ಥ-** ತತ್= ಆ ಕಾರಣದಿಂದ, ವಿಮತಃ ಅಯಂ ಪ್ರಪಂಚಃ= ವಿಪ್ರತಿಪನ್ನವಾದ ಈ ಪ್ರಪಂಚವು, ಅನಾರೋಪಿತ ಏವ= ಅನಾರೋಪಿತವೇ ಆಗಿದೆ, ಆರೋಪಹೇತು-ಶೂನ್ಯತ್ವಾತ್= ಆರೋಪ ಕಾರಣಗಳು ಇಲ್ಲದಿರುವುದರಿಂದ, ಯಥಾ ಬ್ರಹ್ಮ= ಬ್ರಹ್ಮನಂತೆ, ಇತಿ= ಎಂದು, ಸಾಧ್ಯತೇ= ಅನಾರೋಪಿತತ್ವವು ಸಾಧಿಸಲ್ಪಡುತ್ತದೆ.

**ಅನುವಾದ** - 'ವಿಮತಃ ಅಯಂ ಪ್ರಪಂಚಃ ಅನಾರೋಪಿತಃ ಆರೋಪ ಹೇತುಶೂನ್ಯತ್ವಾತ್ ಯಥಾ ಬ್ರಹ್ಮ' ಎಂಬ ಅನುಮಾನದಿಂದ ಜಗತ್ತಿಗೆ ಅನಾರೋಪಿತತ್ವವು ಸಾಧಿಸಲ್ಪಡುತ್ತದೆ.

**ಭಾವವಿಲಾಸಿನೀ–** ಏವಂಚೇದಮನುಮಾನಂ ಸಿದ್ಧಮಿತ್ಯಾಹ– **ವಿಮತ ಇತಿ** ॥ ತತ್ ತಸ್ಮಾತ್ ಉಕ್ತನ್ಯಾಯೇನೋಪಪಾದಿತಾದಾರೋಪಹೇತುಶೂನ್ಯತ್ವಾತ್ ಇತಿ ಸಂಬಂಧಃ ॥ ೫೫ ॥

ದೃಷ್ಟಾನುಸಾರವೈರೂಪ್ಯೇ ನಷ್ಟಾರೋಪಕಥಾ ವೃಥಾ ।
ಇತ್ಯಾರೋಪಲತಾಮೂಲಂ ಸಿಕ್ತಮುಷ್ಣೇನ ವಾರಿಣಾ ॥ ೫೬ ॥

**ಅರ್ಥ-** ದೃಷ್ಟಾನುಸಾರವೈರೂಪ್ಯೇ= ಲೋಕದೃಷ್ಟವಾದ ಆರೋಪದ ಕಾರಣಗಳಿಲ್ಲದಿದ್ದರೂ, ಆರೋಪವಿರಲಿ ಎಂದು ಹೇಳುವುದಾದರೆ, ನಷ್ಟಾರೋಪಕಥಾ= ನಷ್ಟವಾದ ಆರೋಪದ ಕಥೆಯು, ವೃಥಾ= ವ್ಯರ್ಥವಾದುದು, ಇತಿ= ಎಂದು, ಆರೋಪಲತಾಮೂಲಂ= ಆರೋಪ ಲತೆಯ ಬೇರೇ, ಉಷ್ಣೇನ ವಾರಿಣಾ= ಬಿಸಿ ನೀರಿನಿಂದ, ಸಿಕ್ತಂ= ತೋಯಿಸಲ್ಪಡುತ್ತದೆ.

**ಅನುವಾದ** - ದೃಷ್ಟವಾದ ಆರೋಪಗಳ ವೈರೂಪ್ಯವಿದ್ದರೂ ಏಕೆ ಆರೋಪವಿರಬಾರದು ಎಂಬ ಕಥೆಯು ನಷ್ಟವಾದ ಆರೋಪದ ಕಥೆಯಾದುದರಿಂದ ವ್ಯರ್ಥವಾದುದೇ ಸರಿ. ಹೀಗೆ ಆರೋಪಲತೆಯ ಬೇರುಗಳಿಗೆ ಬಿಸಿನೀರನ್ನು ಎರೆದಂತಾಗಿದೆ.

**ಭಾವವಿಲಾಸಿನೀ–** ಲೋಕಸಿದ್ಧಾರೋಪಕಾರಣಾಭಾವೇಪ್ಯಯಮಾರೋಪೋ ಭವತು ಕೋ ದೋಷ ಇತ್ಯತ ಆಹ – **ದೃಷ್ಟೇತಿ** ॥ ಆರೋಪಕಥಾ ಆರೋಪಸ್ಯ ಕಥಾ । ಜಲ್ಪಕಥಾ-ದಾವಾರೋಪಸಾಧನಾಯಾನುಮಾನನಿರೂಪಣಮಿತ್ಯರ್ಥಃ । ದೃಷ್ಟಾನುಸಾರಂ ತ್ಯಜತಃ ಸ್ವಾನುಮಾನೇಽಪಿ ಶುಕ್ತಿರೂಪ್ಯವದಿತ್ಯಾದಿ ದೃಷ್ಟಾಂತಸ್ಯಾಪಿ ವಕ್ತುಮಶಕ್ಯತ್ವಾತ್ ಕಥಾಯಾಮನಧಿಕಾರ ಏವ ಸ್ಯಾದಿತಿ ಭಾವಃ । ಇತಿ ಪೂರ್ವೋಕ್ತಪ್ರಕಾರೇಣ ॥ ೫೯೬ ॥

**ವಿವರಣೆ** - ದೃಷ್ಟಾನುಸಾರ ವೈರೂಪ್ಯವೆಂದರೆ ಆರೋಪಕ್ಕೆ ದೃಷ್ಟವಾದ ಕಾರಣಗಳು ಇಲ್ಲದಿದ್ದರೂ ಎಂದು ಅರ್ಥ. ಕಾರಣವಿಲ್ಲದಿದ್ದರೂ ಕಾರ್ಯವನ್ನು ಸಾಧಿಸುತ್ತೇವೆ ಎಂಬುದು ಕಾರಣವಿಲ್ಲದಿದುರಿಂದಲೇ ನಷ್ಟವಾದ ಕಾರ್ಯದ ಮಾತಾದ್ದರಿಂದ ಅದು ವ್ಯರ್ಥವಾದುದು. ಹೀಗೆ ಆರೋಪಲತೆಯ ಬೇರಿಗೆ ಬಿಸಿ ನೀರೆರೆದಂತಾಗಿದೆ. ದೃಷ್ಟಾನುಸಾರ ವೈರೂಪ್ಯವನ್ನು ಒಪ್ಪುವವನು ಶುಕ್ತಿರೂಪ್ಯಾದಿ ದೃಷ್ಟಾಂತವನ್ನೂ ಮಿಥ್ಯಾತ್ವದ ಸಾಧನೆಗಾಗಿ ಹೇಳಲು ಸಾಧ್ಯವಿಲ್ಲವಾದ್ದರಿಂದ ಅವನು ಕಥೆಯಲ್ಲಿ ಅಧಿಕಾರಿಯೇ ಆಗುವುದಿಲ್ಲ ಎಂದು ಅಭಿಪ್ರಾಯ.

ಆರೋಪಯೋಗ್ಯಾಧಿಷ್ಠಾನಶೂನ್ಯತ್ವಾತ್ ಪರಮಾರ್ಥಸತ್ ।
ಬ್ರಹ್ಮವಜ್ಜಗದೇತತ್ ಸ್ಯಾದಿತಿ ಸರ್ವಂ ಸಮಂಜಸಂ ॥ ೫೯೭ ॥

**ಅರ್ಥ-** ಏತದ್ ಜಗತ್= ಈ ಜಗತ್ತು, ಆರೋಪಯೋಗ್ಯಾಧಿಷ್ಠಾನಶೂನ್ಯತ್ವಾತ್= ಆರೋಪಕ್ಕೆ ಯೋಗ್ಯವಾದ ಅಧಿಷ್ಠಾನವಿಲ್ಲದಿರುವುದರಿಂದ, ಬ್ರಹ್ಮವತ್= ಬ್ರಹ್ಮನಂತೆ, ಪರಮಾರ್ಥ ಸತ್= ಪರಮಾರ್ಥ ಸತ್ಯವೇ, ಸ್ಯಾತ್= ಆಗುತ್ತದೆ, ಇತಿ= ಎಂದು, ಸರ್ವಂ= ಎಲ್ಲವೂ, ಸಮಂಜಸಂ= ಸಮಂಜಸವಾಗುತ್ತದೆ.

**ಅನುವಾದ** - 'ವಿಮತಂ ಜಗತ್ ಪರಮಾರ್ಥಸತ್ ಆರೋಪಯೋಗ್ಯ ಅಧಿಷ್ಠಾನ ಶೂನ್ಯತ್ವಾತ್ ಬ್ರಹ್ಮವತ್' ಎಂಬ ಅನುಮಾನದಿಂದ ಜಗತ್ತಿಗೆ ಪಾರಮಾರ್ಥಿಕ ಸತ್ಯತ್ವವು ಸಿದ್ಧವಾಗುವುದರಿಂದ ಎಲ್ಲವೂ ಸಮಂಜಸವಾಗುತ್ತದೆ.

**ಭಾವವಿಲಾಸಿನೀ–** ಆರೋಪಹೇತುಶೂನ್ಯತ್ವಾದಿತ್ಯತ್ರ ಪ್ರಧಾನ ಶೂನ್ಯತ್ವಾದ್ದೋಷ-ಶೂನ್ಯತ್ವಾದಧಿಷ್ಠಾನ ಶೂನ್ಯತ್ವಾದಿತಿ ಹೇತುತ್ರಯಂ ಸೂಚಯಿತುಮ್ ಅಧಿಷ್ಠಾನ ಶೂನ್ಯತ್ವ ಮಾತ್ರೇಣಾಪಿ ಜಗತ್ ಸತ್ಯತಾಂ ಸಾಧಯತಿ ॥ **ಆರೋಪೇತಿ** ॥ ಅಧಿಷ್ಠಾನಶೂನ್ಯತ್ವಸ್ಯಾಸ್ಮಿನ್ನೇವ ಗ್ರಂಥೇ ಸಮರ್ಥಿತತ್ವಾದಸ್ಯೈವಾನುಮಾನಸ್ಯೋದಾಹರಣಮ್ ॥ ೫೯೭ ॥

ದೃಷ್ಟಾನುಸಾರವೈರೂಪ್ಯೇ ಸತ್ಯಂ ಜಗದಭೂನ್ಮಮ ।
ದೃಷ್ಟಾನುಸಾರಸಾರೂಪ್ಯೇ ಸತ್ಯಂ ಜಗದಭೂನ್ಮಮ ॥ ೫೯೮ ॥

**ಅರ್ಥ-** ದೃಷ್ಟಾನುಸಾರವೈರೂಪ್ಯೇ= ದೃಷ್ಟಾನುಸರಣೆ ಇಲ್ಲದಿದ್ದರೂ, ಮಮ= ನನಗೆ, ಜಗತ್= ಜಗತ್ತು, ಸತ್ಯಂ ಅಭೂತ್= ಸತ್ಯವಾಯಿತು, ದೃಷ್ಟಾನುಸಾರಸಾರೂಪ್ಯೇ=

ದೃಷ್ಟವಾದ ಅನುಸರಣೆಯ ಸಾದೃಶ್ಯವಿದ್ದರೂ, ಮಮ= ನನಗೆ, ಜಗತ್= ಜಗತ್ತು, ಸತ್ಯಂ= ಸತ್ಯವಾಯಿತು.

**ಅನುವಾದ** - ದೃಷ್ಟಾನುಸಾರವೈರೂಪ್ಯವಿದ್ದರೂ ನನಗೆ ಜಗತ್ತು ಸತ್ಯವೆಂದು ಸಿದ್ಧವಾಗುತ್ತದೆ. ದೃಷ್ಟಾನುಸಾರಸಾರೂಪ್ಯವಿದ್ದರೂ ನನಗೆ ಜಗತ್ತು ಸತ್ಯವೆಂದು ಸಿದ್ಧವಾಗುತ್ತದೆ.

**ಭಾವವಿಲಾಸಿನೀ**– ಏವಂ ಚೋಭಯತಃ ಪಾಶಾರಜ್ಜುರಪಿ ಪರಸ್ಯ ಗಲಂ ಬದ್ನಾತೀತ್ಯಾಹ – **ದೃಷ್ಟಾನುಸಾರೇತಿ** ॥ ದೃಷ್ಟಾನುಸಾರವೈರೂಪ್ಯೇ ಭ್ರಮಮಾತ್ರೇ ದೃಷ್ಟಕಾರಣ ತ್ರಯವೈಪರೀತ್ಯೇ ಪರೇಣಾಂಗೀಕೃತೇ ಸತ್ಯತ್ವವಾದಿನಾಽಪಿ ಶುಕ್ತಿರಜತಾದೌ ಮಿಥ್ಯಾತ್ವೇನ ಸಹ ದೃಷ್ಟದೃಶ್ಯತ್ವಸ್ಯಾಪಿ ಜಗತಿ ಸತ್ಯತ್ವೇನ ಸಹದರ್ಶನಾಖ್ಯವೈಪರೀತ್ಯಸ್ಯ ವಕ್ತುಂ ಶಕ್ಯತ್ವೇನ ಸತ್ಯಂ ಜಗದಭೂದಿತಿ ಸಂಬಂಧಃ । ದ್ವಿತೀಯ ಪಕ್ಷೇಽಪ್ಯಾರೋಪ್ಯಮಾಣಾಧಿಕಸತ್ತಾಕದೃಷ್ಟ್ಯದೇಹೇಂದ್ರಿಯಗೇಹ-ಭೂಮ್ಯಾದೀನಾಂ ದರ್ಶನೇನ ಜಗದ್ಭ್ರಮೇಽಪಿ ತತ್ ಸಾರೂಪ್ಯಾವಶ್ಯಂಭಾವೇನ ದೇಹ-ಗೇಹಾದಿಜಗತಃ ಸತ್ತ್ವಸಿದ್ಧೇರಿತಿ ಭಾವಃ। ॥ ೩೯೮ ॥

**ವಿವರಣೆ** - ದೃಷ್ಟಾನುಸಾರ ವೈರೂಪ್ಯವಿದ್ದರೂ ಜಗದಾರೋಪವನ್ನು ನೀವು ಕೂಡಿಸುವುದಾದರೆ ವಿಶ್ವಂ ಮಿಥ್ಯಾ ದೃಶ್ಯತ್ವಾತ್ ಶುಕ್ತಿರಜತವತ್ ಎಂಬ ನಿಮ್ಮ ಅನುಮಾನದಲ್ಲಿ ಶುಕ್ತಿ ರಜತದಲ್ಲಿ ದೃಶ್ಯತ್ವ ಮತ್ತು ಮಿಥ್ಯಾತ್ವಗಳಿಗೆ ಸಾಹಚರ್ಯವಿದ್ದರೂ ಜಗತ್ತಿನಲ್ಲಿ ಅದರ ವೈರೂಪ್ಯದಿಂದ ದೃಶ್ಯತ್ವವಿದ್ದರೂ ಸತ್ಯತ್ವವೇ ಇರಲಿ ಎಂದೂ ನಾನೂ ಹೇಳಬಹುದಾದ್ದರಿಂದ ಜಗತ್ತಿಗೆ ಸತ್ಯತ್ವವೇ ಸಿದ್ಧವಾಗುತ್ತದೆ. ದೃಷ್ಟಾನುಸಾರ ಸಾರೂಪ್ಯವನ್ನು ಅಂಗೀಕರಿಸಿದರಂತೂ ಜಗದಾರೋಪದಲ್ಲಿ ಅಧಿಷ್ಠಾನಾದಿಗಳು ಉಪಪನ್ನವಾಗುವುದಿಲ್ಲವಾದ್ದರಿಂದ ಜಗದಾರೋಪವು ಕೂಡುವುದಿಲ್ಲ. ಆದ್ದರಿಂದ ಜಗತ್ತು ಸತ್ಯವೆಂದು ಸಿದ್ಧವಾಗುತ್ತದೆ ಎಂದು ಅಭಿಪ್ರಾಯ.

**ಘಟೋಹಮಿತಿ ನ ಭ್ರಾಂತಿರನಾನುಭವಿಕತ್ವತಃ ।**
**ಘಟೋಯಮಿತಿ ಚೇದ್ ಭ್ರಾಂತಿಃ ಸ್ವಸ್ಮಿನ್ನಾಸೌ ಘಟಭ್ರಮಃ ॥ ೩೯೯ ॥**

**ಅರ್ಥ**- ಅನಾನುಭವಿಕತ್ವತಃ= ಅನುಭವಕ್ಕೆ ವಿರುದ್ಧವಾದುದರಿಂದ, ಘಟೋಹಮಿತಿ= ನಾನು ಘಟ ಎಂದು, ನ ಭ್ರಾಂತಿಃ= ಭ್ರಾಂತಿಯಿಲ್ಲ, ಭ್ರಾಂತಿಃ= ಭ್ರಾಂತಿಯು, ಘಟೋಯಮಿತಿ ಚೇತ್= ಅಯಂ ಘಟಃ ಎಂಬ ಆಕಾರವುಳ್ಳದ್ದಾದರೆ, ಅಸೌ= ಅದು, ಸ್ವಸ್ಮಿನ್= ತನ್ನಲ್ಲಿ, ನ ಘಟಭ್ರಮಃ= ಘಟಭ್ರಮವಲ್ಲ.

**ಅನುವಾದ** - ಅನುಭವ ವಿರುದ್ಧವಾದ್ದರಿಂದ ಅಹಂಘಟಃ ಎಂಬುದು ಭ್ರಾಂತಿಯ ಆಕಾರವಲ್ಲ. ಅಯಂ ಘಟಃ ಎಂಬುದು ಭ್ರಾಂತಿಯ ಆಕಾರವಾದರೆ ಅದು ತನ್ನಲ್ಲಿ (ಚೈತನ್ಯದಲ್ಲಿ) ಘಟಭ್ರಮವಲ್ಲ.

**ಭಾವವಿಲಾಸಿನೀ–** ಅಸೌ ಅಯಮಿತ್ಯಾಕಾರಕಃ । ಸ್ವಸ್ಮಿನ್ನ ಸ್ವಸ್ಮಿನ್ನಯಮಿತ್ಯುಲ್ಲೇಖ-ಸ್ಯಾಪ್ಯನನುಭವಿಕತ್ವಾದಿತ್ಯರ್ಥಃ । ಉಭಯತ್ರಾಪ್ಯನನುಭವಿಕತ್ವಸ್ಯೈವ ದೂಷಣತ್ವಾತ್ ಇಯಮಪ್ಯುಭಯತಃ ಪಾಶಾರಜ್ಜುಃ । ತದೇವ ದರ್ಶಯತಿ ॥ **ಸ್ವಸ್ಯೇತಿ** ॥ ಪ್ರಮೇಯಸ್ಯ ಪ್ರಾಗುಪಪಾದಿತತ್ವೇಽಪಿ ಸಂಗೃಹ್ಯ ಕಥನಾರ್ಥಂ ಕಿಂಚಿತ್ ವಿಶೇಷ ಕಥನಾರ್ಥಂ ಚ ಪುನರಾರಂಭಃ। ಸಾ ಅಯಂ ಘಟ ಇತಿ ಪ್ರತೀತಿಃ । ಅನ್ಯತ್ರ ಚೈತನ್ಯಾದನ್ಯತ್ರ ದೇಶಕಾಲಾದೌ । ತದ್ಭೇದಸ್ಯ ದೇಶಕಾಲಾದಿಭೇದಸ್ಯ। ಐಕ್ಯಾವಿಷಯತ್ವೇಚ ನ ಭ್ರಾಂತಿಃ । ಧರ್ಮ್ಯಾರೋಪಸ್ಯ ಧರ್ಮ್ಯಂತರಾಭೇದವಿಷಯತ್ವನಿಯಮಾದಿತಿ ಭಾವಃ ॥ ೫೯೯ ॥

**ವಿವರಣೆ -** ಜಗದ್ಭ್ರಾಂತಿಯ ಆಕಾರವು ಘಟೋಹಂ ಎಂದು ಇರುತ್ತದೆಯೇ, ಅಥವಾ ಅಯಂ ಘಟಃ ಎಂದು ಇರುತ್ತದೆಯೇ ಎಂದು ಪ್ರಶ್ನೆ. ಅಹಂ ಘಟಃ ಎನ್ನುವ ಆಕಾರವು ಅನುಭವ ವಿರುದ್ಧವಾದುದು, ಅಯಂ ಘಟಃ ಎಂಬ ಆಕಾರವನ್ನು ಅಂಗೀಕರಿಸಿದರೆ ಅದು ತನ್ನಲ್ಲಿ ಘಟಭ್ರಮವಲ್ಲ. ಅದ್ವೈತಿಗಳು ಚೇತನದಲ್ಲಿಯೇ ಘಟಭ್ರಮವನ್ನು ಅಂಗೀಕರಿಸಬೇಕು. ಚೇತನಕ್ಕೆ ಅಹಂ ಎಂದು ಉಲ್ಲೇಖವಿರಬೇಕೇ ಹೊರತು, ಅಯಂ ಎಂದು ಉಲ್ಲೇಖವಿರುವುದಿಲ್ಲ ಎಂದು ಅಭಿಪ್ರಾಯ.

**ಸ್ವಸ್ಯಾಹಂತ್ವೇನ ಭಾಸ್ಯತ್ವನಿಯಮಾದಾವಯೋರ್ಮತೇ ।**
**ಅನ್ಯತ್ರ ನೈಕ್ಯಭ್ರಾಂತಿಃ ಸಾ ತದ್ಭೇದಸ್ಯ ಸ್ಫುಟತ್ವತಃ ॥ ೬೦೦ ॥**

**ಅರ್ಥ-** ಆವಯೋರ್ಮತೇ= ನಮ್ಮಿಬ್ಬರ ಮತದಲ್ಲಿ, ಸ್ವಸ್ಯ= ಜೀವನಾದ ತನಗೆ, ಅಹಂತ್ವೇನ= ಅಹಂ ಎಂಬುದಾಗಿ, ಭಾಸ್ಯತ್ವನಿಯಮಾತ್= ಭಾನ ನಿಯಮವಿರುವುದರಿಂದ ಅಯಂ ಘಟಃ ಎಂಬುದು ತನ್ನಲ್ಲಿ ಭ್ರಾಂತಿಯಲ್ಲ, ಅನ್ಯತ್ರ= ಉಳಿದ ದೇಶಕಾಲಗಳಲ್ಲಿ, ತದ್ಭೇದಸ್ಯ= ದೇಶಕಾಲಗಳಿಗೂ ಮತ್ತು ಘಟಕ್ಕೂ ಇರುವ ಭೇದವು, ಸ್ಫುಟತ್ವತಃ= ಸ್ಪಷ್ಟವಾಗಿ ತೋರುವುದರಿಂದ, ಸಾ= ಅದು, ಐಕ್ಯಭ್ರಾಂತಿಃ ನ= ಐಕ್ಯಭ್ರಾಂತಿಯಾಗುವುದಿಲ್ಲ.

**ಅನುವಾದ - ನಮ್ಮಿಬ್ಬರ ಮತದಲ್ಲಿ ಜೀವನು ಅಹಂತ್ವೇನ ತೋರಬೇಕೆಂಬ ನಿಯಮವಿದೆ. ದೇಶಕಾಲಾದಿಗಳು ಘಟದಿಂದ ಭಿನ್ನವಾಗಿಯೇ ತೋರುವುದರಿಂದ ದೇಶಕಾಲಗಳಲ್ಲಿ ಘಟದ ಐಕ್ಯಭ್ರಾಂತಿಯು ಉಂಟಾಗುವುದಿಲ್ಲ.**

**ವಿವರಣೆ -** ಅಯಂ ಘಟಃ ಎಂಬುದು ತನ್ನಲ್ಲಿ ಘಟದ ಭ್ರಾಂತಿಯಾಗಲಾರದು. ಏಕೆಂದರೆ ಜೀವನನ್ನು ಅಹಂ ಎಂದು ಉಲ್ಲೇಖ ಮಾಡಬೇಕೇ ಹೊರತು, ಅಯಂ ಎಂದು ಉಲ್ಲೇಖ ಮಾಡಲು ಸಾಧ್ಯವಿಲ್ಲ. ಇನ್ನು ಅಯಂ ಘಟಃ ಎಂಬುದು ದೇಶಕಾಲಗಳಲ್ಲಿ ಘಟದ ಭ್ರಾಂತಿ ಎಂದು ಹೇಳಬೇಕು. ಆದರೆ ಅಯಂ ಘಟಃ ಎಂಬಲ್ಲಿ ಇದಂ ಪದಾರ್ಥಕ್ಕೂ ಮತ್ತು ಘಟಕ್ಕೂ ಅಭೇದವೇ ತೋರುತ್ತದೆ. ದೇಶಕಾಲಗಳಿಗೂ ಮತ್ತು ಘಟಕ್ಕೂ ಸ್ಪಷ್ಟವಾಗಿ ಭೇದವೇ ತೋರುವುದರಿಂದ, ದೇಶಕಾಲಗಳಲ್ಲಿ ಇಂತಹ ಘಟದ ಅಭೇದ ಭ್ರಾಂತಿಯು

ಉಂಟಾಗಲು ಸಾಧ್ಯವಿಲ್ಲ. ಆದ್ದರಿಂದ ಎರಡು ರೀತಿಯಲ್ಲಿಯೂ ಇದು ಘಟದ ಭ್ರಾಂತಿಯಾಗಲು ಸಾಧ್ಯವಿಲ್ಲ.

ಅನ್ಯತ್ರ ಸತ್ತ್ವಮರ್ಥಶ್ಚೇನ್ನಭ್ರಾಂತಿಃ ಸಾ ಪ್ರಮೈವ ಹಿ ।
ಅಭ್ರಾಂತಿಸಿದ್ಧಾ ಸತ್ತಾ ಸ್ಯಾತ್ ಸ್ವಸ್ಮಿನ್ನೇವ ಘಟಸ್ಯ ಹಿ ॥ ೬೦೧ ॥

**ಅರ್ಥ**- ಅನ್ಯತ್ರ= ದೇಶಕಾಲಗಳಲ್ಲಿ, ಸತ್ತ್ವಂ= ವಿದ್ಯಮಾನತ್ವವು, ಅರ್ಥಶ್ಚೇತ್= ಅಯಂ ಎಂಬಲ್ಲಿ ಅರ್ಥವಾಗುವುದಾದರೆ, ಸಾ= ಆ ಪ್ರತೀತಿಯು, ಪ್ರಮೈವ ಹಿ= ಪ್ರಮೆಯೇ ಆಗುತ್ತದಷ್ಟೇ, ನ ಭ್ರಾಂತಿಃ= ಭ್ರಾಂತಿಯಾಗುವುದಿಲ್ಲ, ಘಟಸ್ಯ= ಘಟಕ್ಕೆ, ಸ್ವಸ್ಮಿನ್= ತನ್ನಲ್ಲಿಯೇ ಎಂದರೆ ಅಧಿಷ್ಠಾನ ಚೈತನ್ಯದಲ್ಲಿಯೇ, ಅಭ್ರಾಂತಿಸಿದ್ಧಃ= ಭ್ರಾಂತಿಸಿದ್ಧವಲ್ಲದ ಎಂದರೆ ಪ್ರಮೆಯಿಂದಲೇ ಸಿದ್ಧವಾದ, ಸತ್ತಾ= ಸತ್ತ್ವವೇ, ಸ್ಯಾತ್ ಹಿ= ಉಂಟಾಗುವುದಷ್ಟೇ.

**ಅನುವಾದ** - ಅಯಂ ಎಂಬಲ್ಲಿ ಇದಂ ಶಬ್ದಕ್ಕೆ ಅನ್ಯದೇಶಕಾಲಗಳಲ್ಲಿ ಸತ್ತ್ವವೇ ಅರ್ಥವಾದರೆ ಆಗ ಆ ಪ್ರತೀತಿಯು ಪ್ರಮೆಯೇ ಆಗುತ್ತದೆ, ಭ್ರಾಂತಿಯಾಗುವುದಿಲ್ಲ. ಆಗ ಘಟಕ್ಕೆ ಚೈತನ್ಯದಲ್ಲಿ ಅಭ್ರಾಂತಿ ಸಿದ್ಧವಾದ ಸತ್ತ್ವವೇ ಉಂಟಾಗುತ್ತದೆ.

**ಭಾವವಿಲಾಸಿನೀ**– ಅನ್ಯತ್ರ ದೇಶಕಾಲಾದೌ । ಸತ್ತ್ವಮೇವಾರ್ಥಃ ಪ್ರತೀತೇರ್ವಿಷಯಃ । ಅಭೇದೋಲ್ಲೇಖಿತ್ವಂ ಮಾऽಸ್ತ್ವಿತಿ ಭಾವಃ । ಮಮ ಮತೇ ಅಧಿಷ್ಠಾನಾದನ್ಯತ್ರ ಸತ್ತ್ವಂ ನಾಸ್ತ್ಯೇವಾತಃ ಸೋऽಪಿ ಭ್ರಮ ಏವ ಇತ್ಯತ ಆಹ – **ಅಭ್ರಾಂತೀತಿ** ॥ ಸ್ವಸ್ಮಿನ್ನಧಿಷ್ಠಾನಚೈತನ್ಯೇ । ಅಸ್ತಿ ತಾವದಧಿಷ್ಠಾನ ಚೈತನ್ಯೇ ಘಟಃ । ತಸ್ಯ ಚೋಕ್ತ ವಿಧಯಾ ತ್ರೇಧಾऽಪಿ ಭ್ರಾಂತ್ಯಯೋಗೇನಾ-ಭ್ರಾಂತಿಸಿದ್ಧ ಏವ ಸ ಘಟೋऽಭೂದಿತಿ ಭಾವಃ ॥ ೬೦೧ ॥

**ವಿವರಣೆ** - ಅಯಂ ಎಂಬಲ್ಲಿ ಘಟದಲ್ಲಿ ದೇಶಕಾಲದ ಅಭೇದದ ಉಲ್ಲೇಖವು ಬೇಡ. ದೇಶಕಾಲಗಳಲ್ಲಿ ಸತ್ತ್ವವೇ ಅದರ ಅರ್ಥ. ನನ್ನ ಮತದಲ್ಲಿ ಅಧಿಷ್ಠಾನವನ್ನು ಬಿಟ್ಟು ಬೇರೆ ಎಲ್ಲಿಯೂ ಘಟವಿಲ್ಲವಾದ್ದರಿಂದ ದೇಶಕಾಲಗಳಲ್ಲಿ ಘಟದ ಸತ್ತ್ವಜ್ಞಾನವು ಭ್ರಮವೇ ಆಗುತ್ತದೆ ಎಂಬ ಶಂಕೆಗೆ ಇಲ್ಲಿ ಉತ್ತರವನ್ನು ಹೇಳುತ್ತಾರೆ. ಅಧಿಷ್ಠಾನ ಚೈತನ್ಯದಲ್ಲಿ ಘಟವಿದೆ. ಅಯಂ ಘಟಃ ಎಂದು ಉಂಟಾಗುವ ಘಟದ ಜ್ಞಾನವು ಹಿಂದೆ ಹೇಳಿದ ಮೂರು ರೀತಿಯಲ್ಲಿಯೂ ಭ್ರಾಂತಿಯಾಗಲು ಸಾಧ್ಯವಿಲ್ಲ. ಆದ್ದರಿಂದ ಘಟವು ಅಭ್ರಾಂತಿಸಿದ್ಧವಾದ್ದರಿಂದ ಸತ್ಯವೆಂದೇ ಸಿದ್ಧವಾಗುತ್ತದೆ ಎಂದು ಅಭಿಪ್ರಾಯ.

ಅಹಮರ್ಥೇ ಹ್ಯಧಿಷ್ಠಾನೇ ಯತೋ ನಾಯಮಿತಿ ಭ್ರಮಃ ।
ಅಯಂ ಘಟ ಇತಿ ಭ್ರಾಂತಿಃ ಕಥಂ ತಾಮುಲ್ಲಿಖೇತ್ ತತಃ ॥ ೬೦೨ ॥

**ಘಟೋऽಯಮಿತಿ ವೃತ್ತಿಶ್ಚೇದ್ ದೃಶ್ಯಾಧ್ಯಾಸೋ ಗತೋ ದೃಶಿ ।**
**ನೀರೂಪಬ್ರಹ್ಮಣಶ್ಚಕ್ಷುರ್ವೃತ್ತೌ ಭಾನವಿರೋಧತಃ ॥ ೬೦೩ ॥**

**ಅಧಿಷ್ಠಾನಬ್ರಹ್ಮ ಘಟಭ್ರಮರೂಪಾ ನ ಸಾऽಪ್ಯಭೂತ್ ।**
**ಘಟಾವಚ್ಛಿನ್ನಮಪ್ಯಭ್ರಂ ಚಕ್ಷುಷಾ ನ ಹಿ ದೃಶ್ಯತೇ ॥ ೬೦೪ ॥**

**ಅರ್ಥ-** ಅಧಿಷ್ಠಾನೇ = ಅಧಿಷ್ಠಾನವಾದ, ಅಹಮರ್ಥೇ = ಅಹಮರ್ಥದಲ್ಲಿ, ಯತಃ = ಯಾವ ಕಾರಣದಿಂದ, ಅಯಂ ಇತಿ = ಅಯಂ ಎಂದು, ನಭ್ರಮಃ ಹಿ = ಭ್ರಮೆಯು ಇಲ್ಲದಿರುವುದರಿಂದ, ಅಯಂ ಘಟಃ ಇತಿಃ ಭ್ರಾಂತಿಃ = ಅಯಂ ಘಟಃ ಎಂಬ ಭ್ರಾಂತಿಯು, ಕಥಂ = ಹೇಗೆ, ತಾಂ = ಆ ಚೈತನ್ಯವನ್ನು, ಉಲ್ಲಿಖೇತ್ = ಉಲ್ಲೇಖಿಸುತ್ತದೆ?

ಘಟೋಽಯಂ ಇತಿ = ಅಯಂ ಘಟಃ ಎಂಬುದು, ವೃತ್ತಿಶ್ಚೇತ್ = ವೃತ್ತಿಯೆಂದು ಅಂಗೀಕರಿಸಿದರೆ, ನೀರೂಪಬ್ರಹ್ಮಣಃ = ರೂಪರಹಿತನಾದ ಬ್ರಹ್ಮನಿಗೆ, ಚಕ್ಷುರ್ವೃತ್ತೌ= ಚಾಕ್ಷುಷ ವೃತ್ತಿಯಲ್ಲಿ, ಭಾನ ವಿರೋಧತಃ = ಭಾನವು ಕೂಡದೇ ಇರುವುದರಿಂದ, ದೃಶಿ = ಜ್ಞಾನದಲ್ಲಿ, ದೃಶ್ಯಾಧ್ಯಾಸಃ = ದೃಶ್ಯದ ಅಧ್ಯಾಸವು, ಗತಃ = ಹೊರಟುಹೋಯಿತು

ಅಧಿಷ್ಠಾನ ಬ್ರಹ್ಮ = ಅಧಿಷ್ಠಾನ ಬ್ರಹ್ಮಚೈತನ್ಯದ, ಸಾ= ಆ ವೃತ್ತಿಯು, ಘಟಭ್ರಮರೂಪಾಪಿ= ಘಟಭ್ರಮರೂಪವೂ ಸಹ, ನ ಅಭೂತ್ = ಆಗಲಿಲ್ಲ, ಘಟಾವಚ್ಛಿನ್ನೋಽಪಿ = ಘಟಾವಚ್ಛಿನ್ನವಾದ, ಅಭ್ರಮಪಿ = ಆಕಾಶವೂ ಸಹ, ಚಕ್ಷುಷಾ = ಚಕ್ಷುಸ್ಸಿನಿಂದ, ನ ಹಿ ದೃಶ್ಯತೇ= ನೋಡಲ್ಪಡುವುದಿಲ್ಲವಷ್ಟೆ?

**ಅನುವಾದ - ಅಧಿಷ್ಠಾನವಾದ ಅಹಮರ್ಥದಲ್ಲಿ ಯಾವ ಕಾರಣದಿಂದ ಎಂದೂ 'ಅಯಂ' ಎಂಬ ಭ್ರಮವು ಬರುವುದಿಲ್ಲವೋ ಆದ್ದರಿಂದ 'ಅಯಂ ಘಟಃ' ಎಂಬ ಭ್ರಾಂತಿಯು ಹೇಗೆ ಅಧಿಷ್ಠಾನ ಚೈತನ್ಯವನ್ನು ಉಲ್ಲೇಖಿಸುತ್ತದೆ?**

**'ಅಯಂ ಘಟಃ' ಎಂಬುದು ವೃತ್ತಿಯೆಂದು ಅಂಗೀಕರಿಸಿದರೆ, ರೂಪರಹಿತನಾದ ಬ್ರಹ್ಮನು ಚಾಕ್ಷುಷವೃತ್ತಿಯಲ್ಲಿ ಪ್ರಕಾಶಿಸುವುದಿಲ್ಲವಾದ್ದರಿಂದ ಜ್ಞಾನದಲ್ಲಿ ಜ್ಞೇಯದ ಅಧ್ಯಾಸ ಎಂಬ ಮತವು ಹೊರಟುಹೋಯಿತು.**

**'ಅಯಂ ಘಟಃ' ಎಂಬ ಭ್ರಮವು ಅಧಿಷ್ಠಾನಬ್ರಹ್ಮಚೈತನ್ಯದ ಘಟಪ್ರಕಾರಕ ಭ್ರಮವೆಂದೂ ಹೇಳಲು ಬರುವುದಿಲ್ಲ. ಏಕೆಂದರೆ, ರೂಪರಹಿತವಾದ ಆಕಾಶವು ಘಟಾವಚ್ಛಿನ್ನವಾದರೂ ಹೇಗೆ ಚಕ್ಷುಸ್ಸಿನಿಂದ ವಿಷಯೀಕರಿಸಲ್ಪಡುವುದಿಲ್ಲವೋ ಅದರಂತೆ ರೂಪರಹಿತನಾದ ಬ್ರಹ್ಮನೂ ಸಹ ಘಟಾವಚ್ಛಿನ್ನನಾದರೂ ಸಹ ಚಾಕ್ಷುಷಜ್ಞಾನಕ್ಕೆ ವಿಷಯನಾಗುವುದಿಲ್ಲ.**

**ಭಾವವಿಲಾಸಿನೀ**– ಅಸ್ತುವಾ ಧರ್ಮಾಂತರಸ್ಯ ಘಟಾದೇಃಸ್ವನಿಷ್ಠ (ಘಟಾ) ತದಭೇದ ವಿಷಯಿಣೀ ಅಧಿಷ್ಠಾನ ಚೈತನ್ಯರೂಪೈವಾಯಂ ಘಟ ಇತಿ ಭ್ರಾಂತಿಃ । ತಥಾಪಿ ಸ್ವಾನುಲ್ಲೇಖಿತ್ವೇನ ಪರಾಭಿಮತಸ್ಯ ಸ್ವಸ್ಮಿನ್ನಾರೋಪಿತತ್ತ್ವಸ್ಯ ನೇಯಂ ಸಾಧಿಕೇತ್ಯಾಹ – **ಅಹಮರ್ಥ ಇತಿ** ॥ ಅಹಮರ್ಥೇ ಅಹಮಿತ್ಯೇವೋಲ್ಲಿಖ್ಯಮಾನಾರ್ಥೇ । ತತಃ ಅಧಿಷ್ಠಾನ ಅಯಮಿತ್ಯುಲ್ಲೇಖಾಯೋಗಾತ್ । ತಾಮ್ ಅಧಿಷ್ಠಾನಚಿತಮ್ । ಅಧಿಷ್ಠಾನದೃಗ್ರೂಪಭ್ರಾಂತಿಃ ಅಧಿಷ್ಠಾನದೃಗ್‌ರೂಪಾ ಸ್ವಸ್ಮಿನ್ ಘಟ ಭ್ರಾಂತಿಃ। ಅಧಿಷ್ಠಾನ ಉಲ್ಲೇಖಶೂನ್ಯತ್ವಾಚ್ಚ ನಾಯಂ ಚಿತಿ ಘಟಭ್ರಮ ಇತಿ ಭಾವಃ । ಇದಾಮಭಿನವಂ ದೂಷಣಮ್ । ಉತ್ತರಂ ತು ಶ್ಲೋಕದ್ವಯಂ ವ್ಯಾಖ್ಯಾತಪ್ರಾಯಮ್ ॥ ೬೦೨-೬೦೪ ॥

**ವಿವರಣೆ** - 'ಅಯಂ ಘಟಃ' ಎಂಬ ಜ್ಞಾನವು ಚೈತನ್ಯದಲ್ಲಿ ಘಟದ ಆರೋಪವನ್ನು ಸಮರ್ಥನೆಮಾಡುವುದಿಲ್ಲ ಎಂದು ಇಲ್ಲಿ ಉಪಪಾದನೆ ಮಾಡುತ್ತಾರೆ. ಚೈತನ್ಯವು ಯಾವಾಗಲೂ 'ಅಹಂ' ಎಂಬ ಶಬ್ದದಿಂದಲೇ ಉಲ್ಲೇಖ್ಯವಾದುದು. 'ಅಯಂ ಘಟಃ' ಎಂಬ ಭ್ರಮದಲ್ಲಿ 'ಅಯಂ' ಎಂಬ ಶಬ್ದದಿಂದ ಎಂದೂ ಚೈತನ್ಯವು ಉಲ್ಲೇಖ್ಯವಾಗಲು ಸಾಧ್ಯವಿಲ್ಲ. ಅಧಿಷ್ಠಾನಚೈತನ್ಯೋಲ್ಲೇಖವಿಲ್ಲದಿರುವುದರಿಂದ ಅಧಿಷ್ಠಾನವಾದ ಜ್ಞಾನರೂಪವಾದ ಬ್ರಹ್ಮನಲ್ಲಿ ಘಟವು ಆರೋಪಿತ ಎಂದು ಹೇಳಲು ಬರುವುದಿಲ್ಲ. ಇನ್ನು 'ಅಯಂ ಘಟಃ' ಎಂಬುದು ವೃತ್ತಿಯೆಂದು ಅಂಗೀಕರಿಸಿದರೆ, ವೃತ್ತಿಯು ಜಡವಾದ್ದರಿಂದ ಅದೇ ಅಧ್ಯಸ್ತವಾಗಿರುವುದರಿಂದ ಆ ವೃತ್ತಿಯಲ್ಲಿ ಪುನಃ ಘಟವನ್ನು ಆರೋಪಿಸಲು ಸಾಧ್ಯವಿಲ್ಲ. ಆದ್ದರಿಂದ ದೃಕ್‌ನಲ್ಲಿ ದೃಶ್ಯವು ಆರೋಪಿತವಾಗಿದೆ ಎಂಬ ಮತವು ಹೊರಟುಹೋಗುತ್ತದೆ.

ವೃತ್ತ್ಯಾಽಜ್ಞಾನವಿನಾಶೇ ಹಿ ಬ್ರಹ್ಮಣಃ ಸ್ಫುರಣಂ ತವ ।
ವೃತ್ತಿಃ ಪ್ರಥಮಸಂಭೂತಾ ಕಾಲಾದ್ಯೇವಾವಲಂಬತೇ ॥ ೬೦೫ ॥

**ಅರ್ಥ** - ತವ = ನಿನ್ನ ರೀತಿಯಲ್ಲಿ, ವೃತ್ತ್ಯಾ = ವೃತ್ತಿಯಿಂದ, ಅಜ್ಞಾನವಿನಾಶೇ = ಅಜ್ಞಾನವು ನಾಶವನ್ನು ಹೊಂದಿದರೆ ಮಾತ್ರ, ಬ್ರಹ್ಮಣಃ = ಬ್ರಹ್ಮನ, ಸ್ಫುರಣಂ ಹಿ = ಸ್ಫುರಣವಾಗುವುದಷ್ಟೆ. ಪ್ರಥಮಸಂಭೂತಾ = ಬ್ರಹ್ಮಸ್ಫುರಣಕ್ಕಿಂತ ಮೊದಲೇ ಉಂಟಾದ, ವೃತ್ತಿಃ = ವೃತ್ತಿಯು, ಕಾಲಾದ್ಯೇವ= ದೇಶಕಾಲಗಳನ್ನೇ, ಅವಲಂಬತೇ = ಅವಲಂಬಿಸುತ್ತದೆ (ಉಲ್ಲೇಖಿಸುತ್ತದೆ).

**ಅನುವಾದ** - ನಿನ್ನ ಮತದ ಪ್ರಕ್ರಿಯೆಯಂತೆ ವೃತ್ತಿಯಿಂದ ಅಜ್ಞಾನಾವರಣವು ನಾಶವಾದ ಮೇಲಷ್ಟೇ ಬ್ರಹ್ಮನ ಸ್ಫುರಣವು ಉಂಟಾಗುತ್ತದೆ. ಆದ್ದರಿಂದ ಬ್ರಹ್ಮನ ಸ್ಫುರಣಕ್ಕಿಂತ ಮೊದಲೇ 'ಅಯಂ' ಎಂದು ಉಲ್ಲೇಖಿಸುವ ವೃತ್ತಿಯು ಬ್ರಹ್ಮನನ್ನು ಉಲ್ಲೇಖಿಸುವುದಿಲ್ಲ, ದೇಶಕಾಲಗಳನ್ನೇ ಉಲ್ಲೇಖಿಸುತ್ತದೆ.

**ಭಾವವಿಲಾಸಿನೀ**– ಅಭಿನವಂ ದೂಷಣಾಂತರಂ ಚಾಹ – **ವೃತ್ಯೇತಿ** ॥ ಅವಿದ್ಯಾನಿವರ್ತಕತ್ವೇನ ಪ್ರಾಗೇವೋತ್ಪನ್ನಾಽಯಂ ಘಟ ಇತ್ಯಪರೋಕ್ಷವೃತ್ತಿಃ ಆವೃತಂ ಚೈತನ್ಯಂ ಕಥಮಯಮಿ-

**ತ್ಯುಲ್ಲಿಖೇತ್ । ನೀರೂಪಬ್ರಹ್ಮೋಲ್ಲೇಖಸ್ಯ ದುರಾಗ್ರಹಗೃಹೀತೇನ ತ್ವಯಾಽಂಗೀಕಾರೇಽ-ಪ್ಯಾವೃತಪದಾರ್ಥಸ್ಯ ಚಾಕ್ಷುಷಾಪರೋಕ್ಷ ಪ್ರತೀತಾವುಲ್ಲೇಖಾ ಯೋಗಾತ್ । ಅತಃ ಸರ್ವಾನುಭವ ಸಿದ್ಧೈತದ್ದೇಶಕಾಲ ವೃತ್ತಿತ್ವಮೇವ ಸಾ ಅಯಮಿತ್ಯುಲ್ಲಿಖೇತ್ । ಏವಂ ಚಾಯಂ ಘಟ ಇತಿ ವೃತ್ತಿರಪಿ ನ ಬ್ರಹ್ಮಣಿ ಘಟಾರೋಪೇ ಪ್ರಮಾಣಮ್ ॥ ೬೦೫ ॥**

**ವಿವರಣೆ** -ಇಲ್ಲಿ ಹೊಸ ದೋಷವೊಂದನ್ನು ಹೇಳುತ್ತಾರೆ. ಅವಿದ್ಯಾನಿವೃತ್ತಿಗೋಸ್ಕರವಾಗಿ ಮೊದಲೇ 'ಅಯಂ ಘಟಃ' ಎಂಬ ಅಪರೋಕ್ಷವೃತ್ತಿಯು ಉಂಟಾಗಿದೆ. ಅನಂತರ ಅವಿದ್ಯಾನಿವೃತ್ತಿಯಾಗಿ ಚೈತನ್ಯವು ಪ್ರಕಾಶಿಸಬೇಕು. ಆದರೆ ಬ್ರಹ್ಮಪ್ರಕಾಶಕ್ಕಿಂತ ಮೊದಲೇ ವೃತ್ತಿಯು 'ಅಯಂ' ಎಂದು ಉಲ್ಲೇಖಿಸುವಾಗ ಈ 'ಅಯಂ' ಶಬ್ದಾರ್ಥವು ಬ್ರಹ್ಮನಾಗಲು ಸಾಧ್ಯವಿಲ್ಲ. ದೇಶಕಾಲಗಳೇ ಆಗಬೇಕು. ರೂಪರಹಿತನಾದ ಬ್ರಹ್ಮನು ಚಾಕ್ಷುಷವೃತ್ತಿಗೆ ವಿಷಯನಾಗುತ್ತಾನೆಂದು ನೀನು ದುರಾಗ್ರಹದಿಂದ ಅಂಗೀಕರಿಸಿದರೂ ಸಹ ಆವೃತವಾದ ಪದಾರ್ಥವು ಚಾಕ್ಷುಷವೃತ್ತಿಗೆ ವಿಷಯವಾಗದಿರುವುದರಿಂದ ಬ್ರಹ್ಮನು ವಿಷಯನಾಗಲಾರ. ಅಲ್ಲಿ 'ಅಯಂ' ಎಂಬುದು ಸರ್ವಾನುಭವಸಿದ್ಧವಾದ ದೇಶಕಾಲಗಳನ್ನೇ ಉಲ್ಲೇಖಿಸುತ್ತದೆ. ಆ ಕಾರಣದಿಂದ 'ಅಯಂ ಘಟಃ' ಎಂಬ ವೃತ್ತಿಯು ಘಟವು ಬ್ರಹ್ಮನಲ್ಲಿ ಆರೋಪಿತ ಎಂಬ ವಿಷಯದಲ್ಲಿ ಪ್ರಮಾಣವಲ್ಲ ಎಂದು ಅಭಿಪ್ರಾಯ.

**ಇತ್ಯಾರೋಪಕುಠಾರಾಗ್ರೇ ಕ್ರೂರಾ ಧಾರೈವ ದುರ್ಘಟಾ ।**
**ಸ್ವಚ್ಛವಿಶ್ವದ್ರುಮಚ್ಛೇದಃ ಕರ್ತುಂ ತತ್ ಕೇನ ಶಕ್ಯತೇ ॥ ೬೦೬ ॥**

**ಅರ್ಥ-** ಇತಿ = ಈ ಕಾರಣದಿಂದ, ಆರೋಪಕುಠಾರಾಗ್ರೇ = ಆರೋಪವೆಂಬ ಕೊಡಲಿಯ ತುದಿಯಲ್ಲಿ, ಕ್ರೂರಾ = ಹರಿತವಾದ, ಧಾರೈವ = ಅಧಿಷ್ಠಾನ-ಚೈತನ್ಯವಿಷಯತ್ವವೆಂಬ ಧಾರೆಯೇ, ದುರ್ಘಟಾ = ದುರ್ಘಟವಾಗುತ್ತದೆ. ತತಃ = ಆ ಕಾರಣದಿಂದ, ಸ್ವಚ್ಛವಿಶ್ವದ್ರುಮಚ್ಛೇದಃ = ಸ್ವಚ್ಛವಾದ ಜಗದ್ವೃಕ್ಷದ ಛೇದವು, ಕೇನ = ಯಾವುದರಿಂದ, ಕರ್ತುಂ = ಮಾಡಲು, ಶಕ್ಯತೇ = ಸಾಧ್ಯವಾಗುತ್ತದೆ?

**ಅನುವಾದ - ಈ ಕಾರಣದಿಂದ ನಿನ್ನ ಆರೋಪವೆಂಬ ಕುಠಾರಕ್ಕೆ ಚೈತನ್ಯ-ವಿಷಯತ್ವವೆಂಬ ಧಾರೆಯೇ ದುರ್ಘಟವಾಗುತ್ತದೆ. ಹೀಗಿರುವಾಗ ಸ್ವಚ್ಛವಾದ ಜಗದ್ವೃಕ್ಷವನ್ನು ಹೇಗೆ (ಯಾರಿಂದ) ಕಡಿಯಲು ಸಾಧ್ಯ?**

**ಭಾವವಿಲಾಸಿನೀ–** ಸಾಹಿತ್ಯಮುದ್ರಯೋಪಸಂಹರತಿ ॥ **ಇತೀತಿ** ॥ ಧಾರಾ ಅಧಿಷ್ಠಾನಚೈತನ್ಯ ವಿಷಯತ್ವರೂಪಧಾರಾ ॥ ತತ್ ತಸ್ಮಾತ್ ॥ ೬೦೬ ॥

**ವಿವರಣೆ** - ಹಿಂದೆ ಹೇಳಿದ ವಿಷಯವನ್ನು ಸಾಹಿತ್ಯಮುದ್ರೆಯಿಂದ ಸಮಾಪ್ತಿಗೊಳಿಸುತ್ತಾರೆ. ಜ್ಞಾನಕ್ಕೆ ಅಧಿಷ್ಠಾನಚೈತನ್ಯವಿಷಯತ್ವವು ಉಂಟಾದರೆ, ಆಗ ಆರೋಪವನ್ನು ಕಥಂಚಿತ್

ಸಮರ್ಥನ ಮಾಡಬಹುದು. ಆದರೆ, ಭ್ರಮವು ಚಾಕ್ಷುಷವಾದುದರಿಂದ ಅದಕ್ಕೆ ಅಧಿಷ್ಠಾನಚೈತನ್ಯವು ವಿಷಯವಾಗುವುದಿಲ್ಲ ಎಂದು ಹೇಳಿದುದರಿಂದ, ಜಗದ್ವೃಕ್ಷಕ್ಕೆ ವಿರೋಧಿಯಾದ ಕುಠಾರವೇ ಮೊಂಡಾಗಿ ತನ್ನ ಕಾರ್ಯವನ್ನು ಸಾಧಿಸುವುದಿಲ್ಲ ಎಂದು ಹೇಳುತ್ತಾರೆ.

**ಘಟೋಽಯಮಿತಿ ಧೀರ್ದೃಕ್ ಚೇನ್ನಾಧಿಷ್ಠಾನಭ್ರಮಸ್ತವ ।**
**ಘಟೋಽಯಮಿತಿ ವೃತ್ತಿಶ್ಚೇನ್ನಾಧಿಷ್ಠಾನಭ್ರಮಸ್ತವ ॥ ೬೦೭ ॥**

**ಅರ್ಥ-** ಘಟೋಯಮಿತಿ ಧೀಃ = 'ಅಯಂ ಘಟಃ' ಎಂಬ ಜ್ಞಾನವು, ದೃಕ್ ಚೇತ್ = ಚೈತನ್ಯರೂಪವೆಂದು ಅಂಗೀಕರಿಸಿದರೆ, ತವ = ನಿನಗೆ, ಅಧಿಷ್ಠಾನಭ್ರಮಃ = ಅಧಿಷ್ಠಾನಭ್ರಮವು, ನ = ಸಿದ್ಧವಾಗುವುದಿಲ್ಲ. ಘಟೋಯಮಿತಿ = 'ಅಯಂ ಘಟಃ' ಎಂಬುದು, ವೃತ್ತಿಶ್ಚೇತ್ = ವೃತ್ತಿ ಎಂದು ಅಂಗೀಕರಿಸಿದರೆ, ತವ = ನಿನಗೆ, ಅಧಿಷ್ಠಾನಭ್ರಮಃ = ಅಧಿಷ್ಠಾನಭ್ರಮವು, ನ = ಸಿದ್ಧವಾಗುವುದಿಲ್ಲ.

**ಅನುವಾದ - 'ಅಯಂ ಘಟಃ' ಎಂಬ ಜ್ಞಾನವು ಚೈತನ್ಯರೂಪವೆಂದು ಅಂಗೀಕರಿಸಿದರೆ, ನಿನಗೆ ಅಧಿಷ್ಠಾನಭ್ರಮವು ಸಿದ್ಧವಾಗುವುದಿಲ್ಲ. 'ಅಯಂ ಘಟಃ' ಎಂಬ ಜ್ಞಾನವು ವೃತ್ತಿರೂಪವೆಂದು ಅಂಗೀಕರಿಸಿದರೂ ನಿನಗೆ ಅಧಿಷ್ಠಾನಭ್ರಮವು ಸಿದ್ಧವಾಗುವುದಿಲ್ಲ.**

**ವಿವರಣೆ -** ಉಭಯಪಾಶಾರಜ್ಜುವಿನಿಂದ ಇಲ್ಲಿ ಪರನನ್ನು ಬಂಧಿಸುತ್ತಾರೆ. 'ಅಯಂ ಘಟಃ' ಎಂಬುದು ಚೈತನ್ಯರೂಪವೆಂದು ಅಂಗೀಕರಿಸಿದರೆ, ಚಾಕ್ಷುಷವೃತ್ತಿಯಲ್ಲಿ ರೂಪರಹಿತನಾದ ಅಧಿಷ್ಠಾನಬ್ರಹ್ಮನು ವಿಷಯನಾಗದಿರುವುದರಿಂದ ಇದನ್ನು ಅಧಿಷ್ಠಾನಭ್ರಮ ಎಂದು ಹೇಳಲು ಬರುವುದಿಲ್ಲ. 'ಅಯಂ ಘಟಃ' ಎಂಬುದು ವೃತ್ತಿಯಾದರೆ, ವೃತ್ತಿಯು ಜಡವಾದ್ದರಿಂದ ಅದು ಘಟವನ್ನು ಕುರಿತು ಅಧಿಷ್ಠಾನವೇ ಅಲ್ಲವಾದ್ದರಿಂದ ಆ ಪಕ್ಷದಲ್ಲಿಯೂ ಅಧಿಷ್ಠಾನಭ್ರಮವನ್ನು ಹೇಳಲು ಬರುವುದಿಲ್ಲ ಎಂದು ಅಭಿಪ್ರಾಯ.

**ಅನಾರೋಪಿತವಸ್ತುತ್ವಾದ್ ವಿಶ್ವಂ ಸ್ಯಾತ್ ಪರಮಾರ್ಥಸತ್ ।**
**ಬ್ರಹ್ಮವದ್ ಬಾಧಕೋಕ್ತೀನಾಮನ್ಯಾರ್ಥತ್ವಂ ಚ ತದ್ಬಲಾತ್ ॥ ೬೦೮ ॥**

**ಅರ್ಥ-** ವಿಶ್ವಂ = ಜಗತ್ತು, ಬ್ರಹ್ಮವತ್= ಬ್ರಹ್ಮನಂತೆ, ಅನಾರೋಪಿತವಸ್ತುತ್ವಾತ್ = ಅನಾರೋಪಿತ ವಸ್ತುವಾದ್ದರಿಂದ, ಪರಮಾರ್ಥ ಸತ್ ಸ್ಯಾತ್ = ಪಾರಮಾರ್ಥಿಕ ಸತ್ಯವಾಗುತ್ತದೆ. ತದ್ ಬಲಾತ್ = ಆ ಪಾರಮಾರ್ಥಿಕ ಸತ್ಯತ್ವದ ಬಲದಿಂದಲೇ, ಬಾಧಕೋಕ್ತೀನಾಂ = ನೀನು ಹೇಳುವ 'ನೇಹ ನಾನಾಸ್ತಿ' ಮೊದಲಾದ ಬಾಧಕವಾಕ್ಯಗಳಿಗೆ, ಅನ್ಯಾರ್ಥತ್ವಂ ಚ ಸ್ಯಾತ್ = ಅನ್ಯಾರ್ಥವೂ ಆಗುತ್ತದೆ.

**ಅನುವಾದ** - ವಿಶ್ವವು ಅನಾರೋಪಿತ ವಸ್ತುವಾದ್ದರಿಂದ ಬ್ರಹ್ಮನಂತೆ ಪಾರಮಾರ್ಥಿಕ ಸತ್ಯವೇ ಆಗುತ್ತದೆ. ಆ ಪಾರಮಾರ್ಥಿಕ ಸತ್ಯತ್ವದ ಬಲದಿಂದ ನೀನು ಹೇಳುವ ಬಾಧಕವಾಕ್ಯಗಳಿಗೆ ಅನ್ಯಾರ್ಥತ್ವವು ಉಂಟಾಗುತ್ತದೆ.

**ಭಾವವಿಲಾಸಿನೀ**– ಬಾಧಕೋಕ್ತೀನಾಂ ನೇಹನಾನೇತ್ಯಾದಿಬಾಧಕೋಕ್ತೀನಾಮ್ । ಬ್ರಹ್ಮವತ್ ಅಸದೇವೇದಮಗ್ರ ಆಸೀದಿತಿ ಬಾಧಕೋಕ್ತಿಗ್ರಸ್ತಬ್ರಹ್ಮವತ್ । ತದ್ಬಲಾತ್ ಅನಾರೋಪಿತತ್ವ- ಬಲಾತ್ ॥ ೬೦೮ ॥

**ವಿವರಣೆ** - ಬ್ರಹ್ಮನು ಪಾರಮಾರ್ಥಿಕ ಸತ್ಯನೆಂದು ನಿಶ್ಚಯವಾದ ಮೇಲೆ 'ಅಸದೇವೇದಮಗ್ರ ಆಸೀತ್' ಎಂಬ ಬ್ರಹ್ಮನಿಗೆ ಅಸತ್ವವನ್ನು ಹೇಳುವಂತೆ ತೋರುವ ವಾಕ್ಯಗಳಿಗೆ ಹೇಗೆ ಬೇರೆ ಅರ್ಥವಾಗುತ್ತದೆಯೋ ಅದರಂತೆ, ಈ ಅನುಮಾನ ಬಲದಿಂದ ಜಗತ್ತಿಗೆ ಪಾರಮಾರ್ಥಿಕ ಸತ್ಯತ್ವವು ಸಿದ್ಧವಾದ ಮೇಲೆ 'ನೇಹ ನಾನಾಸ್ತಿ ಕಿಂಚನ' ಮೊದಲಾದ ವಾಕ್ಯಗಳಿಗೂ ಅನ್ಯಾರ್ಥವೇ ಸಿದ್ಧವಾಗುತ್ತದೆ.

**ಚಕ್ಷುರಾದೀಂದ್ರಿಯೈರ್ಬಾಹ್ಯೈರ್ಬಹಿಷ್ಠೋಽರ್ಥೋ ಯದೀಕ್ಷ್ಯತೇ ।**
**ಘಟೋಽಯಮಿತ್ಯಾದಿರೂಪಂ ತದಾ ಜ್ಞಾನಂ ವಿದುರ್ಬುಧಾಃ ॥ ೬೦೯ ॥**

**ಇದಮಂಶೋ ನಾನುಮಿತೌ ನ ಶಾಬ್ದ್ಯಾಮಪಿ ವಿದ್ಯತೇ ।**
**ಅಪರೋಕ್ಷೇ ಪರಂ ಸ ಸ್ಯಾದ್ ಬಾಹ್ಯಾಕ್ಷೈರ್ಬಾಹ್ಯವಸ್ತುನಃ ॥ ೬೧೦ ॥**

**ಸ್ವಾಂಗಸ್ಥಭೂಷಣಾದೀನಾಂ ಚಕ್ಷುಷಾ ವಿಕ್ಷಣೇಽಪಿ ಹಿ ।**
**ಮಮೇದಮಿತಿ ವಾ ಜ್ಞಾನಂ ಮಯೀದಮಿತಿ ವಾ ಭವೇತ್ ॥ ೬೧೧ ॥**

**ಅರ್ಥ**- ಬಾಹ್ಯೈಃ = ಬಾಹ್ಯವಾದ, ಚಕ್ಷುರಾದೀಂದ್ರಿಯೈಃ = ಚಕ್ಷುಸ್ಸು ಮೊದಲಾದ ಇಂದ್ರಿಯಗಳಿಂದ, ಯದಾ = ಯಾವಾಗ, ಬಹಿಷ್ಠೋ ಅರ್ಥಃ = ಬಾಹ್ಯವಾದ ಅರ್ಥವು, ಈಕ್ಷ್ಯತೇ = ಸಂಬದ್ಧವಾಗುತ್ತದೆಯೋ, ತದಾ = ಆಗ, ಬುಧಾಃ = ವಿವೇಕಿಗಳಾದವರು, ಘಟೋಯಮಿತ್ಯಾದಿ ರೂಪಂ = 'ಅಯಂ ಘಟಃ' ಇತ್ಯಾದಿ ರೂಪವಾದ, ಜ್ಞಾನಂ = ಜ್ಞಾನವನ್ನು, ವಿದುಃ = ತಿಳಿಯುತ್ತಾರೆ (ಅಂಗೀಕರಿಸುತ್ತಾರೆ)

ಅನುಮಿತೌ = ಅನುಮಿತಿಯಲ್ಲಾಗಲೀ, ಶಾಬ್ದ್ಯಾಮಪಿ = ಮತ್ತು ಶಾಬ್ದಬೋಧದಲ್ಲಾಗಲೀ, ಇದಮಂಶಃ = ಇದಮಂಶದ ಉಲ್ಲೇಖವು, ನ ವಿದ್ಯತೇ = ಇರುವುದಿಲ್ಲ. ಪರಂ = ಆದರೆ, ಸಃ= ಆ ಇದಮಂಶ ಉಲ್ಲೇಖವು, ಬಾಹ್ಯಾಕ್ಷೈಃ = ಬಾಹ್ಯ ಇಂದ್ರಿಯಗಳಿಂದ, ಬಾಹ್ಯವಸ್ತುನಃ = ಬಾಹ್ಯವಸ್ತುಗಳ, ಅಪರೋಕ್ಷೇ = ಪ್ರತ್ಯಕ್ಷ ಉಂಟಾದಾಗ ಮಾತ್ರ, ಸ್ಯಾತ್ = ಇರುತ್ತದೆ.

ಚಕ್ಷುಷಾ = ಚಕ್ಷುರಿಂದ್ರಿಯದಿಂದ, ಸ್ವಾಂಗಸ್ಥಭೂಷಣಾದೀನಾಂ = ತನ್ನ ದೇಹದಲ್ಲಿರುವ ಒಡವೆಗಳನ್ನು, ವೀಕ್ಷಣೇಪಿ = ನೋಡಿದಾಗಲೂ ಸಹ, ಮಮೇದಮಿತಿ ವಾ = ಇದು ನನ್ನದು ಎಂದಾಗಲೀ, ಮಯೀದಮಿತಿ ವಾ = ಇದು ನನ್ನಲ್ಲಿ ಇದೆ ಎಂದಾಗಲೀ, ಜ್ಞಾನಂ = ಜ್ಞಾನವು, ಭವೇತ್ ಹಿ = ಉಂಟಾಗುವುದಷ್ಟೆ.

**ಅನುವಾದ -** ಯಾವಾಗ ಚಕ್ಷುರಾದಿ ಬಾಹ್ಯೇಂದ್ರಿಯಗಳು ಬಾಹ್ಯಾರ್ಥದ ಜೊತೆಯಲ್ಲಿ ಸನ್ನಿಕರ್ಷವನ್ನು ಹೊಂದುತ್ತವೆಯೋ, ಆಗ 'ಅಯಂ ಘಟಃ' ಎಂಬ ಜ್ಞಾನವು ಉತ್ಪತ್ತಿಯಾಗುವುದೆಂದು ಜ್ಞಾನಿಗಳು ತಿಳಿಯುತ್ತಾರೆ.

'ಅಯಂ' ಎಂಬ ಈ ಇದಮಂಶದ ಉಲ್ಲೇಖವು ಅನುಮಿತಿಯಲ್ಲಾಗಲೀ ಅಥವಾ ಶಾಬ್ದಬೋಧದಲ್ಲಾಗಲೀ ಇರುವುದಿಲ್ಲ. ಆದರೆ, ಬಾಹ್ಯೇಂದ್ರಿಯಗಳಿಂದ ಬಾಹ್ಯವಸ್ತುಗಳ ಪ್ರತ್ಯಕ್ಷಾತ್ಮಕವಾದ ಜ್ಞಾನದಲ್ಲಿ ಮಾತ್ರ ಇರುತ್ತದೆ.

ತನ್ನ ದೇಹದಲ್ಲಿರುವ ಭೂಷಣಗಳನ್ನು ಚಕ್ಷುಸ್ಸಿನಿಂದ ನೋಡಿದಾಗಲೂ ಇದು ನನ್ನದು ಎಂದಾಗಲೀ ಅಥವಾ ಇದು ನನ್ನಲ್ಲಿ ಇದೆ ಎಂದಾಗಲೀ ಜ್ಞಾನವು ಉಂಟಾಗುವುದಷ್ಟೆ.

**ವಿವರಣೆ -** ಬಾಹ್ಯವಸ್ತುವಿನ ಉಲ್ಲೇಖವು ಅದು ದೂರದಲ್ಲಿರಲಿ ಅಥವಾ ಹತ್ತಿರವಾದ ಶರೀರಕ್ಕೆ ಸಂಬದ್ಧವಾಗಿರಲಿ, ಅದು 'ಅಯಂ' ಎಂದೇ ಉಂಟಾಗುತ್ತದೆ ಎಂದು ಈ ದೃಷ್ಟಾಂತಗಳಿಂದ ಉಪಪಾದನೆ ಮಾಡುತ್ತಾರೆ.

ಸಾಕ್ಷಾಚ್ಚ ಸಾಕ್ಷಿಣಾ ವೇದ್ಯೇ ಸಾಕ್ಷ್ಯಾಧಾರೇ ಚ ವಸ್ತುನಿ ।
ಅಹಂ ಸುಖೀ ಮಮ ಸುಖಮಹಂ ಜಾನಾಮ್ಯಹಂ ಯತೇ ॥ ೬೧೨ ॥

ಅಹಮಿಚ್ಛಾಮೀತಿ ವಾ ಧೀಃ ಸರ್ವಾನುಭವಶೋಧನೇ ।
ಗೌರೋಹಮಿತ್ಯಾದಿರೂಪೋ ಭ್ರಮೋಪಿ ಕಿಲ ತೇ ಮತೇ ॥ ೬೧೩ ॥

**ಅರ್ಥ-** ಸಾಕ್ಷಾತ್ = ಸಾಕ್ಷಾತ್ತಾಗಿ, ಸಾಕ್ಷಿಣಾ = ಸಾಕ್ಷಿಯಿಂದ, ವೇದ್ಯೇ = ವೇದ್ಯವಾದ, ಸಾಕ್ಷ್ಯಾಧಾರೇ = ಸಾಕ್ಷ್ಯಿಯನ್ನು ಆಶ್ರಯಿಸಿರುವ, ವಸ್ತುನಿ ಚ = ವಸ್ತುವಿನಲ್ಲಾದರೆ, ಅಹಂ ಸುಖೀ = ನಾನು ಸುಖಿಯಾಗಿದ್ದೇನೆ, ಮಮ ಸುಖಂ= ನನ್ನ ಸುಖ, ಅಹಂ ಜಾನಾಮಿ= ನಾನು ತಿಳಿದಿದ್ದೇನೆ, ಅಹಂ ಯತೇ = ನಾನು ಪ್ರಯತ್ನಪಡುತ್ತಿದ್ದೇನೆ.

ವಾ = ಅಥವಾ, ಅಹಮಿಚ್ಛಾಮಿ = ನಾನು ಇಚ್ಛಿಸುತ್ತೇನೆ, ಇತಿ = ಎಂದೇ, ಧೀಃ = ಬುದ್ಧಿಯು, ಸರ್ವಾನುಭವಶೋಧನೇ = ಎಲ್ಲರ ಅನುಭವಗಳನ್ನು ವಿಮರ್ಶೆಮಾಡಿದರೆ ಉಂಟಾಗುತ್ತದೆ, ತೇ ಮತೇ = ನಿನ್ನ ಮತದಲ್ಲಿ, ಗೌರೋಹಂ = ನಾನು ಗೌರನಾಗಿದ್ದೇನೆ,

ಇತ್ಯಾದಿರೂಪಃ = ಇತ್ಯಾದಿರೂಪವಾದ, ಭ್ರಮೋಪಿ = ಭ್ರಮವೂ ಕೂಡ, ಕಿಲ = ಉಂಟಾಗುವುದಷ್ಟೆ.

**ಅನುವಾದ** - ನೇರವಾಗಿ ಸಾಕ್ಷಿಯಿಂದ ವೇದ್ಯವಾದ ಸಾಕ್ಷಿಯನ್ನು ಆಶ್ರಯಿಸಿರುವ ಸುಖದುಃಖಾದಿ ವಸ್ತುಗಳಲ್ಲಿ ನಾನು ಸುಖಿಯಾಗಿದ್ದೇನೆ. ನನ್ನ ಸುಖ. ನಾನು ತಿಳಿದಿದ್ದೇನೆ. ನಾನು ಪ್ರಯತ್ನಪಡುತ್ತಿದ್ದೇನೆ ಅಥವಾ ನಾನು ಇಚ್ಛಿಸುತ್ತಿದ್ದೇನೆ ಎಂಬ ಜ್ಞಾನವು ಉಂಟಾಗುವುದೇ ಎಲ್ಲರ ಅನುಭವವನ್ನು ಪರೀಕ್ಷೆಮಾಡಿದರೆ ತಿಳಿದುಬರುತ್ತದೆ. ನಿನ್ನ ಮತದಲ್ಲಿ ನಾನು ಬಿಳಿಯಾಗಿದ್ದೇನೆ ಎಂಬ ಭ್ರಾಂತಿಯೂ ಅಂಗೀಕರಿಸಲ್ಪಡುವುದಷ್ಟೇ?

**ವಿವರಣೆ** - ಇಷ್ಟು ದೃಷ್ಟಾಂತಗಳಿಂದ ಎಲ್ಲಿ ಚೈತನ್ಯರೂಪವಾದ ಸಾಕ್ಷಿಯು ವಿಷಯವಾಗುತ್ತದೆಯೋ ಅಲ್ಲೆಲ್ಲಾ ಅದು ಭ್ರಾಂತಿಯಾಗಲೀ ಅಥವಾ ಪ್ರಮೆಯೇ ಆಗಲೀ, ಅಹಮರ್ಥದ ಅಹಂ ಎಂಬ ಉಲ್ಲೇಖವೇ ಇದೆ ಎಂದು ಪ್ರದರ್ಶಿಸುತ್ತಾರೆ.

**ಸುಖವಾನಹಮಿತ್ಯೇವ ಸುಪ್ತಾವಪಿ ಮತಿಃ ಕಿಲ ।**
**ಅಜ್ಞೋಽಹಮಿತಿ ಭ್ರಾಂತಿರಜ್ಞಾನಸ್ಯಾಪಿ ತೇ ಮತೇ ॥ ೬೧೪ ॥**

**ತಸ್ಮಾತ್ ಪ್ರಮಾಯಾಂ ಭ್ರಾಂತೌ ವಾ ಜಾಗ್ರತ್‌ಸ್ವಪ್ನಸುಷುಪ್ತಿಷು ।**
**ಅಹಮಿತ್ಯುಲ್ಲಿಖೇತ್ ಸಾಕ್ಷೀ ಸ್ವಾತ್ಮಾನಂ ನಾನ್ಯಥಾ ಕ್ವಚಿತ್ ॥ ೬೧೫ ॥**

**ಅರ್ಥ**- ಸುಪ್ತಾವಪಿ = ಸುಷುಪ್ತಿಯಲ್ಲಿಯೂ ಕೂಡ, ಸುಖವಾನಹಮಿತ್ಯೇವ = ನಾನು ಸುಖವಾಗಿದ್ದೇನೆ ಎಂದೇ, ಮತಿಃ ಕಿಲ = ಬುದ್ಧಿಯು ಉಂಟಾಗುವುದಷ್ಟೆ? ತೇ ಮತೇ = ನಿನ್ನ ಮತದಲ್ಲಿ, ಅಜ್ಞೋಹಂ ಇತಿ = ನಾನು ಅಜ್ಞನಾಗಿದ್ದೇನೆ ಎಂಬುದು, ಅಜ್ಞಾನಸ್ಯಾಪಿ ಭ್ರಾಂತಿಃ ಹಿ = ಅಜ್ಞಾನದ ಭ್ರಾಂತಿಯಷ್ಟೇ?

ತಸ್ಮಾತ್ = ಆ ಕಾರಣದಿಂದ, ಜಾಗ್ರತ್‌ಸ್ವಪ್ನಸುಷುಪ್ತಿಷು = ಜಾಗ್ರದವಸ್ಥೆಯಲ್ಲಾಗಲೀ, ಸ್ವಪ್ನಾವಸ್ಥೆಯಲ್ಲಾಗಲೀ, ಸುಷುಪ್ತಾವಸ್ಥೆಯಲ್ಲಾಗಲೀ, ಪ್ರಮಾಯಾಂ = ಪ್ರಮೆಯಲ್ಲಾಗಲೀ, ವಾ = ಅಥವಾ, ಭ್ರಾಂತೌ = ಭ್ರಾಂತಿಯಲ್ಲಾಗಲೀ, ಸಾಕ್ಷೀ = ಸಾಕ್ಷಿಯು, ಸ್ವಾತ್ಮಾನಂ= ತನ್ನನ್ನು, ಅಹಮಿತಿ = ಅಹಂ ಎಂದು (ನಾನು ಎಂದೇ), ಉಲ್ಲಿಖೇತ್ = ಉಲ್ಲೇಖಿಸುತ್ತದೆ. ಅನ್ಯಥಾ = ಬೇರೆ ರೀತಿಯಾಗಿ ಎಂದರೆ, ಅಯಂ ಎಂಬುದಾಗಿ, ಕ್ವಚಿತ್ = ಎಂದೂ, ನ = ಉಲ್ಲೇಖಿಸುವುದಿಲ್ಲ.

**ಅನುವಾದ** - ಸುಷುಪ್ತ್ಯವಸ್ಥೆಯಲ್ಲಿಯೂ ಸಹ ನಾನು ಸುಖದಿಂದಿದ್ದೇನೆ ಎಂಬ ಬುದ್ಧಿಯೇ ಉಂಟಾಗುವುದಷ್ಟೆ? ನಿನ್ನ ಮತದಲ್ಲಿ ಅಹಮಜ್ಞಃ = ನಾನು ಅಜ್ಞನಾಗಿದ್ದೇನೆ ಎಂಬುದು ಅಜ್ಞಾನದ ಭ್ರಾಂತಿಯಷ್ಟೇ? ಆದ್ದರಿಂದ

**ಜಾಗ್ರದವಸ್ಥೆಯಲ್ಲಾಗಲೀ, ಸ್ವಪ್ನದಲ್ಲಾಗಲೀ ಅಥವಾ ಸುಷುಪ್ತಿಯಲ್ಲಾಗಲೀ ಸಾಕ್ಷಿಯು ತನ್ನನ್ನು 'ಅಹಂ' ಎಂದೇ ವಿಷಯೀಕರಿಸುತ್ತದೆಯೇ ಹೊರತು ಬೇರೆ ರೀತಿಯಾಗಿ ಅಯಂ ಎಂಬುದಾಗಿ ಉಲ್ಲೇಖಿಸುವುದಿಲ್ಲ.**

**ವಿವರಣೆ** - ಆದ್ದರಿಂದ ಜಾಗ್ರತ್‌ಸ್ವಪ್ನಸುಷುಪ್ತಿಗಳಲ್ಲಿ ಪ್ರಮೆಯಲ್ಲಾಗಲೀ ಅಥವಾ ಭ್ರಾಂತಿಯಲ್ಲಾಗಲೀ, ಸಾಕ್ಷಿಯು ತನ್ನನ್ನು ಅಹಂ ಎಂದೇ ಉಲ್ಲೇಖಿಸುತ್ತದೆಯೇ ಹೊರತು ಎಂದೂ ಅಯಂ ಎಂದು ಬೇರೆ ರೀತಿಯಾಗಿ ಉಲ್ಲೇಖಿಸುವುದಿಲ್ಲ.

**ಅತೋಽಯಂ ಘಟ ಇತ್ಯಾದ್ಯಾ ವೃತ್ತಿಃ ಪ್ರಾತ್ಯಕ್ಷಿಕೀ ಧ್ರುವಮ್ ।**
**ದೃಗ್ದೃಶ್ಯಯೋಗಾಯೋಗಾದ್ಯೈಃ ಸಾ ಭ್ರಾಂತಿರ್ನಾಭವತ್ ತವ ॥ ೬೧೬ ॥**

**ಅಧಿಷ್ಠಾನಚಿದಾತ್ಮೈವ ಭ್ರಮೋ ವಾಚ್ಯೋ ಭವನ್ಮತೇ ।**
**ಸ ಚಾಹಂ ಘಟ ಇತ್ಯಾದ್ಯಾಕಾರವಾನ್ ಸ್ಯಾನ್ನ ಚಾನ್ಯಥಾ ॥ ೬೧೭ ॥**

**ಅರ್ಥ**- ಅತಃ = ಆ ಕಾರಣದಿಂದ, ಅಯಂ ಘಟಃ ಇತ್ಯಾದ್ಯಾ ವೃತ್ತಿಃ = ಅಯಂ ಘಟಃ ಎಂಬ ಈ ಮೊದಲಾದ ವೃತ್ತಿಯು, ಧ್ರುವಂ = ನಿಶ್ಚಯವಾಗಿ, ಪ್ರಾತ್ಯಕ್ಷಿಕೀ = ಪ್ರತ್ಯಕ್ಷಾತ್ಮಕವಾದುದು. ದೃಗ್ದೃಶ್ಯಯೋಗಾಯೋಗಾದ್ಯೈಃ = ದೃಗ್ದೃಶ್ಯಗಳಿಗೆ ಸಂಬಂಧವು ಕೂಡದಿರುವುದರಿಂದ ಸಾ = ಅದು, ತವ = ನಿನಗೆ, ಭ್ರಾಂತಿಃ = ಭ್ರಾಂತಿಯಾಗಿ, ನಾಭವತ್ = ಆಗಲಿಲ್ಲ.

ಭವನ್ಮತೇ = ನಿನ್ನ ಮತದಲ್ಲಿ, ಭ್ರಮಃ = ಭ್ರಾಂತಿಯು, ಅಧಿಷ್ಠಾನಚಿದಾತ್ಮೈವ = ಅಧಿಷ್ಠಾನಚಿದಾತ್ಮಕವೆಂದೇ, ವಾಚ್ಯಃ = ಹೇಳಲ್ಪಡಬೇಕು. ಸ ಚ = ಆ ಭ್ರಾಂತಿಯಾದರೋ, ಅಹಂ ಘಟಃ = ನಾನು ಘಟವಾಗಿದ್ದೇನೆ, ಇತ್ಯಾದ್ಯಾಕಾರವಾನ್= ಇದೇ ಮೊದಲಾದ ಆಕಾರವುಳ್ಳದ್ದಾಗಿ, ಸ್ಯಾತ್ = ಆಗಬೇಕು. ಅನ್ಯಥಾ = ಅಯಂ ಘಟಃ ಎಂಬ ಆಕಾರವುಳ್ಳದ್ದಾಗಿ, ನ ಸ್ಯಾತ್ = ಆಗಬಾರದು.

**ಅನುವಾದ** - **ಆದ್ದರಿಂದ 'ಅಯಂ ಘಟಃ' ಎಂಬ ಜ್ಞಾನವು ನಿಶ್ಚಯವಾಗಿ ಅಪರೋಕ್ಷವೃತ್ತಿಯಾಗಿದೆ. ಅಪರೋಕ್ಷವೃತ್ತಿಯು ಜಡವಾದುದರಿಂದ ಅದರಲ್ಲಿ ದೃಶ್ಯಕ್ಕೆ ಅಧ್ಯಸ್ತತ್ವರೂಪವಾದ ಸಂಬಂಧವು ಕೂಡದಿರುವುದರಿಂದ ನಿನ್ನ ಮತದ ರೀತಿಯಲ್ಲಿ 'ಅಯಂ ಘಟಃ' ಎಂಬುದು ಭ್ರಾಂತಿಯಾಗಲು ಸಾಧ್ಯವಿಲ್ಲ.**

**ನಿನ್ನ ಮತದಲ್ಲಿ ಅಧಿಷ್ಠಾನಚೈತನ್ಯವನ್ನೇ ಭ್ರಾಂತಿಯೆಂದು ಹೇಳಬೇಕು. ಆಗ ಆ ಭ್ರಾಂತಿಗಾದರೋ 'ಅಹಂ ಘಟಃ' ಇದೇ ಮೊದಲಾದ ಆಕಾರವು ಇರಬೇಕೇ ಹೊರತು 'ಅಯಂ ಘಟಃ' ಎಂಬ ಆಕಾರವು ಇರಲು ಸಾಧ್ಯವಿಲ್ಲ.**

**ಭಾವವಿಲಾಸಿನೀ–** ಅಯಮಿತ್ಯನುಭವಸ್ಯ ಪ್ರಾತ್ಯಕ್ಷಿಕಘಟಪಟಾದಿವಿಷಯತಾಂ ಚೈತನ್ಯಸ್ಯ ಚಾಹಿಮಿತ್ಯೇವಾನುಭವವಿಷಯತಾಂ ಚ ಬಹುಶಃ ಪ್ರಯೋಗಂ ಪ್ರದರ್ಶ್ಯಾನುಭಾವಾರೂಢಂ ಕರೋತಿ।। **ಚಕ್ಷುರಾದೀತಿ** ।। ೬೦೯-೬೧೭ ।।

**ವಿವರಣೆ** - ಅಪರೋಕ್ಷವೃತ್ತಿಗೆ ವಿಷಯವಾದ ಘಟಾದಿಗಳಿಗೆ ಅಯಂ ಎಂಬ ಉಲ್ಲೇಖವಿಷಯತ್ವವನ್ನು ಚೈತನ್ಯರೂಪವಾದ ಸಾಕ್ಷಿಗೆ ಅಹಂ ಎಂಬ ಉಲ್ಲೇಖವಿಷಯತ್ವವನ್ನು ಈ ಅನೇಕ ಪ್ರಯೋಗಗಳಿಂದ ಈ ಒಂಭತ್ತು ಶ್ಲೋಕಗಳಿಂದ ಸಮರ್ಥಿಸಿದ್ದಾರೆ.

ಅನಾನುಭವಿಕತ್ವಾದ್ಯೈರ್ಭ್ರಮೋಽಪ್ಯೇಷ ನ ಶೋಭತೇ ।
ಅನಾರೋಪಿತಮೇವಾತೋ ಜಗದಾಸೀನ್ನ ಸಂಶಯಃ ।। ೬೧೮ ।।

**ಅರ್ಥ**- ಅನಾನುಭವಿಕತ್ವಾದ್ಯೈಃ ಅಪಿ = ಅನುಭವಕ್ಕೆ ವಿರುದ್ಧವಾಗಿರುವುದರಿಂದಲೂ, ಏಷಃ = 'ಅಯಂ ಘಟಃ' ಎಂಬ ಈ ಜ್ಞಾನವು, ಭ್ರಮಃ = ಭ್ರಾಂತಿ ಎಂಬುದು ನ ಶೋಭತೇ = ಶೋಭಿಸುವುದಿಲ್ಲ. ಅತಃ = ಆದ್ದರಿಂದ, ಜಗತ್ = ಜಗತ್ತು, ಅನಾರೋಪಿತಮೇವ ಆಸೀತ್ = ಅನಾರೋಪಿತವೇ ಆಯಿತು. ನ ಸಂಶಯಃ = ಇದರಲ್ಲಿ ಸಂಶಯವಿಲ್ಲ.

**ಅನುವಾದ** - 'ಅಯಂ ಘಟಃ' ಎಂಬ ಜ್ಞಾನವು ಭ್ರಮ ಎಂಬುವ ವಾದವು ಅನುಭವಕ್ಕೆ ವಿರುದ್ಧವಾದುದರಿಂದಲೂ ಶೋಭಿಸುವುದಿಲ್ಲ. ವೃತ್ತಿಗೆ ಪರವಾದಿಗಳೇ ಭ್ರಮತ್ವವನ್ನು ಅಂಗೀಕಾರ ಮಾಡದಿರುವುದರಿಂದ ಅಹಮರ್ಥದ ಉಲ್ಲೇಖವಿಲ್ಲದಿರುವುದರಿಂದ, ಭ್ರಮವು ಚೈತನ್ಯರೂಪವೂ ಆಗದೇ ಇರುವುದರಿಂದ, 'ಅಯಂ ಘಟಃ' ಎಂಬುದು ಭ್ರಮವೇ ಅಲ್ಲ. ಆದ್ದರಿಂದ ಘಟಾದಿಪ್ರಪಂಚವು ಅನಾರೋಪಿತವೆಂದೇ ಸಿದ್ಧವಾಗುತ್ತದೆ. ಈ ವಿಷಯದಲ್ಲಿ ಸಂಶಯವಿಲ್ಲ.

ಘಟೋಹಮಿತಿ ಯಾ ಭ್ರಾಂತಿಃ ಸಾ ಪಶೋಶ್ಚ ನ ದೃಶ್ಯತೇ ।
ನಾಹಂ ಘಟ ಇತಿ ಜ್ಞಾನಂ ಮೂಢಸ್ಯಾಪ್ಯಸ್ತಿ ಚೇತಸಿ ।
ಕಿಂ ಬ್ರಹ್ಮ ಮೂಢತೋ ಮೂಢಂ ಘಟೋಽಹಮಿತಿ ಯಸ್ಯ ಧೀಃ ।।೬೧೯।।

**ಅರ್ಥ**- ಘಟೋಹಮಿತಿ = ನಾನು ಘಟ ಎಂಬ, ಯಾ ಭ್ರಾಂತಿಃ = ಯಾವ ಭ್ರಾಂತಿಯು ನಿನ್ನಿಂದ ಸ್ವೀಕರಿಸಲ್ಪಡುತ್ತದೆಯೋ, ಸಾ = ಆ ಭ್ರಾಂತಿಯು, ಪಶೋಶ್ಚ = ಪಶುವಿಗೂ ಸಹ, ನ ದೃಶ್ಯತೇ = ಕಂಡುಬರುವುದಿಲ್ಲ, ಮೂಢಸ್ಯಾಪಿ = ಜ್ಞಾನಹೀನನಾದವನ, ಚೇತಸಿ = ಮನಸ್ಸಿನಲ್ಲಿಯೂ ಸಹ, ನಾಹಂ ಘಟಃ ಇತಿ ಜ್ಞಾನಂ = ನಾನು ಘಟವಲ್ಲ ಎಂಬ ಜ್ಞಾನವು, ಅಸ್ತಿ = ಇದೆ. ಯಸ್ಯ = ಯಾವ ಬ್ರಹ್ಮನಿಗೆ, ಘಟೋಹಮಿತಿ ಧೀಃ = ನೀನು ಅಯಂ ಘಟಃ ಎಂಬ ಜ್ಞಾನವನ್ನು ಒಪ್ಪುತ್ತೀಯೋ ಅಂತಹ, ಬ್ರಹ್ಮ = ಬ್ರಹ್ಮನು, ಮೂಢತಃ= ಮೂಢ ಮನುಷ್ಯನಿಗಿಂತಲೂ, ಮೂಢಂ ಕಿಂ = ಮೂಢವಾದ ವಸ್ತುವೇನು?

**ಅನುವಾದ - ನಾನು ಘಟ ಎಂಬ ಭ್ರಾಂತಿಯು ಪಶುವಿಗೆ ಸಹ ಇರುವುದಿಲ್ಲ. ಅತ್ಯಂತ ಮೂಢನಾದವನ ಮನಸ್ಸಿನಲ್ಲಿಯೂ ನಾನು ಘಟವಲ್ಲ ಎಂಬ ಜ್ಞಾನವು ಇದೆ. ನೀನು ಯಾವ ಬ್ರಹ್ಮನಿಗೆ ಅಹಂ ಘಟಃ ಎಂಬ ಭ್ರಾಂತಿಯನ್ನು ಒಪ್ಪುತ್ತೀಯೋ ಆ ಬ್ರಹ್ಮನು ಮೂಢಮನುಷ್ಯನಿಗಿಂತ ಮೂಢನಾದವನೇನು?**

**ಪಶೋರಪ್ಯಹಮಿತ್ಯಸ್ತಿ ಸದಾ ಜ್ಞಾನಮನಾಕುಲಮ್ ।**
**ಘಟಬ್ರಹ್ಮ ಸದಾಽಜ್ಞಾನಕಲಂಕಾದ್ವಿಕಲಂ ಕಿಲ ॥ ೬೨೦ ॥**

**ಅರ್ಥ-** ಪಶೋರಪಿ = ಪಶುವಿಗೂ ಕೂಡ, ಸದಾ = ಯಾವಾಗಲೂ, ಅನಾಕುಲಂ = ನಿರ್ಬಾಧವಾದ, ಅಹಮಿತಿ ಜ್ಞಾನಂ = ಅಹಂ ಎಂಬ ಜ್ಞಾನವು, ಅಸ್ತಿ = ಇದೆ, ಘಟಬ್ರಹ್ಮ = ಘಟಭ್ರಮರೂಪವಾದ ಬ್ರಹ್ಮಚೈತನ್ಯವು, ಅಜ್ಞಾನಕಲಂಕಾತ್ = ಅಜ್ಞಾನರೂಪವಾದ ದೋಷದಿಂದ, ಸದಾ = ಯಾವಾಗಲೂ, ವಿಕಲಂ ಕಿಲ = ಜ್ಞಾನರೂಪವಾದ ಕಲೆಯನ್ನು ಹೊಂದಿಲ್ಲವಷ್ಟೇ?

**ಅನುವಾದ - ಪಶುವಿಗೂ ಸಹ ಯಾವಾಗಲೂ ನಿರ್ಬಾಧವಾದ ಅಹಂ ಎಂಬ ಜ್ಞಾನವು ಇದೆ. ನೀನು ಘಟಭ್ರಮವೆಂದು ಅಂಗೀಕರಿಸುವ ಘಟಾಧಿಷ್ಠಾನಬ್ರಹ್ಮನು ಯಾವಾಗಲೂ ಅಜ್ಞಾನದಿಂದ ಆವೃತನಾಗಿ ಜ್ಞಾನಕಲಾಶೂನ್ಯನಾಗಿರುವನಷ್ಟೇ?**

ವಿವರಣೆ - ಪಶುವಿಗಾದರೂ ಯಾವಾಗಲೂ ಅಹಂ ಎಂಬ ಜ್ಞಾನವಿದೆ. ಆದರೆ, ಘಟಾಧಿಷ್ಠಾನಚೈತನ್ಯನಾದ ಬ್ರಹ್ಮನಿಗೆ ಯಾವಾಗಲೂ ಅಹಂ ಎಂಬ ಜ್ಞಾನವಿಲ್ಲ. ಅಂತಃಕರಣವೃತ್ತಿಯಿಂದ ಅಜ್ಞಾನಾವರಣವು ನಾಶವಾದಾಗ ಮಾತ್ರ ಘಟಪ್ರಕಾಶವುಂಟಾಗುವುದರಿಂದ ಉಳಿದಂತೆ ಘಟಪ್ರಕಾಶವಿಲ್ಲದಿರುವುದರಿಂದ ಘಟಾಧಿಷ್ಠಾನಚೈತನ್ಯರೂಪನಾದ ಬ್ರಹ್ಮನಿಗೆ ಯಾವಾಗಲೂ ಅಹಂ ಎಂಬ ಜ್ಞಾನವಿಲ್ಲದೆ, ಅವನು ಪಶುವಿಗಿಂತಲೂ ಕಡೆಯಾದವನು ಎಂದಾಗುತ್ತದೆ ಎಂದು ಅಭಿಪ್ರಾಯ.

**ಪಶುಶ್ಚ ಸ್ವಗೃಹಂ ವೇತ್ತಿ ವತ್ಸಂ ವನತೃಣಾದಿಕಮ್ ।**
**ಘಟಬ್ರಹ್ಮ ಘಟಂ ವೇತ್ತಿ ನ ಪಟಂ ವೇತ್ತಿ ಕರ್ಹಿಚಿತ್ ।**
**ಪಟಬ್ರಹ್ಮ ಪಟಂ ವೇತ್ತಿ ನಾನ್ಯತ್ ಕಿಲ ಕದಾಚನ ॥ ೬೨೧ ॥**

**ಅರ್ಥ-** ಪಶುಶ್ಚ = ಪಶುವೂ ಸಹ, ಸ್ವಗೃಹಂ = ತನ್ನ ಮನೆಯನ್ನು, ವತ್ಸಂ = ತನ್ನ ಕರುವನ್ನು, ವನತೃಣಾದಿಕಂ = ವನತೃಣ ಮೊದಲಾದವುಗಳನ್ನು, ವೇತ್ತಿ = ತಿಳಿಯುತ್ತದೆ, ಘಟಬ್ರಹ್ಮ = ಘಟಭ್ರಮರೂಪನಾದ ಬ್ರಹ್ಮನು, ಘಟಂ ವೇತ್ತಿ = ಘಟವನ್ನು ತಿಳಿಯುತ್ತಾನೆ, ಕರ್ಹಿಚಿತ್ = ಯಾವ ಕಾರಣದಿಂದಲೂ, ಪಟಂ ನ ವೇತ್ತಿ = ಪಟವನ್ನು ತಿಳಿಯುವುದಿಲ್ಲ. ಪಟಬ್ರಹ್ಮ = ಪಟಭ್ರಮರೂಪನಾದ ಪರಬ್ರಹ್ಮನೂ ಸಹ, ಪಟಂ ವೇತ್ತಿ = ಪಟವನ್ನು

ತಿಳಿಯುತ್ತಾನೆ, ಅನ್ಯತ್ = ಬೇರೆ ವಸ್ತುವನ್ನು, ಕದಾಚನ = ಯಾವಾಗಲೂ, ನ ಕಿಲ = ತಿಳಿಯುವುದಿಲ್ಲವಷ್ಟೇ ?

**ಅನುವಾದ -** ಪಶುವಿಗೂ ಸಹ ತನ್ನ ಕೊಟ್ಟಿಗೆಯ, ತನ್ನ ಕರುವಿನ ಮತ್ತು ಕಾಡಿನ ಮತ್ತು ತನ್ನ ಆಹಾರದ ಜ್ಞಾನವಿರುತ್ತದೆ. ಘಟಬ್ರಹ್ಮನು ಘಟವನ್ನು ಮಾತ್ರ ತಿಳಿಯುತ್ತಾನೆ. ಪಟವನ್ನು ಯಾವ ಕಾರಣದಿಂದಲೂ ತಿಳಿಯುವುದಿಲ್ಲ. ಪಟಬ್ರಹ್ಮನಾದರೋ ಪಟವನ್ನು ತಿಳಿಯುತ್ತಾನೆ, ಬೇರೆ ವಸ್ತುವನ್ನು ಯಾವಾಗಲೂ ತಿಳಿಯುವುದಿಲ್ಲವಷ್ಟೇ ?

**ಭಾವವಿಲಾಸಿನೀ–** ಪರಪ್ರಕ್ರಿಯಾಯಾ ಅನಾನುಭವಿಕತ್ವಮೇವ ಪ್ರಪಂಚಯತಿ ॥ **ಘಟೋऽಹ-ಮಿತ್ಯಾರಭ್ಯದೋಷೇ ಭೀತಿಃ ಕಥಂ ನ ತ ಇತ್ಯಂತೇನ ಗ್ರಂಥೇನ । ಯಸ್ಯ ಬ್ರಹ್ಮಣಃ ॥ ೬೧೯-೬೨೧ ॥**

**ವಿವರಣೆ -** ಪರಪ್ರಕ್ರಿಯೆಯು ಅನುಭವವಿರುದ್ಧವಾದುದೆಂದು 618ನೇ ಶ್ಲೋಕದಿಂದ ಆರಂಭಿಸಿ 628ನೇ ಶ್ಲೋಕದವರೆಗೂ ಉಪಪಾದನೆ ಮಾಡುತ್ತಾರೆ. ಪಶುವಿಗೆ ತನ್ನಜ್ಞಾನವಿರುವುದಲ್ಲದೆ, ತನ್ನ ವಾಸಸ್ಥಾನ ಮೊದಲಾದ ಇತರ ವಸ್ತುಗಳ ಜ್ಞಾನವೂ ಇರುತ್ತದೆ. ಆದರೆ, ಘಟಭ್ರಮರೂಪವಾದ ಬ್ರಹ್ಮಚೈತನ್ಯನು ಘಟವನ್ನು ಬಿಟ್ಟು ಬೇರೇ ಏನನ್ನೂ ತಿಳಿಯುವುದಿಲ್ಲವೆಂದು ಅಂಗೀಕರಿಸಿದರೆ, ಆ ಬ್ರಹ್ಮನು ಪಶುವಿಗಿಂತ ಕಡೆಯಾದವನು ಎಂದು ಅಭಿಪ್ರಾಯ.

ತತ್ರ ತತ್ರ ಸ್ಥಿತಂ ಬ್ರಹ್ಮ ತಂ ತಮರ್ಥಂ ಕಿಲೋಲ್ಲಿಖೇತ್ ।
ನೈವಾನ್ಯದುಲ್ಲಿಖೇತ್ ಸ್ವಾರ್ಥೋಲ್ಲೇಖನಂ ಚ ನ ಸರ್ವದಾ ॥ ೬೨೨ ॥

ಸ್ವಯೋಗ್ಯಬಹುವೇತೃತ್ವಂ ಬಾಲಾನಾಂ ಚ ಸದೈವ ಹಿ ।
ಕಿಂ ಬ್ರಹ್ಮ ಸರ್ವತಃ ಶ್ರೇಷ್ಠಂ ಬಾಲಾದಪಿ ಚ ಬಾಲಿಶಮ್ ॥ ೬೨೩ ॥

**ಅರ್ಥ-** ತತ್ರ ತತ್ರ = ಅಲ್ಲಲ್ಲಿ, ಸ್ಥಿತಂ = ಇರುವ, ಬ್ರಹ್ಮ = ಬ್ರಹ್ಮನು, ತಂ ತಮರ್ಥಂ = ಆಯಾ ವಸ್ತುಗಳನ್ನು, ಉಲ್ಲಿಖೇತ್ ಕಿಲ = ಪ್ರಕಾಶಿಸುತ್ತಾನಷ್ಟೇ ? ಅನ್ಯತ್ = ಇನ್ನೊಂದು ವಸ್ತುವನ್ನು, ನೈವ ಉಲ್ಲಿಖೇತ್ = ಎಂದೂ ಪ್ರಕಾಶಿಸುವುದಿಲ್ಲ. ಸ್ವಾರ್ಥೋಲ್ಲೇಖನಂ ಚ = ತನ್ನ ಉಲ್ಲೇಖನವನ್ನು, ಸರ್ವದಾ = ಯಾವಾಗಲೂ, ನ = ಮಾಡುವುದಿಲ್ಲ.

ಬಾಲಾನಾಂ ಚ = ಬಾಲಕರಿಗೂ ಕೂಡ, ಸದೈವ = ಯಾವಾಗಲೂ, ಸ್ವಯೋಗ್ಯಬಹುವೇತೃತ್ವಂ = ತಮಗೆ ಯೋಗ್ಯವಾದ ಅನೇಕ ವಿಷಯಗಳ ಜ್ಞಾನವು , ಹಿ = ಇರುವುದಷ್ಟೇ, ಸರ್ವತಃ ಶ್ರೇಷ್ಠಂ = ಎಲ್ಲಾ ವಸ್ತುಗಳಿಗಿಂತಲೂ ಉತ್ತಮವಾದ, ಬ್ರಹ್ಮ = ಬ್ರಹ್ಮನು, ಬಾಲಾದಪಿ = ಬಾಲಕರಿಗಿಂತಲೂ, ಬಾಲಿಶಂ ಕಿಂ = ಇನ್ನೂ ಹೆಚ್ಚು ಬಾಲಕನಾದವನೇನು?

**ಅನುವಾದ** - ಅಲ್ಲಲ್ಲಿ ಆಯಾ ಪದಾರ್ಥಗಳ ಆರೋಪಕ್ಕೆ ಅಧಿಷ್ಠಾನವಾಗಿರುವ ಬ್ರಹ್ಮನು ಆಯಾ ಪದಾರ್ಥಗಳನ್ನು ಮಾತ್ರ ಉಲ್ಲೇಖಿಸುತ್ತಾನೆ. ಇನ್ನೊಂದು ಪದಾರ್ಥವನ್ನು ಉಲ್ಲೇಖಿಸುವುದಿಲ್ಲ. ತನ್ನ ಸ್ವರೂಪವನ್ನು ಯಾವಾಗಲೂ ಎಂದೂ ಉಲ್ಲೇಖಿಸುವುದಿಲ್ಲ. ಬಾಲಕರಿಗೂ ಕೂಡ ತಮಗೆ ಯೋಗ್ಯವಾದ ಅನೇಕ ವಿಷಯದ ಜ್ಞಾನವು ಇರುತ್ತದೆ. ಸರ್ವೋತ್ತಮನಾದ ಬ್ರಹ್ಮನು ಬಾಲಕರಿಗಿಂತಲೂ ಬಾಲಿಶನೇನು?

**ಭಾವವಿಲಾಸಿನೀ**– ತತ್ರ ತತ್ರ ಸ್ಥಿತಂ ತತ್ತತ್ಪದಾರ್ಥಾಧಿಷ್ಠಾನತಯಾ ಸ್ಥಿತಮ್ । ಸ್ವಾರ್ಥೋಲ್ಲೇಖಿನಂ ಸ್ವಾರ್ಥಭೂತಘಟಾದ್ಯುಲ್ಲೇಖಿನಮ್ ॥ ೬೨೨-೬೨೩ ॥

**ವಿವರಣೆ** - 'ಅಯಂ ಘಟಃ' 'ಅಯಂ ಪಟಃ' ಮೊದಲಾದ ಭ್ರಮವು ಬ್ರಹ್ಮರೂಪವಾಗಿದೆಯಷ್ಟೇ? 'ಅಯಂ ಘಟಃ' ಎಂಬ ಬ್ರಹ್ಮರೂಪವಾದ ಭ್ರಮವು ಘಟವನ್ನು ಮಾತ್ರ ಉಲ್ಲೇಖಿಸುತ್ತದೆ. ತನ್ನ ಸ್ವರೂಪವನ್ನು ಎಂದೂ ಉಲ್ಲೇಖಿಸುವುದಿಲ್ಲ. ಏಕೆಂದರೆ, ಇಂತಹ ಸ್ಥಳಗಳಲ್ಲಿ ಎಲ್ಲಿಯೂ ಅಹಂ ಎಂದು ತೋರುವುದಿಲ್ಲ. ಆದ್ದರಿಂದ ಸರ್ವೋತ್ತಮವಾದ ಬ್ರಹ್ಮವಸ್ತುವು ಬಾಲಕರಿಗಿಂತಲೂ ಕಡೆಯಾದುದು ಎಂಬ ಆಪತ್ತಿ ಉಂಟಾಗುತ್ತದೆ ಎಂದು ಅಭಿಪ್ರಾಯ.

**ತುಚ್ಛಾನಾಂ ಪಶುಪಕ್ಷ್ಯಾದಿಜೀವಾನಾಂ ಕೃಪಯಾ ಕಿಲ ।**
**ತಸ್ಯಾಜ್ಞಾನಂ ವಿನಾಶ್ಯಂ ಸ್ಯಾತ್ ತದೋನ್ಮಿಷತಿ ನಾನ್ಯದಾ ॥ ೬೨೪ ॥**

**ಅರ್ಥ**- ತುಚ್ಛಾನಾಂ = ಉಪೇಕ್ಷಣೀಯರಾದ, ಪಶುಪಕ್ಷ್ಯಾದಿಜೀವಾನಾಂ = ಪಶುಪಕ್ಷಿ ಮೊದಲಾದ ಜೀವರ, ಕೃಪಯಾ = ಅನುಗ್ರಹದಿಂದ, ತಸ್ಯ = ಆ ಬ್ರಹ್ಮನ, ಅಜ್ಞಾನಂ = ಅಜ್ಞಾನವು, ವಿನಾಶ್ಯಂ ಸ್ಯಾತ್ ಕಿಲ = ನಾಶವನ್ನು ಹೊಂದುವುದಷ್ಟೇ? ತದಾ = ಆಗ ಮಾತ್ರ ಬ್ರಹ್ಮನು, ಉನ್ಮಿಷತಿ = ಪ್ರಕಾಶಿಸುತ್ತಾನೆ, ಅನ್ಯದಾ ನ = ಬೇರೆ ಸಮಯದಲ್ಲಿ ಪ್ರಕಾಶಿಸುವುದಿಲ್ಲ.

**ಅನುವಾದ** - ನೀಚವಾದ ಪಶುಪಕ್ಷಿ ಮೊದಲಾದ ಜೀವರ ಕೃಪೆಯಿಂದ ಬ್ರಹ್ಮನ ಅಜ್ಞಾನವು ನಾಶವನ್ನು ಹೊಂದಬೇಕಷ್ಟೇ? ಆಗ ಮಾತ್ರ ಅವನು ಪ್ರಕಾಶಿಸಿ ಆಯಾ ಅರ್ಥಗಳನ್ನು ಪ್ರಕಾಶಿಸುತ್ತಾನೆ. ಬೇರೆ ಸಮಯದಲ್ಲಿ ಪ್ರಕಾಶಿಸುವುದಿಲ್ಲ.

**ವಿವರಣೆ** - ಬ್ರಹ್ಮನು ಪ್ರಕಾಶಿಸಬೇಕಾದರೆ, ಅಜ್ಞಾನನಾಶವಾಗಬೇಕು. ಅಜ್ಞಾನ ನಾಶವು ಅಂತಃಕರಣವೃತ್ತಿಯಿಂದಲೇ ಆಗುತ್ತದೆ. ಅಜ್ಞಾನನಾಶವಾಗದಿದ್ದರೆ, ಬ್ರಹ್ಮನು ಪ್ರಕಾಶಿಸುವುದಿಲ್ಲ. ಆದ್ದರಿಂದ ಬ್ರಹ್ಮನು ಪ್ರಕಾಶಿಸಬೇಕಾದರೆ, ಪಶುಪಕ್ಷಿಗಳ ಅಂತಃಕರಣವೃತ್ತಿಯನ್ನು ಅವಲಂಬಿಸಬೇಕಾದ ದುರ್ಭರ ಪ್ರಸಂಗವು ಬರುತ್ತದೆ ಎಂದು ಅಭಿಪ್ರಾಯ.

**ಜಡೈವ ಮಾನಸೀವೃತ್ತಿರ್ಜಡಾರ್ಥವಿಷಯಾ ಸತೀ ।**
**ತದಜ್ಞಾನಂ ತಿರಸ್ಕುರ್ಯಾತ್ ಸ್ವಚ್ಛಾ ನ ಬ್ರಹ್ಮಚಿತ್ ಕಿಲ ॥ ೬೨೫ ॥**

**ಅರ್ಥ-** ಜಡೈವ = ಜಡವಾದ, ಮಾನಸೀವೃತ್ತಿಃ = ಅಂತಃಕರಣ ವೃತ್ತಿಯೇ, ಜಡಾರ್ಥವಿಷಯಾ ಸತೀ = ಜಡವಾದ ಘಟಾದಿಪದಾರ್ಥಗಳ ವಿಷಯಕವಾಗಿ, ತದಜ್ಞಾನಂ = ಘಟಾಧಿಷ್ಠಾನಬ್ರಹ್ಮಾಜ್ಞಾನವನ್ನು, ತಿರಸ್ಕುರ್ಯಾತ್ = ನಾಶವನ್ನು ಮಾಡುತ್ತದೆ, ಸ್ವಚ್ಛಾ = ನಿರ್ದುಷ್ಟವಾದ, ಬ್ರಹ್ಮಚಿತ್ = ಬ್ರಹ್ಮಚೈತನ್ಯವು, ನ ಕಿಲ = ಬ್ರಹ್ಮಾಜ್ಞಾನವನ್ನು ನಾಶಮಾಡುವುದಿಲ್ಲವಷ್ಟೇ ?

**ಅನುವಾದ -** ಜಡವಾದ ಅಂತಃಕರಣವೃತ್ತಿಯೇ ಜಡವಾದ ಘಟಾದಿ ವಿಷಯಕವಾಗಿ, ಘಟಾಧಿಷ್ಠಾನಬ್ರಹ್ಮಚೈತನ್ಯಾವರಕವಾದ ಅಜ್ಞಾನವನ್ನು ನಾಶಮಾಡುತ್ತದೆ. ನಿರ್ದುಷ್ಟವಾದ ಬ್ರಹ್ಮಚೈತನ್ಯವು ಆ ಅಜ್ಞಾನವನ್ನು ನಾಶಮಾಡುವುದಿಲ್ಲವಷ್ಟೇ?

**ಭಾವವಿಲಾಸಿನೀ–** ತದಜ್ಞಾನಂ ಬಹ್ಮಾಜ್ಞಾನಮ್ ॥ ೬೨೫ ॥

ವಿವರಣೆ - ಜಡವಿಷಯಕವಾದ, ಜಡವಾದ, ಅಂತಃಕರಣವೃತ್ತಿಗೂ ಅಜ್ಞಾನನಾಶಕತ್ವವಿದೆ. ನಿರ್ದುಷ್ಟವಾದ ಬ್ರಹ್ಮಚೈತನ್ಯಕ್ಕೆ ಮಾತ್ರ ಅಜ್ಞಾನನಾಶಕತ್ವವಿಲ್ಲವೆಂಬುದು ಹಾಸ್ಯಾಸ್ಪದ ಎಂದು ಅಭಿಪ್ರಾಯ.

**ಶುಕಾದಯೋ ಯಂ ಪ್ರಪನ್ನಾಃ ಸ ಪ್ರಪನ್ನೋ ಜಡಂ ಕಿಲ ।**
**ಅಹೋ ಜಡಸ್ಯ ವಿಜ್ಞಾನಾದಜಡಾಜ್ಞಾನಭೀರ್ಭವೇತ್ ।**
**ಅಜಡಂ ತು ದೃಢಜ್ಞಾನಂ ನಾಜ್ಞಾನಂ ಭೀಷಯೇತ್ ಕಿಲ ॥ ೬೨೬ ॥**

**ಅರ್ಥ-** ಶುಕಾದಯಃ = ಶುಕ ಮೊದಲಾದ ಯೋಗಿಗಳು, ಯಂ = ಯಾವ ಬ್ರಹ್ಮನನ್ನು, ಪ್ರಪನ್ನಾಃ = ಆಶ್ರಯಿಸುತ್ತಾರೆಯೋ, ಸಃ= ಆ ಬ್ರಹ್ಮನು, ಜಡಂ = ಜಡವನ್ನು, ಪ್ರಪನ್ನಃ ಕಿಲ = ಆಶ್ರಯಿಸಬೇಕಷ್ಟೇ ? ಜಡಸ್ಯ = ಜಡವಾದ ಘಟಾದಿಗಳ, ವಿಜ್ಞಾನಾತ್ = ಜ್ಞಾನದಿಂದ, ಅಜಡಾಜ್ಞಾನಭೀಃ = ಜಡವಲ್ಲದ ಚೈತನ್ಯರೂಪನಾದ ಬ್ರಹ್ಮನಿಗೆ ಆವರಕವಾದ ಜ್ಞಾನಕ್ಕೆ ಭಯವು, ಭವೇತ್ = ಉಂಟಾಗುತ್ತದೆ, ಅಹೋ = ಆಶ್ಚರ್ಯವು, ಅಜಡಂ = ಜಡವಲ್ಲದ, ದೃಢಜ್ಞಾನಂ ತು = ನಿತ್ಯವಾದ ಜ್ಞಾನವಾದರೋ, ಅಜ್ಞಾನಂ = ಅಜ್ಞಾನವನ್ನು, ನ ಭೀಷಯೇತ್ಕಿಲ = ಹೆದರಿಸುವುದಿಲ್ಲವಷ್ಟೇ ?

**ಅನುವಾದ -** ಶುಕಾದಿಯೋಗಿಗಳು ಯಾವ ಬ್ರಹ್ಮನನ್ನು ಆಶ್ರಯಿಸಿದ್ದಾರೆಯೋ, ಆ ಬ್ರಹ್ಮನು ಜಡವನ್ನು ಆಶ್ರಯಿಸಿದ್ದಾನಷ್ಟೆ? ಜಡದ ಜ್ಞಾನದಿಂದ ಅಜಡನಾದ ಬ್ರಹ್ಮನ ಅಜ್ಞಾನಕ್ಕೆ ಭಯವುಂಟಾಗುತ್ತದೆ ಎಂಬುದು ಆಶ್ಚರ್ಯವು. ಜಡವಲ್ಲದ, ನಿತ್ಯವಾದ,

**ಬ್ರಹ್ಮರೂಪವಾದ ಜ್ಞಾನವು ಅಜ್ಞಾನವನ್ನು ಹೆದರಿಸುವುದಿಲ್ಲ (ನಾಶಮಾಡು ವುದಿಲ್ಲ) ವಷ್ಟೇ?**

**ವಿವರಣೆ** - ಬ್ರಹ್ಮನು ತನ್ನ ಪ್ರಕಾಶದ ಸಲುವಾಗಿ ತನಗೆ ಆವರಕವಾದ ಅಜ್ಞಾನವನ್ನು ನಿವಾರಣೆ ಮಾಡುವ ಜಡವಾದ ಅಂತಃಕರಣವೃತ್ತಿಯನ್ನು ಅಪೇಕ್ಷಿಸುವುದರಿಂದ ಬ್ರಹ್ಮನು ಜಡವನ್ನು ಆಶ್ರಯಿಸಿದಂತಾಯಿತು. ಅನಿತ್ಯವಾದ ಜಡವಿಷಯಕಜ್ಞಾನವು ಬ್ರಹ್ಮಾಜ್ಞಾನಕ್ಕೆ ವಿರೋಧಿ. ಚೈತನ್ಯರೂಪವಾದ, ನಿತ್ಯವಾದ, ಬ್ರಹ್ಮಜ್ಞಾನವು ಬ್ರಹ್ಮಾಜ್ಞಾನಕ್ಕೆ ವಿರೋಧಿ ಯಲ್ಲವೆಂಬುದು ಹಾಸ್ಯಾಸ್ಪದವಾದ ಸಂಗತಿ ಎಂದು ಅಭಿಪ್ರಾಯ.

**ವೇದಾ ಏವ ಜ್ಞಾಪಯಂತಿ ನೇಂದ್ರಿಯಾಣೀತಿ ಯಂ ಶ್ರುತಿಃ ।**
**ಸ್ತೌತಿ ಬ್ರಹ್ಮಾದಿದೇವಾಶ್ಚ ನೇಕ್ಷಂತೇ ಯಂ ಸ್ವಚಕ್ಷುಷಾ ।**
**ಸ ಮೂಢೈಃ ಪಶುಪಕ್ಷ್ಯಾದ್ಯೈಶ್ಚಕ್ಷುಷಾ ದೃಶ್ಯತೇ ಕಿಲ ॥ ೬೨೭ ॥**

**ಅರ್ಥ**- ಯಂ = ಯಾವ ಬ್ರಹ್ಮನನ್ನು, ವೇದಾ ಏವ ಜ್ಞಾಪಯಂತಿ = ವೇದಗಳು ಮಾತ್ರ ತಿಳಿಸಿಕೊಡುತ್ತವೆ, ಇಂದ್ರಿಯಾಣಿ ನ = ಇಂದ್ರಿಯಗಳು ತಿಳಿಸಿಕೊಡುವುದಿಲ್ಲ. ಇತಿ = ಎಂಬುದಾಗಿ, ಶ್ರುತಿಃ = ಶ್ರುತಿಯು, ಸ್ತೌತಿ = ಸ್ತೋತ್ರಮಾಡುತ್ತದೆಯೋ, ಚ = ಮತ್ತು, ಯಂ = ಯಾವ ಬ್ರಹ್ಮನನ್ನು, ಬ್ರಹ್ಮಾದಿದೇವಾಃ = ಬ್ರಹ್ಮಾದಿ ದೇವತೆಗಳು, ಸ್ವಚಕ್ಷುಷಾ = ಕೇವಲ ತಮ್ಮ ಕಣ್ಣಿನಿಂದ, ನೇಕ್ಷಂತೇ = ನೋಡುವುದಿಲ್ಲವೋ, ಸಃ= ಅಂತಹ ಬ್ರಹ್ಮನು, ಮೂಢೈಃ = ಜ್ಞಾನಶೂನ್ಯರಾದ, ಪಶುಪಕ್ಷ್ಯಾದ್ಯೈಃ = ಪಶುಪಕ್ಷಿಮೊದಲಾದ ಪ್ರಾಣಿಗಳಿಂದ, ಚಕ್ಷುಷಾ = ಚಕ್ಷುಸ್ಸಿನಿಂದಲೇ, ದೃಶ್ಯತೇ ಕಿಲ = ನೋಡಲ್ಪಡುತ್ತಾನಷ್ಟೇ?

**ಅನುವಾದ - ಯಾವ ಬ್ರಹ್ಮನನ್ನು ವೇದಗಳು ಮಾತ್ರ ತಿಳಿಸಿಕೊಡುತ್ತವೆ, ಇಂದ್ರಿಯಗಳು ತಿಳಿಸಿಕೊಡುವುದಿಲ್ಲ ಎಂದು ಶ್ರುತಿಯು ಸ್ತೋತ್ರ ಮಾಡುತ್ತದೆಯೋ ಮತ್ತು ಯಾವ ಬ್ರಹ್ಮನನ್ನು ಬ್ರಹ್ಮಾದಿದೇವತೆಗಳು ಸಹ ಕೇವಲ ತಮ್ಮ ಚಕ್ಷುಸ್ಸಿನಿಂದ ನೋಡಲಾರರೋ, ಅಂತಹ ಬ್ರಹ್ಮನು ಜ್ಞಾನಹೀನವಾದ ಪಶುಪಕ್ಷಿ ಮೊದಲಾದ ಪ್ರಾಣಿಗಳಿಂದ ಕೇವಲ ಚಕ್ಷುಸ್ಸಿನಿಂದ ನೋಡಲ್ಪಡುತ್ತಾನಷ್ಟೇ?**

**ಶ್ರುತಿಸ್ಮೃತಿ ವಿರುದ್ಧೇಯಂ ಸರ್ವಾನುಭವಬಾಧಿತಾ ।**
**ಪ್ರಕ್ರಿಯಾ ವಿಕ್ರಿಯಾ ಕಸ್ಮಾದುರರೀಕ್ರಿಯತೇ ತ್ವಯಾ ॥ ೬೨೮ ॥**

**ಅರ್ಥ**- ಶ್ರುತಿಸ್ಮೃತಿ ವಿರುದ್ಧಾ= ಶ್ರುತಿ ಮತ್ತು ಸ್ಮೃತಿಗಳಿಗೆ ವಿರುದ್ಧವಾದ, ಅನುಭವ-ಬಾಧಿತಾ= ಅನುಭವ ಬಾಧಿತವಾದ, ಇಯಂ ಸರ್ವಾ ಪ್ರಕ್ರಿಯಾ = ಈ ನಿನ್ನ ಎಲ್ಲಾ

ಪ್ರಕ್ರಿಯೆಯು, ವಿಕ್ರಿಯಾ = ವಿಕೃತವಾದುದು, ತ್ವಯಾ = ನಿನ್ನಿಂದ ಆ ಪ್ರಕ್ರಿಯೆಯು, ಕಸ್ಮಾತ್ = ಯಾವ ಕಾರಣದಿಂದ, ಉರರೀಕ್ರಿಯತೇ = ಅಂಗೀಕರಿಸಲ್ಪಡುತ್ತದೆ?

**ಅನುವಾದ** - ಶ್ರುತಿಸ್ಮೃತಿವಿರುದ್ಧವಾದ ಮತ್ತು ಅನುಭವಬಾಧಿತವಾದ ಈ ನಿನ್ನ ಎಲ್ಲಾ ಪ್ರಕ್ರಿಯೆಯು ವಿಕ್ರಿಯೆಯೇ ಸರಿ. ಅದನ್ನು ನೀನು ಏಕೆ ಅಂಗೀಕರಿಸುತ್ತೀಯೇ?

ಕಿಂ ಬ್ರಹ್ಮಣಾऽಪರಾದ್ಧಂ ತೇ ನೀಚಾದಪಿ ಚ ನೀಚತಾಮ್ ।
ಯತ್ತಸ್ಯ ಸರ್ವದಾ ಬ್ರೂಷೇ ದೋಷೇ ಭೀತಿಃ ಕಥಂ ನ ತೇ ॥ ೬೨೯ ॥

**ಅರ್ಥ**- ಬ್ರಹ್ಮಣಾ = ಬ್ರಹ್ಮನಿಂದ, ತೇ = ನಿನಗೆ, ಕಿಂ ಅಪರಾದ್ಧಂ = ಯಾವ ಅಪರಾಧವು ಮಾಡಲ್ಪಟ್ಟಿತು? ಯತ್ = ಏಕೆಂದರೆ, ತಸ್ಯ = ಆ ಬ್ರಹ್ಮನಿಗೆ, ಸರ್ವದಾ = ಯಾವಾಗಲೂ, ನೀಚಾದಪಿ = ನೀಚವಸ್ತುವಿಗಿಂತಲೂ, ನೀಚತಾಂ = ನೀಚತ್ವವನ್ನು, ಬ್ರೂಷೇ = ನೀನು ಹೇಳುತ್ತೀಯೆ. ದೋಷೇ = ಇಂತಹ ದೋಷವು ಉಂಟಾಗುವಾಗ, ತೇ = ನಿನಗೆ, ಕಥಂ = ಹೇಗೆ, ಭೀತಿಃ ನ = ಭಯವು ಇಲ್ಲ?

**ಅನುವಾದ** - ನಿನಗೆ ಬ್ರಹ್ಮನು ಏನು ಅಪರಾಧವನ್ನು ಮಾಡಿದ್ದಾನೆ? ಏಕೆಂದರೆ, ನೀನು ಯಾವಾಗಲೂ ಅವನಿಗೆ ನೀಚ ವಸ್ತುವಿಗಿಂತಲೂ ನೀಚತ್ವವನ್ನು ಹೇಳುತ್ತಿದ್ದೀಯೆ. ಇಂತಹ ದೋಷವು ಉಂಟಾಗುವಾಗ, ನಿನಗೆ ಹೇಗೆ ಭಯ ಉಂಟಾಗುವುದಿಲ್ಲ?

**ಭಾವವಿಲಾಸಿನೀ**– ಜಡಂ ಮಾನಸಾಪರೋಕ್ಷಜ್ಞಾನಮ್ । ಪ್ರಪನ್ನಃ ಸ್ವಾಜ್ಞಾನನಿರ್ಹರಣಾಯಶರಣಂ ಪ್ರಾಪ್ತಃ ॥ ೬೨೬-೬೨೯ ॥

ನಮಸ್ತುಭ್ಯಂ ಭಗವತೇ ಬ್ರಹ್ಮಣೇ ಪರಮಾತ್ಮನೇ ।
ನ ಯತ್ರ ಶ್ರೂಯತೇ ಮಾಯಾ ಲೋಕದೃಷ್ಟಿವಿಕಲ್ಪನಾ ॥ ೬೩೦ ॥

ತ್ವಮಾದ್ಯಃ ಪುರುಷಃ ಸಾಕ್ಷಾದೀಶ್ವರಃ ಪ್ರಕೃತೇಃ ಪರಃ ।
ಮಾಯಾಂ ವ್ಯುದಸ್ಯ ಚಿಚ್ಛಕ್ತ್ಯಾ ಕೈವಲ್ಯೇ ಸ್ಥಿತ ಆತ್ಮನಿ ॥ ೬೩೧ ॥

ಇತಿ ಭಾಗವತೇ ಪ್ರೋಕ್ತಾ ಮಾಯಾ ಭ್ರಮಕರೀಶ್ವರೇ ।
ಯಸ್ಮಾನ್ನಿಷಿದ್ಧಾ ತೇನೇದಂ ಕಥಂ ಮಾಯಾಮಯಂ ಜಗತ್ ॥ ೬೩೨ ॥

**ಅರ್ಥ**- ಯತ್ರ = ಯಾವ ನಿನ್ನಲ್ಲಿ, ಲೋಕದೃಷ್ಟಿವಿಕಲ್ಪನಾ = ಲೋಕಕ್ಕೆ ವಿಪರೀತದೃಷ್ಟಿಯನ್ನು ಉಂಟು ಮಾಡುವ, ಮಾಯಾ = ಮಾಯೆಯು, ನ ಶ್ರೂಯತೇ = ಕೇಳಿ ಬರುವುದಿಲ್ಲವೋ ಅಂತಹ, ಭಗವತೇ = ಷಡ್ಗುಣೈಶ್ವರ್ಯಸಂಪನ್ನನಾದ, ಪರಮಾತ್ಮನೇ = ಪರಮಾತ್ಮನಾದ, ಬ್ರಹ್ಮಣೇ = ಬ್ರಹ್ಮನಾದ, ತುಭ್ಯಂ = ನಿನಗೆ, ನಮಃ = ನಮಸ್ಕಾರವು.

ತ್ವಮ್ = ನೀನು, ಆದ್ಯಃ ಪುರುಷಃ = ಸೃಷ್ಟಿಗಿಂತಲೂ ಮೊದಲು ಇರುವ ಪುರುಷ. ಸಾಕ್ಷಾದೀಶ್ವರಃ = ಅನನ್ಯಾಧೀನನಾಗಿ ಪ್ರಭುವಾಗಿದ್ದೀಯೆ. ಪ್ರಕೃತೇಃ ಪರಃ = ಪ್ರಕೃತಿಗಿಂತಲೂ ಉತ್ತಮನಾಗಿದ್ದೀಯೆ. ಚಿಚ್ಛಕ್ತ್ಯಾ = ನಿನ್ನ ಚೈತನ್ಯ ಶಕ್ತಿಯಿಂದ, ಮಾಯಾಂ = ಮಾಯೆಯನ್ನು, ವ್ಯುದಸ್ಯ = ತಿರಸ್ಕರಿಸಿ, ಕೈವಲ್ಯೇ = ಜಡಾಮಿಶ್ರಿತವಾದ, ಆತ್ಮನಿ = ನಿನ್ನ ಸ್ವರೂಪದಲ್ಲಿಯೇ, ಸ್ಥಿತಃ= ಇದ್ದೀಯೆ.

ಇತಿ = ಈ ರೀತಿಯಲ್ಲಿ, ಯಸ್ಮಾತ್ = ಯಾವ ಕಾರಣದಿಂದ, ಭಾಗವತೇ = ಭಾಗವತದಲ್ಲಿ, ಪ್ರೋಕ್ತಾ = ಲೋಕದೃಷ್ಟಿವಿಕಲ್ಪನಾ ಎಂಬ ಶಬ್ದದಿಂದ ಹೇಳಲ್ಪಟ್ಟ, ಭ್ರಮಕರೀ = ಭ್ರಮಜನಕವಾದ, ಮಾಯಾ = ಮಾಯೆಯು, ಈಶ್ವರೇ = ಈಶ್ವರನಲ್ಲಿ, ನಿಷಿದ್ಧಾ= ನಿಷೇಧಿಸಲ್ಪಟ್ಟಿದೆಯೋ, ತೇನ = ಆ ಕಾರಣದಿಂದ, ಇದಂ ಜಗತ್ = ಈ ಜಗತ್ತು, ಕಥಂ ಮಾಯಾಮಯಂ = ಹೇಗೆ ಮಾಯಾಮಯವಾಗುತ್ತದೆ?

**ಅನುವಾದ** - ಲೋಕಕ್ಕೆ ಭ್ರಾಂತಿಯನ್ನುಂಟು ಮಾಡುವ ಮಾಯೆಯು, ಯಾವ ನಿನ್ನಲ್ಲಿ ಕೇಳಿಬರುವುದಿಲ್ಲವೋ ಅಂತಹ ಷಡ್ಗುಣೈಶ್ವರ್ಯಸಂಪನ್ನನಾದ ಪರಮಾತ್ಮನಾದ ಬ್ರಹ್ಮನಾದ ನಿನಗೆ ನಮಸ್ಕಾರ.

ನೀನು ಸೃಷ್ಟಿಗಿಂತಲೂ ಮೊದಲು ಇರುವ ಪುರುಷ. ನೀನು ಅನನ್ಯಾಧೀನನಾದ ಈಶ್ವರ. ನೀನು ಪ್ರಕೃತಿಗಿಂತಲೂ ಶ್ರೇಷ್ಠನಾದವನು. ನಿನ್ನ ಚೈತನ್ಯಶಕ್ತಿಯಿಂದ ಮಾಯೆಯನ್ನು ತಿರಸ್ಕರಿಸಿ ಜಡಾಮಿಶ್ರಿತವಾದ ನಿನ್ನ ಸ್ವರೂಪದಲ್ಲಿಯೇ ನೆಲೆಸಿದ್ದೀಯೆ.

ಹೀಗೆ ಭಾಗವತದಲ್ಲಿ ಲೋಕದೃಷ್ಟಿವಿಕಲ್ಪನಾ ಎಂಬ ಶಬ್ದದಿಂದ ಹೇಳಲ್ಪಟ್ಟ ಭ್ರಮಜನಕವಾದ ಮಾಯೆಯು ಯಾವ ಕಾರಣದಿಂದ ಈಶ್ವರನಲ್ಲಿ ನಿಷೇಧಿಸಲ್ಪಟ್ಟಿದೆಯೋ, ಆ ಕಾರಣದಿಂದ ಈ ಜಗತ್ತು ಹೇಗೆ ಮಾಯಾ ಮಯವಾಗುತ್ತದೆ?

**ಭಾವವಿಲಾಸಿನೀ**—ಅರ್ಥಸನ್ನಿಕರ್ಷಜನ್ಯಾಪರೋಕ್ಷವೃತ್ತೇರಪರೋಕ್ಷವೃತ್ತೇಕನಿವರ್ತ್ಯಾಜ್ಞಾನಾವೃತಬ್ರಹ್ಮಚೈತನ್ಯಸ್ಯ ಚ ಪ್ರಾಗೇವಪೇಕ್ಷಿತತತ್ತದರ್ಥಾರೋಪರೂಪತ್ವಸ್ಯ ಯುಕ್ತಿವಿರುದ್ಧತ್ವಾದ್ವಿಶ್ವಂ ಸತ್ಯಮಿತ್ಯಾದಿಶ್ರುತಿವಿರುದ್ಧತ್ವಾಚ್ಚ ನ ಜಗತೋ ಮಿಥ್ಯಾತ್ವಮಿತ್ಯುಕ್ತವಮ್ । ಇದಾನೀಂ ಮಾಯಾಖ್ಯಾವಿದ್ಯಾಯಾ ಏವ ಸ್ಮೃತ್ಯಾ ಸ್ಪಷ್ಟಂ ಬ್ರಹ್ಮಣಿ ನಿಷೇಧಾತ್ ನ ಬ್ರಹ್ಮಚೈತನ್ಯಸ್ಯ ಜಗದಾರೋಪರೂಪತ್ವಮ್ । ನಾಪಿ ಜಗತೋ ಮಾಯಿಕತ್ವಾವಿದ್ಯಕತ್ವಾಪರಪರ್ಯಾಯಂ ಮಿಥ್ಯಾತ್ವಮಿತ್ಯಾಹ —ನಮಸ್ತುಭ್ಯಮಿತಿ ॥ ತತ್ರಾದ್ಯಂ ದಶಮಸ್ಕಂಧಸ್ಥಂ ವರುಣವಾಕ್ಯವಮ್ । ದ್ವಿತೀಯಂ ಪ್ರಥಮಸ್ಕಂಧಸ್ಥಮರ್ಜುನವಾಕ್ಯಮ್ । ಪ್ರೋಕ್ತಾ ಲೋಕದೃಷ್ಟಿರ್ವಿಕಲ್ಪನೇತಿ ವಾಕ್ಯಶೇಷೇಣ ಪ್ರೋಕ್ತಾ । ನಿಷಿದ್ಧಾ ನ ಯತ್ರ ಶ್ರೂಯತ ಇತಿ ನಿಷಿದ್ಧಾ। ಭಾಗವತ ಇತ್ಯೇತದತ್ರಾಪಿ ಸಂಬಧ್ಯತೇ । ಅಥವಾ ಪ್ರೋಕ್ತಾ ಬ್ರಹ್ಮಭ್ರಮಹೇತುತ್ವೇನ ಪರೇಣ ಪ್ರೋಕ್ತಾ ಭಾಗವತೇ ನಿಷಿದ್ಧೇತ್ಯೇವ ಯೋಜನಾ । ಮಾಯಾಮಯಮಿತ್ಯುಪಲಕ್ಷಣಮ್ ಆವಿದ್ಯಕಮಿತ್ಯಪಿ ದ್ರಷ್ಟವ್ಯಮ್ ॥ ೬೩೦-೬೩೨ ॥

ವಿವರಣೆ - ಅರ್ಥಸನ್ನಿಕರ್ಷಜನ್ಯವಾದ ಅಪರೋಕ್ಷವೃತ್ತಿಯು ಮತ್ತು ಅಪರೋಕ್ಷವೃತ್ತಿಯಿಂದ ಮಾತ್ರ ನಿವರ್ತ್ಯವಾದ ಅಜ್ಞಾನದಿಂದ ಆವೃತವಾದ ಬ್ರಹ್ಮಚೈತನ್ಯವು 'ಅಯಂ ಘಟಃ' ಎಂಬ ಆರೋಪಕ್ಕಿಂತಲೂ ಮೊದಲೇ ಇರುವುದರಿಂದ ವೃತ್ತಿಗೆ ಮತ್ತು ಅಂತಹ ಚೈತನ್ಯಕ್ಕೆ ಘಟಾರೋಪರೂಪತ್ವವು ಯುಕ್ತಿವಿರುದ್ಧವಾದುದರಿಂದಲೂ ಮತ್ತು 'ವಿಶ್ವಂ ಸತ್ಯಂ' ಮೊದಲಾದ ಶ್ರುತಿವಿರುದ್ಧವಾದುದರಿಂದಲೂ ಜಗತ್ತಿಗೆ ಮಿಥ್ಯಾತ್ವವಿಲ್ಲವೆಂದು ಹಿಂದೆ ಹೇಳಿದ್ದಾರೆ. ಈಗ ಸ್ಮೃತಿಯು ಬ್ರಹ್ಮನಲ್ಲಿ ಮಾಯೆ ಎಂಬ ಹೆಸರಿನ ಅವಿದ್ಯೆಯನ್ನು ಸ್ಪಷ್ಟವಾಗಿ ನಿಷೇಧಿಸುವುದರಿಂದ ಬ್ರಹ್ಮಚೈತನ್ಯಕ್ಕೆ ಜಗದಾರೋಪರೂಪತ್ವವೂ ಇಲ್ಲ ಮತ್ತು ಜಗತ್ತಿಗೆ ಮಾಯಿಕತ್ವ ಅಥವಾ ಆವಿದ್ಯಕತ್ವರೂಪವಾದ ಮಿಥ್ಯಾತ್ವವೂ ಇಲ್ಲ ಎಂದು ಇಲ್ಲಿ ಹೇಳುತ್ತಾರೆ. 'ನಮಸ್ತುಭ್ಯಂ' ಎಂಬುವುದು ಭಾಗವತ ದಶಮಸ್ಕಂಧದ ವರುಣನ ವಾಕ್ಯ. 'ತ್ವಮಾದ್ಯಃ' ಎಂಬುದು ಪ್ರಥಮಸ್ಕಂದದಲ್ಲಿರುವ ಅರ್ಜುನನ ವಾಕ್ಯ. ಸ್ಮೃತಿಯು ಸ್ಪಷ್ಟವಾಗಿ ಬ್ರಹ್ಮನಲ್ಲಿ ಮಾಯೆಯನ್ನು ನಿರಾಕರಿಸುವುದರಿಂದ ಈ ಜಗತ್ತು ಮಾಯಾಮಯವಲ್ಲ ಅಥವಾ ಅವಿದ್ಯಾಮಯವೂ ಅಲ್ಲ ಎಂದು ಅಭಿಪ್ರಾಯ.

ನ ಶ್ರೂಯತೇ ಇತಿ ಪ್ರಾಹ ಯತ್ ಸ್ವಯಂ ಸ್ಮೃತಿರೂಪಿಣೀ ।
ಸ್ವಶಕ್ತ್ಯಾ ತನ್ಮೃತಾಂ ಮಾಯಾಂ ಶ್ರುತಿಶಕ್ತ್ಯಾಽಪ್ಯಮೀಮರತ್ ॥ ೬೩೩ ॥

**ಅರ್ಥ-** ಯತ್ = ಯಾವ ಕಾರಣದಿಂದ, ಸ್ಮೃತಿರೂಪಿಣೀ = ಸ್ಮೃತಿರೂಪವಾದ ಭಾಗವತವಾಕ್ಯವು, ಸ್ವಯಂ = ತಾನೇ, ನ ಶ್ರೂಯತೇ = ಕೇಳಿ ಬರುವುದಿಲ್ಲ, ಇತಿ = ಎಂದು, ಪ್ರಾಹ = ಹೇಳಿತೋ, ತತ್ = ಆ ಕಾರಣದಿಂದ, ಸ್ವಶಕ್ತ್ಯಾ = ತನ್ನ ಶಕ್ತಿಯಿಂದಲೇ, ಮೃತಾಂ = ಕೊಲ್ಲಲ್ಪಟ್ಟ, ಮಾಯಾಂ = ಮಾಯೆಯನ್ನು, ಶ್ರುತಿಶಕ್ತ್ಯಾಪಿ = ಶ್ರುತಿಯ ಶಕ್ತಿಯಿಂದಲೂ, ಅಮೀಮರತ್ = ಕೊಂದುಹಾಕಿತು.

**ಅನುವಾದ** - ಸ್ಮೃತಿರೂಪವಾದ ಭಾಗವತವಾಕ್ಯವು 'ನ ಶ್ರೂಯತೇ' ಎಂದು ಹೇಳಿ ಯಾವ ಮಾಯೆಯನ್ನು ತಾನೇ ತನ್ನ ಶಕ್ತಿಯಿಂದಲೇ ನಿರಾಕರಿಸಿತೋ ಆ ಕಾರಣದಿಂದ ಶ್ರುತಿಯ ಶಕ್ತಿಯಿಂದಲೂ ನಿರಾಕರಿಸಿತು.

**ಭಾವವಿಲಾಸಿನೀ–** ಯತ್ ಯಸ್ಮಾತ್ । ತತ್ ತಸ್ಮಾತ್ । ಸರ್ವಾಪೇಕ್ಷಿತಪ್ರಮಾಣ ಭೂತಸ್ಮೃತಿರೂಪತ್ವಾತ್ ॥ ೬೩೩ ॥

ವಿವರಣೆ - 'ನ ಯತ್ರ ಶ್ರೂಯತೇ' ಎಂದು ಸ್ಮೃತಿಯು ಹೇಳುವುದರಿಂದ ಸ್ಮೃತಿಯು ತಾನೇ ನೇರವಾಗಿ ಮಾಯೆಯನ್ನು ನಿರಾಕರಿಸುತ್ತದೆ. 'ನ ಶ್ರೂಯತೇ' ಎಂಬ ಶಬ್ದಕ್ಕೆ ಶ್ರುತಿಗಳಲ್ಲಿ ಕೇಳಿಬರುವುದಿಲ್ಲ ಎಂದು ಅರ್ಥವಾದುದರಿಂದ ಶ್ರುತಿಯ ಶಕ್ತಿಯಿಂದಲೂ ಸ್ಮೃತಿವಾಕ್ಯವೇ ಮಾಯೆಯನ್ನು ಸಂಹಾರಮಾಡುತ್ತದೆ ಎಂದು ಅಭಿಪ್ರಾಯ.

**ಯದ್ವಾ ಚಿಚ್ಛಕ್ತಿನಿರ್ದಗ್ಧಮಾಯಾಶಂಕಾಸ್ಥಿಭಸ್ಮನೋಃ ।**
**ಉದ್ಧಾರಾಯ ಪ್ರಭೋಸ್ತಸ್ಯ ದಾಸ್ಯೌ ಮನ್ಯೇ ಶ್ರುತಿಸ್ಮೃತೀ ॥ ೬೩೪ ॥**

**ಅರ್ಥ-** ಯದ್ವಾ = ಅಥವಾ, ಚಿಚ್ಛಕ್ತಿನಿರ್ದಗ್ಧಮಾಯಾಶಂಕಾಸ್ಥಿಭಸ್ಮನೋಃ = ಬ್ರಹ್ಮನ ಚೈತನ್ಯಶಕ್ತಿಯಿಂದ ದಗ್ಧವಾದ ಮಾಯಾಶಂಕೆಯ ಅಸ್ಥಿ ಮತ್ತು ಭಸ್ಮಗಳನ್ನು, ಉದ್ಧಾರಾಯ= ತೆಗೆದುಹಾಕಲು (ತೆಗೆದುಹಾಕಿ ಶುದ್ಧಿಯನ್ನು ಮಾಡಲು), ಶ್ರುತಿಸ್ಮೃತೀ = ಶ್ರುತಿಸ್ಮೃತಿಗಳು, ತಸ್ಯ ಪ್ರಭೋಃ = ಆ ಪ್ರಭುವಿನ (ಪ್ರಭುವಿಗೆ) ದಾಸ್ಯೌ = ದಾಸಿಯರೆಂದು, ಮನ್ಯೇ= ತಿಳಿಯುತ್ತೇನೆ.

**ಅನುವಾದ -** ಅಥವಾ ಪ್ರಭುವಿನ ಚಿಚ್ಛಕ್ತಿಯಿಂದಲೇ ದಹಿಸಲ್ಪಟ್ಟ ಮಾಯಾಶಂಕೆಯ ಅಸ್ಥಿ ಮತ್ತು ಭಸ್ಮಗಳನ್ನು ತೆಗೆದುಹಾಕಲು ಪ್ರಭುವಾದ ಅವನಿಗೆ ಶ್ರುತಿಸ್ಮೃತಿಗಳು ದಾಸಿಯರಾಗಿರುತ್ತಾರೆ ಎಂದು ನನ್ನ ಅಭಿಪ್ರಾಯ.

**ಭಾವವಿಲಾಸಿನೀ–** ಪ್ರಾಕಾರಾಂತರೇಣಾಪಿ ಶ್ರುತಿಸ್ಮೃತ್ಯೋಃ ಸಂಗತಿಮಾಹ – **ಯದ್ವೇತಿ ॥** ಚಿಚ್ಛಕ್ತ್ಯಾ ಮಾಯಾಂ ವ್ಯುದಸ್ಯೇತ್ಯುಕ್ತತ್ವಾತ್ ಭಗವತಃ ಸ್ವರೂಪಭೂತಜ್ಞಾನಶಕ್ತ್ಯೈವ ಮಾಯಾಯಾ ಭಸ್ಮೀಕೃತತ್ವಾತ್ ನ ತನ್ನಿರಾಸಾಯ ಪ್ರಮಾಣಾಂತರಮಪೇಕ್ಷಿತಮ್ । ತರ್ಹಿ ಶ್ರುತಿಸ್ಮೃತ್ಯೋಃ ಕಿಂ ಕೃತ್ಯಮಿತ್ಯತ ಆಹ – **ಚಿಚ್ಛಕ್ತೀತಿ ॥** ಚಿಚ್ಛಕ್ತ್ಯಾ ನಿರ್ದಗ್ಧಾ ಯಾ ಮಾಯಾ ತಸ್ಯಾಃ ಮಾಯಿನಂ ತು ಮಹೇಶ್ವರಮಿತಿ ತದ್ಗ್ರಂಥೋಕ್ತಶಂಕಾ ಸೈವಾಸ್ಥಿ । ಶ್ರುತ್ಯರ್ಥಭ್ರಮಮೂಲತ್ವೇನೇಷತ್ಪ್ರಬಲತ್ವಾತ್ । ಸ್ವರೂಪಜ್ಞಾನಸ್ಯಾಜ್ಞಾನಾ- ವಿರೋಧಿತ್ವೇನ ಭಗವತ್ಯೇವ ಮಾಯಾ ವರ್ತತ ಇತಿ ಯಾ ಮಾಯಿನಾಂ ಶಂಕಾ ಸೈವ ಭಸ್ಮ । ಸ್ವಕಪೋಲಕಲ್ಪಿತತ್ವೇನಾತಿದುರ್ಬಲತ್ವಾತ್ । ನ ಯತ್ರ ಶ್ರೂಯತ ಇತಿ ಸ್ಮೃತೌ ತದುಪಾತ್ತಶ್ರುತೌ ಚ ಭ್ರಮಹೇತುಮಾಯಾಯಾ ಏವ ಭಗವತಿ ನಿವಾರಿತತ್ವೇನ ಸೃಷ್ಟ್ಯರ್ಥಂ ಜಗದುಪಾದಾನಪ್ರಕೃತಿಂ ಕುಲಾಲೋ ಮೃದಮಿವ ದೋರ್ಭ್ಯಾಂ ಗೃಹ್ಣತೋ ಭಗವತೋ ಮಾಯಿತ್ವೋಕ್ತೇಃ ಸೂಚಿತತ್ವೇನ ಪ್ರಾಥಮಿಕಶಂಕಾಯಾ ನಿರಸ್ತತ್ವಾತ್ ಮಾಯಾಂ ವ್ಯುದಸ್ಯೇತಿ ವಾಕ್ಯೇ ಸ್ವರೂಪಜ್ಞಾನಸ್ಯೈವಾಜ್ಞಾನವಿರೋಧಿತ್ವಕಥನೇನ ದ್ವಿತೀಯಶಂಕಾಯಾ ಅಪಿ ನಿರಸ್ತತ್ವಾದುದ್ಧಾರಾಯೇತ್ಯುಕ್ತಮ್ । ನಿವೃತ್ತರಜಸ್ಕಾಃ ಪಂಚ ಸ್ತ್ರಿಯಃ ಸಂಚಿನ್ವಂತೀತಿ ಗೃಹ್ಯೋಕ್ತೇಃ ಕರ್ತಾ ದಾಹೇ ಕೃತೇಽಪ್ಯಸ್ಥಿಸಂಚಯನಾದೇಃ ಸ್ತ್ರೀಕಾರ್ಯತ್ವಾದಿದಮುಕ್ತಮ್ । ಶ್ರುತಿತ್ವಸ್ಮೃತಿತ್ವಜಾತ್ಯಾ ದ್ವಯೋರಪೀತಿಹಾಸಪುರಾಣಃ ಪಂಚಮೋ ವೇದಾನಾಂ ವೇದ ಇತಿ ವಚನಾದಂತರ್ಭೇದವಿವಕ್ಷಯಾ ಪಂಚತಾಚೋಚಿತೇತಿ ಹೃದಯಮ್ । ಭಗವತಃ ಸರ್ವಜ್ಞತ್ವಾಖ್ಯಯುಕ್ತಿಶಕ್ತ್ಯೈವ ಮಾಯಾಽಭಾವೇ ಸಿದ್ಧೇಽಪಿ ದುರ್ಜನಶಂಕಾನಿರಾಸಾರ್ಥಮೇವ ಶ್ರುತಿಸ್ಮೃತ್ಯುದಾಹರಣಮಿತಿ ಭಾವಃ ॥ ೬೩೪ ॥

ವಿವರಣೆ - ಶ್ರುತಿಸ್ಮೃತಿಗಳಿಗೆ ಇನ್ನೊಂದು ರೀತಿಯಲ್ಲಿ ಸಂಗತಿಯನ್ನು ಹೇಳುತ್ತಾರೆ. 'ಮಾಯಾಂ ವ್ಯುದಸ್ಯ ಚಿಚ್ಛಕ್ತ್ಯಾ' ಎಂದು ಹೇಳಿರುವುದರಿಂದ ಭಗವಂತನ ಸ್ವರೂಪಭೂತವಾದ ಜ್ಞಾನದ ಶಕ್ತಿಯಿಂದಲೇ ಮಾಯೆಯು ಭಸ್ಮೀಕೃತವಾಗಿರುವುದರಿಂದ ಮಾಯೆಯನ್ನು

ನಿರಾಸಮಾಡಲು ಪ್ರಮಾಣಾಂತರವನ್ನು ಹುಡುಕಬೇಕಾಗಿಲ್ಲ. ಹಾಗಾದರೆ, ಶ್ರುತಿಸ್ಮೃತಿಗಳಿಗೆ ಏನು ಪ್ರಯೋಜನ ಎಂಬುದನ್ನು ಇಲ್ಲಿ ಹೇಳುತ್ತಾರೆ. 'ಮಾಯಿನಂ ತು ಮಹೇಶ್ವರಮ್' ಎಂಬ ಶ್ರುತಿಯ ತಾತ್ಪರ್ಯಜ್ಞಾನವಿಲ್ಲದೆ ಪ್ರಾಪ್ತವಾಗುವುದರಿಂದ ಮಾಯಾಶಂಕೆಯು ಅಸ್ಥಿರೂಪವಾದದ್ದು. ಏಕೆಂದರೆ, ಶ್ರುತ್ಯರ್ಥಭ್ರಾಂತಿಮೂಲಕವಾದುದರಿಂದ ಅದು ಸ್ವಲ್ಪ ಪ್ರಬಲವಾಗಿದೆ. ಸ್ವರೂಪಜ್ಞಾನವು ಅಜ್ಞಾನವಿರೋಧಿಯಲ್ಲವಾದ್ದರಿಂದ ಬ್ರಹ್ಮನಲ್ಲಿಯೇ ಮಾಯೆಯಿದೆ ಎಂಬ ಅದ್ವೈತಿಗಳ ಶಂಕೆಯು ಭಸ್ಮರೂಪವಾದುದು. ಏಕೆಂದರೆ, ಅದು ಕೇವಲ ಸ್ವಕಪೋಲಕಲ್ಪಿತವಾದುದರಿಂದ ಅತ್ಯಂತ ದುರ್ಬಲವಾಗಿದೆ. 'ನ ಯತ್ರ ಶ್ರೂಯತೇ' ಎಂಬ ಸ್ಮೃತಿಯಲ್ಲಿ ಮತ್ತು ಆ ಸ್ಮೃತಿಯು ಸೂಚಿಸಿದ ಶ್ರುತಿಯಲ್ಲಿ ಭ್ರಮಜನಕವಾದ ಮಾಯೆಯೇ ಭಗವಂತನಲ್ಲಿ ನಿಷಿದ್ಧವಾದುದರಿಂದ ಸೃಷ್ಟಿಯ ಸಲುವಾಗಿ ಕುಂಬಾರನು ಮಣ್ಣನ್ನು ತೆಗೆದುಕೊಂಡಂತೆ, ಜಗದುಪಾದಾನವಾದ ಪ್ರಕೃತಿಯನ್ನು ತನ್ನ ಕೈಯಲ್ಲಿ ತೆಗೆದುಕೊಳ್ಳುವ ಕಾರಣದಿಂದಲೇ ಭಗವಂತನು ಮಾಯೀ ಎಂದು ಹೇಳಲ್ಪಡುತ್ತಾನೆ ಎಂಬ ಅರ್ಥವು ಸೂಚಿತವಾಗುವುದರಿಂದ ಮೊದಲನೆಯ ಶಂಕೆಯು ನಿರಸ್ತವಾಗುತ್ತದೆ. 'ಮಾಯಾಂ ವ್ಯುದಸ್ಯ' ಎಂಬ ವಾಕ್ಯದಲ್ಲಿ ಸ್ವರೂಪಜ್ಞಾನಕ್ಕೇ ಅಜ್ಞಾನವಿರೋಧಿತ್ವವನ್ನು ಹೇಳುವುದರಿಂದ ಎರಡನೆಯ ಶಂಕೆಯು ನಿರಸ್ತವಾಗುತ್ತದೆ. ರಜೋದರ್ಶನಶೂನ್ಯರಾದ ಐದು ಸ್ತ್ರೀಯರು ಅಸ್ಥಿಸಂಚಯನವನ್ನು ಮಾಡುತ್ತಾರೆ ಎಂದು ಗೃಹ್ಯಸೂತ್ರಗಳಲ್ಲಿ ಹೇಳಲ್ಪಟ್ಟಿದೆ. ಕರ್ತೃವು ದಾಹವನ್ನು ಮಾಡಿದ ಮೇಲೆ ಸ್ತ್ರೀಯರು ಅಸ್ಥಿಸಂಚಯನಾದಿಕಾರ್ಯವನ್ನು ಮಾಡಬೇಕಾಗಿರುವುದರಿಂದ ಇಲ್ಲಿ ಹೀಗೆ ಹೇಳಲ್ಪಟ್ಟಿದೆ. ಶ್ರುತಿಸ್ಮೃತಿಗಳು ಎರಡೇ ಆದರೂ ಶ್ರುತಿಶಬ್ದಾರ್ಥವಾದ ನಾಲ್ಕುವೇದಗಳನ್ನೂ ಮತ್ತು ಸ್ಮೃತಿಶಬ್ದಾರ್ಥವಾದ ಇತಿಹಾಸ ಪುರಾಣರೂಪವಾದ ಐದನೆಯ ವೇದವನ್ನೂ ತೆಗೆದುಕೊಂಡರೆ ಒಟ್ಟು ಐದು ಸಂಖ್ಯೆಯನ್ನು ಹೊಂದುತ್ತವೆ. ಶ್ರುತಿ ಸ್ಮೃತಿ ಎಂಬ ಎರಡು ಶಬ್ದಗಳು ಸ್ತ್ರೀಲಿಂಗಾಂತವಾದುದರಿಂದ ಶ್ರುತಿಸ್ಮೃತಿಗಳನ್ನು ಐದು ದಾಸಿಯರು ಎಂದು ರೂಪಿಸುವುದು ಉಚಿತವಾಗುತ್ತದೆ. ಬ್ರಹ್ಮನ ಸರ್ವಜ್ಞತ್ವರೂಪವಾದ ಯುಕ್ತಿಯ ಶಕ್ತಿಯಿಂದಲೇ ಮಾಯೆಯ ಅಭಾವವು ಸಿದ್ಧವಾದರೂ ಸಹ ದುರ್ಜನರ ಶಂಕಾನಿರಾಸಕ್ಕೋಸ್ಕರವಾಗಿಯೇ ಶ್ರುತಿಸ್ಮೃತಿಗಳನ್ನು ಉದಾಹರಿಸಿದ್ದೇವೆ ಎಂದು ಅಭಿಪ್ರಾಯ.

ಬ್ರಹ್ಮಾಂಡಾಂತರ್ಬಹಿರ್ಭ್ರಾಂತಂ ಕಿಂ ಮಹಾಂತೋ ಮಹೇಶ್ವರಮ್ ।
ಸಂಮಾನಯಂತಿ ಧ್ಯಾಯಂತಿ ಶೃಣ್ವತೇ ಮನ್ವತೇ ಸದಾ ॥ ೬೩೫ ॥

ಐಕ್ಯೈಕಾರ್ಥಭ್ರಾಂತಿಮಂತಮಪಿ ಸಂತಃ ಸಭಾಂತರಾತ್ ।
ನಿಷ್ಕಾಸಯಂತಿ ನಿಂದಂತಿ ಕಿಂ ತೇ ಸ್ವಾಂತೇ ಸ್ಮರಂತಿ ತಂ ॥ ೬೩೬ ॥

**ಅರ್ಥ-** ಬ್ರಹ್ಮಾಂಡಾಂತರ್ಬಹಿರ್ಭ್ರಾಂತಂ = ಬ್ರಹ್ಮಾಂಡದ ಒಳಗೂ ಮತ್ತು ಹೊರಗೂ ಭ್ರಾಂತನಾದ, ಮಹೇಶ್ವರಂ = ಮಹೇಶ್ವರನನ್ನು, ಮಹಾಂತಃ = ಮಹಾತ್ಮರು,

ಸಂಮಾನಯಂತಿ ಕಿಂ = ಸಮ್ಮಾನವನ್ನು ಮಾಡುತ್ತಾರೆಯೇ? ಧ್ಯಾಯಂತಿ ಕಿಂ = ಧ್ಯಾನವನ್ನು ಮಾಡುತ್ತಾರೆಯೇ? ಶೃಣ್ವತೇ ಕಿಂ = ಶ್ರವಣವನ್ನು ಮಾಡುತ್ತಾರೆಯೇ? ಸದಾ ಮನ್ವತೇ ಕಿಂ = ಯಾವಾಗಲೂ ಮನನವನ್ನು ಮಾಡುತ್ತಾರೆಯೇ?

ಏಕೈಕಾರ್ಥಭ್ರಾಂತಿಮಂತಮಪಿ = ಒಂದೊಂದು ಅರ್ಥದ ಭ್ರಾಂತಿಯನ್ನು ಹೊಂದಿದವನನ್ನೂ ಕೂಡ, ಸಂತಃ = ಸಜ್ಜನರು, ಸಭಾಂತರಾತ್ = ಸಭೆಯ ಮಧ್ಯದಿಂದ, ನಿಷ್ಕಾಸಯಂತಿ = ಹೊರಗೆ ದೂಡುತ್ತಾರೆ, ನಿಂದಂತಿ = ನಿಂದಿಸುತ್ತಾರೆ, ತೇ = ಆ ಸಜ್ಜನರು, ಸ್ವಾಂತೇ = ತಮ್ಮ ಮನಸ್ಸಿನಲ್ಲಿ, ತಂ = ಆ ಭ್ರಾಂತಿಯುಳ್ಳ ಪುರುಷನನ್ನು, ಸ್ಮರಂತಿ ಕಿಂ = ಸ್ಮರಿಸುತ್ತಾರೆಯೇ?

**ಅನುವಾದ -** ಬ್ರಹ್ಮಾಂಡದ ಒಳಗೂ ಮತ್ತು ಹೊರಗೂ ಭ್ರಾಂತನಾದ ಪರಮಾತ್ಮನನ್ನು ಜೀವನ್ಮುಕ್ತರಾದ ಕಾರಣದಿಂದ ಮಹಾತ್ಮರಾದ ಸನಕಾದಿಗಳು ಸಮ್ಮಾನಿ ಸುತ್ತಾರೆಯೇ? ಧ್ಯಾನಿಸುತ್ತಾರೆಯೇ? ಶ್ರವಣ ಮಾಡುತ್ತಾರೆಯೇ? ಮತ್ತು ಸದಾ ಮನನ ಮಾಡುತ್ತಾರೆಯೇ?

ಒಂದೊಂದು ವಿಷಯದಲ್ಲಿ ಭ್ರಾಂತಿಯಿದ್ದವನನ್ನೂ ಕೂಡ ಸಜ್ಜನರು ಸಭೆಯ ಮಧ್ಯದಿಂದ ಹೊರಗೆ ಹಾಕಿ ಅವನನ್ನು ನಿಂದಿಸುತ್ತಾರೆ. ಸಜ್ಜನರು ಭ್ರಾಂತಿಯುಳ್ಳ ಅಂತಹ ಪುರುಷನನ್ನು ತಮ್ಮ ಮನಸ್ಸಿನಲ್ಲಿ ಸ್ಮರಿಸುತ್ತಾರೆಯೇ?

**ಭಾವವಿಲಾಸಿನೀ–** ಪುನರಪಿ ಭಗವತೋ ಭ್ರಾಂತ್ಯಸಂಭವೇ ಸ್ಮೃತ್ಯುಪಸ್ಕಾರಕಯುಕ್ತೀರಾಹ – **ಬ್ರಹ್ಮಾಂಡೇತಿ ॥** ಅಂತಶ್ಚತುರ್ದಶಲೋಕಾದಿರೂಪೇಣ ಬಹಿರಾವರಣರೂಪೇಣ ಚ ಬ್ರಹ್ಮಣ ಏವ ಭ್ರಾಂತಿರಿತಿ ಪರಸ್ಯ ಸಿದ್ಧಾಂತಃ । ಅತ ಏವಮುಕ್ತಮ್ । ಮಹಾಂತಃ ಜೀವನ್ಮುಕ್ತತ್ವೇನ ಜ್ಞಾನ- ವತ್ತ್ವಾತ್ ಪೂಜ್ಯಾಃ ಸನಕಾದಯಃ । ತಂ ಮಹಾಭ್ರಾಂತಂ ಮಹೇಶ್ವರಮ್ ॥ ೬೩೫-೬೩೬ ॥

ವಿವರಣೆ - ಬ್ರಹ್ಮನಿಗೆ ಭ್ರಾಂತಿಯು ಅಸಂಭಾವಿತ ಎಂಬ ವಿಷಯದಲ್ಲಿ ಪುನಃ ಸ್ಮೃತಿಗೆ ಉಪಕಾರಕವಾದ ಯುಕ್ತಿಗಳನ್ನು ಹೇಳುತ್ತಾರೆ. ಬ್ರಹ್ಮಾಂಡದ ಒಳಗೆ ಹದಿನಾಲ್ಕುಲೋಕಗಳ ಮತ್ತು ಆ ಲೋಕಗಳಲ್ಲಿರುವ ವಸ್ತುಗಳ ಜ್ಞಾನವು ಉಂಟಾಗುತ್ತದೆ. ಅದರಂತೆ ಬ್ರಹ್ಮಾಂಡದ ಹೊರಗೆ ಆವರಣವಾದ ಜಲಾದಿಗಳ ಜ್ಞಾನವೂ ಉಂಟಾಗುತ್ತದೆ. ಈ ಎಲ್ಲ ಜ್ಞಾನವೂ ಆರೋಪಿತವಾದ ವಸ್ತುವಿನ ಜ್ಞಾನವಾದ್ದರಿಂದ ಭ್ರಾಂತಿಯೇ ಆಗಿದೆ. ಎಲ್ಲ ಭ್ರಮವೂ ಬ್ರಹ್ಮರೂಪವೆಂದು ಅದ್ವೈತಿಗಳು ಅಂಗೀಕರಿಸುವುದರಿಂದ ಎಲ್ಲ ಭ್ರಾಂತಿಯೂ ಬ್ರಹ್ಮನಿಗೇ ಉಂಟಾಗುವುದರಿಂದ ಅವನು ಮಹಾಭ್ರಾಂತನಾದವನು ಎಂದಾಗುತ್ತದೆ. ಒಂದೊಂದು ವಿಷಯದ ಭ್ರಾಂತಿಯುಳ್ಳವನನ್ನೂ ಸಜ್ಜನರು ಸಭೆಯಿಂದ ಹೊರಗೆಹಾಕಿ ನಿಂದಿಸುವಾಗ ಮಹಾಭ್ರಾಂತಿಯುಳ್ಳ ಬ್ರಹ್ಮನನ್ನು ಜೀವನ್ಮುಕ್ತರಾದ ಸನಕಾದಿಗಳು ಏಕೆ ಸನ್ಮಾನ ಮಾಡುತ್ತಾರೆ

ಮತ್ತು ಯಾವಾಗಲೂ ಅವನ ವಿಷಯದ ಶ್ರವಣಮನನಧ್ಯಾನಗಳನ್ನು ಏಕೆ ಮಾಡುತ್ತಾರೆ ಎಂದು ಅಭಿಪ್ರಾಯ.

**ಸರ್ವಾರ್ಥಾನ್ ವಿಪರೀತಾಂಶ್ಚ ಬುದ್ಧಿಃ ಸಾ ಪಾರ್ಥ ತಾಮಸೀ ।**
**ಇತಿ ಗೀತಾಸು ಯಃ ಪ್ರಾಹ ಕಿಂ ಭ್ರಾಂತ್ಯೈಸ್ಸ್ಪೃಹಯತ್ಯಸೌ ॥ ೬೩೭ ॥**

**ಅರ್ಥ-** ಸರ್ವಾರ್ಥಾನ್ = ಎಲ್ಲಾ ವಸ್ತುಗಳನ್ನೂ, ವಿಪರೀತಾಂಶ್ಚ = ವಿರುದ್ಧವಾಗಿ ತಿಳಿದುಕೊಳ್ಳುವ, ಸಾ ಬುದ್ಧಿಃ = ಆ ಬುದ್ಧಿಯು, ಪಾರ್ಥ = ಎಲೈ ಪಾರ್ಥನೇ, ತಾಮಸೀ = ತಾಮಸವಾದುದು, ಇತಿ = ಎಂದು, ಗೀತಾಸು = ಭಗವದ್ಗೀತೆಯಲ್ಲಿ, ಯಃ = ಯಾವ ಕೃಷ್ಣನು, ಪ್ರಾಹ = ಹೇಳಿದನೋ, ಅಸೌ = ಅಂತಹ ಪರಮಾತ್ಮನು, ಭ್ರಾಂತ್ಯೈ= ಭ್ರಾಂತಿಯನ್ನು, ಸ್ಪೃಹಯತಿ ಕಿಂ = ಬಯಸುತ್ತಾನೆಯೇ?

**ಅನುವಾದ -** ಎಲೈ ಅರ್ಜುನನೇ, ಯಾವ ಬುದ್ಧಿಯು ಎಲ್ಲಾ ವಸ್ತುಗಳನ್ನೂ ವಿರುದ್ಧವಾಗಿ ತಿಳಿಯುತ್ತದೆಯೋ ಅದು ತಾಮಸವಾದ ಬುದ್ಧಿ ಎಂದು ಗೀತೆಯಲ್ಲಿ ಹೇಳಿದ ಶ್ರೀಕೃಷ್ಣನು ಭ್ರಾಂತಿಯನ್ನು ಬಯಸುತ್ತಾನೆಯೇ?

**ಭಾವವಿಲಾಸಿನೀ– ಅಸೌ ವಿಪರೀತಾರ್ಥದರ್ಶನಸ್ಯ ತಮೋಗುಣಕಾರ್ಯತ್ವಂ ವದನ್ ಸತ್ವಗುಣ-ಪ್ರವರ್ತಕಃ ಕೃಷ್ಣಃ ॥ ೬೩೭ ॥**

ವಿವರಣೆ - ಕೃಷ್ಣನು ಸತ್ವಗುಣಕಾರ್ಯವಾದ ಯಥಾರ್ಥಜ್ಞಾನಕ್ಕೆ ವಿಶೇಷವಾಗಿ ಪ್ರವರ್ತಕನಾದವನು. ತನ್ನ ಭಕ್ತರಲ್ಲಿ ಯಥಾರ್ಥಜ್ಞಾನವನ್ನು ಉಂಟುಮಾಡಲು ಬಯಸುವ ಕೃಷ್ಣನು ತನ್ನಲ್ಲಿಯೇ ಭ್ರಾಂತಿಗಳನ್ನು ಬಯಸುತ್ತಾನೆಯೇ? ಎಲ್ಲ ಜಗತ್ತಿನ ಭ್ರಾಂತಿಯೂ ಬ್ರಹ್ಮನಿಗೇ ಎಂದು ಹೇಳಿದರೆ, ಬ್ರಹ್ಮನಿಗೆ ಎಲ್ಲಾ ಭ್ರಾಂತಿಯೂ ಉಂಟಾಯಿತಷ್ಟೇ? ತನ್ನ ಭಕ್ತರ ಭ್ರಾಂತಿಯನ್ನು ಪರಿಹಾರ ಮಾಡುವ ಕೃಷ್ಣನು ತನ್ನಲ್ಲಿ ಎಂದೂ ಭ್ರಾಂತಿಯನ್ನು ಸಹಿಸುವುದಿಲ್ಲ ಎಂದು ಅಭಿಪ್ರಾಯ.

**ಕ್ವಾಪಿ ಯೋಗೋಽರ್ಥಸಂಯೋಗೋ ಯೋಗಿನಾಂ ಸರ್ವದರ್ಶನೇ ।**
**ಸೋಽಪ್ಯರ್ಥಸತ್ತಾಸಾಪೇಕ್ಷಃ ಕಿಂ ತೇಷಾಂ ನರಿ ಶೃಂಗದೃಕ್ ॥ ೬೩೮ ॥**

**ಅರ್ಥ-** ಯೋಗಿನಾಂ = ಯೋಗಿಗಳಿಗೆ, ಸರ್ವದರ್ಶನೇ = ಸರ್ವವಿಷಯಕ ಜ್ಞಾನವುಂಟಾಗುವಾಗ, ಕ್ವಾಪಿ = ಎಲ್ಲೋ ಕೆಲವು ಕಡೆ, ಯೋಗಃ = ಯೋಗವು, ಅರ್ಥಸಂಯೋಗಃ = ಅರ್ಥಸನ್ನಿಕರ್ಷರೂಪವಾದುದು, ಸೋಪಿ = ಆ ಯೋಗವಾದರೂ ಕೂಡ, ಅರ್ಥಸತ್ತಾಸಾಪೇಕ್ಷಃ = ಅರ್ಥದ ಸತ್ವವನ್ನು ಅಪೇಕ್ಷಿಸುತ್ತದೆ, ತೇಷಾಂ = ಆ ಯೋಗಿಗಳಿಗೆ, ನರಿ = ಮನುಷ್ಯನಲ್ಲಿ, ಶೃಂಗದೃಕ್ ಕಿಂ = ಶೃಂಗಜ್ಞಾನವು ಉಂಟಾಗುತ್ತದೆಯೇ?

**ಅನುವಾದ -** ಯೋಗಿಗಳಿಗೂ ಸಹ ಸರ್ವವಿಷಯಕಜ್ಞಾನವು ಉಂಟಾಗುವಾಗ ಕೆಲವು ಕಡೆಯಲ್ಲಿ ಮಾತ್ರ ಯೋಗವೇ ಅರ್ಥಸನ್ನಿಕರ್ಷರೂಪವಾಗುತ್ತದೆ. ಆ ಯೋಗವೂ ಕೂಡ ಅರ್ಥಸತ್ವವನ್ನು ಅಪೇಕ್ಷಿಸುತ್ತದೆ. ಯೋಗಿಗಳಿಗೆ ಮನುಷ್ಯನಲ್ಲಿ ಶೃಂಗಜ್ಞಾನವು ಉಂಟಾಗುತ್ತದೆಯೇ?

**ಭಾವವಿಲಾಸಿನೀ–** ಯೋಗಿನೋऽಪಿ ಪ್ರಾಗ್ವಿದ್ಯಮಾನಾರ್ಥತತ್ವಜ್ಞಾನವಂತೋ ನ ಭ್ರಾಂತಾಃ । ಕಿಮು ಬ್ರಹ್ಮೇತಿ ಭಾವೇನಾಹ–**ಕ್ವಾಪೀತಿ** ॥ ಸರ್ವದರ್ಶನೇ ಸರ್ವಾರ್ಥದರ್ಶನೇ । ಬಹುಶೋऽರ್ಥಸನ್ನಿಕರ್ಷ ಏವ ತದಿಂದ್ರಿಯಸ್ಯಾಪ್ಯಸ್ತಿ । ಕ್ವಾಪಿ ವ್ಯವಹಿತಪದಾರ್ಥದರ್ಶನೇ ಅತೀಂದ್ರಿಯಪದಾರ್ಥದರ್ಶನೇ ಚ ಯೋಗ ಏವಾರ್ಥಸಂಯೋಗ ಇತ್ಯರ್ಥಃ । ಸೋऽಪಿ ಯೋಗೋऽಪಿ । ಧ್ಯಾನಮೇವ ಹಿ ಯೋಗಃ । ತಸ್ಯಾಪಿ ಪ್ರಾಗರ್ಥೋऽಪೇಕ್ಷ್ಯತ ಇತಿ ಭಾವಃ । ತತ್ರ ವ್ಯತಿರೇಕದೃಷ್ಟಾಂತಮಾಹ–**ಕಿಮಿತಿ** ॥ ತೇಷಾಂ ಯೋಗಿನಾಮ್ । ನರಿ ಮನುಷ್ಯೇ । ಅರ್ಥಸತ್ತಾಭಾವಾದೇವ ಹಿ ನೃಶೃಂಗಾದಿಜ್ಞಾನಾಭಾವಃ । ಅತಸ್ತತ್ ಜ್ಞಾನಮಪಿ ಅರ್ಥಸತ್ತಾಸಾಪೇಕ್ಷಮಿತಿ ಹೃದಯಮ್ ॥ ೬೩೮ ॥

ವಿವರಣೆ - ಯೋಗಿಗಳೂ ಸಹ ಮೊದಲೇ ಇರುವ ಅರ್ಥದ ತತ್ತ್ವ ಜ್ಞಾನವುಳ್ಳವರಾದ್ದರಿಂದ ಭ್ರಾಂತರಲ್ಲ. ಇನ್ನು, ಬ್ರಹ್ಮನು ಹೇಗೆ ಭ್ರಾಂತನಾಗಲು ಸಾಧ್ಯ ಎಂದು ಇಲ್ಲಿ ನಿರೂಪಿಸುತ್ತಾರೆ. ಯೋಗಿಗಳಿಗೆ ಘಟಪಟಾದಿ ಬಹಳ ವಿಷಯಗಳ ಜ್ಞಾನವು ಇಂದ್ರಿಯಸನ್ನಿಕರ್ಷದಿಂದಲೇ ಉಂಟಾದರೂ ಅತೀತವಾದ ಅಥವಾ ವ್ಯವಹಿತವಾದ ಅಥವಾ ಅತೀಂದ್ರಿಯವಾದ ಪದಾರ್ಥದರ್ಶನದಲ್ಲಿ ಅವರ ಯೋಗಶಕ್ತಿಯೇ ಅರ್ಥಸನ್ನಿಕರ್ಷರೂಪವಾಗುತ್ತದೆ. ಯೋಗರೂಪವಾದ ಅರ್ಥಸನ್ನಿಕರ್ಷ ಉಂಟಾಗಬೇಕಾದರೂ, ಮೊದಲೇ ಅರ್ಥವಿರಬೇಕಷ್ಟೇ? ಅರ್ಥಸತ್ವವು ಇಲ್ಲದಿದ್ದರೆ, ಯೋಗಿಗಳಿಗೂ ಆ ವಿಷಯದ ಜ್ಞಾನವು ಉಂಟಾಗುವುದಿಲ್ಲ. ಯೋಗಶಕ್ತಿಯಿಂದ ಯೋಗಿಗಳಿಗೆ ಮನುಷ್ಯನಲ್ಲಿ ಶೃಂಗಿತ್ವಜ್ಞಾನವು ಉಂಟಾಗುವುದಿಲ್ಲವಷ್ಟೇ? ಆದ್ದರಿಂದ ಯೋಗಿಗಳ ಸರ್ವಜ್ಞತ್ವವೂ ಕೂಡ ಅರ್ಥಸತ್ತಾಸಾಪೇಕ್ಷವಾದುದೇ ಎಂದು ಅಭಿಪ್ರಾಯ.

ತತ್ತ್ವಜ್ಞಾನಾಯ ಧರ್ಮೋऽಸ್ತು ಯುಕ್ತಿಃ ಶಕ್ತಿಶ್ಚ ವರ್ತತಾಮ್ ।
ಮಿಥ್ಯಾದೃಷ್ಟಿರ್ನ ತಪಸಾ ಕಿಂ ಕೌರ್ಮೇ ರೋಮ್ಣಿ ದೃಙ್ಮುನೇಃ ॥ ೬೩೯ ॥

**ಅರ್ಥ-** ತತ್ತ್ವಜ್ಞಾನಾಯ = ತತ್ತ್ವಜ್ಞಾನಕ್ಕೋಸ್ಕರವಾಗಿಯೇ, ಧರ್ಮಃ = ಧರ್ಮಾದಿ ಸಾಧನೆಯು, ಅಸ್ತು = ಇರಲಿ. ಯುಕ್ತಿಃ ಶಕ್ತಿಶ್ಚ = ಯುಕ್ತಿಯು ಮತ್ತು ತಪಃಶಕ್ತಿಯು, ವರ್ತತಾಂ = ತತ್ತ್ವಜ್ಞಾನಕ್ಕಾಗಿಯೇ ಇರಲಿ. ತಪಸಾ = ತಪಃಶಕ್ತಿಯಿಂದ, ಮಿಥ್ಯಾದೃಷ್ಟಿಃ = ಮಿಥ್ಯಾಭೂತವಾದ ಅರ್ಥದ ದರ್ಶನವು, ನ = ಉಂಟಾಗುವುದಿಲ್ಲ. ಮುನೇಃ = ತಪಸ್ವಿಯಾದವನಿಗೆ, ಕೌರ್ಮೇ ರೋಮ್ಣಿ = ಕೂರ್ಮರೋಮದ ವಿಷಯದಲ್ಲಿ, ದೃಕ್ ಕಿಂ = ಜ್ಞಾನವು ಉಂಟಾಗುತ್ತದೆಯೇ?

**ಅನುವಾದ** - ಧರ್ಮಾಚರಣೆಯೂ ಯುಕ್ತಿಗಳೂ ಮತ್ತು ತಪಃಶಕ್ತಿಯೂ ಸಹ ತತ್ತ್ವಜ್ಞಾನವನ್ನು ಉಂಟುಮಾಡುವುದಕ್ಕಾಗಿಯೇ ಇರಲಿ. ತಪಸ್ಸಿನಿಂದ ಭ್ರಾಂತಿಯು ಉಂಟಾಗುವುದಿಲ್ಲ. ತಪಸ್ವಿಗೆ ಏನಾದರೂ ಕೂರ್ಮರೋಮದ ಜ್ಞಾನವು ಉಂಟಾಗುತ್ತದೆಯೇ?

**ಭಾವವಿಲಾಸಿನೀ**– ಧರ್ಮಾದಿಸಾಧನಸಂಪನ್ನತ್ವಾಚ್ಚ ನ ತೇಷಾಂ ಮಿಥ್ಯಾದೃಷ್ಟಿರಿತ್ಯಾಹ – **ತತ್ತ್ವಜ್ಞಾನಾಯೇತಿ**।। ಶಕ್ತಿಃ ತಪಃಶಕ್ತಿಃ । ನಹಿ ಮಿಥ್ಯಾಜ್ಞಾನಸಂಪಾದನಾಯ ಧರ್ಮಾದ್ಯಾಚರಣಂ ಕುರ್ವಂತಿ। ತತ್ರಾಪಿ ವ್ಯತಿರೇಕದೃಷ್ಟಾಂತಮಾಹ – **ಕಿಮಿತಿ** ।। ಕೌರ್ಮೇ-ಕೂರ್ಮಸಂಬಂಧಿನಿ । ಭಗವದ್ಭಕ್ತಾನಾಮಪಿ ಯೋಗಿನಾಂ ಯದಾ ನ ಮಿಥ್ಯಾದೃಷ್ಟಿಃ । ಕಿಂ ವಾಚ್ಯಂ ತದಾ ಭಗವತೋ ಯೋಗೀಶ್ವರಸ್ಯೇತಿ ಭಾವಃ ।।೬೩೯ ।।

ವಿವರಣೆ - ಧರ್ಮಾದಿಸಾಧನಸಂಪನ್ನರಾದುದರಿಂದ ಯೋಗಿಗಳಿಗೆ ಭ್ರಾಂತಿಯುಂಟಾಗುವುದಿಲ್ಲ ಎಂದು ಇಲ್ಲಿ ಹೇಳುತ್ತಾರೆ. ಭ್ರಾಂತಿಯನ್ನು ಸಂಪಾದಿಸುವ ಸಲುವಾಗಿ ಯಾರೂ ತಪಸ್ಸನ್ನು ಆಚರಿಸುವುದಿಲ್ಲ. ಭಗವದ್ಭಕ್ತರಾದ ಯೋಗಿಗಳಿಗೂ ಭ್ರಾಂತಿಯಿಲ್ಲವೆಂದ ಮೇಲೆ ಯೋಗೀಶ್ವರನಾದ ಭಗವಂತನಿಗೆ ಭ್ರಾಂತಿಯಿಲ್ಲವೆಂದು ಕೈಮುತ್ಯದಿಂದಲೇ ಸಿದ್ಧವಾಗುತ್ತದೆ ಎಂದು ಅಭಿಪ್ರಾಯ.

**ಸತ್ಯಾರ್ಥ ಏವ ಸನ್ಮಾನ್ಯೋ ಮಿಥ್ಯಾರ್ಥೋ ನ ಮಹತ್ಪ್ರಿಯಃ ।**
**ಕಿಂ ರಜ್ಜುಸರ್ಪಾಲಂಕಾರಃ ಶುಕ್ತಿರೂಪ್ಯಾಚಲೇ ಶಿವಃ ।। ೬೪೦ ।।**

**ಅರ್ಥ**- ಸತ್ಯಾರ್ಥ ಏವ = ಸತ್ಯಾರ್ಥವೇ, ಸನ್ಮಾನ್ಯಃ = ಸನ್ಮಾನ್ಯವಾದುದು, ಮಿಥ್ಯಾರ್ಥಃ= ಮಿಥ್ಯಾಭೂತವಾದ ಅರ್ಥವು, ನ ಮಹತ್ಪ್ರಿಯಃ = ಮಹಾತ್ಮರಿಗೆ ಪ್ರಿಯವಾದುದಲ್ಲ, ಶಿವಃ= ಈಶ್ವರನು, ಶುಕ್ತಿರೂಪ್ಯಾಚಲೇ = ಶುಕ್ತಿರೂಪ್ಯಪರ್ವತದಲ್ಲಿ, ರಜ್ಜುಸರ್ಪಾಲಂಕಾರಃ ಕಿಂ= ರಜ್ಜುಸರ್ಪಾಲಂಕಾರವನ್ನು ಧರಿಸಿದ್ದಾನೆಯೇ?

**ಅನುವಾದ** - ಸತ್ಯಾರ್ಥವೇ ಸನ್ಮಾನ್ಯವಾದುದು. ಮಿಥ್ಯಾಭೂತವಾದ ಅರ್ಥವು ಮಹಾತ್ಮರಿಗೆ ಪ್ರಿಯವಾದುದಲ್ಲ. ಶಿವನು ಶುಕ್ತಿರೂಪ್ಯಾಚಲದಲ್ಲಿ ರಜ್ಜುಸರ್ಪ-ಭೂಷಣನಾಗಿ ಇದ್ದಾನೆಯೇ?

**ಭಾವವಿಲಾಸಿನೀ**– ಕಿಮಾಕ್ಷೇಪೇ । ಸತ್ಯಸರ್ಪಾಲಂಕಾರಃ । ಸತ್ಯರಜತಾಚಲವರ್ತೀ । ಅತಃ ಸತ್ಯಾರ್ಥ ಏವ ಸನ್ಮಾನ್ಯ ಇತಿ ಭಾವಃ ।। ೬೪೦ ।।

ವಿವರಣೆ - ಶಿವನು ರಜತಾಚಲದಲ್ಲಿ ಸರ್ಪಭೂಷಣನಾಗಿ ಯೋಗಿಗಳಿಂದ ಸನ್ಮಾನಿಸಲ್ಪಡುತ್ತಾನೆ ಎಂದು ಹೇಳಿದರೆ, ಆ ಪರ್ವತವು ಶುಕ್ತಿರೂಪ್ಯಪರ್ವತವೆಂದಾಗಲೀ, ಅಥವಾ ಆ ಸರ್ಪಗಳು ರಜ್ಜುಸರ್ಪಗಳೆಂದಾಗಲೀ ಯಾರೂ ಭಾವಿಸುವುದಿಲ್ಲ. ಆದ್ದರಿಂದ

ಸತ್ಯವಾದ ಪದಾರ್ಥಗಳೇ ಮಾನ್ಯವಾಗುತ್ತವೆ. ಶಿವನಿರುವ ರಜತಪರ್ವತವು ಮತ್ತು ಅವನಿಗೆ ಭೂಷಣವಾದ ಸರ್ಪವು ಸತ್ಯವಾದದ್ದು. ಸಮಸ್ತವಾದ ಜಗತ್ತೇ ಸತ್ಯವಾಗಿ ಮಾನ್ಯವಾಗುತ್ತದೆ ಎಂದು ಅಭಿಪ್ರಾಯ.

ಅಯಂ ಘಟ ಇತಿ ಜ್ಞಾನಂ ಸರ್ವೇಷಾಮಸ್ತು ಮಾನಸಮ್ ।
ದೇಶಕಾಲಸ್ಥತೇದಂತಾ ತತ್ರ ತ್ವಖಿಲಸಂಮತಾ ॥ ೬೪೧ ॥

ಇಯಂ ಧೀಶ್ಚ ಪ್ರಮೈವಾಸ್ತು ಬ್ರಹ್ಮ ಶ್ರುತ್ಯುಕ್ತಸಾಧನೈಃ ।
ಅಂತೇ ನಿರೀಕ್ಷ್ಯಮೇವಾಸ್ತು ಕಿಮಪ್ರಾಮಾಣಿಕೋಕ್ತಿಭಿಃ ॥ ೬೪೨ ॥

**ಅರ್ಥ**- ಅಯಂ ಘಟ ಇತಿ ಜ್ಞಾನಂ = ಅಯಂ ಘಟಃ ಎಂಬ ಜ್ಞಾನವು, ಸರ್ವೇಷಾಂ= ಎಲ್ಲರಿಗೂ, ಮಾನಸಂ = ಮನೋರೂಪವಾದದ್ದಾಗಿಯೇ, ಅಸ್ತು = ಆಗಲಿ. ತತ್ರ = ಆ ಜ್ಞಾನದಲ್ಲಿ ತೋರುವ, ಇದಂತಾ = ಇದಂತ್ವವು, ದೇಶಕಾಲಸ್ಥತಾ= ದೇಶಕಾಲಸಂಬಂಧ ರೂಪವಾದುದೆಂಬುದು, ಅಖಿಲಸಂಮತಾ = ಎಲ್ಲರಿಗೂ ಸಮ್ಮತವಾದುದು.

ಇಯಂ ಧೀಶ್ಚ = ಅಯಂ ಘಟಃ ಎಂಬ ಈ ಜ್ಞಾನವಾದರೂ, ಪ್ರಮೈವಾಸ್ತು = ಪ್ರಮೆಯೇ ಆಗಲಿ. ಶ್ರುತ್ಯುಕ್ತಸಾಧನೈಃ = ಶ್ರುತಿಯಲ್ಲಿ ಹೇಳಲ್ಪಟ್ಟ ಸಾಧನಗಳಿಂದ ಬ್ರಹ್ಮ = ಬ್ರಹ್ಮನು, ಅಂತೇ = ಕೊನೆಯಲ್ಲಿಯೇ, ನಿರೀಕ್ಷ್ಯಮೇವ ಅಸ್ತು = ದರ್ಶನೀಯನಾಗಲಿ, ಅಪ್ರಾಮಾಣಿಕೋಕ್ತಿಭಿಃ = ಅಪ್ರಾಮಾಣಿಕ ವಚನಗಳಿಂದ, ಕಿಂ = ಏನು ಪ್ರಯೋಜನ?

**ಅನುವಾದ** - ಎಲ್ಲರಿಗೂ ಉಂಟಾಗುವ 'ಅಯಂ ಘಟಃ' ಎಂಬ ಜ್ಞಾನವು ಮನೋವೃತ್ತಿರೂಪವೇ ಆಗಲಿ. ಆ ಜ್ಞಾನದಲ್ಲಿ ತೋರುವ 'ಇದಂತ್ವ'ವು ಮಾತ್ರ ದೇಶಕಾಲಸಂಬಂಧರೂಪವಾದುದೆಂದು ಎಲ್ಲರಿಗೂ ಸಮ್ಮತವಾಗಿದೆ. 'ಅಯಂ ಘಟಃ' ಎಂಬ ಜ್ಞಾನವು ಪ್ರಮೆಯೇ ಆಗಲಿ. ಬ್ರಹ್ಮನಾದರೋ ಶ್ರುತಿಯಲ್ಲಿ ಹೇಳಲ್ಪಟ್ಟ ಸಾಧನಗಳಿಂದ ಕೊನೆಯಲ್ಲಿಯೇ ದರ್ಶನೀಯನಾಗಲಿ. ಏಕೆ ಅಪ್ರಾಮಾಣಿಕ ಕಲ್ಪನೆಗಳನ್ನು ಮಾಡಿ ಅಪ್ರಾಮಾಣಿಕವಾದ ಮಾತುಗಳನ್ನು ಆಡುತ್ತೀಯೆ?

**ಭಾವವಿಲಾಸಿನೀ**– ಸರ್ವೇಷಾಮಯಂ ಘಟ ಇತಿ ಜ್ಞಾನಮಿತಿ ಸಂಬಂಧಃ । ತತ್ರ ಜ್ಞಾನೇ । ಇದಂತಾ ಅಖಿಲಸಂಮತಾ ದೇಶಕಾಲಸ್ಥತಾಽಸ್ತ್ವಿತಿ ಸಂಬಂಧಃ । ಅಖಿಲಸಂಮತೇತ್ಯನೇನ ಇದಮಂಶಸ್ಯ ಬ್ರಹ್ಮಪರತ್ವೋಕ್ತೌ ಸರ್ವಾನುಭವವಿರೋಧಂ ಚ ದೋಷಂ ಸೂಚಯತಿ ॥ ೬೪೧-೬೪೨ ॥

ವಿವರಣೆ - 'ಅಯಂ ಘಟಃ' ಎಂಬ ಜ್ಞಾನವನ್ನು ಭ್ರಾಂತಿಯೆಂದು ಒಪ್ಪಿ, ಬ್ರಹ್ಮನಿಗೇ ಆ ಭ್ರಾಂತಿಯನ್ನು ಒಪ್ಪಿ ಅನುಭವ ಮತ್ತು ಶ್ರುತಿವಿರುದ್ಧವಾದ ಅನೇಕ ಕಲ್ಪನೆಗಳನ್ನು ಮಾಡುವುದು ಅನ್ಯಾಯವಾಗುತ್ತದೆ. 'ಅಯಂ' ಎಂಬಲ್ಲಿ ತೋರುವ ವಸ್ತುವು

ದೇಶಕಾಲಸಂಬಂಧವೇ ಹೊರತು ಬ್ರಹ್ಮನಲ್ಲ. ಆದ್ದರಿಂದ ದೇಶಕಾಲಸಂಬಂಧವನ್ನು ಹೊಂದಿದ ಘಟದಲ್ಲಿ ದೇಶಕಾಲಸಂಬಂಧವನ್ನು ವಿಷಯೀಕರಿಸುವ 'ಅಯಂ ಘಟಃ' ಎಂಬ ಜ್ಞಾನವು ಪ್ರಮೆಯೇ ಆಗುತ್ತದೆ. ಎಲ್ಲ ಜ್ಞಾನದಲ್ಲಿಯೂ ಬ್ರಹ್ಮನೇ ವಿಷಯನಾಗುತ್ತಾನೆ ಎಂಬ ಕಲ್ಪನೆಯನ್ನು ಮಾಡಬೇಡ. ಸಾಧನಸಂಪತ್ತು ಪೂರ್ಣವಾದ ಮೇಲೆ ಕೊನೆಯಲ್ಲಿ ಬ್ರಹ್ಮನು ದರ್ಶನಕ್ಕೆ ವಿಷಯನಾಗುತ್ತಾನೆ ಹೊರತು, 'ಅಯಂ ಘಟಃ' ಇತ್ಯಾದಿ ಎಲ್ಲಾ ಜ್ಞಾನಗಳಲ್ಲೂ ವಿಷಯನಾಗುವುದಿಲ್ಲ. ಆದ್ದರಿಂದ ಇಂತಹ ಅಪ್ರಾಮಾಣಿಕ ಕಲ್ಪನೆಗಳನ್ನು ಮಾಡಬೇಡ ಎಂದು ಅಭಿಪ್ರಾಯ.

**ಅಥ ದೃಗ್ದೃಶ್ಯಸಂಬಂಧಾಯೋಗಾತ್ ಕೇವಲಮೀದೃಶೀ ।**
**ಕುಸೃಷ್ಟಿರ್ಹಿ ತ್ವಯಾ ವಾಚ್ಯಾ ಸಾಪಿ ಶೋಚ್ಯಾ ಮಹಾತ್ಮನಾಮ್ ॥ ೬೪೩ ॥**

**ಅರ್ಥ-** ಅಥ = ಇನ್ನು, ದೃಗ್ದೃಶ್ಯಸಂಬಂಧಾಯೋಗಾತ್ = ದೃಕ್ ಮತ್ತು ದೃಶ್ಯಗಳಿಗೆ ಸಂಬಂಧವು ಕೂಡದಿರುವುದರಿಂದ, ಕೇವಲಂ = ಕೇವಲ, ಈದೃಶೀ ಕುಸೃಷ್ಟಿಃ = ಇಂತಹ ಕುಸೃಷ್ಟಿಯು (ದೃಶ್ಯವು ದೃಕ್‌ನಲ್ಲಿ ಆರೋಪಿತ ಎಂಬ ಕುಸೃಷ್ಟಿಯು), ತ್ವಯಾ ವಾಚ್ಯಾ = ನಿನ್ನಿಂದ ಹೇಳಲ್ಪಡುವುದಾದರೆ, ಸಾಪಿ = ಅಂತಹ ಕುಸೃಷ್ಟಿಯೂ ಸಹ, ಮಹಾತ್ಮನಾಂ = ಮಹಾತ್ಮರಿಗೆ, ಶೋಚ್ಯಾ = ಶೋಚನೀಯವಾದುದೇ.

**ಅನುವಾದ -** ಇನ್ನು ದೃಕ್ ಮತ್ತು ದೃಶ್ಯಗಳಿಗೆ ಸಂಬಂಧವು ಕೂಡುವುದಿಲ್ಲವಾದ್ದರಿಂದ ದೃಶ್ಯವೆಲ್ಲವೂ ದೃಕ್‌ನಲ್ಲಿ ಆರೋಪಿತ ಎಂಬ ಕುಸೃಷ್ಟಿಯನ್ನು ನೀನು ಹೇಳುವುದಾದರೆ, ಅದೂ ಸಹ ಮಹಾತ್ಮರಿಗೆ ಶೋಚನೀಯವಾದುದು.

**ಭಾವವಿಲಾಸಿನೀ-** ದೃಗ್ದೃಶ್ಯಸಂಬಂಧಾಯೋಗಾತ್ ಅಯಂ ಘಟ ಇತಿ ಜ್ಞಾನಸ್ಯ ಮಾನಸತ್ವಮ್ । ಅತ ಏವ ದೃಶ್ಯಸ್ಯ ಬ್ರಹ್ಮಣ್ಯಾರೋಪಶ್ಚೇತಿ ಶಂಕಾಂ ಸವಿಸ್ತರಂ ದೂಷಯತಿ ॥ **ಅಥೇತಿ ॥** ಈದೃಶೀ ದೃಶ್ಯಸ್ಯ ದೃಶಿ ಆರೋಪ ಇತ್ಯೇವಮಾಕಾರಾ ॥ ೬೪೩ ॥

ವಿವರಣೆ - ದೃಗ್ದೃಶ್ಯಗಳಿಗೆ ಸಂಬಂಧವು ಕೂಡುವುದಿಲ್ಲವಾದ್ದರಿಂದ ದೃಶ್ಯವೆಲ್ಲವೂ ದೃಕ್‌ನಲ್ಲಿ ಆರೋಪಿತ ಎಂಬ ಮಾಯಾವಾದಿಗಳ ಕಲ್ಪನೆಯನ್ನು ಈ ಶ್ಲೋಕದಿಂದ ಆರಂಭಿಸಿ ವಿಸ್ತಾರವಾಗಿ ನಿರಾಕರಣೆ ಮಾಡುತ್ತಾರೆ.

**ಏವಂ ಸತಿ ಚ ದೃಶ್ಯಸ್ಯ ದೃಕ್‌ಸಂಬಂಧೋಽಪಿ ಕೋ ವದ ।**
**ಅಧ್ಯಾಸಾಧ್ಯಸ್ತಭಾವಶ್ಚೇತ್ ಸೋಽಪಿ ಸಮ್ಯಕ್ ವಿವಿಚ್ಯತಾಮ್ ॥ ೬೪೪ ॥**

**ಅರ್ಥ-** ಏವಂ ಸತಿ = ಹಾಗಾದರೆ, ದೃಶ್ಯಸ್ಯ = ದೃಶ್ಯವಾದ ವಸ್ತುವಿಗೆ, ದೃಕ್ಸಂಬಂಧೋಪಿ = ದೃಕ್‌ಸಂಬಂಧವಾದರೂ, ಕಃ = ಯಾವುದು ಎಂದು, ವದ = ಹೇಳು. ಅಧ್ಯಾಸಾಧ್ಯಸ್ತ-

ಭಾವಶ್ಚೇತ್ = ಅಧ್ಯಾಸಾಧ್ಯಸ್ತಭಾವ ಎಂದು ಹೇಳುವುದಾದರೆ, ಸೋಪಿ = ಆ ಸಂಬಂಧವನ್ನೂ ಸಹ, ಸಮ್ಯಕ್ ವಿವಿಚ್ಯತಾಂ = ಚೆನ್ನಾಗಿ ವಿಮರ್ಶೆಮಾಡು.

**ಅನುವಾದ** - ಹೀಗೆ ಅಂಗೀಕಾರಮಾಡಿದರೂ ದೃಶ್ಯವಾದ ವಸ್ತುವಿಗೆ ದೃಕ್‌ಸಂಬಂಧವು ಯದ್ರೂಪವಾದುದು ಎಂದು ಹೇಳು. ಅಧ್ಯಾಸಾಧ್ಯಸ್ತಭಾವರೂಪವಾದುದು ಎಂದು ಹೇಳಿದರೆ, ಆ ಸಂಬಂಧವನ್ನೇ ಸರಿಯಾಗಿ ವಿಮರ್ಶೆ ಮಾಡು.

**ಭಾವವಿಲಾಸಿನೀ**— ಏವಂ ಸತಿ ದೃಶ್ಯಸ್ಯ ದೃಶ್ಯಾರೋಪೇ ಸತಿ ॥ ೬೪೪ ॥

ಆರೋಪರೂಪಜ್ಞಾನತ್ವಮಧ್ಯಾಸತ್ವಂ ಹಿ ಕೇವಲಂ ।
ಅಧ್ಯಸ್ತತ್ವಂ ಚ ತತ್ ಜ್ಞಾನಜ್ಞೇಯತ್ವಂ ಸ ತತೋಽಪರಮ್ ॥ ೬೪೫ ॥

**ಅರ್ಥ**- ಅಧ್ಯಾಸತ್ವಂ= ಅಧ್ಯಾಸತ್ವವೆಂದರೆ, ಕೇವಲಂ = ಕೇವಲ, ಆರೋಪರೂಪಜ್ಞಾನತ್ವಂ ಹಿ = ಭ್ರಮಾತ್ಮಕವಾದ ಜ್ಞಾನತ್ವವಷ್ಟೇ? ಅಧ್ಯಸ್ತತ್ವಂ ಚ = ಅಧ್ಯಸ್ತತ್ವವಾದರೂ, ತಜ್ಞಾನಜ್ಞೇಯತ್ವಂ= ಆ ಭ್ರಾಂತಿರೂಪವಾದ ಜ್ಞಾನಜ್ಞೇಯತ್ವ ರೂಪವಾದುದು, ತತಃ = ಅದಕ್ಕಿಂತ, ಅಪರಂ ನ= ಬೇರೆಯಾದುದಲ್ಲ.

**ಅನುವಾದ** - ಅಧ್ಯಾಸವೆಂದರೆ ಭ್ರಾಂತ್ಯಾತ್ಮಕವಾದ ಜ್ಞಾನವೆಂದೇ ಅರ್ಥ. ಅಧ್ಯಸ್ತತ್ವವೆಂದರೆ ಅಂತಹ ಭ್ರಾಂತ್ಯಾತ್ಮಕ ಜ್ಞಾನವಿಷಯತ್ವವೆಂದು ಅರ್ಥ. ಅದನ್ನು ಬಿಟ್ಟು ಬೇರೆ ಅರ್ಥವಿಲ್ಲ.

ವಿವರಣೆ - ಅಧ್ಯಸ್ತತ್ವವೆಂದರೂ ಅದು ಜ್ಞೇಯತ್ವರೂಪವೇ ಆದುದರಿಂದ ಜ್ಞೇಯತ್ವವೆಂದರೆ, ಜ್ಞಾನವಿಷಯತ್ವ ಎಂದೇ ಅರ್ಥವಾಗುವುದರಿಂದ ಅಧ್ಯಸ್ತತ್ವವು ವಿಷಯತ್ವರೂಪವೇ ಆಯಿತು ಎಂದು ಅಭಿಪ್ರಾಯ.

ಅತಸ್ತ್ವಯೋಕ್ತಃ ಸಂಬಂಧೋ ಜ್ಞಾನಜ್ಞೇಯತ್ವಮೇವ ಹಿ ।
ನ ಸಂಯೋಗಸ್ತಯೋರಾಸೀತ್ ಸಮವಾಯೋಽಪಿ ನ ಹ್ಯಭೂತ್ ॥೬೪೬॥

**ಅರ್ಥ**- ಅತಃ = ಆದ್ದರಿಂದ, ತ್ವಯೋಕ್ತಃ = ನಿನ್ನಿಂದ ಹೇಳಲ್ಪಟ್ಟ, ಸಂಬಂಧಃ = ಸಂಬಂಧವು, ಜ್ಞಾನಜ್ಞೇಯತ್ವಮೇವ ಹಿ = ಜ್ಞಾನಜ್ಞೇಯತ್ವರೂಪವೇ ಆಯಿತು, ತಯೋಃ = ಆ ಜ್ಞಾನಜ್ಞೇಯಗಳಿಗೆ, ಸಂಯೋಗಃ ನ ಆಸೀತ್ = ಸಂಯೋಗವು ಉಂಟಾಗಲಿಲ್ಲ, ಸಮವಾಯೋಪಿ ನ ಅಭೂತ್ ಹಿ = ಸಮವಾಯವೂ ಉಂಟಾಗಲಿಲ್ಲವಷ್ಟೇ?

**ಅನುವಾದ** - ಆದ್ದರಿಂದ ನೀನು ಹೇಳಿದ ಅಧ್ಯಾಸಾಧ್ಯಸ್ತಭಾವರೂಪವಾದ ಸಂಬಂಧವು ಜ್ಞಾನಜ್ಞೇಯತ್ವರೂಪವಾದ ಸಂಬಂಧವೇ ಆಯಿತಷ್ಟೇ? ಅದು ಸಂಯೋಗ ರೂಪವೂ ಆಗಲಿಲ್ಲ. ಸಮವಾಯರೂಪವೂ ಆಗಲಿಲ್ಲ.

**ಭಾವವಿಲಾಸಿನೀ–** ಅತಃ ಅಧ್ಯಾಸಾಧ್ಯಸ್ತಭಾವಸ್ಯಾಪಿ ಜ್ಞಾನಜ್ಞೇಯತ್ವ ಏವ ಪರ್ಯ- ವಸಾನಾತ್ । ತಯೋಃ ಜ್ಞಾನಜ್ಞೇಯಯೋಃ ॥ ೬೪೬ ॥

**ಅಯಂ ತು ವೃತ್ತಿಘಟಯೋರಪ್ಯಸ್ತ್ಯೇವ ಸ್ವಭಾವತಃ ।**
**ವೃತ್ತಿರ್ಜ್ಞಾನಂ ಘಟೋ ಜ್ಞೇಯ ಇತಿ ಕೋ ನಾಮ ನಾಬ್ರವೀತ್ ॥೬೪೭॥**

**ಅರ್ಥ-** ಅಯಂ ತು = ಇಂತಹ ಸಂಬಂಧವಾದರೋ, ವೃತ್ತಿಘಟಯೋರಪಿ= ವೃತ್ತಿ ಮತ್ತು ಘಟಕ್ಕೂ ಕೂಡ, ಸ್ವಭಾವತಃ = ಸ್ವಾಭಾವಿಕವಾಗಿಯೇ, ಅಸ್ತ್ಯೇವ = ಇದ್ದೇ ಇದೆ. ವೃತ್ತಿಃ= ಅಂತಃಕರಣವೃತ್ತಿಯು, ಜ್ಞಾನಂ = ಜ್ಞಾನರೂಪವಾದುದು, ಘಟಃ = ಘಟವು, ಜ್ಞೇಯ= ಜ್ಞೇಯರೂಪವಾದುದು, ಇತಿ = ಎಂದು, ಕೋ ನಾಮ = ಯಾವನು ತಾನೆ, ನಾಬ್ರವೀತ್= ಹೇಳಲಿಲ್ಲ?

**ಅನುವಾದ -** ಇಂತಹ ಜ್ಞಾನಜ್ಞೇಯತ್ವರೂಪವಾದ ಸಂಬಂಧವು ವೃತ್ತಿ ಮತ್ತು ಘಟಗಳಿಗೆ ಸ್ವಾಭಾವಿಕವಾಗಿ ಇದ್ದೇ ಇದೆ. ಅಂತಃಕರಣವೃತ್ತಿಯನ್ನು ಜ್ಞಾನವೆಂದೂ ಘಟವನ್ನು ಜ್ಞೇಯವೆಂದೂ ಯಾರು ತಾನೇ ಹೇಳಲಿಲ್ಲ?

**ಭಾವವಿಲಾಸಿನೀ–** ಅಯಂ ತ್ವಯಾಽಪ್ಯಂತತೋಽಂಗೀಕೃತೋ ಜ್ಞಾನಜ್ಞೇಯತ್ವರೂಪಃ । ವೃತ್ತಿಃ ಅಂತಃಕರಣವೃತ್ತಿಃ ॥ ೬೪೭ ॥

**ಜ್ಞಾನಜ್ಞೇಯತ್ವಮನಯೋಃ ಕೇನೇತಿ ಯದಿ ಶಂಕ್ಯತೇ ।**
**ಆರೋಪ್ಯಾರೋಪಭಾವೋ ಹಿ ತಯೋಃ ಕೇನೇತಿ ಕೀರ್ತಯ ।**
**ಸಂಯೋಗಸಮವಾಯೌ ತು ನೋಭಯೋರಪಿ ಸಂಮತೌ ॥ ೬೪೮ ॥**

**ಅರ್ಥ-** ಅನಯೋ = ಈ ವೃತ್ತಿ ಮತ್ತು ಘಟಗಳಿಗೆ, ಜ್ಞಾನಜ್ಞೇಯತ್ವಂ = ಜ್ಞಾನತ್ವ ಮತ್ತು ಜ್ಞೇಯತ್ವವು, ಕೇನೇತಿ = ಹೇಗೆ ಎಂದು, ಯದಿ = ಒಂದು ಪಕ್ಷ, ಶಂಕ್ಯತೇ = ಶಂಕಿಸುವುದಾದರೆ, ತಯೋಃ = ಘಟ ಮತ್ತು ಘಟಾಧಿಷ್ಠಾನಚೈತನ್ಯಗಳಿಗೆ, ಆರೋಪ್ಯಾರೋಪಭಾವಃ = ಆರೋಪ್ಯತ್ವ ಮತ್ತು ಆರೋಪತ್ವವು, ಕೇನೇತಿ = ಹೇಗೆ ಎಂದು, ಕೀರ್ತಯ = ಹೇಳು. ಸಂಯೋಗಸಮವಾಯೌ ತು = ಸಂಯೋಗ ಮತ್ತು ಸಮವಾಯಗಳಾದರೂ, ಉಭಯೋರಪಿ = ನಮ್ಮಿಬ್ಬರಿಗೂ, ನ ಸಂಮತೌ = ಸಮ್ಮತವಲ್ಲವಷ್ಟೇ ?

**ಅನುವಾದ -** ವೃತ್ತಿ ಮತ್ತು ಘಟಗಳಿಗೆ ಜ್ಞಾನಜ್ಞೇಯತ್ವರೂಪವಾದ ಸಂಬಂಧವು ಹೇಗೆ ಉಂಟಾಗುತ್ತದೆ ಎಂದು ಶಂಕಿಸುವುದಾದರೆ, ಘಟ ಮತ್ತು ಘಟಾಧಿಷ್ಠಾನಚೈತನ್ಯಗಳಿಗೂ ಆರೋಪ್ಯ ಆರೋಪಭಾವರೂಪವಾದ ಸಂಬಂಧವು

**ಹೇಗೆ ಉಂಟಾಗುತ್ತದೆ ಎಂದು ಹೇಳು. ಸಂಯೋಗ ಮತ್ತು ಸಮವಾಯರೂಪವಾದ ಸಂಬಂಧಗಳು ನಮ್ಮಿಬ್ಬರಿಗೂ ಸಮ್ಮತವಲ್ಲವಷ್ಟೇ ?**

**ಭಾವವಿಲಾಸಿನೀ– ಅನಯೋಃ ವೃತ್ತಿಘಟಯೋಃ । ತಯೋಃ ಘಟತದಧಿಷ್ಠಾನಚೈತನ್ಯಯೋಃ ।**

ವಿವರಣೆ - ಜ್ಞಾನಜ್ಞೇಯಗಳಿಗೆ ಒಂದು ಸಂಬಂಧವನ್ನು ಹೇಳಲೇಬೇಕು. ನೀನಾದರೂ ಆರೋಪ್ಯ ಮತ್ತು ಆರೋಪಗಳಿಗೆ ಒಂದು ಸಂಬಂಧವನ್ನು ಹೇಳಲೇಬೇಕಷ್ಟೇ ? ಅದು ಸಂಯೋಗ ಮತ್ತು ಸಮವಾಯವಾಗದಿದ್ದರೆ, ಹೇಗೆ ಇನ್ನೊಂದು ಸಂಬಂಧವಾಗುತ್ತದೆಯೋ, ಹಾಗೆಯೇ ಜ್ಞಾನಜ್ಞೇಯಗಳಿಗೂ ಸಂಯೋಗಸಮವಾಯಗಳು ಆಗುವುದಿಲ್ಲವಾದ್ದರಿಂದ ಇನ್ನೊಂದು ಸಂಬಂಧವು ಆಗುತ್ತದೆ ಎಂದು ಅಭಿಪ್ರಾಯ.

ಯದಿ ಬ್ರಹ್ಮಣಿ ಸತ್ತ್ವಂ ಚ ಘಟಸ್ಯ ಪೃಥಗುಚ್ಯತೇ ।
ತರ್ಹ್ಯಧ್ಯಸ್ತತ್ವಕಥನಂ ಕಂಠಶೋಷಣಮೇವ ತೇ ॥ ೬೪೯ ॥

ಸಂಯುಕ್ತಸಮಾವಾಯಾಖ್ಯಃ ಸಂಬಂಧಸ್ತತ್ರ ತೇ ಭವೇತ್ ।
ಘಟೇನ ಯುಕ್ತಂ ತದ್‌ಬ್ರಹ್ಮ ಸಮವೇತಾ ಚ ತತ್ರ ಚಿತ್ ॥ ೬೫೦ ॥

**ಅರ್ಥ-** ಯದಿ = ಒಂದು ಪಕ್ಷ, ಘಟಸ್ಯ = ಘಟಕ್ಕೆ, ಚ= ಮತ್ತು, ಬ್ರಹ್ಮಣಿ= ಬ್ರಹ್ಮನಲ್ಲಿಯೂ, ಪೃಥಕ್ = ಪ್ರತ್ಯೇಕವಾಗಿ, ಸತ್ವಂ= ಸತ್ವವು, ಉಚ್ಯತೇ = ಹೇಳಲ್ಪಡುವುದಾದರೆ, ತರ್ಹಿ = ಆಗ, ತೇ = ನಿನ್ನ, ಅಧ್ಯಸ್ತತ್ವಕಥನಂ = ಅಧ್ಯಸ್ತತ್ವವಾರ್ತೆಯು, ಕಂಠ ಶೋಷಣಮೇವ = ಕಂಠಶೋಷಣವೇ ಆಗುತ್ತದೆ.

ತತ್ರ = ಅಲ್ಲಿ, ತೇ = ನಿನ್ನ ರೀತಿಯಲ್ಲಿ, ಸಂಯುಕ್ತಸಮವಾಯಾಖ್ಯಃ= ಸಂಯುಕ್ತ ಸಮವಾಯುವೆಂಬ, ಸಂಬಂಧಃ = ಸಂಬಂಧವು, ಭವೇತ್= ಉಂಟಾಗುತ್ತದೆಯಷ್ಟೇ ? ಘಟೇನ = ಘಟದಿಂದ, ಯುಕ್ತಂ = ಸಂಯುಕ್ತವಾದುದು, ತದ್ಬ್ರಹ್ಮ= ಆ ಬ್ರಹ್ಮನು, ತತ್ರ = ಆ ಬ್ರಹ್ಮನಲ್ಲಿ, ಚಿತ್ ಚ = ಜ್ಞಾನವು ಕೂಡಾ, ಸಮವೇತಾ= ಸಮವೇತವಾಗಿದೆ.

**ಅನುವಾದ** - ಒಂದು ಪಕ್ಷ ಆರೋಪಕ್ಕಿಂತ ಅತಿರಿಕ್ತವಾಗಿ ಘಟಕ್ಕೆ ಬ್ರಹ್ಮನಲ್ಲಿ ಸತ್ವವನ್ನು ಅಂಗೀಕರಿಸುವುದಾದರೆ, ಘಟಕ್ಕೆ ಅಧ್ಯಸ್ತತ್ವವನ್ನು ಹೇಳುವುದು ಕೇವಲ ನಿನ್ನ ಕಂಠಶೋಷಣೆಯಾಗುತ್ತದೆ. ನಿನ್ನ ರೀತಿಯಲ್ಲಿಯೂ ಅಲ್ಲಿ ಸಂಯುಕ್ತ ಸಮವಾಯರೂಪವಾದ ಸಂಬಂಧವಿದೆ. ಏಕೆಂದರೆ, ಘಟಸಂಯುಕ್ತವಾದುದು ಬ್ರಹ್ಮ ಮತ್ತು ಅಲ್ಲಿ ಜ್ಞಾನವು ಸಮವೇತವಾಗಿದೆ.

ಭಾವವಿಲಾಸಿನೀ– ಪೃಥಕ್ ಆರೋಪಾತ್ ಪೃಥಕ್ ಆರೋಪಾತಿರಿಕ್ತಂ ಬ್ರಹ್ಮಣಿ ಘಟಸತ್ತ್ವಂ ಚ ಆರೋಪೋಪಯೋಗಿತಯಾಽಂಗೀಕ್ರಿಯತೇ ಚೇದಿತ್ಯರ್ಥಃ ॥ ತತ್ರ ಘಟೇ ತದಧಿಷ್ಠಾನ-

**ಚೈತನ್ಯರೂಪಜ್ಞಾನೇ ಚೇತ್ಯರ್ಥಃ। ಸಂಯುಕ್ತಸಮವಾಯಮುಪಪಾದಯತಿ ॥ ಘಟೇನೇತಿ ॥೬೫೦॥**

ವಿವರಣೆ - ಕೇವಲ ಆರೋಪವೇ ಸಂಬಂಧವಲ್ಲ. ಆರೋಪಕ್ಕಿಂತ ಅತಿರಿಕ್ತವಾಗಿ ಬ್ರಹ್ಮನಲ್ಲಿ ಸತ್ವವೂ ಸಹ ಘಟಾರೋಪವನ್ನು ಕುರಿತು ಕಾರಣ ಎಂದು ಹೇಳುವುದಾದರೆ, ಬ್ರಹ್ಮನಲ್ಲಿ ಘಟಕ್ಕೆ ಸತ್ವವೇ ಇರುವಾಗ ಘಟದ ಆರೋಪವನ್ನು ಅಂಗೀಕರಿಸುವುದು ವ್ಯರ್ಥವಾಗುತ್ತದೆ. ಜ್ಞಾನ ಮತ್ತು ಜ್ಞೇಯಕ್ಕೆ ಏನು ಸಂಬಂಧ ಎಂದು ವಿಚಾರ ಮಾಡುತ್ತಿರುವಾಗ ಘಟಕ್ಕೆ ಬ್ರಹ್ಮನಲ್ಲಿ ಸತ್ವವನ್ನು ಅಂಗೀಕರಿಸಿದರೆ, ಘಟಕ್ಕೂ ಮತ್ತು ಜ್ಞಾನಕ್ಕೂ ಸಂಯುಕ್ತಸಮವಾಯರೂಪವಾದ ಸಂಬಂಧವೇ ಕೂಡುವುದರಿಂದ ಘಟವು ಆರೋಪಿತ ಎಂದು ಹೇಳುವುದು ವ್ಯರ್ಥ ಎಂದು ಅಭಿಪ್ರಾಯ.

ಏವಂ ಚೇದ್ ಬ್ರಹ್ಮಸಂಯುಕ್ತಘಟಾಭ್ರಜ್ಞಾನತಾಽಪಿ ತೇ ।
ಘಟಜ್ಞಾನೇ ಕುತೋ ನಾಭೂತ್ ಸಂಬಂಧಸ್ಯ ಸಮತ್ವತಃ ॥ ೬೫೧ ॥

**ಅರ್ಥ-** ಏವಂ ಚೇತ್ = ಘಟಸಂಯುಕ್ತಸಮವಾಯವೇ ಘಟಕ್ಕೂ ಮತ್ತು ಘಟಜ್ಞಾನಕ್ಕೂ ಇರುವ ಸಂಬಂಧ ಎಂದು ಹೇಳುವುದಾದರೆ, ಘಟಜ್ಞಾನೇ = ಘಟಜ್ಞಾನವು ಉಂಟಾದಾಗ, ಬ್ರಹ್ಮಸಂಯುಕ್ತಘಟಾಭ್ರಜ್ಞಾನತಾಪಿ = ಬ್ರಹ್ಮಸಂಯುಕ್ತವಾದ ಘಟಾಕಾಶದ ಜ್ಞಾನವೂ ಸಹ, ತೇ = ನಿನ್ನ ರೀತಿಯಲ್ಲಿ, ಕುತಃ = ಯಾವ ಕಾರಣದಿಂದ ನಾಭೂತ್ = ಉಂಟಾಗಲಿಲ್ಲ? ಸಂಬಂಧಸ್ಯ = ಸಂಬಂಧವಾದರೂ, ಸಮತ್ವತಃ = ಸಮಾನ ವಾಗಿದೆಯಷ್ಟೇ ?

**ಅನುವಾದ** - ಘಟಬ್ರಹ್ಮಗಳಿಗೆ ಸಂಯೋಗವಿರುವುದರಿಂದಲೇ ಚಿದ್ರೂಪವಾದ ಜ್ಞಾನವು ಘಟಜ್ಞಾನವೆಂದು ಹೇಳುವುದಾದರೆ, ಘಟಜ್ಞಾನವು ಬಂದಾಗ ಆ ಜ್ಞಾನವು ಬ್ರಹ್ಮಚೈತನ್ಯಾತ್ಮಕವಾಗಿರುವುದರಿಂದ ಘಟಸಂಯುಕ್ತಬ್ರಹ್ಮ ಸಮವಾಯ ರೂಪವಾದ ಸಂಬಂಧದಂತೆ ಘಟಾಕಾಶಸಂಯುಕ್ತಬ್ರಹ್ಮಸಮವಾಯರೂಪವಾದ ಸಂಬಂಧವೂ ಘಟಾಕಾಶದ ಜೊತೆಯಲ್ಲಿ ಆ ಜ್ಞಾನಕ್ಕೆ ಇರುವುದರಿಂದ ಘಟಾಕಾಶದ ಜ್ಞಾನವು ಏಕೆ ಉಂಟಾಗಲಿಲ್ಲ?

**ಭಾವವಿಲಾಸಿನೀ–ಏವಂ ಚೇತ್ ಘಟಬ್ರಹ್ಮಸಂಯೋಗೇನೈವ ಚಿದ್ರೂಪಜ್ಞಾನಸ್ಯ ಘಟಜ್ಞಾನತ್ವಂ ಚೇತ್। ಘಟಾಭ್ರಂ ಘಟಾವಚ್ಛಿನ್ನಾಕಾಶಃ । ಘಟಜ್ಞಾನೇ ಬ್ರಹ್ಮಚೈತನ್ಯಾತ್ಮಕ ಘಟಜ್ಞಾನೇ । ಸಂಯುಕ್ತಸಮವಾಯಸ್ಯೋಭಯತ್ರ ಸಾಮ್ಯಾದಿತಿ ಭಾವಃ । ಅತ ಏವಾರೋಪೋಽಪ್ಯಪೇಕ್ಷಿತ ಇತಿ ಚೇತ್ ನ । ಭ್ರಮರೂಪಜ್ಞಾನಮೇವ ಹ್ಯಾರೋಪಃ । ಸಂಬಂಧಸ್ಯ ಸಾಮ್ಯಾತ್ ಉಭಯತ್ರಾಪಿ ಭ್ರಮರೂಪಂ ಜ್ಞಾನಮಸ್ತ್ವಿತ್ಯಾಕ್ಷಿಪಂತಂ ಪ್ರತಿ ಭ್ರಮರೂಪ ಜ್ಞಾನಾತ್ಮಕಾರೋಪಭಾವಾದಿತ್ಯ- ಸ್ಯಾತ್ಮಾಶ್ರಯಗ್ರಸ್ತತ್ವೇನಾನುತ್ತರತ್ವಾತ್ ॥ ೬೫೧ ॥**

**ವಿವರಣೆ** - ಘಟಜ್ಞಾನವು ಉಂಟಾದಾಗ ಘಟಕ್ಕೂ ಮತ್ತು ಜ್ಞಾನಕ್ಕೂ ಯಾವ ಸಂಬಂಧವಿದೆಯೋ ಅದೇ ಸಂಯುಕ್ತಸಮವಾಯರೂಪವಾದ ಸಂಬಂಧವು ಘಟಾಕಾಶಕ್ಕೂ ಮತ್ತು ಬ್ರಹ್ಮಚೈತನ್ಯಕ್ಕೂ ಇರುವುದರಿಂದ ಘಟಜ್ಞಾನವು ಬಂದಾಗ ಘಟಾಕಾಶಜ್ಞಾನವೂ ಬರಲಿ ಎಂಬ ಆಪತ್ತಿಯು ಬರುತ್ತದೆ. ಅದನ್ನು ಪರಿಹಾರ ಮಾಡಲು ಬ್ರಹ್ಮನಲ್ಲಿ ಕೇವಲ ಘಟಸಂಬಂಧವು ಇದ್ದರೆ ಸಾಲದು, ಘಟದ ಆರೋಪವೂ ಅಪೇಕ್ಷಿತವಾಗುತ್ತದೆ ಎಂದು ಹೇಳಿದರೆ ಆತ್ಮಾಶ್ರಯದೋಷವು ಬರುತ್ತದೆ. ಘಟಜ್ಞಾನವೇ ಆರೋಪರೂಪವಾದುದು. ಅದಕ್ಕೆ ಯಾವುದು ನಿಯಾಮಕವೆಂದು ವಿಚಾರಮಾಡುತ್ತಿದ್ದೇವೆ. ಕೇವಲ ಸಂಬಂಧವಲ್ಲ. ಘಟಾರೋಪವೂ ನಿಯಾಮಕವಾದುದು ಎಂದು ಹೇಳಿದರೆ, ಸ್ಪಷ್ಟವಾಗಿ ಆತ್ಮಾಶ್ರಯದೋಷವು ಬರುತ್ತದೆ ಎಂದು ಅಭಿಪ್ರಾಯ.

**ಕಿಂ ಜ್ಞಾನೇ ಜ್ಞಾನತಾಸ್ತೀತಿ ಘಟಜ್ಞಾನೇಽಪಿ ಭಾಸತೇ ।**
**ತಸ್ಮಾತ್ ಜ್ಞಾನೇ ಸ್ಥಿತತ್ವಂ ತತ್‌ಜ್ಞಾನತ್ವೇ ನ ಪ್ರಯೋಜಕಮ್ ॥ ೬೫೨ ॥**

**ಅರ್ಥ**- ಜ್ಞಾನೇ = ಜ್ಞಾನದಲ್ಲಿ, ಜ್ಞಾನತಾ= ಜ್ಞಾನತ್ವವು, ಅಸ್ತೀತಿ = ಇದೆ ಎಂಬ ಕಾರಣದಿಂದ, ಘಟಜ್ಞಾನೇಪಿ = ಘಟಜ್ಞಾನದಲ್ಲಿಯೂ ಕೂಡ (ಘಟಜ್ಞಾನಕ್ಕೆ ವಿಷಯವಾದ ಘಟದಲ್ಲಿಯೂ ಕೂಡ), ಕಿಂ ಭಾಸತೇ = ಜ್ಞಾನತ್ವವು ತೋರುತ್ತದೆಯೇ? ತಸ್ಮಾತ್ = ಆ ಕಾರಣದಿಂದ, ಜ್ಞಾನೇ ಸ್ಥಿತತ್ವಂ = ಜ್ಞಾನದಲ್ಲಿ ಇರುವಿಕೆಯು, ತಜ್ಞಾನತ್ವೇ = ತದ್ವಿಷಯಕ ಜ್ಞಾನತ್ವವನ್ನು ಕುರಿತು, ನ ಪ್ರಯೋಜಕಂ = ಪ್ರಯೋಜಕವಾದುದಲ್ಲ.

ಅನುವಾದ - ಜ್ಞಾನದಲ್ಲಿ ಜ್ಞಾನತ್ವವಿದೆ ಎಂದ ಮಾತ್ರಕ್ಕೇ ಘಟಜ್ಞಾನಕ್ಕೆ ವಿಷಯವಾದ ಘಟದಲ್ಲಿ ಜ್ಞಾನತ್ವವು ತೋರುವುದಿಲ್ಲವಷ್ಟೇ? ಆದ್ದರಿಂದ ಜ್ಞಾನದಲ್ಲಿ ಇರುವಿಕೆಯು ತಜ್ಞಾನತ್ವವನ್ನು ಕುರಿತು ಪ್ರಯೋಜಕವಲ್ಲ.

**ಭಾವವಿಲಾಸಿನೀ**– ಜ್ಞಾನಾತ್ಮಕಬ್ರಹ್ಮಣಿ ಘಟಸ್ಯ ಸತ್ತ್ವಂ ತೇನ ಜ್ಞೇಯತ್ವಪ್ರಯೋಜಕಂ ಚ ನೇತ್ಯತ್ರ ದೃಷ್ಟಾಂತಮಾಹ – **ಕಿಂ ಜ್ಞಾನ ಇತಿ** ॥ ತಜ್‌ಜ್ಞಾನತ್ವೇ ತಸ್ಯ ಜ್ಞಾನಸ್ಯ ತಜ್‌ಜ್ಞಾನತ್ವ ಇತ್ಯರ್ಥಃ ॥೬೫೨॥

ವಿವರಣೆ - ಜ್ಞಾನಾತ್ಮಕನಾದ ಬ್ರಹ್ಮನಲ್ಲಿ ಘಟದ ಸತ್ವವು ಆ ಜ್ಞಾನಕ್ಕೆ ಘಟದಜ್ಞೇಯತ್ವವನ್ನು ಕುರಿತು ಪ್ರಯೋಜಕವಾಗುವುದಿಲ್ಲವೆಂದು ಇಲ್ಲಿ ದೃಷ್ಟಾಂತಪೂರ್ವಕವಾಗಿಯೂ ಉಪಪಾದನೆ ಮಾಡುತ್ತಾರೆ. ಜ್ಞಾನದಲ್ಲಿ ಜ್ಞಾನತ್ವವಿದೆ. ಆದರೆ ಘಟದಲ್ಲಿ ಜ್ಞಾನತ್ವವು ತೋರುವುದಿಲ್ಲ. ಘಟವು ಜ್ಞಾನದಲ್ಲಿ ಇದ್ದಿದ್ದರೆ, ಜ್ಞಾನದಲ್ಲಿ ಜ್ಞಾನತ್ವವು ತೋರಿದಂತೆ, ಘಟದಲ್ಲಿಯೂ ಜ್ಞಾನತ್ವವು ತೋರಬೇಕಾಗಿದ್ದಿತು. ಆದ್ದರಿಂದ ಜ್ಞಾನರೂಪತ್ವವಾಗಲೀ, ಜ್ಞಾನಾಶ್ರಿತತ್ವವಾಗಲೀ, ಜ್ಞೇಯತ್ವಪ್ರಯೋಜಕವಾದುದಲ್ಲ, ಜ್ಞಾನವಿಷಯತ್ವವೇ ಭಾಸಮಾನತ್ವಕ್ಕೆ ಪ್ರಯೋಜಕವಾದುದು ಎಂದು ಅಭಿಪ್ರಾಯ.

**ವಿಷಯತ್ವಂ ವಿಷಯಿತಾ ಕಾಚಿದ್ ವಾಚ್ಯಾಽಪರೈವ ತತ್ ।**
**ಸ ಏವ ವೃತ್ತಿಘಟಯೋರಸ್ತ್ವಧ್ಯಾಸಂ ಶ್ರಮಾಯ ತೇ ॥ ೬೫೩ ॥**

**ಅರ್ಥ-** ವಿಷಯತ್ವಂ = ವಿಷಯತ್ವವು ಮತ್ತು, ವಿಷಯಿತಾ = ವಿಷಯಿತ್ವವು, ಅಪರೈವ = ಬೇರೆ ರೀತಿಯಾದುದೇ, ಕಾಚಿತ್ = ವಿಲಕ್ಷಣವಾದ ಒಂದು ಸಂಬಂಧವು ಎಂದು, ವಾಚ್ಯಾ = ಹೇಳಲ್ಪಡಬೇಕು, ತತ್ = ಆದ್ದರಿಂದ, ಎಂದರೆ ಪ್ರಕಾರಾಂತರದಿಂದ ಜ್ಞಾನಜ್ಞೇಯಗಳ ಸಂಬಂಧವನ್ನು ನಿರ್ವಾಹಮಾಡಲು ಸಾಧ್ಯವಿಲ್ಲವಾದುದರಿಂದ, ಸ ಏವ = ಆ ಸಂಬಂಧವೇ, ವೃತ್ತಿಘಟಯೋಃ = ವೃತ್ತಿಗೂ ಮತ್ತು ಘಟಕ್ಕೂ, ಅಸ್ತು = ಇರಲಿ, ಅಯಂ = ಈ ಅಧ್ಯಾಸಪರ್ಯಂತಾನುಧಾವನವು, ತೇ = ನಿನಗೆ, ಶ್ರಮಾಯ = ಶ್ರಮವನ್ನು ಉಂಟುಮಾಡುವುದಾಗಿ ಆಗುತ್ತದೆ.

**ಅನುವಾದ -** ಜ್ಞಾನತ್ವಜ್ಞೇಯತ್ವವನ್ನು ಬಿಟ್ಟು, ಹಾಗೇಯೇ ಅಧ್ಯಸ್ತತ್ವಾಧ್ಯಾಸತ್ವವನ್ನು ಬಿಟ್ಟು ಬೇರೆ ಯಾವುದೋ ಒಂದು ಸಂಬಂಧವನ್ನು ವಿಷಯೀ ಮತ್ತು ವಿಷಯಗಳಿಗೆ ಹೇಳಬೇಕು. ವೃತ್ತಿ ಮತ್ತು ಘಟಗಳಿಗೂ ಆ ಸಂಬಂಧವೇ ಇರಲಿ. ಅಧ್ಯಾಸ ಪರ್ಯಂತವಾದ ನಿನ್ನ ಅನುಧಾವನವು ನಿನಗೆ ಶ್ರಮವನ್ನು ಉಂಟುಮಾಡುತ್ತದೆ.

**ಭಾವವಿಲಾಸಿನೀ–** ಅಪರಾ ಜ್ಞಾನಜ್ಞೇಯತ್ವಾದಧ್ಯಸ್ತಾಧ್ಯಾಸಭಾವಾಚ್ಚಾತಿರಿಕ್ತಾ । ತತ್ ತಸ್ಮಾತ್ ಪ್ರಕಾರಾಂತರೇಣ ಜ್ಞಾನಜ್ಞೇಯಸಂಬಂಧಾನಿರ್ವಾಹಾತ್ । ಅಯಮ್ ಅಧ್ಯಾಸಪರ್ಯಂತ-ಧಾವನರೂಪಃ ॥ ೬೫೩ ॥

ವಿವರಣೆ - ಪ್ರಕಾರಾಂತರದಿಂದ ಜ್ಞಾನಜ್ಞೇಯಗಳಿಗೆ ಸಂಬಂಧವನ್ನು ನಿರ್ವಾಹ ಮಾಡಬೇಕಾದ ಅವಶ್ಯಕತೆಯಿರುವುದರಿಂದ ಅದೇ ಸಂಬಂಧವೇ ವೃತ್ತಿ ಮತ್ತು ಘಟಗಳಿಗೂ ಉಂಟಾಗುತ್ತದೆ. ಅಧ್ಯಾಸವನ್ನು ಕಲ್ಪನೆ ಮಾಡುವುದು ಬೇಡ ಎಂದು ಅಭಿಪ್ರಾಯ.

**ಸಂಬಂಧಾಭಾವಮಾತ್ರೇಣ ವಸ್ತು ಮಿಥ್ಯೇತಿ ಕೋ ವದೇತ್ ।**
**ಸಿದ್ಧೇ ವಸ್ತುನಿ ಸಂಬಂಧಸ್ತಾದೃಕ್ ಕಲ್ಪ್ಯೋ ಹಿ ಕಶ್ಚನ ॥ ೬೫೪ ॥**

**ಅರ್ಥ-** ಸಂಬಂಧಾಭಾವಮಾತ್ರೇಣ = ಸಂಬಂಧವನ್ನು ಹೇಳಲು ಬರುವುದಿಲ್ಲ ಎಂಬ ಇಷ್ಟೇ ಕಾರಣದಿಂದ, ವಸ್ತು = ವಸ್ತುವನ್ನೇ, ಮಿಥ್ಯೇತಿ = ಮಿಥ್ಯಾ ಎಂದು, ಕೋ ವದೇತ್ = ಯಾವನು ಹೇಳುತ್ತಾನೆ, ವಸ್ತುನಿ ಸಿದ್ಧೇ = ವಸ್ತುವು ಪ್ರಮಾಣದಿಂದ ಸಿದ್ಧವಾಗಿರಲು, ತಾದೃಕ್ = ಆ ವಸ್ತುವಿನ ಸತ್ವವನ್ನು ಉಪಪಾದನೆ ಮಾಡುವಂತಹ, ಕಶ್ಚನ ಸಂಬಂಧಃ = ಯಾವುದಾದರೂ ಒಂದು ಸಂಬಂಧವು ಕಲ್ಪ್ಯೋಹಿ = ಕಲ್ಪನೆ ಮಾಡಲ್ಪಡಬೇಕಷ್ಟೇ?

**ಅನುವಾದ -** ಕೇವಲ ಸಂಬಂಧವನ್ನು ನಿರೂಪಿಸಲು ಬರುವುದಿಲ್ಲವೆಂಬ ಕಾರಣದಿಂದ ವಸ್ತುವನ್ನೇ ಮಿಥ್ಯೆ ಎಂದು ಯಾವನು ಹೇಳುತ್ತಾನೆ? ವಸ್ತುವು ಪ್ರಮಾಣದಿಂದ

**ಸಿದ್ಧವಾಗಿರಲು ವಸ್ತುವಿನ ಸತ್ವವನ್ನು ಉಪಪಾದನೆ ಮಾಡುವಂತಹ ಯಾವುದಾದರೂ ಒಂದು ಸಂಬಂಧವು ಕಲ್ಪನೆಮಾಡಲ್ಪಡಬೇಕಷ್ಟೇ ?**

**ಭಾವವಿಲಾಸಿನೀ– ಕಿಂಚ ದೃಷ್ಟಸಂಬಂಧೇಷ್ವೇಕತರಾಭಾವೇ ಸಂಬಂಧಾಂತರಮೇವ ಕಲ್ಪ್ಯಮ್ । ನತು ತಸ್ಯ ಮಿಥ್ಯಾತ್ವಮಿತ್ಯಾಹ –ಸಂಬಂಧೇತಿ ।। ೬೫೪ ।।**

ವಿವರಣೆ - ಕ್ಲುಪ್ತವಾದ ಸಂಬಂಧಗಳಲ್ಲಿ ಯಾವ ಒಂದು ಸಂಬಂಧವೂ ಕೂಡದಿದ್ದರೆ ವಸ್ತುವನ್ನೇ ಮಿಥ್ಯೆ ಎಂದು ಹೇಳಬಾರದು. ಅಕ್ಲುಪ್ತವಾದ ಇನ್ನೊಂದು ಸಂಬಂಧವನ್ನು ಕಲ್ಪಿಸಿ ಪ್ರಮಾಣಸಿದ್ಧವಾದ ವಸ್ತುವಿನ ಸತ್ಯತ್ವವನ್ನು ಉಪಪಾದನೆ ಮಾಡಬೇಕು ಎಂದು ಅಭಿಪ್ರಾಯ.

**ಘಟಾಭಾವಶ್ಚ ಭೂಮಿಶ್ಚ ಯೋಗಾಭಾವೇನ ಕಿಂ ಮೃಷಾ ।**
**ತಾದೃಕ್ ಸ್ವರೂಪತಾಮಂತೇ ತಯೋರ್ಯೋಗಂ ಹಿ ಮನ್ವತೇ ।। ೬೫೫ ।।**

**ಅರ್ಥ-** ಯೋಗಾಭಾವೇನ = ಕ್ಲುಪ್ತವಾದ ಸಂಬಂಧವು ಇಲ್ಲ ಎಂಬ ಕಾರಣದಿಂದ ಘಟಾಭಾವಶ್ಚ ಭೂಮಿಶ್ಚ = ಘಟಾಭಾವವೂ ಮತ್ತು ಭೂತಲವೂ, ಮೃಷಾ ಕಿಂ = ಮಿಥ್ಯೆಯೇ? ತಯೋಃ = ಘಟಾಭಾವ ಮತ್ತು ಭೂಮಿಗಳಿಗೆ, ಅಂತೇ = ಕೊನೆಯಲ್ಲಾದರೂ, ತಾದೃಕ್ ಸ್ವರೂಪತಾಮ್ = ಸಂಬಂಧಾಂತರವಿಲ್ಲದೆ ವಿಶಿಷ್ಟಪ್ರತೀತಿಯೋಗ್ಯತ್ವರೂಪವಾದ, ಯೋಗಂ = ಸ್ವರೂಪಸಂಬಂಧವಿಶೇಷವನ್ನು ಮನ್ವತೇ ಹಿ = ಅಂಗೀಕರಿಸುತ್ತಾರಷ್ಟೇ ?

**ಅನುವಾದ - ಘಟಾಭಾವಕ್ಕೂ ಮತ್ತು ಭೂಮಿಗೂ ಕ್ಲುಪ್ತವಾದ ಸಂಬಂಧವಿಲ್ಲವೆಂಬ ಕಾರಣದಿಂದ ಘಟಾಭಾವವನ್ನಾಗಲೀ ಅಥವಾ ಭೂತಲವನ್ನಾಗಲೀ, ಯಾರೂ ಮಿಥ್ಯೆ ಎಂದು ಅಂಗೀಕರಿಸುವುದಿಲ್ಲ. ಕ್ಲುಪ್ತವಾದ ಸಂಬಂಧಗಳಿಲ್ಲದಿದ್ದರೆ, ಸಂಬಂಧಾಂತರ ಮಂತರೇಣ ವಿಶಿಷ್ಟಪ್ರತೀತಿನಿಯಾಮಕತ್ವ ಅಥವಾ ವಿಶಿಷ್ಟಪ್ರತೀತಿಯೋಗ್ಯತ್ವರೂಪವಾದ ಸ್ವರೂಪಸಂಬಂಧವಿಶೇಷವನ್ನೇ ಅವುಗಳಿಗೆ ಅಂಗೀಕರಿಸುತ್ತಾರಷ್ಟೇ ?**

**ಭಾವವಿಲಾಸಿನೀ–** ತಾದೃಕ್ ಸ್ವರೂಪತಾಂ ಸಂಬಂಧಾಂತರಮಂತರೇಣ ವಿಶಿಷ್ಟಪ್ರತೀತಿಯೋಗ್ಯ-ಸ್ವರೂಪತಾಮ್ । ಸ್ವರೂಪಸಂಬಂಧವಿಶೇಷಮಿತಿ ಯಾವತ್ । ತಯೋಃ ಭೂತಲಘಟಾಭಾವಯೋಃ।।

ವಿವರಣೆ - ಘಟಾಭಾವ ಮತ್ತು ಭೂತಲಕ್ಕೆ ಕ್ಲುಪ್ತವಾದ ಸಂಯೋಗಸಂಬಂಧವಾಗಲೀ, ಸಮವಾಯಸಂಬಂಧವಾಗಲೀ ಇಲ್ಲ. ಆದರೂ, ಅವೆರಡೂ ಪ್ರಾಮಾಣಿಕವಾದುದರಿಂದ ಸ್ವರೂಪಸಂಬಂಧವಿಶೇಷವನ್ನು ಅಂಗೀಕರಿಸುತ್ತಾರೆ. ಆ ಸಂಬಂಧವು ಇದುವರೆಗೆ ಕ್ಲುಪ್ತವಾಗಿಲ್ಲ. ಆದರೂ ಪ್ರಾಮಾಣಿಕವಾದ ಭೂತಲ ಮತ್ತು ಘಟಾಭಾವವನ್ನು ಉಪಪಾದನೆ ಮಾಡಲು ಅಂತಹ ಸಂಬಂಧವನ್ನು ಅಂಗೀಕರಿಸುತ್ತಾರೆ. ಸ್ವರೂಪಸಂಬಂಧವೆಂದರೆ, ಸಂಬಂಧಾಂತರ ಮಂತರೇಣ ವಿಶಿಷ್ಟಪ್ರತೀತಿನಿಯಾಮಕರೂಪವಾದುದು ಎಂದು ಅಭಿಪ್ರಾಯ.

**ನ ಚೇತ್ ಪರೋಕ್ಷವೃತ್ತೀನಾಂ ವಿಷಯಾಃ ಸ್ಯುಃ ಕಥಂ ವದ ।**
**ನಹಿ ವೃತ್ತೌ ಪದಾರ್ಥಾನಾಮಧ್ಯಾಸಸ್ತತ್ರ ವಿದ್ಯತೇ ॥ ೬೫೬ ॥**

**ಜ್ಞಾನಜ್ಞೇಯತ್ವಮರ್ಯಾದಾ ತತ್ರ ಯೇನೋಚ್ಯತೇ ತ್ವಯಾ ।**
**ತೇನೈವ ದೃಶ್ಯತಾದೃಕ್ತ್ವಮಪರೋಕ್ಷೇಽಪಿ ಕಥ್ಯತಾಮ್ ॥ ೬೫೭ ॥**

**ಅರ್ಥ-** ನಚೇತ್ = ಜ್ಞಾನಜ್ಞೇಯಗಳಿಗೆ ಸ್ವರೂಪಸಂಬಂಧವಿಶೇಷವನ್ನು ಒಪ್ಪದೆ, ಅಧ್ಯಾಸವನ್ನೇ ಸಂಬಂಧ ಎಂದು ಅಂಗೀಕರಿಸುವುದಾದರೆ, ಪರೋಕ್ಷವೃತ್ತೀನಾಂ = ಪರೋಕ್ಷವೃತ್ತಿಗಳಿಗೆ, ವಿಷಯಾಃ = ವಿಷಯಗಳು, ಕಥಂ = ಹೇಗೆ, ಸ್ಯುಃ = ಆಗುತ್ತವೆ ಎಂದು, ವದ = ಹೇಳು, ತತ್ರ = ಪರೋಕ್ಷವೃತ್ತಿಸ್ಥಳದಲ್ಲಿ, ವೃತ್ತೌ = ವೃತ್ತಿಯಲ್ಲಿ, ಪದಾರ್ಥಾನಾಂ = ಪದಾರ್ಥಗಳ, ಅಧ್ಯಾಸಃ = ಅಧ್ಯಾಸವು, ನ ಹಿ ವಿದ್ಯತೇ = ಇಲ್ಲವಷ್ಟೇ?

ತತ್ರ = ಪರೋಕ್ಷವೃತ್ತಿಸ್ಥಳದಲ್ಲಿ, ಜ್ಞಾನಜ್ಞೇಯತ್ವಮರ್ಯಾದಾ = ಜ್ಞಾನತ್ವ ಮತ್ತು ಜ್ಞೇಯತ್ವ ಎಂಬ ವ್ಯವಸ್ಥೆಯು, ತ್ವಯಾ = ನಿನ್ನಿಂದ, ಯೇನ = ಯಾವ ನಿಮಿತ್ತದಿಂದ, ಉಚ್ಯತೇ = ಹೇಳಲ್ಪಡುತ್ತದೆಯೋ, ತೇನೈವ = ಅದೇ ನಿಮಿತ್ತದಿಂದಲೇ, ಅಪರೋಕ್ಷೇಪಿ = ಅಪರೋಕ್ಷವೃತ್ತಿಸ್ಥಳದಲ್ಲಿಯೂ, ದೃಶ್ಯತಾದೃಕ್ತ್ವಮ್ = ದೃಶ್ಯತ್ವ ಮತ್ತು ದೃಕ್ತ್ವವು, ಕಥ್ಯತಾಂ = ಹೇಳಲ್ಪಡಲಿ.

**ಅನುವಾದ - ಜ್ಞಾನಜ್ಞೇಯಗಳಿಗೆ ಭೂತಲ ಮತ್ತು ಅಭಾವಗಳಿಗಿರುವಂತೆ ಸ್ವರೂಪಸಂಬಂಧವಿಶೇಷವನ್ನು ಒಪ್ಪದೆ, ಅಧ್ಯಾಸವೇ ಸಂಬಂಧ ಎಂದು ಹೇಳುವುದಾದರೆ, ಪರೋಕ್ಷವೃತ್ತಿಯ ಸ್ಥಳದಲ್ಲಿ ಪದಾರ್ಥಗಳು ಹೇಗೆ ವಿಷಯವಾಗುತ್ತವೆ ಎಂದು ಹೇಳು. ಆ ಸ್ಥಳದಲ್ಲಿ ಪದಾರ್ಥಗಳಿಗೆ ವೃತ್ತಿಯಲ್ಲಿ ಅಧ್ಯಾಸವಿಲ್ಲವಷ್ಟೇ? ಆ ಸ್ಥಳದಲ್ಲಿ ಯಾವ ನಿಮಿತ್ತದಿಂದ ನೀನು ಜ್ಞಾನತ್ವ ಮತ್ತು ಜ್ಞೇಯತ್ವದ ವ್ಯವಸ್ಥೆಯನ್ನು ಹೇಳುತ್ತೀಯೋ ಅದೇ ನಿಮಿತ್ತದಿಂದಲೇ ಅಪರೋಕ್ಷವೃತ್ತಿಸ್ಥಳದಲ್ಲಿಯೂ ದೃಶ್ಯತ್ವ ಮತ್ತು ದೃಕ್ತ್ವದ ವ್ಯವಸ್ಥೆಯನ್ನು ಹೇಳು.**

**ಭಾವವಿಲಾಸಿನೀ–** ನಚೇತ್ । ಜ್ಞಾನಜ್ಞೇಯಯೋರ್ಭೂತಲಾಭಾವಯೋರಿವ ಸ್ವರೂಪ-ಸಂಬಂಧವಿಶೇಷ ಏವ ಸಂಬಂಧೋ ನಚೇತ್ ಅಧ್ಯಾಸ ಏವಸಂಬಂಧೋವಾಚ್ಯಶ್ಚೇದಿತ್ಯರ್ಥಃ । ತತ್ರ ಪರೋಕ್ಷಜ್ಞಾನಸ್ಥಲೇ ॥ ೬೫೬-೬೫೭॥

ವಿವರಣೆ - ಪರೋಕ್ಷವೃತ್ತಿಯಲ್ಲಿ ಪದಾರ್ಥಗಳು ಅಧ್ಯಸ್ಥವಲ್ಲ. ಅಲ್ಲಿ ವಿಷಯ ವಿಷಯೀಭಾವವನ್ನು ಉಪಪಾದನೆ ಮಾಡಲು ಅಧ್ಯಾಸವನ್ನು ಬಿಟ್ಟು ಬೇರೆ ಒಂದು ಸಂಬಂಧವನ್ನೇ ಹೇಳಬೇಕು. ಅದೇ ಸಂಬಂಧವು ಅಪರೋಕ್ಷವೃತ್ತಿಸ್ಥಳದಲ್ಲಿಯೂ ಉಪಪನ್ನವಾಗುವುದರಿಂದ ಅಧ್ಯಾಸದ ಕಲ್ಪನೆಯು ಅಪ್ರಾಮಾಣಿಕ ಮತ್ತು ವ್ಯರ್ಥ ಎಂದು ಅಭಿಪ್ರಾಯ.

**ಅನ್ಯಥಾ ಪಟವೃತ್ತಿಶ್ಚ ಘಟವೃತ್ತಿಃ ಕುತೋ ನ ತೇ ॥ ೬೫೮ ॥**

**ತತ್ತದ್ವೃತ್ತಿತ್ವಮೇವ ಸ್ಯಾದ್ ಯೇನೋಪಾಯೇನ ತೇ ಮತೇ ।**
**ತೇನೋಪಾಯೇನ ಸಾ ವೃತ್ತಿಸ್ತತ್ತಜ್ಞಾನಂ ಭವೇನ್ಮಮ ॥ ೬೫೯ ॥**

**ತಸ್ಮಾತ್ ಕೀಲಸ್ಯ ಲಾಭಾಯ ನ ದೇವಾಲಯನಾಶನಮ್ ।**
**ಕುರು ಸ್ವೀಕುರು ವಿಶ್ವಸ್ಯ ಸತ್ಯತಾಂ ಭೃತ್ಯತಾಂ ಭಜ ॥ ೬೬೦ ॥**

**ಅರ್ಥ-** ಅನ್ಯಥಾ = ವ್ಯವಸ್ಥೆಯನ್ನು ಹೇಳದಿದ್ದರೆ, ಪಟವೃತ್ತಿಶ್ಚ = ಪಟವೃತ್ತಿಯು, ತೇ = ನಿನಗೆ, ಕುತಃ = ಏಕೆ, ಘಟವೃತ್ತಿಃ ನ = ಘಟವೃತ್ತಿಯು ಆಗುವುದಿಲ್ಲ.

ತೇ ಮತೇ = ನಿನ್ನ ಮತದಲ್ಲಿ, ಯೇನ ಉಪಾಯೇನ = ಯಾವ ಉಪಾಯದಿಂದ ಆಯಾ ವೃತ್ತಿಗಳಿಗೆ, ತತ್ತದ್ವೃತ್ತಿತ್ವಮೇವ ಸ್ಯಾತ್ = ಘಟವೃತ್ತಿತ್ವ, ಪಟವೃತ್ತಿತ್ವಾದಿಗಳು ಉಂಟಾಗುತ್ತವೆಯೋ, ತೇನ ಉಪಾಯೇನ = ಆ ಉಪಾಯದಿಂದಲೇ, ಸಾ ವೃತ್ತಿಃ = ಆ ವೃತ್ತಿಯು, ಮಮ = ನನಗೆ, ತತ್ತಜ್ಞಾನಂ = ಆಯಾ ವಸ್ತುವಿನ ಜ್ಞಾನ ಎಂದರೆ ಪಟಜ್ಞಾನ, ಘಟಜ್ಞಾನವಾಗಿ, ಭವೇತ್ = ಆಗುತ್ತದೆ.

ತಸ್ಮಾತ್ = ಆದ್ದರಿಂದ, ಕೀಲಸ್ಯ = ಚಿಲಕದ, ಲಾಭಾಯ = ಲಾಭಕ್ಕೋಸ್ಕರ, ದೇವಾಲಯ ನಾಶನಂ = ದೇವಾಲಯ ನಾಶವನ್ನೇ, ನ ಕುರು = ಮಾಡಬೇಡ, ವಿಶ್ವಸ್ಯ = ಪ್ರಪಂಚದ, ಸತ್ಯತಾಂ = ಸತ್ಯತ್ವವನ್ನು, ಸ್ವೀಕುರು = ಸ್ವೀಕರಿಸು, ಭೃತ್ಯತಾಮ್ = ಪ್ರಭುವಾದ ಈಶ್ವರನ ದಾಸತ್ವವನ್ನು, ಭಜ = ಹೊಂದು.

**ಅನುವಾದ** - ವೃತ್ತಿ ಮತ್ತು ವಿಷಯಗಳಿಗೆ ನಿಯಾಮಕವಾದ ಒಂದು ಸಂಬಂಧವನ್ನು ಹೇಳದಿದ್ದರೆ, ಪಟವೃತ್ತಿಯು ನಿನ್ನ ರೀತಿಯಲ್ಲಿ ಏಕೆ ಘಟವೃತ್ತಿಯಾಗುವುದಿಲ್ಲ? ಯಾವ ಉಪಾಯದಿಂದ ಘಟಾದಿವೃತ್ತಿಗಳಿಗೆ ಘಟವೃತ್ತಿತ್ವಾದಿಗಳು ನಿನ್ನ ಮತದಲ್ಲಿ ಉಂಟಾಗುತ್ತವೆಯೋ ಅದೇ ಉಪಾಯದಿಂದ ಘಟಾದಿವೃತ್ತಿಗಳಿಗೆ ನನ್ನ ಮತದಂತೆ ತತ್ತಜ್ಞಾನತ್ವವೇ ಉಂಟಾಗುತ್ತದೆ. ಆದ್ದರಿಂದ ಚಿಲಕದ (ಬಾಗಿಲಿನ ಕೊಂಡಿಯ) ಲಾಭಕ್ಕೋಸ್ಕರವಾಗಿ ದೇವಾಲಯವನ್ನೇ ನಾಶಮಾಡಬೇಡ. ವಿಶ್ವದ ಸತ್ಯತ್ವವನ್ನು ಸ್ವೀಕಾರ ಮಾಡು. ಸತ್ಯಜಗನ್ನಿರ್ಮಾಣವನ್ನು ಮಾಡಿದ ಕಾರಣದಿಂದ ಪ್ರಭುವಾದ ಈಶ್ವರನನ್ನು ಭಜಿಸು.

**ಭಾವವಿಲಾಸಿನೀ– ಬಾಧಕಾಂತರಂ ಚಾಹ –ಅನ್ಯಥೇತಿ ॥ ೬೫೮–೬೬೦ ॥**

ವಿವರಣೆ- ಘಟಕ್ಕೂ ಘಟವೃತ್ತಿಗೂ ಯಾವುದಾದರೂ ನಿಯಾಮಕಸಂಬಂಧವನ್ನು ಹೇಳಬೇಕು. ಆ ಸಂಬಂಧವಿಲ್ಲದಿದ್ದರೆ, ಶುದ್ಧಚೈತನ್ಯದಲ್ಲಿ ಘಟದಂತೆ ಪಟವೂ

ಅಧ್ಯಸ್ತವಾಗಿರುವಾಗ ಘಟವನ್ನು ಪ್ರಕಾಶಿಸುವ ಘಟವೃತ್ತಿಯು ಪಟವನ್ನು ಏಕೆ ಪ್ರಕಾಶಿಸುವುದಿಲ್ಲ ಎಂಬ ಪ್ರಶ್ನೆಯು ಬಂದೇಬರುತ್ತದೆ. ವೃತ್ತಿಯಿಂದ ಅಧಿಷ್ಠಾನಪ್ರಕಾಶವುಂಟಾದಾಗ ಅಲ್ಲಿ ಆರೋಪಿತವಾದ ಸರ್ವಪ್ರಕಾಶವು ಉಂಟಾಗಬೇಕಷ್ಟೇ? ಅದಕ್ಕಾಗಿ ಇದು ಘಟವೃತ್ತಿ ಇದು ಪಟವೃತ್ತಿ ಎಂಬ ವೈಲಕ್ಷಣ್ಯವನ್ನು ಉಪಪಾದನೆ ಮಾಡಲು ನೀನು ಏನಾದರೂ ನಿಯಾಮಕವನ್ನು ಹೇಳುವುದಿದ್ದರೆ, ಅದನ್ನು ಘಟಜ್ಞಾನ ಮತ್ತು ಪಟಜ್ಞಾನಗಳಲ್ಲಿಯೇ ಅಂಗೀಕರಿಸು. ವೃತ್ತಿಗಳನ್ನೇ ಜ್ಞಾನಗಳೆಂದು ಅಂಗೀಕರಿಸು ಎಂದು ಅಭಿಪ್ರಾಯ.

ಅಸತ್ಯಮಪ್ರತಿಷ್ಠಂ ತೇ ಜಗದಾಹುರನೀಶ್ವರಂ ।
ಅಪರಸ್ಪರಸಂಭೂತಂ ಕಿಮನ್ಯತ್ಕಾಮಹೈತುಕಂ ॥ ೬೬೧ ॥

ಏತಾಂ ದೃಷ್ಟಿಮವಷ್ಟಭ್ಯ ನಷ್ಟಾತ್ಮಾನೋಽಲ್ಪಬುದ್ಧಯಃ ।
ಪ್ರಭವಂತ್ಯುಗ್ರಕರ್ಮಾಣಃ ಕ್ಷಯಾಯ ಜಗತೋಽಹಿತಾಃ ॥ ೬೬೨ ॥

ಇತಿ ಗೀತಾಸ್ಥಕೃಷ್ಣೋಕ್ತ್ಯಾ ಮಿಥ್ಯಾತ್ವಾಶಾಂ ಪರಿತ್ಯಜ ॥ ೬೬೩ ॥

**ಅರ್ಥ-** ತೇ = ಅಸುರರು, ಜಗತ್ = ಜಗತ್ತನ್ನು, ಅಸತ್ಯಮ್ = ಅಸತ್ಯವೆಂದು, ಅಪ್ರತಿಷ್ಠಂ = ಆಧಾರರಹಿತವೆಂದು, ಅನೀಶ್ವರಂ = ಈಶ್ವರರಹಿತನೆಂದು, ಆಹುಃ = ಹೇಳುತ್ತಾರೆ, ಅಪರಸ್ಪರಸಂಭೂತಂ = ಪರಸ್ಪರ ಕಾರ್ಯಕಾರಣಭಾವರಹಿತವಾದುದು, ಆದರೆ ಅಸತ್ತಲ್ಲ, ಕಿಂ = ಆದರೆ, ಅನ್ಯತ್ = ಸದ್ವಿಲಕ್ಷಣ ಮತ್ತು ಅಸದ್ವಿಲಕ್ಷಣವಾದುದು, ಕಾಮಹೈತುಕಂ = ಅಜ್ಞಾನೋಪಾದಾನಕವಾದುದು ಎಂದು, ಆಹುಃ = ಹೇಳುತ್ತಾರೆ.

ನಷ್ಟಾತ್ಮಾನಃ = ತಮ್ಮ ಸ್ವರೂಪವನ್ನು ಮತ್ತು ಭಗವತ್‌ಸ್ವರೂಪವನ್ನು ಹಾಳುಮಾಡಿಕೊಂಡು, ಅಲ್ಪಬುದ್ಧಯಃ = ಅಲ್ಪಬುದ್ಧಿಯವರಾಗಿ, ಏತಾಂ ದೃಷ್ಟಿಮ್ = ಈ ಜ್ಞಾನವನ್ನು, ಅವಷ್ಟಭ್ಯ = ಅವಲಂಬಿಸಿ, ಜಗತಃ = ಜಗತ್ತಿಗೆ, ಅಹಿತಾಃ = ಅಹಿತರಾದ ಅವರು, ಉಗ್ರಕರ್ಮಾಣಃ = ಕ್ರೂರವಾದ ಕರ್ಮಗಳನ್ನು ಮಾಡುವವರಾಗಿ, ಜಗತಃ ಕ್ಷಯಾಯ = ಜಗತ್ತಿನ ವಿನಾಶಕ್ಕೆ, ಪ್ರಭವಂತಿ = ಉದ್ಯುಕ್ತರಾಗುತ್ತಾರೆ.

ಇತಿ = ಈ ರೀತಿಯಾದ, ಗೀತಾಸ್ಥಕೃಷ್ಣೋಕ್ತ್ಯಾ = ಗೀತೆಯಲ್ಲಿರುವ ಕೃಷ್ಣನ ವಚನದಿಂದ, ಮಿಥ್ಯಾತ್ವಾಶಾಂ = ಮಿಥ್ಯಾತ್ವದ ಆಶೆಯನ್ನು, ಪರಿತ್ಯಜ = ಪರಿತ್ಯಜಿಸು.

**ಅನುವಾದ -** ಅಸುರರು ಜಗತ್ತನ್ನು ಅಸತ್ಯವೆಂದೂ, ಆಧಾರರಹಿತವೆಂದೂ, ಈಶ್ವರರಹಿತವೆಂದೂ, ಕಾರ್ಯಕಾರಣಭಾವರಹಿತವೆಂದೂ, ಸದಸದ್ವಿಲ್ಲಕ್ಷಣ ವೆಂದೂ, ಅಜ್ಞಾನೋಪಾದಾನಕವೆಂದೂ ಬೇರೆ ರೀತಿಯಾಗಿ ಹೇಳುತ್ತಾರೆ. ಆತ್ಮನಾಶವನ್ನು ಮಾಡಿಕೊಳ್ಳತಕ್ಕಂತಹ ಅಲ್ಪಬುದ್ಧಿಗಳಾದ ಅವರು ಈ ಜ್ಞಾನವನ್ನು

**ಅವಲಂಬಿಸಿ ಕ್ರೂರಕರ್ಮಗಳನ್ನು ಆಚರಿಸುತ್ತಾ ಜಗತ್ತಿಗೆ ಅಹಿತರಾಗಿ ಜಗತ್ತಿನ ನಾಶವನ್ನು ಸಂಪಾದನೆ ಮಾಡಲು ಉದ್ಯುಕ್ತರಾಗುತ್ತಾರೆ. ಈ ರೀತಿಯಾದ ಗೀತೆಯಲ್ಲಿರುವ ಕೃಷ್ಣನ ವಚನದಿಂದ ಮಿಥ್ಯಾತ್ವದ ಆಸೆಯನ್ನು ಪರಿತ್ಯಜಿಸು.**

**ಭಾವವಿಲಾಸಿನೀ–ಗೀತಾಯಾಂ ಮಿಥ್ಯಾತ್ವಸ್ಯ ಭಗವತೈವ ಸ್ಪಷ್ಟಂ ನಿಂದಿತತ್ವಾಚ್ಚ ನ ಜಗನ್ಮಿಥ್ಯಾತ್ವಮಿತ್ಯಾಹ – ಅಸತ್ಯಮಿತಿ ॥ ತೇ ಆಸುರಾಃ । ಆಸುರೀಂ ಪಾರ್ಥಮೇ ಶೃಣ್ವಿತಿ ಉಪಕ್ರಮಾತ್ । ನಷ್ಟಾತ್ಮಾನಃ ಅಲ್ಪಬುದ್ಧಯ ಇತಿ ನಿಂದನಾತ್ ಪೂರ್ವಪರಾಮರ್ಶಿತಚಚ್ಛಬ್ದೇನಾಸುರತ್ವೇನ ನಿಂದನಾಚ್ಚ ಜಗತೋऽಸತ್ಯತ್ವವಾದೋ ನ ಯುಕ್ತ ಇತಿ ಭಾವಃ ॥ ೬೬೧-೬೬೩ ॥**

ವಿವರಣೆ - ಗೀತೆಯಲ್ಲಿ ಕೃಷ್ಣನೇ ಸ್ಪಷ್ಟವಾಗಿ ಮಿಥ್ಯಾತ್ವವನ್ನು ನಿಂದಿಸಿರುವುದರಿಂದ ಜಗನ್ಮಿಥ್ಯಾತ್ವವು ಅಪ್ರಾಮಾಣಿಕವಾದುದು ಎಂದು ಇಲ್ಲಿ ಹೇಳುತ್ತಾರೆ. 'ಆಸುರೀಂ ಪಾರ್ಥಮೇಶೃಣು' ಎಂದು ಅಸುರಸ್ವಭಾವವನ್ನು ಹೇಳುತ್ತೇನೆ, ಎಲೈ ಅರ್ಜುನನೇ ಕೇಳು ಎಂದು ಪ್ರತಿಜ್ಞೆಯನ್ನು ಮಾಡಿ ಈ ಮಾತನ್ನು ಹೇಳುವುದರಿಂದ ಇದು ಅಸುರರ ಜ್ಞಾನದ ಸ್ವರೂಪ. 'ನಷ್ಟಾತ್ಮಾನಃ' ಎಂದೂ, 'ಅಲ್ಪಬುದ್ಧಯಃ' ಎಂದೂ ಅಸುರರೂ ಎಂದೂ ನಿಂದಿಸಿರುವ ಕಾರಣ ಜಗತ್ತಿನ ಅಸತ್ಯತ್ವವಾದವು ಅಯುಕ್ತವಾದುದು ಎಂದು ಅಭಿಪ್ರಾಯ.

**ಘಟಾವಚ್ಛಿನ್ನಚೈತನ್ಯೇ ಘಟಾಧ್ಯಾಸೋ ನ ಯುಜ್ಯತೇ ।**
**ಆತ್ಮಾಶ್ರಯಪ್ರಸಂಗೇನ ತಾದೃಗ್ಭ್ರಾಂತೇರಸಂಭವಾತ್ ॥ ೬೬೪ ॥**

**ಅತೋ ಘಟಾದೇರಧ್ಯಾಸಃ ಶುದ್ಧಚಿತ್ಯೇವ ತೇ ಮತೇ ।**
**ನಿರಂಶಂ ಶುದ್ಧಚೈತನ್ಯಮೇಕಮೇವ ಹಿ ತತ್ತದಾ ॥ ೬೬೫ ॥**

**ಅಧ್ಯಾಸಾತ್ ಪ್ರಾಗವಚ್ಛೇದಭೇದಾದ್ ಭೇದೋऽಪಿ ತತ್ರ ನ ।**
**ಏವಂ ಚ ಸರ್ವಂ ತತ್ರಾಸೀದಧ್ಯಸ್ತಂ ನತು ಕಿಂಚನ ॥ ೬೬೬ ॥**

**ಅರ್ಥ-** ಘಟಾವಚ್ಛಿನ್ನಚೈತನ್ಯೇ = ಘಟಾವಚ್ಛಿನ್ನ ಚೈತನ್ಯದಲ್ಲಿ, ಘಟಾಧ್ಯಾಸಃ = ಘಟದ ಆರೋಪವು, ನ ಯುಜ್ಯತೇ = ಕೂಡುವುದಿಲ್ಲ. ಆತ್ಮಾಶ್ರಯಪ್ರಸಂಗೇನ = ಆತ್ಮಾಶ್ರಯ ಪ್ರಸಂಗವಿರುವುದರಿಂದ, ತಾದೃಗ್ಭ್ರಾಂತೇಃ = ಅಂತಹ ಭ್ರಾಂತಿಯು, ಅಸಂಭವಾತ್= ಅಸಂಭಾವಿತವಾದುದರಿಂದ,

ಅತಃ = ಆದ್ದರಿಂದ, ತೇ ಮತೇ = ನಿನ್ನ ಮತದಲ್ಲಿ, ಘಟಾದೇಃ = ಘಟಾದಿಗಳ, ಅಧ್ಯಾಸಃ = ಆರೋಪವು, ಶುದ್ಧಚಿತ್ಯೇವ = ಶುದ್ಧಚಿತ್ತಿನಲ್ಲಿಯೇ ಎಂದು ಅಂಗೀಕರಿಸಬೇಕು. ನಿರಂಶಂ ತತ್ ಶುದ್ಧಚೈತನ್ಯಮ್ = ನಿರಂಶವಾದ ಆ ಶುದ್ಧಚೈತನ್ಯವಾದರೋ, ಸದಾ = ಯಾವಾಗಲೂ, ಏಕಮೇವಹಿ = ಒಂದೇ ಆಗಿದೆಯಷ್ಟೇ?

ಅಧ್ಯಾಸಾತ್ ಪ್ರಾಕ್ = ಅಧ್ಯಾಸಕ್ಕಿಂತಲೂ ಮೊದಲು, ಅವಚ್ಛೇದಭೇದಾದಪಿ = ಅವಚ್ಛೇದಕಭೇದದಿಂದಲೂ ಕೂಡ, ತತ್ರ = ಆ ಅಖಂಡಚೈತನ್ಯದಲ್ಲಿ, ಭೇದೋ ನ = ಭೇದವಿಲ್ಲ. ಏವಂಚ = ಹೀಗಾಗಿ, ಸರ್ವಂ = ಎಲ್ಲವೂ, ತತ್ರ = ಆ ಶುದ್ಧಚೈತನ್ಯನಲ್ಲಿ, ಅಧ್ಯಸ್ತಮಾಸೀತ್ = ಅಧ್ಯಸ್ತವಾಗಿದೆ, ಕಿಂಚನ = ಘಟಾದಿಗಳು ಮಾತ್ರ, ನ ತು = ಅಧ್ಯಸ್ತವಾಗಿಲ್ಲವಷ್ಟೇ?

**ಅನುವಾದ** - ಆತ್ಮಾಶ್ರಯಪ್ರಸಂಗವು ಬರುವುದರಿಂದ ಮತ್ತು ಅಂತಹ ಭ್ರಾಂತಿಯು ಕೂಡುವುದಿಲ್ಲವಾದ್ದರಿಂದ ಘಟಾವಚ್ಛಿನ್ನಚೈತನ್ಯದಲ್ಲಿ ಘಟದ ಆರೋಪವು ಕೂಡುವುದಿಲ್ಲ. ಆದ್ದರಿಂದ ನಿನ್ನ ಮತದಲ್ಲಿ ಶುದ್ಧಚೈತನ್ಯದಲ್ಲಿಯೇ ಘಟಾದಿಗಳ ಆರೋಪವೆಂದು ಹೇಳಬೇಕು. ಆ ಶುದ್ಧಚೈತನ್ಯವಾದರೋ ನಿರಂಶವಾದುದು ಮತ್ತು ಯಾವಾಗಲೂ ಒಂದೇ ಆಗಿರುವುದು.

ಅಧ್ಯಾಸಕ್ಕಿಂತ ಮೊದಲು ಅವಚ್ಛೇದಕಭೇದದಿಂದಲೂ ಸಹ ಶುದ್ಧಚೈತನ್ಯದಲ್ಲಿ ಭೇದವು ಉಂಟಾಗುವುದಿಲ್ಲ. ಈ ರೀತಿಯಾಗಿ ಸರ್ವವೂ ಶುದ್ಧಚೈತನ್ಯದಲ್ಲಿಯೇ ಅಧ್ಯಸ್ತವಾಗಿದೆ. ಘಟಾದಿ ಒಂದೊಂದು ವಸ್ತುವು ಮಾತ್ರ ಅಲ್ಲ.

**ಭಾವವಿಲಾಸಿನೀ**– ಪ್ರಕಾರಾಂತರೇಣಾಪ್ಯಧ್ಯಾಸಸ್ಯಾರ್ಥಸಂಬಂಧತಾಂ ದೂಷಯತಿ ॥ **ಘಟಾವಚ್ಛಿನ್ನೇತಿ**॥ ನಚ ವಾಚ್ಯಂ ಘಟೋಪಲಕ್ಷಿತಚೈತನ್ಯ ಏವಾಧ್ಯಾಸಾನ್ನಾತ್ಮಾಶ್ರಯ ಇತಿ । ಅಧ್ಯಾಸಾತ್ಪೂರ್ವಂ ಘಟಸ್ಯೈವಾಭಾವೇನ ತದುಪಲಕ್ಷಿತತ್ವಸ್ಯಾಪಿ ವಕ್ತುಮಶಕ್ಯತ್ವಾತ್ । ತಾದೃಗ್ಭ್ರಾಂತೇಃ ಆತ್ಮಾಶ್ರಯಗ್ರಸ್ತಭ್ರಾಂತೇಃ ॥ ಶುದ್ಧಚಿತಿ ಶುದ್ಧಚೈತನ್ಯಾತ್ಮಕಚಿತಿ । ತತ್ರ ಶುದ್ಧಚೈತನ್ಯೇ ॥ ೬೬೪-೬೬೬॥

ವಿವರಣೆ - ಪ್ರಕಾರಾಂತರದಿಂದ ಅಧ್ಯಾಸವು ದೃಕ್ ಮತ್ತು ದೃಶ್ಯಗಳಿಗೆ ಸಂಬಂಧರೂಪವಾದುದು ಎಂಬುದನ್ನು ನಿರಾಕರಿಸುತ್ತಾರೆ. ಘಟಾವಚ್ಛಿನ್ನಚೈತನ್ಯದಲ್ಲಿ ಘಟದ ಆರೋಪವನ್ನು ಒಪ್ಪಿದರೆ, ಆತ್ಮಾಶ್ರಯದೋಷವು ಬರುತ್ತದೆ. ಆದ್ದರಿಂದ ಘಟೋಪಲಕ್ಷಿತಚೈತನ್ಯದಲ್ಲಿ ನಾವು ಆರೋಪವನ್ನು ಒಪ್ಪುತ್ತೇವೆ, ಆಗ ಆತ್ಮಾಶ್ರಯದೋಷವಿಲ್ಲ ಎಂಬ ಶಂಕೆಯೂ ಸರಿಯಲ್ಲ. ಅಧ್ಯಾಸಕ್ಕಿಂತಲೂ ಮೊದಲು ಘಟವೇ ಇಲ್ಲದಿರುವುದರಿಂದ ಘಟೋಪಲಕ್ಷಿತತ್ವವನ್ನೇ ಆ ಚೈತನ್ಯದಲ್ಲಿ ಹೇಳಲು ಸಾಧ್ಯವಿಲ್ಲ. ಎಲ್ಲವೂ ಶುದ್ಧಚೈತನ್ಯದಲ್ಲಿಯೇ ಅಧ್ಯಸ್ತವಾಗಿದೆ. ಆದ್ದರಿಂದ ಆ ಚೈತನ್ಯದ ಪ್ರಕಾಶವು ಬರುವಾಗ ಅಲ್ಲಿ ಅಧ್ಯಸ್ತವಾದ ಎಲ್ಲಾ ವಸ್ತುಗಳ ಪ್ರಕಾಶವೂ ಉಂಟಾಗಬೇಕು. ಕೇವಲ ಘಟಮಾತ್ರದ ಪ್ರಕಾಶವನ್ನು ಉಪಪಾದನೆ ಮಾಡಲು ಬರುವುದಿಲ್ಲ.

ತಸ್ಮಾತ್ ಸರ್ವಸ್ಯ ಚಾಧ್ಯಾಸಾತ್ ಸಾ ಸರ್ವಸ್ಯ ಚ ದೃಗ್ ಭವೇತ್ ।
ನಚೇತ್ ಕಸ್ಯಾಪಿ ದೃಙ್ನಸ್ಯಾದಧ್ಯಾಸಸ್ತ್ವಫಲೋ ಭವೇತ್ ॥ ೬೬೭ ॥

**ಅರ್ಥ-** ತಸ್ಮಾತ್ = ಆ ಕಾರಣದಿಂದ, ಸರ್ವಸ್ಯ ಚ ಅಧ್ಯಾಸಾತ್ = ಸರ್ವವನ್ನೂ ಅಲ್ಲಿಯೇ ಅಧ್ಯಾಸ ಮಾಡಿರುವುದರಿಂದ, ಸಾ = ಘಟಭ್ರಾಂತಿತ್ವೇನ ಅಭಿಮತವಾದ ಚೈತನ್ಯವು, ಸರ್ವಸ್ಯ ಚ ದೃಗ್ಭವೇತ್ = ಎಲ್ಲಾ ಪದಾರ್ಥಗಳ ಜ್ಞಾನವಾಗಲಿ (ಎಲ್ಲಾ ಪದಾರ್ಥದ ಭ್ರಮವಾಗಲಿ), ನಚೇತ್ = ಸರ್ವಾವಭಾಸಕತ್ವವು ಇಲ್ಲದಿದ್ದರೆ, ಕಸ್ಯಾಪಿ = ಯಾವ ಒಂದು ಘಟಾದಿ ವಿಷಯಕ್ಕೂ ಸಹ, ದೃಙ್ನಸ್ಯಾತ್ = ಪ್ರಕಾಶಕವಾಗಬಾರದು, ಅಧ್ಯಾಸಸ್ತು = ನೀನು ಅಂಗೀಕರಿಸಿದ ಅಧ್ಯಾಸವಾದರೋ, ಅಫಲೋ ಭವೇತ್ = ನಿಷ್ಫಲವಾಗುತ್ತದೆ.

**ಅನುವಾದ -** ಘಟಭ್ರಾಂತಿತ್ವೇನ ಅಭಿಮತವಾದ ಚೈತನ್ಯದಲ್ಲಿಯೇ ಎಲ್ಲವೂ ಅಧ್ಯಸ್ತವಾಗಿರುವುದರಿಂದ ಘಟಭ್ರಾಂತಿಯು ಉಂಟಾದಾಗ ಎಲ್ಲ ವಸ್ತುಗಳ ಜ್ಞಾನವೂ ಉಂಟಾಗಬೇಕು. ಎಲ್ಲ ವಸ್ತುಗಳ ಜ್ಞಾನವು ಉಂಟಾಗುವುದಿಲ್ಲವೆಂದರೆ, ಕೇವಲ ಘಟದ ಜ್ಞಾನವು ಉಂಟಾಗಲು ಏನೂ ಕಾರಣವಿಲ್ಲ. ಆದ್ದರಿಂದ ನೀನು ಅಂಗೀಕರಿಸಿದ ಅಧ್ಯಾಸವು ನಿಷ್ಫಲವಾಗುತ್ತದೆ.

**ಭಾವವಿಲಾಸಿನೀ—** ಸಾ ಘಟಭ್ರಾಂತಿತ್ವೇನಾಭಿಮತಾ ಚಿತ್ । ನಚೇತ್ ಸರ್ವಾವಭಾಸಕತ್ವಂ ನಚೇತ್ । ಕಸ್ಯಾಪಿ ತಸ್ಯ ಘಟಸ್ಯಾಪಿ ॥ ೬೬೭ ॥

ವಿವರಣೆ - ಅಧ್ಯಾಸವನ್ನು ಅಂಗೀಕರಿಸಿದುದು ಪ್ರತಿಕರ್ಮವ್ಯವಸ್ಥೆಯನ್ನು ಮಾಡುವುದಕ್ಕಾಗಿ. ಅಧ್ಯಾಸವನ್ನು ಅಂಗೀಕರಿಸದ ಮೇಲೆಯೂ ಪ್ರತಿಕರ್ಮವ್ಯವಸ್ಥೆಯು ಉಂಟಾಗುವುದಿಲ್ಲವೆಂದು ಸಿದ್ಧವಾದ ಮೇಲೆ ಅಧ್ಯಾಸವನ್ನು ಅಂಗೀಕರಿಸುವುದೇ ನಿಷ್ಫಲ ಎಂದು ಸಿದ್ಧವಾಗುತ್ತದೆ.

**ಅತೋಽಧ್ಯಾಸಾನ್ನ ದೃಗ್ದೃಶ್ಯಭಾವೋ ಬ್ರಹ್ಮಘಟಾದಿಷು ।**
**ಕಿಂತ್ವಧ್ಯಾಸೇನ ಹೀನೋಽರ್ಥಃ ಸೋಯಂ ತ್ವದ್ದೃಶಿ ದೃಶ್ಯತೇ ॥ ೬೬೮ ॥**

**ಅರ್ಥ-** ಅತಃ = ಆದ್ದರಿಂದ, ಬ್ರಹ್ಮಘಟಾದಿಷು = ಬ್ರಹ್ಮ ಮತ್ತು ಘಟ ಮೊದಲಾದವುಗಳಲ್ಲಿ, ಅಧ್ಯಾಸಾತ್ = ಅಧ್ಯಾಸ ಪ್ರಯುಕ್ತವಾಗಿ, ದೃಗ್ದೃಶ್ಯಭಾವಃ = ದೃಗ್ದೃಶ್ಯಭಾವವು, ನ = ಇಲ್ಲ, ಕಿಂತು = ಆದರೆ, ತ್ವದ್‌ದೃಶಿ = ನಿನ್ನ ಜ್ಞಾನದಲ್ಲಿ, ಅಧ್ಯಾಸೇನ ಹೀನಃ = ಅನಧ್ಯಸ್ತವಾದ, ಸೋಯಂ ಅರ್ಥಃ = ಇಂತಹ ಹೀನವಾದ ಅಧ್ಯಾಸರೂಪವಾದ ಅರ್ಥವು, ದೃಶ್ಯತೇ = ಕಂಡುಬರುತ್ತದೆ. (ಕಿಂತು = ಆದರೆ, ಅಧ್ಯಾಸೇನ = ಅಧ್ಯಾಸವನ್ನು ಅಂಗೀಕರಿಸಿದ ನಿಮಿತ್ತದಿಂದಾಗಿ, ತ್ವದ್ದೃಶಿ = ನಿನ್ನ ಬುದ್ಧಿಯಲ್ಲಿಯೇ, ಸೋಯಂ ಹೀನೋರ್ಥಃ = ಇಂತಹ ದುಷ್ಟವಾದ ಅರ್ಥವು, ದೃಶ್ಯತೇ = ಕಾಣುತ್ತದೆ)

**ಅನುವಾದ -** ಆದ್ದರಿಂದ ಬ್ರಹ್ಮ ಮತ್ತು ಘಟಾದಿವಸ್ತುಗಳಲ್ಲಿ ಅಧ್ಯಾಸಪ್ರಯುಕ್ತವಾಗಿ ದೃಕ್‌ದೃಶ್ಯಭಾವವು ಇಲ್ಲ. ಆದರೆ, ನಿನ್ನ ಬುದ್ಧಿಯಲ್ಲಿ ಮಾತ್ರ ಅನಧ್ಯಸ್ತವಾದ ಅಧ್ಯಾಸರೂಪವಾದ ಅರ್ಥವು ತೋರುತ್ತದೆ!

**ಭಾವವಿಲಾಸಿನೀ–** ಅಫಲತ್ವಮೇವ ವಿವೇಚಯತಿ ॥ ಅತ ಇತಿ ॥ ಅತಃ ಅಧ್ಯಾಸಸ್ಯ ಸರ್ವಸಾಮ್ಯಾತ್॥೬೬೮॥

**ಕಿಂಚ ಶುಕ್ತ್ಯಾದಿಚೈತನ್ಯೇಷ್ವಧ್ಯಸ್ತಂ ಪ್ರಾತಿಭಾಸಿಕಮ್ ।**
**ತ್ವನ್ಮತೇ ಕರಣದ್ವಾರಾ ಸಾಕ್ಷೀ ಕಿಲ ನಿರೀಕ್ಷತೇ ॥ ೬೬೯ ॥**

**ತದಾಽಧ್ಯಾಸಾಧ್ಯಸ್ತಭಾವಸಂಬಂಧೋ ನ ತಯೋರಭೂತ್ ।**
**ಅತಸ್ತತೋಽನ್ಯಃ ಸಂಬಂಧಸ್ತತ್ರಾವಶ್ಯಂ ಭವೇತ್ ತವ ॥ ೬೭೦ ॥**

**ತೇನೈವ ವೃತ್ತಿರ್ದೃಶ್ಯಾನಾಂ ದೃಗಸ್ತ್ವಖಿಲಸಂಮತಾ ।**
**ಅನಾನುಭವಿಕೀ ಬ್ರಹ್ಮಚಿತೋ ದೃಕ್ತ್ವಕಥಾ ವೃಥಾ ॥ ೬೭೧ ॥**

**ಅರ್ಥ-** ಕಿಂಚ = ಮತ್ತು, ಪ್ರಾತಿಭಾಸಿಕಂ = ಪ್ರಾತಿಭಾಸಿಕವಾದ ರೂಪ್ಯಾದಿಯು, ಶುಕ್ತ್ಯಾದಿಚೈತನ್ಯೇಷು = ಶುಕ್ತ್ಯಾದ್ಯವಚ್ಛಿನ್ನಚೈತನ್ಯದಲ್ಲಿ, ಅಧ್ಯಸ್ತಂ = ಅಧ್ಯಸ್ತವಾಗಿದೆ, ತ್ವನ್ಮತೇ = ನಿನ್ನ ಮತದಲ್ಲಿ, ಕರಣದ್ವಾರಾ = ಅಂತಃಕರಣ ಮೂಲಕವಾಗಿ, ಸಾಕ್ಷೀ = ಸಾಕ್ಷಿಚೈತನ್ಯವು, ನಿರೀಕ್ಷತೇ ಕಿಲ = ಅದನ್ನು ವಿಷಯೀಕರಿಸುತ್ತದೆಯಷ್ಟೆ?

ತದಾ = ಆಗ, ತಯೋಃ = ಸಾಕ್ಷಿಚೈತನ್ಯ ಮತ್ತು ಶುಕ್ತಿರಜತಗಳಿಗೆ ಅಧ್ಯಾಸಾಧ್ಯಸ್ತಭಾವ ಸಂಬಂಧಃ = ಕ್ರಮವಾಗಿ ಅಧ್ಯಾಸತ್ವಮತ್ತು ಅಧ್ಯಸ್ತತ್ವರೂಪವಾದ ಸಂಬಂಧವು, ನ ಅಭೂತ್ = ಉಂಟಾಗಲಿಲ್ಲ, ಅತಃ = ಆದ್ದರಿಂದ, ತತ್ರ = ಸಾಕ್ಷಿಚೈತನ್ಯ ಮತ್ತು ಶುಕ್ತಿರಜತದ ವಿಷಯದಲ್ಲಿ, ತತೋ ಅನ್ಯಃ ಸಂಬಂಧಃ = ಅಧ್ಯಾಸವನ್ನು ಬಿಟ್ಟು ಬೇರೆ ಇನ್ನೊಂದು ಸಂಬಂಧವು, ಅವಶ್ಯಂ = ಅವಶ್ಯಕವಾಗಿ, ಭವೇತ್ = ಉಂಟಾಗುವುದಷ್ಟೇ ?

ತೇನೈವ = ಆ ಸಂಬಂಧದಿಂದಲೇ, ದೃಶ್ಯಾನಾಂ ವೃತ್ತಿಃ = ದೃಶ್ಯವಿಷಯಕ ವೃತ್ತಿಯು, ಅಖಿಲಸಂಮತಾ = ಸರ್ವಸಮ್ಮತವಾದ, ದೃಗಸ್ತು = ವಸ್ತು (ತದ್) ವಿಷಯಕ ಜ್ಞಾನವಾಗಲಿ. ಬ್ರಹ್ಮಚಿತಃ = ಬ್ರಹ್ಮಚೈತನ್ಯಕ್ಕೆ, ದೃಕ್ತ್ವಕಥಾ = ದೃಕ್ತ್ವಕಥನವು, ಅನಾನುಭವಿಕೀ = ಅನುಭವವಿರುದ್ಧವಾದುದು ಮತ್ತು, ವೃಥಾ = ವ್ಯರ್ಥವಾದುದು.

**ಅನುವಾದ** - ಮತ್ತು ಪ್ರಾತಿಭಾಸಿಕವಾದ ಶುಕ್ತಿರಜತಾದಿಗಳು ಶುಕ್ತ್ಯಾದ್ಯವಚ್ಛಿನ್ನ-ಚೈತನ್ಯಗಳಲ್ಲಿ ಅಧ್ಯಸ್ತವಾಗಿವೆ. ನಿನ್ನ ಮತದಲ್ಲಿ ಅಂತಃಕರಣದ್ವಾರಾ ಸಾಕ್ಷಿಚೈತನ್ಯವು ಅದನ್ನು ವಿಷಯೀಕರಿಸುತ್ತದೆ. ಆದ್ದರಿಂದ ದೃಕ್ ಮತ್ತು ದೃಶ್ಯಗಳಿಗೆ ಅಧ್ಯಾಸಾಧ್ಯಸ್ತತ್ವರೂಪವಾದ ಸಂಬಂಧವು ಉಂಟಾಗಲಿಲ್ಲ. ಆ ಸ್ಥಳದಲ್ಲಿ ನೀನಾದರೂ ಅಧ್ಯಾಸವನ್ನು ಬಿಟ್ಟು ಬೇರೆ ಒಂದು ಸಂಬಂಧವನ್ನೇ ಹೇಳಬೇಕು. ಆ ಸಂಬಂಧದಿಂದಲೇ ಪದಾರ್ಥಗಳ ವೃತ್ತಿಯೆಂದು ನೀನು ಯಾವುದನ್ನು

ಕರೆಯುತ್ತೀಯೋ ಅದೇ ಸರ್ವಸಮ್ಮತವಾದ ಪದಾರ್ಥಜ್ಞಾನವಾಗಲಿ. ಬ್ರಹ್ಮ-ಚೈತನ್ಯಕ್ಕೆ ತತ್ತಜ್‌ಜ್ಞಾನತ್ವವನ್ನು ಹೇಳುವುದು ಅನುಭವವಿರುದ್ಧವಾದುದು ಮತ್ತು ವ್ಯರ್ಥವಾದುದು.

**ಭಾವವಿಲಾಸಿನೀ–** ತಯೋಃ ಸಾಕ್ಷಿಚೈತನ್ಯಶುಕ್ತಿರಜತಯೋಃ ॥ ೬೬೯-೬೭೧ ॥

**ವಿವರಣೆ -** ಶುಕ್ತಿರಜತಾದಿ ಆರೋಪಸ್ಥಳದಲ್ಲಿ ಶುಕ್ತಿರಜತವು ಶುಕ್ತ್ಯವಚ್ಛಿನ್ನಚೈತನ್ಯದಲ್ಲಿ ಅಧ್ಯಸ್ತವಾಗಿದೆ. ಆದರೆ ಶುಕ್ತಿರಜತದ ಜ್ಞಾನವು ಸಾಕ್ಷಿರೂಪವಾದುದು. ಸಾಕ್ಷಿಯಲ್ಲಿ ಶುಕ್ತಿರಜತವು ಅಧ್ಯಸ್ತವಾಗಿಲ್ಲ. ಆದ್ದರಿಂದ ಜ್ಞಾನಜ್ಞೇಯಗಳಿಗೆ ಅಧ್ಯಾಸಾಧ್ಯಸ್ತತ್ವಭಾವ ಎಂಬ ನಿಯಮವು ಶುಕ್ತಿರಜತದಲ್ಲಿಯೇ ಭಗ್ನವಾಯಿತು. ಇನ್ನು ಇದಂ ರಜತಂ ಎಂಬ ಶುಕ್ತಿರಜತಭ್ರಮದಲ್ಲಿ, ಇದಮಂಶ ಮತ್ತು ರಜತಾಂಶ ಎಂಬ ಎರಡು ಅಂಶಗಳಿವೆ. ಅವುಗಳಲ್ಲಿ ಇದಮಂಶವು ಅಂತಃಕರಣಾವಚ್ಛಿನ್ನಚೈತನ್ಯಭಾಸ್ಯ ಮತ್ತು ರಜತಾಂಶವು ಅವಿದ್ಯಾವೃತ್ತ್ಯವಚ್ಛಿನ್ನ-ಚೈತನ್ಯಭಾಸ್ಯವೆಂದು ಒಪ್ಪಿದರೆ, ಎರಡೂ ಜ್ಞಾನಗಳೂ ಬೇರೆಬೇರೆಯಾದ್ದರಿಂದ ಅಖ್ಯಾತಿಮತಪ್ರವೇಶ ಉಂಟಾಗುತ್ತದೆ. ಅಂತಃಕರಣಾವಚ್ಛಿನ್ನಚೈತನ್ಯಕ್ಕೂ ಮತ್ತು ಅವಿದ್ಯಾ-ವೃತ್ತ್ಯವಚ್ಛಿನ್ನಚೈತನ್ಯಕ್ಕೂ ಅಭೇದವಿರುವುದರಿಂದ ಅಖ್ಯಾತಿಮತಪ್ರವೇಶಪ್ರಸಂಗವಿಲ್ಲ ಎಂದು ಹೇಳಿದರೆ, ಆಗ ಮೊದಲಿನಂತೆಯೇ ಪ್ರತಿಕರ್ಮವ್ಯವಸ್ಥಾಭಂಗವು ಉಂಟಾಗುತ್ತದೆ. ಆದ್ದರಿಂದ ಬ್ರಹ್ಮಚೈತನ್ಯಕ್ಕೇ ಸರ್ವಾಧಿಷ್ಠಾನತ್ವವನ್ನು ಕಲ್ಪನೆ ಮಾಡುವುದು ಅನುಭವವಿರುದ್ಧವಾದುದು ಮತ್ತು ವ್ಯರ್ಥವಾದುದು ಎಂದು ಅಭಿಪ್ರಾಯ.

ಅಜ್ಞಾನಂ ಕಿಲ ಸರ್ವತ್ರ ಬ್ರಹ್ಮ ಸರ್ವಗತಂ ಕಿಲ ।
ಘಟಭ್ರಮಸ್ತಥಾಪ್ಯಸ್ಯ ಕುಂಭಕಾರಗೃಹೇ ಕಿಲ ॥ ೬೭೨ ॥

**ಅರ್ಥ-** ಅಜ್ಞಾನಂ = ಅಜ್ಞಾನವು, ಸರ್ವತ್ರ ಕಿಲ = ಸರ್ವತ್ರ ಇರುವುದಷ್ಟೇ? ಬ್ರಹ್ಮ = ಬ್ರಹ್ಮನೂ ಕೂಡ, ಸರ್ವಗತಂ ಕಿಲ = ಸರ್ವತ್ರ ಇರುವವನಷ್ಟೇ? ತಥಾಪಿ = ಆದರೂ ಕೂಡ, ಅಸ್ಯ = ಈ ಬ್ರಹ್ಮನಿಗೆ, ಘಟಭ್ರಮಃ = ಘಟಭ್ರಮವು, ಕುಂಭಕಾರಗೃಹೇ ಕಿಲ = ಕುಂಬಾರನ ಮನೆಯಲ್ಲಿಯೇ ಆಗುತ್ತದೆಯಷ್ಟೇ?

**ಅನುವಾದ -** ಅಜ್ಞಾನವು ಸರ್ವತ್ರ ಇದೆ. ಬ್ರಹ್ಮನೂ ಸರ್ವತ್ರ ಇದ್ದಾನೆ. ಆದರೂ ಬ್ರಹ್ಮನಿಗೆ ಘಟಭ್ರಮವು ಕುಂಬಾರನ ಮನೆಯಲ್ಲಿಯೇ ಉಂಟಾಗುತ್ತದೆ. ಬೇರೆ ಕಡೆಯಲ್ಲಿ ಉಂಟಾಗುವುದಿಲ್ಲವಷ್ಟೇ?

**ಭಾವವಿಲಾಸಿನೀ–** ಪ್ರಕಾರಾಂತರೇಣಾಪ್ಯನಾನುಭವಿಕತ್ವಂ ಪ್ರಾಕ್ ಸಂಕೋಚೇನೋಕ್ತಮಿದಾನೀಂ ವಿಸ್ತೃತ್ಯಾಹ – **ಅಜ್ಞಾನಮಿತಿ** ॥ ತಥಾಪಿ ಕಲ್ಪಕಯೋರಜ್ಞಾನಬ್ರಹ್ಮಣೋಃ ಸರ್ವಗತತ್ವೇಽಪಿ । ಅಸ್ಯ ಬ್ರಹ್ಮಣಃ॥ ೬೭೨ ॥

ವಿವರಣೆ - ಬ್ರಹ್ಮನು ಸರ್ವತ್ರ ಇರುವಾಗ ಮತ್ತು ಭ್ರಮೋಪಾದಾನವಾದ ಅಜ್ಞಾನವು ಸರ್ವತ್ರ ಇರುವಾಗ ಒಂದು ಸ್ಥಳದಲ್ಲಿ ಮಾತ್ರ ಘಟದ ಆರೋಪವು ಉಂಟಾಗುತ್ತದೆ, ಇನ್ನೊಂದು ಸ್ಥಳದಲ್ಲಿ ಘಟದ ಆರೋಪವು ಉಂಟಾಗುವುದಿಲ್ಲ ಎನ್ನುವುದಕ್ಕೆ ಯಾವ ನಿಯಾಮಕವೂ ಇಲ್ಲವೆಂದು ಇಲ್ಲಿ ಪ್ರತಿಪಾದನೆ ಮಾಡುತ್ತಾರೆ.

ಮೃದಾದಿಕಾರಣಾಭಾವೇ ತತ್ರಾಪಿ ನ ಭವೇತ್ ಕಿಲ ।
ಜಾತೇऽಪ್ಯನಲಸಂಯೋಗಸ್ಯಾಧಿಕ್ಯೇ ಬಾಧ್ಯತೇ ಕಿಲ ॥ ೬೭೩ ॥

ತತ್ರ ತತ್ರ ಘಟೇ ನೀತೇ ಭ್ರಮದ್ಬ್ರಹ್ಮಾನುಗಂ ಕಿಲ ।
ಮುದ್ಗರೇಣ ಘಟೇ ಧ್ವಸ್ತೇ ಭ್ರಮನಾಶೋ ಭವೇತ್ ಕಿಲ ॥ ೬೭೪ ॥

**ಅರ್ಥ-** ತತ್ರಾಪಿ = ಕುಂಬಾರನ ಮನೆಯಲ್ಲಿಯೂ ಸಹ, ಮೃದಾದಿಕಾರಣಾಭಾವೇ = ಮೃದಾದಿ ಕಾರಣಗಳು ಇಲ್ಲದಿದ್ದರೆ, ನ ಭವೇತ್ಕಿಲ = ಘಟಭ್ರಮವು ಉಂಟಾಗುವುದಿಲ್ಲವಷ್ಟೇ? ಅನಲಸಂಯೋಗಸ್ಯ = ಅಗ್ನಿ ಸಂಯೋಗದ, ಆಧಿಕ್ಯೇ = ಆಧಿಕ್ಯವು, ಜಾತೇ = ಉಂಟಾಗುತ್ತಿರಲು, ಬಾಧ್ಯತೇ ಕಿಲ = ಬಾಧ್ಯವಾಗುವುದಷ್ಟೇ ?

ತತ್ರ ತತ್ರ = ಅಲ್ಲಲ್ಲಿ, ಘಟೇ ನೀತೇ = ಘಟವು ತೆಗೆದುಕೊಂಡು ಹೋಗಲ್ಪಡುತ್ತಿರಲು, ಭ್ರಮದ್ಬ್ರಹ್ಮ = ಭ್ರಮರೂಪನಾದ ಬ್ರಹ್ಮನು, ಅನುಗಂ ಕಿಲ = ಘಟವನ್ನು ಅನುಸರಿಸಿ ಹೋಗುತ್ತಾನಷ್ಟೇ? ಮುದ್ಗರೇಣ = ದಂಡದಿಂದ, ಘಟೇ ಧ್ವಸ್ತೇ = ಘಟವು ನಾಶವಾಗುತ್ತಿರಲು, ಭ್ರಮನಾಶಃ = ಭ್ರಮನಾಶವು, ಭವೇತ್ಕಿಲ = ಉಂಟಾಗುವುದಷ್ಟೇ ?

**ಅನುವಾದ** - ಮೃದಾದಿ ಕಾರಣಗಳು ಇಲ್ಲದಿದ್ದರೆ, ಕುಂಬಾರನ ಮನೆಯಲ್ಲಿಯೂ ಸಹ ಘಟಭ್ರಮವು ಉಂಟಾಗುವುದಿಲ್ಲವಷ್ಟೇ? ಅಥವಾ ಮಡಕೆಗಳನ್ನು ಗೂಡಿನಲ್ಲಿ ತುಂಬಾ ಕಾಯಿಸಿದರೆ, ಮಡಿಕೆಗಳು ಒಡೆದು ಹೋಗುವುದರಿಂದ ಆಗಲೂ ಘಟಭ್ರಮವು ಉಂಟಾಗುವುದಿಲ್ಲವಷ್ಟೇ? ಘಟವನ್ನು ಬೇರೆ ಬೇರೆ ಸ್ಥಳಕ್ಕೆ ತೆಗೆದುಕೊಂಡು ಹೋದಾಗ, ಘಟಭ್ರಮರೂಪನಾದ ಬ್ರಹ್ಮನೂ ಸಹ, ಘಟವನ್ನು ಅನುಸರಿಸಿ ಬೇರೆ ಬೇರೆ ಕಡೆಗೆ ಹೋಗುತ್ತಾನಷ್ಟೇ? ದಂಡದಿಂದ ಘಟವು ನಾಶವನ್ನು ಹೊಂದುತ್ತಿರಲು ಭ್ರಮನಾಶವು ಉಂಟಾಗುವುದಷ್ಟೇ?

**ಭಾವವಿಲಾಸಿನೀ**– ತತ್ರಾಪಿ ಕುಂಭಕಾರಶಾಲಾಯಾಮಪಿ ॥ ೬೭೩-೬೭೪ ॥

ವಿವರಣೆ - ಪರಪ್ರಕ್ರಿಯೆಯು ಅಪಹಸನೀಯವೆಂದು ಇಲ್ಲಿ ಉಪಪಾದನೆ ಮಾಡುತ್ತಾರೆ. ಏಕತ್ರ ಉಂಟಾಗುವ ಘಟಾರೋಪವೂ ಸಹ ಮೃದಾದಿಕಾರಣಗಳು ಇಲ್ಲದಿದ್ದರೆ ಅಲ್ಲಿ ಉಂಟಾಗುವುದಿಲ್ಲ. ಅಥವಾ ಘಟನಾಶದ ಸಾಮಗ್ರಿಯಿಂದ ಘಟವು ನಾಶವಾದರೂ ಅಲ್ಲಿ ಮೊದಲು ಉಂಟಾಗಿದ್ದ ಭ್ರಮವು ನಾಶವನ್ನು ಹೊಂದುತ್ತದೆ ಮತ್ತು ಘಟ ಇದ್ದ ಸ್ಥಳದಲ್ಲಿಯೇ

ಘಟಭ್ರಮವು ಬರುವುದರಿಂದ ಘಟಭ್ರಮವು ಬ್ರಹ್ಮರೂಪವಾದುದರಿಂದ ಘಟವನ್ನು ತೆಗೆದುಕೊಂಡು ಹೋದಂತೆ, ಬ್ರಹ್ಮನೂ ಅದರ ಹಿಂದೆ ಹಿಂದೆ ಹೋಗುತ್ತಾನೆ. ಇವೆಲ್ಲವೂ ಅನುಭವವಿರುದ್ಧವಾದ ಹಾಸ್ಯಾಸ್ಪದವಾದ ವಿಷಯಗಳು ಎಂದು ಅಭಿಪ್ರಾಯ.

ಏವಂ ಬ್ರಹ್ಮಭ್ರಮಾಃ ಸರ್ವೇ ಕ್ಲೃಪ್ತಾಸ್ತತ್ತತ್ಸ್ಥಲೇ ಕಿಲ ।
ವಿಚಿತ್ರಕಾರ್ಯಕರ್ತೄಣಾಂ ಯಥಾಽಽಕಾಂಕ್ಷಾ ತಥಾ ಕಿಲ ॥ ೬೭೫ ॥

**ಅರ್ಥ-** ಏವಂ = ಈ ರೀತಿಯಾಗಿ, ಸರ್ವೇ ಬ್ರಹ್ಮಭ್ರಮಾಃ = ಎಲ್ಲಾ ಬ್ರಹ್ಮಭ್ರಮಗಳೂ ಸಹ, ತತ್ತತ್ಸ್ಥಲೇ = ಆಯಾ ಸ್ಥಳಗಳಲ್ಲಿ, ಕ್ಲೃಪ್ತಾ ಕಿಲ = ಕ್ಲುಪ್ತವಾಗಿವೆಯಷ್ಟೇ?

ವಿಚಿತ್ರಕಾರ್ಯಕರ್ತೄಣಾಂ = ಬೇರೆ ಬೇರೆ ಕಾರ್ಯವನ್ನು ಮಾಡುವವರಿಗೆ, ಯಥಾಕಾಂಕ್ಷಾ = ಹೇಗೆ ಹೇಗೆ ಅವರ ಆಕಾಂಕ್ಷೆಯು ಉಂಟಾಗುತ್ತದೆಯೋ, ತಥಾ ಕಿಲ = ಹಾಗೆ ಭ್ರಾಂತಿಯುಂಟಾಗುತ್ತದೆಯಷ್ಟೇ?

**ಅನುವಾದ -** ಹೀಗೆ ಎಲ್ಲಾ ಬ್ರಹ್ಮಭ್ರಮಗಳೂ ಸಹ ಕ್ಲುಪ್ತವಾದ ತತ್ತತ್ ಸ್ಥಳದಲ್ಲೇ ಉಂಟಾಗುತ್ತವೆಯಷ್ಟೇ? ಬೇರೆ ಬೇರೆ ಕಾರ್ಯಗಳನ್ನು ಮಾಡುವವರ, ಬೇರೆ ಬೇರೆ ಆಸೆಗಳನ್ನು ಅನುಸರಿಸಿ ಭ್ರಮಗಳು ಉಂಟಾಗುತ್ತವೆಯಷ್ಟೇ?

**ಭಾವವಿಲಾಸಿನೀ–** ತತ್ತತ್ಸ್ಥಲೇ ಕುಂಭಕಾರಕಾರ್ವಾದಿಶಾಲಾಯಾಂ ಯಥಾಕಾಂಕ್ಷಾ ನಾನಾವಿಧಜೀವಾನಾಂ ಯತ್ರ ಯತ್ರಾಕಾಂಕ್ಷಾ ತಥೈವ ಭ್ರಾಮ್ಯತಿ । ನತು ಸ್ವೇಚ್ಛಯಾ ಭ್ರಮಃ । ಜಗತಸ್ಸರ್ವಸ್ಯಾವಿದ್ಯಾಪರಿಣಾಮಪಕ್ಷೇ ಬ್ರಹ್ಮಣಸ್ತದ್ಭ್ರಮತ್ವಪಕ್ಷೇ ಚೋಕ್ತಂ ಸರ್ವಂ ವೈಚಿತ್ರ್ಯಂ ನ ಘಟತ ಇತಿ ಭಾವಃ ॥ ೬೭೫ ॥

ವಿವರಣೆ - ಭ್ರಮಕಾರಣವಾದ ಸಾರ್ವತ್ರಿಕವಾದ ಅಜ್ಞಾನ ಮತ್ತು ಸರ್ವಗತನಾದ ಬ್ರಹ್ಮನನ್ನು ಬಿಟ್ಟು ಬೇರೆ ಕಾರಣಗಳನ್ನು ಅಂಗೀಕರಿಸುವುದು ಅಯುಕ್ತವಾದುದು ಎಂದು ಇಲ್ಲಿ ಅಭಿಪ್ರಾಯಪಡುತ್ತಾರೆ. ಘಟಭ್ರಮವು ಕುಂಬಾರನ ಮನೆಯಲ್ಲಿಯೇ ಉಂಟಾಗುತ್ತದೆ. ಪಟಭ್ರಮವು ನೇಕಾರನ ಮನೆಯಲ್ಲಿಯೇ ಉಂಟಾಗುತ್ತದೆ ಎಂಬ ನಿಯಮವಿದೆ. ಈ ನಿಯಮಕ್ಕೆ ಯಾವ ವ್ಯವಸ್ಥಾಪಕವೂ ಇಲ್ಲ. ಆದರಂತೆಯೇ ಕುಂಬಾರನು ಘಟವನ್ನು ಮಾಡಬೇಕೆಂದು ಬಯಸಿದಾಗ ಘಟದ ಭ್ರಮೆ ಉಂಟಾಗುತ್ತದೆ. ಪಟವನ್ನು ಮಾಡಬೇಕೆಂದು ನೇಕಾರನು ಬಯಸಿದರೆ, ಆಗ ಪಟಭ್ರಮವು ಉಂಟಾಗುತ್ತದೆ ಎಂದು ಅಂಗೀಕರಿಸಬೇಕಾಗುತ್ತದೆ. ಇಂತಹ ಭ್ರಮಗಳಲ್ಲಿರುವ ವೈಚಿತ್ರಗಳನ್ನು ಸರ್ವಗತವಾದ ಅಜ್ಞಾನವನ್ನು ಉಪಾದಾನವೆಂದೂ, ಸರ್ವಗತನಾದ ಬ್ರಹ್ಮನು ತತ್ರತತ್ರಪ್ರಕಾಶಕನೆಂದೂ ಒಪ್ಪಿದರೆ, ಯಾವ ರೀತಿಯಿಂದಲೂ ಕೂಡಿಸಲು ಬರುವುದಿಲ್ಲ ಎಂದು ಅಭಿಪ್ರಾಯ.

**ಇದಂ ವಿವೇಕಕೌಶಲ್ಯಂ ಬ್ರಹ್ಮಣೋ ವಾ ಭ್ರಮಸ್ಯ ವಾ ।**
**ಉತಾಜ್ಞಾನಸ್ಯ ಕಿಂ ವಾ ತಚ್ಛಾಸ್ತ್ರಕರ್ತುರ್ನ ವೇದ್ಮ್ಯಹಮ್ ॥ ೬೭೬ ॥**

**ಅರ್ಥ-** ಇದಂ ವಿವೇಕಕೌಶಲ್ಯಂ = ಈ ವಿವೇಕ ಕೌಶಲ್ಯವು, ಬ್ರಹ್ಮಣೋ ವಾ = ಬ್ರಹ್ಮನಿಗೆ ಉಂಟಾಗುತ್ತದೆಯೇ? ಭ್ರಮಸ್ಯ ವಾ = ಅಥವಾ ಭ್ರಮಕ್ಕೆ ಉಂಟಾಗುತ್ತದೆಯೇ? ಉತ ಅಜ್ಞಾನಸ್ಯ = ಅಥವಾ ಅಜ್ಞಾನಕ್ಕೆ ಉಂಟಾಗುತ್ತದೆಯೇ? ಕಿಂ ವಾ ತಚ್ಛಾಸ್ತ್ರಕರ್ತುಃ = ಅಥವಾ ಅಂತಹ ಅದ್ವೈತಶಾಸ್ತ್ರವನ್ನು ರಚಿಸಿದ ಪುರುಷನಿಗೆ ಉಂಟಾಗುತ್ತದೆಯೇ ಎಂದು, ಅಹಂ = ನಾನು, ನ ವೇದ್ಮಿ = ತಿಳಿಯಲಾರೆ.

**ಅನುವಾದ -** ಇಂತಹ ವಿವೇಕಕೌಶಲ್ಯವು ಬ್ರಹ್ಮನಿಗೆ ಉಂಟಾಗುತ್ತದೆಯೋ ಅಥವಾ ಭ್ರಾಂತಿಗೆ ಉಂಟಾಗುತ್ತದೆಯೋ ಅಥವಾ ಅಜ್ಞಾನಕ್ಕೆ ಉಂಟಾಗುತ್ತದೆಯೋ ಅಥವಾ ಅಧ್ಯಾಸಶಾಸ್ತ್ರಕಾರನಿಗೆ ಉಂಟಾಗುತ್ತದೆಯೋ ಎಂದು ನಾನು ತಿಳಿಯಲಾರೆ.

**ಭಾವವಿಲಾಸಿನೀ– ಅನಾನುಭವಿಕಪ್ರಮೇಯಕಲ್ಪಕಂ ಪರಮಪಹಸತಿ ॥ ಇದಮಿತಿ ॥ ೬೭೬ ॥**

ವಿವರಣೆ - ಎಲ್ಲಾ ಸ್ಥಳಗಳಲ್ಲಿಯೂ ಎಲ್ಲಾ ಭ್ರಮಗಳು ಉಂಟಾಗುವ ಅವಕಾಶವಿದ್ದರೂ ಒಂದು ಭ್ರಮವಿಶೇಷವು ಒಂದು ಸ್ಥಳದಲ್ಲಿ ಮಾತ್ರ ಉಂಟಾಗುತ್ತದೆ ಇನ್ನೊಂದು ಸ್ಥಳದಲ್ಲಿ ಉಂಟಾಗುವುದಿಲ್ಲ ಎಂಬ ವಿವೇಕವು ಯಾವ ರೀತಿಯಿಂದಲೂ ಉಪಪಾದಿಸಲ್ಪಡುವುದಿಲ್ಲ ಎಂದು ಅಭಿಪ್ರಾಯ.

**ಭ್ರಮಕಾರಣಸಂಪತ್ತೌ ಭ್ರಮಃ ಸರ್ವತ್ರ ಸಂಭವೇತ್ ।**
**ಪ್ರಯೋಜನಾನುಸಾರೇಣ ಸ ನಿಯೋಕ್ತುಂ ನ ಶಕ್ಯತೇ ॥ ೬೭೭ ॥**

**ಭ್ರಮಜತ್ವಕಥಾ ತಸ್ಮಾದ್ ಭ್ರಾಂತಶ್ರೋತ್ರಾಯ ರೋಚತೇ ।**
**ಸ್ವಸ್ವಹೇತೂದ್ಭವಂ ಸರ್ವಂ ಕಾರ್ಯಮಿತ್ಯತಿನಿರ್ಮಲಂ ॥ ೬೭೮ ॥**

**ಅರ್ಥ-** ಭ್ರಮಕಾರಣಸಂಪತ್ತೌ = ಭ್ರಮದ ಸಾಮಗ್ರಿಯು ಸಂಪನ್ನವಾದರೆ, ಸರ್ವತ್ರ = ಎಲ್ಲ ಕಡೆಯಲ್ಲಿಯೂ, ಭ್ರಮಃ = ಭ್ರಾಂತಿಯು, ಸಂಭವೇತ್ = ಉಂಟಾಗುತ್ತದೆ. ಪ್ರಯೋಜನಾನುಸಾರೇಣ = ಪ್ರಯೋಜನವನ್ನು ಅನುಸರಿಸಿ, ಸ = ಆ ಭ್ರಾಂತಿಯು, ನಿಯೋಕ್ತುಂ ನ ಶಕ್ಯತೇ = ನಿಯಮಿಸಲು ಶಕ್ಯವಿಲ್ಲ.

ತಸ್ಮಾತ್ = ಆ ಕಾರಣದಿಂದ, ಭ್ರಮಜತ್ವಕಥಾ = ಶುಕ್ತಿರಜತಾದಿಗಳಾಗಲೀ, ಘಟಾದಿಗಳಾಗಲೀ, ಭ್ರಾಂತಿಜನ್ಯವೆಂಬ ಕಥೆಯು, ಭ್ರಾಂತಶ್ರೋತ್ರಾಯ = ಉನ್ಮತ್ತನ ಕಿವಿಗಳಿಗೆ ಮಾತ್ರ, ರೋಚತೇ = ಹಿಡಿಸುತ್ತದೆ, ಸ್ವಸ್ವಹೇತೂದ್ಭವಂ = ತಮ್ಮ ತಮ್ಮ

ಸಾಮಗ್ರಿಗಳಿಂದ ಜನ್ಯವಾದ, ಸರ್ವಂ = ಎಲ್ಲವೂ, ಕಾರ್ಯಮ್ = ಕಾರ್ಯವಾದುದೇ, ಇತಿ = ಎಂದು, ಅತಿ ನಿರ್ಮಲಂ = ಅತ್ಯಂತ ಪರಿಶುದ್ಧವಾದ ಪ್ರಮೇಯವಾಗುತ್ತದೆ.

**ಅನುವಾದ** - ಭ್ರಮದ ಸಾಮಗ್ರಿಯು ಸಂಪನ್ನವಾದರೆ, ಎಲ್ಲ ಕಡೆಗಳಲ್ಲಿಯೂ ಭ್ರಮವು ಉಂಟಾಗುತ್ತದೆ. ಪ್ರಯೋಜನಕ್ಕೆ ಅನುಸಾರವಾಗಿ ಭ್ರಮದ ಉತ್ಪತ್ತಿಯನ್ನು ನಿಯಂತ್ರಿಸಲು ಶಕ್ಯವಿಲ್ಲ. ಆದ್ದರಿಂದ ಶುಕ್ತಿರಜತಾದಿಗಳಾಗಲೀ, ಘಟಾದಿ ಪ್ರಪಂಚವಾಗಲೀ ಭ್ರಾಂತಿಜನ್ಯವೆಂಬ ಕಥೆಯು ಹುಚ್ಚನ ಕಿವಿಗಳಿಗೆ ಮಾತ್ರ ಹಿಡಿಸೀತು. ತಮ್ಮ ತಮ್ಮ ಸಾಮಗ್ರಿಗಳಿಂದ ಜನ್ಯವಾದ ಎಲ್ಲವೂ ಕಾರ್ಯವೆಂಬ ಪ್ರಮೇಯವೇ ಅತ್ಯಂತ ನಿರ್ಮಲವಾದುದು.

**ಭಾವವಿಲಾಸಿನೀ**– ಸಃ ಭ್ರಮಃ । ರಜತಾರ್ಥಿನೋಽಪಿ ರಜ್ಜುಸರ್ಪಭ್ರಮಸಂಪತ್ತೌ ರಜ್ಜುಸರ್ಪಭ್ರಮ ಏವ ಜಾಯತೇ । ನ ತು ರಜತಭ್ರಮಃ । ಸರ್ಪಾರ್ಥಿನೋಽಪಿ ರಜತಭ್ರಮಕಾರಣಸಂಪತ್ತೌ ರಜತಭ್ರಮ ಏವ ಜಾಯತೇ । ನ ತು ಸರ್ಪಭ್ರಮಃ । ಏವಂ ಚ ಪರಮತೇ ಭ್ರಮ-ಕಾರಣಯೋರಜ್ಞಾನಬ್ರಹ್ಮಣೋಸ್ಸರ್ವತ್ರ ಸದ್ಭಾವೇಽಪಿ ಕುಲಾಲಶಾಲಯಾಮೇವ ಘಟಭ್ರಮಃ ಕುವಿಂದಶಾಲಾಯಾಮೇವ ಪಟಭ್ರಮ ಇತ್ಯಾದಿವ್ಯವಸ್ಥಾ ಲೋಕಸಂಮತ-ತತ್ತತ್ಸಾಮಗ್ರೀಜನ್ಯತ್ವಮೇವಾಕ್ಷಿಪತಿ । ಭ್ರಮಜತ್ವಕಥಾಂತು ಭ್ರಾಂತೋಽಪಿ ನಾನುಮನ್ಯತ ಇತಿ ಭಾವಃ । ಅತೋ ಭ್ರಾಂತಶ್ರೋತ್ರಾಯ ರೋಚತ ಇತ್ಯುಕ್ತಿರಪ್ಯಭ್ಯುಪಗಮವಾದೇನೇತಿ ದ್ರಷ್ಟವ್ಯಮ್॥೬೭೭-೬೭೮ ॥

ವಿವರಣೆ - ರಜತಾರ್ಥಿಯಾದವನಿಗೂ ರಜ್ಜುಸರ್ಪಭ್ರಮಕಾರಣಸಂಪತ್ತಿಯು ಉಂಟಾದರೆ, ರಜ್ಜುಸರ್ಪಭ್ರಮೆಯು ಉಂಟಾಗುತ್ತದೆ. ರಜತದ ಅಪೇಕ್ಷೆಯಿದೆ ಎಂದ ಮಾತ್ರಕ್ಕೆ ರಜತಭ್ರಮ ಉಂಟಾಗುವುದಿಲ್ಲ. ಹಾಗೆಯೇ ಸರ್ಪಾರ್ಥಿಯಾದವನಿಗೂ ಸಹ ರಜತಭ್ರಮಕ್ಕೆ ಕಾರಣಸಂಪತ್ತಿಯು ಉಂಟಾದರೆ ರಜತಭ್ರಮೆಯು ಉಂಟಾಗುತ್ತದೆ ಹೊರತು ಸರ್ಪಭ್ರಮ ಉಂಟಾಗುವುದಿಲ್ಲ. ಆದ್ದರಿಂದ ಪರಮತದಲ್ಲಿ ಭ್ರಮಕಾರಣವಾದ ಅಜ್ಞಾನ ಮತ್ತು ಬ್ರಹ್ಮ ಈ ಎರಡು ವಸ್ತುಗಳು ಎಲ್ಲ ಕಡೆಗಳಲ್ಲಿ ಇದ್ದರೂ ಕುಂಬಾರನ ಮನೆಯಲ್ಲಿ ಮಾತ್ರ ಘಟಭ್ರಮ ಉಂಟಾಗುತ್ತದೆ. ಕುವಿಂದನ ಮನೆಯಲ್ಲಿ ಮಾತ್ರ ಪಟಭ್ರಮ ಉಂಟಾಗುತ್ತದೆ ಎಂಬ ವ್ಯವಸ್ಥೆಯು ಘಟಪಟಾದಿಗಳು ಲೋಕಸಮ್ಮತವಾದ ತಮ್ಮ ತಮ್ಮ ಸಾಮಗ್ರಿಗಳಿಂದ ಜನ್ಯವಾದುವು ಎಂದೇ ಸಾಧಿಸಿಕೊಡುತ್ತದೆ. ಘಟಾದಿಗಳು ಭ್ರಾಂತಿಜನ್ಯವೆಂದು ಹುಚ್ಚನೂ ಅಂಗೀಕರಿಸಲಾರ. ಮೂಲಶ್ಲೋಕದಲ್ಲಿ ಭ್ರಾಂತನಿಗೆ ಹಿಡಿಸೀತು ಎಂದು ಹೇಳಿದುದು ಅಭ್ಯುಪಗಮವಾದದಿಂದ ಎಂದು ತಿಳಿಯಬೇಕು.

ಕಿಂಚಾಧ್ಯಸ್ತಂ ಸಮಸ್ತಂ ಚ ಸ್ವಾಧಿಷ್ಠಾನೈಃ ಸಹೇಕ್ಷ್ಯತೇ ।
ತದಧ್ಯಸ್ತಘಟಾದೀನಾಂ ವೃತ್ತಿಶ್ಚ ಬ್ರಹ್ಮಗೋಚರಾ ।
ಅಧ್ಯಸ್ತಸಾಕ್ಷಾದ್ದ್ವಿತ್ವೇನ ವಾಚ್ಯಾವಶ್ಯಂ ತ್ವಯೈವ ಹಿ ॥ ೬೭೯ ॥

ನ ಚೇದ್ ಬ್ರಹ್ಮಗತಾಜ್ಞಾನಂ ಕಥಂ ಸಾ ವಿನಿವರ್ತಯೇತ್ ।
ನ ಹ್ಯನ್ಯಜ್ಞಾನತೋಽನ್ಯತ್ರ ಸ್ಯಾದಜ್ಞಾನಪರಿಕ್ಷಯಃ ॥ ೬೮೦ ॥
ಏವಂಚ ಬ್ರಹ್ಮವೃತ್ತಿಃ ಸಾ ಯೇನ ಯೋಗೇನ ತೇ ಮತೇ ।
ತೇನೈವ ದೃಗ್ದೃಶ್ಯಭಾವೋಸ್ತ್ವಧ್ಯಾಸೇನ ನ ಕಿಂ ಫಲಂ ॥ ೬೮೧ ॥

**ಅರ್ಥ**- ಕಿಂಚ = ಮತ್ತು, ಅಧ್ಯಸ್ತಂ ಸಮಸ್ತಂ ಚ = ಅಧ್ಯಸ್ತವಾದ ಸರ್ವವೂ ಸಹ, ಸ್ವಾಧಿಷ್ಠಾನೈಃ ಸಹ = ತಮ್ಮ ತಮ್ಮ ಅಧಿಷ್ಠಾನಗಳ ಜೊತೆಯಲ್ಲಿಯೇ, ಈಕ್ಷ್ಯತೇ = ತಿಳಿಯಲ್ಪಡುತ್ತವೆ, ತತಃ = ಆ ಕಾರಣದಿಂದ, ಅಧ್ಯಸ್ತಘಟಾದೀನಾಂ = ಅಧ್ಯಸ್ತವಾದ ಘಟ ಮೊದಲಾದವುಗಳ, ವೃತ್ತಿಶ್ಚ = ವೃತ್ತಿಯೂ ಸಹ, ಬ್ರಹ್ಮಗೋಚರಾ = ಬ್ರಹ್ಮವಿಷಯಕವಾಗಿ, ಅಧ್ಯಸ್ತಸಾಕ್ಷಾದ್ಧೀತ್ವೇನ = ಅಧ್ಯಸ್ತ ವಿಷಯಕ ಅಪರೋಕ್ಷಜ್ಞಾನವಾಗಿ, ತ್ವಯಾ = ನಿನ್ನಿಂದ, ಅವಶ್ಯಂ = ಅವಶ್ಯವಾಗಿ, ವಾಚ್ಯೈವ ಹಿ = ಹೇಳಲ್ಪಡಲೇಬೇಕಷ್ಟೇ ?

ನ ಚೇತ್ = ಘಟವೃತ್ತಿಯು ಬ್ರಹ್ಮಾಪರೋಕ್ಷಜ್ಞಾನವಾಗದಿದ್ದರೆ, ಸಃ= ಆ ಘಟವೃತ್ತಿಯು, ಬ್ರಹ್ಮಗತಾಜ್ಞಾನಂ = ಬ್ರಹ್ಮಾಶ್ರಿತ ಅಜ್ಞಾನವನ್ನು, ಕಥಂ ನಿವರ್ತಯೇತ್ = ಹೇಗೆ ವಿನಾಶಮಾಡುತ್ತದೆ? ಅನ್ಯಜ್ಞಾನತಃ = ಬೇರೆ ವಸ್ತುವಿನ ಜ್ಞಾನದಿಂದ, ಅನ್ಯತ್ರ = ಬೇರೆ ವಸ್ತುವಿನ ವಿಷಯದಲ್ಲಿ, ಅಜ್ಞಾನ ಪರಿಕ್ಷಯಃ = ಅಜ್ಞಾನನಾಶವು, ನ ಸ್ಯಾತ್ = ಉಂಟಾಗುವುದಿಲ್ಲವಷ್ಟೇ ?

ಏವಂಚ = ಆದ್ದರಿಂದ, ಸಾ = ಆ ಅಧಿಷ್ಠಾನಜ್ಞಾನವು, ಯೇನ ಯೋಗೇನ = ಯಾವ ಉಪಾಯದಿಂದ, ತೇ ಮತೇ = ನಿನ್ನ ಮತದಲ್ಲಿ, ಬ್ರಹ್ಮವೃತ್ತಿಃ = ಬ್ರಹ್ಮಜ್ಞಾನವಾಗುತ್ತದೆಯೋ, ತೇನೈವ = ಅದೇ ಉಪಾಯದಿಂದ, ದೃಗ್ದೃಶ್ಯಭಾವೋಸ್ತು = ದೃಗ್ದೃಶ್ಯಭಾವವನ್ನು ಅಂಗೀಕರಿಸು. ಅಧ್ಯಾಸೇನ = ಅಧ್ಯಾಸವನ್ನು ಅಂಗೀಕರಿಸುವುದರಿಂದ, ಕಿಂ ಫಲಂ = ಯಾವ ಪ್ರಯೋಜನವೂ ನ = ಇಲ್ಲ.

**ಅನುವಾದ** - ಮತ್ತು ಅಧ್ಯಸ್ತವಾದ ಸಮಸ್ತವೂ ಸಹ ತಮ್ಮ ತಮ್ಮ ಅಧಿಷ್ಠಾನಗಳ ಜೊತೆಯಲ್ಲಿಯೇ ವಿಷಯೀಕರಿಸಲ್ಪಡುತ್ತವೆ (ತಿಳಿಯಲ್ಪಡುತ್ತವೆ). ಆದ್ದರಿಂದ ಅಧ್ಯಸ್ತಘಟಾದಿಗಳ ವೃತ್ತಿಯೂ ಸಹ ಅಪರೋಕ್ಷವೃತ್ತಿಯಾದುದರಿಂದ ಮತ್ತು ಆ ವೃತ್ತಿಯಲ್ಲಿ ಅಧಿಷ್ಠಾನನಾದ ಬ್ರಹ್ಮನೂ ವಿಷಯನಾಗುವುದರಿಂದ ಆ ವೃತ್ತಿಯನ್ನು ಬ್ರಹ್ಮಾಪರೋಕ್ಷವೃತ್ತಿ ಎಂದು ನೀನೂ ಸಹ ಹೇಳಬೇಕು. ಹಾಗಿಲ್ಲದಿದ್ದರೆ, ಆ ವೃತ್ತಿಯು ಬ್ರಹ್ಮಗತವಾದ ಅಜ್ಞಾನವನ್ನು ಹೇಗೆ ವಿನಾಶಮಾಡಲು ಸಾಧ್ಯ? ಅನ್ಯಜ್ಞಾನದಿಂದ ಅನ್ಯಾಜ್ಞಾನವು ನಾಶವನ್ನು ಹೊಂದುವುದಿಲ್ಲವಷ್ಟೇ? ಆದ್ದರಿಂದ ಬ್ರಹ್ಮಾಪರೋಕ್ಷವೃತ್ತಿಯಲ್ಲಿ ಬ್ರಹ್ಮನು ಅಧ್ಯಸ್ತನಾಗದಿದ್ದರೂ ಹೇಗೆ ಆ ವೃತ್ತಿಯು ಬ್ರಹ್ಮವೃತ್ತಿ ಎಂದು ಎನಿಸಿಕೊಳ್ಳುತ್ತದೆಯೋ ಅದೇ ರೀತಿಯಲ್ಲಿ ಬೇರೆ ಕಡೆಗಳಲ್ಲಿಯೂ

ದೃಗ್ದೃಶ್ಯಭಾವವು ಉಂಟಾಗಲಿ. ಅಧ್ಯಾಸವನ್ನು ಅಂಗೀಕಾರ ಮಾಡುವುದರಿಂದ ಯಾವ ಪ್ರಯೋಜನವೂ ಇಲ್ಲ.

**ಭಾವವಿಲಾಸಿನೀ–** ಪ್ರಕಾರಾಂತರೇಣಾಪಿ ಚೈತನ್ಯಭ್ರಮತ್ವಪಕ್ಷೇ ವೃತ್ತಿಭ್ರಮತ್ವಪಕ್ಷೇ ಚಾಧ್ಯಾಸಸ್ಯ ವೈಫಲ್ಯಮಾಹ – **ಕಿಂಚೇತಿ** ।। ಅಧಿಷ್ಠಾನೋಲ್ಲೇಖಂ ವಿನಾ ಕೇವಲಮಧ್ಯಸ್ತಸ್ಯೈವ ಭ್ರಾಂತಾವುಲ್ಲೇಖಾಯೋಗಾತ್ । ಅಧಿಷ್ಠಾನಂ ಚ ಚೈತನ್ಯಂ ನ ಸ್ವಸ್ಮಿನ್ ಸ್ವಯಮಧ್ಯಸ್ತಮ್ । ಅತೋಽಧ್ಯಾಸಾಭಾವೇಽಪಿ ಯಥಾ ತಸ್ಯೋಲ್ಲಿಖ್ಯಮಾನತ್ವಂ ಏವಂ ಸರ್ವಸ್ಯಾಪ್ಯುಲ್ಲಿಖ್ಯಮಾನತ್ವ ಸಂಭವಾದ್ವ್ಯರ್ಥೋಽಧ್ಯಾಸ ಇತಿ ಭಾವಃ ।। ೬೭೯-೬೮೧ ।।

ವಿವರಣೆ - ಬೇರೆ ಪ್ರಕಾರದಿಂದಲೂ ಚೈತನ್ಯಭ್ರಮತ್ವಪಕ್ಷವನ್ನು ಅಂಗೀಕರಿಸಿದರೂ, ವೃತ್ತಿಭ್ರಮತ್ವಪಕ್ಷವನ್ನು ಅಂಗೀಕರಿಸಿದರೂ, ಅಧ್ಯಾಸವು ವ್ಯರ್ಥವಾದುದು ಎಂದು ಪ್ರತಿಪಾದಿಸುತ್ತಾರೆ. ಘಟಾಪರೋಕ್ಷವೃತ್ತಿಯು ಭ್ರಾಂತಿರೂಪವಾದುದರಿಂದ ಅದರಲ್ಲಿ ಅವಶ್ಯವಾಗಿ ಬ್ರಹ್ಮನು ಪ್ರಕಾಶಿಸುತ್ತಾನೆ ಎಂದೇ ಅಂಗೀಕರಿಸಬೇಕು. ಆದ್ದರಿಂದ ಘಟವೃತ್ತಿಯೂ ಸಹ ಬ್ರಹ್ಮಾವಭಾಸಕವಾಗಿದೆ. ಆದರೆ, ಬ್ರಹ್ಮನು ಆ ಬ್ರಹ್ಮಾವಭಾಸಕವಾದ ವೃತ್ತಿಯಲ್ಲಿ ಅಧ್ಯಸ್ತನಲ್ಲ. ಅಧ್ಯಸ್ತನಾಗದಿದ್ದರೂ ಹೇಗೆ ಆ ವೃತ್ತಿಯು ಬ್ರಹ್ಮಾಪರೋಕ್ಷವೃತ್ತಿ ಎಂದು ಎನಿಸಿಕೊಳ್ಳುತ್ತದೆಯೋ ಅದರಂತೆ ಘಟಾದಿವೃತ್ತಿಯಲ್ಲಿಯೂ ಸಹ ಘಟಾದಿಗಳು ಅಧ್ಯಸ್ತವಾಗದಿದ್ದರೂ ಘಟಾದಿವೃತ್ತಿಗಳಿಗೆ ಹಾಗೆಯೇ ಘಟಜ್ಞಾನತ್ವವು ಬರಲಿ. ಅಧ್ಯಾಸವನ್ನು ಅಂಗೀಕರಿಸುವುದು ವ್ಯರ್ಥ ಎಂದು ಅಭಿಪ್ರಾಯ.

ಕಥಂ ಚ ವೃತ್ತಿರೂಪೋಽಯಂ ಭ್ರಮೋ ಬ್ರಹ್ಮೋಲ್ಲಿಖೇತ್ ತವ ।
ಅತೀಂದ್ರಿಯಂ ಪರಂ ಬ್ರಹ್ಮ ಕಥಂ ಚಕ್ಷುರಪೀಕ್ಷತೇ ।। ೬೮೨ ।।

ದೃಷ್ಟಂ ಚೇತ್ ಬ್ರಹ್ಮ ಮುಕ್ತಿಃ ಸ್ಯಾದ್ ದೃಷ್ಟ್ಯೈವ ಕಿಲ ಮುಚ್ಯತೇ ।
ಕಿಂ ನ್ಯೂನಮಸ್ಯ ಜ್ಞಾನಸ್ಯ ಮುಕ್ತಿದಾನ್ನಿರ್ವಿಕಲ್ಪಕಾತ್ ।। ೬೮೩ ।।

**ಅರ್ಥ-** ಚ = ಮತ್ತು, ವೃತ್ತಿರೂಪೋಽಯಂ ಭ್ರಮಃ = ವೃತ್ತಿರೂಪವಾದ ಈ ಭ್ರಾಂತಿಯು, ತವ = ನಿನಗೆ, ಕಥಂ = ಹೇಗೆ, ಬ್ರಹ್ಮ = ಬ್ರಹ್ಮನನ್ನು, ಉಲ್ಲಿಖೇತ್ = ಉಲ್ಲೇಖಿಸುತ್ತದೆ? ಅತೀಂದ್ರಿಯಂ = ಅತೀಂದ್ರಿಯನಾದ, ಪರಂ ಬ್ರಹ್ಮ = ಪರಬ್ರಹ್ಮನನ್ನು, ಚಕ್ಷುರಪಿ = ಚಕ್ಷುಸ್ಸಾದರೂ ಕೂಡ, ಕಥಂ = ಹೇಗೆ, ಈಕ್ಷತೇ = ನೋಡುತ್ತದೆ?

ಬ್ರಹ್ಮ = ಬ್ರಹ್ಮನು, ದೃಷ್ಟಂ ಚೇತ್ = ದೃಷ್ಟನಾದರೆ, ಮುಕ್ತಿಃ ಸ್ಯಾತ್ = ಮುಕ್ತಿಯೇ ಉಂಟಾಗಲಿ, ದೃಷ್ಟ್ಯೈವ= ಬ್ರಹ್ಮದರ್ಶನದಿಂದಲೇ, ಮುಚ್ಯತೇ ಕಿಲ = ಮುಕ್ತಿಯಾಗುವುದಷ್ಟೇ? ಅಸ್ಯ ಜ್ಞಾನಸ್ಯ = ಘಟವೃತ್ತಿರೂಪವಾದ ಈ ಜ್ಞಾನಕ್ಕೆ, ಮುಕ್ತಿದಾತ್

= ಮೋಕ್ಷಜನಕವಾದ, ನಿರ್ವಿಕಲ್ಪಕಾತ್ = ನಿರ್ವಿಕಲ್ಪಕ ಜ್ಞಾನಕ್ಕಿಂತ, ಕಿಂ ನ್ಯೂನಮ್ = ಯಾವ ನ್ಯೂನತೆ ಇದೆ?

**ಅನುವಾದ** - ಮತ್ತು ವೃತ್ತಿರೂಪವಾದ ಈ ಭ್ರಮವು ನಿನಗೆ ಹೇಗೆ ಬ್ರಹ್ಮನನ್ನು ಉಲ್ಲೇಖಿಸುತ್ತದೆ? ಅತೀಂದ್ರಿಯನಾದ ಪರಬ್ರಹ್ಮನು ಚಕ್ಷುಸ್ಸಿಗಾದರೂ ಹೇಗೆ ವಿಷಯನಾಗುತ್ತಾನೆ? ಬ್ರಹ್ಮನು ದೃಷ್ಟನಾಗುತ್ತಾನೆ ಎಂದು ಅಂಗೀಕರಿಸಿದರೆ, ತಕ್ಷಣವೇ ಮುಕ್ತಿಯಾಗಲಿ. ಬ್ರಹ್ಮದರ್ಶನದಿಂದಲೇ ಮುಕ್ತಿ ಎಂದು ನಿನ್ನ ಮತವಷ್ಟೇ? ಈ ಜ್ಞಾನಕ್ಕೆ ಮೋಕ್ಷಜನಕವಾದ ನಿರ್ವಿಕಲ್ಪಕ ಜ್ಞಾನಕ್ಕಿಂತಲೂ ಯಾವ ನ್ಯೂನತೆಯಿದೆ?

**ಭಾವವಿಲಾಸಿನೀ**– ವೃತ್ತೇರ್ಭ್ರಮತ್ವಪಕ್ಷೇ ಪುನರಪಿ ದೋಷಾನಾಹ –**ಕಥಮಿತಿ** ॥೬೮೨-೬೮೩॥

ವಿವರಣೆ - ಚರಮಸಾಕ್ಷಾತ್ಕಾರದಲ್ಲಿ ವಿಷಯನಾದಂತೆ ಘಟಾದಿವೃತ್ತಿಯಲ್ಲಿಯೂ ಬ್ರಹ್ಮನು ವಿಷಯನಾಗುವುದರಿಂದ ಘಟಾಪರೋಕ್ಷಜ್ಞಾನದಿಂದಲೇ ಮೋಕ್ಷವಾಗಲಿ ಎಂಬ ಆಪತ್ತಿಯು ಬರುತ್ತದೆ. ಆದ್ದರಿಂದ ವೃತ್ತಿಯನ್ನು ಘಟಭ್ರಮ ಎಂದು ಹೇಳಬಾರದು ಎಂದು ಅಭಿಪ್ರಾಯ.

ಅಖಂಡಬ್ರಹ್ಮಚಿದ್ಭಾಗೇ ತನ್ಮಾತ್ರಸ್ಯಾವಗಾಹಿನೀ ।
ವೃತ್ತಿಶ್ಚಾನುಕರೋತ್ಯೇಷಾ ತದಂಶೇ ಚರಮಪ್ರಮಾಮ್ ॥ ೬೮೪ ॥

**ಅರ್ಥ**- ಅಖಂಡಬ್ರಹ್ಮಚಿದ್ಭಾಗೇ = ಅಖಂಡಬ್ರಹ್ಮಚೈತನ್ಯರೂಪವಾದ ಭಾಗದಲ್ಲಿ, ತನ್ಮಾತ್ರಸ್ಯ= ಅಖಂಡಬ್ರಹ್ಮಚೈತನ್ಯವನ್ನು ಮಾತ್ರ, ಅವಗಾಹಿನೀ = ವಿಷಯೀಕರಿಸುವ, ಏಷಾ ವೃತ್ತಿಃ = ಈ ಘಟಾಪರೋಕ್ಷವೃತ್ತಿಯು, ಚರಮಪ್ರಮಾಮ್ = ಚರಮಸಾಕ್ಷಾತ್ಕಾರವನ್ನು, ಅನುಕರೋತಿ = ಅನುಕರಿಸುತ್ತದೆ.

**ಅನುವಾದ** - ಅಖಂಡಬ್ರಹ್ಮಚಿತ್‌ಭಾಗದಲ್ಲಿ ಅಂತಹ ಚೈತನ್ಯವನ್ನು ಮಾತ್ರ ವಿಷಯೀಕರಿಸುವ ಈ ಘಟಾಪರೋಕ್ಷವೃತ್ತಿಯು ಚರಮಸಾಕ್ಷಾತ್ಕಾರವನ್ನು ಅನುಕರಿಸುತ್ತದೆ.

**ಭಾವವಿಲಾಸಿನೀ**– ನನು ಘಟಾಂಶೇ ಸವಿಕಲ್ಪಕತ್ವಸ್ಯಾಪಿ ವಿದ್ಯಮಾನತ್ವಾನ್ನ ಮುಕ್ತಿರಿತ್ಯತ ಆಹ – **ಅಖಂಡೇತಿ**॥ ತನ್ಮಾತ್ರಸ್ಯ ಚಿತ್ಸ್ವರೂಪಮಾತ್ರಸ್ಯ । ತದಂಶೇ ಅಧಿಷ್ಠಾನಾಂಶೇ ॥ ೬೮೪ ॥

ವಿವರಣೆ - ಘಟವೃತ್ತಿಯಲ್ಲಿ ಘಟಾಂಶ ಮತ್ತು ಚೈತನ್ಯಾಂಶ ಎಂಬ ಎರಡು ಅಂಶಗಳಿವೆ. ಚೈತನ್ಯಾಂಶದಲ್ಲಿ ಶುದ್ಧಚೈತನ್ಯಾವಗಾಹಿಯಾದರೂ, ಘಟಾಂಶದಲ್ಲಿ ಈ ವೃತ್ತಿಯು ಸವಿಕಲ್ಪಕವಾಗುವುದರಿಂದ ಚರಮಸಾಕ್ಷಾತ್ಕಾರಕ್ಕಿಂತಲೂ ವೈಲಕ್ಷಣ್ಯವಿರುವುದರಿಂದ ಘಟಾದಿವೃತ್ತಿಯಿಂದ ಮೋಕ್ಷವಾಗುವುದಿಲ್ಲ ಎಂಬ ಶಂಕೆಗೆ ಇಲ್ಲಿ ಉತ್ತರವನ್ನು ಹೇಳುತ್ತಾರೆ.

ಘಟಾಂಶದಲ್ಲಿ ಸವಿಕಲ್ಪಕತ್ವವಿದ್ದರೂ ಬ್ರಹ್ಮಾಂಶದಲ್ಲಿ ನಿರ್ವಿಕಲ್ಪಕತ್ವವಿರುವುದರಿಂದ ಮುಕ್ತಿಯಾಗಲಿ ಎಂದೇ ನಮ್ಮ ಆಪಾದನೆ ಎಂದು ಅಭಿಪ್ರಾಯ.

**ನ ಚೇದಧಿಷ್ಠಾನನಿಷ್ಠಾಜ್ಞಾನಹಂತ್ರ್ಯಪಿ ಸಾ ಕಥಂ ।**
**ಯಾಽವಿದ್ಯಾಸ್ತಮಯೇ ಶಕ್ತಾ ಮುಕ್ತೌ ಶಕ್ತಾ ಕಥಂ ನ ಸಾ ॥ ೬೮೫ ॥**

**ಅರ್ಥ-** ನ ಚೇತ್ = ಅವಿದ್ಯಾನಿವೃತ್ತಿರೂಪ ಮೋಕ್ಷಜನಕವಲ್ಲವಾದರೆ, ಸಾ = ಆ ವೃತ್ತಿಯು, ಅಧಿಷ್ಠಾನನಿಷ್ಠಾಜ್ಞಾನಹಂತ್ರ್ಯಪಿ = ಅಧಿಷ್ಠಾನಗತ ಅಜ್ಞಾನನಾಶಕವಾದರೂ, ಕಥಂ = ಹೇಗೆ ಆಗುತ್ತದೆ? ಯಾ = ಯಾವ ವೃತ್ತಿಯು, ಅವಿದ್ಯಾಸ್ತಮಯೇ = ಅವಿದ್ಯೆಯನ್ನು ನಾಶಮಾಡುವ ವಿಷಯದಲ್ಲಿ, ಶಕ್ತಾ = ಸಮರ್ಥವಾಗುತ್ತದೆಯೋ, ಸಾ = ಆ ವೃತ್ತಿಯು, ಕಥಂ = ಹೇಗೆ, ಮುಕ್ತೌ = ಮುಕ್ತಿಯನ್ನು ಉಂಟುಮಾಡುವ ವಿಷಯದಲ್ಲಿ, ನ ಶಕ್ತಾ = ಶಕ್ತವಾಗುವುದಿಲ್ಲ?

**ಅನುವಾದ -** ಅವಿದ್ಯಾನಾಶರೂಪವಾದ ಮೋಕ್ಷಜನಕವಾಗದಿದ್ದರೆ, ಘಟಾಪರೋಕ್ಷ ವೃತ್ತಿಯು ಅಧಿಷ್ಠಾನಗತವಾದ ಅಜ್ಞಾನವನ್ನಾದರೂ ಹೇಗೆ ನಾಶಮಾಡುತ್ತದೆ? ಅವಿದ್ಯಾವಿನಾಶದಲ್ಲಿ ಸಮರ್ಥವಾದ ವೃತ್ತಿಯು ಮುಕ್ತಿಸಂಪಾದಕತ್ವದಲ್ಲಿ ಏಕೆ ಸಮರ್ಥವಾಗುವುದಿಲ್ಲ?

**ಭಾವವಿಲಾಸಿನೀ–** ನಚೇತ್ ಅವಿದ್ಯಾನಿವೃತ್ತೆರೂಪಮುಕ್ತಿದಾ ನಚೇತ್ । ಸಾ ವೃತ್ತಿಃ ॥ ೬೮೫ ॥

**ವಿವರಣೆ -** 'ಅವಿದ್ಯಾಸ್ತಮಯೋ ಮೋಕ್ಷಃ ಸಾ ಸಂಸಾರ ಉದಾಹೃತಃ' ಎಂದು ಅದ್ವೈತಿಗಳು ಅವಿದ್ಯಾನಾಶವನ್ನೇ ಮೋಕ್ಷವೆಂದು ಅಂಗೀಕರಿಸುವುದರಿಂದ, ಘಟಾದಿ ಅಪರೋಕ್ಷವೃತ್ತಿಯು ಅವಿದ್ಯಾನಾಶಕವಾಗುತ್ತದೆ ಮೋಕ್ಷಜನಕವಾಗುವುದಿಲ್ಲ ಎಂಬ ಅಂಗೀಕಾರವು ಸ್ವಮತವಿರುದ್ಧವಾದುದು ಎಂದು ಅಭಿಪ್ರಾಯ.

**ಅಹಿಮೂಷಿಕಯೋಃ ಪಾತ್ರೀ ಯಥಾ ಭಾಗಾಂತರಸ್ಥಿತಮ್ ।**
**ಆಖುಂ ಹನ್ಯಾತ್ ತಥೇಯಂ ಚ ಹನ್ಯಾದ್‌ದ್ರಷ್ಟರಿ ಬಂಧನಮ್ ।**
**ತೃಣೈಶ್ಛನ್ನೋಽಪಿ ಕಿಂ ವಹ್ನಿರ್ನ ದಹೇತ್ ಸತೃಣಂ ವನಮ್ ॥ ೬೮೬ ॥**

**ಅರ್ಥ-** ಅಹಿಮೂಷಿಕಯೋಃ = ಸರ್ಪ ಮತ್ತು ಮೂಷಿಕಗಳಿರುವ, ಪಾತ್ರೀ = ಒಂದು ಪೆಟ್ಟಿಗೆಯು, ಯಥಾ = ಹೇಗೆ, ಭಾಗಾಂತರಸ್ಥಿತಮ್ = ಪೆಟ್ಟಿಗೆಯ ಇನ್ನೊಂದು ಭಾಗದಲ್ಲಿರುವ, ಆಖುಂ = ಮೂಷಿಕವನ್ನು, ಹನ್ಯಾತ್ = ಕೊಲ್ಲುತ್ತದೆಯೋ, ತಥಾ= ಅದರಂತೆ, ಇಯಂ ಚ = ಈ ಘಟಾಪರೋಕ್ಷವೃತ್ತಿಯೂ ಸಹ, ದ್ರಷ್ಟರಿ = ದ್ರಷ್ಟೃವಾದ ಪುರುಷನಲ್ಲಿ, ಬಂಧನಮ್ = ಸಂಸಾರಬಂಧನವನ್ನು, ಹನ್ಯಾತ್ = ವಿನಾಶಮಾಡಲಿ, ತೃಣೈಃ

= ತೃಣಗಳಿಂದ, ಛನ್ನೋऽಪಿ = ಆಚ್ಛಾದಿತವಾದರೂ ಸಹ, ವಹ್ನಿಃ = ಅಗ್ನಿಯು, ಸತೃಣಂ = ತೃಣಸಹಿತವಾದ, ವನಮ್ = ಕಾನನವನ್ನು, ನ ದಹೇತ್ ಕಿಂ = ದಹಿಸುವುದಿಲ್ಲವೇ?

**ಅನುವಾದ** - ಒಂದು ದೊಡ್ಡ ಪೆಟ್ಟಿಗೆಯಲ್ಲಿ ಸರ್ಪ ಮತ್ತು ಮೂಷಿಕಗಳಿದ್ದರೆ, ಪೆಟ್ಟಿಗೆಯ ಒಂದು ಭಾಗದಲ್ಲಿರುವ ಸರ್ಪವು ಇನ್ನೊಂದು ಭಾಗದಲ್ಲಿರುವ ಮೂಷಿಕವನ್ನು ಹೇಗೆ ಕೊಲ್ಲುತ್ತದೆಯೋ ಹಾಗೆ, ಘಟಾಪರೋಕ್ಷವೃತ್ತಿಯು ದ್ರಷ್ಟೃವಿನಲ್ಲಿ ಸಂಸಾರ ಬಂಧನವನ್ನು ವಿನಾಶಮಾಡಲಿ. ವಹ್ನಿಯು ತೃಣಗಳಿಂದ ಆಚ್ಛಾದಿತವಾದರೂ, ತೃಣಸಹಿತವಾದ ಕಾನನವನ್ನು ದಹಿಸುವುದಿಲ್ಲವೇ?

**ಭಾವವಿಲಾಸಿನೀ**– ಅಧಿಷ್ಠಾನಾಂಶಸ್ಯ ಮುಕ್ತಿದತ್ವೇऽಪಿ ಅಧ್ಯಸ್ತಾಂಶಸ್ಯ ಸಂಸಾರರೂಪತ್ವಾನ್ನ ಮುಕ್ತಿರಿತ್ಯಾಶಂಕಾಂ ದೃಷ್ಟಾಂತಮುಖೇನ ಪರಿಹರತಿ ॥ **ಅಹಿಮೂಷಿಕಯೋರಿತಿ** ॥ ಇಯಂ ವೃತ್ತಿಃ ಪೂರ್ವಾಂಶೇ ಬ್ರಹ್ಮವೃತ್ತಿತ್ವಾಖ್ಯಸರ್ಪವತೀ । ಉತ್ತರಾಂಶೇ ಚ ಪೂರ್ವಾಂಶವಿನಾಶ್ಯಘಟಾದಿ- ಗೋಚರತ್ವರೂಪಸಂಸಾರಾಖ್ಯಮೂಷಿಕವತೀ । ಸ್ವಪೂರ್ವಾಂಶೇನೈವ ದ್ರಷ್ಟರಿ ಸ್ಥಿತಮುತ್ತರಾಂಶಾಖ್ಯಬಂಧನಮಪಿ ಸ್ವಯಮೇವ ನಾಶಯೇತ್ । ಅತ ಉತ್ತರಾಂಶೇ ಸವಿಕಲ್ಪಕ- ರೂಪತ್ವಮಪಿ ನ ಮುಕ್ತಿಪ್ರತಿಬಂಧಕಮಿತಿ ಭಾವಃ । ದೃಷ್ಟಾಂತಾಂತರಮಪ್ಯಾಹ – **ತೃಣೈರಿತಿ**॥ ಸತೃಣಂ ಆಚ್ಛಾದಕತೃಣಸಹಿತವಮ್ । ಏವಮುತ್ತರಾಂಶಸವಿಕಲ್ಪಕಾಚ್ಛನ್ನಾಪಿ ಪೂರ್ವಾಂಶಬ್ರಹ್ಮವಿಷಯಕವೃತ್ತಿಃ ಸ್ವಾಚ್ಛಾದಕಸವಿಕಲ್ಪಕೇನ ಸಹ ಸಕಲಮಪಿ ಜಗನ್ನಾಶಯೇದಿತಿ ಭಾವಃ । ಪರಾಭಿಮತಸರ್ವನಾಶೋಪಯೋಗಿತ್ವಾತ್ ದೃಷ್ಟಾಂತಾಂತರಕಥನಮ್ ॥ ೬೮೬ ॥

ವಿವರಣೆ - ಅಧಿಷ್ಠಾನಾಂಶವು ಮೋಕ್ಷಜನಕವಾದರೂ, ಅಧ್ಯಸ್ತಾಂಶವು ಸಂಸಾರರೂಪ ವಾಗಿರುವುದರಿಂದ ಘಟವೃತ್ತಿಯಿಂದ ಮುಕ್ತಿ ಉಂಟಾಗುವುದಿಲ್ಲ ಎಂಬ ಶಂಕೆಯನ್ನು ದೃಷ್ಟಾಂತೋದಾಹರಣಪೂರ್ವಕವಾಗಿ ಪರಿಹರಿಸುತ್ತಾರೆ. 'ಅಯಂ ಘಟಃ' ಎಂಬ ಈ ವೃತ್ತಿಯು 'ಅಯಂ' ಎಂಬ ಪೂರ್ವಾಂಶದಲ್ಲಿ ಬ್ರಹ್ಮವೃತ್ತಿತ್ವರೂಪ ಸರ್ಪವನ್ನು ಹೊಂದಿದೆ. 'ಘಟಃ' ಎಂಬ ಉತ್ತರಾಂಶದಲ್ಲಿ ಪೂರ್ವಾಂಶ ವಿನಾಶ್ಯವಾದ ಘಟಾದಿವಿಷಯತ್ವರೂಪವಾದ ಸಂಸಾರವೆಂಬ ಮೂಷಿಕವನ್ನು ಹೊಂದಿದೆ. ಈ ವೃತ್ತಿಯು ತನ್ನ ಪೂರ್ವಾಂಶದಿಂದಲೇ ದ್ರಷ್ಟೃವಿನಲ್ಲಿರುವ ಉತ್ತರಾಂಶರೂಪವಾದ ಬಂಧನವನ್ನು ತಾನೇ ನಾಶ ಮಾಡಲಿ. ಆದ್ದರಿಂದ ಉತ್ತರಾಂಶದಲ್ಲಿ ಈ ವೃತ್ತಿಯು ಸವಿಕಲ್ಪಕವಾದರೂ ಮುಕ್ತಿಪ್ರತಿಬಂಧಕವು ಆಗದೆ ಇರಲಿ ಎಂದು ಅಭಿಪ್ರಾಯ. ವಹ್ನಿಯ ಮೇಲೆ ತೃಣಗಳನ್ನು ಆಚ್ಛಾದಿಸಿದರೆ, ಆ ತೃಣಗಳನ್ನೂ ಮತ್ತು ಆ ಕಾನನವನ್ನೂ ವಹ್ನಿಯು ಹೇಗೆ ಸುಡುತ್ತದೋ ಅದರಂತೆ, ಪೂರ್ವಾಂಶದಲ್ಲಿ ಬ್ರಹ್ಮವಿಷಯಕವಾದ ವೃತ್ತಿಯು ತನಗೆ ಆಚ್ಛಾದಕವಾದ ಸವಿಕಲ್ಪಕವಾದ ಉತ್ತರಾಂಶದ ಜೊತೆಯಲ್ಲಿ ಸರ್ವಜಗತ್ತನ್ನೂ ನಾಶಮಾಡಲಿ ಎಂದು ಅಭಿಪ್ರಾಯ. ಅಹಿಮೂಷಿಕ ದೃಷ್ಟಾಂತದಲ್ಲಿ ಸರ್ವನಾಶವು ಪ್ರಾಪ್ತವಾಗುವುದಿಲ್ಲ. ಅದಕ್ಕಾಗಿ ಪರರಿಗೆ ಅಭಿಮತವಾದ

ಸರ್ವನಾಶವನ್ನು ಸೂಚಿಸುವುದಕ್ಕಾಗಿ ಎರಡನೆಯ ದೃಷ್ಟಾಂತವಾಗಿ ವಹ್ನಿಯ ದೃಷ್ಟಾಂತವನ್ನು ಕೊಟ್ಟಿದ್ದಾರೆ.

**ಘಟವೃತ್ತಿರ್ಯತೋಽಜ್ಞಾನನಾಶಿನೀತಿ ಮತಂ ತವ ।**
**ಜ್ಞಾನಾರ್ಥಂ ಶ್ರವಣಾದ್ಯರ್ಥಂ ಸಿದ್ಧೇಽನ್ನೇ ಕಿಂ ನು ತಂಡುಲೈಃ ॥ ೬೮೭ ॥**

**ಅರ್ಥ-** ಯತಃ = ಯಾವ ಕಾರಣದಿಂದ, ಘಟವೃತ್ತಿಃ = ಘಟವೃತ್ತಿಯು, ಅಜ್ಞಾನನಾಶಿನೀತಿ = ಅಜ್ಞಾನನಾಶಕವೆಂದು, ತವ = ನಿನ್ನ, ಮತಂ = ಮತವಿದೆಯೋ ಆ ಕಾರಣದಿಂದ, ಜ್ಞಾನಾರ್ಥಂ = ಜ್ಞಾನವನ್ನು ಪಡೆಯುವ ಸಲುವಾಗಿ, ಶ್ರವಣಾದ್ಯರ್ಥಂ = ಶ್ರವಣಾದಿಗಳನ್ನು ಮಾಡಲು ಯಾರೂ ಪ್ರವೃತ್ತಿಸಲಾರರು. ಸಿದ್ಧೇ ಅನ್ನೇ = ಅನ್ನವೇ ಸಿದ್ಧವಾಗಿರುವಾಗ, ತಂಡುಲೈಃ = ಅಕ್ಕಿಗಳಿಂದ, ಕಿಂ ನು = ಏನು ಪ್ರಯೋಜನ?

**ಅನುವಾದ -** ಘಟವೃತ್ತಿಯೇ ಅಜ್ಞಾನನಾಶಕವೆಂದು ನಿನ್ನ ಮತವಿದೆ. ಆ ಕಾರಣದಿಂದ ಜ್ಞಾನವನ್ನು ಪಡೆಯುವ ಸಲುವಾಗಿ ಶ್ರವಣಾದಿಗಳಲ್ಲಿ ಯಾರೂ ಪ್ರವೃತ್ತ ರಾಗಲಾರರು. ಅನ್ನವೇ ಸಿದ್ಧವಾಗಿರುವಾಗ ಅಕ್ಕಿಯಿಂದ ಏನು ಪ್ರಯೋಜನ?

**ಭಾವವಿಲಾಸಿನೀ–** ನನು ಶ್ರವಣಾದಿಜನ್ಯತ್ವಾಭಾವಾನ್ನ ಮುಕ್ತಿರಿತ್ಯತ ಆಹ – **ಜ್ಞಾನಾರ್ಥಮಿತಿ॥** ಶ್ರವಣಾದಿಕಮಪಿ ಬ್ರಹ್ಮಜ್ಞಾನಾರ್ಥಮೇವ ಪ್ರಾರ್ಥನೀಯಮ್ । ಯದೃಚ್ಛಯೈವ ಬ್ರಹ್ಮಜ್ಞಾನೇ ಜಾತೇ ಶ್ರವಣಾದಿಜನ್ಯತ್ವಾಭಾವೇನ ನ ಕೋಽಪ್ಯಪರಾಧ ಇತಿ ಭಾವಃ । ತತ್ರ ದೃಷ್ಟಾಂತಮಾಹ – **ಸಿದ್ಧೇನ್ನ ಇತಿ॥** ಸಿದ್ಧೇ ಸುರಭಿಸ್ತನಾದಿತ ಏವ ಸಿದ್ಧೇ । ಯಥಾ ಕಾಮಧೇನುಕಲ್ಪವೃಕ್ಷಾದಿಲಬ್ಧಾನ್ನಸ್ಯ ತಂಡುಲಜನ್ಯತ್ವಾಭಾವೇಽಪಿ ಸ್ವಕಾರ್ಯಕಾರಿತ್ವಂ ತಥಾಽನಾಯಾಸಲಬ್ಧಸ್ಯಾಸ್ಯ ಬ್ರಹ್ಮಜ್ಞಾನಸ್ಯ ಶ್ರವಣಾದಿಜನ್ಯತ್ವಾಭಾವೇಽಪಿ ಸ್ಯಾದೇವ ಸ್ವಕಾರ್ಯಕಾರಿತ್ವಮ್ । ದೃಷ್ಟ್ವೈವ ತಂ ಮುಚ್ಯತ ಇತ್ಯೇವ ಹಿ ಶ್ರುತಿಃ । ನ ತು ಶ್ರವಣೇನ ದೃಷ್ಟ್ವೇತಿ ॥ ೬೮೭ ॥

ವಿವರಣೆ - ಘಟಾಪರೋಕ್ಷವೃತ್ತಿಯು ಶ್ರವಣಾದಿಜನ್ಯವಲ್ಲವಾದುದರಿಂದ ಮೋಕ್ಷಜನಕವಲ್ಲ ಎಂಬ ಶಂಕೆಗೆ ಇಲ್ಲಿ ಉತ್ತರವನ್ನು ಹೇಳುತ್ತಾರೆ. ಬ್ರಹ್ಮಜ್ಞಾನಕ್ಕಾಗಿಯೇ ಶ್ರವಣಾದಿಗಳಲ್ಲಿಪ್ರವೃತ್ತರಾಗುತ್ತಾರೆ. ಆ ಬ್ರಹ್ಮಜ್ಞಾನವು ಅನಾಯಾಸವಾಗಿ ಘಟಜ್ಞಾನದಿಂದಲೇ ಸಿದ್ಧವಾಗುತ್ತಿರುವಾಗ ಅದಕ್ಕೆ ಶ್ರವಣಾದಿಜನ್ಯತ್ವವು ಇಲ್ಲ ಎಂಬ ಕಾರಣದಿಂದಾಗಿ ಅದರಲ್ಲಿ ಯಾವ ದೋಷವೂ ಉಂಟಾಗುವುದಿಲ್ಲ. ಹೇಗೆ ಕಾಮಧೇನುಕಲ್ಪವೃಕ್ಷಾದಿಗಳಿಂದ ಲಬ್ಧವಾದ ಅನ್ನವು ತಂಡುಲಜನ್ಯವಲ್ಲದಿದ್ದರೂ ತನ್ನ ಕಾರ್ಯವನ್ನು ಮಾಡುತ್ತದೆಯೋ ಅದರಂತೆ ಬ್ರಹ್ಮಜ್ಞಾನವು ಶ್ರವಣಾದಿಜನ್ಯವಲ್ಲದಿದ್ದರೂ ತನ್ನ ಕಾರ್ಯವಾದ ಅವಿದ್ಯಾನಾಶ ಮತ್ತು ಮೋಕ್ಷಜನನವನ್ನು ಮಾಡಿಯೇ ಮಾಡುತ್ತದೆ. 'ದೃಷ್ಟ್ವೈವ ತಂ ಮುಚ್ಯತೇ' ಎಂಬ ಶ್ರುತಿಯು

ದರ್ಶನಮಾತ್ರದಿಂದ ಮುಕ್ತಿಯಾಗುತ್ತದೆ ಎಂದು ಹೇಳುತ್ತಿದೆಯಷ್ಟೇ? ಆ ಶ್ರುತಿಯು ಶ್ರವಣಜನ್ಯವಾದ ದರ್ಶನದಿಂದಲೇ ಮೋಕ್ಷವೆಂದೇನೂ ಹೇಳುತ್ತಿಲ್ಲ ಎಂದು ಅಭಿಪ್ರಾಯ.

**ನಚೇಚ್ಛ್ರವಣಶಕ್ತ್ಯೈವ ಸ್ಯಾದ್ ಬಂಧಸ್ಯ ನಿವರ್ತನಮ್ ।**
**ಜ್ಞಾನಸ್ವಭಾವತೋ ಮುಕ್ತಿರಿತಿ ರಿಕ್ತಂ ವಚಸ್ತವ ॥ ೬೮೮ ॥**

**ಅರ್ಥ-** ನಚೇತ್ = ಯಾವುದೋ ಪ್ರಕಾರದಿಂದ ಲಭಿಸಿದ ಬ್ರಹ್ಮಜ್ಞಾನದಿಂದ ಮೋಕ್ಷವಾಗುವುದಿಲ್ಲ, ಶ್ರವಣಶಕ್ತ್ಯೈವ = ಶ್ರವಣದಿಂದ ಉಂಟಾದ ಜ್ಞಾನದಿಂದಲೇ, ಬಂಧಸ್ಯ = ಬಂಧನದ, ನಿವರ್ತನಮ್ = ವಿನಾಶವು, ಸ್ಯಾತ್ = ಉಂಟಾಗುತ್ತದೆ, ಎಂದು ಹೇಳುವುದಾದರೆ, ಜ್ಞಾನಸ್ವಭಾವತಃ = ಜ್ಞಾನಸ್ವಭಾವದಿಂದಲೇ, ಮುಕ್ತಿಃ ಇತಿ = ಮುಕ್ತಿ ಎಂಬ, ತವ ವಚಃ = ನಿನ್ನ ವಾಕ್ಯವು, ರಿಕ್ತಂ = ಅರ್ಥಹೀನವಾಗುತ್ತದೆ.

**ಅನುವಾದ** - ಯಾವುದೋ ರೀತಿಯಿಂದ ಉಂಟಾದ ಬ್ರಹ್ಮಜ್ಞಾನವು ಬಂಧ ನಿವರ್ತಕವಲ್ಲ. ಶ್ರವಣದಿಂದ ಉಂಟಾದ ಬ್ರಹ್ಮಜ್ಞಾನವು ಮಾತ್ರ ಬಂಧ ನಿವರ್ತಕವಾಗುತ್ತದೆ ಎಂದು ಅಂಗೀಕರಿಸಿದರೆ, ಜ್ಞಾನವು ತನ್ನ ಸ್ವಭಾವದಿಂದಲೇ ಬಂಧನಿವೃತ್ತಿರೂಪವಾದ ಮೋಕ್ಷವನ್ನು ಉಂಟುಮಾಡುತ್ತದೆ ಎಂಬ ನಿನ್ನ ಮಾತು ಅರ್ಥಶೂನ್ಯವಾಗುತ್ತದೆ.

**ಅಯಮಿತ್ಯತ್ರ ಲೋಕೋ ಹಿ ದೇಶಕಾಲಸ್ಥತಾಂ ವದೇತ್ ।**
**ಬ್ರಹ್ಮಾಂಶಸ್ಯ ಪ್ರವೇಶಂ ತು ಸಾಕ್ಷೀ ಸರ್ವಸ್ಯ ಬಾಧತೇ ॥ ೬೮೯ ॥**

**ಅರ್ಥ-** ಅಯಂ ಇತ್ಯತ್ರ = 'ಅಯಂ ಘಟಃ' ಎಂಬಲ್ಲಿ ಅಯಂ ಎಂಬ ಶಬ್ದದಿಂದ, ಲೋಕಃ = ಜನರು, ದೇಶಕಾಲಸ್ಥತಾಂ = ದೇಶಕಾಲಸಂಬಂಧವನ್ನು, ವದೇತ್ = ಹೇಳುತ್ತಾರೆ, ಸರ್ವಸ್ಯ = ಎಲ್ಲರ, ಸಾಕ್ಷೀ = ಸಾಕ್ಷಿಯು, ಬ್ರಹ್ಮಾಂಶಸ್ಯ ಪ್ರವೇಶಂ = ಅಯಂ ಎಂಬಲ್ಲಿ ಬ್ರಹ್ಮಾಂಶದ ಪ್ರವೇಶವನ್ನು, ಬಾಧತೇ = ಬಾಧಿಸುತ್ತದೆ.

**ಅನುವಾದ** - 'ಅಯಂ ಘಟಃ' ಎಂಬಲ್ಲಿ 'ಅಯಂ' ಎಂಬಲ್ಲಿರುವ 'ಇದಂ' ಶಬ್ದದಿಂದ ಎಲ್ಲ ಜನರೂ ದೇಶಕಾಲಗಳ ಸಂಬಂಧವನ್ನೇ ಹೇಳುತ್ತಾರೆ. ಎಲ್ಲ ಜ್ಞಾನಗಳಲ್ಲಿಯೂ ದೇಶಕಾಲಸಂಬಂಧವನ್ನು ವಿಷಯೀಕರಿಸುವ ಎಲ್ಲರ ಸಾಕ್ಷಿಯು 'ಅಯಂ' ಎಂಬಲ್ಲಿ ಬ್ರಹ್ಮಾಂಶದ ಪ್ರವೇಶವನ್ನು ಬಾಧಿಸುತ್ತದೆ.

**ಭಾವವಿಲಾಸಿನೀ– ನಚೇತ್ ಯಾದೃಶತಾದೃಶಜ್ಞಾನೇನ ಮೋಕ್ಷೋ ನ ಚೇತ್ ॥೬೮೮-೬೮೯॥**

ವಿವರಣೆ - 'ಅಯಂ' ಎಂಬಲ್ಲಿ ದೇಶಕಾಲಸಂಬಂಧವೇ ವಿಷಯವಾಗುತ್ತದೆ. ದೇಶಕಾಲಗಳು ಸಾಕ್ಷಿಗೆ ವಿಷಯವಾದುವು. ಸಾಕ್ಷಿಯು ಯಾವಾಗಲೂ ಯಥಾರ್ಥ. ಆದ್ದರಿಂದ

ಅಲ್ಲಿ ಬ್ರಹ್ಮನ ಪ್ರವೇಶವನ್ನು ಎಂದರೆ ಬ್ರಹ್ಮ ಎಂಬ ಅರ್ಥವನ್ನು ಸಾಕ್ಷಿಯು ಎಂದೂ ವಿಷಯೀಕರಿಸುವುದಿಲ್ಲ. ಅಲ್ಲಿ ಇಂತಹ ಭ್ರಮದ ಕಲ್ಪನೆಯು ಎಲ್ಲರ ಸಾಕ್ಷಿಪ್ರತ್ಯಕ್ಷ ಬಾಧಿತ ಎಂದು ಅಭಿಪ್ರಾಯ.

**ಅತೋಽನುಭವಬಾಧೇ ತು ಸ್ಯಾದಾರೋಪಕಥಾ ತವ ।**
**ಆರೋಪಿತತ್ವಸಿದ್ಧ್ಯೈವ ಲೋಕಾನುಭವಬಾಧನಮ್ ॥ ೬೯೦ ॥**

**ಅರ್ಥ-** ಅತಃ = ಆದ್ದರಿಂದ, ಅನುಭವಬಾಧೇ ತು = ಇಂತಹ ಸಾಕ್ಷಿಯ ಅನುಭವವು ಬಾಧಿತವಾದರೆ ಮಾತ್ರ, ತವ = ನಿನ್ನ, ಆರೋಪಕಥಾ = ಆರೋಪಕಥೆಯು, ಸ್ಯಾತ್ = ಉಂಟಾಗುತ್ತದೆ, ಆರೋಪಿತತ್ವಸಿದ್ಧ್ಯೈವ = ಆರೋಪಿತತ್ವದ ಸಿದ್ಧಿಯಾದರೆ ಮಾತ್ರ (ಸಿದ್ಧಿಯಿಂದ ಮಾತ್ರ), ಲೋಕಾನುಭವಬಾಧನಮ್ = ಲೋಕಾನುಭವಕ್ಕೆ ಬಾಧ ಉಂಟಾಗುತ್ತದೆ.

**ಅನುವಾದ - ಆದ್ದರಿಂದ ಸಾಕ್ಷ್ಯನುಭವವು ಬಾಧಿತವಾದರೆ ನಿನ್ನ ಆರೋಪ ಕಥೆಯು ಉಂಟಾಗುತ್ತದೆ. ಆರೋಪಿತತ್ವವು ಸಿದ್ಧವಾದರಷ್ಟೇ ಲೋಕಾನುಭವವು ಬಾಧಿತವಾಗುತ್ತದೆ.**

**ಭಾವವಿಲಾಸಿನೀ–** ಅತಃ ದೇಶಕಾಲಗೋಚರತ್ವಸ್ಯ ಸರ್ವಾನುಭವಸಿದ್ಧತ್ವಾತ್ । ಸ್ವಪ್ರಕ್ರಿಯಯೈವಾನುಭವಬಾಧೇಽನ್ಯೋನ್ಯಾಶ್ರಯ ಇತ್ಯರ್ಥಃ ॥ ೬೯೦ ॥

ವಿವರಣೆ - 'ಅಯಂ' ಎಂಬಲ್ಲಿ ದೇಶಕಾಲವಿಷಯತ್ವವು ಸರ್ವಾನುಭವ ಸಿದ್ಧವಾಗಿರುವುದರಿಂದ ನಿನ್ನ ಪ್ರಕ್ರಿಯೆಯಿಂದಲೇ ಅಂತಹ ಅನುಭವಕ್ಕೆ ಬಾಧವನ್ನು ಹೇಳಿದರೆ, ಸ್ಪಷ್ಟವಾಗಿ ಅನ್ಯೋನ್ಯಾಶ್ರಯದೋಷವು ಬರುತ್ತದೆ ಎಂದು ಅಭಿಪ್ರಾಯ.

—o— ವಿ-೨೮-೧-೨೧-



## ರಾಜಸುಭಾಷಿತ

**ಯೋ ಯುಕ್ತಿಮಲ್ಲಿ ತೇ ಫುಲ್ಲಪಲ್ಲವೋಲ್ಲಾಸವಲ್ಲಭಃ ।**
**ಅಂಚಾಹಿಮಂಚಂ ರಮ್ಯಂ ಚ ತಂ ಪ್ರಾಂಚಂ ತ್ವಂ ಚ ಸೌರಭ್ಯೈಃ ॥**

ಎಲೈ ಯುಕ್ತಿಮಲ್ಲಿಕೆಯೇ! ಯಾವನು ನಿನ್ನ ಅರಳಿದ ಚಿಗುರುಗಳ ನರ್ತನಕ್ಕೆ ಅಧಿಪತಿಯಾಗಿದ್ದಾನೆಯೋ ಅಂತಹ ಅನಾದಿಯಾದ, ಸುಂದರನಾದ ಶೇಷಶಾಯಿಯಾದ ನಾರಾಯಣನನ್ನು ನಿನ್ನ ಸೌರಭಗಳಿಂದ ಪೂಜಿಸು.

